ಕನ್ನಡ

# ಆದಿತೀರ್ಥಂಕರ ಚರಿತೆಗಳು





ಮಹಾಪ್ರಬಂಧ

ಡಾ॥ ಸರಸ್ವತಿ ವಿಜಯಕುಮಾರ್

ಈವರೆಗೆ ಪ್ರಖ್ಯಾತವಾದ ಪಂಪನ ಆದಿಪುರಾಣದ ಬಗೆಗೆ ಪ್ರತ್ಯೇಕ ವಿಮರ್ಶಾ ಸಾಹಿತ್ಯ ಸಾಕಷ್ಟು ಬಂದಿದ್ದರೂ ಜಿನಸೇನ–ಪಂಪರ ವಿಸ್ತೃತ ತೌಲನಿಕ ವಿಮರ್ಶೆಯೂ ಅದರ ಬೆಳಕಿನಲ್ಲಿ 'ಆದಿಪುರಾಣ'ದ ಹಿನ್ನೆಲೆಯಲ್ಲಿ ಅನ್ಯ ಉತ್ತರಕಾಲೀನ ಕನ್ನಡ ಆದಿನಾಥ ಚರಿತ್ರೆಗಳ ತೌಲನಿಕ ವಿಮರ್ಶೆಯೂ ನಡೆದಿರಲಿಲ್ಲ ; ಹಾಗೆಯೇ ಪಂಪನ ಕೃತಿಯ ಹಿನ್ನೆಲೆಯಲ್ಲಿ ಅನ್ಯ ಉತ್ತರಕಾಲೀನ ಕನ್ನಡ ಆದಿನಾಥ ಚರಿತ್ರೆಗಳ ತೌಲನಿಕ ವಿಮರ್ಶೆಯೂ ನಡೆದಿರಲಿಲ್ಲ. ಈ ದೃಷ್ಟಿಯಿಂದ ಜಿನಸೇನರ 'ಪೂರ್ವ ಪುರಾಣ' ಮೂಲವನ್ನು ಆಕರವಾಗಿಟ್ಟುಕೊಂಡು ಪಂಪಾದ್ಯರ ಕೃತಿಗಳ ಒಂದು ತುಲನಾತ್ಮಕ ಅಧ್ಯಯನವನ್ನು ನಡಸುವ ಅಗತ್ಯ ಈ ನಿಬಂಧದೊಂದಿಗೆ ಪೂರೈಸಿದಂತಾಗಿದೆ. ಅಷ್ಟಾಗಿ ಪರಿಚಿತರಲ್ಲದ ಮಧ್ಯಕಾಲೀನ ಕೃತಿಕಾರರ ರಚನೆಗಳು ಮೊದಲಸಲ ಇಲ್ಲಿ ಪರಿಶೀಲನೆಗೆ ಒಳಪಟ್ಟಿರುವುದು ಗಮನಾರ್ಹ ಸಂಗತಿಯಾಗಿದೆ. ಹೀಗೆ ಮಾಡಿರುವುದರಿಂದ ಪ್ರಥಮ ತೀರ್ಥಂಕರನಾಗಿಯೂ ಪಂಪನ ಕೃತಿಯ ನಾಯಕ ವ್ಯಕ್ತಿಯಾಗಿಯೂ ಪ್ರಮುಖನಾಗಿರುವ ಆದಿನಾಥನ ಕಥಾಸಾಹಿತ್ಯದ ಒಂದು ಇತಿಹಾಸ, ತುಲನಾತ್ಮಕ ವಿಮರ್ಶೆ ಹಾಗೂ ಮೌಲ್ಯಮಾಪನ ಒಟ್ಟಾಗಿ ಈ ನಿಬಂಧದಲ್ಲಿ ಕಂಡುಬರುವಂತಾಗಿದೆ. ಇದು ಇತರ ತೀರ್ಥಂಕರ ಚರಿತ್ರೆಗಳ ಅಧ್ಯಯನಕ್ಕೆ ಉಪಯುಕ್ತ ಮಾದರಿಯೇ ಆಗಿದೆ. ಈ ಸ್ತುತ್ಯ ಕಾರ್ಯಕ್ಕೆ ಶ್ರೀಮತಿ ಸರಸ್ವತಿ ಅಭಿನಂದನಾರ್ಹರಾಗಿದ್ದಾರೆ.

ಪ್ರಸ್ತುತ ನಿಬಂಧ ಒಂದು ಸಾರ್ಥಕ ರಚನೆಯಾಗಿದೆ ; ಒಳ್ಳೆಯ ಪರಿಶ್ರಮದ ಫಲವಾಗಿದೆ ; ಪ್ರಶಂಸೆಗೆ ಯೋಗ್ಯವಾಗಿದೆ.

ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರೀ

# ಕನ್ನಡ ಆದಿತೀರ್ಥಂಕರ ಚರಿತೆಗಳು

ಮಹಾ ಪ್ರಬಂಧ

ಡಾ || ಸರಸ್ವತಿ ವಿಜಯಕುಮಾರ್





ಸವಿ ಪ್ರಕಾಶನ : : ಮೈಸೂರು

೧೯೯೪

Kannada Adi Tirthankara Charitegalu by Dr. Saraswathi Vijayakumar. First Edition published by SAVI Prakashana, Type 4, No.8, RCE Campus, Manasagangothri, Mysore 570 006; 1994; Demy octavo pages : xvi + 452; Price : Ordinary Rs.150-00; Special Rs.250-00.



ಮೊದಲನೆಯ ಆವೃತ್ತಿ ೧೯೯೪





ಪ್ರಕಾಶನ :
ಸವಿ ಪ್ರಕಾಶನ
೪ನೆಯ ಮಾದರಿ, ನಂ. ೮, ರೀಜನಲ್ ಕಾಲೇಜು ವಸತಿ
ಮಾನಸಗಂಗೋತ್ರಿ, ಮೈಸೂರು ೫೭೦ ೦೦೬

ಬೆಲೆ :
ಸಾದಾ ಪ್ರತಿ : ರೂ. ೧೫೦
ಕ್ಯಾಲಿಕೊ : ರೂ. ೨೫೦

ಕಂಪ್ಯೂಟರ್ ಅಕ್ಷರ ಜೋಡಣೆ :
ಶಕ್ತಿ ಡಿಟಿಪಿ ಸೆಂಟರ್, ಜಯನಗರ, ಮೈಸೂರು
ಆಫ್‌ಸೆಟ್ ಮುದ್ರಣ :
ಟೆಕ್ ಪ್ರಿಂಟ್ಸ್, ಹೆಬ್ಬಾಳು ಕೈಗಾರಿಕಾ ಪ್ರದೇಶ, ಮೈಸೂರು



ಆದಿತೀರ್ಥಂಕರ ಭಗವಾನ್ ವೃಷಭದೇವ – ದಿಗಂಬರ ಜೈನಬಸದಿ
ಶ್ರೀರಂಗಪಟ್ಟಣ

# ಅರಿಕೆ

ಅಧ್ಯಯನಶೀಲ ಪ್ರವೃತ್ತಿಗೆ ಒಂದು ನಿರ್ದಿಷ್ಟ ಗುರಿಯನ್ನು ಕೊಡಬೇಕೆಂಬ ಆಶಯದ ಫಲವಾಗಿ 'ಕನ್ನಡ ಆದಿತೀರ್ಥಂಕರ ಚರಿತ್ರೆಗಳು' ಎಂಬ ಮಹಾಪ್ರಬಂಧವನ್ನು ರೂಪಗೊಳಿಸುವ ಪ್ರಯತ್ನವನ್ನಿಲ್ಲಿ ಮಾಡಲಾಗಿದೆ. ಕನ್ನಡ ಸಾಹಿತ್ಯದಲ್ಲಿ, ವಿಶೇಷವಾಗಿ ಜೈನ ಸಾಹಿತ್ಯದಲ್ಲಿ, ತಳಸ್ಪರ್ಶಿ ಪಾಂಡಿತ್ಯವನ್ನು ಪಡೆದುಕೊಂಡಿರುವ ನನ್ನ ಗುರುಗಳಾದ ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರೀ ಅವರು, ನನಗೆ ಮಹಾಪ್ರಬಂಧವನ್ನು ಬರೆಯಲು ಮಾರ್ಗದರ್ಶಕರಾದುದು ನನ್ನ ಸೌಭಾಗ್ಯವೆಂದು ತಿಳಿಯುತ್ತೇನೆ. ನಿಬಂಧದ ವಿಷಯದ ಬಗೆಗೆ ಅವರ ಸೂಚನೆಯನ್ನು ಕೇಳಿದಾಗ ಶ್ರೀಯುತರು ಜೈನಸಾಹಿತ್ಯದ ಕಡೆಗೆ ನನಗಿರುವ ವಿಶೇಷ ಒಲವನ್ನು ಅರಿತು, ಕನ್ನಡ ಜೈನಸಾಹಿತ್ಯಕ್ಕೆ ಸಂಬಂಧಿಸಿದ ಹಲವಾರು ವಿಷಯಗಳನ್ನು ಮುಂದಿಟ್ಟರು; ವಿಷಯದ ಆಯ್ಕೆಯನ್ನು ನನಗೇ ಬಿಟ್ಟರು. ಅವರು ಸೂಚಿಸಿದ ವಿಷಯಗಳಲ್ಲಿ ನಾನು ಪ್ರಸ್ತುತ ವಿಷಯವನ್ನು ಆಯ್ದುಕೊಂಡೆ. ಇದೇ ವಿಷಯವನ್ನು ಆಯ್ದುಕೊಳ್ಳಲು ಬಹುಶಃ ನನ್ನ ಮನದಾಳದಲ್ಲಿ ನೆಲೆಯೂರಿದ್ದ ವಿಚಾರ ಸಂಕಿರಣ ಒಂದರ ಪ್ರಭಾವವೂ ಕಾರಣವಾಗಿದ್ದಿತೆಂದು ತೋರುತ್ತದೆ. ೧೯೮೫ನೆಯ ಇಸವಿಯಲ್ಲಿ, ಮೈಸೂರು ವಿಶ್ವವಿದ್ಯಾನಿಲಯದ ಜೈನಶಾಸ್ತ್ರ ವಿಭಾಗದಿಂದ 'ವೃಷಭ'ನಿಗೆ ಸಂಬಂಧಿಸಿದ ವಿಚಾರ ಸಂಕಿರಣ ಮಾಲೆಯನ್ನು ಏರ್ಪಡಿಸಲಾಗಿತ್ತು. ಆ ಸಂದರ್ಭದಲ್ಲಿ 'ವೃಷಭನನ್ನು ಕುರಿತ ಕನ್ನಡ ಹಸ್ತಪ್ರತಿಗಳು' ಎಂಬ ವಿಷಯವನ್ನು ಕುರಿತು ಮಾನ್ಯ ಬಿ. ಎಸ್. ಸಣ್ಣಯ್ಯನವರು ಪ್ರಬಂಧವನ್ನು ಮಂಡಿಸಿದ್ದರು. ಅಂದಿನ ಸಭೆಯ ಅಧ್ಯಕ್ಷರಾಗಿದ್ದ ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರೀ ಅವರು, ತಮ್ಮ ಅಧ್ಯಕ್ಷ ಭಾಷಣದಲ್ಲಿ ಪಿಎಚ್. ಡಿ. ಪ್ರಬಂಧ ಬರೆಯಲು ಇದು ಒಳ್ಳೆಯ ವಿಷಯವೆಂಬುದನ್ನು ಸೂಚಿಸಿದ್ದರು. ಈ ಅಂಶಗಳು ಹಾಗೂ ಕನ್ನಡ ಸಾಹಿತ್ಯ-ಜೈನಧರ್ಮಗಳ ಬಗೆಗೆ ವಿಶೇಷ ಅಧ್ಯಯನ ಮಾಡಬೇಕೆಂಬ ನನ್ನ ಹಂಬಲ, ಇವೆಲ್ಲವೂ ಒಟ್ಟುಗೂಡಿ ಈ ವಿಷಯವನ್ನು ನಾನು ಆಯ್ದುಕೊಂಡೆ.

ವಿಷಯದ ಅಧ್ಯಯನ ಕ್ರಮವನ್ನು ಸೂಚಿಸಿ, ಅಭ್ಯಾಸ ಮಾಡಬೇಕಾದ ಗ್ರಂಥಗಳನ್ನೂ ಬರೆಯಬೇಕಾದ ಅನುಕ್ರಮವನ್ನೂ ತಿಳಿಸುತ್ತ, ಬರೆದ ಸಾಮಗ್ರಿಯಲ್ಲಿ ತಿದ್ದುಪಾಟುಗಳನ್ನು ಸೂಚಿಸುತ್ತ ಬಂದುದರ ಜೊತೆಗೆ, ಹೆಜ್ಜೆಹೆಜ್ಜೆಗೂ ಧೈರ್ಯವನ್ನು, ಪ್ರೋತ್ಸಾಹವನ್ನು ತುಂಬುತ್ತ, ಆತ್ಮವಿಶ್ವಾಸ ಮೂಡಿಬರುವಂತೆ ಮಾಡಿ, ವಿಶ್ವಾಸದಿಂದ ಕಂಡು, ಪ್ರಬಂಧ ರಚನೆಯಲ್ಲಿ ಮಾರ್ಗದರ್ಶನ ನೀಡಿರುವ, ಮುದ್ರಿತ ಕೃತಿಗೆ ನಾನು ಹೆಮ್ಮೆಪಟ್ಟುಕೊಳ್ಳುವಂತಹ ಮುನ್ನುಡಿ ಬರೆದುಕೊಟ್ಟು ಮುಂದಿನ ಸಂಶೋಧನೆಗೆ ಸೂಚನೆಯನ್ನು ನೀಡಿರುವ ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರೀ ಅವರಿಗೆ ನನ್ನ ಭಕ್ತಿಪೂರ್ವಕ ಅನಂತ ಕೃತಜ್ಞತೆಗಳು.

ನಾನು ಅಧ್ಯಯನಶೀಲ ಪ್ರವೃತ್ತಿಯನ್ನು ಹಾಗೂ ಜೈನಧರ್ಮ-ಸಾಹಿತ್ಯಗಳ ಬಗೆಗೆ ವಿಶೇಷ ಆಸಕ್ತಿಯನ್ನು ಬೆಳೆಸಿಕೊಳ್ಳಲು ಪ್ರೇರಕರಾದ ಪರಮಪೂಜ್ಯ ದಿ || ಆ. ನೇ. ಉಪಾಧ್ಯೆ ಅವರನ್ನು, ದಿ || ಆಸ್ಥಾನ ವಿದ್ವಾನ್ ಪಂಡಿತ ನಾಗರಾಜ ಶಾಸ್ತ್ರೀ ಅವರನ್ನು ಮತ್ತು ವೈನಾಡಿನ ದಿ || ಪದ್ಮೇಗೌಡರನ್ನು ಭಕ್ತಿಯಿಂದ ಸ್ಮರಿಸುತ್ತೇನೆ.

ನನ್ನ ನಿಬಂಧದ ಪ್ರಗತಿಯನ್ನು ಕುರಿತು ಆಗಿಂದಾಗ್ಗೆ ವಿಚಾರಿಸಿಕೊಳ್ಳುತ್ತಾ ಪ್ರೋತ್ಸಾಹ, ಸಲಹೆಗಳನ್ನು ನೀಡಿದ, ಹಾಗೂ ಮದರಾಸು ವಿಶ್ವವಿದ್ಯಾನಿಲಯದ ಜೈನಾಲಜಿ ವಿಭಾಗದ ಆಶ್ರಯದಲ್ಲಿ ೧೯೯೧ ನೇ ಇಸವಿಯ ಮಾರ್ಚ್ ತಿಂಗಳಿನಲ್ಲಿ ನಡೆದ, 'ವೃಷಭ'ನನ್ನು ಕುರಿತ ಅಖಿಲ ಭಾರತ ವಿಚಾರ ಸಂಕಿರಣ ಮಾಲೆಯಲ್ಲಿ ಪಾಲ್ಗೊಳ್ಳಲು ಅವಕಾಶವನ್ನು ನೀಡಿ ವಿಶೇಷ ಪ್ರೋತ್ಸಾಹವನ್ನು, ವಿಶ್ವಾಸವನ್ನು ತೋರಿದ ಡಾ. ಎಂ. ಡಿ. ವಸಂತರಾಜ್ ಅವರಿಗೂ, ಅಧ್ಯಯನ ವಿಷಯದಲ್ಲಿ ಪ್ರೋತ್ಸಾಹದ ನುಡಿಗಳನ್ನಾಡಿ ಉತ್ತೇಜನ ನೀಡುತ್ತಾ ಬಂದಿರುವ ನನ್ನ ಗುರುಗಳಾದ ಪೂಜ್ಯ ಡಾ. ಹಾ. ಮಾ. ನಾಯಕರಿಗೂ ಕೃತಜ್ಞತಾಪೂರ್ವಕ ನಮನಗಳು.

ಈ ಅಧ್ಯಯನ ವಿಷಯಕ್ಕೆ ಸಂಬಂಧಿಸಿದ ಹಸ್ತಪ್ರತಿಗಳನ್ನು ಅಭ್ಯಾಸ ಮಾಡಲು ಅನುಮತಿ ನೀಡಿದ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಿಗೆ, ಹಸ್ತಪ್ರತಿ ವಿಭಾಗದ ಮುಖ್ಯಸ್ಥರಿಗೆ ನಾನು ಋಣಿಯಾಗಿದ್ದೇನೆ.

ಮೈಸೂರು ವಿಶ್ವವಿದ್ಯಾನಿಲಯ ಗ್ರಂಥಾಲಯ, ಕನ್ನಡ ಅಧ್ಯಯನ ಸಂಸ್ಥೆಯ ಗ್ರಂಥಾಲಯ, ಪ್ರಾಚ್ಯ ಸಂಶೋಧನಾ ಗ್ರಂಥಾಲಯ ಹಾಗೂ ಜೈನಾಲಜಿ ವಿಭಾಗದ ಗ್ರಂಥಾಲಯಗಳ ಉಪಯೋಗವನ್ನು ವಿಶೇಷವಾಗಿ ಪಡೆದುಕೊಂಡಿದ್ದೇನೆ. ಅಲ್ಲಿಯ ಮುಖ್ಯಸ್ಥರಿಗೆ ನಾನು ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ನನ್ನ ಗುರುಗಳಾದ ಮಾನ್ಯ ಶುಭಚಂದ್ರರವರು ತಮ್ಮ ವೈಯಕ್ತಿಕ ಗ್ರಂಥ ಸಂಗ್ರಹ ದಿಂದ ಹಲವಾರು ಪುಸ್ತಕಗಳನ್ನು ನೀಡಿ ಸಹಕರಿಸಿದ್ದಾರೆ. ನಿಬಂಧದ ಮುನ್ನಡೆಯ ಬಗೆಗೆ ಆಗಿಂದಾಗ್ಗೆ ವಿಚಾರಿಸಿಕೊಂಡು ಪ್ರೋತ್ಸಾಹವನ್ನು ನೀಡಿದ್ದಾರೆ. ಅವರನ್ನು ನಾನು ಕೃತಜ್ಞತೆ ಯಿಂದ ಸ್ಮರಿಸುತ್ತೇನೆ.

ತಮ್ಮ ವೈಯಕ್ತಿಕ ಹಸ್ತಪ್ರತಿ ಸಂಗ್ರಹದಲ್ಲಿದ್ದ ಶಾಂತಿಕೀರ್ತಿಯ 'ಪುರುದೇವಚರಿತ'ದ ಹಸ್ತಪ್ರತಿಯನ್ನು ನನಗೆ ಕೆಲವು ಕಾಲ ನೀಡಿ ನನ್ನ ಅಧ್ಯಯನದಲ್ಲಿ ನೆರವಾದ ಶ್ರೀ ಬಿ. ಎಸ್. ಸಣ್ಣಯ್ಯನವರಿಗೆ ನನ್ನ ಕೃತಜ್ಞತೆಗಳು.

ಈ ಪ್ರಬಂಧಕ್ಕೆ ಸಂಬಂಧಿಸಿದಂತೆ ಸಂಶೋಧನೆ ನಡೆಸಲು ಅನುಮತಿಯನ್ನು ನೀಡಿದ ಪ್ರಾದೇಶಿಕ ಶೈಕ್ಷಣಿಕ ಸಂಸ್ಥೆಯ ಅಂದಿನ ಪ್ರಾಂಶುಪಾಲರಾದ ಡಾ. ಮಹೇಶ್ವರಿ ಅವರಿಗೆ ಮತ್ತು ನಿಬಂಧ ಪ್ರಕಟಣೆಗೆ ಪ್ರೋತ್ಸಾಹಿಸಿದ ಪ್ರಾದೇಶಿಕ ಶೈಕ್ಷಣಿಕ ಸಂಸ್ಥೆಯ ಇಂದಿನ ಪ್ರಾಂಶುಪಾಲರಾದ ಡಾ. ಸಿ. ಶೇಷಾದ್ರಿ ಅವರಿಗೆ, ಆರ್ಥಿಕ ನೆರವು ನೀಡಿದ ರಾಷ್ಟ್ರೀಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ಮಂಡಲಿಯ ಅಧಿಕಾರ ವರ್ಗದವರಿಗೆ ನನ್ನ ಕೃತಜ್ಞತೆಗಳು.

ನನ್ನ ಅಧ್ಯಯನ ವಿಷಯದಲ್ಲಿ ಸದಾ ಪ್ರೋತ್ಸಾಹವನ್ನು ನೀಡುತ್ತಾ ಬಂದಿರುವ ನನ್ನ ಪೂಜ್ಯ ತಂದೆತಾಯಿಗಳಿಗೆ, ಪೂಜ್ಯ ಅತ್ತೆಮಾವಂದಿರಿಗೆ, ಅಕ್ಕಂದಿರಾದ ಶ್ರೀಮತಿ ಕೌಸಲ್ಯಾ ಧರಣೇಂದ್ರ, ಜಯಪದ್ಮಾ ಪಾರ್ಶ್ವನಾಥ್, ಪ್ರೊ. ವಸಂತಕುಮಾರಿ ಮತ್ತು ಪ್ರಮೀಳಾ ನಾಗರತ್ನರಾಜ್ ಇವರಿಗೆ ಮತ್ತು ಬಂಧುಮಿತ್ರರಿಗೆ ನನ್ನ ನಮನಗಳು.

ಈ ಕಾರ್ಯದಲ್ಲಿ ಹೆಜ್ಜೆಹೆಜ್ಜೆಗೂ ಪ್ರೋತ್ಸಾಹ ನೀಡಿ ಸಹಕರಿಸಿದ ನನ್ನ ಪತಿ ಶ್ರೀ ವೈ. ಪಿ. ವಿಜಯಕುಮಾರ್ ಅವರಿಗೆ ನಾನು ಕೃತಜ್ಞಳಾಗಿದ್ದೇನೆ. ನನಗೆ ಅನೇಕ ರೀತಿಗಳಲ್ಲಿ

ಸಹಕಾರ ನೀಡಿದ ನನ್ನ ಮಕ್ಕಳಾದ ತೇಜಸ್ವಿನಿ ಹಾಗೂ ಯಶಸ್ವಿನಿಯರನ್ನು ನಾನು ನೆನೆಯುತ್ತೇನೆ.

ಈ ಅಧ್ಯಯನ ವಿಷಯದಲ್ಲಿ ಹಲವಾರು ವಿದ್ವಾಂಸರೊಂದಿಗೆ ಚರ್ಚಿಸಿ ವಿಚಾರ ವಿನಿಮಯದ ಅವಕಾಶವನ್ನು ಪಡೆದಿದ್ದೇನೆ. ಈ ವಿಷಯದಲ್ಲಿ ಅವರು ನೀಡಿದ ಸಲಹೆ ಸೂಚನೆಗಳಿಗೆ ಉಪಕೃತಳಾಗಿದ್ದೇನೆ. ಅನೇಕ ಆತ್ಮೀಯರು ಈ ಕಾರ್ಯದ ಪ್ರಗತಿಯನ್ನು ವಿಚಾರಿಸುತ್ತ ಪ್ರೋತ್ಸಾಹವನ್ನು ನೀಡಿ ನೆರವಾಗಿದ್ದಾರೆ. ಅವರಿಗೆ ನನ್ನ ನೆನಕೆಗಳು. ಕನ್ನಡ ಅಧ್ಯಯನ ಸಂಸ್ಥೆಯ ಅಂದಂದಿನ ಮುಖ್ಯಸ್ಥರು, ಪ್ರಾಧ್ಯಾಪಕರು ತೋರಿದ, ತೋರುತ್ತಿರುವ ವಿಶ್ವಾಸಕ್ಕೆ ಕೃತಜ್ಞತೆಗಳು.

ಪುಸ್ತಕ ಪ್ರಕಟಣೆಯ ಮುನ್ನಡೆಯ ಬಗೆಗೆ ಆಗಿಂದಾಗ್ಗೆ ವಿಚಾರಿಸಿಕೊಳ್ಳುತ್ತ ಪ್ರೋತ್ಸಾಹವನ್ನು ನೀಡಿದ ಪೂಜ್ಯ ದಿ. ಪಂಡಿತ ನಾಗರಾಜಶಾಸ್ತ್ರಿಗಳ ಪುತ್ರರಾದ ಅನಂತ ರಾಜು ಅವರನ್ನು, ಮೈಸೂರಿನ ದಿಗಂಬರ ಜೈನ ಸಮಾಜದ ಹಾಗೂ ಮಹಿಳಾ ಸಮಾಜದ ಕಾರ್ಯಕರ್ತರನ್ನು, ಪೂಜ್ಯ ಹಂಪನಾ ದಂಪತಿಗಳನ್ನು ಆದರಪೂರ್ವಕವಾಗಿ ನೆನೆಯುತ್ತೇನೆ.

ಈ ಪ್ರಬಂಧವನ್ನು ಅಚ್ಚು ಹಾಕಿಸುವ ಸಮಯದಲ್ಲಿ ಹಿರಿಯರಾದ ಶ್ರೀ ಆರ್. ಎಲ್. ಅನಂತರಾಮಯ್ಯ ಅವರು ಮತ್ತು ಮಿತ್ರರಾದ ಬಾ. ವೇ. ಶ್ರೀಧರ್ ಅವರು ವಿಶೇಷ ಸಲಹೆ ಸೂಚನೆಗಳನ್ನು ನೀಡಿದ್ದಾರೆ. ಅಲ್ಲದೆ ಕರಡು ಪ್ರತಿಯನ್ನು ತಿದ್ದಿ ಕೊಟ್ಟಿದ್ದಾರೆ. ಅವರನ್ನು ನಾನು ಆದರಪೂರ್ವಕವಾಗಿ ನೆನೆಯುತ್ತೇನೆ.

ಈ ಗ್ರಂಥ ಪ್ರಕಟಣೆಗೆ ಮೂಲ ಪ್ರೇರಣೆಯನ್ನು ನೀಡಿದ ಶ್ರೀ ಎಂ. ಜಿ. ಬ್ರಹ್ಮಪ್ರಕಾಶ್ ಮತ್ತು ಶ್ರೀಮತಿ ಪರಿತಾ ಪ್ರಕಾಶ್ ದಂಪತಿಗಳನ್ನು ಅತ್ಯಂತ ಸ್ನೇಹದಿಂದ ನೆನೆಯುತ್ತೇನೆ.

ಶ್ರೀಕ್ಷೇತ್ರ ಹೊಂಬುಜದ ಸ್ವಸ್ತಿ ಶ್ರೀ ದೇವೇಂದ್ರಕೀರ್ತಿ ಭಟ್ಟಾರಕ ಸ್ವಾಮೀಜಿಯವರು ಈ ಗ್ರಂಥ ಪ್ರಕಟಣೆಗೆ ವಿಶೇಷ ಪ್ರೋತ್ಸಾಹವನ್ನೂ ಧನ ಸಹಾಯವನ್ನೂ ನೀಡಿದ್ದಾರೆ. ಇವರಿಗೆ ನನ್ನ ಕೃತಜ್ಞತಾಪೂರ್ವಕವಾದ ವಿನಮ್ರ ನಮನಗಳು.

ಶ್ರೀಕ್ಷೇತ್ರ ಶ್ರವಣಬೆಳಗೊಳದ ಸ್ವಸ್ತಿಶ್ರೀ ಜಗದ್ಗುರು ಚಾರುಕೀರ್ತಿ ಭಟ್ಟಾರಕ ಸ್ವಾಮೀಜಿಯವರು ವಿಶೇಷ ಪ್ರೋತ್ಸಾಹವನ್ನೂ ಆಶೀರ್ವಾದವನ್ನೂ ನೀಡಿ ಈ ಪುಸ್ತಕ ಪ್ರಕಟಣೆಗೆ ಹರಸಿದ್ದಾರೆ. ಅವರಿಗೆ ಭಕ್ತಿಪೂರ್ವಕ ನಮನಗಳು.

'ಅಭಿನವ ದಾನಚಿಂತಾಮಣಿ ಅತ್ತಿಮಬ್ಬೆ' ಎನಿಸಿರುವ ಪೂಜ್ಯ ಮಾತೃಶ್ರೀ ರತ್ನಮ್ಮ ಹೆಗ್ಗಡೆಯವರು ಈ ಗ್ರಂಥ ಪ್ರಕಟಣೆಗಾಗಿ ವಿಶೇಷ ಧನಸಹಾಯವನ್ನು ನೀಡಿ ಕಾರ್ಯದ ಮುನ್ನಡೆಗಾಗಿ ಹೃತ್ಪೂರ್ವಕವಾಗಿ ಹಾರೈಸಿದ್ದಾರೆ. ಅವರಿಗೆ ನನ್ನ ಕೃತಜ್ಞತಾಪೂರ್ವಕ ನಮನಗಳು.

ಈ ಕೃತಿಯ ಪ್ರಕಟಣೆಗೆ ದಿವಂಗತ ಪೂಜ್ಯ ಶ್ರೀ ವೈ. ಬಿ. ನಾಭಿರಾಜಯ್ಯ ಮತ್ತು ಶ್ರೀಮತಿ ಮಧುರಮ್ಮ ಇವರ ಸ್ಮರಣೆಯಲ್ಲಿ ಉದಾರ ಆರ್ಥಿಕ ನೆರವು ನೀಡಿದ ಶ್ರೀ ವೈ. ಎನ್. ರಾಜಣ್ಣ, ವೈ. ಎನ್. ನಾಗಣ್ಣ, ವೈ. ಎನ್. ಸನತ್ಕುಮಾರ್, ಶ್ರೀಮತಿ ವೈ. ಎನ್. ಸರಳಮ್ಮ ಮತ್ತು ವೈ. ಎನ್. ಪದ್ಮಲೀಲ ಇವರಿಗೆ ವಿಶೇಷವಾಗಿ ಆಭಾರಿಯಾಗಿದ್ದೇನೆ.

ಆರ್ಥಿಕ ನೆರವು ನೀಡಿ ಪುಸ್ತಕ ಪ್ರಕಟಣೆಗೆ ಪ್ರೋತ್ಸಾಹಿಸಿದ ನನ್ನ ಹಿತೈಷಿಗಳೂ

ಬಾಂಧವರೂ ಆದ ಶ್ರೀಮತಿ ಪದ್ಮ ರಾಜಣ್ಣ ಮತ್ತು ಸುಧಾ ನಾಗಣ್ಣ, ಲೀಲಾ ಭೋಜರಾಜ್, ವಸಂತ ವೈ. ಪಿ. ಪ್ರಭಾಚಂದ್ರಯ್ಯ, ವೈ. ಬಿ. ಸರೋಜಮ್ಮ, ಪದ್ಮ ಜ್ವಾಲಕುಮಾರ್ ಕೆ. ಜೆ., ಪದ್ಮ ಅಶೋಕಕುಮಾರ್, ಜಯಂತಿ ರಾಜೇಶ್, ಜ್ವಾಲಾ ಪದ್ಮಪ್ರಭಯ್ಯ, ಮಿತ್ರ ಶಾಂತರಾಜ್, ಜ್ವಾಲಮ್ಮ ಕೆ. ಎಸ್. ಜ್ವಾಲಕುಮಾರ್, ಅಮೃತ ಪ್ರಸನ್ನಕುಮಾರ್, ಇಂದಿರ ಸನತ್ಕುಮಾರ್, ಇಂದಿರ ಜಿನದತ್ತರಾಯ, ಕಲಾಮಣಿ ಭುಜಬಲಿಸ್ವಾಮಿ, ಮಧು ರಾಜೇಂದ್ರ, ಪಿ. ಎಸ್. ಉಷಾ ಶಾಂತರಾಜ್ ಇವರುಗಳಿಗೆ ಮತ್ತು ಬೆಂಗಳೂರಿನ ವಾಣಿಜ್ಯೋದ್ಯಮದ ಮಾಲೀಕರಾದ ಸುಜಾಲ್ ಎಂಟರ್‌ಪ್ರೈಸಸ್, ವಿಪುಲ್ ಡಿಸ್ಟ್ರಿಬ್ಯೂಟರ್ಸ್, ಗಿರೀಶ್ ಎಂಟರ್‌ಪ್ರೈಸಸ್ ಇವರಿಗೆ ಹಾಗೂ ಶ್ರೀಮತಿ ಫಾಲೂಬಾಯಿ, ಶ್ರೀ ಮಹಾವೀರ್‌ಚಂದ್, ಪೂನಮ್‌ಚಂದ್ ಜೈನ್, ಸಂಪತ್‌ರಾಜ್ ಜೈನ್, ಸಂಪತ್‌ರಾಜ್, ಆರ್. ಕೆ. ಸಿಂಘ್ವಿ, ಭರತ್, ವಿ. ಎಚ್. ಷಾ ಇವರಿಗೆ, ನನ್ನ ಹಿರಿಯಕ್ಕ ಹಾಗೂ ಅವರ ಮಗಳಾದ ತ್ರಿಶಲಾ ಬ್ರಹ್ಮಯ್ಯ ಇವರಿಗೆ ಆದರಪೂರ್ವಕ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ಕೆಲಸದ ಒತ್ತಡ ಎಷ್ಟಿದ್ದರೂ ನಡುವೆ ಬಿಡುವು ಮಾಡಿಕೊಂಡು ಸಕಾಲಕ್ಕೆ ಬಹು ಸುಂದರವಾಗಿ ಕಂಪ್ಯೂಟರ್ ಅಕ್ಷರ ಜೋಡಣೆ ಮಾಡಿಕೊಟ್ಟಿರುವ ಶ್ರೀ ಶಕ್ತಿ ಡಿಟಿಪಿ ಸೆಂಟರ್‌ನ ಶ್ರೀ ರಾ. ವೆಂ. ಶ್ರೀನಿವಾಸ ಮೂರ್ತಿ ಮತ್ತು ಶ್ರೀ ಮೋಹನಮೂರ್ತಿ ಅವರಿಗೆ, ಮುದ್ರಿಸಿಕೊಟ್ಟ ಟೆಕ್ ಪ್ರಿಂಟ್ಸ್ ಅವರಿಗೆ ಆಭಾರಿಯಾಗಿದ್ದೇನೆ. ಕಲಾಪೂರ್ಣ ಮುಖಪುಟ ವನ್ನು ಬರೆದುಕೊಟ್ಟ ಶ್ರೀ ಮುರಳೀಧರರಾವ್ ಅವರಿಗೆ ನನ್ನ ಕೃತಜ್ಞತೆಗಳು.

ಮೈಸೂರು

ಮಹಾವೀರಜಯಂತಿ ೨೩–೪–೧೯೯೪ **ಸರಸ್ವತಿ ವಿಜಯಕುಮಾರ್**

ನನ್ನ ಪೂಜ್ಯ ತಂದೆ-ತಾಯಿಗಳಿಗೆ
ಭಕ್ತಿಪೂರ್ವಕವಾಗಿ ಅರ್ಪಣೆ



ಶ್ರೀ ಎಸ್. ಬಿ. ಧರಣೇಂದ್ರಯ್ಯ ಮತ್ತು ಶ್ರೀಮತಿ ಧರಣಮ್ಮ

ಪೂಜ್ಯರಾದ ನನ್ನ ಹಿರಿಯ ಅತ್ತೆಮಾವಂದಿರ
ಸ್ಮರಣಾರ್ಥ




ದಿ॥ ಶ್ರೀ ವೈ. ಬಿ. ನಾಭಿರಾಜಯ್ಯ ಮತ್ತು ಮಧುರಾಜಮ್ಮ

# ಮುನ್ನುಡಿ

‘ಕನ್ನಡ ಆದಿತೀರ್ಥಂಕರರ ಚರಿತೆಗಳು : ತೌಲನಿಕ ಅಧ್ಯಯನ’ ಎಂಬ ಈ ನಿಬಂಧ ಶ್ರೀಮತಿ ಸರಸ್ವತಿಯವರು ಹಲವು ವರ್ಷಗಳ ಕಾಲ ನಡಸಿದ ಅಧ್ಯಯನ ಸಂಶೋಧನಗಳ, ಚಿಂತನಮಂಥನಗಳ ಫಲವಾಗಿ ಸಿದ್ಧವಾಗಿರುವ ಒಂದು ಒಳ್ಳೆಯ ಕೃತಿಯಾಗಿದೆ. ಅವರು ಸಂಶೋಧನೆಗೆ ಆದಿನಾಥನ ಚರಿತೆಯನ್ನೇ ವಿಷಯವನ್ನಾಗಿ ಆಯ್ದುಕೊಂಡುದು ಮೊದಲು ಮೆಚ್ಚಬೇಕಾದ ಸಂಗತಿ; ಏಕೆಂದರೆ ಈಚಿನ ದಿನಗಳಲ್ಲಿ ಅಭ್ಯಾಸಿಗಳು ಸರಳವೂ ಏಕ ಮುಖವೂ ಆಧುನಿಕವೂ ಆದ ವಿಷಯವನ್ನು ಕುರಿತು ಸಂಶೋಧನೆಗೆ ತೊಡಗುವುದು ಸಾಮಾನ್ಯವಾಗಿರುವಾಗ, ಇವರು ಜಟಿಲವೂ ತುಲನಾತ್ಮಕವೂ ಪ್ರಾಚೀನವೂ ಆದ ವಿಷಯ ವನ್ನು ಎತ್ತಿಕೊಂಡಿದ್ದಾರೆ; ಎತ್ತಿಕೊಂಡ ವಿಷಯವನ್ನು ಆದ್ಯಂತವಾಗಿ, ಸಮರ್ಥವಾಗಿ ನಿರ್ವಹಿಸಿದ್ದಾರೆ.

ಈ ನಿಬಂಧದಲ್ಲಿ ಜೈನಪುರಾಣಗಳು, ತೀರ್ಥಂಕರರ ಪರಂಪರೆಯಲ್ಲಿ ಆದಿನಾಥನ ಸ್ಥಾನ ಮಹತ್ತ್ವಗಳು, ಸಂಸ್ಕೃತ ಪ್ರಾಕೃತ ಮತ್ತು ಕನ್ನಡ ಆದಿಪುರಾಣಗಳ ಕರ್ತೃಗಳ ಹಾಗೂ ಅವರ ಕೃತಿಗಳ ಪರಿಚಯ ಇವು ಮೊದಲ ಐದು ಅಧ್ಯಾಯಗಳಲ್ಲಿ ಅನುಕ್ರಮವಾಗಿ ನಿರೂಪಿತವಾಗಿರುವ ವಿಷಯಗಳಾಗಿವೆ. ಅನಂತರದಲ್ಲಿ ಆರನೆಯ ಅಧ್ಯಾಯದಲ್ಲಿ ನಿಬಂಧದ ಸಾರಭಾಗವಾದ, ಕನ್ನಡದಲ್ಲಿ ಉಪಲಬ್ಧವಾಗಿರುವ ಆದಿತೀರ್ಥಂಕರರ ಚರಿತೆ ಗಳ ತೌಲನಿಕ ಅಧ್ಯಯನವು ಯಥೋಚಿತವಾದ ವಿಸ್ತಾರದಲ್ಲಿ ವ್ಯಾವರ್ಣನೆಗೊಂಡಿದೆ. ಇಲ್ಲಿ ಜಿನಸೇನ-ಪಂಪರ ಹಾಗೂ ಉತ್ತರಕಾಲೀನ ಕವಿಗಳಾದ ಚಾಮುಂಡರಾಯ ಮೊದ ಲಾದವರ ಸ್ವತಂತ್ರವೋ ಅನ್ಯಕಾವ್ಯಾಂತರ್ಗತವೋ ಆದ ಆದಿನಾಥಚರಿತೆಗಳ ಸಂಬಂಧ ವಾದ ಕಥಾವಸ್ತುವನ್ನು ಪ್ರಮುಖ ಕಥಾಘಟ್ಟಗಳಿಗೆ ಅನುಸಾರವಾಗಿ ವಿಂಗಡಿಸಿಕೊಂಡು, ಭವಾವಳಿಗಳು, ಆದಿತೀರ್ಥಂಕರರ ವರ್ತಮಾನಭವದ ಚರಿತ್ರೆ-ಪಂಚಕಲ್ಯಾಣಗಳು, ಭರತ ಬಾಹುಬಲಿಗಳ ಚರಿತ್ರೆ ಎಂಬ ಮೂರು ಭಾಗಗಳಲ್ಲಿ ತೌಲನಿಕವಾಗಿ ವಿಮರ್ಶಿಸಿರುವುದು ಕಂಡುಬರುತ್ತದೆ. ಈ ವಿಮರ್ಶೆಯಲ್ಲಿ ಜಿನಸೇನ-ಪಂಪರ ರಚನೆಗಳಿಗೆ ಪ್ರಾಶಸ್ತ್ಯ ಸಂದಿದ್ದು, ಉಳಿದವರ ರಚನೆಗಳನ್ನು ಸಂಕ್ಷಿಪ್ತವಾಗಿ ಸಮೀಕ್ಷಿಸಿರುವುದು ಸಹಜವಾಗಿಯೇ ಇದೆ. ಆ ಉಳಿದವು ಎಂದರೆ, ‘ಚಾವುಂಡರಾಯಪುರಾಣ’ದೊಳಗಿನ ಆದಿಪುರಾಣ ಭಾಗ, ಹಸ್ತಿಮಲ್ಲನ ರಚನೆಯಾದ ‘ಪೂರ್ವಪುರಾಣ’, ನಾಗರಾಜನ ‘ಪುಣ್ಯಾಸ್ರವ’ದೊಳಗಿನ ‘ಆದೀಶ್ವರರ ಕಥೆ’, ಶಾಂತಿಕೀರ್ತಿಯ ‘ಪುರುದೇವಚರಿತ’, ಹಾಗೂ ಬೊಮ್ಮಣ್ಣನ ‘ಆದಿ ಪರಮೇಶ್ವರನ ಯಕ್ಷಗಾನ’ ಎಂಬುವೇ ಆಗಿವೆ. ಇವುಗಳಲ್ಲಿ ಸೇರಬಹುದಾದ ಬೇರೆ ಸ್ವತಂತ್ರಕೃತಿಗಳು ಬಹುಶಃ ಇರಲಾರವೆಂದರೂ, ಕಾವ್ಯಾಂತರ್ಗತವಾದವು ಕೆಲವಾದರೂ ಇನ್ನೂ ಇದ್ದಿರಬೇಕೆಂದು ತಿಳಿಯಲವಕಾಶವಿದೆ. ಉದಾಹರಣೆಗೆ, ಚಿಕ್ಕಣ ಪಂಡಿತ (೧೫ ನೆಯ ಶ.), ಪಂಚಬಾಣ (೧೬೧೪), ಚದುರ ಚಂದ್ರಮ (೧೬೪೬) ಈ ಕೆಲವರು ಬರೆದಿರುವ ಬಾಹುಬಲಿ ಚರಿತೆಗಳಲ್ಲಿ ಸಂಕ್ಷಿಪ್ತವಾಗಿ ಆದಿನಾಥನ ಕಥೆಯೂ ವಿಸ್ತಾರವಾಗಿ ಅವನ ಮಕ್ಕಳ ಕಥೆಯೂ ಬಂದಿರುವುದನ್ನು ಇಲ್ಲಿ ನೆನೆಯಬಹುದು. ನಿಬಂಧದಲ್ಲಿ ಇವುಗಳ ಪ್ರಸ್ತಾವವಿದ್ದರೂ, ರತ್ನಾಕರವರ್ಣಿಯ ಭರತೇಶವೈಭವವನ್ನು ಹೊರತುಪಡಿಸಿ,

ಗೌಣವೆಂಬ ಕಾರಣದಿಂದ ಇವನ್ನು ವಿವೇಚನೆಗೆ ಬಹುಶಃ ಎತ್ತಿಕೊಂಡಿಲ್ಲ. ಇದರಿಂದ ಇಲ್ಲಿ ಪಂಪನ 'ಆದಿಪುರಾಣ'ದ ಸುಸ್ಪಷ್ಟವಾದ ಹಾಗೂ ಸಂಭಾವ್ಯವಾದ ಪ್ರಭಾವವನ್ನೂ ಕಥಾವ್ಯತ್ಯಾಸಗಳನ್ನೂ ಗುರುತಿಸುವ ಸಾಧ್ಯತೆ ತಪ್ಪಿಹೋದಂತಾಗಿದೆ. ಆದರೆ ಇದು ಪರಿಗಣಿಸಬಹುದಾದ ಲೋಪವೇನೂ ಅಲ್ಲ.

ಏಳನೆಯ ಅಧ್ಯಾಯದಲ್ಲಿ ಕನ್ನಡ ಆದಿತೀರ್ಥಂಕರ ಚರಿತೆಗಳ ಭಾಷೆ, ಶೈಲಿ, ಛಂದಸ್ಸುಗಳ ಪ್ರತ್ಯೇಕವಾದ ಸಂಕ್ಷಿಪ್ತ ವಿವೇಚನೆ ಇದೆ. ಕವಿ-ಕಾವ್ಯಪ್ರಶಸ್ತಿ, ಭಾಷೆ, ಶೈಲಿಗಳು, ವರ್ಣನೆ, ರಸಭಾವಗಳು, ಛಂದಸ್ಸು ಈ ಭಾಗಗಳಲ್ಲಿ ಇನ್ನೂ ಗಾಢವಾದ ಪರಿಶೀಲನೆಯಿಂದ, ತುಲನೆಯಿಂದ ಸ್ವೋಪಜ್ಞತೆ ಪ್ರಭಾವಗಳನ್ನು ಸ್ಫುಟಗೊಳಿಸುವ ಅವಕಾಶ ವಿದ್ದಿತೆಂದು ಹೇಳಬೇಕಾಗಿದೆ. ಆದರೆ ಇರುವ ಮಟ್ಟಿಗೆ, ವೈಯಕ್ತಿಕತೆಯನ್ನು ಗುರುತಿಸುವ ಗಮನಿಕೆಗಳಿಗೇನೂ ಕೊರತೆಯಿಲ್ಲ. ಎಂಟನೆಯ ಕೊನೆಯ ಅಧ್ಯಾಯದಲ್ಲಿ ನಿಬಂಧದ ಫಲಿತಾಂಶರೂಪವಾದ ಒಟ್ಟು ನೋಟವನ್ನು ಸಮೀಚೀನವಾಗಿ ಮಾಡಿಕೊಟ್ಟಿದೆ.

ಶ್ರೀಮತಿ ಸರಸ್ವತಿ ಸ್ವತಃ ಜೈನಧರ್ಮಾನುಯಾಯಿ; ಸುಸಂಸ್ಕೃತ ವಿದ್ಯಾವಂತ ಕುಟುಂಬದ ಸಂಪ್ರದಾಯಸ್ಥರು. ಜೈನಶಾಸ್ತ್ರ ಮತ್ತು ಪ್ರಾಕೃತ ಭಾಷೆಗಳಲ್ಲಿ ಚೆನ್ನಾಗಿ ಪರಿಚಯವುಳ್ಳವರಾದುದರಿಂದ ಅವರ ಜೈನಾಚಾರ ವಿಚಾರಗಳ ಪರಿಜ್ಞಾನ, ಭಾಷಾಸಾಹಿತ್ಯಗಳ ತಜ್ಞತೆ ಚೆನ್ನಾಗಿ ಮೇಳವಿಸಿದೆ ಪ್ರಸ್ತುತ ನಿಬಂಧದಲ್ಲಿ. ಎರಡು ಸಂಪ್ರದಾಯಗಳ ಆದಿನಾಥ ಚರಿತೆಗಳನ್ನು ವಿಶದಪಡಿಸಿರುವುದು, ಕನ್ನಡ ಆದಿನಾಥ ಕಥಾಸಾಹಿತ್ಯವನ್ನು ಸಂಸ್ಕೃತ ಪ್ರಾಕೃತ ಆದಿನಾಥಕಥಾಸಾಹಿತ್ಯದ ಹಿನ್ನೆಲೆಯಲ್ಲಿ ಸಮಗ್ರವಾಗಿ ನಿರೂಪಿಸಿರುವುದು ಇವು ಉಪಯುಕ್ತವಾದ ಹೊಸ ಸಂಗತಿಗಳಿಂದ ಕೂಡಿವೆ; ಸಮೃದ್ಧವಾಗಿವೆ.

ಈ ಪೀಠಿಕೆಯ ಬಳಿಕಣ ಭಾಗವೇ ನಿಬಂಧದ ಹೃದಯ. ಇಲ್ಲಿ ಆದಿನಾಥನ ಭವಾವಳಿಗಳು ಪ್ರತ್ಯೇಕ ಪರಿಶೀಲನೆಗೆ ಒಳಪಟ್ಟು, ಒಂದೊಂದು ಭವದ ಕಥೆಯೂ ವಿವಿಧ ಆಕರಗಳಲ್ಲಿ ಹೇಗೆ ಬಂದಿದೆ, ಅಲ್ಲಿ ಸ್ವಾರಸ್ಯಕರ ಸಂಗತಿಗಳೂ ಭಾವವಿಶೇಷಗಳೂ ಯಾವುವು, ಸ್ವೀಕೃತಿ ಸ್ವೋಪಜ್ಞ ಭಾಗಗಳ ಪಾಲು ಏನು ಇತ್ಯಾದಿ ಸಂಗತಿಗಳು ಸವಿವರ ಪರಾಮರ್ಶೆಗೆ ಒದಗಿವೆ. ಇಂತಹ ವಿಚಾರ ವಿಮರ್ಶೆಗಳಿಂದಲೆ ಕವಿಗಳ ಶಕ್ತಿ ದೌರ್ಬಲ್ಯಗಳ ಸೆಲೆಗಳು ಸಿಗುವುದು ಸಾಧ್ಯ; ಸ್ವೀಕರಣ ಪ್ರಭಾವಗಳು ಪರಿಸ್ಫುಟಗೊಳ್ಳುವುದು ಶಕ್ಯ; ಆದಿನಾಥನ ಕಥಾಸಾಹಿತ್ಯದಲ್ಲಿ ಪಂಪನ ಸ್ಥಾನವೂ ಅನಂತರದಲ್ಲಿ ಅವನ ಪ್ರಭಾವ ವಲಯಕ್ಕೆ ಬಂದ ಅನ್ಯ ಕವಿಗಳ ಸ್ಥಾನವೂ ಯಾವ ಗುಣಪ್ರಮಾಣಗಳಲ್ಲಿವೆ ಎನ್ನುವುದು ಹೊರಪಡುವುದು ಸಂಭಾವ್ಯ. ಈ ದಿಕ್ಕಿನಲ್ಲಿ ನಿಬಂಧಕಾರರು ಸಾಕಷ್ಟು ಪರಿಶ್ರಮ ವಹಿಸಿದ್ದಾರೆ, ಯಶಸ್ಸನ್ನೂ ಗಳಿಸಿದ್ದಾರೆ. ಅವರ ಅಭಿರುಚಿ ಅಧ್ಯಯನಸಾಮರ್ಥ್ಯಗಳಿಗೆ ಇದು ಶ್ರಮಭೂಮಿ, ಪರೀಕ್ಷಾರಂಗ. ಇದರಲ್ಲಿ ಅವರಿಗೆ ಸ್ವಾಭಾವಿಕವಾಗಿಯೆ ದೊರೆತಿರುವುದು ಮಿಶ್ರಫಲ, ಮಿಶ್ರ ಪ್ರತಿಕ್ರಿಯೆ. ಭಾವಕಾವ್ಯಗಳ ವಿಚಾರ ವಿಮರ್ಶೆಗಳಲ್ಲಿ ಈ ಫಲ ಪ್ರತಿಕ್ರಿಯೆಗಳ ಇತಿ ಮಿತಿ ಎಂದೂ ಹೀಗೆಯೆ.

ಆದಿನಾಥನ ವರ್ತಮಾನಭವದ ಚರಿತ್ರೆ, ಪಂಚಕಲ್ಯಾಣಗಳ ನೆಲೆಯಲ್ಲಿ ಮೂಲ ಆಕರಗಳ ಸೂಕ್ತ ಉದ್ಧೃತಿಗಳೊಂದಿಗೆ ಸವಿವರವಾಗಿ, ತೃಪ್ತಿಕರವಾಗಿ ಬಂದಿದೆ. ಇನ್ನು ಕಥಾಂತ್ಯದಲ್ಲಿಯ ಭರತ ಬಾಹುಬಲಿಗಳ ವ್ಯಾಯೋಗವೃತ್ತಾಂತ ಪ್ರತ್ಯೇಕವಾದೊಂದು

ಭಾಗವಾಗಿ ಯಥೋಚಿತ ವಿಸ್ತಾರದಲ್ಲಿ ಸಮೀಕ್ಷೆಗೆ ವಿಷಯವಾಗಿದೆ.

ಹೀಗೆ ಭವಾವಳಿಗಳು, ವರ್ತಮಾನಭವ, ಪುತ್ರಚರಿತ ಈ ಮೂರು ಭಾಗಗಳ ಆದಿನಾಥ ಚರಿತೆಯ ಸಮಾಲೋಚನದಲ್ಲಿ ಹಲವೆಡೆ ಅನ್ಯವಿಮರ್ಶಕರ ಅಭಿಪ್ರಾಯಗಳು, ವಿಮರ್ಶೆ ಪುನರ್ವಿಮರ್ಶೆಗಳಿಗೆ ಗುರಿಯಾಗಿ, ಆ ಮೂಲಕ ಮುಖ್ಯ ಕಥೆಯ ಲೋಪಾಗಮಾದೇಶ ಗಳನ್ನು ಗುರುತಿಸಿದೆ; ಕವಿಗಳ ಸೋಲುಗೆಲವುಗಳೂ ಕೃತಿಗಳ ನೆಲೆಬೆಲೆಗಳೂ ಪ್ರಸ್ತಾವ ಗೊಂಡಿವೆ.

ಪ್ರಾಚೀನ ಸಾಹಿತ್ಯಕೃತಿಗಳ ವಿಮರ್ಶೆಯಲ್ಲಿ ಅವುಗಳ ಭಾಷೆ, ಶೈಲಿ, ಛಂದಸ್ಸುಗಳ ಸ್ವರೂಪವನ್ನು, ಎಂದರೆ ಕ್ರಿಯಾಕಲ್ಪವನ್ನು ವಿವೇಚಿಸುವುದು ಎಂದಿನಿಂದ ನಡೆದು ಬಂದಿರುವ ಪದ್ಧತಿ. ಇಂತಹ ವಿವೇಚನೆಯಿಂದ ಅಭಿವ್ಯಕ್ತಿಮುಖದಲ್ಲಿ ಕವಿಗಳ ಸಾಧನೆ ಸಿದ್ಧಿಗಳು, ಜಯಾಪಜಯಗಳು ಪ್ರಕಟವಾಗುವುದೂ ಹೆಚ್ಚುಕಡಿಮೆಗಳು ತಿಳಿಯುವುದೂ ಮಾತ್ರವಲ್ಲದೆ, ಕಾಲಗತಿಯನ್ನನುಸರಿಸಿ ಭಾಷೆ, ಛಂದಸ್ಸುಗಳಲ್ಲಿ ತಲೆದೋರಿದ ಸ್ಥಿತ್ಯಂತರ ಗಳೂ ಮನವರಿಕೆಯಾಗುವುದು ಸಾಧ್ಯವಿದೆ. ಸಮೃದ್ಧವಾದ ಉದಾಹರಣೆಗಳಿಂದ ಈ ಭಾಗ ಕೆಲಮಟ್ಟಿಗೆ ಯಾಂತ್ರಿಕ, ಗತಾನುಗತಿಕ ಎನ್ನುವಂತಿದ್ದರೂ ರೋಚಕವಾಗಿದೆ, ತೃಪ್ತಿಕರ ವಾಗಿದೆ. ಅನಂತರದ ಎಂಟನೆಯ ಶೀರ್ಷಕಪ್ರಾಯವಾದ ಅಧ್ಯಾಯದಲ್ಲಿ ಅಲ್ಲಿಯವರೆಗಿನ ಪರಿಶ್ರಮಪೂರ್ಣ ವಿಸ್ತೃತ ಅಧ್ಯಯನದ ಫಲಿತಾಂಶರೂಪವಾದ ಒಟ್ಟುನೋಟವಿದೆ. ಇಲ್ಲಿ ವಸ್ತು ನಿರ್ವಹಣೆಯಲ್ಲಿ ಕವಿಗಳ ಕಾವ್ಯಕರ್ಮದ ದೃಷ್ಟಿಯಿಂದ ಸ್ವೋಪಜ್ಞತೆ ಸ್ವೀಕೃತಿಗಳನ್ನು ಮುಖ್ಯವಾಗಿ ಲಕ್ಷಿಸಿ, ಆದಿನಾಥ ಚರಿತೆಕಾರರ ಸಾಧನೆ ಸಿದ್ಧಿಗಳನ್ನು ಒಗ್ಗೂಡಿಸಿದೆ. ಈ ಒಗ್ಗೂಡಿಕೆ ಔಪಚಾರಿಕವಾಗದೆ, ಹಿತೋಚಿತವಾಗಿ ತಕ್ಕ ವಿಸ್ತಾರದಲ್ಲಿ ಚೆನ್ನಾಗಿಯೇ ಬಂದಿದೆ ಎಂದು ಹೇಳಬೇಕು. ಉಪಸಂಹಾರದ ಭಾಗವಾಗಿರುವ ಜೈನಸಾಹಿತ್ಯದಲ್ಲಿ ಆದಿತೀರ್ಥಂಕರನ ಚರಿತೆಗಳ ನೆಲೆಬೆಲೆ ಎಂಬುದರಲ್ಲಿಯೂ ಈ ಲಕ್ಷಣ ಸ್ಫುಟವಾಗಿದೆ.

ಈ ವರೆಗೆ ಪ್ರಖ್ಯಾತವಾದ ಪಂಪನ 'ಆದಿಪುರಾಣ'ದ ಬಗೆಗೆ ಪ್ರತ್ಯೇಕವಾಗಿ ವಿಮರ್ಶಾ ಸಾಹಿತ್ಯ ಸಾಕಷ್ಟು ಬಂದಿದ್ದರೂ, ಜಿನಸೇನ-ಪಂಪರ ಕೃತಿಗಳ ವಿಸ್ತೃತ ತೌಲನಿಕ ವಿಮರ್ಶೆಯೂ ಅದರ ಬೆಳಕಿನಲ್ಲಿ 'ಆದಿಪುರಾಣ'ದ ಮೌಲ್ಯಮಾಪನವೂ ತೃಪ್ತಿಕರವಾಗಿ ನಡೆದಿರಲಿಲ್ಲ. ಹಾಗೆಯೇ ಪಂಪನ ಕೃತಿಯ ಹಿನ್ನೆಲೆಯಲ್ಲಿ ಅನ್ಯ ಉತ್ತರಕಾಲೀನ ಕನ್ನಡ ಆದಿನಾಥ ಚರಿತೆಗಳ ತೌಲನಿಕ ವಿಮರ್ಶೆಯೂ ನಡೆದಿರಲಿಲ್ಲ. ಈ ದೃಷ್ಟಿಯಿಂದ ಜಿನ ಸೇನರ ಪೂರ್ವಪುರಾಣವನ್ನು ಆಕರವಾಗಿಟ್ಟುಕೊಂಡು, ಪಂಪಾದ್ಯರ ಕೃತಿಗಳ ಒಂದು ತೌಲನಿಕ ಅಧ್ಯಯನವನ್ನು ನಡಸುವ ಅಗತ್ಯ ಈ ನಿಬಂಧದೊಂದಿಗೆ ಪೂರೈಸಿದಂತಾಗಿದೆ. ಅಷ್ಟಾಗಿ ಪರಿಚಿತರಲ್ಲದ ಮಧ್ಯಕಾಲೀನ ಕೃತಿಕಾರರ ರಚನೆಗಳು ಮೊದಲ ಸಲ ಇಲ್ಲಿ ಪರಿಶೀಲನೆಗೆ ಒಳಪಟ್ಟಿರುವುದು ಗಮನಾರ್ಹ ಸಂಗತಿಯಾಗಿದೆ. ಹೀಗೆ ಮಾಡಿರುವುದ ರಿಂದ ಪ್ರಥಮ ತೀರ್ಥಂಕರನಾಗಿಯೂ ಪಂಪನ ಆಗಮಿಕಕೃತಿಯ ನಾಯಕ ವ್ಯಕ್ತಿ ಯಾಗಿಯೂ ಪ್ರಮುಖನಾಗಿರುವ ಆದಿನಾಥನ ಕಥಾಸಾಹಿತ್ಯದ ಒಂದು ಇತಿಹಾಸ, ತುಲನಾತ್ಮಕ ವಿಮರ್ಶೆ ಮತ್ತು ಮೌಲ್ಯನಿರ್ಣಯ ಒಟ್ಟಾಗಿ ಈ ನಿಬಂಧದಲ್ಲಿ ಕಂಡುಬರು ವಂತಾಗಿದೆ. ಇದು ಇತರ ತೀರ್ಥಂಕರ ಚರಿತೆಗಳ ಅಧ್ಯಯನಕ್ಕೆ ಒಂದು ಉಪಯುಕ್ತ ಮಾದರಿಯಾಗಿ ಪರಿಣಮಿಸಿದೆ. ಈ ಸ್ತುತ್ಯ ಕಾರ್ಯದಿಂದಾಗಿ ಶ್ರೀಮತಿ ಸರಸ್ವತಿ ಅಭಿನಂದ

ನಾರ್ಹರಾಗಿದ್ದಾರೆ.

ಕನ್ನಡದ ಉಪಲಬ್ಧ ಜೈನಪುರಾಣಕಾವ್ಯಗಳಲ್ಲಿ ಮಾತ್ರವೇ ಅಲ್ಲದೆ, ಆ ಭಾಷೆಯಲ್ಲಿ ಈಗ ದೊರೆತಿರುವ ಕಾವ್ಯಸಮೂಹದಲ್ಲಿಯೇ ಪಂಪನ 'ಆದಿಪುರಾಣ' ಆದಿಕಾವ್ಯವಾಗಿ ಮಾನ್ಯವಾಗಿದೆ. ತೀರ್ಥಂಕರ ವ್ಯೂಹದಲ್ಲಿ ಪುರುದೇವಾದಿ ನಾಮಾಂತರಗಳ ವೃಷಭ ದೇವನೇ ಆದಿತೀರ್ಥಂಕರನೆನಿಸಿದ್ದಾನೆ; ಹಾಗೆಂದೇ ಅವನು ಆದಿನಾಥ, ಆದಿಜಿನೇಶ್ವರ; ಅವನ ಚರಿತೆ ಆದಿಪುರಾಣ. ಪಂಪನ ಆದಿಕವಿಖ್ಯಾತಿಗೆ ಈ ಆದಿಪುರಾಣದ ರಚನೆ ಸಹ ಸಹಕಾರಿಯಾಗಿರಬಹುದು. ಇಲ್ಲಿ ಜೀವನ ಆತ್ಮೋನ್ನತಿಯ ಯಾತ್ರೆಯ ಸುರಮ್ಯ ಕಥನ ವಿದೆ; ಹೃದಯಸ್ಪರ್ಶಿಯಾದ ಪ್ರಣಯಕಥೆಗಳಿವೆ; ಅಧಿಕಾರ ಸಂಪದಾದಿಗಳಿಗೆ ನಡೆದ ಹೋರಾಟಗಳಿವೆ; ಮನುಷ್ಯಸಾಮಾನ್ಯರು ಎದುರಿಸುವ ಧರ್ಮಸೂಕ್ಷ್ಮದ ತಾಕಲಾಟಗಳಿವೆ; ಧರ್ಮೋಪದೇಶ ತತ್ತ್ವೋಪಾಸನೆಗಳ ತಪೋವನಪ್ರಾಂತಗಳಿವೆ ; ಮಾನಕಷಾಯಸಂ ಜನಿತವಾದ ವ್ಯಥೆ ವಿಷಾದಗಳಿವೆ: ಇವೆಲ್ಲ ಬರಿಯ ಕಥನವಲ್ಲ, ಕಾವ್ಯವಾಗಿದೆ ಎನ್ನುವುದೇ 'ಆದಿಪುರಾಣ'ದ ಅಗ್ಗಳಿಕೆ. ಶಾಂತಿನಾಥ ನೇಮಿನಾಥ ವರ್ಧಮಾನ ತೀರ್ಥಂಕರರ ಚರಿತೆ ಗಳನ್ನು ಹಲವು ಜೈನಕವಿಗಳು ಒಂದಕ್ಕಿಂತ ಹೆಚ್ಚು ಸಲ ಹಳಗನ್ನಡದ ಚಂಪೂ ಪದ್ಧತಿ ಯಲ್ಲಿ, ವಿಸ್ತಾರವಿಲಂಬ ಶೈಲಿಯಲ್ಲಿ, ಮಹಾಕಾವ್ಯಗಳಾಗಿ ಬರೆದಿದ್ದಾರೆ; ಆದರೆ ಆದಿ ನಾಥನ ಚರಿತೆಯನ್ನು ಏಕೆ ಬರೆದಿಲ್ಲ? ಇದಕ್ಕೆ ವಿಶೇಷ ಕಾರಣಗಳೇನೂ ಇಲ್ಲವೆನ್ನುವುದು ಸುಲಭವಾದ ಉತ್ತರ. ಆದರೆ ಕಥೆ, ಸನ್ನಿವೇಶ, ಪಾತ್ರ, ವರ್ಣನೆ, ರಸ ಈ ಹಲವು ದೃಷ್ಟಿಗಳಿಂದ ಒಳ್ಳೆಯ ವಸ್ತುವಾದ ಆದಿನಾಥನ ಚರಿತೆ ಏಕೆ ಒಂದು ಪ್ರೌಢ, ಗಂಭೀರ ವಸ್ತುಕೃತಿಯಾಗಿ ಪಂಪನ ಅನಂತರದಲ್ಲಿ ಹುಟ್ಟಲಿಲ್ಲ ಎನ್ನುವುದು ಒಂದು ಕುತೂಹಲಕರ ಪ್ರಶ್ನೆಯಾಗಿದೆ. ಪಂಪನನ್ನು ಮೀರಿಸುವುದು ತಮ್ಮಿಂದ ಆಗದು ಎಂದು ಕವಿಗಳು ಸುಮ್ಮನಾದರೆ? ಅವನ ಬಗೆಗೆ ತಮಗಿದ್ದ ಗೌರವದಿಂದ ಅವರು ಸುಮ್ಮನಾದರೆ? ತಮ್ಮ ವೈಯಕ್ತಿಕತೆಯ ಪ್ರಕಟನೆಗೆ ಬೇರೆ ಪುರಾಣಗಳ ಆಯ್ಕೆಯೇ ಸೂಕ್ತವೆಂದು ಅವರು ಬಗೆದರೇ? ಉತ್ತರ ಚಿಂತನೀಯ. ಚಾಮುಂಡರಾಯ ಹಸ್ತಿಮಲ್ಲರು ವಸ್ತುನಿರ್ವಹಣೆ ಯಲ್ಲಿ ಪಂಪನನ್ನು ಅನುಸರಿಸಿದ್ದು ನಿಜ; ಆದರೆ ಅವರು ಗದ್ಯಕವಿಗಳು, ನಿಮ್ಮರ ಕಥಾಸಂಗ್ರಾಹಕರು. ಉಳಿದವರು ಸಾಮಾನ್ಯ ಮಧ್ಯಕಾಲೀನ ಕವಿಗಳು. ಇವರಲ್ಲಿಯೂ ಶಾಂತಿಕೀರ್ತಿಯೊಬ್ಬನೇ ಗಮನಾರ್ಹನಾದವನು.

ಇದು ಏನೇ ಇದ್ದರೂ, ಪಂಪನ 'ಆದಿಪುರಾಣ' ಒಂದು ಮಾದರಿ ಪುರಾಣಕಾವ್ಯವಾಗಿ ಅದರ ವಸ್ತು ರೀತಿಗಳ ಪ್ರಭಾವ ಉತ್ತರಕಾಲೀನ ಕನ್ನಡ ಜೈನಪುರಾಣಗಳಲ್ಲಿ ಕಂಡು ಬಂದಿರುವುದಂತೂ ನಿಜ. ಅದಕ್ಕೆ ನಿದರ್ಶನಗಳ ಕೊರತೆಯೇನೂ ಇಲ್ಲ. ರನ್ನ ತನ್ನ 'ಅಜಿತಪುರಾಣ'ದಲ್ಲಿ (೧-೭೬, ೧೨-೩೭, ೪೧), ನಾಗವರ್ಮ ತನ್ನ 'ವೀರವರ್ಧಮಾನ ಪುರಾಣ'ದಲ್ಲಿ (೧-೬), ಶಾಂತಿನಾಥ ತನ್ನ 'ಸುಕುಮಾರಚರಿತೆ'ಯಲ್ಲಿ (೧-೩೭), ನಾಗ ಚಂದ್ರ ತನ್ನ 'ಮಲ್ಲಿನಾಥಪುರಾಣ'ದಲ್ಲಿ (೧-೨೫), ಬ್ರಹ್ಮಶಿವ 'ಸಮಯಪರೀಕ್ಷೆ'ಯಲ್ಲಿ (೧-೩೩) 'ಆದಿಪುರಾಣ'ವನ್ನು ಪ್ರತ್ಯಕ್ಷವಾಗಿ ಇಲ್ಲವೆ ಪರೋಕ್ಷವಾಗಿ ಹೆಸರಿಸಿದ್ದಾರೆ. ಪಂಪನ ಆ ಪುರಾಣದ ಪ್ರಭಾವ ಕರ್ಣಪಾರ್ಯ, ಅಗ್ಗಳ, ಜನ್ನ, ನಾಗರಾಜ ಮೊದಲಾದವರ ಮೇಲೆ ಸಹ ಕಂಡುಬಂದಿದೆ ; "ಕಿಱಿದೀ ಕಥಾಪರಿಸ್ಪಂದಂ" ಎಂಬಂತಿರುವ ಪುರಾಣ

ಗಳಲ್ಲಿಯೂ ಪಂಪನ ಆದಿಪುರಾಣದ ಪ್ರಭಾವದ ನೆರಳು ಬೆಳಕಿನಾಟವನ್ನು ಗಮನಿಸಬಹುದು. ಈ ವಿಷಯವನ್ನು ಸಂಶೋಧಕರು ತುಲನಾತ್ಮಕ ಅಧ್ಯಯನಗಳ ಮೂಲಕ ವಿಶದಪಡಿಸುವುದು ಫಲಪ್ರದವಾದುದು. ಆಗ ಆದಿಪುರಾಣದ ಮಹತ್ತ್ವ ಇನ್ನೂ ಚೆನ್ನಾಗಿ ಮನವರಿಕೆಯಾಗುತ್ತದೆ. ಹಾಗೆಯೇ ಪಂಪನು ಜಿನಸೇನರಲ್ಲದೆ ಬೇರೆ ಯಾವ ಸಂಸ್ಕೃತ ಜೈನಪುರಾಣಕರ್ತೃಗಳಿಂದ, ಸಂಸ್ಕೃತ ಮಹಾಕವಿಗಳಿಂದ ಪ್ರಭಾವಿತನಾಗಿದ್ದಾನೆ ಎನ್ನುವುದನ್ನು ಗುರುತಿಸುವುದೂ ಅವಶ್ಯವಾಗಿ ಆಗಬೇಕಾದ ಕೆಲಸವಾಗಿದೆ; ಶ್ರೀಹರ್ಷ, ಕಾಳಿದಾಸ, ಭಾರವಿ, ಬಾಣ ಮೊದಲಾದವರ ಪ್ರಭಾವವುಂಟು ಎಂಬುದನ್ನು ಇನ್ನೂ ಗಾಢವಾದ ಪರಿಶೀಲನದಿಂದ ವಿಸ್ತಾರವಾಗಿ ವಿವೇಚಿಸುವ ಅಗತ್ಯವಿದೆ.

ಮೈಸೂರು

೧೭–೪–೧೯೬೪ **ಟಿ. ವಿ. ವೆಂಕಟಾಚಲ ಶಾಸ್ತ್ರೀ**

# ವಿಷಯಸೂಚಿ

ಪುಟ

ಅರಿಕೆ .... iii

ಮುನ್ನುಡಿ .... vii

**ಅಧ್ಯಾಯ ೧ : ಜೈನಪುರಾಣಗಳು**

ಪುರಾಣ : ಅರ್ಥ ಮತ್ತು ವ್ಯಾಪ್ತಿ .... ೧

ಜೈನೇತರ ಸಾಹಿತ್ಯದಲ್ಲಿ 'ಪುರಾಣ'ದ ಉಲ್ಲೇಖ, ವ್ಯುತ್ಪತ್ತಿ, ಬೆಳವಣಿಗೆ, ಮಹತ್ತ್ವ .... ೩

ಪುರಾಣ ಲಕ್ಷಣ : ವೈದಿಕ-ಜೈನಪುರಾಣಗಳಲ್ಲಿನ ಸಾದೃಶ್ಯ ವೈದೃಶ್ಯಗಳು ೬

ಜೈನಪುರಾಣಗಳ ಬೆಳವಣಿಗೆಯ ಹಿನ್ನೆಲೆ .... ೧೧

ಜೈನಪುರಾಣಗಳ ವೈಶಿಷ್ಟ್ಯಗಳು .... ೧೨

ಟಿಪ್ಪಣಿಗಳು .... ೧೮

**ಅಧ್ಯಾಯ ೨ : ತೀರ್ಥಂಕರ ಪರಂಪರೆಯಲ್ಲಿ ಆದಿನಾಥನ ಸ್ಥಾನ, ಮಹತ್ತ್ವ**

ಜೈನಪುರಾಣಗಳಲ್ಲಿ ಆದಿನಾಥನ ಚರಿತ್ರೆಗಳ ಮಹತ್ತ್ವ .... ೨೧

ಆದಿತೀರ್ಥಂಕರನ ಕಾಲದ ಹಿನ್ನೆಲೆ .... ೨೨

ಜೈನಪರಂಪರೆಯಲ್ಲಿ ಆದಿತೀರ್ಥಂಕರನ ಸ್ಥಾನ, ಮಹತ್ತ್ವ .... ೨೪

ಜೈನೇತರ ಸಾಹಿತ್ಯದಲ್ಲಿ ವೃಷಭನ ಉಲ್ಲೇಖ .... ೨೬

ಐತಿಹಾಸಿಕ ಸಾಕ್ಷ್ಯಾಧಾರಗಳಲ್ಲಿ ವೃಷಭನ ಉಲ್ಲೇಖ .... ೩೩

ಟಿಪ್ಪಣಿಗಳು ... ೩೭

**ಅಧ್ಯಾಯ ೩ : ಸಂಸ್ಕೃತ ಆದಿಪುರಾಣಗಳು : ಕರ್ತೃಗಳು, ಕೃತಿಪರಿಚಯ**

ಸಂಸ್ಕೃತ ಆದಿತೀರ್ಥಂಕರ ಚರಿತೆಗಳು .... ೩೯

ಸಂಸ್ಕೃತ ಮಹಾಪುರಾಣಗಳು .... ೪೧

ಇತರ ಸಂಸ್ಕೃತ ಕಾವ್ಯಗಳು .... ೪೬

ದಿಗಂಬರ ಪರಂಪರೆಯ ಜಿನಸೇನ-ಗುಣಭದ್ರರ ಪೂರ್ವಪುರಾಣದ ಕಥೆ .... ೪೬

ಶ್ವೇತಾಂಬರ ಪರಂಪರೆಯ ಹೇಮಚಂದ್ರನ ತ್ರಿಷಷ್ಟಿಶಲಾಕಾ ಪುರುಷಪುರಾಣಾಂತರ್ಗತವಾದ ಆದಿಪುರಾಣದ ಕಥೆ .... ೫೫

ದಿಗಂಬರ-ಶ್ವೇತಾಂಬರ ಸಂಪ್ರದಾಯದ ಕಥೆಗಳಲ್ಲಿ ಕಂಡುಬರುವ ಪ್ರಮುಖ ವ್ಯತ್ಯಾಸಗಳು .... ೬೩

ಟಿಪ್ಪಣಿಗಳು .... ೬೬

**ಅಧ್ಯಾಯ ೪ : ಪ್ರಾಕೃತ ಆದಿಪುರಾಣಗಳು : ಕರ್ತೃ, ಕೃತಿಪರಿಚಯ**


ಪ್ರಾಕೃತ ಆದಿತೀರ್ಥಂಕರ ಚರಿತೆಗಳು .... ೭೯
ಪ್ರಾಕೃತ ಮಹಾಪುರಾಣಗಳು (ತ್ರಿಷಷ್ಟಿ ಶಲಾಕಾಪುರುಷ ಚರಿತ್ರೆಗಳು) .... ೭೦
ಶ್ವೇತಾಂಬರ ಆಗಮಗ್ರಂಥಗಳಲ್ಲಿ ಆದಿತೀರ್ಥಂಕರನ ಚರಿತೆಗಳು .... ೭೪
ಆದಿತೀರ್ಥಂಕರನ ಚರಿತ್ರೆಯನ್ನು ನಿರೂಪಿಸುವ ಅನ್ಯ ಕೃತಿಗಳು .... ೭೭
ಟಿಪ್ಪಣಿಗಳು .... ೭೮


**ಅಧ್ಯಾಯ ೫ : ಕನ್ನಡ ಆದಿಪುರಾಣಗಳು : ಕರ್ತೃ, ಕೃತಿಪರಿಚಯ**


ಪಂಪ .... ೮೧
ಚಾಮುಂಡರಾಯ .... ೮೭
ಹಸ್ತಿಮಲ್ಲ .... ೯೨
ನಾಗರಾಜ .... ೯೬
ಶಾಂತಿಕೀರ್ತಿ .... ೯೮
ಬೊಮ್ಮಣ್ಣ .... ೧೦೦
ಟಿಪ್ಪಣಿಗಳು .... ೧೦೪


**ಅಧ್ಯಾಯ ೬ : ಕನ್ನಡ ಆದಿತೀರ್ಥಂಕರ ಚರಿತೆಗಳು : ತೌಲನಿಕ ಅಧ್ಯಯನ**


ಭಾಗ ೧ : ಭವಾವಳಿಗಳು .... ೧೦೯
ಜಯವರ್ಮ ಭವ .... ೧೧೦
ಮಹಾಬಲ ಭವ .... ೧೧೭
ಲಲಿತಾಂಗ ಭವ .... ೧೩೭
ವಜ್ರಜಂಘ ಭವ .... ೧೪೪
ವಜ್ರಜಂಘಾರ್ಯ ಭವ .... ೨೦೩
ಶ್ರೀಧರದೇವ ಭವ .... ೨೦೯
ಸುವಿಧಿ ಭವ .... ೨೧೬
ಅಚ್ಯುತೇಂದ್ರ ಭವ .... ೨೨೦
ವಜ್ರನಾಭಿ ಭವ .... ೨೨೩
ಅಹಮಿಂದ್ರದೇವ ಭವ .... ೨೩೦
ಭಾಗ ೨ : ಆದಿತೀರ್ಥಂಕರನ ವರ್ತಮಾನಭವದ ಚರಿತ್ರೆ—ಪಂಚಕಲ್ಯಾಣಗಳು
ಪೂರ್ವಪೀಠಿಕೆ-ಮನುಕುಲೋತ್ಪತ್ತಿ .... ೨೩೫
ಗರ್ಭಾವತರಣ ಕಲ್ಯಾಣ .... ೨೩೬

ಜನ್ಮಾಭಿಷೇಕ ಕಲ್ಯಾಣ .... ೨೪೮
ಕರ್ಮಭೂಮಿ ನಿಯೋಗ .... ೨೬೫
ಪರಿನಿಷ್ಕ್ರಮಣ ಕಲ್ಯಾಣ .... ೨೮೧
ಕಚ್ಛ-ಮಹಾಕಚ್ಛಾದಿಗಳ ದೀಕ್ಷೆ; ದ್ರವ್ಯಲಿಂಗಿಗಳ ವೃತ್ತಾಂತ;
ಆಹಾರದಾನ .... ೨೯೫
ಕೇವಲಜ್ಞಾನ ಕಲ್ಯಾಣ .... ೩೦೫
ಮೋಕ್ಷ ಕಲ್ಯಾಣ .... ೩೧೭

ಭಾಗ ೩ : ಭರತ-ಬಾಹುಬಲಿಗಳ ಚರಿತ್ರೆ

ಭರತ ಬಾಹುಬಲಿಗಳ ಚರಿತ್ರೆ .... ೩೨೧
ದಿಗ್ವಿಜಯಯಾತ್ರೆ .... ೩೨೨
ದಿಗ್ವಿಜಯ ಸಾಧನೆ .... ೩೨೭
ಭರತೇಶ್ವರನ ಗರ್ವಭಂಗ .... ೩೩೧
ಭರತ ಬಾಹುಬಲಿಗಳ ವ್ಯಾಯೋಗ .... ೩೩೭
ಭರತನ ವೈರಾಗ್ಯ, ಮುಕ್ತಿ .... ೩೫೯
ಟಿಪ್ಪಣಿಗಳು .... ೩೬೨

**ಅಧ್ಯಾಯ ೭ : ಕನ್ನಡ ಆದಿತೀರ್ಥಂಕರ ಚರಿತೆಗಳು : ಭಾಷೆ, ಶೈಲಿ, ಛಂದಸ್ಸು**

ಪಂಪನ ಆದಿಪುರಾಣ .... ೩೬೭
ಚಾಮುಂಡರಾಯನ ಮಹಾಪುರಾಣದ ಆದಿಪುರಾಣ .... ೩೮೪
ಹಸ್ತಿಮಲ್ಲನ ಪೂರ್ವಪುರಾಣ .... ೩೮೯
ನಾಗರಾಜನ ಪುಣ್ಯಾಸ್ರವದ ಆದೀಶ್ವರರ ಕಥೆ .... ೩೯೩
ಬೊಮ್ಮಣ್ಣನ ಆದಿಪರಮೇಶ್ವರನ ಯಕ್ಷಗಾನ .... ೪೦೨
ಟಿಪ್ಪಣಿಗಳು .... ೪೦೭

**ಅಧ್ಯಾಯ ೮ : ಕನ್ನಡ ಆದಿತೀರ್ಥಂಕರ ಚರಿತೆಗಳ ಒಟ್ಟು ನೋಟ :**

**ಉಪಸಂಹಾರ** .... ೪೧೦

ಗ್ರಂಥಋಣ .... ೪೩೩
ಜೈನಪಾರಿಭಾಷಿಕ ಶಬ್ದಸಂಗ್ರಹ .... ೪೪೦
ತಿದ್ದುಪಡಿ .... ೪೫೦

## ಅಧ್ಯಾಯ ೧

# ಜೈನಪುರಾಣಗಳು

### ಪುರಾಣ : ಅರ್ಥ ಮತ್ತು ವ್ಯಾಪ್ತಿ

ಜೈನಾಗಮ ಗ್ರಂಥಗಳಲ್ಲಿ 'ಷಟ್ಖಂಡಾಗಮ'ವು (ಸು. ಕ್ರಿ. ಶ. ೨ ನೆಯ ಶ.) ದಿಗಂಬರ ಜೈನಾಗಮ ಪರಂಪರೆಯ ಒಂದು ಅಮೂಲ್ಯವಾದ ಕೊಡುಗೆಯಾಗಿದೆ. ಧರಸೇನಾಚಾರ್ಯರ ಶಿಷ್ಯರಾಗಿದ್ದ ಭೂತಬಲಿ ಹಾಗೂ ಪುಷ್ಪದಂತರಿಂದ ರಚಿತವಾದ ಈ ಆಗಮಗ್ರಂಥವು ಅನೇಕ ಟೀಕಾಗ್ರಂಥಗಳಿಗೆ ಮೂಲಸ್ರೋತವಾಗಿದೆ. ಅವುಗಳಲ್ಲಿ ವೀರಸೇನಾಚಾರ್ಯರ ಧವಲಾಟೀಕೆಯೂ ಒಂದಾಗಿದೆ. ಈ ಗ್ರಂಥದ'ಸತ್ಪ್ರರೂಪಣಾ' ಭಾಗದಲ್ಲಿ ಪುರಾಣದ ವ್ಯಾಖ್ಯೆಗಳು ದೊರೆಯುತ್ತವೆ :

ಪಢಮಾಣಿಯೋಗೋ ಪಂಚ-ಸಹಸ್ಸ-ಪದೇಹಿ ಪುರಾಣಂ ವಣ್ಣೇದಿ | ಉತ್ತಂ ಚ-<br>ಬಾರಸವಿಹಂ ಪುರಾಣಂ ಜಂ ದಿಟ್ಠಂ ಜಿನವರೇಹಿ ಸವ್ವೇಹಿಂ |<br>ತಂ ಸವ್ವಂ ವಣ್ಣೇದಿ ಹು ಜಿಣವಂಸೇ ರಾಯವಂಸೇಯ ||

ಪಢಮೋ ಅರಹಂತಾಣಂ ವಿದಿಯೋ ಪುಣ ಚಕ್ಕವಟ್ಟಿ-ವಂಸೋ ದು |<br>ವಿಜ್ಜಹರಾಣ ತದಿಯೋ ಚಉತ್ಥಯೋ ವಾಸುದೇವಾಣಂ ||

ಚಾರಣ-ವಂಸೋ ತಹ ಪಂಚಮೋ ದು ಛಟ್ಠೋ ಯ ಪಣ್ಣ-ಸಮಣಾಣಂ |<br>ಸತ್ತಮಓ ಕುರುವಂಸೋ ಅಟ್ಠಮಓ ತಹ ಯ ಹರಿವಂಸೋ ||

ಣವಮೋ ಯ ಇಕ್ಕಯಾಣಂ ದಸಮೋ ವಿ ಯ ಕಾಸಿಯಾಣ ಬೋದ್ಧವೋ |<br>ವಾಯೀಣೇಕ್ಕಾರಸಮೋ ಬಾರಸಮೋ ಣಾಹ-ವಂಸೋ ದು ||

(ಛಕ್ಖಂಡಾಗಮ-ಜೀವಟ್ಠಾಣಂ, ೭೭-೮೦, ಪು. ೧೧೮)

'ದೃಷ್ಟಿವಾದ ಅಂಗದ ಪ್ರಥಮಾನಿಯೋಗಾರ್ಥಾಧಿಕಾರವು ಐದುಸಾವಿರ ಪದಗಳಿಂದ ಪುರಾಣಗಳನ್ನು ವರ್ಣಿಸುತ್ತದೆ. ಆದರಲ್ಲಿ ಹೀಗೆ ಹೇಳಿದೆ :

ಜಿನೇಂದ್ರದೇವರು ಜಗತ್ತಿನಲ್ಲಿ ಹನ್ನೆರಡು ಪ್ರಕಾರವಾದ ಪುರಾಣಗಳನ್ನು ಉಪದೇಶ ಮಾಡಿರುತ್ತಾರೆ. ಆದ್ದರಿಂದ ಆ ಸಮಸ್ತ ಪುರಾಣಗಳು ಜಿನವಂಶವನ್ನೂ ರಾಜವಂಶವನ್ನೂ ವರ್ಣನೆಮಾಡುತ್ತವೆ. ಮೊದಲನೆಯದು ಅರ್ಹಂತರ (ಎಂದರೆ ತೀರ್ಥಂಕರರ), ಎರಡನೆಯದು ಚಕ್ರವರ್ತಿಗಳ, ಮೂರನೆಯದು ವಿದ್ಯಾಧರರ, ನಾಲ್ಕನೆಯದು ನಾರಾಯಣ ಪ್ರತಿನಾರಾಯಣರ, ಐದನೆಯದು ನಾಲ್ಕು ಪ್ರಕಾರದ ಚಾರಣಮುನಿಗಳ, ಆರನೆಯದು ಪ್ರಜ್ಞಾಶ್ರಮಣರ ವಂಶವನ್ನು ಕುರಿತು ಹೇಳುತ್ತದೆ. ಇದೇ ಪ್ರಕಾರವಾಗಿ ಏಳನೆಯದು ಕುರುವಂಶವನ್ನೂ ಎಂಟನೆಯದು ಹರಿವಂಶವನ್ನೂ ಒಂಬತ್ತನೆಯದು ಇಕ್ಷ್ವಾಕುವಂಶವನ್ನೂ ಹತ್ತನೆಯದು ಕಾಶ್ಯಪವಂಶವನ್ನೂ ಹನ್ನೊಂದನೆಯದು ವಾದಿಗಳ ವಂಶವನ್ನೂ ಮತ್ತು ಹನ್ನೆರಡನೆಯದು ನಾಥವಂಶವನ್ನೂ ವರ್ಣಿಸುತ್ತದೆ' (ಛಕ್ಖಂಡಾಗಮ-ಜೀವಟ್ಠಾಣಂ, ಅನು : ಸುಬ್ಬಯ್ಯಶಾಸ್ತ್ರೀ).

ಪುರಾಣಗಳ ಪ್ರಕಾರದ ಬಗೆಗೆ ಸಂಕ್ಷಿಪ್ತವಾದರೂ ವಿಶೇಷವಾದ ಬೆಳಕನ್ನು ಇದು ಬೀರಿದೆ. ಪುರಾಣಗಳ ವ್ಯಾಪ್ತಿಯನ್ನು ಸಹ ಇದು ಸೂಚಿಸುತ್ತದೆ. ಜೈನಪುರಾಣಗಳ ಹರವನ್ನು ಸೂಚಿಸುವ ಪ್ರಥಮ ಉಲ್ಲೇಖವಾಗಿ ಇದು ಕಂಡುಬರುತ್ತದೆ.

ಜಿನಸೇನಾಚಾರ್ಯರು 'ಪುರಾಣ'ದ ವ್ಯುತ್ಪತ್ತಿಯನ್ನು 'ಪೂರ್ವಪುರಾಣ'ದಲ್ಲಿ ಹೀಗೆ ನೀಡಿದ್ದಾರೆ :

ಪುರಾತನಂ ಪುರಾಣಂ ಸ್ಯಾತ್ ತನ್ಮಹನ್ಮಹದಾಶ್ರಯಾತ್ |
ಮಹದ್ಭಿರುಪದಿಷ್ಟತ್ವಾನ್ಮಹಾಶ್ರೇಯೋನುಶಾಸನಾತ್ ||

ಕವಿಂ ಪುರಾಣಮಾಶ್ರಿತ್ಯ ಪ್ರಸೃತತ್ವಾತ್ಪುರಾಣತಾ |
ಮಹತ್ತ್ವಂ ಸ್ವಮಹಿಮ್ನೈವ ತಸ್ಯೇತ್ಯನ್ಯೈರ್ನಿರುಚ್ಯತೇ ||

ಮಹಾಪುರುಷಸಂಬಂಧಿ ಮಹಾಭ್ಯುದಯಶಾಸನಂ |
ಮಹಾಪುರಾಣಮಾಮ್ನಾತಮತ ಏತನ್ಮಹರ್ಷಿಭಿಃ ||

ಋಷಿಪ್ರಣೀತಮಾರ್ಷಂ ಸ್ಯಾತ್ಸೂಕ್ತಂ ಸೂನೃತಶಾಸನಾತ್ |
ಧರ್ಮಾನುಶಾಸನಾಚ್ಚೇದಂ ಧರ್ಮಶಾಸ್ತ್ರಮಿತಿಸ್ಮೃತಂ ||

ಇತಿಹಾಸ ಇತೀಷ್ಟಂ ತದಿತೀಹಾಸೀದಿತಿ ಶ್ರುತೇಃ |
ಇತಿವೃತ್ತಮಥೈತಿಹ್ಯಮಾಮ್ನಾಯಂ ಚಾ ಮನಂತಿ ತತ್ || (I. ೨೧-೨೫)

"ಪುರಾತನವಾದುದು ಪುರಾಣವೆನಿಸುವುದು ; ಆ ಪುರಾಣವು ತೀರ್ಥಂಕರರು ಮೊದಲಾದ ಮಹಾಪುರುಷರ ಸಂಬಂಧದಿಂದ ಮಹಾಪುರುಷರಿಂದುಪದೇಶಿತವಾದುದರಿಂದ ಮಹಾಶ್ರೇಯಸ್ಸನ್ನು ಪ್ರತಿಪಾದಿಸುವುದರಿಂದ ಮಹಾಪುರಾಣವೆನಿಸುವುದು. ಪುರಾತನ ಕವಿಯನ್ನಾಶ್ರಯಿಸಿ ಉಂಟಾಗಿರುವುದರಿಂದ ಪುರಾಣತ್ವ ಉಂಟಾಗುವುದು. ಈ ಪುರಾಣಕ್ಕೆ ಮಹತ್ವವು ತನ್ನ ಮಹಿಮೆಯಿಂದಲೇ ಎಂಬುದಾಗಿ ಬೇರೆಯವರು ಹೇಳುತ್ತಾರೆ. ಈ ಪುರಾಣವು ಮಹಾಪುರುಷಸಂಬಂಧಿಯೂ, ಮಹಾಭ್ಯುದಯಕ್ಕೆ ಕಾರಣವೂ ಆಗಿರುವುದರಿಂದ ಮಹರ್ಷಿಗಳು ಇದಕ್ಕೆ ಮಹಾಪುರಾಣವೆಂದು ಹೇಳುತ್ತಾರೆ. ಈ ಗ್ರಂಥವನ್ನು ಋಷಿಪ್ರಣೀತವಾಗಿರುವುದರಿಂದ 'ಆರ್ಷ'ವೆಂದೂ, ಸತ್ಯಾರ್ಥವನ್ನು ಹೇಳುವುದರಿಂದ 'ಸೂಕ್ತ'ವೆಂದೂ, ಧರ್ಮವನ್ನು ಹೇಳುವುದರಿಂದ 'ಧರ್ಮಶಾಸ್ತ್ರ'ವೆಂದೂ ಕರೆಯಲಾಗಿದೆ. ಇಲ್ಲಿ ಹೀಗಾಗಿದ್ದಿತು ಎಂಬ ಚರಿತ್ರೆಗಳನ್ನು ವರ್ಣನೆಮಾಡುವುದರಿಂದ ಈ ಪುರಾಣವನ್ನು 'ಇತಿಹಾಸ'ವೆಂದೂ 'ಇತಿವೃತ್ತ'ವೆಂದೂ 'ಐತಿಹ್ಯ'ವೆಂದೂ 'ಆಮ್ನಾಯ'ವೆಂದೂ ಹೇಳುತ್ತಾರೆ."

ಜಿನಸೇನಾಚಾರ್ಯರು ತಮ್ಮ ಈ ನಿರೂಪಣೆಯಲ್ಲಿ ಪುರಾತನ ವಸ್ತುವನ್ನೊಳಗೊಂಡದ್ದು ಹಾಗೂ ಪುರಾತನ ಕವಿಗಳಿಂದ ರಚಿತವಾದುದು ಪುರಾಣವೆನಿಸುತ್ತದೆ ಎಂದು ಹೇಳುವುದೇ ಅಲ್ಲದೆ, ಅದರ ಕರ್ತೃ ಹಾಗೂ ಅದು ಒಳಗೊಳ್ಳುವ ವಿಷಯದ ಮಹತ್ತಿನ ದೃಷ್ಟಿಯಿಂದ 'ಮಹಾಪುರಾಣ'ವೆಂದೂ ಅದು ಕರೆಸಿಕೊಳ್ಳುವುದೆನ್ನುತ್ತಾರೆ. ಅಲ್ಲದೆ ಪುರಾಣಕ್ಕೆ ಚಾರಿತ್ರಿಕ ಮಹತ್ವವನ್ನೂ ನೀಡಿದ್ದಾರೆ.

ಕೆಲವು ಶ್ವೇತಾಂಬರಾಗಮ ಗ್ರಂಥಗಳು ಪುರಾಣವನ್ನು ಹೀಗೆ ಅರ್ಥೈಸುತ್ತವೆ :

ಪುರಾಣವೆಂದರೆ ಪುರಾತನವಾದದ್ದು (ಸೂತ್ರಕೃತಾಂಗ); ಪುರಾತನ ವಸ್ತು ವಿಷಯ

ಗಳಿಗೆ ಕಾರಣವಾದದ್ದು (ಸ್ಥಾನಾಂಗ); ಪುರಾತನ ವಸ್ತುವಿನಂತೆ ಕವಿತ್ವದಿಂದ ನಿಬದ್ಧವಾದ, ಕಥಾಪ್ರಧಾನವಾದ ಗ್ರಂಥಗಳಲ್ಲಿ ನಾಲ್ಕು ವೇದಗಳು, ಆರು ವೇದಾಂಗಗಳು, ಮೀಮಾಂಸ, ನ್ಯಾಯಶಾಸ್ತ್ರ, ಧರ್ಮಶಾಸ್ತ್ರ ಮತ್ತು ಪುರಾಣ ಈ ರೀತಿಯಲ್ಲಿ ಹದಿನಾಲ್ಕು ವಿದ್ಯೆಗಳು ನಿರೂಪಿತವಾಗಿವೆ (ಆವಶ್ಯಕ ಅಧ್ಯಯನ)[೧].

ಈ ಮೇಲಿನ ಮಾತುಗಳಿಂದ ಪುರಾಣಗಳಲ್ಲಿ ಕಂಡುಬರುವ ಮುಖ್ಯಾಂಶಗಳನ್ನು ಹೀಗೆ ಗುರುತಿಸಬಹುದಾಗಿದೆ.

ಪುರಾಣವು ಪುರಾತನವಾದುದು; ಕವಿವಿರಚಿತವಾಗಿ ಕಥಾ ಪ್ರಧಾನವಾದುದು.

## ಜೈನೇತರ ಸಾಹಿತ್ಯದಲ್ಲಿ 'ಪುರಾಣ'ದ ಉಲ್ಲೇಖ, ವ್ಯುತ್ಪತ್ತಿ, ಬೆಳೆವಣಿಗೆ, ಮಹತ್ತ್ವ

ಪಾಣಿನಿಯ ಸೂತ್ರಗಳಲ್ಲಿ ಪುರಾಣವನ್ನು ಕುರಿತಂತೆ ದೊರಕುವ ವ್ಯುತ್ಪತ್ತಿ ವಿವರಗಳು ಹೀಗಿವೆ : 'ಪುರಾ ಭವಮ್', 'ಪುರಾಪಿ ನವಃ ಪುರಾಣಮ್', ಈ ಮಾತುಗಳು ಸಹ ಹಿಂದೆ ಸೂಚಿಸಿರುವ ಹಾಗೆಯೇ ಪುರಾತನತೆಯನ್ನೂ, ಚಿರಂತನತೆಯನ್ನೂ ಸಾರುತ್ತವೆ. ದೇವರಿಗೆ, ಋಷಿಗಳಿಗೆ, ರಾಜರುಗಳಿಗೆ, ರಾಜವಂಶ ಮೊದಲಾದುವುಗಳಿಗೆ ಸಂಬಂಧಿಸಿದಂತೆ ಹಿಂದಿನಿಂದಲೂ ರಕ್ಷಿಸಿಕೊಂಡು ಬಂದ ಕಥೆಗಳು, ವಿಷಯಗಳು ಪುರಾಣವಸ್ತುಗಳಾದುದರಿಂದ ಪುರಾಣವು 'ಪುರಾ ಭವಮ್' ಎನಿಸುತ್ತದೆ. ಮಾನವನ ಬಾಳಿನಲ್ಲಿ ಸೂತ್ರಬದ್ಧವಾಗಿ ಬರುವ ಸಾರ್ವಕಾಲಿಕ ಧರ್ಮ, ನೀತಿ ನಿಯಮಗಳು ಇರುತ್ತವೆ. ಇವು ಪರಂಪರಾನುಗತವಾಗಿ ಬಂದ ನೀತಿ ನಿಯಮಗಳಾದರೂ ನಿತ್ಯನೂತನವಾಗಿಯೇ ಉಳಿಯುವುದರಿಂದ 'ಪುರಾಪಿ ನವಃ' ಎನಿಸುತ್ತದೆ. ಸಂಸ್ಕೃತದ ಶ್ರೇಷ್ಠ ಪಂಡಿತರಾದ ರಾಘವಾಚಾರ್ಯರು ಪುರಾಣವನ್ನು 'ಪುರಾನವಂ' ಎಂದು ಅರ್ಥೈಸಿದ್ದಾರೆ. 'ಪುರಾ' ಎಂದರೆ ಪುರಾತನವಾದದ್ದು, 'ನವಂ' ಎಂದರೆ ನವೀನವಾದದ್ದು.[೨] ಪುರಾಣಗಳು ಕಳೆದುಹೋದ ಮತ್ತು ಮುಂದೆ ಬರುವ ಕಾಲಗಳ ವಿಷಯಗಳನ್ನು ತೋರಿಸುತ್ತವೆ ಎಂಬ ಅರ್ಥವನ್ನು ಇನ್ನೊಂದು ವ್ಯುತ್ಪತ್ತಿಯು ನೀಡುತ್ತದೆ.[೩] ಪುರಾಣದ ವ್ಯುತ್ಪತ್ತಿಯನ್ನು ಕುರಿತು ವಾಯು ಪುರಾಣದಲ್ಲಿ 'ಪ್ರಾಚೀನ ಕಾಲದಿಂದಲೂ ಇರುವುದು' (ಯಸ್ಮಾತ್ಪುರಾಹ್ಯನತೀದಂ ಪುರಾಣಂ, I-೨೦೩) ಎಂದೂ, ಮತ್ಸ್ಯ ಪುರಾಣದಲ್ಲಿ 'ಪ್ರಾಚೀನ ಘಟನೆಗಳ ದಾಖಲೆಗಳನ್ನು ಹೊಂದಿರುವುದು' (ಪುರಾತನಸ್ಯ ಕಲ್ಪಸ್ಯ ಪುರಾಣಾನಿ)—ಎಂದೂ ಹೇಳಲಾಗಿದೆ.

ಆ ಕಾಲದ ಜೀವನದ ವಿವಿಧ ಮುಖಗಳ ಮೇಲೆ ಬೆಳಕನ್ನು ಚೆಲ್ಲುವುದರಿಂದ ಮಹಾಕಾವ್ಯಗಳು ಮತ್ತು ಪುರಾಣಗಳು ಭಾರತದ ಸಾಂಸ್ಕೃತಿಕ ಇತಿಹಾಸದ ಆಕರಗಳಾಗಿವೆ. ಪುರಾಣಗಳು ಧರ್ಮ ಮತ್ತು ತತ್ತ್ವ, ಜಾನಪದ ಮತ್ತು ನೀತಿಶಾಸ್ತ್ರ, ಸಾಹಿತ್ಯ ಮತ್ತು ವಿಜ್ಞಾನ, ಇತಿಹಾಸ ಮತ್ತು ಭೂಗೋಳ, ರಾಜಕೀಯ ಮತ್ತು ಸಮಾಜಶಾಸ್ತ್ರ ಹೀಗೆ ಹಲವಾರು ವೈವಿಧ್ಯಪೂರ್ಣ ಅಮೂಲ್ಯ ವಿಷಯಗಳನ್ನು ವಿಮರ್ಶಾತ್ಮಕ ಅಧ್ಯಯನಕ್ಕೆ ಒದಗಿಸುತ್ತವೆ.[೪] ವಿಶ್ವಸೃಷ್ಟಿಯ, ದೇವಾಧಿದೇವತೆಗಳ ಮತ್ತು ವೀರಪುರುಷರ ಬಗೆಗಿರುವ ಹೇರಳವಾದ ಐತಿಹ್ಯಗಳ ಮುಖಾಂತರ ಭಾರತೀಯರು ತಮ್ಮ ನಂಬುಗೆ, ಆದರ್ಶ ಮತ್ತು ಸಂಪ್ರದಾಯಗಳಿಗೆ ಜಗತ್ತಿನ ಯಾವುದೇ ಜನಾಂಗದವರಿಗಿಂತಲೂ ತುಂಬು ಅಭಿವ್ಯಕ್ತಿ

ಯನ್ನು ಚೆನ್ನಾಗಿ ನೀಡಿದ್ದಾರೆ.[೫] ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಮತ್ತು ರಾಜಕೀಯ ವಿಷಯವನ್ನೊಳಗೊಂಡ ಭಾರತೀಯ ಚಿಂತನೆಯ ಬೃಹದಂಶಕ್ಕೆ ಪುರಾಣಗಳು ಆಧಾರವಾಗಿವೆ.[೬]

ಪುರಾಣಗಳನ್ನು ಕುರಿತ ಮೇಲಿನ ಅನೇಕ ಹೇಳಿಕೆಗಳು ಪುರಾಣದ ವಿಷಯ ವೈಶಾಲ್ಯವನ್ನು ಸೂಚಿಸುತ್ತವೆ. ಆದ್ದರಿಂದ ಪುರಾಣದ ಖಚಿತ ಸ್ವರೂಪನಿರೂಪಣೆ ಕಷ್ಟ. ಒಟ್ಟಿನಲ್ಲಿ ಪುರಾಣಗಳು ಪ್ರಾಚೀನಕಾಲಕ್ಕೆ ಸಂಬಂಧಿಸಿದವೂ ಮುಂದಿನ ಕಾಲಗಳಿಗೆ ಸಹ ಅನ್ವಯಿಸತಕ್ಕವು ಎಂದೂ ಜೀವನದ ವೈವಿಧ್ಯಪೂರ್ಣ ವಿಷಯಗಳ ಸಂಗ್ರಹವನ್ನೊಳಗೊಂಡವೆಂದೂ ಪರಿಗಣಿಸಬಹುದಾಗಿದೆ.

ವೇದ, ಆಗಮಗಳಂತೆ ಪುರಾಣಗಳೂ ಭಾರತೀಯರಿಗೆ ಪೂಜನೀಯ. ಮಹಾಭಾರತ ಮತ್ತು ಪುರಾಣಗಳನ್ನು ಐದನೆಯ ವೇದವೆಂದು ಪರಿಗಣಿಸಲಾಗಿದೆ.[೭] ಬ್ರಾಹ್ಮಣ ಗ್ರಂಥಗಳಲ್ಲಿ ಉಪನಿಷತ್ತುಗಳಲ್ಲಿ ಹಾಗೂ ಪ್ರಾಚೀನ ಸಾಹಿತ್ಯದಲ್ಲಿ ಪುರಾಣ ಶಬ್ದವು 'ಇತಿಹಾಸ'ದ ಜೊತೆಜೊತೆಗೆ ಬಳಕೆಯಾಗಿದೆ. ಅಥರ್ವ ವೇದದಲ್ಲಿ 'ಪುರಾಣ' ಶಬ್ದವು ಸೃಷ್ಟಿ ಮೀಮಾಂಸೆಯ ಅರ್ಥದಲ್ಲಿ ಬಂದಿದೆ. ಮಹಾಭಾರತದಲ್ಲಿ ಇದನ್ನು ಆಖ್ಯಾನವೆಂದು ಕರೆಯಲಾಗಿದೆ.[೮]

ಮೊತ್ತಮೊದಲು ಪುರಾಣಗಳು ಯಾವಾಗ ಅಸ್ತಿತ್ತ್ವವನ್ನು ಪಡೆದವೆಂಬುದನ್ನು ಹೇಳುವುದು ಕಷ್ಟ. ವೇದಪೂರ್ವಕಾಲದಲ್ಲಿ ಪುರಾಣಗಳು ಹಿಂದಿನಿಂದಲೂ ಬಂದ ದಂತ ಕಥಾಗಾಥೆಯ ರೂಪದಲ್ಲಿದ್ದುವೆಂದೂ ಕಾಲಕ್ರಮೇಣ ಅವು ಇಂದಿನ ಪುರಾಣಗಳ ಸ್ವರೂಪಕ್ಕೆ ಬಂದುವೆಂದೂ ಹಲವು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.[೯] ಕ್ರಿ. ಪೂ. ೬ನೆಯ ಶತಮಾನದಿಂದ ಕ್ರಿ. ಶ. ೪ನೆಯ ಶತಮಾನದವರೆಗಿನ ವಿಶಾಲಾವಧಿಯನ್ನು ಇವುಗಳ ಬೆಳವಣಿಗೆಯ ಕಾಲವೆಂದು ಅಂಗೀಕರಿಸಲಾಗಿದೆ. ಅಲ್ಲದೆ ಕ್ರಿ. ಶ. ೭೦೦ರ ಮೊದಲಿಗೆ ಇವುಗಳ ಸಂಪಾದನಾ ಕಾರ್ಯವು ಮುಗಿದಿದೆಯೆಂದು ಊಹಿಸಬಹುದಾಗಿದೆ.[೧೦]

ಮನುಷ್ಯರಿಗೂ ದೇವತೆಗಳಿಗೂ ಸಂಬಂಧಪಟ್ಟ ಕಥಾದಿಗಳು ವೇದದ ಕಾಲದಲ್ಲೇ ಪ್ರಾರಂಭವಾಗಿ ಆಖ್ಯಾನ, ಇತಿಹಾಸ, ಪುರಾಣಗಳೆನಿಸಿಕೊಂಡಿದ್ದವೆಂಬುದನ್ನು ಇಲ್ಲಿ ಗಮನಿಸಬಹುದು. ವೇದದಲ್ಲಿ ಅಂತಹ ರಚನೆಗಳು ಕಂಡುಬಂದರೂ ಅವು ಬಹುಮಟ್ಟಿಗೆ ವಿಹಿತಕರ್ಮ ವಿಚಾರಗಳ ಜೊತೆಯಲ್ಲಿ ಪ್ರಾಸಂಗಿಕವಾಗಿ ಬರುತ್ತವೆ. ಆಖ್ಯಾನ, ಇತಿಹಾಸ, ಪುರಾಣಗಳೂ ಕಥನವಾಗಿ, ದೇವತಾ ಕಥೆಯಾಗಿ, ಪ್ರಸಿದ್ಧ ವ್ಯಕ್ತಿ ಕಥೆಯಾಗಿ ಬ್ರಾಹ್ಮಣಗಳ 'ಅರ್ಥವಾದ'ಗಳಲ್ಲಿ ನಿರೂಪಿತವಾಗಿವೆ. ಕ್ರಮೇಣ ಅವುಗಳಲ್ಲಿ ಯಾವುದಾದರೂ ವಸ್ತು ಇತ್ಯಾದಿಗಳ ಸೃಷ್ಟಿ ಮುಂತಾದುವನ್ನು ಕುರಿತ ಕಥನ ಮೊದಮೊದಲು 'ಪುರಾಣ'ವೆಂದು ಕರೆಯಲ್ಪಟ್ಟು ಬ್ರಾಹ್ಮಣಗಳಲ್ಲಿನ ಸೃಷ್ಟಿಕಥನಗಳಿಗೂ ಆ ಹೆಸರು ಬಂದಿರುವುದನ್ನು ಕಾಣಬಹುದು. ಇತಿಹಾಸ ಆಖ್ಯಾನಗಳಾದರೋ ಸಾಮಾನ್ಯವಾಗಿ ದೇವತೆಗಳ ಅಥವಾ ಪ್ರಸಿದ್ಧ ವ್ಯಕ್ತಿಗಳ ಕಥೆಯಾಗಿ ಗೋಚರವಾಗುತ್ತವೆ. ಅಲ್ಲದೆ ವೀರರ ಪ್ರಶಂಸೆಯ ರೂಪದ'ಗಾಥಾ-ನಾರಾಶಂಸಿ'ಗಳೆಂಬ ರಚನೆಗಳೂ ಆ ಇತಿಹಾಸ ಪುರಾಣಗಳ ಜೊತೆಯಲ್ಲೇ ಬ್ರಾಹ್ಮಣಗಳಲ್ಲಿ ಕಂಡುಬಂದಿವೆ. ಋಗ್ವೇದದ 'ದಾನಸ್ತುತಿ'ಗಳೂ ಅಥರ್ವ ವೇದದ 'ಕುಂತಾಪ ಸೂಕ್ತ'ಗಳೂ ಅಂತಹ ಪ್ರಶಂಸೆಗಳನ್ನೊಳಗೊಂಡಿರುವುದನ್ನೂ

ಗಮನಿಸಿ, ಮೇಲೆ ಹೇಳಿರುವ ಗಾಥಗಳು ಅವುಗಳೊಡನೆ ಸಂಬಂಧ ಹೊಂದಿವೆಯೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಅಂಥ ಗಾಥಗಳು ವೀರಪುರುಷ ಕಥಾತ್ಮಕ ರಚನೆಗಳಾಗಿ, ರಚನಾಚಕ್ರಗಳಾಗಿ ಅಸ್ತಿತ್ವಕ್ಕೆ ಬಂದು, ಮುಂದೆ ಇತಿಹಾಸ ಪುರಾಣಗಳೆಂದು ಕರೆಯಲ್ಪಟ್ಟಿರುವ ಮಹಾಭಾರತಾದಿಗಳ ಪೂರ್ವಗಾಮಿಗಳಾಗಿದ್ದುವೆಂದು ಅವರ ಮತ.[೧೧] ಅಲ್ಲದೆ, ಮೊದಮೊದಲು ಸಾಮಾನ್ಯವಾಗಿ ಸೃಷ್ಟಿ ಕಥನಗಳಿಗನ್ವಯಿಸುತ್ತಿದ್ದ 'ಪುರಾಣ' ಎಂಬ ಹೆಸರು ಕ್ರಮೇಣ ವಿಶಿಷ್ಟ ರೂಪದ ಗ್ರಂಥಗಳನ್ನು ಕುರಿತದ್ದಾಗಿ ಬಳಕೆಗೆ ಬಂದಿತೆಂಬ ಅಭಿಪ್ರಾಯವನ್ನು ಇಲ್ಲಿ ಸಂದರ್ಭೋಚಿತವಾಗಿ ಗಮನಿಸಬಹುದು. ಹೀಗೆ 'ಇತಿಹಾಸ'ವು ವೀರಪುರುಷರ ಜೀವನಚರಿತ್ರೆಯನ್ನು ಒಂದು ಮೂಲಭೂತವಾದ ಸ್ವಾರಸ್ಯಮಯ ಕಥಾರೂಪದಲ್ಲಿ ಹೇಳುವ ರಚನೆಯಾಗಿಯೂ, 'ಪುರಾಣ'ವು ಅಂತಹ ಮೂಲ ಕಥೆಗಳನ್ನೊಳಗೊಳ್ಳದೆ ಪಂಚಲಕ್ಷಣಗಳಿಂದ ಹಾಗೂ ವಿಭಿನ್ನ ಕಥನಗಳಿಂದ ಕೂಡಿದ ರಚನೆಯಾಗಿಯೂ ಕಂಡುಬರುತ್ತದೆ.[೧೨]

ವೈದಿಕ ಪುರಾಣಗಳು ಒಂದೊಂದೂ ಬೇರೆಬೇರೆ ಕಾಲದಲ್ಲಿ, ಬೇರೆ ಬೇರೆ ವ್ಯಕ್ತಿಗಳಿಂದ ರಚಿಸಲ್ಪಟ್ಟ ಭಾಗಗಳ ಸಂಕಲನಗಳಾಗಿವೆ. ಹದಿನೆಂಟು ಮಹಾಪುರಾಣಗಳೂ ಮತ್ತು ಹದಿನೆಂಟು ಉಪಪುರಾಣಗಳೂ ಇವೆಯೆಂದು ಸಾಂಪ್ರದಾಯಿಕ ದೃಷ್ಟಿಯಿಂದ ಪರಿಗಣಿಸಲಾಗಿದೆ. ಒಂದೆರಡು ವ್ಯತ್ಯಾಸಗಳನ್ನು ಬಿಟ್ಟರೆ, ಈ ಪಟ್ಟಿ ಸಾಮಾನ್ಯವಾಗಿ ಎಲ್ಲಾ ಮಹಾಪುರಾಣಗಳಲ್ಲಿಯೂ ದೊರೆಯುತ್ತದೆ. ಬ್ರಹ್ಮ, ಪದ್ಮ, ವಿಷ್ಣು, ವಾಯು, ಭಾಗವತ, ನಾರದೀಯ, ಮಾರ್ಕಂಡೇಯ, ಅಗ್ನಿ, ಭವಿಷ್ಯ, ಬ್ರಹ್ಮವೈವರ್ತ, ವರಾಹ, ಲಿಂಗ, ಸ್ಕಾಂದ, ವಾಮನ, ಕೂರ್ಮ, ಮತ್ಸ್ಯ, ಗರುಡ ಮತ್ತು ಬ್ರಹ್ಮಾಂಡ ಪುರಾಣಗಳನ್ನು ಮಹಾಪುರಾಣಗಳೆಂದು ಪರಿಗಣಿಸಲಾಗಿದೆ (ಕೆಲವು ಪುರಾಣಗಳು ವಾಯುಪುರಾಣದ ಸ್ಥಾನದಲ್ಲಿ ಶಿವಪುರಾಣವನ್ನು ಪರಿಗಣಿಸುತ್ತವೆ. ವೈಷ್ಣವ ಭಾಗವತದ ಸ್ಥಾನದಲ್ಲಿ ದೇವೀ ಭಾಗವತವನ್ನು ಪರಿಗಣಿಸುತ್ತವೆ).

ವೇಟ್ಟಂ ಮಣಿಯವರು ಪುರಾಣಗಳನ್ನು ಮೂರು ವಿಭಾಗಗಳಲ್ಲಿ ವಿಂಗಡಿಸಿದ್ದಾರೆ :

ವಿಷ್ಣುವಿಗೆ ಸಂಬಂಧಿಸಿದ ಪುರಾಣಗಳು : ವಿಷ್ಣು, ಭಾಗವತ, ನಾರದೀಯ, ಗರುಡ, ಪದ್ಮ, ವರಾಹ.

ಬ್ರಹ್ಮನನ್ನು ಕುರಿತ ಪುರಾಣಗಳು : ಬ್ರಹ್ಮ, ಬ್ರಹ್ಮಾಂಡ, ಮಾರ್ಕಂಡೇಯ, ಭವಿಷ್ಯ, ವಾಮನ.

ಶಿವನನ್ನು ಕುರಿತ ಪುರಾಣಗಳು : ವಾಯು, ಲಿಂಗ, ಸ್ಕಾಂದ, ಅಗ್ನಿ, ಮತ್ಸ್ಯ, ಕೂರ್ಮ.[೧೩]

ಮಹಾಪುರಾಣಗಳೊಂದಿಗೆ ಹೋಲಿಸಿದರೆ ಉಪಪುರಾಣಗಳು ಸಂಗ್ರಹರೂಪದಲ್ಲಿದ್ದು ಅವುಗಳ ನಂತರ ಮೂಡಿಬಂದವು. ಉಪಪುರಾಣಗಳ ಪಟ್ಟಿಯು ನಾನಾ ಪುರಾಣಗಳಲ್ಲಿ ದೊರೆಯುತ್ತದೆ. ಸನತ್ಕುಮಾರ, ನಾರಸಿಂಹ, ಸ್ಕಾಂದ, ಶಿವಧರ್ಮ, ದುರ್ವಾಸಸ್, ನಾರದೀಯ, ಕಾಪಿಲ, ವಾಮನ, ಉಷನಸ್, ಬ್ರಹ್ಮಾಂಡ, ವಾರುಣ, ಕಾಲಿಕಾ, ಮಾಹೇಶ್ವರ, ಸಾಂಬ, ಸೌರ, ಪರಾಶರ, ಮರೀಚ ಮತ್ತು ಭಾರ್ಗವ. ಈ ಪಟ್ಟಿಯಲ್ಲಿ ವ್ಯತ್ಯಾಸಗಳು ಉಂಟು.

ವೈದಿಕ ಗ್ರಂಥಗಳ ನಂತರ ಹಿಂದೂ ಧರ್ಮದ ಪ್ರಭಾವವನ್ನು ಹೆಚ್ಚಿಸಿದ ಗ್ರಂಥಗಳಲ್ಲಿ

ಪುರಾಣಗಳಿಗೆ ಮಹತ್ತ್ವದ ಸ್ಥಾನ ದೊರೆಯುತ್ತದೆ. ಪ್ರಾಚೀನತೆಯ ದೃಷ್ಟಿಯಲ್ಲಂತೂ ಪುರಾಣಗಳ ಕಥೆಗಳು ವೈದಿಕ ಕಾಲದ ಕಥೆ ಹಾಗೂ ಉಪಕಥೆಗಳಿಂದಲೇ ಮೂಡಿಬಂದಿವೆ. ವೇದಮಂತ್ರಗಳಲ್ಲಿ ಹಾಗೂ ಬ್ರಾಹ್ಮಣಗ್ರಂಥಗಳಲ್ಲಿ ಬಂದಿರುವ ಉಪಾಖ್ಯಾನಗಳು ಇಲ್ಲಿ ಅಲ್ಪ ಪರಿವರ್ತಿತ ಹಾಗೂ ಪರಿವರ್ಧಿತ ರೂಪದಲ್ಲಿ ಕಾಣುತ್ತವೆ.[೧೪]

## ಪುರಾಣ ಲಕ್ಷಣ : ವೈದಿಕ ಜೈನ ಪುರಾಣಲಕ್ಷಣಗಳಲ್ಲಿಯ ಸಾದೃಶ್ಯ ವೈದೃಶ್ಯಗಳು

ಪುರಾಣ ಲಕ್ಷಣಗಳನ್ನು ಕುರಿತು ಅಮರಸಿಂಹ (ಕ್ರಿ. ಶ. ೫ನೆಯ ಶತಮಾನ) ಹೀಗೆ ನಿರೂಪಿಸಿದ್ದಾನೆ.

ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ |
ವಂಶಾನುಚರಿತಂ ಚಾಪಿ ಪುರಾಣಂ ಪಂಚ ಲಕ್ಷಣಂ ||

ಸರ್ಗವೆಂದರೆ ಜಗತ್ತಿನ ಮೂಲ, ಸೃಷ್ಟಿ. ಹಿರಣ್ಯಗರ್ಭ ಆದಿಮಾಯೆಯರು ತ್ರಿಮೂರ್ತಿಗಳನ್ನೂ ಅವರ ಪತ್ನಿಯರನ್ನೂ ಸೃಷ್ಟಿಸುವ ವಿಚಾರ ಇಲ್ಲಿ ಬರುತ್ತದೆ. ಪ್ರತಿಸರ್ಗವೆಂದರೆ ಪುನಃ ಸೃಷ್ಟಿ, ಬ್ರಹ್ಮನಿಂದಾದ ಜಗತ್ ಸೃಷ್ಟಿ. ಸ್ವಾಯಂಭುವ ಮನು—ಶತರೂಪೆ ಇವರ ಮೂಲಕ ಮುನ್ನಡೆದ ಮಾನವ ಸೃಷ್ಟಿ. ವಂಶವೆಂದರೆ ಪ್ರಾಚೀನಕಾಲದಿಂದ ಬಂದ ದೇವತೆಗಳು, ಋಷಿಗಳು, ಮಾನವರು—ಇವರ ಪೀಳಿಗೆಗಳು. ಮನ್ವಂತರವೆಂದರೆ ಮನುಗಳ ಕಾಲ. ಪ್ರತಿ ಹದಿನಾಲ್ಕು ಮಂದಿ ಮನುಗಳ ಕಾಲಾವಧಿಗೆ ಕಲ್ಪವೆನ್ನುವರು. ಪ್ರತಿಯೊಂದು ಕಲ್ಪದಲ್ಲಿಯೂ ಹದಿನಾಲ್ಕು ಮನುಗಳು ಬರುವರು. ವಂಶಾನುಚರಿತವೆಂದರೆ ಬೇರೆ ಬೇರೆ ವಂಶಗಳಲ್ಲಿ ಬಂದ ರಾಜಾಧಿರಾಜರುಗಳ ಚರಿತ್ರೆ.

ಇತಿಹಾಸವನ್ನೂ ಸಹ ಪುರಾಣದ ಒಂದು ಭೇದವೆಂದು ರಾಜಶೇಖರ ಪರಿಗಣಿಸಿದ್ದಾನೆ. ಅಲ್ಲದೆ ಪುರಾಣ ಲಕ್ಷಣವನ್ನು ಹೀಗೆ ನಿರೂಪಿಸಿದ್ದಾನೆ :

ಸರ್ಗಃ ಪ್ರತಿಸಂಹಾರಃ ಕಲ್ಪೋ ಮನ್ವಂತರಾಣಿ ವಂಶವಿಧಿಃ |
ಜಗತೋ ಯತ್ರ ನಿಬದ್ಧಂ ತದ್ವಿಜ್ಞೇಯಂ ಪುರಾಣಮಿತಿ ||[೧೫]

ವ್ಯಾಪಕ ಸೃಷ್ಟಿ, ಅವಾಂತರ ಸೃಷ್ಟಿ, ಪ್ರಳಯ, ಮನ್ವಂತರ ಮತ್ತು ವಂಶವರ್ಣನ—ಇವು ಪುರಾಣದಲ್ಲಿ ಇರುವ ಮುಖ್ಯ ವಿಷಯಗಳು.

ಈಗಿರುವ ಯಾವ ಪುರಾಣಗಳೂ ಪಂಚಲಕ್ಷಣಗಳಿಗೆ ಸಂಪೂರ್ಣವಾಗಿ ಹೊಂದಿಕೊಳ್ಳುವುದಿಲ್ಲ. ಕೆಲವು ಈ ವಿವರಣೆಗಿಂತಲೂ ಹೆಚ್ಚು ಅಂಶಗಳನ್ನು ಹೊಂದಿವೆ. ಇನ್ನು ಕೆಲವು ಅಲ್ಪಮಾತ್ರವಾಗಿ ಈ ಲಕ್ಷಣಗಳನ್ನು ನಿರೂಪಿಸುವಂತೆ ತೋರಿ, ಬೇರೆ ವಿಷಯಗಳನ್ನು ಪ್ರತಿಪಾದಿಸುತ್ತವೆ. ಆದ್ದರಿಂದ ಪಂಚಲಕ್ಷಣಗಳು ಪುರಾಣಗಳಲ್ಲಿ ಅಂಶಿಕವಾಗಿ ತೋರುತ್ತವೆಯೇ ಹೊರತು ಪರಿಪೂರ್ಣವಾಗಲ್ಲ. ಧಾರ್ಮಿಕ ಮಾರ್ಗದರ್ಶನವೇ ಪುರಾಣಗಳ ಮುಖ್ಯ ಗುರಿಗಳಲ್ಲಿ ಒಂದಾಗಿರಲಿಲ್ಲ ; ಅಥವಾ ಅವುಗಳು ಮೂಲತಃ ಜಾತಿಪದ್ಧತಿಯ ನಿರೂಪಣೆಗಾಗಿ ರಚಿತವಾದವುಗಳೂ ಆಗಿರಲಿಲ್ಲ. ಇವುಗಳೊಂದಿಗೆ ಮುಂದೆ ಸೇರ್ಪಡೆಗೊಂಡ ದಾನ, ವ್ರತ, ತೀರ್ಥ, ಶ್ರಾದ್ಧ ಮೊದಲಾದವು ಪುರಾಣ ವಿಷಯದ

ಹರವುಗಳಾದವು. ಇವುಗಳು ಪಂಚಲಕ್ಷಣದೊಳಗೆ ಕಂಡುಬಾರದೇ ಇರುವುದರಿಂದ ಪಂಚಲಕ್ಷಣಗಳ ನಿರೂಪಣೆ ಕೇವಲ ಲಕ್ಷಣದೃಷ್ಟಿಯಿಂದ ಮಾತ್ರವೇ ಹೊರತು ಸತ್ಯಾಂಶ ದಿಂದ ಕೂಡಿಲ್ಲ. ಈ ಒಂದು ದೂಷಣೆಯಿಂದ ತಪ್ಪಿಸಿಕೊಳ್ಳಲು ಪಂಚ ಲಕ್ಷಣಗಳನ್ನು ಉಪಪುರಾಣಗಳಿಗೆ ಆರೋಪಿಸಿ, ದಶಲಕ್ಷಣಗಳನ್ನು ಮಹಾಪುರಾಣಗಳಿಗೆ ಹೇಳಿದರು. ಅವುಗಳಲ್ಲಿ ಕಂಡುಬರುವ ಹೆಚ್ಚಿನ ಲಕ್ಷಣಗಳಿವು : ವೃತ್ತಿ (ಜೀವನಾಧಾರ ಮಾರ್ಗ), ರಕ್ಷಾ (ಭಗವದವತಾರ), ಮುಕ್ತಿ (ಅಂತಿಮ ಬಿಡುಗಡೆ), ಹೇತು (ಜೀವ) ಮತ್ತು ಬ್ರಹ್ಮನ್[೧೬].

ಈ ಲಕ್ಷಣ ಸಹ ಪುರಾಣಗಳ ಸ್ವರೂಪವನ್ನು ಪರಿಪೂರ್ಣಗೊಳಿಸಲಾರದು. ಹತ್ತು ಲಕ್ಷಣಗಳ ಜೊತೆಗೆ ಪುರಾಣಗಳು ಬ್ರಹ್ಮ, ವಿಷ್ಣು, ಸೂರ್ಯ ಮತ್ತು ರುದ್ರರ ಮಾಹಾತ್ಮ್ಯೆಯನ್ನೂ ಪ್ರಪಂಚದ ಲಯ ಮತ್ತು ರಕ್ಷಣೆಯನ್ನೂ, ಧರ್ಮ,ಅರ್ಥ, ಕಾಮ ಮತ್ತು ಮೋಕ್ಷವನ್ನೂ ಕುರಿತು ಹೇಳುತ್ತವೆ.[೧೭] ಈ ವ್ಯಾಪಕ ಲಕ್ಷಣವೂ ಸಹ ಪುರಾಣಗಳ ಸ್ವರೂಪವನ್ನು ಪರಿಪೂರ್ಣಗೊಳಿಸಲಾರದು. ಪುರಾಣದ ಒಂದು ಖಚಿತ ಲಕ್ಷಣವೆಂದರೆ ಅದು ಪುರಾತನವಾಗಿರಬೇಕಾದುದು. ಹರಿಪ್ರಸಾದ ಶಾಸ್ತ್ರಿಯವರು 'ಪ್ರಾಚೀನವಾದ ಯಾವುದಾದರೂ ಪುರಾಣದ ವಿಷಯವಾಗಬಹುದು.....ಮತ್ತು ಅದು ಜೀವನದ ಎಲ್ಲ ಕ್ಷೇತ್ರವನ್ನೂ ವ್ಯಾಪಿಸಿರುತ್ತದೆ' ಎಂದು ಹೇಳಿರುವುದು ಸರ್ವ ಸಂಗ್ರಾಹಕ ಲಕ್ಷಣವೆನ್ನಬಹುದಾಗಿದೆ. 'ಅತ್ಯಂತ ಸಂಕೀರ್ಣ ಸಾಂಸ್ಕೃತಿಕ ಸಂಗತಿ ಪುರಾಣ. ಹೊಸ ಆಯಾಮಗಳನ್ನು ಒಳಗೊಳ್ಳುತ್ತ ವಿಕಸನಶೀಲವಾದದ್ದು. ಆದ್ದರಿಂದ ಸೂತ್ರಬದ್ಧವಾದ ಮಾತುಗಳಲ್ಲಿ ಲಕ್ಷಣ ಹೇಳುವುದು ಧಾಷ್ಟ್ರ್ಯವಾದೀತು.[೧೮]

ವೈದಿಕಪುರಾಣ ಲಕ್ಷಣದೊಂದಿಗೆ, ಜೈನಪುರಾಣ ಲಕ್ಷಣಗಳನ್ನು ಹೋಲಿಸಿದರೆ ಸಾದೃಶ್ಯ ವೈದೃಶ್ಯಗಳು ಸಹಜವಾಗಿ ಮೈದೋರುತ್ತವೆ. ಜಿನಸೇನಾಚಾರ್ಯರು "ಈ ಪುರಾಣದಲ್ಲಿ ಮೂರು ಲೋಕಗಳ ರಚನಾ ಕ್ರಮವೂ, ಮೂರು ಕಾಲಗಳ ಕಥನವೂ, ಜಗತ್ತಿನ ಉತ್ಪತ್ತಿ ಪ್ರಲಯಗಳು ಮೊದಲಾಗಿ ಎಲ್ಲವೂ ಹೇಳಲ್ಪಡುತ್ತವೆ. ಸಮ್ಯಗ್ದರ್ಶನ ಜ್ಞಾನ ಚಾರಿತ್ರ ರೂಪವಾದ ಮೋಕ್ಷ ಮಾರ್ಗವೂ ಈ ಮಾರ್ಗದ ಫಲವಾದ ಮೋಕ್ಷವೂ ಧರ್ಮ, ಅರ್ಥ, ಕಾಮ, ಪುರುಷಾರ್ಥಗಳೂ ಈ ಪುರಾಣದ ಅಭಿಧೇಯ ವಾಚ್ಯಗಳಾಗಿವೆ"[೧೯] ಎಂದು ಹೇಳಿ ಮುಂದುವರಿದು ಪುರಾಣಗಳಿಗೆ ಮುಖ್ಯವಾಗಿ ಎಂಟು ವಿಷಯಗಳು ಇರಬೇಕೆಂದು ಸೂಚಿಸಿ ಮುಂದಿನ ಅನೇಕ ಪುರಾಣಕಾರರಿಗೆ ಮಾರ್ಗದರ್ಶನ ಮಾಡಿದ್ದಾರೆ.

ಲೋಕೋ ದೇಶಃ ಪುರಂ ರಾಜ್ಯಂ ತೀರ್ಥಂ ದಾನ ತಪೋದ್ವಯಂ |
ಪುರಾಣೇಷ್ವಷ್ಟಧಾಖ್ಯೇಯಂ ಗತಯಃ ಫಲಮಿತ್ಯಪಿ || (IV-೩)

ಪುರಾಣದಲ್ಲಿ ಲೋಕ, ದೇಶ, ಪಟ್ಟಣ, ರಾಜ್ಯ, ತೀರ್ಥ, ದಾನ, ತಪಸ್ಸು, ಗತಿಗಳು, ಫಲ—ಈ ಎಂಟು ವಿಷಯಗಳನ್ನೂ ಹೇಳಬೇಕು ಎಂದು ಅವರು ನಿರ್ದೇಶಿಸಿದ್ದಾರೆ. ಈ ಲಕ್ಷಣದ ವ್ಯಾಪ್ತಿಯಲ್ಲಿ ಪಂಚಲಕ್ಷಣದ ವಿಷಯಗಳು ಕಂಡುಬರುವುದಿಲ್ಲ.

ಜೈನಪುರಾಣಗಳ ಪ್ರವೇಶವು ಸಾಮಾನ್ಯವಾಗಿ ಲೋಕಾಕಾರ ವಿವರಣೆಯಿಂದ ಪ್ರಾರಂಭವಾಗುತ್ತದೆ. ಜೈನರ ಪ್ರಕಾರ ಈ ಲೋಕ ಅನಾದಿ ಅನಂತವಾದುದು. ಯಾರಿಂದಲೂ ಸೃಷ್ಟಿಯನ್ನಾಗಲಿ, ನಾಶವನ್ನಾಗಲಿ ಪಡೆಯುವಂತಹದಲ್ಲ. ಇದು ತನ್ನಷ್ಟಕ್ಕೇ ಆಗುವಂಥದ್ದು. ಲೋಕದ ಆಕಾರ, ಒಬ್ಬ ಮನುಷ್ಯ ಕಿಸಗಾಲು ಹಾಕಿಕೊಂಡು ಸೊಂಟದ ಮೇಲೆ

ಕೈಯನ್ನು ಇಟ್ಟಿರುವಂತೆ ಕಂಡು ಬರುತ್ತದೆ. ಬೆತ್ತದ ಕುರ್ಚಿಯ ಕೆಳಭಾಗದಂತೆ ಅಧೋ ಲೋಕದ ಆಕಾರವೂ, ಚಕ್ರತಾಳದಂತೆ ವರ್ತುಲಾಕಾರವಾಗಿ ಮಧ್ಯಲೋಕದ ಆಕಾರವೂ, ಮದ್ದಳೆಯಂತೆ ಊರ್ಧ್ವ ಲೋಕದ ಆಕಾರವೂ ಇದೆ. ಮಧ್ಯಲೋಕವು ದ್ವೀಪ ಸರೋವರ ಗಳಿಂದ ಶೋಭಿಸುತ್ತದೆ. ಈ ಮಧ್ಯಲೋಕದ ನಟ್ಟ ನಡುವೆ ಮೇರುಪರ್ವತವಿದೆ. ಸುತ್ತಲೂ ಜಂಬೂದ್ವೀಪ. ಅದರ ಸುತ್ತಲೂ ಲವಣ ಸಮುದ್ರ. ಈ ಭೂಭಾಗವು ಸಿಂಧೂ ಮೊದಲಾದ ನದಿಗಳಿಂದ ಆರು ಖಂಡಗಳಾಗಿ ವಿಭಜಿತವಾಗಿದೆ. ನಾವಿರುವುದು ಅದ ರಲ್ಲಿಯ ಒಂದು ಖಂಡವಾದ ಆರ್ಯಖಂಡದಲ್ಲಿ. ಜೈನಪುರಾಣಗಳಲ್ಲಿ ಕಥಾಪ್ರವೇಶಕ್ಕೆ ಪೂರ್ವಭಾವಿಯಾಗಿ ಬರುವ ಲೋಕಾಕಾರದ ಪರಿಚಯವನ್ನು ಇಲ್ಲಿ ಸ್ಥೂಲ ರೂಪದಲ್ಲಿ ಮಾಡಿಕೊಡಲಾಗಿದೆ. ಲೋಕದ ಏಕದೇಶಗಳಾದ ದೇಶ, ಪರ್ವತ, ದ್ವೀಪ, ಸಮುದ್ರ ಮೊದಲಾದುವುಗಳ ರಾಜಧಾನಿಗಳನ್ನು ವರ್ಣನೆ ಮಾಡುವುದು ಪುರಾಖ್ಯಾನ. ಈ ಕ್ಷೇತ್ರ ದಲ್ಲಿ ಇದು ದೇಶ, ಇದು ನಗರ, ಇವನು ಈ ದೇಶದ ರಾಜ ಎಂಬುದಾಗಿ ವರ್ಣಿಸುವುದು ರಾಜಾಖ್ಯಾನ. ಅಪಾರವಾದ ಸಂಸಾರವೆಂಬ ಸಮುದ್ರವನ್ನು ದಾಟಿಸುವುದರಲ್ಲಿ ಸಮರ್ಥ ವಾದ ಜಿನೇಶ್ವರರ ಉಪದೇಶಕ್ಕೆ ತೀರ್ಥವೆಂದು ಹೆಸರು. ಉಪಮಾತೀತವಾದ ಗುಣ ಗಳುಳ್ಳ ತಪಸ್ಸನ್ನೂ, ದಾನವನ್ನೂ ವರ್ಣಿಸುವುದಕ್ಕೆ ತಪೋದಾನವೆನ್ನುವರು. ನಾರಕ, ತಿರ್ಯಕ್, ಮನುಷ್ಯ, ದೇವತೆಗಳ ವರ್ಣನೆಗೆ ಗತ್ಯಾಖ್ಯಾನವೆನ್ನುವರು. ಜೀವಿಗಳ ಪುಣ್ಯ-ಪಾಪಗಳನ್ನು ವರ್ಣಿಸುವುದಕ್ಕೆ ಫಲಾಖ್ಯಾನ ಎನ್ನುವರು.

ಪಂಪನು ಜಿನಸೇನಾಚಾರ್ಯರ ಉಕ್ತಿಯನ್ನೇ ಅನುವಾದಿಸಿ ಪುರಾಣಕ್ಕೆ ಎಂಟು ಅವಯವಗಳಿವೆ ಎಂದು ಹೇಳಿದ್ದಾನೆ. ಅದು ಹೀಗೆ :

> "ಆ ಪುರಾಣಕ್ಕಂ ಲೋಕಾಕಾರಕಥನಮುಂ ದೇಶನಿವೇಶೋಪದೇಶಮುಂ ನಗರಸಂಪತ್ಪರಿವರ್ಣನಮುಂ ರಾಜ್ಯರಮಣೀಯತಾಖ್ಯಾನಮುಂ ತೀರ್ಥಮಹಿಮಾ ಸಮರ್ಥನಮುಂ ಚತುರ್ಗತಿಸ್ವರೂಪ ನಿರೂಪಣಮುಂ ತಪೋದಾನವಿಧಾನ ವರ್ಣನಮುಂ ತತ್ಫಳಪ್ರಾಪ್ತಿ ಪ್ರಕಟನಮುಮೆಂದಿಂತವಯವಂಗಳೆಂಟಕ್ಕುಂ." (ಆದಿಪು. ವಚನ. ಪ್ರ. ೮)

ರನ್ನನು ತನ್ನ 'ಅಜಿತಪುರಾಣ'ದಲ್ಲಿ ಹೀಗೆ ಹೇಳಿದ್ದಾನೆ :

ಎನಿತುಂಟಾಗಮ ವರ್ಣನ | ಮನಿತುಮನೊಳಕೊಂಡು ಸಕಲಭವ್ಯಜನಂಗ
ಳ್ಗನುರಾಗಮನೊಡರಿಸಿದಪು | ದೆನಿಪ ಪುರಾಣಂ ಪುರಾಣತಿಲಕಮದಲ್ತೇ | (I-೭೮)

ಚಾಮುಂಡರಾಯನಾದರೋ, ತನ್ನ 'ತ್ರಿಷಷ್ಟಿಲಕ್ಷಣಮಹಾಪುರಾಣ'ದಲ್ಲಿ ಹಿಂದಿನ ಪುರಾಣಕಾರರನ್ನೇ ಅನುಸರಿಸಿ,

> "ಇಂತು ಕಾಲಾವತಾರಮುಂ ಷೋಡಶ ಕುಲಧರಾವತಾರಮುಂ ಪ್ರಥಮಾನುಯೋಗದ ಪೀಠಿಕೆಯೊಳಭಿವರ್ಣಿಸೆ ಪುರಾಣಕಥನದೊಳ್ ಲೋಕಾಖ್ಯಾನಮುಂ ದೇಶಾಖ್ಯಾನಮುಂ ನಗರಾಖ್ಯಾನಮುಂ ರಾಜಾಖ್ಯಾನಮುಂ ತೀರ್ಥಾಖ್ಯಾನಮುಂ ತಪೋಧನಾಖ್ಯಾನಮುಂ ಗತ್ಯಾಖ್ಯಾನಮುಂ ಫಲಾಖ್ಯಾನಮುಮೆಂದಷ್ಟವಿಧ ವರ್ಣನಮಕ್ಕುಂ" (ಚಾವುಂಪು. ಪು. ೧೭)

ಎಂಬುದಾಗಿ ತಿಳಿಸಿದ್ದಾನೆ.

ಜನ್ನನು ಪಂಪ-ಚಾಮುಂಡರಾಯರ ಹೇಳಿಕೆಯನ್ನು ಒಪ್ಪಿಕೊಂಡರೂ ಅದರಲ್ಲಿಯೇ ಸ್ವಲ್ಪ ಮಾರ್ಪಾಟನ್ನು ಮಾಡಿ 'ಅನಂತನಾಥ ಪುರಾಣ'ದಲ್ಲಿ ಹೀಗೆ ಹೇಳಿದ್ದಾನೆ :

ಮುನಿಮಾರ್ಗೋಕ್ತಿಪುರಾಣಪದ್ಧತಿಗೆ ಲೋಕಾಕಾರಮುಂ ತೀರ್ಥವ
ರ್ತನಮುಂ ವ್ಯಾಪ್ತಚತುರ್ಗತಿ ಸ್ಥಿತಿಗಳುಂ ಭಾಸ್ವತ್ತಪೋದಾನಕೀ
ರ್ತನಮುಂ ತತ್ಫಲಸಿದ್ಧಿಯುಂ ನೆಗಳ್ಬುವೈದಂಗಂ ಕವಿಪ್ರೋಕ್ತ ಕಾ
ವ್ಯನಿಬಂಧೋಚಿತಮೆಂಟು ದೇಶನಗರೀರಾಜ್ಯೋತ್ಸವಾಖ್ಯಾನದಿಂ (I-೬೬).

ಈತನು ಪುರಾಣಕ್ಕೆ ಐದು ಅಂಗಗಳೆಂದು ಹೇಳಿರುವುದು ಗಮನಾರ್ಹವಾಗಿದೆ. ಇದರಲ್ಲಿ ಪುರಾಣದ ಅಷ್ಟ ಅಂಗಗಳು ಕಾವ್ಯದಲ್ಲಿ ಸಮಾವೇಶಗೊಂಡರೂ ಮುಖ್ಯವಾದ ಲೋಕಾಕಾರ ಕಥನ, ತೀರ್ಥಮಹಿಮಾಸಮರ್ಥನ, ಚತುರ್ಗತಿ ಸ್ವರೂಪ, ತಪೋದಾನ ವಿಧಾನ ವರ್ಣನ ಮತ್ತು ತತ್ಫಲ ಪ್ರಾಪ್ತಿ ಇವು ಸಾರತಃ ಪುರಾಣದ ಅಂಗಗಳೆಂದೂ ಉಳಿದ ಮೂರು ಕಾವ್ಯ ಲಕ್ಷಣದೊಡನೆ ಸೇರುವುವೆಂದೂ ಅಭಿಪ್ರಾಯ ಪಡುವನು. ಮೇಲೆ ಹೇಳಿದ ಐದು ಲಕ್ಷಣಗಳು ಮುನಿಗಳಿಂದ ಅನುಸರಿಸಲಾದ ಪುರಾಣ ಪದ್ಧತಿ. ಈ ಪಂಚ ಲಕ್ಷಣಗಳ ಜೊತೆಗೆ ದೇಶ, ನಗರ ಹಾಗೂ ರಾಜ್ಯೋತ್ಸವಾಖ್ಯಾನಗಳೆಂಬ ಹೆಚ್ಚಿನ ಮೂರು ಅಂಗಗಳನ್ನು ಸೇರಿಸಿದರೆ ಕವಿಪ್ರೋಕ್ತ ಪುರಾಣ ಪದ್ಧತಿಯಾಗುತ್ತದೆ. ಇದು ಏನಿದ್ದರೂ, ಪುರಾಣಕಾರರು ಪ್ರಕಟಿತವಾದ ಪುರಾಣಲಕ್ಷಣದ ಲಕ್ಷ್ಮಣರೇಖೆಯೊಳಗೇ ಆದಷ್ಟೂ ತಮ್ಮ ಪುರಾಣಗಳನ್ನು ರಚಿಸತೊಡಗಿದರು.

ಈ ನಿರೂಪಣೆಗಳನ್ನು ವೈದಿಕಪುರಾಣಗಳೊಂದಿಗೆ ಹೋಲಿಸಿ ನೋಡಿದಾಗ ಕೆಲವು ಅಂಶಗಳನ್ನು ಹೀಗೆ ಗುರುತಿಸಬಹುದು. ಜಗತ್ತಿನ ಉತ್ಪತ್ತಿ ಪ್ರಳಯಗಳ ಉಲ್ಲೇಖ ಜೈನ ದರ್ಶನ ದೃಷ್ಟಿಯಿಂದ ವಿಚಿತ್ರವಾಗಿ ಕಾಣಬಹುದು. ಏಕೆಂದರೆ ಜೈನ ದರ್ಶನದ ಪ್ರಕಾರ ಜಗತ್ತು (ಸೃಷ್ಟಿ) ಅನಾದಿ ಮತ್ತು ಅನಂತತ್ತ್ವವನ್ನು ಹೊಂದಿರುವುದಾಗಿದೆ. ಇಲ್ಲಿ ಸೃಷ್ಟಿ ಸಂಹಾರಗಳ ಅರ್ಥ ವಸ್ತುವಿನ ಉತ್ಪಾದ ಹಾಗೂ ವ್ಯಯಗಳಿಗೆ ಸಂಬಂಧಿಸಿದುದಾಗಿದೆಯೆಂದು ತಿಳಿಯಬೇಕೇ ಹೊರತು, ವೈದಿಕ ಧರ್ಮದಲ್ಲಿ ಕಂಡುಬರುವ ಅರ್ಥದಲ್ಲಿ ಅಲ್ಲ. ಜೈನಪುರಾಣಗಳ ಪುರಾಣ ಲಕ್ಷಣಗಳಲ್ಲಿ ವಂಶ, ಮನ್ವಂತರ, ವಂಶಾನುಚರಿತೆಗಳ ಬಗೆಗೆ ವಿಶೇಷವಾದ ಹೇಳಿಕೆ ಬಾರದಿದ್ದರೂ ತಮ್ಮ ಧರ್ಮಾನುಗುಣವಾಗಿ ಆ ಪುರಾಣಗಳು ತ್ರಿಷಷ್ಟಿಮಹಾಪುರುಷರ ವಿವರವನ್ನು ನೀಡುವಾಗ ವಂಶ-ವಂಶಾನುಚರಿತೆಗಳನ್ನು ನಿರೂಪಿಸುತ್ತವೆ. ಪುರಾಣಗಳ ಆದಿಯಲ್ಲಿ ಹದಿನಾಲ್ಕು ಮನುಗಳ ಯುಗಗಳ ವರ್ಣನೆಯಿದ್ದು ಮನ್ವಂತರದ ವಿಚಾರವೂ ಬರುತ್ತದೆ. ಧರ್ಮಾರ್ಥ ಕಾಮಮೋಕ್ಷಗಳು ವೈದಿಕಪುರಾಣಗಳ ಲಕ್ಷಣಗಳಲ್ಲಿಯೂ ಕ್ರಮೇಣ ಅಡಕವಾಗಿರುವುದನ್ನು ಕಾಣುತ್ತೇವೆ. ಜೈನ ಪುರಾಣಗಳಲ್ಲಿ ಕಂಡುಬರುವ ಚತುರ್ಗತಿಗಳ ವಿವರ, ಭವಾವಳಿಗಳ ನಿರೂಪಣೆ ಈ ಮೊದಲಾದವು ವೈದಿಕ ಪುರಾಣಗಳಲ್ಲಿ ಸಹಜವಾಗಿಯೇ ಕಂಡುಬರುವುದಿಲ್ಲ. ಹೀಗೆ ಹಲವಾರು ಪ್ರಮುಖ ಸಾದೃಶ್ಯ ವೈದೃಶ್ಯಗಳನ್ನು ಜೈನ-ವೈದಿಕ ಪುರಾಣಗಳು ತಮ್ಮ ದಾರ್ಶನಿಕತೆಯ ಹರವಿನಲ್ಲಿ ಪಡೆದುಕೊಂಡಿವೆ.

'ಮಹಾಪುರಾಣ' ವೆಂಬುದು ಜೈನಸಾಹಿತ್ಯದಲ್ಲಿ ಒಂದು ವಿಶೇಷ ಶಬ್ದವಾಗಿದೆ. ಇದು ೬೩ ಜೈನ ಪ್ರಮುಖ ವ್ಯಕ್ತಿಗಳ ಜೀವನದ ವರ್ಣನೆಯನ್ನು ಮಾಡುತ್ತದೆ. ೨೪ ತೀರ್ಥಂಕರರು, ೧೨ ಮಂದಿ ಚಕ್ರವರ್ತಿಗಳು, ೯ ಮಂದಿ ಬಲದೇವರು, ೯ ಮಂದಿ ವಾಸುದೇವರು ಮತ್ತು ೯ ಮಂದಿ ಪ್ರತಿವಾಸುದೇವರು—ಇವರು ೬೩ ಮಹಾಪುರುಷರೆನಿಸುತ್ತಾರೆ.

'ಇಪ್ಪತ್ತನಾಲ್ಕು ತೀರ್ಥಂಕರರ ಪುರಾಣಗಳ ಸಮೂಹವನ್ನು ಮಹಾಪುರಾಣವೆಂದು ಕರೆಯಲಾಗುವುದು' (೨-೧೩೪) ಎಂದು ಜಿನಸೇನಾಚಾರ್ಯರು ಹೇಳಿರುವರು. ಈ ೨೪ ತೀರ್ಥಂಕರರ ಚರಿತ್ರೆಗಳಲ್ಲಿಯೇ ಉಳಿದ ಮಹಾಪುರುಷರ ಚರಿತ್ರೆಯೂ ಅಡಕವಾಗಿರುತ್ತದೆ. 'ಷಟ್ಖಂಡಾಗಮ'ದಲ್ಲಿ ನಿರೂಪಿತವಾಗಿರುವ ಎಲ್ಲಾ ಮಹಾಪುರುಷರ ಪ್ರಕಾರದ ಉಲ್ಲೇಖವು ನೇರವಾಗಿ ಪ್ರಚಲಿತ ಮಹಾಪುರಾಣಗಳಲ್ಲಿ ಕಂಡುಬಾರದಿದ್ದರೂ ಪ್ರಮುಖ ಮಹಾಪುರುಷರ (೬೩ ಮಹಾಪುರುಷರ) ಉಲ್ಲೇಖವನ್ನು ಸಾಮಾನ್ಯವಾಗಿ ಕಾಣಬಹುದಾಗಿದೆ.

ಮಹಾಪುರಾಣವು ಹಲವಾರು ಚರಿತಕಾವ್ಯಗಳ ಸಂಕಲನವಾಗಿದೆ. ಇದು ಅನೇಕ ಕಾವ್ಯಗಳ ಮಣಿಮಾಲೆ ಎನಿಸಿದೆ. ಇದನ್ನು ಪುರಾಣಕೋಶವೆಂದೂ ಕರೆಯಬಹುದಾಗಿದೆ. ಸಂಸ್ಕೃತ ಕವಿ ರಾಜಶೇಖರನು ಪುರಾಣಗಳಲ್ಲಿ ಎರಡು ಭೇದಗಳನ್ನು ಗುರುತಿಸಿದ್ದಾನೆ : ಪರಕ್ರಿಯಾ ಮತ್ತು ಪುರಾಕಲ್ಪ. ಪರಕ್ರಿಯಾದಲ್ಲಿ ಪ್ರಧಾನವಾಗಿ ಏಕನಾಯಕತ್ತ್ವವಿರುತ್ತದೆ (ಉದಾ : ರಾಮಾಯಣ). ಪುರಾಕಲ್ಪದಲ್ಲಿ ಅನೇಕ ನಾಯಕರಿರುತ್ತಾರೆ (ಉದಾ: ಮಹಾಭಾರತ)[೨೦].

ಹಿಂದೂಗಳು ಮಹಾಭಾರತ, ರಾಮಾಯಣಗಳಿಗೆ ಕೊಡುವ ಮಹತ್ತ್ವವನ್ನು ಜೈನರು ಮಹಾಪುರಾಣಕ್ಕೆ ನೀಡುತ್ತಾರೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ರಾಮಾಯಣ ಮಹಾಭಾರತದೊಳಗಿನ ವಸ್ತುವಿನ ಏಕತೆ 'ಮಹಾಪುರಾಣ'ದಲ್ಲಿ ಕಂಡುಬರುವುದಿಲ್ಲ.[೨೧] ಇಲ್ಲಿ ಬರುವ ಮಹಾಪುರುಷರ ಚರಿತ್ರೆಗಳು ತಮ್ಮಷ್ಟಕ್ಕೇ ಪ್ರತ್ಯೇಕವಾಗಿ ನಿಲ್ಲುತ್ತವೆ. ಅಲ್ಲದೆ ಪ್ರತ್ಯೇಕಗೊಂಡ ಅನೇಕ ಸ್ವತಂತ್ರ ಗ್ರಂಥಗಳೂ ಸಹ ಇಲ್ಲಿ ದೊರೆಯುವುದರಿಂದ ಮಹಾಪುರಾಣ ಒಂದು ಗ್ರಂಥಸಮುಚ್ಚಯವೆಂಬಂತೆ ಇರುತ್ತದೆ. ಪುರಾಣಗಳಲ್ಲಿ ಸಮಾವೇಶಗೊಂಡು ಬರುವ ಕೆಲವು ವ್ಯಕ್ತಿಗಳ ಕಥೆಗಳು ಜನಪ್ರಿಯವಾಗಿ ಅವೂ ಸಹ ಸ್ವತಂತ್ರ ಕಾವ್ಯಗಳಾಗಿ ರೂಪುಗೊಂಡಿವೆ. ಉದಾಹರಣೆಗೆ ಧರ್ಮನಾಥ ತೀರ್ಥಂಕರರ ಕಾಲದ ಚಕ್ರವರ್ತಿ ಸನತ್ಕುಮಾರನನ್ನು ಕುರಿತು ಸಂಸ್ಕೃತದಲ್ಲಿ ಜಿನಪಾಲ, ಶ್ರೀ ಚಂದ್ರ ಸೂರಿ ಮೊದಲಾದವರೂ ಅಪಭ್ರಂಶದಲ್ಲಿ ಹರಿಭದ್ರಸೂರಿ ಮೊದಲಾದವರೂ ಬರೆದಿದ್ದಾರೆ. ಮುನಿಸುವ್ರತ ತೀರ್ಥಂಕರರ ಕಾಲದಲ್ಲಿ ಬರುವ ರಾಮ(ಬಲದೇವ)ನನ್ನು ಕುರಿತು ವಿಜಯಸೇನ, ದೇವವಿಜಯಗಣಿ ಮೊದಲಾದವರು ಸಂಸ್ಕೃತದಲ್ಲಿ; ಜಿನದಾಸ, ಸೋಮಸೇನ, ಚತುರ್ಮುಖ ಮೊದಲಾದವರು ಅಪಭ್ರಂಶದಲ್ಲಿ ಬರೆದಿದ್ದಾರೆ.[೨೨]

ಪುರಾಣ ಹಾಗೂ ಚರಿತ ಸಾಹಿತ್ಯಗಳು ವಿಭಿನ್ನ ಶೈಲಿಯಲ್ಲಿ ಕವಲೊಡೆದಿರುವ ಸಾಹಿತ್ಯ ಪ್ರಕಾರಗಳಾಗಿರದೆ ಎರಡನ್ನೂ ಒಂದೇ ಗುಂಪಿಗೆ ಸೇರಿಸಿ ವಿವೇಚಿಸಬಹುದಾಗಿದೆ. ಇದೇ ಕಾರಣದಿಂದಾಗಿ 'ಪುರಾಣ' ಎಂಬ ಶೀರ್ಷಿಕೆಯನ್ನೊಳಗೊಂಡ ಕಾವ್ಯಗಳು ಸಹ ಪರ್ಯಾಯವಾಗಿ ಕೆಲವೆಡೆ ಚರಿತ್ರ ಎಂಬ ಶೀರ್ಷಿಕೆ ಹೊಂದಿರುವುದನ್ನು ಗಮನಿಸಬಹುದಾಗಿದೆ. ಪಂಪನು ತನ್ನ ಆದಿಪುರಾಣವನ್ನು 'ಗಣಧರೋದಿತ ಚರಿತಂ' (I-೩೩) ಎಂದಿದ್ದಾನೆ. ಕೆಲವೆಡೆ ಕಾವ್ಯ, ಪ್ರಬಂಧ ಎಂಬ ಶೀರ್ಷಿಕೆಯಲ್ಲಿ ಬಂದ ಕೃತಿಗಳೂ ಸಹ ಪುರಾಣಕಾವ್ಯದ ಲಕ್ಷಣ ಪಡೆದಿರುವುದನ್ನು ಗಮನಿಸಬಹುದು.

## ಜೈನ ಪುರಾಣಗಳ ಬೆಳವಣಿಗೆಯ ಹಿನ್ನೆಲೆ

ಪುರಾಣ / ಚರಿತ ಸಾಹಿತ್ಯಗಳು ಪರಂಪರಾಗತವಾಗಿ ಬೆಳೆದುಬಂದಿವೆ. ಜೈನರು ತಮ್ಮ ಪುರಾಣಗಳ ಉಗಮವನ್ನು ಕುರಿತು ಹೀಗೆ ಅಭಿಪ್ರಾಯಪಡುತ್ತಾರೆ :

ಚತುರ್ಥಕಾಲದ ಪ್ರಾರಂಭದಲ್ಲಿ ಆದಿಬ್ರಹ್ಮನು ಹೇಳಿದಂತೆ ಇತಿಹಾಸವನ್ನು ವೃಷಭಸೇನ ಗಣಧರನು ಅರ್ಥವತ್ತಾಗಿ ವಿವರಿಸಿದನು. ಮುಂದಿನ ತೀರ್ಥಂಕರರೂ, ಋದ್ಧಿಧಾರಿಗಳಾದ ಗಣಧರರೂ ಆ ಪುರಾಣವನ್ನು ಪರಂಪರೆಗೆ ಊನಬಾರದಂತೆ ಪ್ರಕಾಶಪಡಿಸಿದರು. ಚತುರ್ಥಕಾಲದ ಅಂತ್ಯದಲ್ಲಿ ಭಗವಾನ್ ಮಹಾವೀರ ತೀರ್ಥಂಕರನನ್ನು ಕುರಿತು ಶ್ರೇಣಿಕ ಮಹಾರಾಜನು ಈ ಪುರಾಣವನ್ನು ವಿವರಿಸುವಂತೆ ಹೇಳಿದನು. ಸ್ವಾಮಿಯು ನೀಡಿದ ಅನುಗ್ರಹದಂತೆ ಗೌತಮ ಗಣಧರನು ಸಮಸ್ತ ಪುರಾಣ ಸಂಗ್ರಹವನ್ನು ಶ್ರೇಣಿಕನಿಗೆ ತಿಳಿಸಿದನು. ಗೌತಮನಿಂದ ಸುಧರ್ಮನೂ, ಸುಧರ್ಮನಿಂದ ಜಂಬೂಸ್ವಾಮಿಯೂ ಕರಗತ ಮಾಡಿಕೊಂಡರು.

ಮಹಾವೀರರ ನಿರ್ವಾಣಕಾಲ ಕ್ರಿ. ಪೂ. ೫೨೭. ಗೌತಮ, ಸುಧರ್ಮ, ಜಂಬು ಇವರು ೬೨ ವರ್ಷ (ಕ್ರಿ. ಪೂ. ೫೨೭-೪೬೫) ಧರ್ಮವನ್ನು ರಕ್ಷಿಸಿ ಕೈವಲ್ಯವನ್ನು ಪಡೆದರು.

ವಿಷ್ಣು, ನಂದಿ, ಅಪರಾಜಿತ, ಗೋವರ್ಧನ, ಭದ್ರಬಾಹು ಇವರು ಶ್ರುತಕೇವಲಿಗಳು. ೧೦೦ ವರ್ಷ ಧರ್ಮವನ್ನು ರಕ್ಷಿಸಿದರು (ಕ್ರಿ. ಪೂ. ೪೬೫-೩೬೫).

ವಿಶಾಖಾಚಾರ್ಯ, ಪ್ರೋಷ್ಠಿಲಾಚಾರ್ಯ, ಕ್ಷತ್ರಿಯಾಚಾರ್ಯ, ಜಯಾಚಾರ್ಯ, ನಾಗಸೇನ, ಸಿದ್ಧಾರ್ಥ, ಧೃತಿಷೇಣ, ವಿಜಯ, ಬುದ್ಧಿಮಾನ, ಗಂಗದೇವ, ಧರ್ಮಸೇನ—ಈ ಹನ್ನೊಂದು ಮಂದಿ ದಶಪೂರ್ವಧರರು ೧೮೩ ವರ್ಷಕಾಲ ಧರ್ಮವನ್ನು ರಕ್ಷಿಸಿದರು. ಇವರು ಪುರಾಣವನ್ನು ಪ್ರಕಟಿಸಿದರು (ಕ್ರಿ. ಪೂ. ೩೬೫-೧೮೨).

ನಕ್ಷತ್ರ, ಜಯಪಾಲ, ಪಾಂಡು, ಧ್ರುವಸೇನ, ಕಂಸಾಚಾರ್ಯ—ಇವರು ಹನ್ನೊಂದು ಅಂಗವನ್ನು, ಅಂದರೆ ಪುರಾಣದ ಮುಕ್ಕಾಲು ಭಾಗವನ್ನು, ೨೨೦ ವರ್ಷ ಕಾಲ ರಕ್ಷಿಸಿದರು (ಕ್ರಿ. ಪೂ. ೧೮೨–ಕ್ರಿ.ಶ. ೩೮).

ಸುಭದ್ರ, ಯಶೋಭದ್ರ, ಭದ್ರಬಾಹು, ಲೋಹಾಚಾರ್ಯ—ಈ ನಾಲ್ಕು ಮಂದಿ ಆಚಾರ್ಯರು ಪ್ರಥಮಾಂಗವನ್ನು, ಅಂದರೆ ಪುರಾಣದ ಕಾಲುಭಾಗವನ್ನು, ೧೧೮ ವರ್ಷ ಪ್ರಸಾರ ಮಾಡಿದರು.[೨೩]

ಮುಂದೆ ಬಂದವರಲ್ಲಿ ಸ್ಮರಣಶಕ್ತಿ ಕುಗ್ಗಿಹೋದಂತೆ ಪುರಾಣವೂ ಕ್ರಮವಾಗಿ ಕುಗ್ಗಿ ಎಲ್ಲೋ ಕೆಲವು ಮಂದಿ ಮಾತ್ರ ಇದರ ಸ್ವಲ್ಪ ಭಾಗವನ್ನು ನೆನಪಿನಲ್ಲಿಟ್ಟುಕೊಂಡರೆನ್ನಲಾಗಿದೆ. ಈಗ ಉಪಲಬ್ಧವಿರುವ ಪುರಾಣ ಸಾಹಿತ್ಯವನ್ನು ಈ ಪರಂಪರೆಯಲ್ಲಿ ಉಳಿದು ಬಂದಿರುವ ಸಾಹಿತ್ಯವೆಂದು ತಿಳಿಯಬಹುದಾಗಿದೆ.

ಜೈನರು ಮುಖ್ಯವಾಗಿ ತಮ್ಮ ಆಗಮಗಳನ್ನು ನಾಲ್ಕು ಶ್ರುತಸ್ಕಂಧಗಳಲ್ಲಿ ವಿಂಗಡಿಸಿರುವರು. ಮಹಾಪುರುಷರ ಚರಿತ್ರೆಯಿರುವ ಭಾಗಕ್ಕೆ ಪ್ರಥಮಾನುಯೋಗವೆನ್ನುವರು. ಮೂರು ಲೋಕದ ಬಗೆಗೆ ವಿವರಿಸುವ ಭಾಗವನ್ನು ಕರಣಾನುಯೋಗವೆನ್ನುವರು. ಮುನಿ ಮತ್ತು ಶ್ರಾವಕರ ಆಚಾರವನ್ನು ವರ್ಣಿಸುವ ಭಾಗವನ್ನು ಚರಣಾನುಯೋಗವೆನ್ನುವರು.

ಜೀವಾದಿ ದ್ರವ್ಯಗಳನ್ನು ವರ್ಣಿಸುವ ಭಾಗವನ್ನು ದ್ರವ್ಯಾನುಯೋಗವೆನ್ನುವರು.

ಪ್ರಥಮಾನುಯೋಗದಲ್ಲಿ ಉಳಿದ ಅನುಯೋಗಗಳ ಸಾಮಾನ್ಯ ವರ್ಣನೆಯು ಅಂತರ್ಗತವಾಗಿರುವುದರಿಂದ ಪ್ರಥಮಾನುಯೋಗಕ್ಕೆ ಸಿಗದ ವಸ್ತುವಾಗಲಿ ವಚನವಾಗಲಿ ಇಲ್ಲವೇ ಇಲ್ಲ. ಪ್ರಥಮಾನುಯೋಗವು ಕಥೆಗಳ ಆಗರವಾಗಿದೆ. ತೀರ್ಥಂಕರಾದಿ ಮಹಾಪುರುಷರ ವರ್ಣನೆ ಇಲ್ಲಿ ಬರುತ್ತದೆ. ಇದನ್ನು ಕುರಿತು ಜಿನಸೇನಾಚಾರ್ಯರು ಈ ರೀತಿ ಹೇಳಿದ್ದಾರೆ :

ಮಹಾಧಿಕಾರಾಶ್ಚತ್ವಾರಃ ಶ್ರುತಸ್ಕಂಧಸ್ಯ ವರ್ಣಿತಾಃ |
ತೇಷಾಮಾದ್ಯೋನುಯೋಗೋಽಯಂ ಸತಾಂ ಸಚ್ಚರಿತಾಶ್ರಯಃ || (ಮಹಾಪುರಾಣ II-೯೮)

'ಶ್ರುತಸ್ಕಂಧ ಶಾಸ್ತ್ರದಲ್ಲಿ ನಾಲ್ಕು ಮಹಾಧಿಕಾರಗಳು ವರ್ಣಿಸಲ್ಪಟ್ಟಿವೆ. ಈ ನಾಲ್ಕರಲ್ಲಿ ತೀರ್ಥಂಕರರೇ ಮೊದಲಾದ ಮಹಾಪುರುಷರ ಚರಿತ್ರೆಯು ಪ್ರಥಮಾನುಯೋಗವೆನಿಸುತ್ತದೆ.'

ಪುರಾಣಗಳಲ್ಲಿ ಈ ನಾಲ್ಕು ಅನುಯೋಗಗಳೂ ಮೈಗೂಡಿ ಬರುವುದರಿಂದ ಇವುಗಳನ್ನು 'ಶ್ರುತಸ್ಕಂಧ'ವೆಂದೇ ಕರೆಯಬಹುದಾಗಿದೆ. "ಜೈನಪುರಾಣ ಶ್ರುತಸ್ಕಂಧವಾಗಿರಬೇಕು. ಹೀಗೆ ಶ್ರುತಸ್ಕಂಧವಾಗಿರಬೇಕಾದ ತಮ್ಮ ಪುರಾಣವು ಶುಷ್ಕವಾಗಿರದೇ ಅದು ನವರಸಗಳಿಂದ ತುಂಬಿ ಸಹೃದಯರನ್ನು ಆಹ್ಲಾದಗೊಳಿಸುವಂತಿರಬೇಕು ಎಂಬುದೂ ಜೈನಾಚಾರ್ಯರ ಉದ್ದೇಶವಾಗಿತ್ತು. ಜೈನಪುರಾಣಗಳು ತಾತ್ತ್ವಿಕ ಹಿನ್ನೆಲೆಯಲ್ಲಿ ಮೂಡಿಬಂದ ರಸಘಟ್ಟಿಗಳಾಗಿವೆ."[೨೪]

## ಜೈನಪುರಾಣದ ವೈಶಿಷ್ಟ್ಯಗಳು

ಜೈನಪುರಾಣಗಳಲ್ಲಿ ಕೆಲವು ನಿರ್ದಿಷ್ಟ ಅಂಶಗಳು ಪ್ರತಿಪಾದಿತವಾಗಿವೆ. ಅವುಗಳಲ್ಲಿ ಮುಖ್ಯವಾದವುಗಳನ್ನು ಇಲ್ಲಿ ಪರಿಗಣಿಸಲಾಗಿದೆ :

**ಭವಾವಳಿಗಳು** : ಜೀವಿಯ ಕರ್ಮಗಳಿಗೆ ಅನುಗುಣವಾಗಿ ಕರ್ಮಫಲಗಳು ನಾನಾ ಜನ್ಮಗಳಲ್ಲಿ ಬೆನ್ನಟ್ಟಿ ಬರುತ್ತವೆ. ಇದರಿಂದಾಗಿ ನಾನಾ ಪ್ರಕಾರವಾದ ಭವಗಳನ್ನು ಜೀವಿಯು ಪಡೆಯುತ್ತಾನೆ. ಹೀಗೆ ನಾನಾ ಬಗೆಗಳಲ್ಲಿ ಜೀವಿಯು ಪಡೆಯುವ ಜನ್ಮಾಂತರಗಳ ಕಥೆಯೇ ಭವಾವಳಿ.

ಜೀವದ್ರವ್ಯವು ಅಜೀವದ್ರವ್ಯದೊಡನೆ ಅನಾದಿಕಾಲದಿಂದಲೂ ಸಂಬಂಧವನ್ನು ಪಡೆದು ಚತುರ್ಗತಿಗಳಾದ ದೇವ ನಾರಕ ಮನುಷ್ಯ ತಿರ್ಯಕ್ ಗತಿಗಳಲ್ಲಿ ಸುತ್ತುವುದು. ಚತುರ್ಗತಿಗಳೆಲ್ಲವೂ ಜೀವಿಗೆ ಹೇಯವಾದುವುಗಳೇ. ಪುಣ್ಯಪ್ರಾಪ್ತಿಯಿಂದ ದೊರಕುವ ಸ್ವರ್ಗಪ್ರಾಪ್ತಿಯೂ ಸಹ ಬಂಧನವೇ. ಪಾಪಕರ್ಮಫಲವಾಗಿ ಅನುಭವಿಸುವ ನರಕಗತಿ ಭಯಂಕರ. ನರಕಗತಿಯಷ್ಟು ಕರ್ಮ ವಿಕೋಪವಿಲ್ಲದಿದ್ದರೂ ತಿರ್ಯಕ್ ಗತಿಯೂ ಸಹ ಹೇಯವಾದುದೆ. ಪುಣ್ಯಪಾಪಗಳ ಸಮ್ಮಿಶ್ರಣದಿಂದ ಉಂಟಾಗುವ ಮನುಷ್ಯಗತಿಯೂ ಉಪಾದೇಯವಲ್ಲ. ಹಾಗಾದರೆ ಜೀವಿಗೆ ಇನ್ನಾವುದು ಗತಿ? ರತ್ನತ್ರಯಗಳ ಮೊರೆ ಹೋಗದೆ ಜೀವಿಗೆ ಇವುಗಳ ಕೋಟಲೆ ತಪ್ಪಿದ್ದಲ್ಲ. ಸಮ್ಯಗ್ದರ್ಶನಜ್ಞಾನಚಾರಿತ್ರ್ಯಗಳ ಆಧಾರದಿಂದ ಮಾತ್ರ ಜೀವಿಯು ಕರ್ಮಗಳಿಂದ ಸಂಪೂರ್ಣ ಮುಕ್ತನಾಗುತ್ತಾನೆ.

ಮನುಷ್ಯಗತಿ ಲಭ್ಯವಾದಾಗ ಮಾತ್ರ ಇದು ಸಾಧ್ಯ.

ಆತ್ಮಸಾಧನೆಯ ಹಾದಿಯಲ್ಲಿ ಹಲವಾರು ಜೀವರು ಜಯಗಳಿಸಿ 'ಮಹಾಪುರುಷ' ಪದವಿಗೆ ಏರಿ, ತಮ್ಮ ಪರಮಗುರಿ ಸಾಧನೆಯಲ್ಲಿ ಸಾಫಲ್ಯವನ್ನು ಪಡೆದಿದ್ದಾರೆ. ಭವ ಸಾಗರವನ್ನು ದಾಟಿದ ಮಹಾತ್ಮರ ಚರಿತ್ರೆಯೇ ಜೈನಪುರಾಣಗಳ ಮುಖ್ಯ ಕಥಾವಸ್ತು. ಅನಾದಿಕಾಲದಿಂದ ಭವಾವಳಿಗಳಲ್ಲಿ ಸುಳಿದು ಬಂದ ಜೀವಿಯ ಭವಗಳು ಎಣಿಕೆಗೆ ಸಿಗುವಂತಹದ್ದಲ್ಲ. ಪುರಾಣಗಳಲ್ಲಿ ವರ್ಣಿತವಾಗುವ ಭವಾವಳಿಗಳು ಜೀವಿಗೆ ಕಾಲ ಲಬ್ಧಿಯು ದೊರೆತಂದಿನಿಂದ ಮುಕ್ತಿಪದವಿಯು ದೊರೆಯುವವರೆಗೆ ಜನ್ಮ ಪಡೆದು ಬರುವ ಭವಗಳಿಗೆ ಸಂಬಂಧಿಸಿದುದಾಗಿವೆ. ಸುಗತಿಯನ್ನು ಸೇರಬೇಕಾದರೆ ಜೀವ ಹೇಗೆ ಪಾಪಪುಣ್ಯಗಳ ಕ್ಷಯದಿಂದ ಅಧಿಕಾರ ಸಂಪಾದಿಸಬೇಕೋ ಹಾಗೆಯೇ ಸಮ್ಯಕ್ ಜ್ಞಾನ ಚಾರಿತ್ರಗಳಿಗೆ ಮೂಲವಾದ ಸಮ್ಯಕ್ ದರ್ಶನವನ್ನು ಪಡೆಯಬೇಕಾದರೂ, ಅದಕ್ಕೆ ಅಧಿ ಕಾರಿಯಾಗಲು ತಕ್ಕ ಪುಣ್ಯವನ್ನು ಜೀವಿ ಮಾಡಿರಬೇಕು. ಈ ಪುಣ್ಯ ಮಾಡಿದ್ದರೆ, ಅದು ಪಕ್ವವಾದ ಕಾಲಕ್ಕೆ ಆತನಿಗೆ ಸಮ್ಯಕ್ತ್ವ ತಾನಾಗಿಯೇ ಲಭಿಸುತ್ತದೆ. ಇಂತಹ ಕಾಲ ಲಭಿಸುವುದನ್ನೇ ಪುರಾಣಗಳು ಕಾಲಲಬ್ಧಿ ಎನ್ನುವುದು. ಹೀಗೆ ಕಾಲಲಬ್ಧಿಯು ದೊರೆತ ನಂತರ ಒಬ್ಬೊಬ್ಬರೂ ಒಂದೊಂದು ರೀತಿಯ ಸಂಖ್ಯೆಯಲ್ಲಿ ಭವಗಳನ್ನು ಪಡೆದು ಮುಕ್ತಿಗೆ ಸಂದಿರುವರು. ಉದಾಹರಣೆಗೆ ವೃಷಭನಾಥನು ಹತ್ತು ಭವಗಳಲ್ಲಿ ಮುಕ್ತಿಯನ್ನು ಪಡೆದ ವಿವರಣೆಯು ಪುರಾಣಗಳಲ್ಲಿ ದೊರೆಯುತ್ತದೆ.

"ಈ ಭವಾವಳಿ, ಈ ಜನ್ಮಾಂತರ ಕತೆಗಳ ಮಾಲೆ ತೊಡಕು ತೊಡಕಾಗಿ ಕಾಣಬಹುದು. ಕಾರಣ ಅದು ಇರುವುದೇ ತೊಡಕು ತೊಡಕಾಗಿ. ಹಾಗೆ ಇರುವುದಕ್ಕೆ ಕಾರಣ, ಅದು ಸಂಸಾರದ ಪ್ರತಿಬಿಂಬ. ಜೀವ ಅನಾದಿಕಾಲದಿಂದಲೂ ಅನುಭವಿಸಿದ ತೊಡಕು ಜೈನ ಪುರಾಣಗಳಲ್ಲಿ ಕಾಣುವ ಈ ತೊಡಕಿಗಿಂತ ಅನೇಕಪಾಲು ಹೆಚ್ಚು. ಕಾಲಲಬ್ಧಿ ದೊರೆಕೊಂಡ ಮೇಲಿನ ಭವಾವಳಿಗಳಿಗೇ ಇಷ್ಟು ಹಿಂಜರಿಯುವುದಾದರೆ, ಜೀವ ಮಿಥ್ಯಾತ್ವದಿಂದ ತಂದುಕೊಳ್ಳುತ್ತಿರುವ ಅಸಂಖ್ಯಭವಗಳಿಗೆ ಎಷ್ಟು ಹಿಂಜರಿಯಬೇಡ? ಎಷ್ಟು ಬೇಗ ಭವಕ್ಕೆ ಭೀತನಾಗಿ, ಸಮ್ಯಕ್ತ್ವವನ್ನು ಕೈಗೊಂಡು ಮೋಕ್ಷಗಾಮಿಯಾಗಬೇಡ? ಈ ದೃಷ್ಟಿಯನ್ನು ತರುವುದಕ್ಕಾಗಿಯೇ ಜೈನಪುರಾಣಗಳಲ್ಲಿ ಭವಾವಳಿಯ ನಿರೂಪಣೆ."[೨೫]

ಈ ಭಾಗ ವೈವಿಧ್ಯಪೂರ್ಣವಾಗಿರುತ್ತದೆ, ಕಥೆ ಉಪಕಥೆಗಳಿಂದ ಹೆಣೆದುಕೊಂಡು, ಗೋಜಲೆನಿಸಿದರೂ ಸ್ವಾರಸ್ಯಕರ ಹಾಗೂ ಅರ್ಥಪೂರ್ಣವಾಗಿರುತ್ತದೆ. ಜೀವ ಕರ್ಮ ದೊಡನೆ ನಡೆಸುವ ಜಂಜಾಟದ ಜಟಿಲತೆಯ ಸ್ವಾರಸ್ಯಪೂರ್ಣ ಕಥಾನಿರೂಪಣೆ ಇದಾಗಿರು ತ್ತದೆ. ಕಥಾನಿರೂಪಣೆಯಲ್ಲಿ ಜೈನರು ಕುಶಲರೆನಿಸಿದ್ದಾರೆ. ಕಥೆ-ಧರ್ಮ-ಸಾಹಿತ್ಯಗಳು ಮುಪ್ಪುರಿಗೊಂಡು ಪುರಾಣದಲ್ಲಿ ಬರುತ್ತವೆ. ಪುರಾಣಗಳಲ್ಲಿ ಬರುವ ಕಥೆಗಳಲ್ಲಿ ಕಥೆಗಳು ಮಾತ್ರವೇ ಬರುವುದಿಲ್ಲ. ಅವುಗಳ ಹಿನ್ನೆಲೆಯಲ್ಲಿ ಧರ್ಮದ ಲೇಪನವಿರುತ್ತದೆ. ಆಯಾ ಕವಿಪ್ರತಿಭೆಗೆ ಅನುಗುಣವಾಗಿ ಅವು ಪುರಾಣಗಳಲ್ಲಿ ನಿರೂಪಿತಗೊಳ್ಳುತ್ತವೆ.

ಜಿನಸೇನಾಚಾರ್ಯರು ಪುರಾಣ ಕಥೆಗಳನ್ನು ಕುರಿತು ಹೀಗೆ ಹೇಳಿದ್ದಾರೆ :

ಧರ್ಮ, ಅರ್ಥ, ಕಾಮಗಳೆಂಬ ತ್ರಿವರ್ಗಗಳ ಕಥನವು ಮೋಕ್ಷವೆಂಬ ಪುರುಷಾರ್ಥಕ್ಕೆ ಉಪಯೋಗಿಯಾಗಿರುವುದರಿಂದ ಅದು ಕಥೆಯೆನಿಸುವುದು. ಆ ಮೂರರಲ್ಲಿಯೂ ಧರ್ಮ

ಸಂಬಂಧಿಯಾದ ಕಥೆಯನ್ನು ಬುದ್ಧಿವಂತರು ಸತ್ಕಥೆಯೆಂದು ಹೇಳುತ್ತಾರೆ. ಅರ್ಥಕಾಮಗಳು ಧರ್ಮದ ಫಲರೂಪವಾದ ಸ್ವರ್ಗಸುಖಕ್ಕೆ ಅಂಗರೂಪವಾಗಿರುವುದರಿಂದ ಆ ಅರ್ಥಕಾಮಗಳ ಕಥನವು ಧರ್ಮಕಥೆಯೆನಿಸುವುದು. ಹಾಗಲ್ಲದಿದ್ದರೆ ಪಾಪಾಸ್ರವಕ್ಕೆ ಕಾರಣವಾದ ಈ ಅರ್ಥಕಾಮಗಳ ಕಥೆಯು ವಿಕಥೆಯೆನಿಸುವುದು. ಯಾವುದರಿಂದ ಸ್ವರ್ಗ ಮೋಕ್ಷ ಸುಖ ಪ್ರಾಪ್ತಿಯು ನಿಶ್ಚಯವಾಗಿರುವುದೋ ಅದು ಧರ್ಮವೆನಿಸುವುದು (I, ೧೧೮-೧೨೦).

ಧರ್ಮಕಥೆಯಲ್ಲಿ ನಾಲ್ಕು ವಿಭಾಗಗಳನ್ನು ಹೇಳಲಾಗಿದೆ. ಆಕ್ಷೇಪಿಣಿ, ವಿಕ್ಷೇಪಿಣಿ, ಸಂವೇದಿನಿ ಮತ್ತು ನಿರ್ವೇದಿನಿ. ಮನಸ್ಸಿಗೆ ಅನುಕೂಲವಾದದ್ದು ಆಕ್ಷೇಪಿಣಿ; ಮಿಥ್ಯಾತ್ವ ಖಂಡನೆಯುಳ್ಳದ್ದು ವಿಕ್ಷೇಪಿಣಿ; ಪುಣ್ಯದ ಫಲರೂಪಗಳನ್ನು ವಿವರಿಸುವುದು ಸಂವೇದಿನಿ; ವೈರಾಗ್ಯೋತ್ಪತ್ತಿಯನ್ನು ವಿವರಿಸುವುದು ನಿರ್ವೇದಿನಿ.

ಕಥೆಗಳಲ್ಲಿ ಚರಿತಕಥೆ ಮತ್ತು ಕಲ್ಪಿತ ಕಥೆ ಎಂಬ ಎರಡು ಪ್ರಕಾರಗಳಿವೆ ಎಂದು ಸಂಘದಾಸನು 'ವಸುದೇವಹಿಂಡಿ'ಯಲ್ಲಿ ಹೇಳಿದ್ದಾನೆ. ಚರಿತಕಥೆಯಲ್ಲಿ ಸಾಮಾನ್ಯವಾಗಿ ಅನುಭವಿಸಿ ಮತ್ತು ಪ್ರತ್ಯಕ್ಷವಾಗಿ ಕೇಳಿದ ಧರ್ಮಾರ್ಥಕಾಮಗಳನ್ನು ವರ್ಣಿಸುವ ವಿಷಯಗಳಿರುತ್ತವೆ. ಆದರೆ ಕಲ್ಪಿತ ಕಥೆಯು ಸ್ವಬುದ್ಧಿ ಕುಶಲತೆಯಿಂದ ರಚಿಸಿದುದಾಗಿದೆ ಎಂದು ಹೇಳಿದ್ದಾನೆ.

ಅತ್ಯಂತ ದೊಡ್ಡ ಕಥೆಯಿಂದ ಹಿಡಿದು ಚಿಕ್ಕ ಚಿಕ್ಕ ಕಥೆಗಳೂ ಸಹ ಪುರಾಣಗಳಲ್ಲಿ ಕಂಡುಬರುತ್ತವೆ. ಪುರಾಣವೆಂಬ ಮಹಾಕಥೆಯ ಒಳಗೆ ಹೆಣೆದುಕೊಂಡು ಬರುವ ಕಥೆಗಳು ಹಲವಾರು. ಇದಕ್ಕೆ ಭವಾವಳಿ ನಿರೂಪಣೆ ಸಹ ಕಾರಣವಾಗಿ ಬರುತ್ತದೆ. ಪರಮ ಜಿನ-ಧರ್ಮವನ್ನು ನಂಬದೆ ಕುಗತಿಯನ್ನು ಮೇಲಿಂದ ಮೇಲೆ ಪಡೆದುಕೊಂಡವರ ಕಥೆ, ಪುಣ್ಯವಿಶೇಷದಿಂದ ಮೇಲಿಂದ ಮೇಲೆ ಸ್ವರ್ಗವನ್ನು ಪಡೆದುಕೊಂಡವರ ಕಥೆ ಇವೆಲ್ಲವೂ ಜೈನಪುರಾಣಗಳ ತುಂಬಾ ಸಿಗುತ್ತವೆ. ಇವೆಲ್ಲಕ್ಕಿಂತ ಹೆಚ್ಚಾಗಿ ಭವವಾರಿಧಿಯನ್ನು ದಾಟಿದ ಸಿದ್ಧರ ಉಪದೇಶಾಮೃತವನ್ನು ನೀಡಿ ತೀರ್ಥಂಕರರೆನಿಸಿದ ಸಿದ್ಧಪುರುಷರ ಕಥೆಗಳು ಜೈನ ಪುರಾಣಗಳಲ್ಲಿ ಪ್ರಮುಖವಾಗಿ ಬರುತ್ತವೆ.

**ಪಂಚ ಕಲ್ಯಾಣಗಳು** : ಚರಮದೇಹಿಗಳೂ ಉಪದೇಶ ನಿರೂಪಕರೂ ಆದ ತೀರ್ಥಂಕರರು ಈ ಭೂಮಿಯಲ್ಲಿ ಹುಟ್ಟಿ ಉಪದೇಶಾಮೃತವನ್ನು ನೀಡಿ ಕೇವಲಜ್ಞಾನಿಗಳಾಗಿರುವವರೆಗಿನ ಹಂತಗಳನ್ನು ಜೈನಪುರಾಣಗಳು ಪಂಚ ಕಲ್ಯಾಣದ ಅಚ್ಚಿನಲ್ಲಿ ಹಿಡಿದಿಡುತ್ತವೆ. ಭವಾವಳಿಗಳಲ್ಲಿ ಕಂಡುಬರುವ ವೈವಿಧ್ಯ ಇಲ್ಲಿ ಇಲ್ಲ. ಈ ಪಂಚ ಕಲ್ಯಾಣಗಳು ಎಲ್ಲ ತೀರ್ಥಂಕರರಿಗೂ ಸಮಾನವಾಗಿ ನಡೆಯುತ್ತವೆ. ಪಂಚ ಕಲ್ಯಾಣಗಳ ಅರ್ಹತೆ ತೀರ್ಥಂಕರರಿಗೆ ಮಾತ್ರ. ನಾಮ, ರೂಪ, ಆಯುಷ್ಯ, ವಂಶ, ಗೋತ್ರಾದಿ ವಿವರಗಳನ್ನುಳಿದು, ಮಿಕ್ಕ ಅಂಶಗಳು ಒಂದೇ ರೀತಿಯಲ್ಲಿ ಇರುತ್ತವೆ.

ತೀರ್ಥಂಕರನಾಗುವ ಜೀವ ಪುಣ್ಯಜೀವ; ಈ ಜೀವ ಗರ್ಭದಲ್ಲಿ ಬಂದಾಗಿನಿಂದ ಮೋಕ್ಷಕ್ಕೆ ಹೋಗುವ ತನಕ—ಗರ್ಭ, ಜನ್ಮ, ದೀಕ್ಷೆ, ಕೇವಲಜ್ಞಾನ, ಮೋಕ್ಷ—ಈ ಐದು ವಿಶೇಷ ಪ್ರಸಂಗಗಳಲ್ಲಿ ಸ್ವರ್ಗದೊಳಗಿನ ಇಂದ್ರರು ಬಂದು ಮಾಡುವ ಪರಮೋತ್ಸವಕ್ಕೆ ಕಲ್ಯಾಣವೆನ್ನುತ್ತಾರೆ. ಇವು ಅವರ ಬದುಕಿನ ಮಂಗಲ ಕಾರ್ಯಗಳು.

ತೀರ್ಥಂಕರನಾಗುವ ಆತ್ಮವು ಕೊನೆಯ ಗರ್ಭದಲ್ಲಿ ಜನಿಸುವ ಆರು ತಿಂಗಳ ಪೂರ್ವಭಾವಿಯಾಗಿ ಇಂದ್ರನು ಸ್ವರ್ಗದಿಂದ ಕುಬೇರನನ್ನು ತೀರ್ಥಂಕರ ಜನ್ಮಕ್ಷೇತ್ರವನ್ನು ವೈಭವಪೂರ್ಣಗೊಳಿಸಲು ಕಳುಹಿಸುತ್ತಾನೆ. ರತ್ನವೃಷ್ಟಿ ಪ್ರಾರಂಭವಾಗುತ್ತದೆ. ದೇವ ಲೋಕದ ಸ್ತ್ರೀಯರು ಮಾತೆಯ ಸೇವೆಗೆ ನಿಲ್ಲುತ್ತಾರೆ. ಮಾತೆಗೆ ಗರ್ಭಧಾರಣೆಯ ಪೂರ್ವಭಾವಿಯಾಗಿ ಹದಿನಾರು ಸ್ವಪ್ನಗಳು ಬೀಳುತ್ತವೆ.

ಸ್ವಪ್ನಗಳು ಕೇವಲ ನಿದ್ರೆಯ ಸ್ವಪ್ನಾವಸ್ಥೆಯಲ್ಲಿ ಸುಳಿದುಹೋಗುವ ಚಿತ್ರಾವಳಿಗಳಲ್ಲ. ಮನಶ್ಶಾಸ್ತ್ರಜ್ಞರು ಕನಸುಗಳನ್ನು ಮಾನವನ ಸುಪ್ತ ಬಯಕೆಯ ವಿಚಾರಾಂಶಗಳೆಂದು ಸ್ಪಷ್ಟಪಡಿಸುವರು. ಅಲ್ಲದೆ ಇವು ಕೆಲವು ಮುನ್ಸೂಚನೆಗಳನ್ನೂ ಸಹ ನೀಡುವ ಅಂಶಗಳಾ ಗಿವೆ, ಶುಭಾಶುಭ ಫಲಗಳನ್ನು ಸೂಚಿಸುತ್ತವೆ ಎಂಬುದನ್ನು ನಾವು ಪರಂಪರಾನುಗತವಾಗಿ ನಂಬಿಕೊಂಡು ಬಂದಿದ್ದೇವೆ.

ಜಿನೇಂದ್ರ ಜನನಿ ಹದಿನಾರು ಸ್ವಪ್ನಗಳನ್ನು ರಾತ್ರಿಯ ಅಂತಿಮ ಪ್ರಹರದಲ್ಲಿ ಕಂಡ ನಂತರ ತನ್ನ ಪತಿಯಿಂದ ಅವುಗಳ ಫಲಗಳನ್ನು ಕೇಳಿ ತಿಳಿಯುತ್ತಾಳೆ. ಗಜೇಂದ್ರ, ವೃಷಭ, ಸಿಂಹ, ಲಕ್ಷ್ಮಿ, ಎರಡು ಮಂದಾರ ಪುಷ್ಪಮಾಲಿಕೆಗಳು, ಚಂದ್ರಬಿಂಬ, ಸೂರ್ಯಬಿಂಬ, ಎರಡು ಮೀನುಗಳು, ಬಂಗಾರದ ಎರಡು ಕಲಶಗಳು, ಕಮಲ ಸರೋವರ, ರತ್ನಗಳ ಸಮುದ್ರ, ಬಂಗಾರದ ಸಿಂಹಪೀಠ, ದೇವವಿಮಾನ, ನಾಗೇಂದ್ರ ಭವನ, ರತ್ನರಾಶಿ, ಪ್ರಕಾಶಿಸುತ್ತಿರುವ ಅಗ್ನಿ—ಇವು ಸ್ವಪ್ನದಲ್ಲಿ ಕಾಣುವ ಶುಭ ದೃಶ್ಯಗಳು. ಇವುಗಳ ಫಲ ವೆಂದರೆ, ತ್ರಿಭುವನ ಪತಿಯಾಗುವವನೂ ತ್ರಿಲೋಕ ಶ್ರೇಷ್ಠನಾದ ಧರ್ಮಾತ್ಮನೂ ಪರಾ ಕ್ರಮಶಾಲಿಯೂ ಯಶೋನಿಧಿಯೂ ಮೋಹವೆಂಬ ಕತ್ತಲೆಯನ್ನು ನಿವಾರಿಸುವವನೂ ಭವ್ಯರೆಂಬ ಕಮಲಗಳಿಗೆ ಪ್ರತಿಬೋಧಿಸುವವನೂ ಅನಂತ ಸುಖವನ್ನು ಪಡೆಯುವವನೂ ಸಂಸಾರಸಾಗರವನ್ನು ದಾಟುವವನೂ ಉತ್ಕೃಷ್ಟ ಮಂಗಲಮಯ ದೇಹವುಳ್ಳವನೂ ಜೀವಿ ಗಳ ತೃಷ್ಣೆಯನ್ನು ಹೋಗಲಾಡಿಸಿ ಸುಖವನ್ನು ನೀಡುವವನೂ ಜ್ಞಾನಾರಾಧಕನಾದ ಸರ್ವಜ್ಞ ನಾಗುವವನೂ ಅತ್ಯಂತ ಉತ್ಕೃಷ್ಟವಾದ ಮೋಕ್ಷಪದವನ್ನು ಅಲಂಕರಿಸುವವನೂ ಸ್ವರ್ಗ ದಿಂದಿಳಿದು ಬಂದು ಜನ್ಮತಾಳುವವನೂ ಅವಧಿ ಜ್ಞಾನಲೋಚನನಾಗುವವನೂ ಅನಂತ ಗುಣನಿಧಿಯಾದವನೂ ಸಮಸ್ತ ಕರ್ಮಕ್ಷಯ ಮಾಡುವವನೂ ಆದ ಪುತ್ರನು ಜನಿಸುವ ನೆಂಬುದೇ ಆಗಿದೆ.

ದೇವತೆಗಳು ಮೂರು ಲೋಕದ ಒಡೆಯನಾಗುವ ಭಗವಂತನು ಗರ್ಭಕ್ಕೆ ಅವತರಿಸು ವನೆಂದು ತಿಳಿದು ಗರ್ಭಾವತರಣ ಕಲ್ಯಾಣವನ್ನು ನಡೆಸುವರು. ಗರ್ಭಶೋಧ ಮಾತೆಯ ಸೇವೆ ಮೊದಲಾದ ಕ್ರಿಯೆಗಳನ್ನೂ ಅವರು ನಡೆಸುವರು.

ತೀರ್ಥಂಕರತ್ವವನ್ನು ಪಡೆದ ಮಗುವಿನ ಜನನಸೂಚಕವಾಗಿ ಇಂದ್ರನ ಆಸನವು ಕಂಪಿಸುವುದು. ಇಂದ್ರನು ಐರಾವತವನ್ನೇರಿ ಪರಿವಾರ ಸಮೇತ ಸಂಭ್ರಮಗೊಂಡು ಬರು ವನು. ಇಂದ್ರಾಣಿಯು ಮಾಯಾಶಿಶುವನ್ನು ತಾಯಿಯ ಪಕ್ಕದಲ್ಲಿರಿಸಿ, ನಿಜಶಿಶುವನ್ನು ಪ್ರಸೂತಿ-ಗೃಹದಿಂದ ತರುವಳು. ದೇವತೆಗಳು ಮೇರು ಪರ್ವತದ ಮೇಲೆ ಪಾಂಡುಕ ಶಿಲೆಯಲ್ಲಿ ಜಿನ ಬಾಲಕನನ್ನು ಕುಳ್ಳಿರಿಸಿ, ಕ್ಷೀರ ಸಮುದ್ರದಿಂದ ಸುವರ್ಣ ಕಲಶವನ್ನು ತುಂಬಿಕೊಂಡು ತಂದು ಅಭಿಷೇಕವನ್ನು ಮಾಡುವರು.

ತೀರ್ಥಂಕರತ್ತ್ವವನ್ನು ಪಡೆದ ಆತ್ಮವು ತೀರ್ಥೋಪದೇಶದ ಅರ್ಹತೆಗೆ ಪೂರ್ವಭಾವಿಯಾಗಿ ಕೆಲವು ಸಂಸ್ಕಾರಗಳನ್ನು ಪಡೆದುಕೊಳ್ಳಬೇಕು. ಇನ್ನುಳಿದ ಪುಣ್ಯಕರ್ಮಗಳಿಂದಲೂ ಸಹ ಸಂಪೂರ್ಣ ಬಿಡುಗಡೆಯನ್ನು ಹೊಂದಬೇಕು. (ಆಯುಷ್ಯ, ನಾಮ, ಗೋತ್ರ, ವೇದನೀಯವೆಂಬ ಅಘಾತಿ ಕರ್ಮಗಳನ್ನುಳಿದು ತೀರ್ಥಂಕರರಿಗೆ ಉಳಿದ ಕರ್ಮಗಳು ಸಂಪೂರ್ಣವಾಗಿ ನಾಶವಾಗುತ್ತವೆ). ತೀರ್ಥಂಕರತ್ತ್ವವನ್ನು ಪಡೆದ ಆತ್ಮರು ಶ್ರಾವಕ ಧರ್ಮವನ್ನು ಪರಿಪಾಲಿಸುತ್ತ ಬರುವರು. ವಯಸ್ಸಿಗೆ ಬಂದನಂತರ ವೈರಾಗ್ಯವನ್ನು ಪಡೆಯುವರು. ಇವರನ್ನು ವೈರಾಗ್ಯದಲ್ಲಿ ಸ್ಥಿರವಾಗಿ ನಿಲ್ಲಿಸಲು ಲೋಕಾಂತಿಕ ದೇವತೆಗಳು ಬರುವರು. ಈ ಸಂದರ್ಭದಲ್ಲಿ ನಡೆಸುವ ವಿಧಿಗಳಿಗೆ ದೀಕ್ಷಾಕಲ್ಯಾಣವೆನ್ನುವರು.

ತಪೋನಿರತನಾಗಿ ಅನಂತಜ್ಞಾನ, ಅನಂತದರ್ಶನ, ಅನಂತವೀರ್ಯ, ಅನಂತ ಸುಖವನ್ನು ಪಡೆದಾಗ ಆತ್ಮನು ಅರ್ಹಂತ ಅವಸ್ಥೆಯನ್ನು ಪಡೆಯುವನು. ತೀರ್ಥಂಕರತ್ತ್ವದ ಮಹಿಮೆಯಿಂದ ಜೀವಕೋಟಿಗಳಿಗೆ ಉಪದೇಶವನ್ನು ನೀಡಲು ಅರ್ಹನಾಗುವನು. ಈ ಸಂದರ್ಭದಲ್ಲಿ ಕುಬೇರನು ಸಮವಸರಣವನ್ನು ರಚಿಸುವನು.

ತೀರ್ಥಂಕರರು ಕೇವಲಜ್ಞಾನದಿಂದ ಗಳಿಸಿಕೊಂಡ ಜ್ಞಾನವನ್ನು ದಿವ್ಯಧ್ವನಿಯ ಮೂಲಕ ಯಥಾವತ್ತಾಗಿ ಜೀವಿಗಳಿಗೆ ಹಿತವಾಗುವಂತೆ ಉಪದೇಶಿಸುವರು. ಅನಂತರ ಅಘಾತಿ ಕರ್ಮಗಳನ್ನು ನಾಶಮಾಡಿ ಮೋಕ್ಷಕ್ಕೆ ಹೋಗುವರು. ತೀರ್ಥಂಕರರ ಮೋಕ್ಷ ಪ್ರಸಂಗದಲ್ಲಿ ಮಾಡುವ ಉತ್ಸವವೇ ನಿರ್ವಾಣ ಕಲ್ಯಾಣ.

ಭವ-ಭವಗಳ ಕೋಟಲೆಗಳಿಗೆ ಸಿಲುಕಿದ ಜೀವ ಅವುಗಳಿಂದ ಬಿಡುಗಡೆಯನ್ನು ಹೊಂದಿದ ಬಳಿಕ ಅದೆಷ್ಟು ಪವಿತ್ರ! ಇದರ ಮಹಿಮೆಯನ್ನು ತಿಳಿಸಲೆಂದೇ ಪಂಚಕಲ್ಯಾಣಗಳನ್ನು ಜೈನ ಪುರಾಣಗಳೆಲ್ಲವೂ ವಿವರಿಸುತ್ತವೆ.

**ಸಮವಸರಣ** : ತೀರ್ಥಂಕರರಿಗೆ ಕೇವಲಜ್ಞಾನವು ಉತ್ಪನ್ನವಾದ ಮೇಲೆ ಇಂದ್ರನ ಆಜ್ಞೆಯಿಂದ ಕುಬೇರನು ಸಮವಸರಣದ ರಚನೆಯನ್ನು ಮಾಡುವನು. ಇದು ತೀರ್ಥಂಕರರು ಧರ್ಮೋಪದೇಶ ಮಾಡುವ ಸಭಾಭವನ.

ಸಮವಸರಣದ ರಚನೆಯು ಸುಮಾರು ಹನ್ನೆರಡು ಯೋಜನ ಆಯಾಮದಲ್ಲಿ ಸೂರ್ಯಮಂಡಲ ಸಮವಾಗಿ ಗೋಲಾಕಾರವಾಗಿರುತ್ತದೆ. ಇದರ ಪೀಠ ಬಹಳ ಎತ್ತರ. ಅಲ್ಲಿಯವರೆಗೆ ತಲಪಬೇಕಾದರೆ ಸಮವಸರಣ ಭೂಮಿಯಿಂದ ನಾಲ್ಕು ದಿಕ್ಕುಗಳಲ್ಲಿ ಒಂದೊಂದು ಮೊಳ ಎತ್ತರದ ಎರಡುಸಾವಿರ ಮೆಟ್ಟಿಲುಗಳನ್ನು ನಿರ್ಮಿಸಬೇಕಾಗುತ್ತದೆ. ಅಲ್ಲಿಂದ ಮುಂದೆ ವೀಧಿಗಳು ಇರುತ್ತವೆ. ಅವುಗಳ ಎರಡೂ ಮಗ್ಗುಲಿಗೆ ವೇದಿಕೆಗಳನ್ನು ರಚಿಸಿರುತ್ತಾರೆ. ಆಮೇಲೆ ಹೊರಗಿನ ಧೂಲಿಶಾಲ ಎಂಬ ಕೋಟೆಯು ಇರುತ್ತದೆ. ಅದರ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ವಿಜಯ, ವೈಜಯಂತ, ಜಯಂತ ಮತ್ತು ಅಪರಾಜಿತ ಎಂಬ ಹೆಸರಿನ ಗೋಪುರದ್ವಾರಗಳಿರುತ್ತವೆ. ಈ ಗೋಪುರಗಳು ಮೂರು ಭೂಮಿಗಳುಳ್ಳವು. ಇವು ಅಟ್ಟಾಲಿಕೆಗಳುಳ್ಳವುಗಳಾಗಿ ರಮಣೀಯವಾಗಿರುತ್ತವೆ. ಅವುಗಳ ಬಾಹ್ಯ, ಮಧ್ಯ, ಒಳಗಿನ ಭಾಗಗಳಲ್ಲಿ ಮಂಗಲದ್ರವ್ಯನಿಧಿ, ಧೂಪಘಟಗಳಿಂದ ಕೂಡಿದ ದೊಡ್ಡ ಪುತ್ತಳಿಗಳನ್ನು ನಿರ್ಮಿಸಲಾಗಿರುತ್ತದೆ. ಗೋಪುರಗಳ ಬಾಹ್ಯ ಭಾಗದಲ್ಲಿ ಮಕರ ತೋರಣಗಳೂ ಒಳಭಾಗದಲ್ಲಿ ರತ್ನತೋರಣಗಳೂ ಇರುತ್ತವೆ. ಈ ಗೋಪುರಗಳ ದ್ವಾರಪಾಲಕರು

ಜ್ಯೋತಿಷ್ಕ ದೇವತೆಗಳಾಗಿರುತ್ತಾರೆ. ಕೋಟೆಯ ಒಳಗೆ ಹೋದಮೇಲೆ ಒಂದೊಂದು ಜಿನಭವನದ ಅಂತರಾಳದಿಂದ ಐದೈದು ಚೈತ್ಯ ಪ್ರಾಸಾದಗಳು ದೊರೆಯುತ್ತವೆ. ಇವು ಉಪವನ ಮತ್ತು ವಾಪಿಕೆಗಳಿಂದ ಶೋಭಿಸುತ್ತವೆ. ಹಾಗೆಯೇ ವೀಥಿಗಳ ಎರಡೂ ಪಾರ್ಶ್ವಭಾಗಗಳಲ್ಲಿ ಎರಡೆರಡು ನಾಟ್ಯಶಾಲೆಗಳು ಶರೀರಾಕೃತಿಯ ಹನ್ನೆರಡು ಪಟ್ಟು ಎತ್ತರವಾಗಿರುತ್ತವೆ. ಒಂದೊಂದು ನಾಟ್ಯಶಾಲೆಯಲ್ಲಿ ೩೨ ರಂಗಭೂಮಿಗಳಿರುತ್ತವೆ.

ಮಾರ್ಗಗಳ ನಟ್ಟನಡುವೆ ಒಂದೊಂದು ಮಾನಸ್ತಂಭಗಳು ಸ್ಥಾಪಿತವಾಗಿರುತ್ತವೆ. ಇವು ಆಕಾರದಲ್ಲಿ ಗೋಲ ಮತ್ತು ನಾಲ್ಕು ಗೋಪುರ ದ್ವಾರಗಳೂ ಧ್ವಜ ಪತಾಕೆಗಳೂ ಇರುವ ಒಂದೊಂದು ಕೋಟೆಯಿಂದ ಸುತ್ತುವರಿದಿರುತ್ತವೆ. ಮಾನಸ್ತಂಭವು ಕ್ರಮವಾಗಿ ಚಿಕ್ಕಚಿಕ್ಕ ದಾಗುತ್ತ ಹೋಗುವಂಥ ಮೂರು ಗೋಲಾಕಾರ ಪೀಠಗಳ ಮೇಲೆ ಸ್ಥಾಪಿತನಾಗಿರುತ್ತದೆ. ಮಾನಸ್ತಂಭವು ಮೂರು ಖಂಡಗಳಲ್ಲಿ ವಿಭಾಜಿತವಾಗಿದ್ದು ಅದರ ಮೇಲ್ಭಾಗದಲ್ಲಿ ಜಿನೇಂದ್ರಪ್ರತಿಮೆ ಇರುತ್ತದೆ. ಪ್ರತಿಯೊಂದು ಮಾನಸ್ತಂಭದ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ಒಂದೊಂದು ವಾಪಿಕೆಗಳಿರುತ್ತವೆ. ಮಾನಸ್ತಂಭದ ದರ್ಶನಮಾತ್ರದಿಂದ ದರ್ಶಕನ ಮದ ದೂರವಾಗಿ, ಆತನ ಮನಸ್ಸಿನಲ್ಲಿ ಧಾರ್ಮಿಕ ಶ್ರದ್ಧೆ ಉಂಟಾಗುತ್ತದೆ.

ಸಮವಸರಣದ ಮುಂದಿನ ವನಭೂಮಿಗಳಲ್ಲಿ ಅಶೋಕ, ಸಪ್ತಚ್ಛದ, ಚಂಪಕ ಮತ್ತು ಆಮ್ರ ಈ ನಾಲ್ಕು ಚೈತ್ಯವೃಕ್ಷಗಳು ಇರುತ್ತವೆ. ಪ್ರತಿಯೊಂದು ಚೈತ್ಯವೃಕ್ಷವನ್ನಾಶ್ರಯಿಸಿ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ನಾಲ್ಕು ಜಿನಪ್ರತಿಮೆಗಳು ಇರುತ್ತವೆ. ವನಭೂಮಿಯ ವೀಥಿಯ ಮಧ್ಯದಲ್ಲಿ ಜಿನಪ್ರತಿಮೆಯನ್ನೊಳಗೊಂಡ ಒಂಬತ್ತು-ಒಂಬತ್ತು ಸ್ತೂಪಗಳಿರುತ್ತವೆ.

ಸಮವಸರಣದ ನಟ್ಟನಡುವೆ ಗಂಧಕುಟಿ ಮತ್ತು ಅದರ ಸಮೀಪದಲ್ಲಿ ಗೋಲಾಕಾರವಾಗಿರುವ ಹನ್ನೆರಡು ಶ್ರೀಮಂಟಪಗಳಿರುತ್ತವೆ. ಧರ್ಮೋಪದೇಶದ ಸಮಯದಲ್ಲಿ ಇವುಗಳಲ್ಲಿ ಗಣಧರರು, ಚತುರ್ನಿಕಾಯ ದೇವತೆಗಳು, ಮುನಿ, ಆರ್ಯಿಕೆಯರು, ಶ್ರಾವಕ, ಶ್ರಾವಿಕೆಯರು, ತಿರ್ಯಂಚ ಜೀವಗಳು ಕೂರುತ್ತಾರೆ.

ಶ್ರೀಮಂಟಪದ ಮಧ್ಯದಲ್ಲಿ ನಟ್ಟನಡುವೆ ಮೂರು ಪೀಠಗಳ ಮೇಲೆ ಗಂಧಕುಟಿಯ ರಚನೆಯಾಗಿರುತ್ತದೆ. ಗಂಧಕುಟಿಯ ಮಧ್ಯದಲ್ಲಿ ಉತ್ತಮ ಸಿಂಹಾಸನವಿರುತ್ತದೆ. ಇದರ ಮೇಲೆ ತೀರ್ಥಂಕರರು ವಿರಾಜಮಾನರಾಗಿದ್ದು ಧರ್ಮೋಪದೇಶವನ್ನು ಮಾಡುತ್ತಾರೆ.[೨೭]

**ಚಕ್ರವರ್ತಿಗಳ ದಿಗ್ವಿಜಯ; ಮುಕ್ಕೂಟದವರ ಕಥೆ :** ತೀರ್ಥಂಕರ ಚರಿತ್ರೆಯಂತೆಯೇ ಚಕ್ರವರ್ತಿಗಳ ದಿಗ್ವಿಜಯ, ಬಲದೇವ, ವಾಸುದೇವ, ಪ್ರತಿವಾಸುದೇವರ ಕಥೆ ಆಯಾ ತೀರ್ಥಂಕರರಿಗೆ ಅನುಸಾರವಾಗಿ ಬರುತ್ತದೆ.

ತೀರ್ಥಂಕರ ಚರಿತ್ರೆಯಂತೆಯೇ ಚಕ್ರವರ್ತಿಗಳ ಚರಿತ್ರೆ ಕೂಡ ಒಂದೇ ಅಚ್ಚಿನದು. ಅಲ್ಲಿ ಕಂಡುಬರುವ ಮುಖ್ಯ ವಿವರಗಳು ಹೀಗಿವೆ. ಚಕ್ರವರ್ತಿಯಾಗುವ ಪುಣ್ಯವಂತನಾದ ರಾಜನ ಆಯುಧಾಗಾರದಲ್ಲಿ ಚಕ್ರರತ್ನ ಹುಟ್ಟುತ್ತದೆ. ಕೋಶಾಗಾರದಲ್ಲಿ ಮಣಿರತ್ನ, ಚರ್ಮ (ಗುರಾಣಿ) ರತ್ನ, ಕಾಕಿಣೀ ರತ್ನಗಳು ಹುಟ್ಟುತ್ತವೆ. ಇವುಗಳಲ್ಲದೆ ಗೃಹಪತಿ, ಸೇನಾಪತಿ, ಸ್ಥಪತಿ, ಪುರೋಹಿತ, ಸ್ತ್ರೀರತ್ನಗಳೂ ಗಜರತ್ನ ಅಶ್ವರತ್ನಗಳೂ ಆತನಿಗೆ ದೊರೆಯುತ್ತವೆ. ಚಕ್ರರತ್ನಕ್ಕೆ ಪೂಜೆಮಾಡಿ, ಪೂರ್ವ, ದಕ್ಷಿಣ, ಉತ್ತರ, ಪಶ್ಚಿಮ ಖಂಡ

ಗಳನ್ನು, ಹಿಮವತ್ಪರ್ವತದ ಮಧ್ಯಮಕೂಟ ಭಾಗವನ್ನು, ವಿಜಯಾರ್ಧ ಪರ್ವತವನ್ನು ಗೆದ್ದು ಷಟ್ಖಂಡ ಭರತ ಮಂಡಲದ ವಿಜಯಿಯಾಗುತ್ತಾನೆ. ದೇವಾಧಿದೇವತೆಗಳಿಂದ ಪಟ್ಟಾಭಿಷೇಕವನ್ನು ಮಾಡಿಸಿಕೊಂಡು, ಮಹಾವೈಭವದಿಂದ ರಾಜ್ಯಭಾರ ಮಾಡುತ್ತಾನೆ.

ಬಲದೇವ, ವಾಸುದೇವ, ಪ್ರತಿವಾಸುದೇವರ ಕಥೆಯಲ್ಲಿ ಇಷ್ಟು ಸಾಮ್ಯವಿಲ್ಲ. ಬಲದೇವ ವಾಸುದೇವರಿಬ್ಬರೂ ಅಣ್ಣತಮ್ಮಂದಿರು. ಪ್ರತಿವಾಸುದೇವ ಅವರನ್ನು ಎದುರಿಸುವ ದುಷ್ಟನಾಯಕ. ಅವನು ಅರ್ಧ ಚಕ್ರವರ್ತಿ (ಮೂರು ಖಂಡಗಳನ್ನು ಮಾತ್ರ ಗೆದ್ದಿರುವವನು). ತಮ್ಮ ತಮ್ಮೊಳಗೆ ಏಳುವ ಹೋರಾಟದಲ್ಲಿ ಪ್ರತಿವಾಸುದೇವನು ವಾಸುದೇವನ ಮೇಲೆ ತನ್ನ ಚಕ್ರವನ್ನು ಪ್ರಯೋಗಿಸುತ್ತಾನೆ. ಆದರೆ ಆ ಚಕ್ರ ವಾಸುದೇವನನ್ನು ಘಾತಿಸದೆ ಓಲೈಸುತ್ತದೆ. ಅದೇ ಚಕ್ರವನ್ನು ಅವನು ಪ್ರಯೋಗಿಸಿದಾಗ ಪ್ರತಿವಾಸುದೇವ ತನ್ನ ಚಕ್ರದಿಂದಲೇ ಮಡಿಯುತ್ತಾನೆ. ಈ ಮುಕ್ಕೂಟ ವೀರರ ಕಥೆಗಳ ಹೋಲಿಕೆ ಇಷ್ಟೇ.

**ಲೋಕಾಕಾರ, ಕಾಲವಿಭಜನೆ ಮತ್ತು ಮನುಕುಲೋತ್ಪತ್ತಿ** : ಲೋಕಾಕಾರವು ಜೈನ ಪುರಾಣದ ಪ್ರವೇಶಿಕೆಯಾಗಿ ಬರುತ್ತದೆ. ಅದರಲ್ಲಿ ಊರ್ಧ್ವ-ಮಧ್ಯಮ ಅಧೋಲೋಕಗಳ ವರ್ಣನೆ ಬರುತ್ತದೆ. (ವಿವರಗಳಿಗೆ ನೋಡಿ ಪು. ೭-೮).

ಜೈನ ಪುರಾಣಗಳು ಕಾಲವನ್ನು ಉತ್ಸರ್ಪಿಣಿ ಮತ್ತು ಅವಸರ್ಪಿಣಿ ಎಂದು ಎರಡು ಮುಖ್ಯಭಾಗಗಳಾಗಿ ವಿಂಗಡಿಸಿವೆ. ಉತ್ಸರ್ಪಿಣೆಯಲ್ಲಿ ಸುಖ ಆಯುಷ್ಯಾದಿಗಳು ಹೆಚ್ಚುತ್ತಾ ಹೋದರೆ ಅವಸರ್ಪಿಣೆಯಲ್ಲಿ ಕಡಿಮೆಯಾಗುತ್ತಾ ಹೋಗುತ್ತವೆ. ಈ ಒಂದೊಂದು ಕಾಲವೂ ಆರು ಭೇದಗಳಿಂದ ಕೂಡಿದೆ. ಸುಷಮ-ಸುಷಮ, ಸುಷಮ, ಸುಷಮ-ದುಷಮ, ದುಷಮ-ಸುಷಮ, ದುಷಮ, ದುಷಮ-ದುಷಮ.

ಕಾಲದಿಂದ ಕಾಲಕ್ಕೆ ಏರ್ಪಟ್ಟ ಸಮಸ್ಯೆಗಳಿಗೆ ಪರಿಹಾರವನ್ನು ಹುಡುಕಿಕೊಟ್ಟು, ಜನರು ನಿರ್ಭೀತಿಯಿಂದ ಬಾಳುವಂತೆ ಮಾಡಿದ ಮನುಗಳ ವೃತ್ತಾಂತವು ಇಲ್ಲಿ ಬರುತ್ತದೆ. ಪ್ರತಿಶ್ರುತಿ, ಸನ್ಮತಿ, ಕ್ಷೇಮಂಕರ, ಕ್ಷೇಮಂಧರ, ಸೀಮಂಕರ, ಸೀಮಂಧರ, ವಿಮಲವಾಹನ, ಚಕ್ಷುಷ್ಮಾನ್, ಯಶಸ್ವಾನ್, ಅಭಿಚಂದ್ರ, ಚಂದ್ರಾಭ, ಮರುದ್ದೇವ, ಪ್ರಸೇನಜಿತ್, ನಾಭಿರಾಜ—ಈ ಹದಿನಾಲ್ಕು ಮನುಗಳ ವಿವರಗಳು ಜೈನಪುರಾಣಗಳ ಅಂಗವಾಗಿ ಬರುತ್ತವೆ.

ಜೈನ ಪುರಾಣಗಳಲ್ಲಿ ಈ ಮೇಲಿನ ಕೆಲವು ಅಂಶಗಳು ಒಳಗೊಂಡಿದ್ದು, ಅವು ಜೈನಪುರಾಣಗಳ ಅವಿಭಾಜ್ಯ ಮತ್ತು ವಿಶಿಷ್ಟ ಅಂಗಗಳಾಗಿ ನಿರೂಪಿಸಲ್ಪಟ್ಟಿವೆ.

## ಟಿಪ್ಪಣಿಗಳು

೧. ವಿಜಯರಾಜೇಂದ್ರ ಸೂರಿ, 'ಅಭಿಧಾನ ರಾಜೇಂದ್ರ:' Vol. V, Jain Encyclopaedia, Prakrit Magadhi to Sanskrit.

೨. Vettam Mani, Pouranic Encyclopaedia–1, Motilal Banarasidas, 1975.

೩. ಎಸ್. ವಿದ್ಯಾಶಂಕರ, 'ವೀರಶೈವ ಪುರಾಣಗಳು', ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೨, ಪು. ೪.

೪. A. D. Pusalkar, 'Studies in the Epics and Puranas,' Bharatiya Vidya Bhavan, Bombay, 1951, p.22.

೫. ಆರ್. ಎನ್. ದಾಂಡೇಕರ್, ಲೇ. ಭಾರತೀಯ ಪುರಾಣ ಸಾಹಿತ್ಯ, 'ಯುಗಯಾತ್ರೀ ಭಾರತೀಯ ಸಂಸ್ಕೃತಿ' ಭಾಗ ೩, ಪ್ರಸಾರಾಂಗ, ಮೈಸೂರು ೧೯೭೧, ಪು. ೧೬೫.

೬. Vettam Mani, ಪೂರ್ವೋಕ್ತ.

೭. ಶ್ರೀ ಸಚ್ಚಿದಾನಂದ ಸರಸ್ವತೀ ಸ್ವಾಮಿ, ಛಾಂದೋಗ್ಯ ಉಪನಿಷತ್, (ಮೂಲ, ಅನು. ಟಿಪ್ಪಣಿ) vii. 1.24.

೮. James Hastings, Encyclopaedia of Religion and Ethics Vol. X.

೯. ಅದೇ.

೧೦. M. Winternitz, 'A History of Indian Literature'–I, Trans. Shilavati Ketkar, Calcuttta 1963.

೧೧. ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ ೨, ಮೈಸೂರು ೧೯೭೫, ಪುಟ ೨೨೧.

೧೨. ಅದೇ.

೧೩. Vettam Mani, ಪೂರ್ವೋಕ್ತ.

೧೪. ಸಿದ್ಧೇಶ್ವರೀ ನಾರಾಯಣರಾಯ್, 'ಪೌರಾಣಿಕ್ ಧರ್ಮ್ ಏವಂ ಸಮಾಜ್'.

೧೫. ಪಿ. ಎಲ್. ವೈದ್ಯ (ಸಂ.) ತಿಸಟ್ಠಿ ಮಹಾಪುರಿಸಗುಣಾಲಂಕಾರು (ಮಹಾಪುರಾಣಂ), ಭಾರತೀಯ ಜ್ಞಾನಪೀಠ, ನವದೆಹಲಿ, ೧೯೪೪, ಪು. ೪೭.

೧೬. A. D. Pusalkar, ಪೂರ್ವೋಕ್ತ, ಪು. ೩೫.

೧೭. ಅದೇ ಪು. ೨೫.

೧೮. ಕೆ. ಎಲ್. ಗೋಪಾಲಕೃಷ್ಣಯ್ಯ, 'ಕನ್ನಡ ಸಾಹಿತ್ಯದಲ್ಲಿ ಪುರಾಣಪ್ರಜ್ಞೆ', ಕ. ಸಾ. ಪ., ಬೆಂಗಳೂರು ೧೯೮೬, ಪು. ೫.

೧೯. ಎಂ. ಶಾಂತಿರಾಜಶಾಸ್ತ್ರಿ (ಸಂ. ಮತ್ತು ಅನು.) ಮಹಾಪುರಾಣ-1. ಕ. ಸಾ. ಪ., ಬೆಂಗಳೂರು ೧೯೮೧.

೨೦. ಪಿ. ಎಲ್. ವೈದ್ಯ, ಪೂರ್ವೋಕ್ತ.

೨೧. ಅದೇ.

೨೨. H. D. Velanakar, Jinarathna Kosha, Vol. I. Poona, 1944.

೨೩. ಜಿ. ಬ್ರಹ್ಮಪ್ಪ (ಅನು.) ಮಹಾಪುರಾಣ, ಹೊಂಬುಜ ಜೈನ ಮಠ, ಹೊಂಬುಜ ೧೯೮೫, ಪು. ೨೩-೨೪.

೨೪. ಬಿ. ಎಸ್. ಕುಲಕರ್ಣಿ, (ಸಂ.) ತ್ರಿಷಷ್ಟಿಲಕ್ಷಣ ಮಹಾಪುರಾಣ, ಧಾರವಾಡ, ೧೯೭೫, ಪ್ರಸ್ತಾವನೆ.

೨೫. ಜಿ. ಪಿ. ರಾಜರತ್ನಂ, ಜೈನಪುರಾಣಗಳಲ್ಲಿ ಭವಾವಳಿ, 'ಸಂಭಾವನೆ' ಕ. ಸಾ. ಪ., ಬೆಂಗಳೂರು, ೧೯೭೯, ಪು. ೨೩೭-೨೩೮.

೨೬. ಮಹಾಪುರಾಣ, ಸಂಪುಟ ೧, ಸಂ. ಎ. ಶಾಂತಿರಾಜಶಾಸ್ತ್ರಿ, ೧೯೮೧, ಕ. ಸಾ. ಪ. ಬೆಂಗಳೂರು, ಪರ್ವ ೨೨ (ಸಂಗ್ರಹ).

## ಅಧ್ಯಾಯ ೨

# ತೀರ್ಥಂಕರ ಪರಂಪರೆಯಲ್ಲಿ ಆದಿನಾಥನ ಸ್ಥಾನ, ಮಹತ್ತ್ವ

### ಜೈನಪುರಾಣಗಳಲ್ಲಿ ಆದಿನಾಥ ಚರಿತ್ರೆಗಳ ಮಹತ್ತ್ವ

ತೀರ್ಥಂಕರ ಚರಿತ್ರೆಗಳ ವಿಸ್ತೃತ ಬೆಳವಣಿಗೆಯಲ್ಲಿ ಆದಿತೀರ್ಥಂಕರನ ಚರಿತ್ರೆಗೆ ಅಗ್ರ ತಾಂಬೂಲ ಸಂದಿದೆ. ಜಿನಸೇನಾಚಾರ್ಯರು ಸಮಗ್ರವಾಗಿ ಮಹಾಪುರಾಣವನ್ನು 'ತ್ರಿಷಷ್ಟಿ ಶಲಾಕಾಪುರುಷ ಚರಿತೆ' ಎಂಬ ಹೆಸರಿನಿಂದ ಬರೆಯಲು ಆರಂಭಿಸಿದರು. ಆದರೆ ಆದಿ ಪುರಾಣದ ೧೨ ಸಾವಿರ ಶ್ಲೋಕಗಳ ಸಂಖ್ಯೆಯಲ್ಲಿ ೧೦,೩೮೦ ಶ್ಲೋಕಗಳನ್ನು ರಚಿಸಿ ಅವರು ಕಾಲವಶರಾದರು. ಉಳಿದ ೧೬೨೦ ಶ್ಲೋಕಗಳನ್ನು ಮತ್ತು ಉತ್ತರಪುರಾಣದ ೮೦೦೦ ಶ್ಲೋಕಗಳನ್ನು ಅವರ ಶಿಷ್ಯರಾದ ಗುಣಭದ್ರಾಚಾರ್ಯರು ರಚಿಸಿದ್ದಾರೆ. ಒಟ್ಟು ೭೭ ಸಂಧಿಗಳಲ್ಲಿ ೪೭ ಸಂಧಿಗಳು ಆದಿಪುರಾಣಕ್ಕೆ ಮೀಸಲು. ಹೇಮಚಂದ್ರನ 'ತ್ರಿಷಷ್ಟಿ ಶಲಾಕಾಪುರುಷ ಚರಿತ'ದ ಒಟ್ಟು ೧೧ ಪರ್ವಗಳಲ್ಲಿ ಮೊದಲ ಆರು ಅಧ್ಯಾಯಗಳಲ್ಲಿ ಆದಿತೀರ್ಥಂಕರನ ಚರಿತ್ರೆಯು ಬರುತ್ತದೆ. ಶೀಲಾಂಕನ 'ಚಉಪ್ಪನ್ನ ಮಹಾಪುರಿಸ ಚರಿಯಂ'ನಲ್ಲಿ ೫೪ ಅಧ್ಯಾಯಗಳಿದ್ದು, ಪ್ರತಿಯೊಂದರಲ್ಲಿಯೂ ಒಬ್ಬೊಬ್ಬ ಮಹಾ ಪುರುಷನ ಚರಿತ್ರೆಯು ಬರುತ್ತದೆ. ಚಂಪೂಶೈಲಿಯ ಈ ಕೃತಿಯಲ್ಲಿ ಆದಿ ತೀರ್ಥಂಕರರಿಗೆ ಸಂಬಂಧಿಸಿದ ಕತೆಯು ಭರತ ಚಕ್ರೇಶ್ವರನ ಚರಿತ್ರೆಯೊಂದಿಗೆ ೨೩೧ ಪದ್ಯಗಳಲ್ಲಿ ಬರುತ್ತದೆ. ಪುಷ್ಪದಂತನ 'ತಿಸಟ್ಠಿ ಮಹಾಪುರಿಸ ಗುಣಾಲಂಕಾರು'ವಿನಲ್ಲಿ ೧೦೨ ಸಂಧಿ ಗಳಿದ್ದು ೩೭ ಸಂಧಿಗಳಲ್ಲಿ ಆದಿತೀರ್ಥಂಕರನ ಚರಿತ್ರೆಯಿದೆ. ಅದು 'ಆದಿಪರ್ವ' ಅಥವಾ 'ಆದಿಪುರಾಣ'ದ ರೂಪದಲ್ಲಿ ಪ್ರಸಿದ್ಧವಾಗಿದೆ. ಚಾಮುಂಡರಾಯನ'ತ್ರಿಷಷ್ಟಿ ಲಕ್ಷಣ ಮಹಾಪುರಾಣಂ'ನಲ್ಲಿ ತಕ್ಕಮಟ್ಟಿಗೆ ವಿಸ್ತಾರವಾಗಿ ಆದಿಪುರಾಣದ ಭಾಗವು ಬರುತ್ತದೆ. ಉಳಿದ ಮಹಾಪುರುಷರ ಚರಿತ್ರೆಗಳು ಸಂಕ್ಷಿಪ್ತವಾಗಿವೆ. 'ತ್ರಿಷಷ್ಟಿ ಶಲಾಕಾಪುರುಷ ಚರಿತ್ರ'ದ(ಹೇಮಚಂದ್ರ) ಪ್ರಥಮಭಾಗದ 'ಆದೀಶ್ವರ ಚರಿತ್ರ'ದ ಪೀಠಿಕೆಯಲ್ಲಿ ಹೆಲೆನ್ ಎಂ. ಜಾನ್‌ಸನ್‌ರವರು ಆದೀಶ್ವರ ಚರಿತ್ರೆಯನ್ನು ಕುರಿತು ಹೀಗೆ ಹೇಳಿದ್ದಾರೆ :"ಆದೀಶ್ವರ ಚರಿತ್ರೆಯು ಪ್ರಥಮ ತೀರ್ಥಂಕರ ಋಷಭ ಹಾಗೂ ಪ್ರಥಮ ಚಕ್ರವರ್ತಿ ಭರತನನ್ನು ಕುರಿತ ಉತ್ತಮ ಜೀವನಚರಿತ್ರೆಯಾಗಿದೆ. ಇದು ತನ್ನಷ್ಟಕ್ಕೆ ಬಹುಮಟ್ಟಿಗೆ ಜೈನಧರ್ಮದ ಕೈಪಿಡಿಯಾಗಿದೆ; ಇದರಲ್ಲಿ ನಿಘಂಟುಕಾರರಿಗೆ ಹೊಸಹೊಸ ಶಬ್ದಗಳು ದೊರಕುತ್ತವೆ; ಜನಪದ ಸಂಪ್ರದಾಯ ಹಾಗೂ ಅವುಗಳ ಮೂಲಗಳನ್ನು ಅಭ್ಯಸಿಸುವವರಿಗೆ ಹಿಂದೂ ಧರ್ಮಕ್ಕಿಂತ ಭಿನ್ನವಾದ ಒಂದು ಸಂಪ್ರದಾಯ ಕಾಣುತ್ತದೆ." [೧]

ಈ ಮಾತುಗಳು, ತ್ರಿಷಷ್ಟಿ ಶಲಾಕಾಪುರುಷ ಚರಿತ್ರಗಳಲ್ಲಿ ಆದಿತೀರ್ಥಂಕರನ ಚರಿತ್ರೆಯ ವಿಶಿಷ್ಟ ಸ್ಥಾನವನ್ನು ಸ್ಪಷ್ಟಪಡಿಸುತ್ತವೆ.

ಆದಿತೀರ್ಥಂಕರನ ಚರಿತ್ರೆಯು ಸಂಸ್ಕೃತ, ಪ್ರಾಕೃತ, ಅಪಭ್ರಂಶ ಮತ್ತು ಕನ್ನಡ ಭಾಷೆಗಳಲ್ಲಿ ಪೂರ್ವಪುರಾಣದ ವಿಸ್ತೃತ ಹರವಿನಲ್ಲಿ ಮಹಾಪುರಾಣದ ಚೌಕಟ್ಟಿನೊಳಗೆ ರಚನೆಗೊಂಡು ಬಂದಿರುವುದನ್ನು ಗಮನಿಸಬಹುದಾಗಿದೆ. ಆದಿತೀರ್ಥಂಕರರನ್ನು ಕುರಿತು

ಅನೇಕ ಸ್ವತಂತ್ರ ಕೃತಿಗಳೂ ಕೂಡ ಬಂದಿವೆ. ಇವುಗಳಲ್ಲಿ ವೃಷಭಾದಿಗಳ ಪೂರ್ವಭವ ವೃತ್ತಾಂತಗಳೊಂದಿಗೆ, ಭರತ ಬಾಹುಬಲಿಗಳ ಕಥೆಯೂ ಸ್ವಾರಸ್ಯಕರವಾಗಿ ನಿರೂಪಿತ ವಾಗಿದೆ. ಮಹಾಪುರಾಣಗಳಲ್ಲಿಯೇ ಅಲ್ಲದೆ ಇತರ ಶಲಾಕಾಪುರುಷರಿಗೆ ಸಂಬಂಧಿಸಿದ ಕೆಲವು ಸ್ವತಂತ್ರ ಕೃತಿಗಳಲ್ಲಿಯೂ ಆದಿತೀರ್ಥಂಕರನ ಕಥೆಯು ಲೇಶಮಾತ್ರವಾಗಿ ಯಾದರೂ ಕಂಡುಬರುತ್ತದೆ.

## ಆದಿತೀರ್ಥಂಕರನ ಕಾಲದ ಹಿನ್ನೆಲೆ

ಆದಿತೀರ್ಥಂಕರನ ಮಹತ್ತ್ವವು ಆತನ ಪೂರ್ವಕಾಲದ ಸ್ಥಿತಿಗತಿಗಳ ಹಿನ್ನೆಲೆಯಲ್ಲಿ ಪರಿಶೀಲಿಸಿದಾಗ ಮತ್ತಷ್ಟು ಹಿರಿದಾಗಿ ಕಾಣುತ್ತದೆ. ಇತಿಹಾಸವು ಆದಿತೀರ್ಥಂಕರನು ಯಾವಾಗ ಹುಟ್ಟಿದನು ಎಂಬುದರ ಬಗೆಗೆ ಬೆಳಕನ್ನು ಚೆಲ್ಲುವುದಿಲ್ಲ. ಆದರೆ ಮನುಷ್ಯನ ಸಾಮಾಜಿಕ ವ್ಯವಸ್ಥೆಯ ಆದಿಕಾಲದಲ್ಲೇ ಭಗವಾನ್ ಆದಿತೀರ್ಥಂಕರನಾದ ವೃಷಭ (ಋಷಭ) ಹುಟ್ಟಿದನೆಂಬುದು ಪೌರಾಣಿಕ ದಾಖಲೆಯಾಗಿದೆ. ವೃಷಭನು ಹುಟ್ಟುವ ಮೊದಲು ಮನುಷ್ಯರು ಗುಂಪುಗುಂಪಾಗಿ ವಾಸಮಾಡಲು ಕಲಿತಿದ್ದರು. ಈ ಗುಂಪುಗಳ ಮುಖಂಡರೆನಿಸಿದ 'ಕುಲಕರ'ರು ಸಮಾಜವನ್ನು ಭೀತಿಯಿಂದ ಮುಕ್ತಗೊಳಿಸಿದರು, ಬದ ಲಾವಣೆಯಾಗುತ್ತಿದ್ದ ಪರಿಸ್ಥಿತಿಗಳಲ್ಲಿ ಆತ್ಮರಕ್ಷಣೆಯನ್ನು ಮಾಡಿಕೊಳ್ಳುವ ಪ್ರಾರಂಭಿಕ ಜ್ಞಾನವನ್ನು ಕೊಟ್ಟರು.

ಕುಲಕರರ ಪರಂಪರೆಗೆ ಮೊದಲು ಸಮಾಜದ ಸ್ಥಿತಿ ಉತ್ಕೃಷ್ಟಾವಸ್ಥೆಯ ಭೋಗಭೂಮಿ ಯದಾಗಿತ್ತು. ಮನುಷ್ಯರ ಉತ್ಪತ್ತಿ ಜೋಡಿಯಲ್ಲಿ ಆಗುತ್ತಿದ್ದು ಒಂದು ಗಂಡು ಮತ್ತು ಒಂದು ಹೆಣ್ಣು ಅವಳಿಗಳಾಗಿ ಹುಟ್ಟಿ, ಸಾಹಚರ್ಯದಿಂದ ಜೀವನ ನಡೆಸಿ ತಮ್ಮ ಸಂತಾನವು ಮತ್ತೆ ಅವಳಿಗಳಾಗಿ ಹುಟ್ಟುತ್ತಿದ್ದಂತೆಯೇ ಗತಿಸುತ್ತಿದ್ದರು. ಪೃಥ್ವಿಯ ಮೇಲೆ ಬೆಳೆಯುತ್ತಿದ್ದ ಕಲ್ಪವೃಕ್ಷಗಳ ಆಧಾರದಿಂದ ತಮ್ಮ ಇಚ್ಛೆಯನ್ನು ಪೂರ್ಣಗೊಳಿಸಿಕೊಳ್ಳು ತ್ತಿದ್ದರು. ಗೃಹ, ಭೋಜನ, ಪಾತ್ರೆ, ವಸ್ತ್ರ, ಭೂಷಣ, ಮಾಲೆ, ಮದ್ಯ, ತೂರ್ಯ, ಜ್ಯೋತಿ, ತೇಜ ಈ ಸೌಕರ್ಯಗಳನ್ನು ಹತ್ತು ವಿಧವಾದ ಆಯಾ ಹೆಸರಿನ ಕಲ್ಪವೃಕ್ಷಗಳು ಪೂರೈಸುತ್ತಿ ದ್ದವು. ಈ ರೀತಿ ಆದಿಮಾನವನ ಇಚ್ಛೆಗಳು ಸಹಜವಾಗಿ ಪೂರ್ಣಗೊಳ್ಳುತ್ತಿದ್ದವು.

ಆದರೆ ಕಾಲಚಕ್ರದ ಸ್ಥಿತಿ ಒಂದೇ ರೀತಿ ಇರುವುದಿಲ್ಲ. ಜೈನಪುರಾಣಗಳು ಕಾಲಚಕ್ರ ವನ್ನು ಎರಡು ವಿಭಾಗಗಳಲ್ಲಿ ವಿಂಗಡಿಸಿವೆ. ಚಕ್ರದ ಮೇಲಿರುವ ಅರೆಕಾಲುಗಳನ್ನು ಉತ್ಸರ್ಪಿಣಿಯೆಂದೂ ಮತ್ತು ಕೆಳಗಿರುವ ಅರೆಕಾಲುಗಳನ್ನು ಅವಸರ್ಪಿಣಿ ಎಂದೂ ಕರೆಯಲಾಗಿದೆ. ಕಾಲಚಕ್ರದ ಆರು ಅರೆಕಾಲುಗಳು ಉತ್ಸರ್ಪಿಣಿ ಕಾಲದಲ್ಲಿ ಸುಖದ ಸ್ಥಿತಿಯ ಎಡೆಗೆ ಮೇಲಕ್ಕೆ ಏಳುತ್ತವೆ. ಪುನಃ ಚಕ್ರದ ಮರುದೆಸೆಯಲ್ಲಿ ಮೆಲ್ಲಮೆಲ್ಲನೆ ಆ ಅರೆಕಾಲುಗಳೇ ಅವಸರ್ಪಿಣಿಯ ಕಾಲದಲ್ಲಿ ಸುಖದಿಂದ ದುಃಖಕ್ಕೆ, ದುಃಖದಿಂದ ಅತಿ ದುಃಖದ ಸ್ಥಿತಿಗಳೆಡೆಗೆ ಕೆಳಗಿಳಿಯುತ್ತವೆ.

ಮಾನವಸಮಾಜವು ಭೋಗಭೂಮಿಯ ಸಂಪೂರ್ಣ ಸುಖವನ್ನು ಮನತುಂಬಿ ತನ್ಮಯವಾಗಿ ಭೋಗಿಸುವ ಸುಖದ ಉತ್ಕೃಷ್ಟಾವಸ್ಥೆಯನ್ನು ಸುಷಮ-ಸುಷಮ ಎಂದು ಕರೆದರು. ಈ ಚರಮ ಸ್ಥಿತಿಯ ನಂತರ ಕಾಲಚಕ್ರದ ಅರೆಕಾಲುಗಳ ಇಳಿಯುವಿಕೆ

ಪ್ರಾರಂಭವಾಯಿತು. ಸುಷಮಕಾಲವು ಪ್ರಾರಂಭವಾಯಿತು. ಭೋಗಭೂಮಿಯ ಸುಖ ಈಗ ಇಮ್ಮಡಿಯಲ್ಲ. ಒಂದೇ ಪಾಲು. ಮೂರನೆಯ ಸ್ಥಿತಿ ಸುಷಮ-ದುಷಮ ಕಾಲದಲ್ಲಿ ಸುಖದ ಜೊತೆಯಲ್ಲಿಯೇ ದುಃಖದ ಅನುಭವವೂ ಮೂಡಿತಲ್ಲದೆ, ಈ ಯುಗದ ಸಮಾಜದ ಮುಂದೆ ಪ್ರಕೃತಿಯ ಹೊಸ ಪರಿವರ್ತನೆಗಳ ಕಾರಣದಿಂದ ಕೆಲವು ಸಮಸ್ಯೆಗಳು ತಲೆದೋರಿದವು. ಈ ಕಾಲದಲ್ಲೇ ಕಲ್ಪವೃಕ್ಷಗಳ ಫಲ ಕಡಿಮೆಯಾಗುತ್ತ ಬಂದಿತು. ರಸ ಒಣಗಲು ತೊಡಗಿತು. ಆದುದರಿಂದ ಮನುಷ್ಯನ ಶರೀರ ಮುಂಚಿನಷ್ಟು ಪುಷ್ಟಿಕರವಾಗಿರ ಲಿಲ್ಲ. ಅವನ ಮನಸ್ಸಿನಲ್ಲಿ ಲೋಭ ಹುಟ್ಟಿತು. ಹೆಚ್ಚು ಪಡೆಯುವ ಮತ್ತು ಸಂಗ್ರಹಿಸುವ ಇಚ್ಛೆ ಎಲ್ಲರನ್ನೂ ಪೀಡಿಸಿತು. ಕುಲವನ್ನು ನಿರ್ವಹಿಸುವ ಒಬ್ಬ ಮುಖಂಡನ ಆವಶ್ಯಕತೆ ಈಗ ಮಾನವಸಮಾಜಕ್ಕೆ ಉಂಟಾಗಿತ್ತು. ಈ ಮುಖಂಡರನ್ನೇ ಕುಲಕರರು ಎಂದು ಕರೆದರು. ಇಂತಹ ಮುಂದಾಳುಗಳನ್ನೇ 'ಮನು'ಗಳೆಂದು ಕರೆಯಲಾಯಿತು. ಕೋಟ್ಯಂತರ ವರ್ಷಗಳ ಅಂತರಾಳದ ಮನ್ವಂತರಗಳಲ್ಲಿ ಇಂತಹ ಹದಿನಾಲ್ಕು ಕುಲಕರರು ಹುಟ್ಟಿದ ರೆಂದು ಹೇಳಲಾಗಿದೆ. ಜೀವನದಲ್ಲಿ ಅಡಚಣೆಗಳು ಬಂದಂತೆಯೇ ಆ ಯುಗದ ಕುಲಕರರು ಆ ಸಮಸ್ಯೆಗಳನ್ನು ಬಿಡಿಸಿದ್ದಾರೆ. ಪುರಾಣಗಳು ಕುಲಕರರ ವಿಶೇಷ ಕಾರ್ಯವನ್ನು ನಮಗೆ ಪರಿಚಯ ಮಾಡಿಕೊಡುತ್ತವೆ. 'ಜ್ಯೋತಿ' ವೃಕ್ಷವು ಬಾಡತೊಡಗಿದಾಗ ಆಕಾಶದಲ್ಲಿ ಸೂರ್ಯ- ಚಂದ್ರರು ಕ್ರಮೇಣ ಪ್ರಕಟರಾದರು. ಭಯಭೀತರಾದ ಜನರಿಗೆ ಪ್ರತಿಶ್ರುತಿ ಕುಲಕರನು ಅದರ ರಹಸ್ಯವನ್ನು ಹೇಳಿ, ಇವುಗಳನ್ನು ಹಗಲು ಮತ್ತು ರಾತ್ರಿಯೆಂದು ಭೇದಪಡಿಸಿ ಪರಿಚಯಿಸಿದನು. ಜ್ಯೋತಿವೃಕ್ಷವು ಸಂಪೂರ್ಣ ಬಾಡಿದಾಗ ನಕ್ಷತ್ರಗಳು ತಲೆದೋರಿದವು. ಅವುಗಳ ಜ್ಞಾನವನ್ನು ಜನರಿಗೆ ಪರಿಚಯಿಸಿದವನು ಸನ್ಮತಿ. ವನ್ಯ ಮೃಗಗಳ ಹಿಂಸೆಯು ಪ್ರಾರಂಭವಾದಾಗ ಅವುಗಳಿಂದ ಹೇಗೆ ರಕ್ಷಿಸಿಕೊಳ್ಳಬೇಕೆಂದು ತಿಳಿಸಿದವರು ಕ್ಷೇಮಂಕರ ಕುಲಕರ ಮತ್ತು ಕ್ಷೇಮಂಧರ ಕುಲಕರರು. ಕಲ್ಪವೃಕ್ಷಗಳ ಅಭಾವದ ಕಾರಣ ಮನುಷ್ಯರಲ್ಲಿ ಜಗಳ ಹುಟ್ಟಿತು. ಈ ಕಾಲದ ವೃಕ್ಷಗಳ ಎಲ್ಲೆಯನ್ನು ಸೀಮಂಕರನು ನಿರ್ಧರಿಸಿದನು. ನಂತರ ಬಂದ ಸೀಮಂಧರ ಭೂಮಿಯ ಎಲ್ಲೆಯನ್ನು ನಿರ್ಧರಿಸಿದನು. ವಿಮಲವಾಹನನು ಪ್ರಾಣಿಗಳ ಸಾಕುವಿಕೆಯ ಕಲೆಯನ್ನು ಹೇಳಿಕೊಟ್ಟನು. ಎಂಟನೆಯ ಕುಲಕರನ ಸಮಯದಲ್ಲಿ ಒಂದು ಹೊಸ ವಿಷಯ ಮುಂದೆ ಬಂದಿತು. ಇದರ ಮೊದಲು ತಂದೆ-ತಾಯಿಗಳು ತಮ್ಮ ಯುಗಲ ಸಂತಾನಕ್ಕೆ ಜನ್ಮಕೊಟ್ಟ ಕೂಡಲೆ ತಮ್ಮ ದೇಹವನ್ನು ತ್ಯಜಿಸುತ್ತಿದ್ದರು. ಆ ನಿಯಮ ಭಂಗವಾಯಿತು. ಜೀವಿತ ಮಾತಾಪಿತೃಗಳು ತಮ್ಮ ಸಂತಾನವನ್ನು ಕಣ್ಮುಂದೆ ನೋಡಿ ಭಯಭೀತರಾದರು. ಆಗ ಸಂತಾನವನ್ನು ಸ್ನೇಹದಿಂದ ನೋಡುವ ಮತ್ತು ಅವರ ಪಾಲನೆ ಪೋಷಣೆಯನ್ನು ಮಾಡುವ, ಪ್ರೀತಿ ಯಿಂದ ಸಂತೈಸುವ ವಿಧಾನಗಳನ್ನು ಮುಂದೆ ಬಂದ ಕುಲಕರರು ಹೇಳಿಕೊಟ್ಟರು. ಅವರ ಹೆಸರು ಕ್ರಮವಾಗಿ ಚಕ್ಷುಷ್ಮಾನ್, ಯಶಸ್ವಾನ್ ಮತ್ತು ಅಭಿಚಂದ್ರ. ಮುಂದೆ ಪೃಥ್ವಿ ಮತ್ತು ಆಕಾಶಗಳಲ್ಲಿ ಪರಿವರ್ತನೆಗಳಾದವು. ಬಿಸಿಲು ಮತ್ತು ನೆರಳುಗಳ ಆಟ ಶುರು ವಾಯಿತು. ಜನರ ಅಂಜಿಕೆಯನ್ನು ಚಂದ್ರಾಭನು ಹೋಗಲಾಡಿಸಿದನು. ಹನ್ನೆರಡನೆಯ ಕುಲಕರ ಮರುದ್ದೇವನು ಚಳಿಗಾಳಿಯಿಂದ ರಕ್ಷಿಸಿಕೊಳ್ಳುವ ಉಪಾಯ, ಮೇಘ ಮತ್ತು ವಿದ್ಯುತ್‌ಗಳಿಂದ ರಕ್ಷಣೆ, ನದಿ ದಾಟುವ ವಿದ್ಯೆ, ಮತ್ತು ಬೆಟ್ಟಗಳ ಮೇಲೆ ತಲುಪುವ

ಉಪಾಯಗಳನ್ನು ತಿಳಿಸಿದನು. ಹದಿಮೂರನೇ ಕುಲಕರರ ಕಾಲದಲ್ಲಿ ಸಂತಾನೋತ್ಪತ್ತಿಯಾಗುವಾಗ ಜರಾಯುವಿನಿಂದ ಆವರಿಸಿರುವುದು ಕಂಡುಬಂದಿತು. ಮನುಷ್ಯನಿಗೆ ಇದು ಹೊಸ ಸಮಸ್ಯೆಯಾಗಿತ್ತು. ಆಗ ಪ್ರಸೇನಜಿತ್ತನು ಗರ್ಭಕೋಶವನ್ನು ಶುದ್ಧಿಮಾಡುವ ವಿಧಿಯನ್ನು ಹೇಳಿಕೊಟ್ಟನು. ಕೊನೆಗೆ ಬಂದ ಹದಿನಾಲ್ಕನೆಯ ಕುಲಕರ ನಾಭಿರಾಜ. ಈತ ಸಂತಾನೋತ್ಪತ್ತಿಯ ಸಮಯದಲ್ಲಿ ನಾಭಿನಾಳವನ್ನು ತುಂಡರಿಸುವ ನಿಯಮವನ್ನು ಹೇಳಿದನು. ಈ ನಾಭಿರಾಜನೇ ಆದಿತೀರ್ಥಂಕರ ಭಗವಾನ್ ಋಷಭನ ತಂದೆ.

ಭೋಗಭೂಮಿಯ ಕಾಲವು ಸಮಾಪ್ತಿಯಾದಂತಾಯಿತು. ಕಲ್ಪವೃಕ್ಷಗಳು ಒಂದೂ ಇಲ್ಲದೆ ಹೋದವು. ಆದರೆ ಹೊಸ ಹೊಸ ಬಗೆಯ ಮರಗಿಡಗಳು, ಪಶುಪಕ್ಷಿಗಳು ಉತ್ಪನ್ನವಾದವು. ಆಗ ನಾಭಿರಾಜನು ಪ್ರಜೆಗಳಿಗೆ ಆಶ್ವಾಸನೆ ಕೊಟ್ಟು, ಈ ಸಾಮಾನ್ಯ ಮರಗಿಡಗಳಿಂದಲೇ ಜೀವನವನ್ನು ಮುಂದುವರಿಸಲು ನಿಯಮಗಳನ್ನು ಹೇಳಿಕೊಟ್ಟನು. ಜೊತೆಗೆ ವಿಷವೃಕ್ಷ ಮತ್ತು ಓಷಧಿ ವೃಕ್ಷಗಳ ತಾರತಮ್ಯ ಮತ್ತು ಅವುಗಳ ಪ್ರಯೋಗ ಮತ್ತು ಉಪಯೋಗದ ಶಿಕ್ಷಣವನ್ನು ಕೊಟ್ಟನು. ಹಸಿಮಣ್ಣಿನಿಂದ ತಟ್ಟೆ ಮುಂತಾದ ಪಾತ್ರೆಗಳನ್ನು ಮಾಡುವ ವಿಧಾನವನ್ನು ಆ ಕಾಲದ ಸಮಾಜಕ್ಕೆ ತಿಳಿಸಿದನು.

ಈ ರೀತಿ ಸೃಷ್ಟಿಯ ಭೋಗಯುಗವು ಕೊನೆಗೊಂಡು ಕರ್ಮಯುಗದ ಪ್ರಾರಂಭವು ಆಗಿ ಈ ಸಂಧಿಕಾಲದಲ್ಲಿ ನಾಭಿರಾಜನು ಮಾನವಸಮಾಜದಲ್ಲಿ ಕರ್ಮಭೂಮಿಗೆ ಯೋಗ್ಯವಾದ ವ್ಯವಸ್ಥೆಯನ್ನು ನಿರ್ಮಿಸಿದನು.

ಅನುಶಾಸನವನ್ನು ಮುರಿದವರಿಗೆ ದಂಡ ವಿಧಿಸುವ ವ್ಯವಸ್ಥೆ ಕುಲಕರರ ಸಮಯದಲ್ಲಿ ಈ ರೀತಿ ಇತ್ತು : ಮೊಟ್ಟಮೊದಲ ಐದು ಕುಲಕರರು 'ಹಾ' ನೀನು ಹೀಗೆ ಮಾಡಿದೆ, ಬಹಳ ದುಃಖದ ವಿಷಯವಾಗಿದೆ ಎಂದು ಹೇಳಿ ನಿಯಮಭಂಗ ಮಾಡುವವರನ್ನು ದಂಡಿಸುತ್ತಿದ್ದರು. ಮುಂದಿನ ಐದು ಕುಲಕರರ ಕಾಲದಲ್ಲಿ ಅಪರಾಧ ಮಾಡುವವರನ್ನು 'ಮಾ' ಅಂದರೆ ಮತ್ತೆ ಹೀಗೆ ಮಾಡಬಾರದು ಎಂದು ಎಚ್ಚರಿಸಿ ಇದನ್ನೇ ದಂಡನೆ ಎಂದು ಭಾವಿಸಿದ್ದರು. ಕೊನೆಯ ನಾಲ್ಕು ಕುಲಕರರ ಸಮಯದಲ್ಲಿ ಕಠೋರವಾದ ದಂಡನೆ ಎಂದರೆ 'ಧಿಕ್', ಅಂದರೆ ನಿನಗೆ ಧಿಕ್ಕಾರವಿರಲಿ ಎಂಬ ಉದ್ಗಾರ.

ಈ ಎಲ್ಲ ಕುಲಕರರು ಜ್ಞಾನಿಗಳೂ ಕುಶಲರೂ ಆದ ವ್ಯಕ್ತಿಗಳಾಗಿದ್ದರು. ಸಮಾಜವನ್ನು ಸ್ಥಿರಪಡಿಸಲು, ಅದನ್ನು ಭಯದಿಂದ ಮುಕ್ತಗೊಳಿಸಲು, ಪರಸ್ಪರ ಕಲಹವನ್ನು ಹೋಗಲಾಡಿಸಲು ಮಾಡಿದ ದಂಡ ವಿಧಾನವನ್ನೂ ಮತ್ತು ಶಾಸನ ವ್ಯವಸ್ಥೆಯನ್ನೂ ಮಾಡಿದ ಕಾರಣ ಇವರ ನಾಯಕತ್ವವನ್ನು ಎಲ್ಲರೂ ಒಪ್ಪಿಕೊಂಡರು.

ಆದಿ ಯುಗದ ಮಾನವನ ಈ ಸ್ಥಿತಿಯ ಕುಲಕರರ ಪರಂಪರೆಯ ಸಂಕೇತವು ಇಂದು ಇತಿಹಾಸದ ಪುಸ್ತಕಗಳಲ್ಲೂ ಸಹ ಸ್ವೀಕೃತವಾಗಿದೆ. ಭಾರತದ ಇತಿಹಾಸದ ಮೊದಲನೆಯ ಭಾಗವನ್ನು ಬರೆದ ಡಾ. ರೋಮಿಲಾ ಥಾಪರ್ ಹೀಗೆ ಬರೆದಿದ್ದಾರೆ : 'ವಿಶ್ವದ ಆದಿಮಾನವ ಯುಗದಲ್ಲಿ ಪುರುಷ ಮತ್ತು ಸ್ತ್ರೀಯರಿಗೆ ಯಾವ ಅಭಾವವೂ ಇರಲಿಲ್ಲ. ಅವರಿಗೆ ಎಲ್ಲ ಸಾಧನಗಳೂ ಸ್ವತಃ ಪ್ರಾಪ್ತವಾಗಿದ್ದವು. ಕ್ರಮೇಣ ಅವನತಿಯ ಕಾಲ ಬರತೊಡಗಿತು. ಮನುಷ್ಯರಲ್ಲಿ ಆವಶ್ಯಕತೆಗಳ ಮತ್ತು ಅಭಾವಗಳ ಉದಯವಾಯಿತು. ಕೌಟುಂಬಿಕ ವ್ಯವಸ್ಥೆಯು ವೈಯಕ್ತಿಕ ಪದಾರ್ಥಗಳ ಸಂಗ್ರಹಣೆಗೆ ಪ್ರೇರಣೆ ಕೊಟ್ಟಿತು. ಈ ಕಾರಣ

ದಿಂದ ವಿವಾದ ಮತ್ತು ಸಂಘರ್ಷ ಪ್ರಾರಂಭವಾಯಿತು. ನಿಯಮ ಮತ್ತು ವಿಧಾನಗಳ ವ್ಯವಸ್ಥೆ ಆವಶ್ಯಕವಾಯಿತು. ಆದುದರಿಂದ ಒಬ್ಬ ವ್ಯಕ್ತಿಯ ಕೈಯಲ್ಲಿ ಶಾಸನ ಮತ್ತು ಕುಲಗಳ ವ್ಯವಸ್ಥೆ ಒಪ್ಪಿಸಲು ನಿರ್ಣಯಮಾಡಿದರು. ನ್ಯಾಯ ಮತ್ತು ನಿರ್ಣಯದ ಹೊಣೆಗಾರಿಕೆ ಅವನ ಪಾಲಾಗಿತ್ತು.[೨]

## ಜೈನ ಪರಂಪರೆಯಲ್ಲಿ ಆದಿತೀರ್ಥಂಕರನ ಸ್ಥಾನ, ಮಹತ್ತ್ವ

ಹದಿನಾಲ್ಕನೆಯ ಕುಲಕರ ನಾಭಿರಾಜನ ನಂತರ ಸಮಾಜ ವ್ಯವಸ್ಥೆಯನ್ನು ವಿಕಾಸದ ಮೆಟ್ಟಲುಗಳಲ್ಲಿ ಹತ್ತಿಸುವ ಹೊಣೆಗಾರಿಕೆಯನ್ನು ಹೊತ್ತವ ಆತನ ಪುತ್ರನಾದ ವೃಷಭ. ಸಾಮಾಜಿಕ ಕ್ಷೇತ್ರದಲ್ಲಿ ಕ್ರಾಂತಿಕಾರಿ ಪರಿವರ್ತನೆ ಮಾಡಿ ವೃಷಭದೇವ ಮಾನವ ಜಾತಿಗೆ ದೊಡ್ಡ ಮುಖಂಡನಾದನು. ಕಲ್ಪವೃಕ್ಷಗಳಂತೂ ಸಂಪೂರ್ಣ ನಾಶವಾಗಿದ್ದವು. ಸ್ವತಃ ಉತ್ಪನ್ನವಾಗುವ ಧಾನ್ಯಗಳ ಅಭಾವದಿಂದ ಚಿಂತಿತರಾಗಿದ್ದ ಪ್ರಜೆಗಳಿಗೆ ಕೃಷಿ ಶಿಕ್ಷಣವನ್ನು ಕೊಟ್ಟು ಹಸಿವೆಯನ್ನು ನೀಗಿಸಿಕೊಳ್ಳುವ ಉಪಾಯವನ್ನು ತಿಳಿಸಿದನು. ಆತ್ಮರಕ್ಷಣೆಗೆ ಅಸ್ತ್ರ-ಶಸ್ತ್ರ ವಿದ್ಯೆಗಳನ್ನು ಕಲಿಸಿದನು. ವಸ್ತುಗಳ ವಿನಿಮಯದ ಮೂಲಕ ವಾಣಿಜ್ಯ ವಿದ್ಯೆಗಳನ್ನು ಕಲಿಸಿದನು. ಅನೇಕ ಕಲೆಗಳ ಮತ್ತು ಸಾಹಿತ್ಯ ರಚನೆಯ ಶಿಕ್ಷಣವನ್ನು ಕೊಟ್ಟು ವೃಷಭದೇವನು ಮನುಷ್ಯನ ಸಂಸ್ಕಾರವನ್ನು ಉನ್ನತಪಡಿಸಿ ಸಂಸ್ಕೃತಿಯ ಏಳಿಗೆಗೆ ಪಾಯ ಹಾಕಿದನು. ವ್ಯಾಕರಣದ ನಿಯಮ, ಛಂದಸ್ಸು ಮತ್ತು ಕಾವ್ಯಗಳ ರಚನಾವಿಧಿ, ಹಾಡುಗಾರಿಕೆ, ನೃತ್ಯ, ನಾಟ್ಯ, ಶಿಲ್ಪ ಮತ್ತು ಡೋಲು ಮೊದಲಾದ ವಾದ್ಯಗಳನ್ನು ನುಡಿಸುವ ಕಲೆ, ಸೈನ್ಯ ಸಂಚಾಲನೆ, ವ್ಯೂಹರಚನೆಯ ಪ್ರಕ್ರಿಯೆ, ನಗರ ಮತ್ತು ಭವನಗಳ ನಿರ್ಮಾಣ, ಅಳತೆ ತೂಕಗಳ ನಿಯಮಗಳು ಮುಂತಾದ ಎಪ್ಪತ್ತೆರಡು ಕಲೆಗಳನ್ನು ಆದಿನಾಥ ಋಷಭದೇವನು ತನ್ನ ಹಿರಿಯ ಮಗ ಭರತನಿಗೆ ತಿಳಿಸಿದನೆಂದು ಪುರಾಣಗಳು ತಿಳಿಸುತ್ತವೆ. ಕಿರಿಯ ಮಗ ಬಾಹುಬಲಿಯನ್ನು ವಿಶೇಷವಾಗಿ ಸ್ತ್ರೀಪುರುಷರ, ಪಶುಪಕ್ಷಿಗಳ ಗುಣವನ್ನು ಕಂಡುಕೊಳ್ಳುವ ವಿದ್ಯೆ, ಶುಭಾಶುಭ ಸಮಯದ ಜ್ಞಾನ, ಗಣಿತ ಮತ್ತು ಜ್ಯೋತಿಷ ವಿದ್ಯೆಗಳಲ್ಲಿ ನಿಪುಣನನ್ನಾಗಿ ಮಾಡಿದನು. ಲಿಪಿಯನ್ನು ಕಂಡುಹಿಡಿದು ತನ್ನ ಪುತ್ರಿ ಬ್ರಾಹ್ಮಿಗೆ ಅದನ್ನು ಕಲಿಸಿದನು. ಅಷ್ಟೇ ಅಲ್ಲದೆ, ಸ್ತ್ರೀಯರಿಗಾಗಿ ಮೀಸಲಾದ ಅರುವತ್ತನಾಲ್ಕು ಕಲೆಗಳನ್ನು ಕಲಿಸಿ ಪ್ರಾವೀಣ್ಯವನ್ನು ತಂದುಕೊಟ್ಟನು. ಅಂದಿನಿಂದ ಈ ಜ್ಞಾನಗಳು ಕಲೆಗಳು ಮತ್ತು ಶಿಲ್ಪ ವಿದ್ಯೆಗಳು ಮಾನವಸಮಾಜಕ್ಕೆ ಪಾರಂಪರ್ಯವಾಗಿ ದೊರಕುತ್ತಲಿವೆ ಎಂದು ಪುರಾಣಗಳು ನಿರೂಪಿಸುತ್ತವೆ. ಈತನು ದೇಶವನ್ನು ಪುರ, ಗ್ರಾಮ, ನಗರಗಳಾಗಿ ವಿಂಗಡಿಸಿದನು, ಲೋಕಶಾಸ್ತ್ರ ಹಾಗೂ ಲೋಕವ್ಯವಹಾರದ ಶಿಕ್ಷಣವನ್ನು ನೀಡಿದನು. ಅಹಿಂಸಾಮೂಲವಾದ ಧರ್ಮದ ಸ್ಥಾಪನೆಯನ್ನು ಮಾಡಿದ್ದು ಇವನೇ.

ಪುರಗಾಮ ಪಟ್ಟಣಾದೀ ಲೋಇಯ ಇತ್ಥಂ ಚ ಲೋಯ ವ್ಯವಹಾರೋ
ಧಮ್ಮೋ ವಿದಾಯಾ ಮೂಲೋ ವಿಣಿಮ್ಮಿದೋ ಆಗಿಬ್ರಹ್ಮೇಣ (೮೦೩)

ಎಂದು ತ್ರಿಲೋಕಸಾರದಲ್ಲಿ ಹೇಳಲಾಗಿದೆ.

ವನಸ್ಪತಿಗಳು ಬೆಳೆದಿದ್ದರೂ ಅವುಗಳ ಉಪಯೋಗವು ಜನರಿಗೆ ತಿಳಿದಿರಲಿಲ್ಲ. ಆಗ ಋಷಭನು ಜನರಿಗೆ, ಬೆಳೆದಿರುವ ಕಬ್ಬುಗಳ ರಸವನ್ನು ಹಿಂಡಿ ಉಪಯೋಗಿಸುವುದನ್ನು

ಕಲಿಸಿಕೊಟ್ಟನು. ಅದ್ದರಿಂದಲೇ ಈತನ ವಂಶ 'ಇಕ್ಷ್ವಾಕುವಂಶ' ವೆಂದು ಪ್ರಸಿದ್ಧವಾಯಿತು. ಕ್ಷತ್ರಿಯ, ವೈಶ್ಯ, ಜಘನ್ಯಜರೆಂದು ಮೂರು ರೀತಿಯಲ್ಲಿ ಸಮಾಜವನ್ನು ವಿಂಗಡಿಸಲಾಯಿತು. ಈ ಎಲ್ಲ ವರ್ಗದವರೂ ಅಹಿಂಸೆಯ ಹಿನ್ನೆಲೆಯಲ್ಲಿ ಜೀವನವನ್ನು ನಡೆಸುತ್ತಿದ್ದರು, ಸಸ್ಯಾಹಾರಿಗಳಾಗಿದ್ದರು. ಹೀಗೆ ಜೀವನಾಧಾರವನ್ನು ಕಲಿಸಿದವನಾದ್ದರಿಂದ ವೃಷಭನನ್ನು ಆದಿಬ್ರಹ್ಮ ಮತ್ತು ಪ್ರಜಾಪತಿಯೆಂದು ಕರೆಯಲಾಗಿದೆ.[೩]

ಜೀವನಕ್ಕೆ ಉಪಯೋಗವಾದ ಅಸಿ(ಯುದ್ಧ), ಮಸಿ (ಲೇಖನ), ಕೃಷಿ(ಬೇಸಾಯ), ವಾಣಿಜ್ಯ(ವ್ಯಾಪಾರ), ವಿದ್ಯಾ(ಶಾಸ್ತ್ರ ರಚನೆ, ನೃತ್ಯ,ಗಾಯನ ಮೊದಲಾದವು) ಮತ್ತು ಶಿಲ್ಪ (ಹಸ್ತಕಲೆ, ಚಿತ್ರಾಂಕನ ಮೊದಲಾದವು)ಗಳ ಶಿಕ್ಷಣವನ್ನು ಕೊಟ್ಟು ಸಮಾಜ, ರಾಜ್ಯ ಮತ್ತು ಪ್ರಪಂಚದ ವ್ಯವಸ್ಥೆಯ ರೂಪ ನಿರ್ಧಾರವನ್ನು ಮಾಡಿದ ಋಷಭದೇವನು ಯೋಗ ವಿದ್ಯೆಯ ಆದಿಪುರುಷನೂ ಆಗಿದ್ದಾನೆ. ಸ್ವಯಂಭೂ ಸ್ತೋತ್ರದ ಮೊದಲ ಸ್ತೋತ್ರದಲ್ಲಿ ಹೀಗೆ ಹೇಳಲಾಗಿದೆ :

ಪ್ರಜಾಪತಿರ್ಯಃ ಪ್ರಥಮಂ ಜಿಜೀವಿಷುಃ
ಕೃಷ್ಯಾದಿಷು ಕರ್ಮ ಸುಪ್ರಜಾಃ

ಮೊದಲಿಗೆ ಪ್ರಜೆಗಳ ಒಡೆಯನಾದ ವೃಷಭ ಸ್ವಾಮಿಯು ಬದುಕಲಿಚ್ಛಿಸಿದ ಪ್ರಜೆಗಳನ್ನು ಜೀವನಾಧಾರವಾದ ಕೃಷಿ ಮೊದಲಾದ ಜೀವಿಕೆಗಳಲ್ಲಿ ಯೋಜನೆ ಮಾಡಿದನು ಎಂದು ಸ್ತುತಿಸಲಾಗಿದೆ.

ಸಂಯಮ, ತಪಸ್ಸು, ತ್ಯಾಗ ಮತ್ತು ಧ್ಯಾನಗಳ ಏಕಾಗ್ರತೆಯಿಂದ ಹೇಗೆ ಅಲೌಕಿಕ ಶಕ್ತಿಗಳ ವಿಕಾಸವಾಗುತ್ತದೆ; ಮನುಷ್ಯನ ರಾಗದ್ವೇಷದ ಪ್ರವೃತ್ತಿಗಳಿಂದ ಹೇಗೆ ಕರ್ಮಗಳ ಬಂಧನವಾಗುತ್ತದೆ ಮತ್ತು ಸಂಯಮದ ಮೂಲಕ ರಾಗದ್ವೇಷಗಳ ತ್ಯಾಗದಿಂದ ಆತ್ಮ ಹೇಗೆ ಕರ್ಮಬಂಧನದಿಂದ ಮುಕ್ತಿ ಪಡೆದು ಮೋಕ್ಷದ ಶಾಶ್ವತಸುಖವನ್ನು ಹೊಂದುತ್ತದೆ ಎಂಬ ಎಲ್ಲ ತತ್ತ್ವಗಳ ಪ್ರತ್ಯಕ್ಷಾನುಭವ ಪಡೆದು, ಭವಸಾಗರವನ್ನು ದಾಟುವ ಬಗೆಯನ್ನು ಅರಿತು, ಧರ್ಮೋಪದೇಶವನ್ನು ಮಾಡಿ ಜನತೆಗೆ ಸನ್ಮಾರ್ಗವನ್ನು ನೀಡಿದ ಪ್ರಥಮ ಹಿರಿಮೆ ಆದಿತೀರ್ಥಂಕರನದಾಗಿದೆ. ಹೀಗಾಗಿ 'ಧರ್ಮಚಕ್ರ'ದ ಪ್ರಥಮ ಸಂಸ್ಥಾಪಕನೆಂದು ಈತನನ್ನು ಕರೆಯಬಹುದಾಗಿದೆ. ಈತ ಪುರುಷಾರ್ಥಗಳ 'ಆದಿಜನಕ'; ಜನತೆಗೆ ಬೋಧನೆಯನ್ನು ನೀಡಿದ 'ಆದಿಗುರು' ಎಂಬ ಹಿರಿಮೆಗೆ ಪಾತ್ರನಾಗಿದ್ದಾನೆ.

ಪ್ರೊ. ಲೋದಾರ್ ವೆಂಡಲ್, ಋಷಭನನ್ನು 'ಕೃಷಿ ಮತ್ತು ಸಂಸ್ಕೃತಿಯ ಜನಕ'ನೆಂದು ಕರೆದಿದ್ದಾರೆ.[೪]

ವೃಷಭ ತೀರ್ಥಂಕರನನ್ನು ಮುಂದೆ ಬಂದ ಇಪ್ಪತ್ತುಮೂರು ತೀರ್ಥಂಕರರು ಅನುಸರಿಸಿದ್ದಾರೆ. ಹೀಗಾಗಿ ಪ್ರಥಮ ತೀರ್ಥಂಕರ ವೃಷಭನಾಥನು ಆದಿತೀರ್ಥಂಕರನೆನಿಸಿ ಜಗದ್ಗುರುವಾಗಿದ್ದಾನೆ.

## ಜೈನೇತರ ಸಾಹಿತ್ಯದಲ್ಲಿ ವೃಷಭನ ಉಲ್ಲೇಖ

ವೃಷಭದೇವನು ಜೈನಧರ್ಮದ ಆದಿಪುರುಷನೆಂದು ಹಿಂದೂ ಧರ್ಮವು ಯಾವ ಭಿನ್ನಾಭಿಪ್ರಾಯವೂ ಇಲ್ಲದೆ ಒಪ್ಪುತ್ತದೆ. ಆತನ ಕಾಲವನ್ನು ಯುಗದ ಆದಿಗೆ ಒಯ್ದು

ಆತನ ದೈವತ್ವವನ್ನು ಸಂಪೂರ್ಣವಾಗಿ ಮಾನ್ಯಮಾಡಿ ಸರ್ವಜ್ಞತ್ವವನ್ನು ಒಪ್ಪಿಕೊಂಡಿದೆ. ವೇದಗಳು ಮತ್ತು ಪುರಾಣಗಳು ಆದಿನಾಥನನ್ನು ಋಷಭದೇವನೆಂದು ಸ್ಮರಿಸುತ್ತವೆ. ಈ ಆದಿನಾಥ ಭಗವಾನನನ್ನು ಮಹಾದೇವ, ಅರ್ಹತ್ ಮತ್ತು ರುದ್ರನೆಂದು ಕರೆಯಲಾಗಿದೆ.

ವೇದ ಪುರಾಣಗಳಲ್ಲಿ ಋಷಭನ ಉಲ್ಲೇಖ ಕಂಡುಬರುತ್ತದೆ. ಸೂರ್ಯನೆಂದೂ, ಇಂದ್ರನ ಮಗನೆಂದೂ, ಯುಧಿಷ್ಠಿರನು ಭೇಟಿಮಾಡಿದ ಒಬ್ಬ ಋಷಿ ಎಂದೂ ಈ ಮುಂತಾದ ಬಗೆಗಳಲ್ಲಿ ಋಷಭನ ಹೆಸರು ಕಂಡುಬರುತ್ತದೆ.[೫] ಅಂದರೆ 'ಋಷಭ'ಎಂಬ ಹೆಸರಿನಲ್ಲಿ ಸಿಗುವ ದಾಖಲೆಗಳೆಲ್ಲಾ ಜೈನಸಂಬಂಧಿ ಋಷಭನಾಥನವಲ್ಲ ಎಂಬುದು ಸ್ಪಷ್ಟವಾಗುತ್ತದೆ. ಜೈನಧರ್ಮದ ಹಿನ್ನೆಲೆಯ ಆಧಾರದಮೇಲೆ ಇಲ್ಲಿ ಕಂಡುಬರುವ ವೃಷಭನ ಉಲ್ಲೇಖವನ್ನು ಬಹಳ ಜಾಗರೂಕತೆಯಿಂದ ಪರಿಗಣಿಸಬೇಕಾಗಿದೆ.

ಪ್ರೊ. ಹೀರಾಲಾಲರು, ಋಗ್ವೇದದಲ್ಲಿ ವರ್ಣಿಸಲಾಗಿರುವ ವಾತರಶನಾ ಮುನಿಗಳು ಭಾಗವತ ಪುರಾಣದಲ್ಲಿ ವರ್ಣಿಸಿರುವ ವಾತರಶನ ಶ್ರಮಣ ಮುನಿಗಳಲ್ಲದೆ ಬೇರೆ ಅಲ್ಲ ಎಂಬುದನ್ನು ವಿವರಿಸಿದ್ದಾರೆ. ಅಲ್ಲದೆ ಕೇಶಿಯು ವಾತರಶನ ಮುನಿಗಳ ನಾಯಕನಾಗಿದ್ದ ನೆಂದೂ, ಆ ಕೇಶಿಯೇ ಋಷಭನೆಂದೂ ತಿಳಿಸಿದ್ದಾರೆ.[೬]

ಋಗ್ವೇದದ ಒಂದು ಸೂಕ್ತ ಹೀಗಿದೆ :

ತ್ರಿಧಾ ಬದ್ಧೋ ವೃಷಭೋ ರೋರವೀತಿ
ಮಹೋ ದೇವೋ ಮರ್ತ್ಯಾನ್ ಆವಿವೇಶ (IV. ೫೮. ೩)

ಇದರ ಅಭಿಪ್ರಾಯವನ್ನು ಈ ರೀತಿ ಸ್ಪಷ್ಟಪಡಿಸಬಹುದು : 'ತ್ರಿಧಾ ಬದ್ಧಃ' ಮೂರು ರೀತಿಗಳಲ್ಲಿ (ಸಮ್ಯಗ್ದರ್ಶನ ಜ್ಞಾನ ಚಾರಿತ್ರಗಳ ಸಾಧನೆಯಿಂದ) ಋಷಭ ದೇವರು ಬದ್ಧರಾಗಿದ್ದಾರೆ. 'ರೋರವೀತಿ'—ಉಚ್ಚ ಸ್ವರದಲ್ಲಿ ಧರ್ಮದ ಘೋಷಣೆಯನ್ನು ಮಾಡಿದನು ಮತ್ತು ಮನುಷ್ಯರಲ್ಲಿ ಮಹಾತ್ಮನಾದ ಈ ದೇವನು ವ್ಯಾಪಿಸಿದ್ದಾನೆ.

'ಅರ್ಹನ್' ಎಂಬ ಪದವು ಪ್ರಾಚೀನ ವೇದಗಳಲ್ಲಿ ಮತ್ತೆ ಮತ್ತೆ ಕಂಡುಬರುತ್ತದೆ. ಯಜುರ್ವೇದದಲ್ಲಿ ಋಷಭನ ಉಲ್ಲೇಖವು ಹೀಗಿದೆ :

ಓಂ ನಮೋ ಅರ್ಹತೋ ಋಷಭೋ ಓಂ ವೃಷಭಃ ಪವಿತ್ರಂ
ಪುರುಹೂತಮಧ್ವರಂ ಯತಿಷು ನಗ್ನಂ ಪರಮಮಾಹ ಸಂಸ್ತುತಂ ವರಂ
ಶತ್ರುಂ ಜಯಂತಂ ಪಶುರಿಂದ್ರಮಾಹುತಿರಿತಿ ಸ್ವಾಹಾ | (ಅ. ೧೫)

ಅರ್ಹಂತನಾದ ವೃಷಭನಿಗೆ ನಮಸ್ಕಾರ. ಪವಿತ್ರನೂ ನಗ್ನನೂ ಉತ್ತಮನೂ ತೇಜಸ್ವಿಯೂ ಸ್ತುತಿಸಲ್ಪಟ್ಟವನೂ ಶ್ರೇಷ್ಠನೂ ಶತ್ರುಗಳನ್ನು ಜಯಿಸಿದವನೂ ಆದ ಋಷಭೇಂದ್ರನಿಗೆ ಆಹುತಿಯನ್ನು ಅರ್ಪಿಸುತ್ತೇನೆ.

ಇಲ್ಲಿಯ ಉಲ್ಲೇಖ ಪ್ರಥಮ ತೀರ್ಥಂಕರ ಋಷಭನನ್ನೇ ಕುರಿತದ್ದೆಂಬುದು ಸುಸ್ಪಷ್ಟ. ಡಾ. ರಾಧಾಕೃಷ್ಣನ್‌ರವರು ಈ ಉಲ್ಲೇಖದ ಸತ್ಯಾಂಶವನ್ನು ಗಮನಿಸಿ ಹೀಗೆ ನುಡಿದಿದ್ದಾರೆ:

"ಜೈನ ಸಂಪ್ರದಾಯವು ಶತಮಾನಗಳ ಹಿಂದೆ ಜೀವಿಸಿದ್ದ ಋಷಭನಲ್ಲಿಗೆ ತನ್ನ ಧರ್ಮದ ಮೂಲವನ್ನು ಕೊಂಡೊಯ್ಯುತ್ತದೆ. ಕ್ರಿ. ಪೂ.ದಲ್ಲಿಯೇ ಪ್ರಥಮ ತೀರ್ಥಂಕರನಾದ ವೃಷಭನನ್ನು ಪೂಜಿಸುತ್ತಿದ್ದ ಜನರಿದ್ದರೆಂಬುದನ್ನು ನಿರೂಪಿಸಲು ಆಧಾರಗಳಿವೆ.

ವರ್ಧಮಾನ ಅಥವಾ ಪಾರ್ಶ್ವನಾಥರಿಗಿಂತ ಮೊದಲೇ ಜೈನಧರ್ಮ ಅಸ್ತಿತ್ವದಲ್ಲಿತ್ತೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಯಜುರ್ವೇದವು ವೃಷಭ, ಅಜಿತ, ಅರಿಷ್ಟನೇಮಿ ಈ ಮೂರು ತೀರ್ಥಂಕರರನ್ನು ಉಲ್ಲೇಖಿಸುತ್ತದೆ. ವೃಷಭದೇವನು ಜೈನಧರ್ಮದ ಪ್ರವರ್ತಕನೆಂಬ ದೃಷ್ಟಿಕೋಣಕ್ಕೆ ಪೂರಕಾಂಶವನ್ನು ನೀಡುತ್ತದೆ."[೭]

ಪಾಣಿನಿಯು ತತ್ಪುರುಷ ಸಮಾಸ ಪ್ರಕರಣದ ನಿರೂಪಣೆಯ ಭಾಗದಲ್ಲಿ ವೃಷಭನ ಉಲ್ಲೇಖವನ್ನು ಹೀಗೆ ಮಾಡಿದ್ದಾನೆ :

ಸ್ವಲಕ್ಷಣ ಪ್ರಾದುರಭೂತ್ ಕಿಲಾಸ್ಯತಃ
ಸಮೇ ಋಷೀಣಾಮ್ಮೃಷಭಃ ಪ್ರಸೀದತಾಮ್ ।

ಜ್ಞಾನವನ್ನು ಪ್ರದಾನಮಾಡುವ ಋಷಿಗಳಲ್ಲಿ ವೃಷಭನು ಶ್ರೇಷ್ಠನೆಂದು ಇದರ ಟೀಕೆಯಲ್ಲಿ ಹೇಳಲಾಗಿದೆ.[೮]

ಸ್ಕಾಂದ ಪುರಾಣವು ವೃಷಭನ ಮಗ ಭರತನಿಂದ ಭಾರತವರ್ಷವೆಂಬ ಹೆಸರಾಯಿತೆಂದು ತಿಳಿಸುತ್ತದೆ.

ನಾಭೇಃ ಪುತ್ರಶ್ಚ ವೃಷಭಃ ಋಷಭಾತ್ ಭರತೋऽಭವತ್ ।
ತಸ್ಯ ನಾಮ್ನಾತ್ವಿದಂ ವರ್ಷಂ ಭಾರತಂ ಚೇತಿ ಕಥ್ಯತೇ ॥ (I, ii. ೩೭, ೫೭)

ನಾಭಿಯ ಪುತ್ರ ವೃಷಭ. ವೃಷಭನಿಂದ ಭರತನು ಜನಿಸಿದನು. ಆತನ ಹೆಸರಿನಿಂದಲೇ ಈ ದೇಶವನ್ನು 'ಭಾರತ'ವೆಂದು ಕರೆಯುತ್ತಾರೆ.

ಮಾರ್ಕಂಡೇಯ ಪುರಾಣದಲ್ಲಿ ಹೀಗೆ ಹೇಳಲಾಗಿದೆ :

ಋಷಭಾತ್ ಭರತೋ ಜಜ್ಞೇ ವೀರಃ ಪುತ್ರಶತಾದ್ವರಃ
ಸೋಭಿಷಿಚ್ಯರ್ಷಭಃ ಪುತ್ರಂ ಮಹಾ ಪ್ರಾವ್ರಾಜ್ಯಮಾಸ್ಥಿತಃ ।
ತಪಸ್ತೇ ಯೇ ಮಹಾಭಾಗಃ ಪುಲಹಾಶ್ರಮ ಸಂಶ್ರಯಃ
ಹಿಮಾಹ್ವಯಂ ದಕ್ಷಿಣಂ ವರ್ಷಂ ಭರತಾಯ ಪಿತಾ ದದೌ ।
ತಸ್ಮಾತ್ತು ಭಾರತಂ ವರ್ಷಂ ತಸ್ಯ ನಾಮ್ನಾ ಮಹಾತ್ಮನಃ ॥ (೪೩-೪೫)

'ವೃಷಭನ ಮಗ ಭರತ. ವೃಷಭನು ಭರತನಿಗೆ ರಾಜ್ಯಾಭಿಷೇಕವನ್ನು ಮಾಡಿ ಸಂನ್ಯಾಸವನ್ನು ಸ್ವೀಕರಿಸಿದನು. ವಾನಪ್ರಸ್ಥದ ಧರ್ಮಾನುಸಾರ ಮಹಾವ್ರತಗಳನ್ನು ಅನುಸರಿಸಿದನು. ದಕ್ಷಿಣ ಭಾರತದಲ್ಲಿರುವ ಹಿಮವೆಂಬ ದೇಶವನ್ನು ತಂದೆಯಿಂದ ಭರತನಿಗೆ ಕೊಡಲಾಯಿತು. ಅಲ್ಲಿಂದ ಮುಂದೆ ಭಾರತ ವರ್ಷವೆಂದು ಹೆಸರಾಯಿತು. ಭರತನಿಗೆ ಸುಮತಿಯೆಂಬ ಮಗನಿದ್ದನು.'

ಕೂರ್ಮ ಪುರಾಣದಲ್ಲಿ ಈ ಉಲ್ಲೇಖವು ಸಿಗುತ್ತದೆ :

ಹಿಮಾಹ್ವಯನ್ತು ಯದ್ವರ್ಷಂ ನಾಭೇರಾಸೀನ್ಮಹಾತ್ಮನಃ ।
ತಸ್ಯರ್ಷಭೋಽಭವತ್ಪುತ್ರೋ ಮರುದೇವ್ಯಾಂ ಮಹಾದ್ಯುತಿ
ಋಷಭಾದ್ಭರತೋ ಜಜ್ಞೇ ವೀರಃ ಪುತ್ರಃ ಶತಾಗ್ರಜಃ ॥ (lxi. ೩೭-೩೮)

'ಹಿಮಭೂಮಿಯಲ್ಲಿ ಮಹಾತ್ಮನಾದ ವೃಷಭನು ನಾಭಿರಾಜನಿಗೂ ಮಹಾದೇವಿಗೂ ಹುಟ್ಟಿದನು. ವೃಷಭನಿಗೆ, ನೂರು ಮಂದಿ ಮಕ್ಕಳಲ್ಲಿ ಹಿರಿಯವನೂ ಮಹಾನುಭಾವನೂ

ಆದ ಭರತನು ಹುಟ್ಟಿದನು.

ಬ್ರಹ್ಮಾಂಡ ಪುರಾಣ, ಪ್ರಭಾಸ ಪುರಾಣ, ನಾರದ ಪುರಾಣ ಮೊದಲಾದ ಪುರಾಣಗಳೂ ಸಹ ಈ ವಿಷಯವನ್ನು ಸ್ಪಷ್ಟಪಡಿಸುತ್ತವೆ.

ಭಾಗವತ ಪುರಾಣದ ಐದನೆಯ ಸ್ಕಂಧದಲ್ಲಿ ವೃಷಭನಾಥನ ಹುಟ್ಟು, ಜೀವನ, ತಪಸ್ಸಿನ ಬಗೆಗೆ ವಿಸ್ತೃತ ವರ್ಣನೆ ದೊರೆಯುತ್ತದೆ. ಇಲ್ಲಿ ಬರುವ ಹಲವು ವಿಷಯಗಳು ಜೈನ ಪುರಾಣಗಳ ವರ್ಣನೆಗಳೊಂದಿಗೆ ಹೊಂದಿಕೆಯಾಗುತ್ತವೆ. ವೈದಿಕ-ಜೈನ ಪರಂಪರಾನುಗತ ವಿಷಯಗಳ ಹಿನ್ನೆಲೆಯಲ್ಲಿ ಇಲ್ಲಿ ಆದಿನಾಥನ ಚಿತ್ರಣವನ್ನು ಕಾಣಬಹುದಾಗಿದೆ.

ವೃಷಭನ ವಂಶಪರಂಪರೆ, ಜನನ : ಸ್ವಾಯಂಭುವ ಮನುವಿನ ಮಗ ಪ್ರಿಯವ್ರತನ ಮಕ್ಕಳಲ್ಲಿ ಅಗ್ನೀಧ್ರನೂ ಒಬ್ಬನು. ಅಗ್ನೀಧ್ರ ಹಾಗೂ ಪೂರ್ವಚಿತ್ತಿಯರಲ್ಲಿ ನಾಭಿ, ಕಿಂಪುರುಷಾದಿ ಒಂಬತ್ತು ಮಕ್ಕಳು ಜನಿಸಿದರು. ಈ ಸಹೋದರರು ಮೇರುವಿನ ಮಕ್ಕಳಾದ ಮರುದೇವಿ, ಪ್ರತಿರೂಪೆ ಮೊದಲಾದ ಒಂಬತ್ತು ಮಂದಿಯನ್ನು ಕ್ರಮವಾಗಿ ಮದುವೆಯಾದರು.

ನಾಭಿರಾಜನು ಪುತ್ರರನ್ನು ಪಡೆಯಲೆಳಸಿ ಮರುದೇವಿಯೊಡನೆ ಭಗವಂತನಾದ ಯಜ್ಞಪುರುಷನನ್ನು ಆರಾಧಿಸಿದನು. ಭಗವಂತನು ಪ್ರತ್ಯಕ್ಷನಾದಾಗ ಅಲ್ಲಿ ನೆರೆದಿದ್ದ ಋತ್ವಿಜರು ಆತನನ್ನು ಸ್ತುತಿಸಿ 'ಈ ಪುತ್ರಾಭಿಲಾಷಿಯಾದ ನಾಭಿರಾಜನು ನಿನ್ನಂತಹ ಪುತ್ರನನ್ನೇ ಪಡೆಯಲೆಳಸುವುದಾಗಿ' ತಿಳಿಸಿದರು (iii-೧೩). ಭಗವಂತನು ಅಲ್ಲಿ ನೆರೆದಿದ್ದ ಋಷಿಗಳನ್ನು ಕುರಿತು 'ನಮ್ಮ ನಾಭಿರಾಜನಿಗೆ ನಿನ್ನಂತಹ ಮಗನಾಗಬೇಕು ಎಂದು ದುರ್ಲಭವಾದ ವರವನ್ನು ಬೇಡಿದಿರಿ. ಅದ್ವಿತೀಯನಾಗಿರುವುದರಿಂದ ನಾನೇ ಅಂಶರೂಪದಿಂದ ಈ ನಾಭಿರಾಜನ ಪತ್ನಿಯಲ್ಲಿ ಅವತರಿಸುತ್ತೇನೆ' ಎಂದು ಹೇಳಿದನು (ತತ ಆಗ್ನೀಧ್ರಿಯೇ ಕ್ಷೇತ್ರೇ ಅಂಶ ಕಲಯಾऽವತರಿಷ್ಯಾಮ್ಯಾತ್ಮತುಲ್ಯಮನುಪಲಭ್ಯಮಾನಃ—iii-೧೮).

ನಾಭಿರಾಜನಿಗೆ ಹಿತವನ್ನೆಳಸಿದ ಭಗವಂತನು ದಿಗಂಬರನಾಗಿಯೂ, ನೈಷ್ಠಿಕ ಬ್ರಹ್ಮಚಾರಿಗಳಾಗಿಯೂ, ತಪಸ್ವಿಗಳಾಗಿಯೂ ಇರುವ ವಾತರಶನ ಮೊದಲಾದ ಮಹರ್ಷಿಗಳ ಧರ್ಮವನ್ನು ಲೋಕಕ್ಕರುಹುವುದಕ್ಕಾಗಿ ಶುದ್ಧ ಸತ್ತ್ವಮಯವಾದ ಶರೀರದಿಂದ ಮೇರುದೇವಿಯಲ್ಲಿ ಅವತರಿಸಿದನು (ನಾಭೇಃ ಪ್ರಿಯ ಚಿಕೀರ್ಷಯಾ ತದವರೋಧಾಯನೇ ಮೇರುದೇವ್ಯಾಂ ಧರ್ಮಾನ್ ದರ್ಶಯಿತುಕಾಮೋವಾತರಶನಾನಾಂ ಶ್ರಮಣಾನಾಮೃಷೀಣಾಮೂರ್ಧ್ವಮಂಥಿನಾಂ ಶುಕ್ಲಯಾ ತನುವಾऽವತತಾರ (iii-೨೦).

ಭಾಗವತ ಪುರಾಣದಲ್ಲಿ ಬರುವ ಈ ಅಂಶವನ್ನು ಗಮನಿಸಿದಾಗ ಋಷಭನ ಅವತಾರವು ಎಷ್ಟು ಮಹತ್ತ್ವಪೂರ್ಣ ಸ್ಥಾನವನ್ನು ಗಳಿಸಿಕೊಂಡಿದೆ ಎಂದು ಸ್ಪಷ್ಟವಾಗುತ್ತದೆ. ವೈದಿಕ ಸಂಪ್ರದಾಯವು ವೃಷಭನನ್ನು ಸಾಕ್ಷಾತ್ ವಿಷ್ಣುವಿನ ಅವತಾರವೆಂದು ಹೇಳಿ ಗೌರವಿಸಿದೆ. ಹಿಂದೂ ಸಂಪ್ರದಾಯವು ಭಗವಂತನ ಅವತಾರಗಳಿಗೆ ಹೆಚ್ಚು ಮಾನ್ಯತೆಯನ್ನು ನೀಡಿ ಆ ಒಂದೊಂದು ಅವತಾರಗಳಲ್ಲಿಯೂ ಒಂದೊಂದು ವಿಶೇಷ ಕಾರ್ಯಸಿದ್ಧಿ-ಸಾಧನೆಗಳನ್ನು ಗುರಿಯನ್ನಾಗಿ ಹೊಂದಿರುತ್ತದೆ. ಜೈನ ಸಂಪ್ರದಾಯದಲ್ಲಿ ಭಗವಂತನ ಅವತಾರವೆಂಬುದಿಲ್ಲ. ಜೀವಿಯು ಭಗವಂತನಾಗುವ ಹಂತದವರೆಗೆ, ಹುಟ್ಟು ಸಾವುಗಳಿಂದ ಕಳಚಿಕೊಳ್ಳುವವರೆಗೆ, ನಾನಾ ಭವಗಳಲ್ಲಿ ಹುಟ್ಟಿಬಂದು ತನ್ನ ಸಾಧನೆ

ಯಿಂದ ಆತ್ಮಪರಿಪೂರ್ಣತೆಯನ್ನು ಗಳಿಸಿಕೊಳ್ಳುವ ರೀತಿಯನ್ನು ಅಲ್ಲಿ ಕಾಣುತ್ತೇವೆ.

ವೃಷಭನು ಮಕ್ಕಳನ್ನು ಪಡೆದು ರಾಜ್ಯಭಾರವನ್ನು ಮಾಡಿದ ಪ್ರಸಂಗ (ಭಾಗವತ ಪುರಾಣ – ೪ನೇ ಅಧ್ಯಾಯ) : ನಾಭಿರಾಜನು, ಶಿಶುವಿನ ಸ್ತುತ್ಯರ್ಹವಾದ ಶರೀರಕ್ಕೂ ಸಂಪತ್ತಿಗೂ ಕೀರ್ತಿಗೂ ಬಲಪರಾಕ್ರಮಗಳಿಗೂ ಅನುರೂಪವಾಗಿರುವಂತೆ ಋಷಭನೆಂದು ನಾಮಕರಣ ಮಾಡಿದನು. ಮಂತ್ರಿಗಳೇ ಮೊದಲಾದ ಅಧಿಕಾರಿಗಳು, ಪ್ರಜೆಗಳು, ಬ್ರಾಹ್ಮಣರು, ದೇವತೆಗಳು ಹುಟ್ಟುವಾಗಲೇ ಭಗವಂತನ ಲಕ್ಷಣಗಳಿಂದ ಕೂಡಿದ ಸಮಬುದ್ಧಿ, ವೈರಾಗ್ಯ, ಸಂಪತ್ತು ಮೊದಲಾದ ಸದ್ಗುಣಗಳಿಂದ ದಿನದಿನಕ್ಕೂ ಏಳಿಗೆಯನ್ನು ಪಡೆಯುತ್ತಿರುವ ಆ ಋಷಭ ಮೂರ್ತಿಯನ್ನು ಕಂಡು ಆತನೇ ದೊರೆಯಾಗಬೇಕೆಂದು ಬಯಸುತ್ತಿದ್ದರು.

ವೃಷಭದೇವನು ರಾಜ್ಯವನ್ನಾಳುವಾಗ ಮಹೇಂದ್ರನು ಆತನೊಡನೆ ಪೈಪೋಟಿ ನಡೆಸುತ್ತಾ ಅವನ ರಾಷ್ಟ್ರದಲ್ಲಿ ಮಳೆಯನ್ನು ಕರೆಯಲಿಲ್ಲ. ಆಗ, ಭಗವಂತನಾದ ವೃಷಭ ಮೂರ್ತಿಯು ಇಂದ್ರನಿಂದಲೇ ಹೀಗಾಗಿರುವುದೆಂದು ನಿಶ್ಚಯಿಸಿ, ಅವನ ಮರುಳಾಟಕ್ಕೆ ನಗುತ್ತಾ ತನ್ನ ಯೋಗ ಪ್ರಭಾವದಿಂದಲೇ ಅಜನಾಭವೆಂಬ ಹೆಸರುಳ್ಳ ಭಾರತವರ್ಷದಲ್ಲಿ ಮಳೆಗರೆದನು. ಇಂತಹ ಮಹಿಮಾದಿಗಳಿಂದ ಆತನಿಗೆ 'ಋಷ'ನೆಂದು ಹೆಸರಾಯಿತು. ಜೈನ ಪುರಾಣಗಳಲ್ಲಿ ಮಹೇಂದ್ರನು ಈರ್ಷ್ಯಾಹೃದಯಿಯಲ್ಲವಾದ್ದರಿಂದ ತಾನೇ ನಿಂತು ಋಷಭನ ಗರ್ಭಾವತರಣಾದಿ ಪಂಚಕಲ್ಯಾಣಗಳನ್ನು ನಡೆಸುವನು.

ನಾಭಿರಾಜನು ತನ್ನ ಮಗನು ಸುಸಂಗತವಾಗಿ ರಾಜ್ಯವನ್ನಾಳುತ್ತಿರುವಾಗ ಸಂತುಷ್ಟನಾಗಿ ಮೇರುದೇವಿಯೊಡನೆ ಬದರಿಕಾಶ್ರಮಕ್ಕೆ ತೆರಳಿ ತಪವನ್ನಾಚರಿಸಿ ಭಗವಂತನಲ್ಲಿ ಐಕ್ಯನಾಗುವನು ಎಂಬ ವಿಚಾರವು ಭಾಗವತ ಪುರಾಣದಲ್ಲಿ ಬರುತ್ತದೆ. ಆದರೆ ನಾಭಿರಾಜನು ಈ ಸಂದರ್ಭದಲ್ಲಿ ವೈರಾಗ್ಯಪರನಾಗುವ ವಿಚಾರವು ಜೈನಪುರಾಣಗಳಲ್ಲಿ ದೊರಕುವುದಿಲ್ಲ.

ಋಷಭದೇವನು ತನ್ನ ಅಜನಾಭವರ್ಷವು ಸ್ವರ್ಗಾಪವರ್ಗದ ಸಾಧನವಾದ ಕರ್ಮಾಚರಣೆಗೆ ಯೋಗ್ಯವಾದುದೆಂದು ತಿಳಿದು ಗುರುಕುಲದಲ್ಲಿ ನೆಲಸಿ ಗುರುಗಳ ಶುಶ್ರೂಷೆ ಮಾಡುತ್ತಾ ವಿದ್ಯಾಭ್ಯಾಸ ಮಾಡುವ ಪದ್ಧತಿಯನ್ನು ಆರಂಭಿಸಿದನು ಮತ್ತು ಇತರರಿಗೆ ಮಾರ್ಗದರ್ಶನ ಮಾಡಲು ಗೃಹಸ್ಥನಾಗಬೇಕೆಂದು ಬಯಸಿದನು. ಇಂದ್ರನು ಈತನಿಗೆ ಜಯಂತಿಯೆಂಬ ಕನ್ಯೆಯನ್ನು ಕೊಟ್ಟು ಶಾಸ್ತ್ರೋಕ್ತವಾಗಿ ಮದುವೆ ಮಾಡಿದನು. ಈ ಮಡದಿಯಲ್ಲಿ ತನಗೆ ಸಮಾನರಾದ ನೂರು ಮಂದಿ ಪುತ್ರರನ್ನು ಪಡೆದನು. ಆ ಪುತ್ರರಲ್ಲಿ ಮಹಾಯೋಗಿಯಾದ ಭರತನು ಜ್ಯೇಷ್ಠನೂ, ಗುಣಗರಿಷ್ಠನೂ ಆಗಿದ್ದನು. ಆತನಾಳುತ್ತಿದ್ದುದರಿಂದಲೇ ಅಜನಾಭವೆಂಬ ಈ ಭೂಮಂಡಲಕ್ಕೆ ಭಾರತವರ್ಷವೆಂದು ಹೆಸರಾಯಿತು (ಯೇಷಾಂ ಖಲು ಮಹಾಯೋಗೀ ಭರತೋ ಜ್ಯೇಷ್ಠ ಶ್ರೇಷ್ಠಗುಣ ಆಸೀದ್ಯೇನೇದಂ ವರ್ಷಂ ಭಾರತಮಿತಿ ವ್ಯಪದಿಶಂತಿ).

ಋಷಭನ ರಾಜ್ಯಭಾರ ಕಾಲದಲ್ಲಿ ಎಲ್ಲೆಡೆ ಧರ್ಮನಿರ್ಭರತೆಯು ನೆಲೆಸಿತ್ತು. ಜನರು ಕಂಡವರ ಪದಾರ್ಥಗಳನ್ನು ಬಯಸಿದವರಾಗಿರಲಿಲ್ಲ. ಹೀಗಿರುವಾಗ ಒಮ್ಮೆ ಋಷಭನು ದೇಶಾಟನವನ್ನು ಮಾಡುತ್ತಾ ಬ್ರಹ್ಮಾವರ್ತಕ್ಕೆ ತೆರಳಿ, ಅಲ್ಲಿರುವ ಮಹಾತ್ಮರಾದ ಬ್ರಹ್ಮರ್ಷಿಗಳ ಸಮ್ಮುಖದಲ್ಲಿ ಸಕಲ ಪ್ರಜೆಗಳೂ ಕೇಳುವಂತೆ, ಜಿತೇಂದ್ರಿಯರಾಗಿಯೂ, ವಿನೀತ

ರಾಗಿಯೂ, ಪಿತೃಭಕ್ತಿಯುಕ್ತರಾಗಿಯೂ ಇರುವ ತನ್ನ ಪುತ್ರರನ್ನು ಕುರಿತು ಉಪದೇಶ ಮಾಡತೊಡಗಿದನು.

ಋಷಭದೇವನಿಂದ ಮಕ್ಕಳಿಗೆ ತತ್ತ್ವೋಪದೇಶ, ಋಷಭನ ವೈರಾಗ್ಯ : ಭಾಗವತ ಪುರಾಣದ ಐದನೆಯ ಸ್ಕಂಧ ಐದನೆಯ ಅಧ್ಯಾಯದಲ್ಲಿ ಬರುವ ಈ ಭಾಗವು ಜೈನ ತತ್ತ್ವಕ್ಕೆ ಸಂಬಂಧಿಸಿದ ಹಲವಾರು ವಿಚಾರಗಳನ್ನು ನಿರೂಪಿಸುತ್ತದೆ. ಉದಾಹರಣೆಗೆ, ಈ ಭೂಲೋಕದಲ್ಲಿ ಜನ್ಮವನ್ನು ಪಡೆಯುವ ಸಕಲ ಪ್ರಾಣಿಗಳಿಗೂ ಆಹಾರ, ನಿದ್ದೆ, ಭಯ, ಮೈಥುನಾದಿ ಕರ್ಮಗಳು ಸಮಾನವಾಗಿದ್ದರೂ ಸದಸದ್ವಿವೇಕವೆಂಬುದು ಅಧಿಕವಾಗಿರುವುದರಿಂದ ಮಾನವಜನ್ಮವೆಂಬುದು ಎಲ್ಲಕ್ಕಿಂತಲೂ ಶ್ರೇಷ್ಠವೆನಿಸಿರುವುದು. ಆದುದರಿಂದ ಉತ್ತಮವಾದ ಈ ಮನುಷ್ಯ ಶರೀರವು ಸತ್ತ್ವಶುದ್ಧಿಯನ್ನುಂಟು ಮಾಡಿ ಮೋಕ್ಷವನ್ನು ಕೊಡುವ ಭಗವದಾರಾಧನಾರೂಪವಾದ ತಪಸ್ಸನ್ನು ಮಾಡುವುದಕ್ಕೆ ತಕ್ಕುದೇ ಹೊರತು ವಿಷಯ ಭೋಗಗಳಿಗೆ ತಕ್ಕುದಲ್ಲ (V-೫-೧). ಈಗಿನ ಶರೀರಾದಿಗಳು ನಶ್ವರವಾದರೂ ಮರಳಿ ಮರಳಿ ಶರೀರಗಳು ಅವಿಚ್ಛಿನ್ನವಾಗಿ ಬರುತ್ತಲೇ ಇರುವುವಾದುದರಿಂದ ಪಾಪದಂತೆ ಪುಣ್ಯಕರ್ಮವೂ ಸಹ ಸಂಸಾರಹೇತುವೇ ಆಗಿರುವುದೆಂದರಿತು ಇವೆರಡನ್ನೂ ನಾಶಗೊಳಿಸುವ ತತ್ತ್ವಜ್ಞಾನವನ್ನು ಸಂಪಾದಿಸಿರಿ (V-೫-೫) ಇತ್ಯಾದಿ.

ಭಕ್ತಿ, ಜ್ಞಾನ, ವೈರಾಗ್ಯಗಳಿಂದ ಕೂಡಿದ ಸಂನ್ಯಾಸಧರ್ಮವನ್ನು ಉಪದೇಶಿಸಲೆಳಸಿ, ತಾನು ಆ ಧರ್ಮವನ್ನು ಆಚರಿಸಿ ತೋರುವುದಕ್ಕಾಗಿ ತನ್ನ ನೂರು ಮಂದಿ ಮಕ್ಕಳಲ್ಲಿ ಹಿರಿಯವನಾಗಿಯೂ, ಭಾಗವತ ಶಿರೋಮಣಿಯಾಗಿಯೂ, ಭಕ್ತಜನರಿಗಾಶ್ರಯನಾಗಿಯೂ ಇರುವ ಭರತ ಮಹಾರಾಜನಿಗೆ ಸಾಮ್ರಾಜ್ಯ ಪಟ್ಟಾಭಿಷೇಕವನ್ನು ಮಾಡಿ ತನ್ನ ಉಡುಗೆ ತೊಡುಗೆಗಳನ್ನೆಲ್ಲಾ ಮನೆಯಲ್ಲಿಯೇ ತೊರೆದು ನಗ್ನನಾಗಿ ಆಹವನೀಯಾದಿ ವೈದಿಕಾಗ್ನಿಗಳನ್ನು ಆತ್ಮಸಮಾರೋಪಣೆ ಮಾಡಿ ಕೂದಲನ್ನು ಬಿರಿಹೊಯ್ದುಕೊಂಡು ದಿಗಂಬರನಾಗಿ ಬ್ರಹ್ಮಾವರ್ತವನ್ನು ತೊರೆದನು (V-೫-೫). ಆತನು ಜನರ ಗುಂಪಿನಲ್ಲಿ ತೆರಳುವಾಗ ಯಾರು ಮಾತನಾಡಿಸಿದರೂ ಹೆಡ್ಡನಂತೆ ಗಮನಿಸದೆ, ಪಿಶಾಚದಂತೆ ಆಡುತ್ತ, ಹುಚ್ಚನಂತೆ ಕುಣಿಯುತ್ತ, ಮೌನವನ್ನು ಧರಿಸಿ ಸುಮ್ಮನಿರುತ್ತಿದ್ದನು. ಈ ಪ್ರಕಾರವಾಗಿ ಪಟ್ಟಣಗಳಲ್ಲಿಯೂ ಬೆಟ್ಟಗುಡ್ಡಗಳಲ್ಲಿಯೂ ಗ್ರಾಮಗಳಲ್ಲಿಯೂ ಸೇನಾ ನಿವೇಶನಗಳಲ್ಲಿಯೂ ದನಗಳ ಮಂದೆಗಳಲ್ಲಿಯೂ ಗೊಲ್ಲ ದೊಡ್ಡಿಗಳಲ್ಲಿಯೂ ಊರಿಂದೂರಿಗೆ ತೆರಳುವ ವರ್ತಕರ ಗುಂಪಿನಲ್ಲಿಯೂ ಕಾಡುಮೇಡುಗಳಲ್ಲಿಯೂ ಋಷ್ಯಾಶ್ರಮಗಳಲ್ಲಿಯೂ ಎಲ್ಲೆಂದರಲ್ಲಿ ಸ್ವೇಚ್ಛೆಯಾಗಿ ಸಂಚರಿಸುತ್ತಿದ್ದನು. ದಾರಿಯಲ್ಲಿ ಪುಂಡುಪೋಕರಿಗಳು ಇವನನ್ನು ಹೆದರಿಸುತ್ತ, ಹೊಡೆಯುತ್ತ, ಮೇಲೆ ಉಗುಳುತ್ತ, ಮೂತ್ರವನ್ನು ಬಿಡುತ್ತ, ಅಮೇಧ್ಯ-ಕಲ್ಲು-ಮಣ್ಣುಗಳನ್ನು ಎರಚುತ್ತ ಬಗೆ ಬಗೆಯಾಗಿ ಹಿಂಸಿಸುತ್ತಿದ್ದರೂ ನೊಣಗಳ ಕಾಟವನ್ನು ಲೆಕ್ಕಿಸದ ಕಾಡಾನೆಯಂತೆ ಅದನ್ನೆಲ್ಲ ಲಕ್ಷ್ಯಮಾಡದೆಯೇ ತೊಂದರೆಗಳನ್ನು ಸಹಿಸಿಕೊಂಡು ಒಂಟಿಯಾಗಿ ಭೂಮಂಡಲವನ್ನೆಲ್ಲ ಸಂಚರಿಸುತ್ತಿದ್ದನು (V-೫೨೮-೩೦).

ಈ ಕಷ್ಟಕಾರ್ಪಣ್ಯಗಳಲ್ಲಿಯೂ ವೃಷಭದೇವನ ಅಂಗಾಂಗಗಳು ಬಹು ಸುಕುಮಾರವಾಗಿದ್ದವು ; ಮುಖದಲ್ಲಿ ಮುಗುಳ್ನಗೆ ಅರಳಿದ್ದಿತು; ಬೊಗಸೆಗಣ್ಣುಗಳು ಅರಳಿದ ತಾವರೆಯಂತಿದ್ದುವು; ಕಣ್ಣಿನ ಪಾಪೆಗಳು ಮರಿದುಂಬಿಗಳಂತಿದ್ದುವು; ಕಪೋಲ, ಕಂಠ, ಮೂಗು

ಗಳು ಆತನ ರೂಪಕ್ಕೆ ಅನುರೂಪವಾಗಿದ್ದುವು. ಈತನ ಹೊಂಬಣ್ಣದ ನಿಡುಕೂದಲು ಜಡೆಗಟ್ಟಿ ಜೋಲುತ್ತಿದ್ದಿತು. ನಿರಭಿಮಾನಿಯಾದ ಈತ ಮಲಧಾರಿಯಾಗಿ ಹುಚ್ಚನಂತೆ ಕಾಣುತ್ತಿದ್ದನು. ಜನಸಂದಣಿಯು ಧ್ಯಾನಕ್ಕೆ ಪ್ರತಿಕೂಲವೆಂದು ಭಾವಿಸಿದನು. ಅವರ ದುಷ್ಕೃತ್ಯಗಳಿಗೆ ಪ್ರತೀಕಾರವನ್ನು ನೆನೆಯದೆ ಅಜಗರ ವೃತ್ತಿಯನ್ನು ಅವಲಂಬಿಸಿ ಒಂದೇ ಕಡೆಯಲ್ಲಿ ಮಲಗಿ ಅನ್ನವನ್ನು ಉಣ್ಣುವನು, ನೀರನ್ನು ಕುಡಿಯುವನು (V-೫-೩೧, ೩೨).

ಯೋಗಮಹಿಮೆಯಿಂದ ವೃಷಭದೇವನ ಮಲವು ಸುಗಂಧವಾಗಿ ಹತ್ತುಗಾವುದದ ವರೆಗೆ ವಾತಾವರಣವನ್ನು ಕಂಪುಗೊಳಿಸಿತು. ಲೋಕದ ಇತರ ಯೋಗಿಗಳಿಗೆ ಮಾರ್ಗ ದರ್ಶನ ನೀಡಲು ಈತನು ನಾನಾ ಬಗೆಯ ಯೋಗಗಳನ್ನು ಆಚರಿಸಿದನು. ಈತನು ಬ್ರಹ್ಮಾನಂದಸ್ವರೂಪಿಯಾಗಿದ್ದನು. ಸಕಲ ಭೂತಗಳಿಗೂ ಅಂತರಾತ್ಮನಾಗಿರುವ ವಾಸು ದೇವನೇ ತಾನಾಗಿ ಈತನು ದೇಹೋಪಾದಿಶೂನ್ಯನಾಗಿದ್ದನು. ಸ್ವತಃ ಸಿದ್ಧವಾದವುಗಳಾದ ಸಕಲ ಫಲಗಳಿಂದ ಈತನು ಪರಿಪೂರ್ಣನಾಗಿದ್ದನು. ಆಕಾಶಗಮನ, ಮನೋವೇಗ ಸದೃಶವಾದ ಶರೀರವೇಷ, ಮರೆಯಾಗುವುದು, ಪರಕಾಯ ಪ್ರವೇಶ, ದೂರದರ್ಶಿತ್ವ ಮುಂತಾದ ಯೋಗಮಹಿಮೆಗಳು ತನ್ನಲ್ಲಿದ್ದರೂ ಇವಕ್ಕೆ ಈತನು ಎಂದೂ ಮರುಳಾಗ ಲಿಲ್ಲ (V-೫-೩೩, ೩೪, ೩೫).

ಭಾಗವತಪುರಾಣದಲ್ಲಿ ಬರುವ ಮೇಲಿನ ಎಷ್ಟೋ ವಿಷಯಗಳು ಪರಂಪರಾನುಗತ ವಾಗಿ ಬಂದಿರುವ ಜೈನ ಪುರಾಣವಿಷಯಗಳಿಗೆ ಅನ್ವಯವಾಗುತ್ತವೆ. ಜೈನ ಪುರಾಣಗಳ ಲ್ಲಿಯೂ ಸಹ ಯೋಗಿಗಳಿಗೆ ಉಂಟಾಗುವ ಅಲೌಕಿಕ ಋದ್ಧಿಗಳ ಪ್ರಸ್ತಾಪ ಬರುತ್ತದೆ. ಉದಾಹರಣೆಗೆ ಅಮೃತ ಸ್ರವಿಸುವಿಕೆ—ಈ ಋದ್ಧಿ ಬಂದನಂತರ ಮುನಿಗೆ ಆಹಾರವೇ ಬೇಕಾಗುವುದಿಲ್ಲ. ಅಪಕ್ವಾಹಾರದ ವಮನ, ಮುನಿಯ ಉಗುಳು, ಬೆವರು ಇವೆಲ್ಲ ಪ್ರಾಣಿ ಗಳ ಕಠಿಣವಾದ ರೋಗಗಳಿಗೆ ಸಂಜೀವಿನಿ ಎನಿಸುವುದು. ತಪಸ್ಸಾಮರ್ಥ್ಯದಿಂದ ಮನೋ ಬಲ, ವಾಗ್ಬಲ, ಕಾಯಬಲ, ಋದ್ಧಿಗಳು ಉಂಟಾಗುವುವು (ಮಹಾಪುರಾಣ XXXVI-೧೫೫, ೧೫೬).

ಋಷಭದೇವನು ಸಕಲ ಲೋಕಪಾಲಕರಲ್ಲಿ ತಿಲಕಪ್ರಾಯನಾಗಿ ಇದ್ದರೂ ಅವಧೂತ ಸಂನ್ಯಾಸಿಗಳ ವೇಷ-ಭಾಷೆಯಿಂದ ಜಡನಂತೆ ಕಾಣಿಸಿಕೊಂಡನು. ತನ್ನ ಭಗವತ್ ಸ್ವರೂಪ ವನ್ನು ತೋರಗೊಡದೆ ವ್ಯವಹರಿಸಿದನು. ಯೋಗಿಗಳು ಹೇಗೆ ಸಾವನ್ನು ಸ್ವಾಗತಿಸಬೇಕೆಂಬು ದನ್ನು ಪ್ರಚುರಪಡಿಸುವ ಸಂಕಲ್ಪವನ್ನು ಈತನು ಮಾಡಿದನು. ತನಗೂ ಪರಮಾತ್ಮನಿಗೂ ಅಂತರವಿಲ್ಲವೆಂದು ಅಭೇದದೃಷ್ಟಿಯನ್ನು ತಾಳಿ ಪರಮಾತ್ಮನಲ್ಲಿ ತನ್ಮಯನಾಗಿ ವಿಷಯ ವಾಸನೆಗಳಿಂದ ದೂರನಾಗಿ ದೇಹಾಭಿಮಾನವನ್ನು ತೊರೆದನು. ಜೀವನ್ಮುಕ್ತನಾಗಿ ಭೂ ಮಂಡಲವನ್ನು ಸುತ್ತುತ್ತಾ ಕೊಂಕ, ವೆಂಕ, ಪಟ, ಕುಟಕಗಳೆಂಬ ದಕ್ಷಿಣ ಕನ್ನಡ ದೇಶಗಳಿಗೆ ತೆರಳಿ ಕುಟಕಾಚಲದ ಉಪವನದಲ್ಲಿ ಹುಚ್ಚನಂತೆ ಕೂದಲನ್ನು ಬಿರಿಹೊಯ್ದುಕೊಂಡು ದಿಗಂಬರನಾಗಿ ಅಲೆದನು. ಹೀಗಿರುವಾಗ ಆ ಕಾಡಿನಲ್ಲಿ ಬಿರುಗಾಳಿಯು ಬೀಸಿತು. ಬಿದಿರುಮೆಳೆಗಳು ಗಾಳಿಯಿಂದ ಅಲುಗಾಡುತ್ತಾ ಒಂದಕ್ಕೊಂದು ಉಜ್ಜಿ ಬೆಂಕಿಯು ಕಾಣಿಸಿಕೊಂಡು ಆ ಕಾಡನ್ನೆಲ್ಲಾ ಆವರಿಸಿತು. ಕಾಡಿನೊಳಗೆ ಆತ್ಮಾರಾಮನಾದ ವೃಷಭ ಮೂರ್ತಿಯನ್ನು ಆ ಬೆಂಕಿಯು ಕಬಳಿಸಿತು (೫-೬-೮).

ರಜೋಗುಣಯುಕ್ತರಾಗಿ ಕೇವಲ ಕರ್ಮಮಾರ್ಗಾಸಕ್ತರಾದ ಜನರಿಗೆ ಮೋಕ್ಷಮಾರ್ಗವನ್ನು ತೋರಲು ಋಷಭಾವತಾರವಾಗಿದೆ (ಅಯಮವತಾರೋ ರಜಸೋ ಪಪ್ಲುತ ಕೈವಲ್ಯೋಪ ಶಿಕ್ಷಣಾರ್ಥಃ ತಸ್ಮಾನುಗುಣಾನ್ ಶ್ಲೋಕಾನ್ ಗಾಯಂತಿ, V-೬-೧೨).

ಭಾಗವತಕಾರರು, ವೃಷಭದೇವನ ಮಹಿಮಾಪೂರ್ಣವಾದ ಪಾತ್ರವನ್ನು ಶ್ರಮಣರಲ್ಲಿ ಶ್ರಮಣರಾಗಿ ಅವಲೋಕಿಸಿದ್ದಾರೆ. ಇವರು ಅಥವಾ ಆರ್ಯರು ಆತನ ವ್ಯಕ್ತಿತ್ತ್ವದ ಭಗವತ್ ಪ್ರಭಾವಕ್ಕೆ ಒಳಗಾಗಿರುವುದನ್ನು ಇಲ್ಲಿ ಹೆಜ್ಜೆಹೆಜ್ಜೆಗೂ ನಾವು ಕಾಣಬಹುದು. ಭಗವಂತನಾದ ನಾರಾಯಣನೇ ವಾತರಶನಾ ಶ್ರಮಣ ಋಷಿಗಳ ಧರ್ಮವನ್ನು ಪ್ರಕಟಿಸಲು ವೃಷಭಾವತಾರ ತಾಳಿದನೆಂದು ಇವರು ಹೇಳಿದ್ದಾರೆ. ವಿಭೂತಿ ಇರುವೆಡೆಯಲ್ಲೆಲ್ಲಾ ನಾರಾಯಣನಿರುವನೆಂಬ ಇವರ ನಂಬಿಕೆ ಅಚಲವಾದುದು. ಅವತಾರಪ್ರಿಯರಾದ ವೈದಿಕರ ಕಣ್ಣಿಗೆ ವೃಷಭ ತೀರ್ಥಂಕರನೂ ಅವತಾರ ಪುರುಷನಾಗಿ ಕಂಡುದರಲ್ಲಿ ಆಶ್ಚರ್ಯವಿಲ್ಲ.

"ಶಿವಪುರಾಣವು ಋಷಭ ತೀರ್ಥಂಕರನನ್ನು ಅವತಾರಪುರುಷನೆಂದು ಪರಿಗಣಿಸುತ್ತದೆ. ಹೀಗೆ ಶಂಕರನಾದ ನನಗೆ ಋಷಭಾವತಾರವು ಉಂಟಾಗುತ್ತದೆ. ಸಜ್ಜನರ ದಾರಿದೀಪವೆಂಬಂತೆ ಮತ್ತು ದೀನಬಂಧುವೆಂಬಂತೆ ಒಂಬತ್ತನೆಯ ಅವತಾರವು ಉಂಟಾಗುತ್ತದೆ. ಋಷಭನ ಜೀವನವು ಅತ್ಯಂತ ಪಾವನವೂ ಮಹತ್ತ್ವದ್ದೂ ಆಗಿದೆ. ಋಷಭನ ಚರಿತ್ರೆಯನ್ನು ಕೇಳಿದವರಿಗೆ ಸ್ವರ್ಗಪ್ರಾಪ್ತಿಯೂ ಯಶಸ್ಸೂ ಆಯುಸ್ಸೂ ಲಭಿಸುತ್ತದೆ" ಎಂದು ಹೇಳಲಾಗಿದೆ (V-೪೭-೪೮).

ಬೌದ್ಧರೂ ಸಹ ವೃಷಭನನ್ನು ಅತ್ಯಂತ ಪ್ರಾಚೀನ ರಾಜರುಗಳಲ್ಲಿ ಒಬ್ಬನೆಂದು ಉಲ್ಲೇಖಿಸುತ್ತಾರೆ. ಅಲ್ಲದೆ ಕೈಲಾಸ ಪರ್ವತದಲ್ಲಿ ತಪಸ್ಸನ್ನು ಆಚರಿಸಿ ಸಿದ್ಧತ್ತ್ವವನ್ನು ಪಡೆದನೆಂದು ಅವರ ಗ್ರಂಥಗಳು ಉಲ್ಲೇಖಿಸುತ್ತವೆ.[೯]

## ಐತಿಹಾಸಿಕ ಸಾಕ್ಷ್ಯಾಧಾರಗಳಲ್ಲಿ ವೃಷಭನ ಉಲ್ಲೇಖ

ಈಚಿನ ಸಿಂಧ್ ಪ್ರಾಂತದ ಲರ್ಕಾನಾ ಜಿಲ್ಲೆಗೆ ಸೇರಿದ ಮೊಹೆಂಜೊದಾರೋ ಮತ್ತು ಪಂಜಾಬಿನ ಮಾಂಟ್ಗೊಮೆರಿ ಜಿಲ್ಲೆಯ ಹರಪ್ಪ ಎಂಬ ಸ್ಥಳಗಳಲ್ಲಿ ಪುರಾತತ್ತ್ವ ಶೋಧನೆಗಳು ನಡೆದಿವೆ.[೧೦] ಸುಮಾರು ೫೦೦೦ ವರ್ಷದ ಹಿಂದಿನ ನಾಗರಿಕತೆಯನ್ನು ಇದು ಸಾರುತ್ತದೆಂದು ಇತಿಹಾಸಜ್ಞರು ಹೇಳುತ್ತಾರೆ. ಇಲ್ಲಿ ದೊರೆತ ಕೆಲವು ಅವಶೇಷಗಳಿಂದ ಅವರು ಅಲ್ಲಿಯ ಜನಜೀವನದ ಬಗೆಗೆ ವಿಶೇಷ ಬೆಳಕನ್ನು ಚೆಲ್ಲಿದ್ದಾರಲ್ಲದೆ ಆ ಜನತೆಯ ಧಾರ್ಮಿಕ ಜೀವನದ ಬಗೆಗೂ ಕೆಲವು ವಿಚಾರಧಾರೆಗಳನ್ನು ಹರಿಸಿದ್ದಾರೆ. ಇವುಗಳಲ್ಲಿ ಗಮನಿಸಬೇಕಾದ ಅಂಶಗಳೆಂದರೆ, ಹರಪ್ಪಾ ಮತ್ತು ಮೊಹೆಂಜೊದಾರೋ ಸಂಸ್ಕೃತಿ ಪ್ರಾಗ್ವೈದಿಕವಾದುದು ಮತ್ತು ಅದು ದ್ರಾವಿಡಪರಂಪರೆಗೆ ಸೇರಿದುದು ಎಂಬುದು.[೧೧]

ಹರಪ್ಪಾ-ಮೊಹೆಂಜೊದಾರೋವಿನಲ್ಲಿ ದೊರೆಯುವ ಸಾಕ್ಷ್ಯಗಳ ಆಧಾರದಿಂದ, ಮೊಹೆಂಜೊದಾರೋವಿನಲ್ಲಿ ದೇವಿ(ಪ್ರಕೃತಿ)ಯೊಂದಿಗೆ ಶಿವನ ಪ್ರತೀಕವಾದ ಪುರುಷ ದೇವತೆಯನ್ನು ಸಹ ಪೂಜಿಸಲಾಗುತ್ತಿತ್ತು ಎಂದು ಕೆಲವರು ಇತಿಹಾಸಜ್ಞರು ಅಭಿಪ್ರಾಯಪಡುತ್ತಾರೆ. ಒಂದು ಮೊಹರಿನಲ್ಲಿ ಈ ದೇವತೆಯನ್ನು ಪ್ರಾಣಿಗಳಿಂದ ಸುತ್ತುಗಟ್ಟಲ್ಪಟ್ಟು

ಯೋಗಮುದ್ರೆಯಲ್ಲಿರುವಂತೆ ಚಿತ್ರಿಸಲಾಗಿದೆ. ಆ ವಿಗ್ರಹದಲ್ಲಿ ಅವನಿಗೆ ಮೂರು ತಲೆಗಳಿರುವಂತೆ ಕಾಣಿಸಿದೆ. ಅವನ ಕೇಶದ ಎರಡು ಕಡೆಯೂ ಎರಡು ಕೊಂಬುಗಳಿವೆ. ಈ ವಿಗ್ರಹವು ತರುವಾಯ ಶಿವನ ಬಗ್ಗೆ ಮೂಡಿರುವ ಕಲ್ಪನೆಯನ್ನು ಹೋಲುವುದಲ್ಲದೆ ಅದನ್ನು ಬಹುಮಟ್ಟಿಗೆ ವಿವರಿಸುವಂತಿರುವುದು ಸ್ವಾರಸ್ಯದ ಸಂಗತಿ. ಶಿವನನ್ನು 'ಮಹಾ ಯೋಗಿ' ಎಂದು ಪರಿಗಣಿಸಿರುವುದಲ್ಲದೆ 'ಪಶುಪತಿ' ಅಥವಾ ಪ್ರಾಣಿಗಳ ಒಡೆಯನೆಂದು ಕರೆಯುತ್ತಾರೆ. ಅವನ ಮುಖ್ಯ ಲಾಂಛನ ತ್ರಿನೇತ್ರ ಹಾಗೂ ತ್ರಿಶೂಲ. ಹೀಗಿರುವಲ್ಲಿ ಮೊಹೆಂಜೊದಾರೋವಿನ ಶಿವನ ಯೋಗಭಂಗಿ 'ಮಹಾಯೋಗಿ' ಎಂಬ ಹೆಸರನ್ನೂ, ಆತನ ಸುತ್ತಲೂ ಕಂಡುಬರುವ ಪ್ರಾಣಿಗಳು 'ಪಶುಪತಿ' ಎಂಬ ಹೆಸರನ್ನೂ ಸಮರ್ಥಿಸುತ್ತವೆ.[೧೨] ಶಿವ-ಶಕ್ತಿ ಆರಾಧನೆಯೇ ಅಲ್ಲದೆ, 'ಸರ್ವಚೇತನವಾದ' ವೆಂದು ನಾವು ಇಂದು ಕರೆಯುವ ಪ್ರಾಚೀನ ಧರ್ಮವೂ ಅಸ್ತಿತ್ವದಲ್ಲಿತ್ತೆಂದೂ ತಿಳಿದುಬರುತ್ತದೆ. ಕಲ್ಲು, ಮರ ಹಾಗೂ ಪ್ರಾಣಿಗಳಲ್ಲಿ ದುಷ್ಟ ಅಥವಾ ಶುಭ ಶಕ್ತಿಗಳು ನೆಲೆಯಾಗಿವೆಯೆಂದು ಅವುಗಳನ್ನು ಆರಾಧಿಸುವುದೇ ಸರ್ವಚೇತನ ಪಂಥ. ಈ ಶಕ್ತಿಗಳ ಸ್ವರೂಪವಾದ ಯಕ್ಷರು, ನಾಗರು, ಮೊದಲಾದವರ ಆರಾಧನೆ ಈ ಪಂಥದ ವೈಶಿಷ್ಟ್ಯವಾಗಿದೆ. ಇವುಗಳಿಗೆ ಸಂಬಂಧಿಸಿದ ಅವಶೇಷಗಳೆಲ್ಲ ಮೊಹೆಂಜೊದಾರೋ ನಿವೇಶನದಲ್ಲಿ ದೊರೆತಿವೆ. ಈ ಸಕಲ ಲಕ್ಷಣಗಳನ್ನು ಹೊಂದಿರುವ ಆಧುನಿಕ ಹಿಂದೂಧರ್ಮ ಹೆಚ್ಚಿನ ಮಟ್ಟಿಗೆ ಸಿಂಧೂ ಕಣಿವೆಯ ಸಂಸ್ಕೃತಿಗೆ ಸಂಬಂಧಪಟ್ಟಿದೆ. ಆದ್ದರಿಂದ ಪ್ರಾಚೀನ ಸಿಂಧೂ ಕಣಿವೆಯ ಸಂಸ್ಕೃತಿಗೂ ಇಂದಿನ ಹಿಂದೂ ಧರ್ಮಕ್ಕೂ ನಿಕಟ ಸಂಬಂಧವಿದೆ ಎಂದು ಹೇಳಬೇಕು ಎಂದಿದ್ದಾರೆ.[೧೩]

ರಾಮ್ ಪ್ರಸಾದ್ ಚಂದಾ[೧೪], ಪೂಜ್ಯ ಶ್ರೀ ಮುನಿವಿದ್ಯಾನಂದ[೧೫], ಟಿ. ಎಸ್. ರಾಮಚಂದ್ರನ್[೧೬] ಮೊದಲಾದವರು ಮೊಹೆಂಜೊದಾರೋವಿನಲ್ಲಿ ದೊರೆಯುವ ಸಾಕ್ಷ್ಯಗಳ ಆಧಾರದಿಂದ ಆ ಸಂಸ್ಕೃತಿ, ಭಗವಾನ್ ವೃಷಭ ತೀರ್ಥಂಕರನಿಗೆ ನೀಡುತ್ತಿದ್ದಿರಬಹುದಾದ ಹಿರಿಮೆಯ ಬಗೆಗೆ ಬೆಳಕನ್ನು ಚೆಲ್ಲಿದ್ದಾರೆ.

ಜೈನರ 'ವೃಷಭ'ನಿಗೂ, ಶೈವರ 'ಶಿವ'ನಿಗೂ ಕಂಡುಬರುವ ಕೆಲವು ಸಾಮ್ಯಗಳು ವಿಭಿನ್ನ ವ್ಯಾಖ್ಯೆಗಳಿಗೆ ಎಡೆ ಮಾಡಿಕೊಟ್ಟಿವೆ. ಶಿವನ ವಾಹನ ಬಸವ; ಆತ ತ್ರಿಶೂಲಧಾರಿ. ಜೈನಧರ್ಮದಲ್ಲಿ ಬರುವ ವೃಷಭನ ಲಾಂಛನ ಎತ್ತು. ಇಂದು ತ್ರಿಶೂಲದ ಬಳಕೆ ಜೈನಧರ್ಮೀಯರಲ್ಲಿ ಕಂಡುಬಾರದಿದ್ದರೂ ಅದರ ಉಲ್ಲೇಖವು ಜೈನ ಸಾಹಿತ್ಯದಲ್ಲಿ ದೊರಕುತ್ತದೆ. ಜೈನ ಪರಂಪರೆಯಲ್ಲಿ ತ್ರಿಶೂಲವನ್ನು ರತ್ನತ್ರಯದ ಪ್ರತೀಕವೆಂದು ಭಾವಿಸಲಾಗಿದೆ.

ಆದಿಪುರಾಣ[೧೭] ಪುರುದೇವ ಚಂಪೂ[೧೮] ಮೊದಲಾದ ಕೃತಿಗಳಲ್ಲಿ ಇದರ ಉಲ್ಲೇಖ ದೊರೆಯುತ್ತದೆ. ತ್ರಿಶೂಲವನ್ನು ಜೈನರ ಚೈತ್ರ ಅಸ್ತ್ರವೆಂದು ಕರೆಯಲಾಗಿದೆ.[೧೯]

ಮುದ್ರಿಕೆಯಲ್ಲಿ ವಿವಿಧ ಪ್ರಾಣಿಗಳ ಮಧ್ಯೆ ಇರುವ ಮಹಾಯೋಗಿಯನ್ನು 'ಪಶುಪತಿ' ಯಾದ ಶಿವನೆಂದು ಗುರುತಿಸಲಾಗಿದೆಯಷ್ಟೆ. ಅದನ್ನು ಹೀಗೂ ಅರ್ಥೈಸಬಹುದಾಗಿದೆ : ವೃಷಭನಾಥನ ತಪಸ್ಸಿನ ವರ್ಣನೆಯ ಭಾಗದಲ್ಲಿ, ಆತನ ತಪಸ್ಸಿನ ಪ್ರಭಾವಕ್ಕೆ ಒಳಗಾಗಿ ಪ್ರಾಣಿಗಳು ಪರಸ್ಪರ ವೈರಭಾವವನ್ನು ತೊರೆದು ಮೈತ್ರಿಭಾವದಿಂದ ಇರುತ್ತಿದ್ದವೆಂಬ ವರ್ಣನೆಯು ಜೈನ ಪುರಾಣಗಳಲ್ಲಿ ದೊರೆಯುತ್ತದೆ.[೨೦] ಇದು ಬಹುಶಃ ವೃಷಭನ

ತಪೋಮಹಿಮೆಯ ಚಿತ್ರಣ ಎಂದು ಊಹಿಸಲು ಅವಕಾಶವಿದೆ.

ಹರಪ್ಪದಲ್ಲಿ ಇದುವರೆಗೆ ೧೩ ಶಿಲಾಪ್ರತಿಮೆಗಳು ಬೆಳಕಿಗೆ ಬಂದಿವೆ. ಅವುಗಳಲ್ಲಿ ಕೆಲವು ಶಿಲಾಪ್ರತಿಮೆಗಳು ಪ್ರಾಣಿಗಳ ಪ್ರತಿರೂಪವನ್ನು ಒಳಗೊಂಡಿವೆ. ಐದು ಪ್ರತಿಮೆಗಳು ಪದ್ಮಾಸನ ಭಂಗಿಯಲ್ಲಿ ಕುಳಿತಿರುವ ಒಂದೇ ದೈವದ ಪ್ರತಿಮೆಗಳಾಗಿವೆ. ಇನ್ನೆರಡು ಪ್ರತಿಮೆಗಳಲ್ಲಿ ಕತ್ತಿನ ಹಾಗೂ ಭುಜದ ಎಡೆಗಳಲ್ಲಿ ಗೂಟದ ಕುಳಿಗಳಿದ್ದು ಬೇರೆ ಶಿಲಾಖಂಡಗಳಲ್ಲಿ ಕೆತ್ತಲಾಗಿರುವ ತಲೆ ಮತ್ತು ಕೈಗಳನ್ನು ಅವುಗಳೊಂದಿಗೆ ಜೋಡಿಸಬಹುದಾಗಿದೆ. ಇವು ಪುರುಷಮುಂಡವನ್ನು ಹೊಂದಿವೆ.[೨೧] ಇವು ಜೈನಧರ್ಮಕ್ಕೆ ಸೇರಿದ ಅವಶೇಷಗಳು ಎಂಬುದನ್ನು ವಿದ್ವಾಂಸರು ಒಪ್ಪಿದ್ದಾರೆ. ಅಲ್ಲದೆ ಕೆಲವು ಪ್ರತಿಮೆಗಳು ವಿಶೇಷತಃ ವೃಷಭನಿಗೆ ಸಂಬಂಧಿಸಿದವು ಎಂದೂ ತೋರಿಸಿಕೊಟ್ಟಿದ್ದಾರೆ. ಅವುಗಳಿಂದ ಹೊಮ್ಮುವ ಅಂಶಗಳನ್ನು ಹೀಗೆ ಸಂಗ್ರಹಿಸಬಹುದಾಗಿದೆ :

೧. ಜೈನರ ಪ್ರಥಮ ತೀರ್ಥಂಕರ ವೃಷಭನಾಥನೇ ಆಧ್ಯಾತ್ಮವಿದ್ಯೆಯ ಆದಿಪ್ರವರ್ತಕ. ಮೊಹೆಂಜೊದಾರೋವಿನಲ್ಲಿ ದೊರೆತಿರುವ ಮುದ್ರಿಕೆಗಳು ಇದಕ್ಕೆ ಸಾಕ್ಷ್ಯವನ್ನು ಒದಗಿಸುತ್ತವೆ.

೨. ಮೊಹೆಂಜೊದಾರೋ ಸಂಸ್ಕೃತಿಯಲ್ಲಿ ಮಹಾಯೋಗಿ ಋಷಭನಾಥನಿಗೆ ತುಂಬಾ ಮಹತ್ತ್ವದ ಸ್ಥಾನವಿತ್ತು. ಈ ಕಾರಣದಿಂದಾಗಿಯೇ ಅಲ್ಲಿ ಆತನ ಕಾಯೋತ್ಸರ್ಗ ನಿರತ ನಗ್ನಭಂಗಿಯ ಮುದ್ರಿಕೆಗಳು ಲಭ್ಯವಾಗಿವೆ. ಅಂತೆಯೇ ಆತನ ಲಾಂಛನವಾಗಿರುವ ವೃಷಭವೂ ಸರಿದೊರೆಯಾದ ಸೌಂದರ್ಯದಿಂದ ಕೂಡಿದ್ದು, ಅದರ ಮುದ್ರಿಕೆಗಳೂ ಅಲ್ಲಲ್ಲಿ ಕಾಣದೊರೆತಿವೆ.

೩. ಆಚಾರ್ಯ ಜಿನಸೇನರ 'ಆದಿಪುರಾಣ'ದಲ್ಲಿ ಕಾಣದೊರೆಯುವ ಒಂದು ಶ್ಲೋಕ ಮೊಹೆಂಜೊದಾರೋವಿನಲ್ಲಿ ದೊರೆತಿರುವ ಎಲ್ಲ ಪಟ್ಟಿಕೆಗಳ ಮೇಲೆ ವೈದಿಕ ಕರ್ಮಕಾಂಡಕ್ಕಿಂತಲೂ ಹೆಚ್ಚಾಗಿ ಆಧ್ಯಾತ್ಮ ಸಂಸ್ಕೃತಿ ಪ್ರಭಾವ ಬೀರಿದೆಯೆಂಬ ಸಂಗತಿಯನ್ನು ಸ್ಪಷ್ಟಪಡಿಸುತ್ತದೆ. ಮುದ್ರಿಕೆಗಳಲ್ಲಿ ಕಾಣದೊರೆಯುವ ಸಂಕೇತಗಳಿಂದಲೂ ಅಂದಿನ ಜನರ ಅಭಿರುಚಿಯ ಸ್ವರೂಪವನ್ನು ಊಹಿಸಿಕೊಳ್ಳಬಹುದಾಗಿದೆ. ತ್ರಿಶೂಲ, ವೃಷಭ, ಆರು ಅರೆಗಳುಳ್ಳ ಕಾಲಚಕ್ರ, ಕಲ್ಪವೃಕ್ಷವೇಷ್ಟಿತ ಕಾಯೋತ್ಸರ್ಗ ಪ್ರತಿಮೆಗಳು ಇವೇ ಮೊದಲಾದವು ತುಂಬ ಮಹತ್ವದವಾಗಿವೆ. ಕಾಯೋತ್ಸರ್ಗ ಧ್ಯಾನಭಂಗಿ ಮುನಿಗಳ ವಿಶಿಷ್ಟ ತಪೋಭಂಗಿಯೇ ಆಗಿದೆ. ಈ ದೃಷ್ಟಿಯಿಂದಲೂ ಈ ವಿಷಯದ ಬಗ್ಗೆ ಅನ್ವೇಷಣೆ ನಡೆಯಬೇಕಾಗಿದೆ.[೨೨]

ಕಾಯೋತ್ಸರ್ಗ ಭಂಗಿ ಅಂಕಿತಗೊಂಡಿರುವ ಮೊಹೆಂಜೊದಾರೋ ಮುದ್ರಿಕೆಗಳಲ್ಲಿ ಯೋಗಿಗಳ ಚಿತ್ರದೊಂದಿಗೆ ವೃಷಭನ ಚಿತ್ರವೂ ಕಾಣದೊರೆಯುತ್ತದೆ. ವೃಷಭವಂತೂ ವೃಷಭನ ಲಾಂಛನವೇ ಆಗಿದೆ.[೨೩]

ಆಚಾರ್ಯ ವೀರಸೇನರ 'ಧವಳ' ವಿಮಲಸೂರಿಯ 'ಪಉಮಚರಿಯ' ಹಾಗೂ ಜಿನಸೇನರ 'ಆದಿಪುರಾಣ'ದ ಕಾರಿಕೆಗಳಲ್ಲೂ ಗಾಥೆಗಳಲ್ಲೂ ಕಾಣದೊರೆಯುವ ವರ್ಣನೆಗಳಲ್ಲಿ ಹಾಗೂ ಮೇಲೆ ಹೇಳಿದ ಮುದ್ರಿಕೆಗಳಲ್ಲಿ ಒಂದು ಇನ್ನೊಂದರ ಪ್ರತಿಬಿಂಬವೇನೋ ಎನ್ನುವಷ್ಟು ಸಾಮ್ಯವನ್ನು ಗುರುತಿಸಬಹುದಾಗಿದೆ. ಅವುಗಳನ್ನು ಒಟ್ಟಾರೆ ಹೀಗೆ ವ್ಯಾಖ್ಯಾನಿ

ಸಬಹುದು :

೧. ಪುರುದೇವ ನಗ್ನ ಖಡ್ಗಾಸನದ ಕಾಯೋತ್ಸರ್ಗ ಭಂಗಿಯಲ್ಲಿ ನೆಲೆನಿಂತಿದ್ದಾನೆ.

೨. ಆತನ ತಲೆಯ ಮೇಲ್ಭಾಗದಲ್ಲಿ ತ್ರಿಶೂಲ ಶೋಭಿಸುತ್ತಿದೆ. ಇದು ರತ್ನತ್ರಯದ ಶಿಲ್ಪಾಕೃತಿಯೇ ಆಗಿದೆ.

೩. ಕೋಮಲ ದಿವ್ಯಧ್ವನಿಯ ಸಂಕೇತವೆಂಬಂತೆ, ಮುಖಮಂಡಲದ ಬಳಿ ಲತೆಯೊಂದು ಶೋಭಿಸುತ್ತಿದೆ.

೪. ಊರ್ಧ್ವಮುಖಿಯಾಗಿರುವ ಕಲ್ಪವೃಕ್ಷದ ಎರಡು ಕೊಂಬೆಗಳು ಹೂವು ಹಣ್ಣುಗಳಿಂದ ಕೂಡಿದ್ದು, ಮಹಾಯೋಗಿಯನ್ನು ಸುತ್ತುವರಿದಿವೆ. ಇದು ಭಕ್ತಿಯಿಂದ ಲಭಿಸುವ ಫಲವನ್ನು ಸೂಚಿಸುತ್ತದೆ.

೫. ಚಕ್ರವರ್ತಿ ಭರತ, ಭಗವಾನ್ ಋಷಭನಾಥನ ಚರಣಾರವಿಂದಗಳಲ್ಲಿ ಅಂಜಲಿಬದ್ಧನಾಗಿ ತಲೆಬಾಗಿ ನಿಂತಿದ್ದಾನೆ.

೬. ಭರತನ ಹಿಂದೆ ಋಷಭನ ಲಾಂಛನವಾದ ವೃಷಭವಿದೆ.

೭. ಕೆಳಭಾಗದಲ್ಲಿ ರಾಜಾಸ್ಥಾನದ ವೇಷಭೂಷಣಗಳನ್ನು ಧರಿಸಿರುವ ಏಳುಮಂದಿ ಮಂತ್ರಿಗಳಿದ್ದಾರೆ. ಅವರ ಹುದ್ದೆಗಳ ಹೆಸರುಗಳು ಹೀಗಿವೆ: ಮಾಂಡಲಿಕ ರಾಜ, ಗ್ರಾಮಾಧಿಪತಿ, ಜನಪದ ಅಧಿಕಾರಿ, ದುರ್ಗಾಧಿಕಾರಿ (ಗೃಹಮಂತ್ರಿ), ಭಂಡಾರಿ (ಕೃಷಿ ಮತ್ತು ಹಣಕಾಸು ಮಂತ್ರಿ), ಷಡಂಗ ಬಲಾಧಿಕಾರಿ (ರಕ್ಷಣಾಧಿಕಾರಿ) ಮತ್ತು ಮಿತ್ರ (ವಿದೇಶಾಂಗ ಮಂತ್ರಿ).[೨೪]

ಈ ಹಲವಾರು ಸಾಕ್ಷ್ಯಗಳು, ವೃಷಭನ ಹಿರಿಮೆಯನ್ನು ತೋರಿಸಿಕೊಡುವಂತಿವೆ ಮತ್ತು ಜೈನಧರ್ಮದ ಪ್ರಾಚೀನತೆಯನ್ನು ಸಾರುತ್ತವೆ.

ಖಾರವೇಲನ ಹಾಥಿಗುಫಾ ಶಾಸನದಲ್ಲಿಯೂ ಸಹ ಋಷಭ ತೀರ್ಥಂಕರನ ಮೂರ್ತಿಯ ಉಲ್ಲೇಖವಿದೆ (ಕ್ರಿ. ಪೂ. ೨೦೦). ಖಂಡಗಿರಿ-ಉದಯಗಿರಿಗಳ ಹಾಥಿಗುಫಾ ಶಾಸನ ಅತ್ಯಂತ ಮಹತ್ತ್ವಪೂರ್ಣವಾದ ಶಾಸನವಾಗಿದೆ. ಇದನ್ನು ಸಾಮ್ರಾಟ್ ಖಾರವೇಲನು ಬರೆಸಿದನು. ಈ ಜೈನ ಶಿಲಾಲೇಖನದಿಂದ, ಮಗಧವಂಶದ ದೊರೆ ಪುಷ್ಯಮಿತ್ರನ ಪೂರ್ವಾಧಿಕಾರಿ ನಂದನು ಕಳಿಂಗವನ್ನು ಜಯಿಸಿ, ಅಲ್ಲಿ ಪರಂಪರೆಯಿಂದ ಬಂದ ಬಹುಮೂಲ್ಯವಾದ ಋಷಭನ ಮೂರ್ತಿಯನ್ನು ದಿಗ್ವಿಜಯದ ಚಿಹ್ನೆಯಾಗಿ ತೆಗೆದುಕೊಂಡು ಹೋಗಿದ್ದು, ಮುನ್ನೂರು ವರ್ಷಗಳನಂತರ ಖಾರವೇಲನು ಅದನ್ನು ಪುನಃ ಪುಷ್ಯಮಿತ್ರನಿಂದ ಪಡೆದನೆಂದು ತಿಳಿದು ಬರುತ್ತದೆ.[೨೫]

ಮಥುರೆಯ ಕಂಕಾಲೀ ಎಂಬಲ್ಲಿ ದೊರೆತ ಶಾಸನದಲ್ಲಿಯೂ ಸಹ ಋಷಭನ ಮೂರ್ತಿಯ ಉಲ್ಲೇಖವಿದೆ. ಸೈಪ್ರಸ್‌ನಲ್ಲಿ ಹಾಗೂ ಇತರ ಕಡೆಗಳಲ್ಲಿ ದೊರೆತ ವಿಗ್ರಹಗಳನ್ನು (ಕ್ರಿ. ಪೂ. ೧೨) ಋಷಭನದೆಂದು ಗುರುತಿಸಲಾಗಿದೆ. ಅಲ್ಲದೆ, ಆ ಕಾಲದಲ್ಲಿ ಋಷಭನ ಆರಾಧನೆ ನಡೆಯುತ್ತಿತ್ತೆಂದು ತಿಳಿದುಬರುತ್ತದೆ.[೨೬]

ಜೈನಪುರಾಣಗಳಲ್ಲಿ, ಜೈನೇತರ ಸಾಹಿತ್ಯದಲ್ಲಿ ಹಾಗೂ ಪ್ರಾಚೀನ ಶೋಧನೆಗಳಲ್ಲಿ ಆದಿತೀರ್ಥಂಕರ ವೃಷಭನ ಉಲ್ಲೇಖವು ಅತ್ಯಂತ ಮಹತ್ತ್ವಪೂರ್ಣ ಸ್ಥಾನವನ್ನು ಗಳಿಸಿಕೊಂಡಿದೆ ಎಂಬುದಕ್ಕೆ ಮೇಲಿನ ಕೆಲವು ನಿದರ್ಶನಗಳು ಸಾಕ್ಷಿಗಳಾಗಿವೆ.

## ಟಿಪ್ಪಣಿಗಳು

೧. Helen M. Johnson, (Trans. Trisatisalakapurusacaritra, Vol. I Adisvara Caritra, Oriental Institute, Baroda, 1931, Intro.

"The Adishvaracharitra is one of the best, containing the biographies of the first Tirthankara, Rsabha and the first Cakravartin, Bharata. It is in itself almost a handbook of Jainism; for the lexicographer it has a large amount of new material; and for the student of folklore and origin of customs it gives the Jain tradition which is very different from Hindu."

೨. ಲಕ್ಷ್ಮೀಚಂದ್ರ ಜೈನ್, 'ಅಂತರ ದ್ವದ್ವೋಂಕೆ ಪಾರ್ ಗೊಮ್ಮಟೇಶ್ ಬಾಹುಬಲಿ' ಭಾರತೀಯ ಜ್ಞಾನಪೀಠ, ನವದೆಹಲಿ, ೧೯೭೯. ಪು. ೬.

೩. Pertold, Sramana Bhagavan Mahavira, Vol. I, Intro.

೪. Kamta Prasad Jain Siddhantacharya, 'The Religion of Tirthankara, Aligang, World Jain Mission, 1964, P. 47.

"As such Prof. Wendal is right to call him the father of Agriculture and founder of culture."

೫. Dikshitar V.R.R., Purana Index, Vol. I., University of Madras, 1955.

೬. ಮಿರ್ಜಿ ಅಣ್ಣಾರಾಯ (ಅನು.) 'ಭಾರತೀಯ ಸಂಸ್ಕೃತಿಗೆ ಜೈನ ಧರ್ಮದ ಕೊಡುಗೆ ', ಹೀರಾಲಾಲ್ ಜೈನ್, ಸೊಲ್ಲಾಪುರ, ೧೯೭೧. ಪು. ೧೫-೨೨.

೭. Radhakrishnan, S., Indian Philosophy, Vol. I., London, 1962, P. 287.

೮. ರಾಜಾರಾಧಾಕಾಂತ್ ರಾವ್ ಬಹದ್ದೂರ್, ಶಬ್ದಕಲ್ಪದ್ರುಮಃ vol. I. P. 173.

೯. Kamta Prasad Jain, ಪೂರ್ವೋಕ್ತ.

೧೦. ೧೯೨೨ ರಿಂದ ೨೭ರ ವರೆಗಿನ ಅವಧಿಯಲ್ಲಿ ಈ ಕಾರ್ಯ ನಡೆಯಿತು.

೧೧. ಮುನಿ ವಿದ್ಯಾನಂದ, ಅನು : ಪ್ರಧಾನ್ ಗುರುದತ್ತ, 'ಮೊಹೆಂಜೊದಾರೋ ಜೈನ ಪರಂಪರೆ ಮತ್ತು ಸಾಕ್ಷ್ಯಗಳು', ಪು. xxiii, ಶ್ರೀಕುಂದಕುಂದ ಭಾರತೀ, ನವದೆಹಲಿ ಮತ್ತು ಶ್ರೀ ಕ್ಷೇತ್ರ ಧರ್ಮಸ್ಥಳ, ೧೯೮೬-೮೭.

೧೨. ಮೂಲ: ಮಜುಮ್‌ದಾರ್-ರಾಯ್ ಚೌಧುರಿ-ದತ್ತ ಅನು: ಎನ್. ಎಸ್. ಶಾರದಾ ಪ್ರಸಾದ್, 'ಭಾರತದ ಪ್ರೌಢ ಇತಿಹಾಸ' ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾ ನಿಲಯ, ಮೂಲ : ಮೂರನೇ ಆವೃತ್ತಿ ೧೯೬೭, ಅನು. ೧೯೭೭.

೧೩. ಅದೇ, ಪು. ೧೫.

೧೪. Ramprasad chandra, 'Sind Five Thousand Years Ago', Modern

Review, Calcutta, August 1932.

೧೫. ಮುನಿ ವಿದ್ಯಾನಂದ, ಪೂರ್ವೋಕ್ತ.

೧೬. ಮೂಲ, ಟಿ. ಎನ್. ರಾಮಚಂದ್ರನ್, ಅನು: ಪ್ರಧಾನ್ ಗುರುದತ್ತ, 'ಹರಪ್ಪಾ ಮತ್ತು ಜೈನಧರ್ಮ'ಶ್ರೀ ಸಿದ್ಧಾಂತಕೀರ್ತಿ ಗ್ರಂಥ ಮಾಲೆ, ಶ್ರೀ ಹೊಂಬುಜ ಜೈನಮಠ, ೧೯೮೭.

೧೭. 'ರತ್ನತ್ರಯಂ ಜೈನಂ ಜೈತ್ರಮಸ್ತ್ರಂ ಜಯತ್ಯದಃ' ಜಿನಸೇನರ ಪೂರ್ವಪುರಾಣ ೧-೪.

೧೮. 'ರತ್ನತ್ರಯಂ ರಾಜತಿ ಚೈತ್ರಮಸ್ತ್ರಂ'– ಪುರುದೇವ ಚಂಪೂ ಪ್ರಬಂಧ, ಅರ್ಹದ್ದಾಸ.

೧೯. ಮುನಿ ವಿದ್ಯಾನಂದ, ಪೂರ್ವೋಕ್ತ.

೨೦. ಜಿನಸೇನರ ಪೂರ್ವಪುರಾಣ xviii, ೮೦ ರಿಂದ ೮೪.

೨೧. ಮೂಲ : ಟಿ. ಎನ್. ರಾಮಚಂದ್ರನ್, ಪೂರ್ವೋಕ್ತ.

ಇಲ್ಲಿ ದೊರೆಯುವ ವಿಗ್ರಹಗಳನ್ನು ಜೈನ ಪರಂಪರೆಯಲ್ಲಿ ಇದ್ದಿರಬಹುದಾದ ಒಂದು ಜಾನಪದ ಪದ್ಧತಿಯೊಂದಿಗೆ ಬೆಸೆಯಬಹುದೇ ಎಂದು ಆಲೋಚಿಸಲು ಸಾಧ್ಯತೆ ಇದೆ. ಶಿವಕೋಟಿ ಆಚಾರ್ಯಕೃತ 'ಮೂಲಾರಾಧನಾ' (ಭಗವತೀ ಆರಾಧನಾ) ಎಂಬ ಗ್ರಂಥದಲ್ಲಿ ದೊರೆಯುವ ಮುನಿಗಳ ಅಂತ್ಯಕ್ರಿಯಾ ವಿಧಿಯಲ್ಲಿ ಸೂಚಿತವಾಗಿರುವ ಅಂಶ ಈ ಅನುಮಾನಕ್ಕೆ ಎಡೆಮಾಡಿ ಕೊಡುತ್ತದೆ. ತ್ಯಾಗಿಗಳು ಅನಿಷ್ಟಕಾಲದಲ್ಲಿ ಮರಣಹೊಂದಿದರೆ, ಉಳಿದ ಸಾಧುಗಳಲ್ಲಿ ಯಾರಾದರೂ ಒಬ್ಬಿಬ್ಬರ ಮರಣವಾಗಬಹುದು. ಆದ್ದರಿಂದ ಸಂಘದ ರಕ್ಷಣೆಗಾಗಿ ಹುಲ್ಲು ಅಥವಾ ಇಟ್ಟಿಗೆ, ಕಲ್ಲು ಮೊದಲಾದವುಗಳ ಚೂರ್ಣದಿಂದ ಅಥವಾ ಕೇಸರಿ ಕ್ಷಾರಗಳಿಂದ ಕ್ಷಪಕರ ಬೊಂಬೆಗಳನ್ನು ಮಾಡಿ ಮೃತ ಶರೀರದ ಜೊತೆಗೆ ಇಡಬೇಕು ಎಂದು ಹೇಳಲಾಗಿದೆ (ಗಾಥೆ ೮೫-೮೬) ಈಗ ಜೈನ ಧರ್ಮೀಯರಲ್ಲಿ ಈ ಪದ್ಧತಿ ಕಂಡುಬಾರದಿದ್ದರೂ ಒಂದು ಕಾಲಕ್ಕೆ ಜನರೂಢಿಯಾಗಿದ್ದಿರಬಹುದಾದ ಇಂತಹ ಆಚರಣೆಯ ಫಲವಾಗಿ ನಮಗೆ ಕೆಲವು ವಿಗ್ರಹಗಳು ಲಭ್ಯವಾಗಿದ್ದಿರಬಹುದೇ?

೨೨. ವಿದ್ಯಾನಂದ, ಪೂರ್ವೋಕ್ತ, ಪು. xiii.

೨೩. ಅದೇ.

೨೪. ಅದೇ, ಪು. xxx.

೨೫. ಭಾರತೀಯ ಸಂಸ್ಕೃತಿಗೆ ಜೈನಧರ್ಮದ ಕೊಡುಗೆ, ಅನು: ಮಿರ್ಜಿ ಅಣ್ಣಾರಾಯ, ಮೂಲ, ಹೀರಾಲಾಲ್ ಜೈನ್, ೧೯೭೧, ಪು. ೪೨.

೨೬. Jain (Champath Rai) Rishabhadeva the founder of Jainism, Allahabad, 1929.

## ಅಧ್ಯಾಯ ೩

# ಸಂಸ್ಕೃತ ಆದಿಪುರಾಣಗಳು : ಕರ್ತೃ, ಕೃತಿ-ಪರಿಚಯ

ಸಂಸ್ಕೃತ ಭಾಷೆಯಲ್ಲಿ ದೊರೆಯುವ 'ಆದಿಪುರಾಣ'ಗಳನ್ನು ಮುಖ್ಯವಾಗಿ ಎರಡು ವಿಭಾಗಗಳಲ್ಲಿ ವಿಂಗಡಿಸಬಹುದು. ಅವು, 'ಆದಿತೀರ್ಥಂಕರ ಪುರಾಣ'ಗಳು ಮತ್ತು 'ತ್ರಿಷಷ್ಟಿ ಶಲಾಕಾಪುರುಷ ಚರಿತ್ರ' (ಪುರಾಣ) ಅಥವಾ ಮಹಾಪುರಾಣಗಳು. ಇವುಗಳೇ ಅಲ್ಲದೆ ಇತರ ಕೆಲವು ಕಾವ್ಯಗಳಲ್ಲಿಯೂ ಸಹ ಆದಿತೀರ್ಥಂಕರನ ಚರಿತ್ರೆಯು ಸಂಕ್ಷಿಪ್ತವಾಗಿ ಗೌಣರೂಪದಲ್ಲಿ ಬಂದಿರುವುದುಂಟು.

### ಸಂಸ್ಕೃತ ಆದಿತೀರ್ಥಂಕರ ಚರಿತೆಗಳು

೧. **ನೇಮಿನಾಥ ಚರಿತ್ರ** : ಇದರ ಕರ್ತೃ ಸೂರ್ಯಾಚಾರ್ಯ. ಕಾಲ ಕ್ರಿ . ಶ. ೧೦೫೩. ಈತ ದ್ರೋಣಾಚಾರ್ಯರ ಶಿಷ್ಯ. ಇದೊಂದು ದ್ವಿಸಂಧಾನ ಕಾವ್ಯವಾಗಿದೆ.[೧]

೨. **ಪದ್ಮಾನಂದ ಕಾವ್ಯ** : ಇದರ ಕರ್ತೃ ಅಮರಚಂದ್ರ. ಕಾಲ ೧೩ನೆಯ ಶತಮಾನ. ಇದರಲ್ಲಿ ೧೯ ಸರ್ಗಗಳಿವೆ. ಇದನ್ನು ಪದ್ಮನೆಂಬ ಮಂತ್ರಿಯ ಪ್ರಾರ್ಥನೆಯಿಂದ ಬರೆದುದರಿಂದ ಅದಕ್ಕೆ ಈ ಹೆಸರು ಇಟ್ಟಿದ್ದಾನೆ. ಕಾವ್ಯದಲ್ಲಿ ಒಟ್ಟು ೬೨೮೧ ಶ್ಲೋಕಗಳಿವೆ.[೨]

೩. **ನಾಭೇಯ ನೇಮಿಕಾವ್ಯ** : ಹೇಮಚಂದ್ರ ಸೂರಿಯು ಇದರ ಕರ್ತೃ. (ಕಾಲ ?) ಈತ ಬೃಹತ್ ಗಚ್ಛದ ಮುನಿಚಂದ್ರನಿಗೆ ಶಿಷ್ಯನಾದ ಅಜಿತಸೇನನ ಶಿಷ್ಯನೆಂದು ತಿಳಿದು ಬರುತ್ತದೆ. ವೃಷಭ ಮತ್ತು ನೇಮಿಜಿನೇಶ್ವರರ ಚರಿತ್ರೆಯನ್ನು ವರ್ಣಿಸುವ ದ್ವಿಸಂಧಾನ ಕಾವ್ಯವಾಗಿದೆ.[೩] ಇದನ್ನು ಕುಮಾರಪಾಲ ಮಹಾರಾಜನ ಆಸ್ಥಾನದಲ್ಲಿ ಶ್ರೀಪಾಲಕವಿ ತಿದ್ದಿದನೆಂದು ಹೇಳಲಾಗಿದೆ.[೪]

೪. **ಪುರುದೇವ ಚಂಪೂ** : ಇದರ ಕರ್ತೃ ಅರ್ಹದ್ದಾಸ. ಕಾಲ ಕ್ರಿ. ಶ. ೧೩-೧೪ನೆಯ ಶತಮಾನ. ಈತನು ಮುನಿಸುವ್ರತ ಕಾವ್ಯ ಮತ್ತು ಭವ್ಯಕಂಠಾಭರಣವೆಂಬ ಗ್ರಂಥಗಳನ್ನು ಬರೆದಿದ್ದಾನೆ. ಪ್ರಶಸ್ತಿ ಪದ್ಯಗಳಲ್ಲಿ ಆಶಾಧರ ಸೂರಿಯನ್ನು ಬಹಳ ಶ್ರದ್ಧೆಯಿಂದ ಉಲ್ಲೇಖಿಸಿದ್ದಾನೆ. ಈ ಪ್ರಶಸ್ತಿಯ ಆಧಾರದ ಮೇಲೆ ಅರ್ಹದ್ದಾಸನು ಪಂಡಿತ ಆಶಾಧರನ ಶಿಷ್ಯನಾಗಿದ್ದನೆಂದು ಜಿನರಾಜಶಾಸ್ತ್ರಿಗಳು ಅಭಿಪ್ರಾಯ ಪಡುತ್ತಾರೆ. ಇನ್ನು ಕೆಲವರು ಈ ಅಭಿಪ್ರಾಯವನ್ನು ಒಪ್ಪುವುದಿಲ್ಲ. ಅರ್ಹದ್ದಾಸನೆಂಬ ಹೆಸರು ಬೇರೆಯೇ ಇರಬೇಕೆಂದೂ, ಮದನಕೀರ್ತಿಯು ಆಶಾಧರನ ಹಿತೋಕ್ತಿಯ ಪ್ರಕಾರ ಕುಮಾರ್ಗವನ್ನು ಬಿಟ್ಟು ಅರ್ಹದ್ದಾಸನಾಗಿರಬೇಕೆಂದೂ ಪನ್ನಾಲಾಲ್ ಜೈನ್ ಹೇಳಿದ್ದಾರೆ.[೫]

ಅರ್ಹದ್ದಾಸನು ಆಶಾಧರಸೂರಿಯ ಕೃತಿಗಳಿಂದ ಅತ್ಯಂತ ಲಾಭವನ್ನು ಪಡೆದುಕೊಂಡಿರುವಂತೆ ತಿಳಿಸಿದ್ದಾನೆ. ಈ ಆಶಾಧರ ಸೂರಿಯು ಸಾಗಾರ ಮತ್ತು ಅನಾಗಾರ ಧರ್ಮಾಮೃತಾದಿ ಗ್ರಂಥಗಳನ್ನು ಬರೆದಿರುತ್ತಾನೆ. ಅರ್ಹದ್ದಾಸನು ಈತನ ಸಮಕಾಲೀನ ಕವಿಯಾಗಿರಬೇಕು, ಅಥವಾ ಆತನ ತರುವಾಯದವನಾಗಿರಲೂ ಬಹುದು.[೬]

ಈ ಕಾವ್ಯದ ವಿಷಯ ಪ್ರಥಮ ಜೈನ ತೀರ್ಥಂಕರ ವೃಷಭನಾಥನ ಅಥವಾ ಪುರುದೇವನ

ಚರಿತ್ರೆ ಯಾಗಿದೆ.ಇದೊಂದು ಉತ್ಕೃಷ್ಟ ಸಂಸ್ಕೃತ ಕಾವ್ಯ. ಚರಿತ್ರೆಯ ನಾಯಕ ಆದಿನಾಥನ ಜೀವನವೇ ಅತ್ಯಂತ ರೋಚಕ ಮತ್ತು ಉಪದೇಶಪ್ರದವಾಗಿದೆ. ಪದ್ಯರಚನೆಯಲ್ಲಿ ಈ ಗ್ರಂಥವು ಭಾರವಿ ಮತ್ತು ಮಾಘರ ಹಾಗೂ ಗದ್ಯರಚನೆಯಲ್ಲಿ ಸುಬಂಧು ಮತ್ತು ಬಾಣರ ಕೃತಿಗಳಿಗೆ ಸಮಾನವಾಗಿ ನಿಲ್ಲುತ್ತದೆ ಮತ್ತು ಅವುಗಳಿಂದ ಪ್ರಭಾವಿತವಾಗಿದೆ. ಸಮಾಸಗಳ ಪ್ರಚುರತೆ ಹಾಗೂ ಶ್ಲೇಷಾದಿ ಅಲಂಕಾರಗಳ ಬಾಹುಳ್ಯದ ಕಾರಣದಿಂದಾಗಿ ಇದರ ರಸ ಮತ್ತು ಭಾವದ ಮಾಧುರ್ಯ, ಸಹಜವಾಗಿ ಕೈಗೆ ನಿಲುಕುವುದಿಲ್ಲ. ಅರ್ಹದ್ದಾಸನ ಕೃತಿಯಲ್ಲಿ ನಮಗೆ ಚಂಪೂಕಾವ್ಯದ ಉಚ್ಚತಮ ವಿಕಾಸದ ಸ್ವರೂಪವು ಗೋಚರವಾಗುತ್ತದೆ.[೭]

ಗ್ರಂಥದ ಕಥಾಭಾಗದ ರೋಚಕತೆಯ ಜೊತೆಗೆ ಕವಿಯು ತನ್ನ ಪ್ರತಿಭಾಕೌಶಲದಿಂದ ಅದನ್ನು ಮತ್ತಷ್ಟು ರೋಚಕಗೊಳಿಸಿದ್ದಾನೆ. ಈ ಕಾರಣದಿಂದ ಸಂಸ್ಕೃತ ಸಾಹಿತ್ಯದಲ್ಲಿ ಇದಕ್ಕೆ ವಿಶಿಷ್ಟವಾದ ಸ್ಥಾನವಿದೆ. ಕವಿಯು ಹೊಸಹೊಸ ಕಲ್ಪನೆಗಳಿಂದ ಹಾಗೂ ಶ್ಲೇಷೆ, ವಿರೋಧಾಭಾಸ, ಪರಿಸಂಖ್ಯಾ ಆದಿ ಅಲಂಕಾರಗಳಿಂದ ಕೃತಿಯ ಸೌಂದರ್ಯವನ್ನು ಹೆಚ್ಚಿಸಿದ್ದಾನೆ.[೮]

ಈ ಕಾವ್ಯದಲ್ಲಿ ಭಗವಾನ್ ಆದಿನಾಥನ ಚರಿತ್ರೆಯನ್ನು ಭವಾಂತರ ವರ್ಣನೆಯ ಜೊತೆಜೊತೆಯಲ್ಲಿ ಹೇಳಲಾಗಿದೆ. ಶ್ರೀ ಜಿನಸೇನಾಚಾರ್ಯರ ಮಹಾಪುರಾಣವನ್ನು (ಆದಿ ಪುರಾಣ) ಆಧಾರವನ್ನಾಗಿ ಇಟ್ಟುಕೊಂಡು ಈ ಕೃತಿಯನ್ನು ಬರೆದಿದ್ದಾನೆ. ಈ ವಿಷಯವು 'ಪುರುದೇವ ಚಂಪೂ'ವಿನ ಪೀಠಿಕೆಯಲ್ಲಿ ಸ್ಪಷ್ಟವಾಗಿದೆ (ಶ್ಲೋಕ ೯-೧೦). ಇದರಲ್ಲಿ ಹತ್ತು ಸ್ತಬಕಗಳಿವೆ. ಪ್ರಾರಂಭದ ಮೂರು ಸ್ತಬಕಗಳಲ್ಲಿ ಭಗವಾನ್ ಆದಿನಾಥನ ಪೂರ್ವಭವಗಳ ವರ್ಣನೆ ಇದೆ. ಉಳಿದ ಸ್ತಬಕಗಳಲ್ಲಿ ಭಗವಾನ್ ಆದಿನಾಥ ಮತ್ತು ಅವನ ಮಕ್ಕಳಾದ ಭರತ ಹಾಗೂ ಬಾಹುಬಲಿಗಳ ಚಿತ್ರಣವನ್ನು ಮಾಡಲಾಗಿದೆ.

೫. **ಆದಿನಾಥ ಚರಿತ್ರ** : ಅಮರಚಂದ್ರಸೂರಿ ಇದರ ಕರ್ತೃ. (ಕಾಲ?)[೯]

೬. **ಆದಿನಾಥ ಚರಿತ್ರ** : (ಆದೀಶ್ವರ ಚರಿತ್ರ) ಇದರ ಕರ್ತೃ ವಿನಯಚಂದ್ರ. ಕಾಲ ಸಂವತ್ ೧೪೭೪ (ಸಂಸ್ಕೃತ ?)[೧೦]

೭. **ಆದಿನಾಥ ಚರಿತ್ರ** : ಅಜ್ಞಾತಕರ್ತೃಕ. (ಸಂಸ್ಕೃತ ?)[೧೧] (ಕಾಲ?)

೮. **ಆದಿನಾಥ ಪುರಾಣ** : (ಋಷಭನಾಥ ಚರಿತ್ರ) ಕರ್ತೃ–ಸಕಲಕೀರ್ತಿ (ಕಾಲ ?)[೧೨]

೯. **ಆದಿನಾಥ ಪುರಾಣ** : ಕರ್ತೃ–ಚಂದ್ರಕೀರ್ತಿ (ಸಂಸ್ಕೃತ ?) (ಕಾಲ?)[೧೩]

೧೦. **ಆದಿನಾಥ ಪುರಾಣ** : ಕರ್ತೃ–ಧರ್ಮಕೀರ್ತಿ (ಸಂ. ?) (ಕಾಲ ?)[೧೪]

೧೧. **ಗೀತವೀತರಾಗ** : ಕರ್ತೃ–ಚಾರುಕೀರ್ತಿ ಪಂಡಿತಾಚಾರ್ಯ, (ಕಾಲ ಕ್ರಿ. ಶ. ೧೮-೧೯ನೆಯ ಶತಮಾನ).

ಪಂಡಿತಾಚಾರ್ಯರು ಗಂಗವಂಶದ ರಾಜಕುಮಾರನಾಗಿದ್ದ ದೇವರಾಜನೆಂಬುವನಿಗೋಸ್ಕರ ಈ ಕಾವ್ಯವನ್ನು ರಚಿಸಿದರು. ಇವರು ದ್ರಾವಿಡದೇಶದ ಸಿಂಹಪುರದಲ್ಲಿ ಜನ್ಮವೆತ್ತಿದವರು (ಈಗಿನ ತಮಿಳುನಾಡಿನಲ್ಲಿರುವ ಚಿತ್ತಾಂಬೂರ್). ಪಂಡಿತಾಚಾರ್ಯ ಕವಿಗಳು ಅಲ್ಲಿಂದ ಬೆಳಗೊಳಕ್ಕೆ ಬಂದು ಗೋಮಟಸ್ವಾಮಿಯ ಸಾನ್ನಿಧ್ಯದಲ್ಲಿದ್ದರು. ಕುಂದಕುಂದಾನ್ವಯದವರು, ಲೋಕ ಪೂಜ್ಯರು, ಪುಸ್ತಕಾಂಕದವರು, ದೇಶೀಗಣಕ್ಕೆ ಸೇರಿದವರು.[೧೫]

'ಗೀತವೀತರಾಗ' ಪ್ರಬಂಧಕ್ಕೆ ಬೂನಹಳ್ಳಿ ಬೊಮ್ಮರಸಯ್ಯ (ಕ್ರಿ. ಶ. ೧೮೪೨) ಎಂಬುವರು ಕನ್ನಡದಲ್ಲಿ ವ್ಯಾಖ್ಯಾನವನ್ನು ಬರೆದಿದ್ದಾರೆಂದು ಗೊತ್ತಾಗುತ್ತದೆ.[೧೬]

ಈ ಕಾವ್ಯ ಗೀತಪ್ರಧಾನವಾದುದು. ಇದು ೨೫ ಪ್ರಬಂಧಗಳಲ್ಲಿ ವಿಭಜಿತವಾಗಿದೆ. ಜಿನಸೇನರ ಮಹಾಪುರಾಣದಂತಹ ದೊಡ್ಡ ಗ್ರಂಥದಲ್ಲಿ ರಚನೆಯಾದ ಆದಿನಾಥನ ಸಂಗತಿಯನ್ನು ಕೇವಲ ಇಪ್ಪತ್ತೈದು ಗೀತ ಮತ್ತು ನೂರಮೂವತ್ತೇಳು ವೃತ್ತಗಳಲ್ಲಿ ಸಂಗ್ರಹಿಸುವ ಸಾಹಸವನ್ನು ಮಾಡಿರುವ ಕವಿಗಳ ಚಾತುರ್ಯಕ್ಕೆ ಅವಶ್ಯ ಮೆಚ್ಚಬೇಕು.[೧೭] ಭವಾವಳಿಗಳನ್ನು ಒಳಗೊಂಡಂತೆ ವೃಷಭದೇವನ ಕಥೆ ಸಂಕ್ಷೇಪವಾಗಿ ಇಲ್ಲಿ ಬಂದಿದೆ.[೧೮]

## ಸಂಸ್ಕೃತ ಮಹಾಪುರಾಣಗಳು (ತ್ರಿಷಷ್ಟಿ ಶಲಾಕಾಪುರುಷ ಚರಿತಗಳು)

೧. **ಮಹಾಪುರಾಣ** : (ಕಾಲ ?) ಕರ್ತೃ-ಕೂಚಿಭಟ್ಟಾರಕ.[೧೯]

೨. **ಮಹಾಪುರಾಣ** : ( ಕಾಲ ?) ಕರ್ತೃ-ನಂದಿಮುನಿ.[೨೦]

೩. **ವಾಗರ್ಥ ಸಂಗ್ರಹ** :(ಕಾಲ ?) ಕರ್ತೃ-ಕವಿ ಪರಮೇಷ್ಠಿ ಅಥವಾ ಕವಿ ಪರಮೇಶ್ವರ.

ಜಿನಸೇನಾಚಾರ್ಯರ ಆದಿಪುರಾಣದ, ಗುಣಭದ್ರಾಚಾರ್ಯರ ಉತ್ತರ ಪುರಾಣದ ಉಲ್ಲೇಖಗಳಿಂದಲೂ ಕನ್ನಡದಲ್ಲಿ ಮುಖ್ಯವಾಗಿ ಚಾವುಂಡರಾಯ ನೇಮಿಚಂದ್ರರ ಗ್ರಂಥಗಳಲ್ಲಿಯ ಉಲ್ಲೇಖಗಳಿಂದಲೂ ಸಮಂತಭದ್ರ ಪೂಜ್ಯಪಾದರೊಡನೆ ಪರಿಕೀರ್ತಿತನಾಗಿರುವ ಕವಿಪರಮೇಷ್ಠಿ ಕ್ರಿ. ಶ. ೯ನೆಯ ಶತಮಾನದ ಪೂರ್ವದಲ್ಲಿ ಪ್ರಸಿದ್ಧನಾಗಿದ್ದು ಒಂದು ತ್ರಿಷಷ್ಟಿಶಲಾಕಾಪುರುಷಪುರಾಣವನ್ನು ರಚಿಸಿದನೆಂದು ನಿಶ್ಚಯವಾಗಿ ಹೇಳಬಹುದು. ಈ ಗ್ರಂಥವು ಒಂದು 'ಗದ್ಯ ಕಥೆ'ಯಾಗಿತ್ತೆಂದು ಜಿನಸೇನರ ಆದಿಪುರಾಣದ ರಚನೆಗೆ ಅದು ಮಾತೃಕೆಯಾಗಿತ್ತೆಂದೂ ಗುಣಭದ್ರರ ಮಾತಿನಿಂದ ತಿಳಿಯುತ್ತದೆ. ಅದರ ಹೆಸರು 'ವಾಗರ್ಥಸಂಗ್ರಹ' ಎಂದು ಜೀನಸೇನರ ಮಾತಿನಿಂದ ಸ್ಪಷ್ಟವಾಗುತ್ತದೆ. ಚಾವುಂಡರಾಯನು ಮಹಾಪುರಾಣದ ಕರ್ತೃಗಳ ಪರಂಪರೆಯನ್ನು ಕೂಚಿಭಟಾರಕ, ನಂದಿಮುನಿ, ಕವಿಪರಮೇಶ್ವರ ಜಿನಸೇನ-ಗುಣಭದ್ರರು ಈ ಕ್ರಮದಲ್ಲಿ ಹೇಳಿದ್ದಾನೆ.[೨೧]

೪. **ಮಹಾಪುರಾಣ—ಪೂರ್ವಪುರಾಣ** : ಕ್ರಿ. ಶ. ೮-೯ನೆಯ ಶತಮಾನ. ಈ ಕೃತಿಯು ಆಚಾರ್ಯರಿಬ್ಬರಿಂದ ರಚನೆಗೊಂಡಿದೆ. ಇದರಲ್ಲಿ ಆದಿಪುರಾಣದ ೪೨ ಪರ್ವಗಳನ್ನು ಜಿನಸೇನಾಚಾರ್ಯರು ರಚಿಸಿದ್ದಾರೆ. ಉಳಿದ ಆದಿಪುರಾಣದ ೫ ಪರ್ವಗಳನ್ನು ಗುಣಭದ್ರಾಚಾರ್ಯರು ರಚಿಸಿದ್ದಾರೆ. ಜಯಧವಲಾದ ಪ್ರಶಸ್ತಿಯಲ್ಲಿ ಜಿನಸೇನಾಚಾರ್ಯರು ಹೇಳಿಕೊಂಡಿರುವ ವಿಷಯಗಳಲ್ಲಿ ಅವರು ಬಾಲ್ಯಾವಸ್ಥೆಯಿಂದಲೇ ದೀಕ್ಷಿತ ಜೀವನವನ್ನು ಕೈಗೊಂಡು ಬಾಲ್ಯದಿಂದಲೇ ಅಖಂಡ ಬ್ರಹ್ಮಚರ್ಯವನ್ನು ಪರಿಪಾಲಿಸಿಕೊಂಡು ಬಂದರೆಂದು ತಿಳಿದುಬರುತ್ತದೆ. ಇವರ ಜೀವನವು ನಿರಂತರ ಜ್ಞಾನದ ಆರಾಧನೆಗಾಗಿ ಮೀಸಲಾಗಿತ್ತು. ಆದ್ದರಿಂದ ತತ್ತ್ವದರ್ಶಿಗಳು ಇವರನ್ನು 'ಜ್ಞಾನಮಯ ಪಿಂಡ' ಅಥವಾ 'ಜ್ಞಾನಶರೀರಿ' ಎಂದು ಕರೆದರು.[೨೨] ಚಂದ್ರಸೇನ, ಆರ್ಯನಂದಿ, ವೀರಸೇನ, ಜಿನಸೇನ, ಗುಣಭದ್ರ, ಇದು ಕ್ರಮವಾಗಿ ಬೆಳೆದುಬಂದ ಗುರುಶಿಷ್ಯರ ಪರಂಪರೆಯಾಗಿದೆ. ಇವರು ರಾಷ್ಟ್ರಕೂಟ ಚಕ್ರವರ್ತಿ ಅಮೋಘವರ್ಷ ನೃಪತುಂಗನ ರಾಜಗುರುಗಳು. ಇವರು ದಕ್ಷಿಣ ದೇಶದವರೆಂದು ಪ್ರಸಿದ್ಧವಾಗಿದೆ. ಇವರು ಸೇನ ಸಂಘಕ್ಕೆ ಸೇರಿದವರು. ಇವರ ವಿದ್ಯಾ

ಗುರುಗಳು ವೀರಸೇನ ಮುನಿಗಳು. ದೀಕ್ಷಾಗುರುಗಳು ಜಯಸೇನರು. ದಶರಥಗುರುವು ಇವರ ಸಧರ್ಮಿ ಸಹಪಾಠಿಗಳಾಗಿದ್ದರೆಂದೂ ತಿಳಿದುಬರುತ್ತದೆ.[೨೩]

ರಾಷ್ಟ್ರಕೂಟ ವಂಶದ ದೊರೆಯಾದ ಅಮೋಘವರ್ಷನಿಗೆ ಜಿನಸೇನಾಚಾರ್ಯರು ಗುರುಗಳಾಗಿದ್ದುದರಿಂದಲೂ (ಕ್ರಿ. ಶ. ೮೧೫-೮೭೭) ಹರಿವಂಶಪುರಾಣದ ಕರ್ತೃಗಳಾದ ಜಿನಸೇನಾಚಾರ್ಯರು ಭಗವಜ್ಜಿನಸೇನಾಚಾರ್ಯರನ್ನೂ ಇವರ ಗುರುಗಳಾದ ವೀರಸೇನಾಚಾರ್ಯರನ್ನೂ ಹರಿವಂಶ ಪುರಾಣದಲ್ಲಿ ಪ್ರಶಂಸೆ ಮಾಡಿರುವುದರಿಂದಲೂ ಹರಿವಂಶ ಪುರಾಣ ರಚನೆ ಪೂರ್ಣಗೊಂಡ ಕಾಲ ಕ್ರಿ. ಶ. ೭೮೩ ಎಂದು ತಿಳಿದುಬರುವುದರಿಂದ ಭಗವಜ್ಜಿನಸೇನಾಚಾರ್ಯರ ಕಾಲವನ್ನು ಕ್ರಿ. ಶ. ಸು. ೭೫೩ ರಿಂದ ೮೩೮ ರವರೆಗೆ ಎಂದು ನಿರ್ಣಯಿಸಬಹುದೆಂದು ಪಂಡಿತ ಶ್ರೀ ಶಾಂತಿರಾಜಶಾಸ್ತ್ರಿಗಳು ಅಭಿಪ್ರಾಯಪಟ್ಟಿದ್ದಾರೆ.[೨೪]

ಜಿನಸೇನಾಚಾರ್ಯರ ಒಟ್ಟು ಕೃತಿಗಳು ಐದು. 'ಜಿನಗುಣಸ್ತೋತ್ರ', 'ವರ್ಧಮಾನ ಪುರಾಣ', 'ಜಯಧವಲಾಟೀಕೆ', 'ಪಾರ್ಶ್ವಾಭ್ಯುದಯ ಕಾವ್ಯ' ಮತ್ತು 'ಪೂರ್ವಪುರಾಣ'. ಇವುಗಳಲ್ಲಿ ಮೊದಲೆರಡು ಕೃತಿಗಳು ಉಪಲಬ್ಧವಾಗಿಲ್ಲ. ಉತ್ತರಪುರಾಣದಲ್ಲಿ ಇವರನ್ನು 'ಸಿದ್ಧಾಂತ ವ್ಯಾಖ್ಯಾನಕರ್ತೃ' ಎಂದೂ ಕರೆಯಲಾಗಿದೆ. ಇದಕ್ಕೆ ಕಾರಣ ಇವರು ಜಯಧವಲವೆಂಬ ಸಿದ್ಧಾಂತ ವ್ಯಾಖ್ಯಾನಗ್ರಂಥವನ್ನು ರಚಿಸಿರುವುದು. 'ಪಾರ್ಶ್ವಾಭ್ಯುದಯ' ಕಾವ್ಯದಲ್ಲಿ ೪ ಸರ್ಗಗಳಿವೆ. ಮಂದಾಕ್ರಾಂತ ಛಂದಸ್ಸಿನ ೩೮೦ ವೃತ್ತಗಳಿವೆ. ಇದರ ಪ್ರತಿ ಶ್ಲೋಕದಲ್ಲಿಯೂ ಕಾಳಿದಾಸನ 'ಮೇಘದೂತ'ದ ಒಂದು ಅಥವಾ ಎರಡು ಪಾದಗಳನ್ನು ಸೇರಿಸಿ, ಶ್ರೀ ಪಾರ್ಶ್ವನಾಥ ಸ್ವಾಮಿಯ ಚರಿತ್ರೆಯನ್ನು ವರ್ಣಿಸಿರುವರು.

ಜಿನಸೇನರ ಪೂರ್ವಪುರಾಣವು ದಿಗಂಬರ ಸಂಪ್ರದಾಯದ ಕಥಾಸಾಹಿತ್ಯದಲ್ಲೇ ಅತ್ಯಂತ ಪ್ರಮುಖವಾದ ಸ್ಥಾನವನ್ನು ಪಡೆಯುತ್ತದೆ. ಕವಿ ಪರಮೇಶ್ವರಾದಿಗಳು ಈ ಹಿಂದೆಯೇ ಮಹಾಪುರಾಣವನ್ನು ರಚಿಸಿದ್ದರೂ ಅವುಗಳು ಅನುಪಲಬ್ಧವಾದುದರಿಂದ ಉಪಲಬ್ಧ ಸಂಸ್ಕೃತ ಪುರಾಣಗಳಲ್ಲಿ ಇದಕ್ಕೆ ಅಗ್ರಪಟ್ಟವು ಸಲ್ಲುತ್ತದೆ. ಜಿನಸೇನಾಚಾರ್ಯರ ಈ ಕೃತಿ ಮುಖ್ಯವಾಗಿ ಒಂದು ಪುರಾಣಗ್ರಂಥವಾದರೂ ಇದು ಕಾವ್ಯಗುಣ ಸಂಪನ್ನವಾದುದರಿಂದ ಇದನ್ನೊಂದು ಪುರಾಣಕಾವ್ಯವೆಂದು ಕರೆಯಬಹುದಾಗಿದೆ. ಕವಿತಾಚಾತುರ್ಯ, ಅರ್ಥಗಾಂಭೀರ್ಯ, ಪದಲಾಲಿತ್ಯ, ವರ್ಣನಾವಿಧಾನ, ರಸಾಲಂಕಾರ ಸೌಷ್ಠವ ಮೊದಲಾದ ಕಾವ್ಯಗುಣಗಳಿಂದಾಗಿ ಇದು ಜೈನಪುರಾಣಗ್ರಂಥಗಳಲ್ಲೆಲ್ಲಾ ಅದ್ವಿತೀಯ ಪುರಾಣಕಾವ್ಯವಾಗಿದೆ.

'ಆದಿಪುರಾಣ' ಒಂದು ಇತಿಹಾಸ ಕಾವ್ಯವಾಗಿದ್ದು ಜಗತ್ತಿನ ಚರಿತ್ರೆಯ ಅನೇಕ ವಿಷಯಗಳಿಂದ ಕೂಡಿದೆ; ಅಲ್ಲದೆ ಅದು ಜೈನಧರ್ಮನಿಷ್ಠೆಯುಳ್ಳವರಿಗೆ ಜ್ಞಾನಬೋಧೆಯನ್ನು ನೀಡುವ ವಿಶ್ವಕೋಶದಂತಿದೆ. ಜಿನಸೇನರ ಕಾವ್ಯಶೈಲಿ ಉತ್ತಮವೂ ಉತ್ಕೃಷ್ಟವೂ ಆಗಿದ್ದು ಹಲವು ಸಂದರ್ಭಗಳಲ್ಲಿ ಕಾಳಿದಾಸನ ಕಾವ್ಯಸೌಂದರ್ಯಕ್ಕೆ ಸಮನಾಗಿರುವುದಲ್ಲದೆ ಅದನ್ನು ಮೀರಲೂಬಹುದಾದ ಗುಣವುಳ್ಳದ್ದಾಗಿದೆಯೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[೨೫]

## ಪೂರ್ವಪುರಾಣ (ಮುಕ್ತಾಯ ಭಾಗ)–ಉತ್ತರ ಪುರಾಣ

೬೩ ಶಲಾಕಾಪುರುಷರ ಚರಿತ್ರೆಯನ್ನು ಬರೆಯಬೇಕೆಂದಿದ್ದ ತಮ್ಮ ಗುರುಗಳಾದ ಜಿನಸೇನಾಚಾರ್ಯರ ಆಶಯವನ್ನು ಪೂರ್ಣಗೊಳಿಸಿ ಕೃತಾರ್ಥರಾದವರು ಗುಣಭದ್ರಾಚಾರ್ಯರು. ಇವರು ಪೂರ್ವ ಪುರಾಣದ ಉಳಿದ ಭಾಗವನ್ನು 'ಚೂಲಿಕೆ' ಎಂದು ಕರೆದಿದ್ದಾರೆ. 'ಸುಲೋಚನಾ ಸ್ವಯಂವರ ಮಾಲಾರೋಪಣಂ', 'ಜಯವಿಜಯ ವರ್ಣನಂ', 'ಜಯಕುಮಾರ ಸುಲೋಚನಾ ಸುಖಾನುಭವವ್ಯಾವರ್ಣನಂ', 'ಜಯಕುಮಾರ ಸುಲೋಚನಾ ಭವಾಂತರವರ್ಣನಂ' ಮತ್ತು 'ಪ್ರಥಮ ತೀರ್ಥಂಕರ ಚಕ್ರಧರ ಪುರಾಣಂ' ಎಂಬ ಈ ಐದು ಪರ್ವಗಳನ್ನು ಬರೆದು ಪೂರ್ವಪುರಾಣವನ್ನು ಪೂರ್ಣಗೊಳಿಸಿದರು. ವೃಷಭ ತೀರ್ಥಂಕರನ ಪರಿನಿರ್ವಾಣ ಕಲ್ಯಾಣ, ಭರತ ಚಕ್ರವರ್ತಿಯ ವೈರಾಗ್ಯ ಮತ್ತು ಕೇವಲ ಜ್ಞಾನಪ್ರಾಪ್ತಿ ಇವುಗಳ ವರ್ಣನೆಗಳೊಂದಿಗೆ ಆದಿತೀರ್ಥಂಕರನ ಚರಿತ್ರೆಯು ಪೂರ್ಣಗೊಳ್ಳುತ್ತದೆ. ಆಚಾರ್ಯ ಕವಿದ್ವಯರಿಬ್ಬರಿಂದ ರೂಪಿತಗೊಂಡ ಪರಮಶ್ರೇಷ್ಠ ಕೃತಿ ಇದಾಗಿದೆ (ಪೂರ್ವಪುರಾಣದ ಕಥೆಯನ್ನು ಈ ಅಧ್ಯಾಯದ ಕೊನೆಯಲ್ಲಿ ಸಂಗ್ರಹಿಸಿ ಕೊಡಲಾಗಿದೆ).

ಗುಣಭದ್ರಾಚಾರ್ಯರು ಮಹಾತಪಸ್ವಿಗಳೂ ಕವಿಶ್ರೇಷ್ಠರೂ ಆಗಿದ್ದರು. ಲೋಕಸೇನ ಮುನೀಶ್ವರನು ಇವರ ವಿನೀತ ಶಿಷ್ಯ. ಆಚಾರ್ಯ ಜಿನಸೇನರ ಮತ್ತು ದಶರಥ ಗುರುಗಳ ಶಿಷ್ಯರಾದ ಇವರು ವ್ಯಾಕರಣ ಶಾಸ್ತ್ರದಲ್ಲಿ ಪಾರಂಗತರಾದವರು. ಅಗಾಧವಾದ ಸಿದ್ಧಾಂತ ಸಾಗರವನ್ನು ದಾಟಿರುವುದರಿಂದ ಇವರು ಬುದ್ಧಿ ಹಾಗೂ ಪ್ರತಿಭೆಯನ್ನು ಸೂರ್ಯ ಪ್ರಕಾಶದಂತೆ ಪಡೆದಿದ್ದಾರೆ. ವಿದ್ಯೆ ಹಾಗೂ ಉಪವಿದ್ಯೆಗಳಲ್ಲಿ ನಿಷ್ಣಾತರು. ಪ್ರಮಾಣ ನಯಗಳ ಸ್ವರೂಪವನ್ನು ಬಲ್ಲವರು. ಇದು ಆಚಾರ್ಯ ಶ್ರೀ ಗುಣಭದ್ರಾಚಾರ್ಯರೇ ನಿರೂಪಿಸಿಕೊಂಡಿರುವ ವ್ಯಕ್ತಿತ್ತ್ವದ ನಿವೇದನೆ. ಇವರಿಗೆ ಜಿನಸೇನಾಚಾರ್ಯರಲ್ಲಿ ಅತೀವ ಭಕ್ತಿ. ಈ ಭಕ್ತಿಯೇ ಮೈದುಂಬಿ ಗುರುವಿನ ಆಶಯವನ್ನು ಪೂರ್ಣಗೊಳಿಸುವಂತೆ ಮಾಡಿದೆ.

ಉತ್ತರ ಪುರಾಣವು ಸಂಕ್ಷಿಪ್ತವಾಗಿದ್ದರೂ, ಇದರಲ್ಲಿ ಕಥಾಭಾಗವು ಅಧಿಕವಾಗಿದೆ. ಕಾವ್ಯಗುಣದಲ್ಲಿ ಯಾವ ಕುಂದೂ ಇಲ್ಲ.[೨೩]

'ಈ ಮಹಾಪುರಾಣದಲ್ಲಿ ಧರ್ಮವಿದೆ. ಮುಕ್ತಿ ಪದವಿದೆ. ಕಾವ್ಯಗುಣವಿದೆ. ತೀರ್ಥಂಕರ ಚರಿತ್ರೆಯಿದೆ.'—ಎಂದು ಗುಣಭದ್ರಾಚಾರ್ಯರು ಪ್ರಶಸ್ತಿ ವ್ಯಾವರ್ಣನ ಪರ್ವದಲ್ಲಿ (೭೭ನೆಯ ಪರ್ವ) ಹೇಳಿರುವ ಮಾತು ವಾಸ್ತವವಾಗಿದೆ. ಮಹಾಪುರಾಣವು ಸಂಸ್ಕೃತ, ಪ್ರಾಕೃತ, ಕನ್ನಡ ಭಾಷಾದಿ ಕವಿಗಳಿಗೆ ಮೂಲಸ್ರೋತವಾಗಿದ್ದು ತನ್ನ ಮಹತ್ತ್ವಪೂರ್ಣ ಸ್ಥಾನವನ್ನು ಸ್ಥಿರಪಡಿಸಿಕೊಂಡಿದೆ.

ಗುಣಭದ್ರಾಚಾರ್ಯರು ಈ ಕಾವ್ಯರಚನೆ ಪೂರೈಸಿದ್ದು ಧಾರವಾಡಜಿಲ್ಲೆಯ ಬಂಕಾಪುರದಲ್ಲಿ. ರಾಷ್ಟ್ರಕೂಟ ಚಕ್ರವರ್ತಿ ಅಕಾಲವರ್ಷನ ಸಾಮಂತ ಲೋಕಾದಿತ್ಯನ ಕಾಲವದು.

ಉತ್ತರಪುರಾಣವಲ್ಲದೆ 'ಆತ್ಮಾನುಶಾಸನ' ಮತ್ತು 'ಜಿನದತ್ತಚರಿತ' ಎಂಬ ಇನ್ನೂ ಎರಡು ಕೃತಿಗಳನ್ನು ಇವರು ರಚಿಸಿದ್ದಾರೆ. 'ಆತ್ಮಾನುಶಾಸನ'ದಲ್ಲಿ ೨೭೨ ಪದ್ಯಗಳಿವೆ.

ಆಚಾರ್ಯ ಪ್ರಭಾಚಂದ್ರರು ಇದರ ಟೀಕೆಯನ್ನು ಬರೆದಿದ್ದಾರೆ. ಜಿನದತ್ತಚರಿತೆಯಲ್ಲಿ ೯ ಸರ್ಗಗಳಿವೆ. ಇದು ಅನುಷ್ಟುಪ್ ಛಂದಸ್ಸಿನಲ್ಲಿದೆ. ಭಾವಸಂಗ್ರಹವೆಂಬ ಇವರ ಇನ್ನೊಂದು ಗ್ರಂಥ ಅನುಪಲಬ್ಧವಾಗಿದೆ.

೫. **ತ್ರಿಷಷ್ಟಿ ಮಹಾಪುರಾಣ** : ಮಲ್ಲಿಷೇಣ ಇದರ ಕರ್ತೃ. ಕಾಲ ಕ್ರಿ . ಶ. ೧೦೪೭. ಈತನಿಗೆ 'ಉಭಯ ಚಕ್ರವರ್ತಿ', 'ಗರುಡ ಮಂತ್ರವಾದ ವೇದಿ', 'ಕವಿಶೇಖರ' ಮೊದಲಾದ ಬಿರುದುಗಳಿದ್ದವು. ಈತ ತನ್ನನ್ನು ಸಕಲಾಗಮವೇದಿ, ಲಕ್ಷಣವೇದಿ, ತರ್ಕವೇದಿ ಎಂದೂ ಕರೆದುಕೊಂಡಿದ್ದಾನೆ. ಶ್ರೇಷ್ಠ ಕವಿಯಾದ ಈತ, ತನಗೆ ಸಮನಾದ ಸಂಸ್ಕೃತ ಪ್ರಾಕೃತ ಕವಿಗಳಿಲ್ಲವೆಂದು ಹೇಳಿಕೊಂಡಿದ್ದಾನೆ. ವಿವಿಧ ವಿಷಯಗಳನ್ನು ಬಲ್ಲ ಮಹಾಜ್ಞಾನಿ ಯಾಗಿದ್ದರೂ ಮಂತ್ರವಾದಿಯಾಗಿ ಹೆಚ್ಚು ಖ್ಯಾತಿಯುಂಟು. ಈತ ಸೇನಗಣಕ್ಕೆ ಸೇರಿ ದವನು. ಚಾಮುಂಡರಾಯನ ಗುರುವಾದ ಅಜಿತಸೇನಾಚಾರ್ಯರ ಶಿಷ್ಯ ಕನಕಸೇನ. ಈತನ ಶಿಷ್ಯ ಜಿನಸೇನ. ಈ ಜಿನಸೇನರ ಶಿಷ್ಯ ಮಲ್ಲಿಷೇಣ.

'ಮಹಾಪುರಾಣ'ವು ೨೦೦೦ ಶ್ಲೋಕಗಳನ್ನೊಳಗೊಂಡ ಗ್ರಂಥ. ಇದರಲ್ಲಿ ೬೩ ಶಲಾಕಾಪುರುಷರ ಸಂಕ್ಷಿಪ್ತ ಕಥೆಯಿದೆ. ರಚನೆ ಸುಂದರವೂ ಪ್ರಸಾದಯುಕ್ತವೂ ಆಗಿದೆ. ಧಾರವಾಡ ಜಿಲ್ಲೆ ಗದಗ ತಾಲ್ಲೋಕಿನ ಮುಳಗುಂದ ಗ್ರಾಮದಲ್ಲಿದ್ದ ಒಂದು ಜೈನ ಧರ್ಮಾಲಯದಲ್ಲಿ ಮಹಾಪುರಾಣವನ್ನು (ಕ್ರಿ. ಶ. ೧೦೪೭) ರಚಿಸಲಾಯಿತು.[೨೭]

ಮಲ್ಲಿಷೇಣನ ಇನ್ನೊಂದು ಕೃತಿಯಾದ 'ನಾಗಕುಮಾರ ಕಾವ್ಯ' ಐದು ಸರ್ಗಗಳನ್ನುಳ್ಳ ಖಂಡಕಾವ್ಯ. ಇದರಲ್ಲಿ ೨೦೭ ಶ್ಲೋಕಗಳಿವೆ. ಈ ಕಾವ್ಯ ಸರಳವೂ ಸುಂದರವೂ ಆಗಿದೆ. ಈತನ 'ಭೈರವ ಪದ್ಮಾವತೀಕಲ್ಪ' ಎಂಬ ಮತ್ತೊಂದು ಕೃತಿಯಲ್ಲಿ ಅನುಷ್ಟುಪ್ ಛಂದಸ್ಸಿನ ೪೦೦ ಪದ್ಯಗಳಿವೆ. ಇದು ಮಂತ್ರಶಾಸ್ತ್ರದ ಪ್ರಸಿದ್ಧ ಗ್ರಂಥ. ಇವುಗಳಲ್ಲದೆ ಈತ 'ಸರಸ್ವತೀ ಮಂತ್ರಕಲ್ಪ', 'ಜ್ವಾಲಿನೀಕಲ್ಪ' ಮೊದಲಾದ ಕೃತಿಗಳನ್ನೂ ರಚಿಸಿದ್ದಾನೆ.[೨೮]

೬. **ತ್ರಿಷಷ್ಟಿ ಶಲಾಕಾಪುರುಷ ಚರಿತ್ರ** : ಹೇಮಚಂದ್ರನು ಇದರ ಕರ್ತೃ. ಕಾಲ ಕ್ರಿ. ಶ. ೧೦೮೯-೧೧೭೩. ಆಚಾರ್ಯ ಹೇಮಚಂದ್ರನು 'ಕಲಿಕಾಲ ಸರ್ವಜ್ಞ'ನೆಂದು ತನ್ನ ಸಹಧರ್ಮಿಗಳಿಂದ ಬಿರುದಾಂಕಿತನಾಗಿದ್ದಾನೆ. ಕವಿಯಾಗಿ, ಪಂಡಿತನಾಗಿ ಈತನು ಬಹು ಮುಖ ಸಾಮರ್ಥ್ಯವುಳ್ಳವನಾಗಿದ್ದನು.[೨೯] ಈತನು ಚಾಲುಕ್ಯ ರಾಜರಾದ ಜಯಸಿಂಹ, ಸಿದ್ಧರಾಜ ಮತ್ತು ಕುಮಾರಪಾಲರ ಕಾಲದಲ್ಲಿ ಇದ್ದವನು. ಕುಮಾರಪಾಲನು ಈತನ ಆಶ್ರಯದಾತ. ಈತನು ಕಾವ್ಯ, ಛಂದಸ್ಸು, ಅಲಂಕಾರ, ವ್ಯಾಕರಣ, ನಿಘಂಟು ಮತ್ತು ದರ್ಶನಶಾಸ್ತ್ರಗಳಿಗೆ ಸಂಬಂಧಿಸಿದಂತೆ ಕೃತಿಗಳನ್ನು ರಚಿಸಿ, ಸಂಸ್ಕೃತ ವಾಙ್ಮಯದಲ್ಲಿ ವಿಶಿಷ್ಟವಾದ ಸ್ಥಾನವನ್ನು ಗಳಿಸಿಕೊಂಡಿದ್ದಾನೆ.

ಈತನ ಕಾವ್ಯರಚನೆಯಲ್ಲಿ 'ತ್ರಿಷಷ್ಟಿಶಲಾಕಾಪುರಷಚರಿತ್ರ'ವು ಪ್ರಸಿದ್ಧವಾದ ಕೃತಿ ಯಾಗಿದೆ. ಕವಿಯೇ ಕರೆದುಕೊಂಡಿರುವಂತೆ ಇದೊಂದು ಮಹಾಕಾವ್ಯ. ಬೋಧನೆ ಹಾಗೂ ಆತ್ಮೋನ್ನತಿ ಇದರ ಗುರಿಯಾಗಿದೆ. ಈ ಕೃತಿ ಶ್ವೇತಾಂಬರ ಪರಂಪರೆಗೆ ಸೇರಿದ ಕೃತಿಯಾದರೂ ಕಥಾದೃಷ್ಟಿಯಿಂದ ದಿಗಂಬರ-ಶ್ವೇತಾಂಬರ ಪರಂಪರೆಗಳೆರಡನ್ನೂ ತನ್ನಲ್ಲಿ ಅಡಗಿಸಿಕೊಂಡಿರುವುದು ಗೋಚರವಾಗುತ್ತದೆ.

'ವೀತರಾಗಸ್ತೋತ್ರ'ವು ಮಹಾವೀರ ಸ್ತುತಿಯನ್ನು ಒಳಗೊಂಡ ಕಾವ್ಯವಾಗಿದೆ.

ಯೋಗಶಾಸ್ತ್ರವು ಉಪದೇಶಾತ್ಮಕ ಕಾವ್ಯ. ಸಂಸ್ಕೃತ ಮತ್ತು ಪ್ರಾಕೃತ ಭಾಷೆಗಳೆರಡ ರಲ್ಲಿಯೂ ರಚಿತವಾಗಿ ದ್ವ್ಯಾಶ್ರಯ ಕಾವ್ಯವೆನಿಸಿರುವ 'ಕುಮಾರಪಾಲ ಚರಿತ್ರ'ದಲ್ಲಿ ಹೇಮಚಂದ್ರನು ಕವಿಯಾಗಿ, ಚರಿತ್ರಕಾರನಾಗಿ, ವೈಯಾಕರಣಿಯಾಗಿ ಮೆರೆದಿದ್ದಾನೆ. 'ಸಿದ್ಧಹೇಮಚಂದ್ರ' ಹೇಮಚಂದ್ರನ ವ್ಯಾಕರಣ ಗ್ರಂಥವಾಗಿದೆ. 'ಕಾವ್ಯಾನುಶಾಸನ' ಮತ್ತು 'ಛಂದೋನುಶಾಸನ'ಗಳು ಇತರ ರಚನೆಗಳು. ಇವು ಸ್ವೋಪಜ್ಞ ಟೀಕೆಗಳೊಂದಿಗೆ ಇವೆ. 'ಅಭಿಧಾನ ಚಿಂತಾಮಣಿ', 'ಅನೇಕಾರ್ಥಸಂಗ್ರಹ', 'ದೇಶೀಯ ನಾಮಮಾಲಾ'ಗಳು ನಿಘಂಟಿನ ಪ್ರಕಾರಕ್ಕೆ ಸೇರಿದ ಗ್ರಂಥಗಳು. 'ಪ್ರಮಾಣ ಮೀಮಾಂಸ' ತಾರ್ಕಿಕ ಗ್ರಂಥ. 'ಅನ್ಯಯೋಗ ವ್ಯವಚ್ಛೇದ ದ್ವಾತ್ರಿಂಶಿಕಾ' ಗ್ರಂಥವು ೩೨ ಪದ್ಯಗಳುಳ್ಳ ಮಹಾವೀರನ ಸ್ತುತಿಯ ಜೊತೆಗೆ ತರ್ಕಶಾಸ್ತ್ರವನ್ನು ಒಳಗೊಂಡ ಪ್ರಕರಣ ಗ್ರಂಥವಾಗಿದೆ.[೩೦]

೭. **ತ್ರಿಷಷ್ಟಿಸ್ಮೃತಿಶಾಸ್ತ್ರ** : ಕರ್ತೃ–ಆಶಾಧರ. ಕಾಲ ಕ್ರಿ. ಶ. ೧೩ನೆಯ ಶತಮಾನ. ಈತ ಮಾಳವದ ಸುಪ್ರಸಿದ್ಧ ಕವಿ. ಇದು ಮುಖ್ಯವಾಗಿ ಜಿನಸೇನ ಮತ್ತು ಗುಣಭದ್ರಕೃತ ಮಹಾಪುರಾಣವನ್ನು ಅನುಸರಿಸುತ್ತದೆ.[೩೧]

೮. **ಚತುರ್ವಿಂಶತಿ ಜಿನಚರಿತ** (ಜಿನೇಂದ್ರಚರಿತ) :ಅಮರಚಂದ್ರ ಇದರ ಕರ್ತೃ. ಕಾಲ ಕ್ರಿ. ಶ. ೧೩ನೆಯ ಶತಮಾನ. ಈ ಕೃತಿಯಲ್ಲಿ ೧೮೦೨ ಶ್ಲೋಕಗಳು ೨೪ ಅಧ್ಯಾಯಗಳಲ್ಲಿ ವಿಭಾಗಗೊಂಡಿವೆ. ಇದರಲ್ಲಿ ಕ್ರಮವಾಗಿ ೨೪ ತೀರ್ಥಂಕರ ಚರಿತ್ರೆಗಳನ್ನು ವರ್ಣಿಸ ಲಾಗಿದೆ. ಅಮರಚಂದ್ರನ ಬಾಲಭಾರತ ಎಂಬ ಇನ್ನೊಂದು ಕೃತಿಯೂ ಇದೆ.[೩೨]

೯. **ಮಹಾಪುರುಷಚರಿತ** : ಇದರ ಕರ್ತೃ ಮೇರುತುಂಗ. ಕ್ರಿ. ಶ. ೧೪ನೆಯ ಶತಮಾನ. ಐದು ಸರ್ಗಗಳಲ್ಲಿ ಋಷಭ, ಶಾಂತಿ, ನೇಮಿ, ಪಾರ್ಶ್ವ ಮತ್ತು ವರ್ಧಮಾನ ಈ ಐವರು ತೀರ್ಥಂಕರರ ಚರಿತ್ರೆಗಳನ್ನು ವರ್ಣಿಸಲಾಗಿದೆ. ಇದರ ಮೇಲೆ ಒಂದು ವ್ಯಾಖ್ಯಾನವೂ ಇದೆ. ಅದರಲ್ಲಿ ಈ ಕೃತಿಗೆ 'ಕಾವ್ಯೋಪದೇಶ ಶತಕ' ಮತ್ತು 'ಧರ್ಮೋಪದೇಶ ಶತಕ' ವೆಂದೂ ಹೇಳಲಾಗಿದೆ.[೩೩]

೧೦. **ಚತುರ್ವಿಂಶತಿ ಪ್ರಬಂಧ** : ಕರ್ತೃ–ರಾಜಶೇಖರ. ಕಾಲ ಕ್ರಿ. ಶ. ೧೪೦೫.[೩೪]

೧೧. **ಮಹಾಪುರಾಣ** (ತ್ರಿಷಷ್ಟಿಲಕ್ಷಣ ಮಹಾಪುರಾಣ ಅಥವಾ ಲಘುಪುರಾಣ): ಇದರ ಕರ್ತೃ ಚಂದ್ರಮುನಿ. (ಕಾಲ ?)[೩೫]

೧೨. **ಮಹಾಪುರುಷಚರಿತ** : ಇದರ ಕರ್ತೃ ಮೇರುತುಂಗ. (ಕಾಲ ?).[೩೬]

೧೩. **ತ್ರಿಷಷ್ಟಿಶಲಾಕಾ ಪುರುಷಚರಿತ್ರ** : ವಿಮಲಸೂರಿ ಇದರ ಕರ್ತೃ. ಇದು ಗದ್ಯದಲ್ಲಿದೆ.[೩೭]

೧೪. **ತ್ರಿಷಷ್ಟಿ ಶಲಾಕಾ ಪುರುಷಚರಿತ್ರ** : ಕರ್ತೃ–ವಜ್ರಸೇನ. ಕೃತಿ ಗದ್ಯದಲ್ಲಿದೆ. (ಕಾಲ?)[೩೮]

೧೫. **ರಾಯಮಲ್ಲಾಭ್ಯುದಯ** : ಇದರ ಕರ್ತೃ ಪದ್ಮಸುಂದರ. ಕಾಲ ಕ್ರಿ. ಶ. ೧೬೧೫. ಅಕ್ಬರನ ಕಾಲದಲ್ಲಿ ಚೌಧರಿ ರಾಜಮಲ್ಲನ ಪ್ರೇರಣೆಯಿಂದ ಬರೆದದ್ದಾಗಿದೆ. ಇದಲ್ಲಿ ೨೪ ತೀರ್ಥಂಕರರ ಚರಿತೆಗಳ ವರ್ಣನೆ ಇದೆ.[೩೯]

೧೬. **ಪುರಾಣಸಾರಸಂಗ್ರಹ** : ಇದರ ಕರ್ತೃ ದಾಮನಂದಿ. ಇದರಲ್ಲಿ ಶಲಾಕಾಪುರುಷರ ಚರಿತ್ರವನ್ನು ಅತಿ ಸಂಗ್ರಹವಾಗಿ ಸಂಸ್ಕೃತ ಶ್ಲೋಕಗಳಲ್ಲಿ ಹೇಳಲಾಗಿದೆ.[೪೦]

## ಇತರ ಸಂಸ್ಕೃತ ಕಾವ್ಯಗಳು

ಈ ಪ್ರಮುಖ ಗ್ರಂಥಗಳಲ್ಲಿಯೇ ಅಲ್ಲದೆ ಆದಿತೀರ್ಥಂಕರನ ಕಥೆ ಇತರ ಕೆಲವು ಸಂಸ್ಕೃತ ಗ್ರಂಥಗಳಲ್ಲಿ ಕಂಡುಬರುತ್ತದೆ. ಇಲ್ಲಿ ಕೆಲವನ್ನು ಉಲ್ಲೇಖಿಸಲಾಗಿದೆ. ರವಿಷೇಣನ 'ಪದ್ಮಚರಿತ'(ಕಾಲ ಕ್ರಿ. ಶ. ೬೭೬)ದಲ್ಲಿ ಆದಿತೀರ್ಥಂಕರನ ಕಥೆ ಕಂಡುಬರುತ್ತದೆ.

ಪುನ್ನಾಟಸಂಘದ ಜಿನಸೇನರ (ಕಾಲ ಕ್ರಿ. ಶ. ೭೮೩) ಹರಿವಂಶಪುರಾಣದಲ್ಲಿಯೂ ಆದಿತೀರ್ಥಂಕರನ ಕಥೆ ಕಂಡುಬರುತ್ತದೆ. ಇದು ಮುಖ್ಯವಾಗಿ ೨೨ನೆಯ ತೀರ್ಥಂಕರನ ಕಥೆಗೆ ಸಂಬಂಧಿಸಿದ ಗ್ರಂಥವಾದರೂ ಪ್ರಸ್ತಾವನಾ ರೂಪದಿಂದ ಉಳಿದ ಶಲಾಕಾ ಪುರುಷರ ವರ್ಣನೆಯನ್ನು ಕೂಡ ಮಾಡಲಾಗಿದೆ. ಕಾಲಚಕ್ರ-ಕುಲಕರೋತ್ಪತ್ತಿಯ ವರ್ಣನೆಯ ನಂತರ ಋಷಭನಾಥನ ಜನ್ಮಾಭಿಷೇಕ, ಕೈವಲ್ಯೋತ್ಪತ್ತಿ, ಧರ್ಮತೀರ್ಥ ಪ್ರವರ್ತನ, ಭರತನ ದಿಗ್ವಿಜಯ, ವೃಷಭನ ಪರಿನಿರ್ವಾಣ ಕಲ್ಯಾಣ ವರ್ಣನೆಗಳು ಇಲ್ಲಿ ಬರುತ್ತವೆ.

ಶತ್ರುಂಜಯ ಮಾಹಾತ್ಮ್ಯ[೪೧] : ಇದರ ಕರ್ತೃ ಧನೇಶ್ವರ ಸೂರಿ. ಕಾಲ ೭-೮ನೆಯ ಶತಮಾನ.[೪೨] ಈ ಕೃತಿಯ ಪ್ರಥಮ ಖಂಡದಲ್ಲಿ ಸೌರಾಷ್ಟ್ರದಲ್ಲಿರುವ ಶತ್ರುಂಜಯನ ಮತ್ತು ದ್ವಿತೀಯಖಂಡದಲ್ಲಿ ಗಿರಿನಾರದ ವರ್ಣನೆ ಬರುತ್ತದೆ. ಒಟ್ಟು ೧೪ ಸರ್ಗಗಳಿವೆ. ಮೂರರಿಂದ ಆರನೆಯ ಸರ್ಗದವರೆಗೆ ವೃಷಭದೇವ ಭಗವಾನನ ಮತ್ತು ಭರತ ಚಕ್ರವರ್ತಿಯ ಚರಿತ್ರೆಯನ್ನು ವಿಸ್ತಾರವಾಗಿ ವರ್ಣಿಸಲಾಗಿದೆ. ನಾಲ್ಕನೆಯ ಸರ್ಗದಲ್ಲಿ ವೃಷಭಸ್ವಾಮಿಯ ಜನ್ಮ, ರಾಜ್ಯಾಭಿಷೇಕ, ದೀಕ್ಷಾವಿಧಿ, ಕೇವಲಜ್ಞಾನೋತ್ಪತ್ತಿ ಹಾಗೂ ಭರತನ ದಿಗ್ವಿಜಯದ ವರ್ಣನೆ ಇದೆ. ಭರತ ಬಾಹುಬಲಿ ಸಂಗ್ರಾಮ ವರ್ಣನೆ ಇದೆ. ೫ನೆಯ ಸರ್ಗದಲ್ಲಿ ಭರತ ತೀರ್ಥಯಾತ್ರೆ ಮತ್ತು ಆತನಿಂದ ಮಾಡಿಸಲಾದ ತೀರ್ಥದ್ವಾರಗಳ ವರ್ಣನೆ ಇದೆ. ೬ನೆಯ ಸರ್ಗದಲ್ಲಿ ವೃಷಭಸ್ವಾಮಿಯ ಹಾಗೂ ಭರತಚರ್ಕವರ್ತಿಯ ನಿರ್ವಾಣ, ಅಷ್ಟಪದದ ಉದ್ಧಾರ ಮತ್ತು ಸೂರ್ಯಯಶರ ಚರಿತ್ರೆಯ ವರ್ಣನೆ ಇದೆ. ಶ್ವೇತಾಂಬರ ಪರಂಪರೆಯ ಕಥಾಮಾರ್ಗವು ಇಲ್ಲಿ ಕಂಡುಬರುತ್ತದೆ.

## ದಿಗಂಬರ ಪರಂಪರೆಯ ಜಿನಸೇನ-ಗುಣಭದ್ರರ ಪೂರ್ವಪುರಾಣದ ಕಥೆ

ಜಂಬೂದ್ವೀಪದ ಭರತಕ್ಷೇತ್ರದ ವಿಜಯಾರ್ಧಪರ್ವತದ ಉತ್ತರ ಶ್ರೇಣಿಯಲ್ಲಿ ಅಲಕಾ ಎಂಬ ಪಟ್ಟಣ. ಅಲ್ಲಿ ಅತಿಬಲನೆಂಬ ವಿದ್ಯಾಧರ ರಾಜ. ಆತನ ರಾಣಿ ಮನೋಹರಾ. ಇವರ ಪುತ್ರ ಮಹಾಬಲ. ವೈರಾಗ್ಯಪರನಾದ ಅತಿಬಲನು, ಯುವರಾಜ ಮಹಾಬಲನಿಗೆ ರಾಜ್ಯ ನೀಡಿ ದೀಕ್ಷೆಯನ್ನು ತೆಗೆದುಕೊಂಡನು. ಮಹಾಬಲರಾಜನಿಗೆ ಮಹಾಮತಿ, ಸಂಭಿನ್ನಮತಿ, ಶತಮತಿ ಮತ್ತು ಸ್ವಯಂಬುದ್ಧರೆಂಬ ನಾಲ್ವರು ಮಂತ್ರಿಗಳಿದ್ದರು. ಇವರಲ್ಲಿ ಸ್ವಯಂಬುದ್ಧನು ಸಮ್ಯಗ್ದೃಷ್ಟಿಯುಳ್ಳವನಾಗಿದ್ದನು. ಒಮ್ಮೆ ರಾಜ ಮಹಾಬಲನಿಗೆ ಸ್ವಯಂಬುದ್ಧನು ರೌದ್ರಧ್ಯಾನ, ಆರ್ತಧ್ಯಾನ, ಧರ್ಮಧ್ಯಾನ ಮತ್ತು ಶುಕ್ಲಧ್ಯಾನದ ಫಲವನ್ನು ಸೂಚಿಸುವ ಅರವಿಂದ, ದಂಡಕ, ಶತಬಲ ಮತ್ತು ಸಹಸ್ರಬಲ ವಿದ್ಯಾಧರರ ಕಥೆ ಹೇಳಿದನು. ಇದನ್ನು ಕೇಳಿದ ಮಹಾಬಲನು ಅವನನ್ನು ಬಹುವಾಗಿ ಸನ್ಮಾನಿಸಿದನು.

ಒಮ್ಮೆ ಸ್ವಯಂಬುದ್ಧ ಮಂತ್ರಿಯು ಜಿನಚೈತ್ಯಾಲಯಗಳಿಗೆ ವಂದಿಸಲು ಸುಮೇರು ಪರ್ವತಕ್ಕೆ ಹೋದನು. ಅಲ್ಲಿ ಆತನಿಗೆ ಚಾರಣವೃದ್ಧಿಧಾರಿಗಳಾದ ಆದಿತ್ಯಗತಿ ಮತ್ತು ಅರಿಂಜಯರೆಂಬ ಇಬ್ಬರು ಮುನಿಗಳ ದರ್ಶನವು ಪ್ರಾಪ್ತವಾಯಿತು. ಅವರನ್ನು ಮಂತ್ರಿಯು, ಮಹಾಬಲನು ಭವ್ಯನೋ ಅಭವ್ಯನೋ ಎಂದು ಪ್ರಶ್ನಿಸಿದಾಗ, ಆದಿತ್ಯಗತಿ ಮುನಿವರರು, ಆತನು ಭವ್ಯನೆಂದೂ, ಹತ್ತನೆಯ ಭವದಲ್ಲಿ ತೀರ್ಥಂಕರನಾಗಿ ಮೋಕ್ಷವನ್ನು ಪಡೆಯುವನೆಂಬುದಾಗಿಯೂ ಹೇಳಿದರು. ಇದೇ ಸಮಯದಲ್ಲಿ ಮಹಾಬಲನ ಪೂರ್ವಭವದ ವೃತ್ತಾಂತವನ್ನು ತಿಳಿಸಿದರು.

ಪಶ್ಚಿಮ ವಿದೇಹದಲ್ಲಿ ಶೋಭಿತವಾದ ಗಂಧಿಲದೇಶದ ಸಿಂಹಪುರವೆಂಬ ನಗರದ ರಾಜ ಶ್ರೀಷೇಣ ಮತ್ತುಪತ್ನಿ ಶ್ರೀಸುಂದರಿಗೆ ಜಯವರ್ಮನೆಂಬ ಮಗನಿದ್ದನು. ತಮ್ಮನಿಗೆ ರಾಜ್ಯವನ್ನು ನೀಡಿದ ಕಾರಣದಿಂದಾಗಿ, ಅವನು ಸಂಸಾರದಲ್ಲಿ ವಿರಕ್ತನಾಗಿ ಮುನಿದೀಕ್ಷೆಯನ್ನು ಕೈಗೊಂಡನು. ಒಂದು ದಿನ ಆಕಾಶಮಾರ್ಗವಾಗಿ ವೈಭವಪೂರ್ವಕವಾಗಿ ಹೋಗುತ್ತಿದ್ದ ವಿದ್ಯಾಧರನನ್ನು ನೋಡಿ ಆತನು ನಿಧಾನವನ್ನು ಕೈಗೊಂಡನು. ಅದೇ ಸಮಯದಲ್ಲಿ ಹಾವು ಕಡಿದು ಸತ್ತ ಆತನು ಮಹಾಬಲನಿಗೆ ಹುಟ್ಟಿದನೆಂಬ ವೃತ್ತಾಂತವನ್ನು ತಿಳಿಸಿದರು. ಮುನಿಗಳ ಆದೇಶದಂತೆ ಮಹಾಬಲನು ಕ್ಷೀಣಿಸುತ್ತಿರುವ ಆಯುವಿನ ಸ್ವಪ್ನಫಲವನ್ನು ಸೂಚಿಸಿ ಸ್ವಯಂಬುದ್ಧನು ಮಹಾಬಲನಿಗೆ ಧರ್ಮಜಾಗೃತಿಯಾಗುವಂತೆ ಮಾಡಿದನು. ಮಹಾಬಲನು ವೈರಾಗ್ಯಪರನಾಗಿ ಸಲ್ಲೇಖನವ್ರತದಿಂದ ಮುಡುಪಿ ಸಮತಾಭಾವದಿಂದ ಪ್ರಾಣತ್ಯಾಗಮಾಡಿ ಈಶಾನಸ್ವರ್ಗದಲ್ಲಿ ಲಲಿತಾಂಗನೆಂಬ ದೇವನಾಗಿ ಹುಟ್ಟಿದನು.

ಲಲಿತಾಂಗನಿಗೆ ಅನೇಕ ದೇವಾಂಗನೆಯರಿದ್ದರು. ಕೊನೆಯಲ್ಲಿ ಸ್ವಯಂಪ್ರಭೆಯೆಂಬ ಸುಂದರಿಯಾದ ದೇವಿಯೊಡನೆ ಎಣೆಯಿಲ್ಲದ ಭೋಗಸುಖವನ್ನು ಅನುಭವಿಸಿದನು. ಸ್ವಯಂಪ್ರಭೆಯೊಡನೆ ಲಲಿತಾಂಗದೇವನು ನಾನಾ ದ್ವೀಪ ಸಮುದ್ರಗಳಲ್ಲಿ ಕ್ರೀಡಿಸುತ್ತಾ ಕಾಲವನ್ನು ಕಳೆಯುತ್ತಿದ್ದನು. ಆಯುಷ್ಯಾಂತದಲ್ಲಿ ಸತ್ತು ಜಂಬೂದ್ವೀಪದ ವಿದೇಹಕ್ಷೇತ್ರದಲ್ಲಿ ಪುಷ್ಕಲಾವತಿ ಎಂಬ ದೇಶದ ಉತ್ಪಲಖೇಟ ಎಂಬ ಪಟ್ಟಣದ ರಾಜ ವಜ್ರಬಾಹುವಿಗೂ ಆತನ ಪತ್ನಿ ವಸುಂಧರೆಗೂ ವಜ್ರಜಂಘನೆಂಬ ಮಗನಾಗಿ ಹುಟ್ಟಿದನು. ವಜ್ರಜಂಘನು ಬಾಲಚಂದ್ರನ ರೀತಿ ಬೆಳೆಯುತ್ತಿದ್ದನು. ಲಲಿತಾಂಗದೇವನ ವಿಯೋಗದಿಂದ ದುಃಖಿತೆಯಾದ ಸ್ವಯಂಪ್ರಭೆಯನ್ನು, ದೇವನೊಬ್ಬನು ಸಮಾಧಾನಪಡಿಸಿ ಅವಳನ್ನು ಧರ್ಮಮಾರ್ಗದಲ್ಲಿ ದೃಢಪಡಿಸಿದನು. ಅವಳು ಆಯುಷ್ಯಾಂತದಲ್ಲಿ ಸತ್ತು, ಜಂಬೂದ್ವೀಪದ ಪೂರ್ವವಿದೇಹಕ್ಷೇತ್ರದ ಪುಂಡರೀಕಿಣೀ ಎಂಬ ನಗರದಲ್ಲಿ ವಜ್ರದಂತ-ಲಕ್ಷ್ಮೀದೇವಿಯರೆಂಬ ರಾಜದಂಪತಿಗಳಿಗೆ ಶ್ರೀಮತಿಯೆಂಬ ಮಗಳಾಗಿ ಹುಟ್ಟಿದಳು.

ಒಮ್ಮೆ ಉಪ್ಪರಿಗೆಯ ಮೇಲಿದ್ದ ಶ್ರೀಮತಿಯು ಯಶೋಧರ ಕೇವಲಿಗಳಿಗೆ ಪೂಜೆ ಸಲ್ಲಿಸಲು ಆಕಾಶಮಾರ್ಗದಲ್ಲಿ ವಿಮಾನಾರೂಢರಾಗಿ ಬರುತ್ತಿದ್ದ ದೇವತೆಗಳನ್ನು ಕಂಡು, ಕೂಡಲೆ ಜಾತಿಸ್ಮರಣೆಯನ್ನು ಹೊಂದಿದಳು. ಮೂರ್ಛಿತಳಾಗಿ ಶೈತ್ಯೋಪಚಾರದಿಂದ ಎಚ್ಚರಗೊಂಡರೂ ಅವಳು ಮೌನದಿಂದ ಇರಲಾರಂಭಿಸಿದಳು. ಇದರಿಂದಾಗಿ ತಂದೆ-ತಾಯಿಗಳಾದಿಯಾಗಿ ಎಲ್ಲರೂ ದುಃಖಿತರಾದರು.

ಶ್ರೀಮತಿಯ ತಂದೆ ವಜ್ರದಂತನು ಚಕ್ರವರ್ತಿಯಾಗಿದ್ದನು. ಅವನು ಪ್ರಕಟಗೊಂಡ

ಚಕ್ರರತ್ನದ ಪೂಜೆಯನ್ನು ಸ್ಥಗಿತಗೊಳಿಸಿ ತನ್ನ ತಂದೆಯ ಕೇವಲಜ್ಞಾನ ಮಹೋತ್ಸವವನ್ನು ಆಚರಿಸಲು ಹೋದನು. ಅಲ್ಲಿ ಕೇವಲಿಭಗವಾನರಿಗೆ ನಮಸ್ಕರಿಸುತ್ತಿದ್ದಂತೆ ಚಕ್ರವರ್ತಿಗೆ ಅವಧಿಜ್ಞಾನವು ಪ್ರಾಪ್ತವಾಯಿತು. ಇದರಿಂದಾಗಿ ಆತನಿಗೆ ಶ್ರೀಮತಿ ಹಾಗೂ ವಜ್ರಪಂಘರ ಪೂರ್ವಭವದ ವಿಚಾರವು ಸ್ಪಷ್ಟವಾಗಿ ಗೋಚರವಾಯಿತು. ಕೈವಲ್ಯ ಮಹೋತ್ಸವವನ್ನು ಮುಗಿಸಿಕೊಂಡು ಬಂದು ಮಗಳನ್ನು ನೋಡಿಕೊಳ್ಳಲು ಪಂಡಿತೆಯೆಂಬ ಹೆಸರಿನ ದಾದಿ ಯನ್ನು ನಿಯಮಿಸಿ, ದಿಗ್ವಿಜಯಕ್ಕಾಗಿ ಹೊರಟನು.

ಪಂಡಿತೆಯು ಒಂದು ದಿನ ಉದ್ಯಾನವನದಲ್ಲಿ ಶ್ರೀಮತಿಯೊಂದಿಗೆ ಪ್ರೇಮಪೂರ್ವಕ ವಾಗಿ ಆಕೆಯ ಮೌನಕ್ಕೆ ಕಾರಣವನ್ನು ಕೇಳಿದಾಗ ಶ್ರೀಮತಿಯು ಆಕೆಗೆ ತನ್ನ ಪೂರ್ವಭವಗಳ ವಿಷಯವನ್ನು ತಿಳಿಸಿದಳು.

ಗಂಧಿಲವೆಂಬ ದೇಶ. ಅಲ್ಲಿಯ ಪಲಾಲಪರ್ವತವೆಂಬ ಗ್ರಾಮದಲ್ಲಿ ದೇವಿಲನೆಂಬ ಗೌಡನಿಗೂ, ಸುಮತಿಗೂ ಧನಶ್ರೀ ಎಂಬ ಮಗಳಾಗಿ ಹುಟ್ಟಿದಳು. ಅಜ್ಞಾನದಿಂದ ಒಂದು ದಿನ ಸತ್ತನಾಯಿಯ ದುರ್ಗಂಧವಾದ ಶರೀರವನ್ನು, ಶಾಸ್ತ್ರಾಧ್ಯಯನ ಮಾಡುತ್ತಿದ್ದ ಸಮಾಧಿಗುಪ್ತಮುನಿಗಳ ಸಮೀಪದಲ್ಲಿ ಹಾಕಿದಾಗ ಮುನಿಗಳು ಈ ಕಾರಣದಿಂದ ಆಕೆಗೆ ಒದಗಿಬರುವ ಸಂತಾಪದ ಬಗೆಗೆ ಸೂಚಿಸಿದರು. ಕ್ಷಮಾಯಾಚನೆ ಮಾಡಿಕೊಂಡುದರಿಂದ ಮುಂದೆ ದಾರಿದ್ರ್ಯ ಹೊಂದಿದರೂ ಮನುಷ್ಯಜನ್ಮವನ್ನು ಪಡೆಯುವಂತಾಯಿತು. ಪಾಟಲಿ ಎಂಬ ಗ್ರಾಮದಲ್ಲಿ, ನಾಗದತ್ತ-ಸುರತಿ ಎಂಬ ಬಡದಂಪತಿಗಳಿಗೆ ಎಂಟನೆಯ ಸಂತಾನ ವಾಗಿ ನಿರ್ನಾಮಿಕೆ ಎಂಬ ಹೆಸರಿನಿಂದ ಧನಶ್ರೀ ಹುಟ್ಟಿದಳು. ನಿರ್ನಾಮಿಕೆಯು ಒಮ್ಮೆ ಮುನಿಗಳನ್ನು ದರ್ಶನಮಾಡಿ ತನ್ನ ದಾರಿದ್ರ್ಯದ ಕಾರಣವನ್ನು ತಿಳಿದುಕೊಂಡಳು. ಧರ್ಮದ ಮಹಿಮೆಯನ್ನು ಅರಿತು, ಅವರ ಬಳಿ ಉಪವಾಸ ವ್ರತವನ್ನು ಸ್ವೀಕರಿಸಿ ಸತ್ತು ಸ್ವರ್ಗದಲ್ಲಿ ಲಲಿತಾಂಗದೇವನಿಗೆ ಸ್ವಯಂಪ್ರಭೆಯೆಂಬ ದೇವಿಯಾಗಿ ಹುಟ್ಟಿದುದನ್ನೂ ಅನಂತರ ಶ್ರೀಮತಿಯಾಗಿ ಹುಟ್ಟಿರುವ ವಿಷಯವನ್ನೂ ಹೇಳಿದಳು. ಶ್ರೀಮತಿಯು ತನ್ನ ಪೂರ್ವ ಭವದ ಸಂಬಂಧವಾದ ಒಂದು ಚಿತ್ರಪಟವನ್ನು ಬರೆದು ಪಂಡಿತೆಗೆ ಕೊಟ್ಟಳು. ಅವಳು ಅದನ್ನು ದೇವಾಲಯದ ಚಿತ್ರಶಾಲೆಯಲ್ಲಿ ಇಟ್ಟು ನಿರೀಕ್ಷಿಸುತ್ತ ಕುಳಿತಳು.

ಈ ಮಧ್ಯೆ ಚಕ್ರವರ್ತಿಯು ದಿಗ್ವಿಜಯದಿಂದ ರಾಜಧಾನಿಗೆ ಹಿಂದಿರುಗಿ ಬಂದನು. ಶ್ರೀಮತಿಗೆ ಸಮಾಧಾನವನ್ನು ಹೇಳಿ, ಹಿಂದಿನ ಭವಗಳ ವೃತ್ತಾಂತವನ್ನೆಲ್ಲಾ ತಿಳಿಸಿ ಲಲಿತಾಂಗದೇವನು ಈಗ ವಜ್ರಜಂಘನಾಗಿ ಹುಟ್ಟಿರುವುದಾಗಿಯೂ ತನ್ನ ತಂಗಿಯ ಮಗನೇ ವಜ್ರಜಂಘನೆಂದೂ ತಿಳಿಸಿದನು. ಇನ್ನು ಕೆಲವೇ ದಿನಗಳಲ್ಲಿ ಆತನೊಡನೆ ಶ್ರೀಮತಿಯ ವಿವಾಹವಾಗುವುದೆಂದೂ ಇನ್ನು ದುಃಖ ಬೇಡವೆಂದೂ ಹೇಳಿ, ರಾಜ ವಜ್ರ ಬಾಹು, ತಂಗಿ ವಸುಂಧರಾ ಮತ್ತು ಅವರ ಮಗನಾದ ವಜ್ರಜಂಘನನ್ನು ಸ್ವಾಗತಿಸಲು ಹೋದನು. ಇದೇ ಸಮಯದಲ್ಲಿ ಪಂಡಿತೆಯು ಜಿನಾಲಯದಿಂದ ಹಿಂದಿರುಗಿ, ಹಿಂದಿನ ಜನ್ಮದಲ್ಲಿ ಲಲಿತಾಂಗದೇವನಾಗಿ ಹುಟ್ಟಿದ್ದ ವಜ್ರಜಂಘನ ಪರಿಚಯವು ಪ್ರಾಪ್ತವಾದ ಸಂತೋಷದ ಸಮಾಚಾರವನ್ನು ತಿಳಿಸಿದಳು. ವಜ್ರಜಂಘನು ನೀಡಿದ ಶ್ರೀಮತಿಯ ಚಿತ್ರಪಟಕ್ಕೆ ಸಮನಾಗಿರುವ ಚಿತ್ರಪಟವನ್ನು ನೀಡಿದಳು. ಅದನ್ನು ಕಂಡ ಶ್ರೀಮತಿ ಸಂತೋಷಗೊಂಡಳು.

ಶ್ರೀಮತಿ-ವಜ್ರಜಂಘರ ವಿವಾಹ ವೈಭವಪೂರ್ಣವಾಗಿ ನಡೆಯಿತು. ಸ್ವರ್ಗದ ಭೋಗಗಳನ್ನು ಮೀರಿಸುವಂತೆ ಅವರು ಸಂತೋಷದಿಂದ ವಿಹರಿಸಿದರು.

ವಜ್ರಜಂಘನ ತಂಗಿಯಾದ ಅನುಂದರಿಯನ್ನು ಶ್ರೀಮತಿಯ ಅಣ್ಣನಾದ ಅಮಿತತೇಜನಿಗೆ ಕೊಟ್ಟು ವಿವಾಹಮಾಡಲಾಯಿತು.

ವಜ್ರದಂತನು ಅನೇಕ ಉಡುಗೊರೆಗಳನ್ನು ಕೊಟ್ಟು ಶ್ರೀಮತಿಯನ್ನು ವಜ್ರಜಂಘನೊಂದಿಗೆ ಕಳುಹಿಸಿಕೊಟ್ಟನು. ಅಲ್ಲಿ ಸುಖೋಪಭೋಗಗಳಿಂದ ಸಮಯವು ವ್ಯತೀತವಾಗುತ್ತಿತ್ತು. ಕಾಲಕ್ರಮದಲ್ಲಿ ಶ್ರೀಮತಿಯು ನಲವತ್ತೊಂಬತ್ತು ಅವಳಿ ಮಕ್ಕಳಿಗೆ ಜನ್ಮವನ್ನು ನೀಡಿದಳು. ಈ ಕಡೆ ವಜ್ರಜಂಘನ ತಂದೆ ವಜ್ರಬಾಹು ಸಂಸಾರದಲ್ಲಿ ವಿರಕ್ತಿಯನ್ನು ಪಡೆದು ಮುನಿಯಾಗಿ ತಪಸ್ಸನ್ನಾಚರಿಸಿ ಮುಕ್ತಿಯನ್ನು ಪಡೆದನು. ವಜ್ರಜಂಘನು ರಾಜನಾಗಿ ಪ್ರಜೆಗಳನ್ನು ಪಾಲಿಸುತ್ತಿದ್ದನು.

ಶ್ರೀಮತಿಯ ತಂದೆ ವಜ್ರದಂತ ಚಕ್ರವರ್ತಿ ಸಹ ವೈರಾಗ್ಯಪರನಾಗಿ ಮುನಿಯಾದನು. ಆತನ ಜೊತೆಯಲ್ಲಿ ಅವನ ಮಕ್ಕಳೂ ಸಹ ದೀಕ್ಷೆಯನ್ನು ಕೈಗೊಂಡರು. ರಾಜ್ಯದ ಭಾರವು ಮೊಮ್ಮಗನಾದ ಬಾಲಕ ಪುಂಡರೀಕನ ಮೇಲೆ ಬಿದ್ದಿತು. ಶ್ರೀಮತಿಯ ತಾಯಿಯು ವಜ್ರಜಂಘನ ಬಳಿಗೆ ಸಮಾಚಾರವನ್ನು ಕಳಿಸಿದಳು. ವಜ್ರಜಂಘನು ಶ್ರೀಮತಿಯೊಂದಿಗೆ ಅಲ್ಲಿಗೆ ಹೊರಟನು. ಅವರೊಂದಿಗೆ ಒಂದು ದೊಡ್ಡ ಸೈನ್ಯವೂ ಹೊರಟಿತು. ವಜ್ರಜಂಘ ಮತ್ತು ಶ್ರೀಮತಿಯರು ಮಾರ್ಗದಲ್ಲಿ ದಮಧರಸೇನ ಮುನಿಶ್ರೇಷ್ಠರಿಗೆ ಆಹಾರವನ್ನು ನೀಡಿದರು. ಆ ಮುನಿಗಳು ಈ ದಂಪತಿಗಳ ಮಗನೇ ಆಗಿದ್ದರು. ಆ ಮುನಿಗಳಿಂದ ವಜ್ರಜಂಘನು ಧರ್ಮಶ್ರವಣವನ್ನು ಮಾಡಿ, ತನ್ನ ಹಾಗೂ ಶ್ರೀಮತಿಯ ಪೂರ್ವ ಭವದ ಬಗೆಗೂ, ಮತಿವರ, ಧನಮಿತ್ರ, ಅಕಂಪನಾದಿಗಳ ಪೂರ್ವಭವಗಳ ಬಗೆಗೂ ಕೇಳಿ ತಿಳಿದುಕೊಂಡನು. ಅನಂತರ ವಜ್ರಜಂಘನು ಮುಂಗುಸಿ, ಹುಲಿ, ಕೋತಿ, ಹಂದಿಗಳು ನಿರ್ಭೀತವಾಗಿ ಅಲ್ಲಿ ಕುಳಿತುಕೊಂಡಿರುವ ಕಾರಣವನ್ನು ಕೇಳಲಾಗಿ ಮುನಿಗಳು ಅವೆಲ್ಲವುಗಳ ಭವಾಂತರವನ್ನು ತಿಳಿಸಿದರು. ಅಲ್ಲದೆ ಇಂದು ಅವುಗಳು ಮಾಡಿರುವ ಪಾತ್ರದಾನದ ಅನುಮೋದನೆಯಿಂದಾಗಿ ಮುಂದೆ ವಜ್ರಜಂಘನೊಂದಿಗೆ ಭೋಗಭೂಮಿಯಲ್ಲಿಯೂ ಮುಂದಿನ ಭವಾಂತರಗಳಲ್ಲಿಯೂ ಜೊತೆಜೊತೆಯಲ್ಲಿಯೇ ಜನ್ಮವನ್ನು ಪಡೆಯುತ್ತಾ ಹೋಗುವುವೆಂದು ತಿಳಿಸಿದರು. ಶ್ರೀಮತಿಯು ಮುಂದೆ ದಾನತೀರ್ಥ ಪ್ರವರ್ತಕನಾದ ಶ್ರೇಯಾಂಸನಾಗುವಳೆಂದೂ ತಿಳಿಸಿದರು.

ವಜ್ರಜಂಘನು ಪುಂಡರೀಕಿಣೀನಗರಕ್ಕೆ ಹೋಗಿ ಅಲ್ಲಿಯ ರಾಜ್ಯಕ್ರಮವನ್ನು ಸುವ್ಯವಸ್ಥಿತಗೊಳಿಸಿದನು. ಅಲ್ಲಿಂದ ಹಿಂದಿರುಗಿ ಬಂದು ರಾಜ್ಯಕಾರ್ಯಗಳಲ್ಲಿ ತೊಡಗಿ ಶ್ರೀಮತಿಯೊಂದಿಗೆ ಸುಖದಿಂದ ಇದ್ದನು. ಒಮ್ಮೆ ಶ್ರೀಮತಿ ವಜ್ರಜಂಘರು ಕಾಲಾಗರು ಧೂಪದ ಹೊಗೆಯಿಂದ ಪರಿಮಳಯುಕ್ತವಾದ ವೈಭವಪೂರ್ಣವಾದ ಶಯನಗೃಹದಲ್ಲಿ ಮಲಗಿರಲು, ಕಿಟಿಕಿಗಳು ಮುಚ್ಚಿದ್ದುದರಿಂದ ಉಸಿರುಗಟ್ಟಿ ಇಬ್ಬರೂ ಅಸುನೀಗಿದರು.

ವಜ್ರಜಂಘ-ಶ್ರೀಮತಿಯರು ಮುಂದೆ ಜಂಬೂದ್ವೀಪದ ವಿದೇಹಕ್ಷೇತ್ರ, ಉತ್ತರ ಕುರುಕ್ಷೇತ್ರದಲ್ಲಿ ಆರ್ಯದಂಪತಿಗಳಾಗಿ ಹುಟ್ಟಿದರು. ಒಮ್ಮೆ ಅಲ್ಲಿ ಕ್ರೀಡಿಸುತ್ತಿರುವಾಗ ಇಬ್ಬರು ಚಾರಣ ಮುನಿಗಳು ಅಲ್ಲಿಗೆ ಬಂದರು. ಪೂರ್ವಜನ್ಮದ ಸ್ಮರಣೆಯಿಂದ, ಆ

ಮುನಿಗಳನ್ನು ಸತ್ಕರಿಸಿ ಅವರ ವೃತ್ತಾಂತವನ್ನು ಕೇಳಿದರು. ಅವರಲ್ಲಿ ಜ್ಯೇಷ್ಠಮುನಿಯು ಮಹಾಬಲನಿಗೆ ಮಂತ್ರಿಯಾಗಿದ್ದ ಸ್ವಯಂಬುದ್ಧ. ಮಹಾಬಲನ ವಿಯೋಗದಿಂದಾಗಿ ಖಿನ್ನನಾದ ಸ್ವಯಂಬುದ್ಧನು ದೀಕ್ಷೆಯನ್ನು ತೆಗೆದುಕೊಂಡನು. ಅಲ್ಲಿಂದ ಮುಂದೆ ಸೌಧರ್ಮಕಲ್ಪದಲ್ಲಿ ದೇವನಾಗಿ ಹುಟ್ಟಿದನು. ಅಲ್ಲಿಂದ ಚ್ಯುತನಾಗಿ ಪುಂಡರೀಕಿಣೀ ಎಂಬ ನಗರದಲ್ಲಿ ಸುಂದರಿ ಮತ್ತು ಪ್ರಿಯಸೇನ ರಾಜದಂಪತಿಗಳಿಗೆ ಪ್ರೀತಿಂಕರನೆಂಬ ಮಗನಾಗಿ ಹುಟ್ಟಿದನು. ಈತನ ತಮ್ಮ ಪ್ರೀತಿದೇವ. ಇಬ್ಬರೂ ವೈರಾಗ್ಯಪರರಾಗಿ ದೀಕ್ಷೆಯನ್ನು ಕೈಗೊಂಡು ತಪಶ್ಚರ್ಯೆಯನ್ನು ಮಾಡಿದರು. ಅವರಿಗೆ ಚಾರಣಋದ್ಧಿಯು ಪ್ರಾಪ್ತವಾಯಿತು. ಮಹಾಬಲನು ಇಲ್ಲಿ ಹುಟ್ಟಿರುವುದನ್ನು ಅವಧಿಜ್ಞಾನದಿಂದ ತಿಳಿದು, ಸಮ್ಯಗ್ದರ್ಶನವನ್ನು ಉಂಟುಮಾಡಲು ಬಂದಿರುವುದಾಗಿ ತಿಳಿಸಿದರು. ಆರ್ಯದಂಪತಿಗಳು ಧರ್ಮಧಾರಣೆಯನ್ನು ಮಾಡಿದರು. ಉಪದೇಶವನ್ನು ಮಾಡಿ ಮುನಿಗಳು ಹಿಂದಿರುಗಿದರು. ವಜ್ರಜಂಘಾಚಾರ್ಯನು ಶ್ರೀಪ್ರಭ ವಿಮಾನದಲ್ಲಿ ಶ್ರೀಧರದೇವನಾಗಿಯೂ, ಶ್ರೀಮತಿ ಆರ್ಯೆಯು ಸ್ವಯಂಪ್ರಭ ವಿಮಾನದಲ್ಲಿ ಸ್ವಯಂಪ್ರಭ ದೇವನಾಗಿಯೂ ಹುಟ್ಟಿದರು. ಮುಂಗುಸಿ ಮೊದಲಾದ ಜೀವಗಳೂ ಇದೇ ಸ್ವರ್ಗದಲ್ಲಿ ದೇವತೆಗಳಾಗಿ ಹುಟ್ಟಿದವು. ಶ್ರೀಧರದೇವನು ಸ್ವರ್ಗಸುಖವನ್ನು ಉಪಭೋಗಿಸತೊಡಗಿದನು.

ಒಮ್ಮೆ ಶ್ರೀಧರದೇವನು ಪ್ರೀತಿಂಕರ ಕೇವಲಿಗಳ ಬಳಿ ತಾನು ಮಹಾಬಲನಾಗಿದ್ದಾಗ ತನ್ನೊಂದಿಗಿದ್ದ ಉಳಿದ ಮೂವರು ಮಂತ್ರಿಗಳ ಬಗೆಗೆ ವಿಚಾರಿಸಿದನು. ಸಂಭಿನ್ನಮತಿ ಮತ್ತು ಮಹಾಮತಿಗಳು ನಿಗೋದದಲ್ಲಿ ಹುಟ್ಟಿರುವರೆಂದೂ, ಶತಮತಿಯು ಎರಡನೆಯ ನರಕವನ್ನು ಹೊಂದಿರುವನೆಂದೂ ತಿಳಿಯಿತು. ಕೇವಲಿಯ ವಚನವನ್ನು ಕೇಳಿ, ಶ್ರೀಧರ ದೇವನು ಎರಡನೆಯ ನರಕಕ್ಕೆ ಹೋಗಿ ಶತಮತಿಯ ಜೀವಕ್ಕೆ ಬೋಧನೆಯನ್ನು ಮಾಡಲಾಗಿ, ಆತನು ಸಮ್ಯಗ್ದರ್ಶನವನ್ನು ಧಾರಣೆ ಮಾಡಿ ಅಲ್ಲಿಂದ ಮುಂದೆ ಜಯಸೇನನಾಗಿ ಹುಟ್ಟಿ ಮುಂದೆ ಬ್ರಹ್ಮೇಂದ್ರನಾಗಿ ಹುಟ್ಟಿ ಶ್ರೀಧರನನ್ನು ಪೂಜಿಸಿದನು.

ಶ್ರೀಧರದೇವನು ಸ್ವರ್ಗದಿಂದ ಚ್ಯುತನಾಗಿ ಜಂಬೂದ್ವೀಪದ ವಿದೇಹಕ್ಷೇತ್ರದ ವತ್ಸಕಾವತಿ ದೇಶದ ಸುಸೀಮಾನಗರದಲ್ಲಿ ಸುದೃಷ್ಟಿ ರಾಜನಿಗೂ ಸುಂದರನಂದೆಗೂ ಸುವಿಧಿ ಎಂಬ ಮಗನಾಗಿ ಹುಟ್ಟಿದನು. ಆತನ ಜೊತೆಯಲ್ಲಿ ಹುಟ್ಟಿದ ದೇವತೆಗಳೂ (ಹಿಂದೆ ಮುಂಗುಸಿಯಾದಿಯಾಗಿದ್ದ ಜೀವಿಗಳು)ಅಲ್ಲಿಯೇ ಜನಿಸಿದರು. ಸುವಿಧಿಯ ಪತ್ನಿ ಮನೋರಮೆ. ಇವರಿಬ್ಬರಿಗೆ ಸ್ವಯಂಪ್ರಭದೇವನಾಗಿ ಹುಟ್ಟಿದ್ದ ಶ್ರೀಮತಿಯು ಕೇಶವನೆಂಬ ಮಗನಾಗಿ ಹುಟ್ಟಿದಳು. ಇವರೆಲ್ಲರೂ ಕಾಲಕ್ರಮದಲ್ಲಿ ಅಭಯಘೋಷ ಚಕ್ರವರ್ತಿಯೊಂದಿಗೆ ಜಿನರನ್ನು ವಂದಿಸಿ ಜಿನದೀಕ್ಷೆಯನ್ನು ತೆಗೆದುಕೊಂಡರು. ಸುವಿಧಿಯು ಅಚ್ಯುತ ಸ್ವರ್ಗದಲ್ಲಿ ಇಂದ್ರನಾಗಿ ಹುಟ್ಟಿದನು. ಆತನ ಜೊತೆಗಾರರೂ ಸಹ ಅದೇ ಸ್ವರ್ಗದಲ್ಲಿ ಹುಟ್ಟಿದರು.

ಅನಂತರ ಅಚ್ಯುತೇಂದ್ರನು ಜಂಬೂದ್ವೀಪದ ಪುಂಡರೀಕಿಣಿ ನಗರದಲ್ಲಿ ಶ್ರೀಕಾಂತ ಮತ್ತು ವಜ್ರಸೇನ ದಂಪತಿಗಳಿಗೆ ವಜ್ರನಾಭಿ ಎಂಬ ಹೆಸರಿನ ಮಗನಾದನು. ಈತನು ಚಕ್ರವರ್ತಿಯಾಗಿದ್ದನು. ಈತನ ಹಿಂದಿನ ಭವದ ಸಹಚರರೂ ಇಲ್ಲಿಯೇ ಜನಿಸಿದರು. ಒಮ್ಮೆ ರಾಜ ವಜ್ರನಾಭಿಯು ಸಂಸಾರದಲ್ಲಿ ವಿರಕ್ತಿಯನ್ನು ಪಡೆದು ವಜ್ರದಂತನೆಂಬ

ಮಗನಿಗೆ ರಾಜ್ಯವನ್ನು ನೀಡಿ ಶ್ರೀಪ್ರಭವೆಂಬ ಪರ್ವತದಲ್ಲಿ ಸಂನ್ಯಾಸವಿಧಿಯನ್ನು ಕೈಗೊಂಡು ಶರೀರದಲ್ಲಿ ಮಮತೆಯನ್ನು ತೊರೆದು, ಆಹಾರವನ್ನು ತ್ಯಜಿಸಿ ಮುನಿಗಳ ಭಾವನೆಗಳನ್ನು ಧರಿಸಿದ ವಜ್ರನಾಭಿಮುನಿಗೆ ತೀರ್ಥಂಕರ ನಾಮಪ್ರಕೃತಿಯ ಬಂಧವು ಪ್ರಾಪ್ತವಾಯಿತು. ಆಯುಷ್ಯಾಂತದಲ್ಲಿ ಸಮಾಧಿಮರಣವನ್ನು ಪಡೆದು ಸರ್ವಾರ್ಥಸಿದ್ಧಿಯಲ್ಲಿ ಅಹಮಿಂದ್ರನಾಗಿ ಹುಟ್ಟಿದನು. ಆತನ ಉಳಿದ ಜೊತೆಗಾರರು ಅಲ್ಲಿಯೇ ದೇವತೆಗಳಾಗಿ ಜನಿಸಿದರು.

ಭೋಗಭೂಮಿ ಮತ್ತು ಕರ್ಮಭೂಮಿಯ ಸಂಧಿಕಾಲದಲ್ಲಿ ಅಂತಿಮ ಕುಲಕರ ನಾಭಿರಾಜನಾದನು. ಆತನ ರಾಣಿ ಮರುದೇವಿ. ನಾಭಿರಾಜ ಮತ್ತು ಮರುದೇವಿಯರಿಂದ ಅಲಂಕೃತವಾದ ಆರ್ಯಖಂಡದಲ್ಲಿ ಇಂದ್ರನು ಅಯೋಧ್ಯೆಯ ರಚನೆಯನ್ನು ಮಾಡಿದನು. ಅಹಮಿಂದ್ರನ ಆಯುಷ್ಯವು ಇನ್ನು ಆರು ತಿಂಗಳಿದೆ ಎನ್ನುವಾಗಲೇ ಕುಬೇರನು ರತ್ನವೃಷ್ಟಿಯನ್ನು ಮಾಡಿದನು. ಇದರಿಂದಾಗಿ ಈ ಪೃಥ್ವಿಯು ರತ್ನಗರ್ಭವೆನಿಸಿತು. ಹೀಗಿರುವಲ್ಲಿ ಮರುದೇವಿ ಹದಿನಾರು ಸ್ವಪ್ನಗಳನ್ನು ಕಂಡಳು. ಆಕೆಗೆ ತೀರ್ಥಂಕರನಾಗುವ ಪುತ್ರನು ಜನಿಸುವನೆಂದು ನಾಭಿರಾಜನು ಸ್ವಪ್ನಫಲಗಳ ಸಾರಾಂಶವನ್ನು ತಿಳಿಸಿದನು. ದೇವೇಂದ್ರನ ಆಜ್ಞೆಯಂತೆ ದಿಕ್ಕನ್ಯೆಯರು ಮರುದೇವಿಯ ಸೇವೆಯನ್ನು ಮಾಡಲಾರಂಭಿಸಿದರು. ಅನೇಕ ರೀತಿಯ ಪ್ರಶ್ನಾಲಾಪಗಳಿಂದ ಕಲಾಕೌಶಲಗಳಿಂದ ಮರುದೇವಿಯ ಮನಸ್ಸನ್ನು ಉಲ್ಲಸಿತಗೊಳಿಸಿದರು. ಚೈತ್ರಮಾಸದ ಕೃಷ್ಣಪಕ್ಷದ ನವಮಿಯ ದಿನ ಮರುದೇವಿಯು ಜಿನನಾಗುವ ಬಾಲಕನಿಗೆ ಜನ್ಮವಿತ್ತಳು. ಎಲ್ಲೆಲ್ಲೂ ಶುಭಸೂಚನೆಗಳು ಕಂಡುಬಂದವು. ದೇವೇಂದ್ರನ ಆಸನ ಕಂಪಿಸಿತು. ದೇವನು ತನ್ನ ಅವಧಿಜ್ಞಾನದಿಂದ ಜಿನೇಂದ್ರ ಭಗವಾನನ ಜನನವನ್ನು ಅರಿತನು, ಜನ್ಮಾಭಿಷೇಕ ಕಲ್ಯಾಣವನ್ನು ಎಸಗಲು ಸಮಸ್ತದೇವತೆಗಳ ಸಹಿತ ಅಯೋಧ್ಯೆಯನ್ನು ತಲುಪಿದನು.

ದೇವೇಂದ್ರನ ಆಜ್ಞೆಯಂತೆ ಶಚೀದೇವಿ ಪ್ರಸೂತಿಗೃಹಕ್ಕೆ ಪ್ರವೇಶಿಸಿ ಅಲ್ಲಿ ಜಿನಬಾಲಕನ ಸಹಿತ ಮಲಗಿದ್ದ ಮಾತೆಯನ್ನು ಕಂಡು ಕೃತಕೃತ್ಯಳಾದಳು. ಮಾತೆಗೆ ಮಾಯಾನಿದ್ರೆಯು ಆವರಿಸುವಂತೆ ಮಾಡಿ, ಪಕ್ಕದಲ್ಲಿ ಮಾಯಾಶಿಶುವನ್ನಿರಿಸಿ ಅವಳು ಜಿನಬಾಲಕನನ್ನು ಎತ್ತಿಕೊಂಡು ಬಂದು ದೇವೇಂದ್ರನಿಗೆ ನೀಡಿದಳು. ಇಂದ್ರನು ಮಗುವನ್ನು ಭಕ್ತಿಪೂರ್ವಕ ತೆಗೆದುಕೊಂಡು, ಐರಾವತದಲ್ಲಿ ಕುಳಿತು ಸುಮೇರು ಪರ್ವತದ ಕಡೆಗೆ ದೇವತೆಗಳೊಂದಿಗೆ ನಡೆದನು. ಭಗವಾನನ ಶರೀರವನ್ನು ಸ್ಪರ್ಶಿಸಲು ಕ್ಷೀರಸಾಗರದ ನೀರು ಯೋಗ್ಯವಾದುದೆಂದು ವಿಚಾರಮಾಡಿ ದೇವತೆಗಳು ಸಾಲಾಗಿ ನಿಂತು, ಚಿನ್ನದ ಕಳಶದಲ್ಲಿ ನೀರನ್ನು ತುಂಬಿ ಅಭಿಷೇಕವನ್ನು ಮಾಡಿದರು. ಅಭಿಷೇಕದ ನಂತರ ಶಚೀದೇವಿಯು ವೃಷಭಸ್ವಾಮಿಯ ದೇಹವನ್ನು ಒರೆಸಿ ಅಲಂಕರಿಸಿದಳು. ಜಿನಬಾಲಕನ ಸೌಂದರ್ಯವನ್ನು ನೋಡಲು ದೇವೇಂದ್ರನು ಸಹಸ್ರನೇತ್ರನಾದನು. ನೃತ್ಯಗೀತೆಗಳೊಂದಿಗೆ ಶಿಶುವನ್ನು ಅಯೋಧ್ಯೆಗೆ ಕರೆತಂದು ಮಾತಾಪಿತೃಗಳಿಗೆ ಒಪ್ಪಿಸಿದರು. ನಾಭಿರಾಜನು ಪುತ್ರೋತ್ಸವವನ್ನು ಆಚರಿಸಿದನು. ಇಂದ್ರನು ಆನಂದನೃತ್ಯವನ್ನು ಮಾಡಿದನು. ಇಂದ್ರನು ಶಿಶುವನ್ನು 'ವೃಷಭ'ನೆಂದೂ 'ಪುರು' ವೆಂದೂ ಕರೆದನು. ಮರುದೇವಿಯು ಸ್ವಪ್ನದಲ್ಲಿ ವೃಷಭವನ್ನು ನೋಡಿದುದರಿಂದ ಶಿಶುವಿಗೆ ವೃಷಭನೆಂದು ಹೆಸರನ್ನಿಟ್ಟರು. ದೇವಕುಮಾರನನ್ನು ಸ್ವಾಮಿಯ ಸೇವೆಗಾಗಿ



ನಿಯಮಿಸಿ ಇಂದ್ರನು ಮರಳಿದನು.

ವೃಷಭನಿಗೆ ಯೌವನವು ಪ್ರಾಪ್ತವಾಯಿತು. ನಾಭಿರಾಜನು ವೃಷಭನ ಹತ್ತಿರ ವಿವಾಹದ ಪ್ರಸ್ತಾಪವನ್ನು ಮಾಡಲಾಗಿ ವೃಷಭದೇವನು ಮಂದಹಾಸಪೂರ್ವಕ ತಂದೆಯ ಆಜ್ಞೆಯನ್ನು ಸ್ವೀಕರಿಸಿದನು. ಕಚ್ಛ-ಮಹಾಕಚ್ಛರ ಸೋದರಿಯರಾದ ಯಶಸ್ವತಿ ಮತ್ತು ಸುನಂದೆಯ ರೊಂದಿಗೆ ವಿವಾಹವಾಯಿತು. ಇವರೊಂದಿಗೆ ವೃಷಭನ ಗೃಹಸ್ಥಾಶ್ರಮ ಜೀವನ ಆನಂದ ಮಯವಾಗಿ ಸಾಗಿತು. ವಜ್ರಜಂಘ ಜನ್ಮದಲ್ಲಿ ಸಂಗಾತಿಗಳಾಗಿದ್ದ ಮತಿವರಾದಿಗಳು ಈಗ ವೃಷಭನ ಮಕ್ಕಳಾದರು.

ಕಾಲಾನಂತರ ಯಶಸ್ವತಿಯು ಶುಭಸ್ವಪ್ನವನ್ನು ಕಂಡಳು. ಮೊದಲು ಹುಲಿಯಾಗಿದ್ದು ಅನಂತರ ಮತಿವರಾದಿ ಪರ್ಯಾಯಗಳನ್ನು ಪಡೆದ ಜೀವನು ಯಶಸ್ವತಿಯ ಗರ್ಭದಲ್ಲಿ ಭರತನಾಗಿ ಜನಿಸಿದನು. ಕಾಲಕ್ರಮದಲ್ಲಿ ಯಶಸ್ವತಿಗೆ ಭರತನ ನಂತರ ೯೯ ಪುತ್ರ ರೊಂದಿಗೆ ಬ್ರಾಹ್ಮಿ ಎಂಬ ಮಗಳು ಜನಿಸಿದಳು. ವಜ್ರಜಂಘ ಪರ್ಯಾಯದಲ್ಲಿ ಸೇನಾಪತಿಯಾಗಿದ್ದ ಆಕಂಪನನ ಜೀವವು, ಸುನಂದಾದೇವಿಯ ಗರ್ಭದಲ್ಲಿ ಪ್ರತಿಷ್ಠಿತ ವಾಯಿತು. ನವಮಾಸದ ನಂತರ ಅವಳು ಬಾಹುಬಲಿಗೆ ಜನ್ಮವಿತ್ತಳು. ಇವಳಿಗೆ ಸುಂದರಿ ಎಂಬ ಪುತ್ರಿಯು ಕಾಲಕ್ರಮದಲ್ಲಿ ಜನಿಸಿದಳು.

ಈ ಪ್ರಕಾರ ನೂರೊಂದು ಪುತ್ರರನ್ನು ಇಬ್ಬರು ಪುತ್ರಿಯರನ್ನು ಪಡೆದು ವೃಷಭನಾಥನು ಸುಖದಿಂದಿದ್ದನು.

ಮಕ್ಕಳಿಗೆ ವೃಷಭನಾಥನು ವಿದ್ಯಾಭ್ಯಾಸವನ್ನು ಕೊಟ್ಟನು. ಬ್ರಾಹ್ಮಿ ಸುಂದರಿಯರಿಗೆ ಕ್ರಮವಾಗಿ ಲಿಪಿಯನ್ನೂ ಸಂಖ್ಯಾಸ್ಥಾನವನ್ನೂ ಉಪದೇಶಮಾಡಿದನು. ಛಂದಶ್ಶಾಸ್ತ್ರ, ಅಲಂಕಾರಶಾಸ್ತ್ರಗಳನ್ನು ಕಲಿಸಿದನು. ಭರತನಿಗೆ ನೀತಿಶಾಸ್ತ್ರ, ಸಂಗೀತಶಾಸ್ತ್ರವನ್ನು, ವೃಷಭ ಸೇನನಿಗೆ ಗಂಧರ್ವವಿದ್ಯೆಯನ್ನು, ಅನಂತವೀರ್ಯನಿಗೆ ಚಿತ್ರಕಲೆಯನ್ನು, ಬಾಹುಬಲಿಗೆ ಕಾಮಶಾಸ್ತ್ರ, ವೈದ್ಯಶಾಸ್ತ್ರ ಧನುರ್ವಿದ್ಯಾದಿಗಳನ್ನು ಹೇಳಿಕೊಟ್ಟನು. ಹೀಗೆ ವೃಷಭನಾಥನು ತನ್ನ ಮಕ್ಕಳೆಲ್ಲರಿಗೂ ಲೋಕೋಪಯುಕ್ತವಾದ ಸಮಸ್ತ ಶಾಸ್ತ್ರಗಳನ್ನು ಹೇಳಿಕೊಟ್ಟನು.

ಕಲ್ಪವೃಕ್ಷಗಳ ವಿನಾಶದಿಂದ ಹಾಗೂ ತಾವಾಗಿ ಬೆಳೆಯುತ್ತಿದ್ದ ಧಾನ್ಯಗಳ ಶಕ್ತಿಹೀನತೆ ಯಿಂದ ಜನರು ಕಂಗಾಲಾದಾಗ ವೃಷಭನಾಥನು ಕರ್ಮಭೂಮಿಸ್ಥಿತಿಗೆ ಅನುಕೂಲವಾಗು ವಂತೆ ಅಸಿ, ಮಸಿ, ಕೃಷಿ, ವಾಣಿಜ್ಯ, ವಿದ್ಯಾ, ಶಿಲ್ಪ ಇವುಗಳನ್ನು ಬೋಧಿಸಿದನು. ಕ್ಷತ್ರಿಯ, ವೈಶ್ಯ, ಶೂದ್ರ ವರ್ಣಾಶ್ರಮಗಳನ್ನು ರಚಿಸಿದನು. ಗ್ರಾಮ, ಗೃಹ ಮೊದಲಾದುವುಗಳ ರಚನೆಯನ್ನು ಬೋಧಿಸಿದನು. ಈ ಯುಗವು ಕೃತಯುಗವೆಂಬ ಹೆಸರಿನಿಂದ ಪ್ರಸಿದ್ಧ ವಾಯಿತು.

ಒಮ್ಮೆ ದೇವೇಂದ್ರಾದಿಗಳೊಂದಿಗೆ ವೃಷಭನಾಥನು ಒಡ್ಡೋಲಗದಲ್ಲಿ ಕುಳಿತಿದ್ದನು. ದೇವಸ್ತ್ರೀಯರ ನೃತ್ಯ ವೃಷಭನಾಥನ ಮನವನ್ನು ಸೂರೆಗೊಂಡಿತು. ಈ ಸಂದರ್ಭದಲ್ಲಿ ದೇವೇಂದ್ರನು ವೃಷಭನಿಗೆ ವೈರಾಗ್ಯವನ್ನುಂಟುಮಾಡುವ ಹಿನ್ನೆಲೆಯನ್ನು ಕಲ್ಪಿಸುವುದ ಕ್ಕೋಸ್ಕರ ಅಲ್ಪಾಯುಷ್ಯವುಳ್ಳ ಸ್ತ್ರೀಪಾತ್ರವನ್ನು ನರ್ತನಕ್ಕೆ ನಿಯೋಜಿಸಿದನು. ನೀಲಾಂ ಜನೆಯು ಶೃಂಗಾರಾದಿ ರಸಭಾವಲಯಗಳಿಗನುಗುಣವಾಗಿ ನರ್ತಿಸುತ್ತಾ, ಆಯುಷ್ಯ ನಷ್ಟ ವಾಗಲು ಅದೃಶ್ಯಳಾದಳು. ರಸಭಂಗವಾಗಬಾರದೆಂದು ದೇವೇಂದ್ರನು ಈ ನೀಲಾಂ

ಜನೆಯ ಸ್ಥಾನದಲ್ಲಿ ಬೇರೊಂದು ಶರೀರವನ್ನು ಸಂಯೋಜನೆ ಮಾಡಿದನು. ಈ ಮರ್ಮ ವನ್ನು ತಿಳಿದ ವೃಷಭನಾಥನು ದೇಹದ ನಶ್ವರತೆಯನ್ನು ಚಿಂತಿಸಿ ವೈರಾಗ್ಯಭಾವನೆಯನ್ನು ಪಡೆದನು. ಲೋಕಾಂತಿಕ ದೇವತೆಗಳು ಸ್ವಾಮಿಗೆ ಉಪದೇಶಮಾಡಿ, ಪರಿನಿಷ್ಕ್ರಮಣ ಕಲ್ಯಾಣಪೂಜೆಯಲ್ಲಿ ಭಾಗಿಗಳಾಗಲು ಬಂದರು. ವೃಷಭನಾಥನು ಭರತನಿಗೆ ಸಾಮ್ರಾಜ್ಯ ವನ್ನಿತ್ತು, ರಾಜನನ್ನಾಗಿ ಮಾಡಿ, ಬಾಹುಬಲಿಗೆ ಯುವರಾಜಪದವಿಯನ್ನು ನೀಡಿದನು.

ದೇವತೆಗಳು ವೃಷಭನಾಥನ ಪರಿನಿಷ್ಕ್ರಮಣ ಕಲ್ಯಾಣವನ್ನು ಮಾಡಿದರು. ಸ್ವಾಮಿಯು ಪೂರ್ವಾಭಿಮುಖವಾಗಿ ಕುಳಿತು, ಸಿದ್ಧಪರಮೇಷ್ಠಿಗಳನ್ನು ಧ್ಯಾನಿಸಿ ಐದು ಮುಷ್ಟಿಗಳಲ್ಲಿ ತಲೆಯ ಕೂದಲನ್ನು ಕಿತ್ತನು. ದೇವತೆಗಳು ಆ ಕೂದಲನ್ನು ಭಕ್ತಿಪೂರ್ವಕವಾಗಿ ಕ್ಷೀರ ಸಮುದ್ರದಲ್ಲಿ ಬಿಟ್ಟರು. ವೃಷಭನಾಥಸ್ವಾಮಿಯ ಜೊತೆಯಲ್ಲಿ ಕಚ್ಛ-ಮಹಾಕಚ್ಛಾದಿ ನಾಲ್ಕುಸಾವಿರ ರಾಜರೂ ಸಹ ದೀಕ್ಷಾಬದ್ಧರಾದರು.

ಕಾಯೋತ್ಸರ್ಗ ಮುದ್ರೆಯಲ್ಲಿ ನಿಂತು ವೃಷಭಸ್ವಾಮಿಯು ಘೋರತಪಸ್ಸನ್ನು ಮಾಡ ತೊಡಗಿದನು. ಪರ್ವತದಂತೆ ಅಚಲನಾಗಿ ಆರುತಿಂಗಳು ಯೋಗಧಾರಣೆಯಲ್ಲಿದ್ದನು. ಕೆಲವು ತಿಂಗಳು ಕಳೆದನಂತರ ಉಳಿದ ಮುನಿಗಳು ಪರೀಷಹವನ್ನು ಜಯಿಸದಾದರು. ಹಸಿವು ನೀರಡಿಕೆಗಳಿಂದ ಬಳಲಿದರು. ಪರೀಷಹಬಾಧೆಗಳನ್ನು ಸಹಿಸಲಾರದೆ ಅವರು ಮಹಾವ್ರತಧಾರಣೆಯಿಂದ ಚ್ಯುತರಾದರು. ವಲ್ಕಲ ಮೊದಲಾದವನ್ನು ಧರಿಸಿದರು. ಕಂದ ಮೂಲ ಮೊದಲಾದವುಗಳನ್ನು ತಿಂದುಕೊಂಡಿದ್ದು ವೃಷಭಸ್ವಾಮಿಯನ್ನು ಪೂಜಿಸುತ್ತಿ ದ್ದರು. ಇವರಲ್ಲಿ ಭರತನ ಮಗ ಮರೀಚಿಯು ಪ್ರಧಾನನಾಗಿದ್ದನು. ಅವನು ಕಪಿಲ ನೊಂದಿಗೆ ಸೇರಿ ತನ್ನದೇ ಆದ ಮತವೊಂದನ್ನು ಸ್ಥಾಪಿಸಿದನು.

ವೃಷಭಸ್ವಾಮಿಯು ಧ್ಯಾನದಲ್ಲಿ ಲೀನನಾಗಿದ್ದಾಗ ಕಚ್ಛ ಮಹಾಕಚ್ಛರ ಮಕ್ಕಳಾದ ನಮಿ-ವಿನಮಿಗಳು ಬಂದು ತಮಗೂ ರಾಜ್ಯವನ್ನು ಕೊಡಬೇಕೆಂದು ಅವನಲ್ಲಿ ಬೇಡಿಕೊಳ್ಳ ತೊಡಗಿದರು. ಸ್ವಾಮಿಯ ಧ್ಯಾನಕ್ಕೆ ಭಂಗವಾಗದಿರಲೆಂಬ ಭಾವನೆಯಿಂದ ಧರ ಣೇಂದ್ರನು ಬಂದು ಅವರನ್ನು ವಿಜಯಾರ್ಧ ಪರ್ವತಕ್ಕೆ ಕರೆದುಕೊಂಡು ಹೋಗಿ ಅವರಿಬ್ಬರಿಗೂ ವಿಜಯಾರ್ಧಪರ್ವತದ ಉತ್ತರ ಮತ್ತು ದಕ್ಷಿಣ ಶ್ರೇಣಿಗಳನ್ನು ಕೊಟ್ಟನು.

ಆರುತಿಂಗಳು ಕಳೆದನಂತರ, ಸ್ವಾಮಿಯು ಆಹಾರಕ್ಕಾಗಿ ಹೊರಟನು. ಆದರೆ ಆ ಸಮಯದಲ್ಲಿ ಆಹಾರವನ್ನು ಕೊಡುವ ವಿಧಿಯು ಯಾರಿಗೂ ತಿಳಿದಿರಲಿಲ್ಲ. ಹೀಗೆ ಒಂದು ವರ್ಷ ಕಳೆಯಿತು. ವೃಷಭಸ್ವಾಮಿ ಉಪವಾಸವನ್ನು ಮುರಿಯಲೆಂದು ಕುರುಜಾಂಗಲ ದೇಶದ ಹಸ್ತಿನಾಪುರಕ್ಕೆ ಬಂದನು. ಅಲ್ಲಿಯ ರಾಜ ಸೋಮಪ್ರಭರಾಜನ ತಮ್ಮನಾದ ಶ್ರೇಯಾಂಸನು ಸ್ವಾಮಿಯನ್ನು ನೋಡಿ ಜಾತಿಸ್ಮರಣೆಯನ್ನು ಪಡೆದನು. ತಾನು ಶ್ರೀಮತಿ ಪರ್ಯಾಯದಲ್ಲಿದ್ದಾಗ ವಜ್ರಜಂಘನ ಜೊತೆ ಮುನಿಗಳಿಗೆ ನೀಡಿದ ಆಹಾರದಾನದ ಚಿತ್ರವು ಕಣ್ಣಿಗೆ ಕಟ್ಟಿತು. ದಾನವಿಧಿಯ ಸಕಲರೀತಿಗಳೂ ನೆನಪಿಗೆ ಬಂದವು. ಇಕ್ಷುರಸವನ್ನು ಆಹಾರವಾಗಿ ಕೊಟ್ಟನು. ಆಹಾರದಾನದ ಮಹಿಮೆಯಿಂದಾಗಿ ದೇವತೆಗಳು ಪಂಚಾಶ್ಚರ್ಯ ಗಳನ್ನು ಮಾಡಿದರು. ಒಂದು ವರ್ಷದ ನಂತರ ಸ್ವಾಮಿಯ ಪಾರಣೆಯಾದಾಗ ಎಲ್ಲ ಕಡೆಯೂ ಹರ್ಷವು ಪಸರಿಸಿತು.

ವಟವೃಕ್ಷದ ಕೆಳಗೆ ಧ್ಯಾನಮಗ್ನನಾದ ಸ್ವಾಮಿಯು ಫಾಲ್ಗುಣಮಾಸದ ಕೃಷ್ಣಪಕ್ಷದ

ಏಕಾದಶಿಯ ದಿನ ಕೇವಲಜ್ಞಾನವನ್ನು ಪಡೆದನು, ದೇವೇಂದ್ರನು ಕೇವಲಜ್ಞಾನಕಲ್ಯಾಣವನ್ನು ಆಚರಿಸಲು ಬಂದನು. ಇಂದ್ರನ ಆಜ್ಞೆಯ ಮೇರೆಗೆ ಕುಬೇರನು ಸಮವಸರಣವನ್ನು ರಚಿಸಿದನು. ದೇವೇಂದ್ರಾದಿಗಳು ಸಮವಸರಣಕ್ಕೆ ಆಗಮಿಸಿ ಸ್ವಾಮಿಗೆ ಪೂಜೆಯನ್ನು ಸಲ್ಲಿಸಿದರು. ಸ್ವಾಮಿಗೆ ಕೇವಲಜ್ಞಾನಪ್ರಾಪ್ತಿಯಾಗಿರುವುದನ್ನು ಅರಿತ ಭರತನು ವೈಭವ ಪೂರ್ವಕವಾಗಿ ಸಮವಸರಣಕ್ಕೆ ಬಂದು ಭಕ್ತಿಪೂರ್ವಕವಾಗಿ ಭಗವಂತನಿಗೆ ಪೂಜೆಯನ್ನು ಸಲ್ಲಿಸಿ ಕೃತಕೃತ್ಯನಾದನು. ಭಗವಂತನಿಂದ ದಿವ್ಯಧ್ವನಿಯು ಹೊರಟಿತು. ರಾಜ ಶ್ರೇಯಾಂಸ, ಬ್ರಾಹ್ಮಿ, ಸುಂದರಿ ಮೊದಲಾದವರು ದೀಕ್ಷೆಯನ್ನು ಕೈಗೊಂಡರು.

ಸಮವಸರಣದಿಂದ ಬಂದ ಭರತರಾಜನು ಆಯುಧಶಾಲೆಯಲ್ಲಿ ಪ್ರಕಟವಾಗಿದ್ದ ಚಕ್ರರತ್ನಕ್ಕೆ ಪೂಜೆಯನ್ನು ಮಾಡಿ ಚತುರಂಗಬಲದೊಡನೆ ದಿಗ್ವಿಜಯಕ್ಕೆ ಹೊರಟನು. ಹಿಮವತ್ಪರ್ವತದ ಪರ್ಯಂತದಿಂದ ಪೂರ್ವ ದಕ್ಷಿಣ ಪಶ್ಚಿಮ ಸಮುದ್ರ ಪರ್ಯಂತದ ವರೆಗಿನ ಭೂಮಿಯನ್ನು ಚಕ್ರದಿಂದ ಜಯಿಸಿದನು. ವಿದ್ಯಾಧರಾದಿ ದೇವತೆಗಳಿಂದ ನಮ ಸ್ಕಾರ ಮಾಡಿಸಿಕೊಂಡ ಭರತಚಕ್ರವರ್ತಿಯು ತನ್ನ ಪಟ್ಟಣಕ್ಕೆ ಹಿಂದಿರುಗಿದನು.

ಅಯೋಧ್ಯೆಯನ್ನು ಪ್ರವೇಶಮಾಡದೆ ಚಕ್ರರತ್ನವು ಗೋಪುರದ್ವಾರದಲ್ಲಿಯೇ ನಿಂತು ಬಿಟ್ಟಿತು. ಆತನ ತಮ್ಮಂದಿರು, ಅದರಲ್ಲಿಯೂ ಬಾಹುಬಲಿಯು ಅಜೇಯನಾಗಿರುವುದ ರಿಂದ ದಿಗ್ವಿಜಯವು ಅಪೂರ್ಣವಾದ ಕಾರಣ ಚಕ್ರರತ್ನವು ತಡೆದುನಿಂತಿದೆಯೆಂಬ ವಿಚಾರವು ರಾಜಪುರೋಹಿತರಿಂದ ಭರತನಿಗೆ ತಿಳಿದುಬಂತು. ಇದರಿಂದ ಭರತನು ಮುಂದಿನ ಕ್ರಮವನ್ನು ಕೈಗೊಂಡನು. 'ಬನ್ನಿರಿ ಅಣ್ಣನಾದ ಚಕ್ರವರ್ತಿಯನ್ನು ಭಜಿಸಿರಿ' ಎಂದು ಮುಂತಾಗಿ ನಿರೂಪವನ್ನು ಭರತನು ಬಾಹುಬಲಿಯನ್ನುಳಿದು ಉಳಿದ ಸಹೋದರ ರಿಗೆ ದೂತರ ಮೂಲಕ ಮೊದಲು ಕಳುಹಿಸಿದನು. ಆ ಸಹೋದರರು ಭರತನಿಗೆ ಎರಗದೆ, ತಂದೆಯಾದ ವೃಷಭಸ್ವಾಮಿಯ ಬಳಿಗೆ ಹೋಗಿ, ಭರತನು ಮಾಡಿದ ಕಾರ್ಯವನ್ನು ಅರುಹಿದರು. ಲೌಕಿಕ ರಾಜ್ಯಕ್ಕಿಂತಲೂ, ಪಾರಲೌಕಿಕ ರಾಜ್ಯವು ಶ್ರೇಷ್ಠವೆಂದು ವೃಷಭನು ಉಪದೇಶಿಸಿದನು. ಅವರೆಲ್ಲರೂ ದೀಕ್ಷೆಯನ್ನು ಸ್ವೀಕರಿಸಿ ತಪಸ್ಸಿಗೆ ತೆರಳಿದರು.

ಬಾಹುಬಲಿಗೂ ಸಹ ಇತರ ಸಹೋದರರಿಗೆ ಹೋದಂತೆಯೇ ನಿರೂಪವು ಹೋದಾಗ ಆತನು, ತಲೆಬಾಗಲು ಒಪ್ಪದೆ, 'ತನ್ನ ಮತ್ತು ಭರತನ ಪೌರುಷದ ಪ್ರಕರಣವು ಯುದ್ಧ ವೆಂಬ ಒರೆಗಲ್ಲಿನಲ್ಲಾಗಲಿ' ಎಂದು ಹೇಳಿ ಕಳುಹಿಸಿದನು. ಎರಡು ಕಡೆಗಳಲ್ಲಿಯೂ ಸೈನ್ಯದ ಸಿದ್ಧತೆ ನಡೆಯಿತು.ಅಣ್ಣ ತಮ್ಮಂದಿರಿಬ್ಬರೂ ಸೈನ್ಯದೊಂದಿಗೆ ಹೋರಾಡಲು ಬಂದು ನಿಂತಾಗ ಮಂತ್ರಿಗಳು, ಚರಮದೇಹಿಗಳಾಗಿರುವ ಇವರಿಬ್ಬರಿಗೂ ಯುದ್ಧದಲ್ಲಿ ಹಾನಿಯಿಲ್ಲ. ಆದರೆ ಇಬ್ಬರ ಕಡೆಯ ಸೈನಿಕರಿಗೆ ಹಾನಿಯಾಗುವುದೆಂದು ಹೆದರಿ ಧರ್ಮ ಯುದ್ಧವನ್ನು ಸಾರಿದರು. ಅವರು ದ್ವಂದ್ವಯುದ್ಧದಲ್ಲಿ ಜಲಯುದ್ಧ, ದೃಷ್ಟಿಯುದ್ಧ ಮತ್ತು ಮಲ್ಲಯುದ್ಧವನ್ನು ಮಾಡಿದರು. ದ್ವಂದ್ವಯುದ್ಧದಲ್ಲಿ ಬಾಹುಬಲಿಯು ಗೆದ್ದನು. ಕ್ರೋಧಾಂಧನಾದ ಭರತನು ಶತ್ರುಸಮೂಹವನ್ನು ನಾಶಮಾಡುವ ಚಕ್ರವನ್ನು ಸ್ಮರಿಸಿ ದನು. ಚಕ್ರರತ್ನವು ಬಾಹುಬಲಿಯ ಪ್ರದಕ್ಷಿಣೆಯನ್ನು ಮಾಡಿ ವಧೆಗೆ ಅರ್ಹನಲ್ಲದ ಆತನ ಪಕ್ಕದಲ್ಲಿ ಬಂದು ನಿಂತಿತು. ಇದರಿಂದಾಗಿ ವೈರಾಗ್ಯಪರನಾದ ಬಾಹುಬಲಿಯು ನಶ್ವರ ವಾದ ರಾಜ್ಯಲಕ್ಷ್ಮಿಯನ್ನು ತೊರೆಯುವುದಾಗಿ ಹೇಳಿ ತನ್ನ ಕಡೆಯಿಂದಾದ ಅವಿನಯಕ್ಕಾಗಿ

ಕ್ಷಮೆಯನ್ನು ಯಾಚಿಸಿದನು. ಈ ಕಡೆ ಭರತನಿಗೂ ಸಹ ತನ್ನ ಕಾರ್ಯಕ್ಕಾಗಿ ಪಶ್ಚಾತ್ತಾಪವುಂಟಾಯಿತು. ಬಾಹುಬಲಿಯು ವೈರಾಗ್ಯದಲ್ಲಿ ಸ್ಥಿರತೆಯನ್ನು ಪಡೆದು, ತನ್ನ ಪುತ್ರನಲ್ಲಿ ರಾಜ್ಯಸಂಪತ್ತಿಯನ್ನಿರಿಸಿ, ವೃಷಭಸ್ವಾಮಿಯ ಬಳಿ ದೀಕ್ಷೆಯನ್ನು ಸ್ವೀಕರಿಸಿದನು.

ಒಂದು ವರ್ಷಕಾಲ ಪ್ರತಿಮಾಯೋಗದಲ್ಲಿದ್ದ ಬಾಹುಬಲಿಗೆ ಪರೀಷಹಜಯದಿಂದ ಹೆಚ್ಚಾದ ಕರ್ಮನಿರ್ಜರೆಯುಂಟಾಯಿತು. ಆದರೂ 'ಭರತೇಶ್ವರನು ತನ್ನ ದೆಸೆಯಿಂದಾಗಿ ಬಹುಕ್ಲೇಶವನ್ನು ಹೊಂದಿದವನಾದನು' ಎಂಬ ಸ್ನೇಹ ಭಾವನೆ ಅಳಿದಿರಲಿಲ್ಲ. ಆ ಭಾವನೆ ಭರತೇಶ್ವರನು ಪ್ರೇಮದಿಂದ ಬಾಹುಬಲಿಯನ್ನು ಪೂಜೆಮಾಡಿದ ಕೂಡಲೇ ಹೊರಟು ಹೋಗಿ ಆತನಿಗೆ ಕೇವಲಜ್ಞಾನವು ಪ್ರಾಪ್ತವಾಯಿತು.

ಭರತನು ೯೬ ಸಹಸ್ರ ರಾಣಿಯರೊಂದಿಗೆ ಕಾಮಭೋಗವನ್ನನುಭವಿಸುತ್ತಲೂ, ಚಕ್ರವರ್ತಿಯ ಸಾರ್ವಭೌಮತ್ವವನ್ನು ಮೆರೆಯುತ್ತಲೂ ಇದ್ದನು. ಹೀಗಿರಲು ಭರತನು ಧನಧಾನ್ಯಾದಿಗಳನ್ನು ದಾನಮಾಡಲು ಯೋಗ್ಯ ಪಾತ್ರವರ್ಗವನ್ನು ಕಂಡುಹಿಡಿದು, ಅವರಿಗೆ ಯಜ್ಞೋಪವೀತವನ್ನು ಧಾರಣೆಮಾಡಿಸಿ ಅವರನ್ನು 'ದ್ವಿಜ'ರೆಂದು ಕರೆದನು.

ಹೀಗೆ ಕಾಲವು ಗತಿಸುತ್ತಿರಲು, ಭರತನು ಒಮ್ಮೆ ಅಶುಭಸೂಚಕವಾದ ಸ್ವಪ್ನಗಳನ್ನು ಕಂಡು ಮುಂದೆ ಕಲಿಯುಗದಲ್ಲಿ ಧರ್ಮಸ್ಥಿತಿಯು ನಾಶವಾಗುತ್ತಾ ಬರುವುದೆಂಬ ಸೂಚನೆಯನ್ನು ಆ ಸ್ವಪ್ನಗಳು ನೀಡುತ್ತಿವೆ ಎಂಬುದನ್ನು ವೃಷಭಸ್ವಾಮಿಯಿಂದ ತಿಳಿದುಕೊಂಡನು.

ಹಸ್ತಿನಾಪುರದ ರಾಜ ಜಯಕುಮಾರನು ದೀಕ್ಷೆಯನ್ನು ಪಡೆದು ವೃಷಭಸ್ವಾಮಿಯ ಗಣಧರನಾದನು.[೪೩]

ವೃಷಭಸ್ವಾಮಿಯು ಮಾಘಮಾಸದ ಕೃಷ್ಣಪಕ್ಷದ ಚತುರ್ದಶಿಯಲ್ಲಿ ಸೂರ್ಯೋದಯ ಕಾಲದ ಅಭಿಜಿನ್ಮುಹೂರ್ತದಲ್ಲಿ ಅಘಾತಿಕರ್ಮಗಳನ್ನು ನಾಶಮಾಡಿ, ಮೋಕ್ಷವನ್ನು ಪಡೆದನು. ದೇವತೆಗಳು ನಿರ್ವಾಣ ಕಲ್ಯಾಣ ಪೂಜೆಯನ್ನು ಮಾಡಿದರು.

ಭರತಚಕ್ರಿಯು ಕಾಲಾನಂತರ ನರೆಗೂದಲನ್ನು ಕಂಡು ವೈರಾಗ್ಯಪರನಾಗಿ ದೀಕ್ಷೆಯನ್ನು ಪಡೆದು ತಪವನ್ನು ಆಚರಿಸಿ ಕರ್ಮಮಲಗಳನ್ನು ದಹಿಸಿ ಮುಕ್ತಿಯನ್ನು ಪಡೆದನು.

## ಶ್ವೇತಾಂಬರ ಪರಂಪರೆಯ ತ್ರಿಷಷ್ಟಿಶಲಾಕಾಪುರುಷ ಪುರಾಣಾಂತರ್ಗತವಾದ ಆದಿ ಪುರಾಣದ ಕಥೆ

ಜಂಬೂದ್ವೀಪದ ಪಶ್ಚಿಮಭಾಗದ ವಿದೇಹಕ್ಷೇತ್ರದಲ್ಲಿ ಕ್ಷಿತಿಪ್ರತಿಷ್ಠವೆಂಬ ನಗರ. ಪ್ರಸನ್ನಚಂದ್ರ ಅದರ ರಾಜ. ಅಲ್ಲಿ ಅತ್ಯಂತ ಭೋಗಭಾಗ್ಯಗಳಿಂದ ಮೆರೆಯುತ್ತಿದ್ದ ಗುಣನಿಧಿಯಾದ ಧನನೆಂಬ ವರ್ತಕನಿದ್ದನು. ಒಮ್ಮೆ ಅವನು ವಸಂತಪುರಕ್ಕೆ ಸರಕುಗಳನ್ನು ತೆಗೆದುಕೊಂಡು ವಿಲೇವಾರಿ ನಡೆಸಲು ಇತರ ಸಹಚರರೊಂದಿಗೆ ಹೊರಟನು. ದಾರಿಯಲ್ಲಿ ಮಳೆಗಾಲದ ಸಮಯದಲ್ಲಿ ಆಹಾರವನ್ನು ದೊರಕಿಸಿಕೊಳ್ಳುವುದು ಕಷ್ಟವಾಯಿತು. ಆ ಸಮಯದಲ್ಲಿ ಧನನು ತಮ್ಮ ಜೊತೆಯಲ್ಲಿದ್ದ ಧರ್ಮಘೋಷಾಚಾರ್ಯರಿಗೆ ಆಹಾರ ದಾನವನ್ನು ನೀಡಿ ಪುಣ್ಯಭಾಜನನಾದನು. ವಸಂತಪುರದಿಂದ ವ್ಯಾಪಾರವನ್ನು ಮುಗಿಸಿಕೊಂಡು ಬಂದ ಧನನು ಆಯುಷ್ಯಾಂತದಲ್ಲಿ ಸತ್ತು, ತಾನು ಮುನಿಗಳಿಗೆ ನೀಡಿದ ದಾನದ ಫಲದಿಂದ ಉತ್ತರಕುರುವಿನಲ್ಲಿ ಯುಗಳಗಳಲ್ಲಿ ಒಂದಾಗಿ ಹುಟ್ಟಿದನು. ಅಲ್ಲಿ ಕಲ್ಪವೃಕ್ಷ

ಗಳಿಂದ ದೊರೆತ ಭೋಗಸಾಮಗ್ರಿಗಳಿಂದ ಸುಖವನ್ನು ಅನುಭವಿಸುತ್ತಿದ್ದನು. ಆಮೇಲೆ ಸತ್ತು ಸೌಧರ್ಮ ಕಲ್ಪದಲ್ಲಿ ದೇವನಾಗಿ ಹುಟ್ಟಿದನು.

ವಿದೇಹಕ್ಷೇತ್ರದ ಗಂಧಿಲಾವತಿಯ ವೈತಾಢ್ಯವೆಂಬ ದೇಶದಲ್ಲಿ ಶತಬಲನೆಂಬ ವಿದ್ಯಾಧರರಾಜ. ಆತನ ಪತ್ನಿ ಚಂದ್ರಕಾಂತಾ. ಸೌಧರ್ಮಕಲ್ಪದಿಂದ ಚ್ಯುತನಾದ ದೇವನು ಈ ದಂಪತಿಗಳಿಗೆ ಮಹಾಬಲನೆಂಬ ಮಗನಾಗಿ ಜನಿಸಿದನು. ಈತನ ಹೆಂಡತಿ ವಿನಯವತಿ. ಕಾಲಕ್ರಮದಲ್ಲಿ ಶತಬಲನು ವೈರಾಗ್ಯಪರನಾಗಿ ಮಗನಿಗೆ ರಾಜ್ಯವನ್ನಿತ್ತು ದೀಕ್ಷೆಯನ್ನು ಕೈಗೊಂಡು ಮುಕ್ತಿಯನ್ನು ಪಡೆದನು. ಮಹಾಬಲನಿಗೆ ಸ್ವಯಂಬುದ್ಧ, ಮಹಾಮತಿ, ಸಂಭಿನ್ನಮತಿ, ಶತಮತಿ ಎಂಬ ನಾಲ್ಕು ಮಂದಿ ಮಂತ್ರಿಗಳಿದ್ದರು. ಒಮ್ಮೆ ಸ್ವಯಂಬುದ್ಧನು ಮಹಾಬಲನಿಗೆ ಕುರುಮತಿ ಹಾಗೂ ದಂಡಕರ ಕಥೆಯನ್ನು ತಿಳಿಸಿದನು ಮತ್ತು ಮಹಾಬಲನನ್ನು ಧರ್ಮಮಾರ್ಗದಲ್ಲಿ ಇರಲು ಪ್ರೇರೇಪಿಸಿದನು. ತನ್ನ ಆಯುಷ್ಯವು ಇನ್ನು ಒಂದು ತಿಂಗಳು ಮಾತ್ರ ಎಂದು ಅರಿತ ಮಹಾಬಲನು ತನ್ನ ಮಗನಿಗೆ ರಾಜ್ಯವನ್ನಿತ್ತು ತಪಸ್ಸನ್ನು ಕೈಗೊಂಡನು. ಸತ್ತು ತಪಸ್ಸಿನ ಫಲದಿಂದ ಶ್ರೀಪ್ರಭ ಸ್ವರ್ಗದಲ್ಲಿ ಲಲಿತಾಂಗ ದೇವನಾಗಿ ಹುಟ್ಟಿದನು.

ಲಲಿತಾಂಗದೇವನು ಸ್ವಯಂಪ್ರಭಾದೇವಿಯೊಂದಿಗೆ ಸಂತೋಷದಿಂದ ಕಾಲಕಳೆಯುತ್ತಿರಲು, ಸ್ವಯಂಪ್ರಭೆಯು ಆಯುಷ್ಯಾಂತದಲ್ಲಿ ಸತ್ತಳು. ವಿರಹವನ್ನು ಸಹಿಸದ ಲಲಿತಾಂಗನು ಶೋಕಿಸತೊಡಗಿದಾಗ ಹಿಂದಿನ ಜನ್ಮದಲ್ಲಿ ಸ್ವಯಂಪ್ರಭನಾಗಿದ್ದ ದೃಢಧರ್ಮನೆಂಬ ದೇವನು ಆತನಿಗೆ ಸಮಾಧಾನವನ್ನು ಹೇಳಿ ಸ್ವಯಂಪ್ರಭೆಯಾಗಿ ಈಗ ನಿರ್ನಾಮಿಕೆಯಾಗಿ ದರಿದ್ರ ಕುಲದಲ್ಲಿ ಜನಿಸಿರುವಳೆಂದೂ, ಯುಗಂಧರ ಮುನಿಗಳ ಬಳಿ ಉಪವಾಸ ವ್ರತವನ್ನು ತೆಗೆದುಕೊಳ್ಳಲು ಬರುವಾಗ ಅಲ್ಲಿಗೆ ಹೋಗುವ ಲಲಿತಾಂಗ ದೇವನನ್ನು ಕಂಡು ನಿದಾನವನ್ನು ಕೈಗೊಂಡು ಮತ್ತೆ ಆತನನ್ನು ಸೇರುವಳೆಂದೂ ತಿಳಿಸಿದನು. ಅದರಂತೆ ನಿರ್ನಾಮಿಕೆ ಸತ್ತು ಮತ್ತೆ ಸ್ವಯಂಪ್ರಭೆಯಾಗಿ ಹುಟ್ಟಿದಳು.

ಜಂಬೂದ್ವೀಪದ ಪೂರ್ವವಿದೇಹ ಕ್ಷೇತ್ರದ ಪುಷ್ಕಲಾವತೀ ದೇಶದಲ್ಲಿ ಲೋಹಾರ್ಗಲವೆಂಬ ನಗರದಲ್ಲಿ ಸುವರ್ಣಜಂಘನೆಂಬ ರಾಜ. ಆತನ ರಾಣಿ ಲಕ್ಷ್ಮೀ ಎಂಬುವಳು. ಲಲಿತಾಂಗನು ಸತ್ತು ಇವರಿಗೆ ವಜ್ರಜಂಘನೆಂಬ ಮಗನಾಗಿ ಹುಟ್ಟಿದನು. ಸ್ವಯಂಪ್ರಭೆಯೂ ಸಹ ಸ್ವಲ್ಪ ಸಮಯದ ನಂತರ ಸತ್ತು ಅದೇ ಕ್ಷೇತ್ರದಲ್ಲಿ ಪುಂಡರೀಕಿಣೀ ನಗರದ ವಜ್ರಸೇನ ಚಕ್ರಿಗೂ, ಗುಣಾವತಿ ಎಂಬ ರಾಣಿಗೂ ಶ್ರೀಮತಿ ಎಂಬ ಮಗಳಾಗಿ ಹುಟ್ಟಿದಳು. ಒಮ್ಮೆ ಶ್ರೀಮತಿಯು ಉದ್ಯಾನದ ಬಳಿ ಮುನಿಗಳು ಬರುವುದನ್ನು ನೋಡಿ, ಜಾತಿಸ್ಮರೆಯಾಗಿ ಮೂರ್ಛಿತಳಾದಳು. ಶೈತ್ಯೋಪಚಾರದಿಂದ ಎಚ್ಚರಗೊಂಡ ಅವಳು, 'ಓ ಲಲಿತಾಂಗದೇವನೇ ಎಲ್ಲಿರುವೆ? ನೀನಿಲ್ಲದೆ ನನ್ನ ಜೀವನ ವ್ಯರ್ಥ. ನೀನು ನನ್ನ ಹಿಂದಿನ ಸ್ವರ್ಗಭವದ ಪತಿ' ಈ ಮುಂತಾಗಿ ಪ್ರಲಾಪಿಸಿ ಮೌನಧಾರಣೆ ಮಾಡಿದಳು. ಕೊನೆಗೆ ಪಂಡಿತೆಯ ಆತ್ಮೀಯ ನುಡಿಗಳಿಗೆ ಮೀರದೆ ತನ್ನ ವೃತ್ತಾಂತವನ್ನು ಆಕೆಗೆ ತಿಳಿಸಿದಳು. ಪಂಡಿತೆಯು ಶ್ರೀಮತಿಯು ಬರೆದುಕೊಟ್ಟ ಚಿತ್ರದ ಮೂಲಕ ಹಿಂದಿನ ಜನ್ಮದಲ್ಲಿ ಲಲಿತಾಂಗನಾಗಿದ್ದ ವಜ್ರಜಂಘನನ್ನು ಪತ್ತೆಹಚ್ಚಿದಳು. ಶ್ರೀಮತಿ ವಜ್ರಜಂಘರಿಗೆ ವಿವಾಹವು ನೆರವೇರಿತು.

ಸ್ವರ್ಣಜಂಘನು ತನ್ನ ಮಗನಿಗೆ ರಾಜ್ಯವನ್ನು ಒಪ್ಪಿಸಿ ತಪಸ್ಸನ್ನಾಚರಿಸಿದನು. ವಜ್ರಸೇನನೂ ಸಹ ತನ್ನ ಮಗ ಪುಷ್ಕಲಪಾಲನಿಗೆ ರಾಜ್ಯವನ್ನು ವಹಿಸಿ ತಪಸ್ಸನ್ನಾಚರಿಸಿ ಮುಕ್ತಿಯನ್ನು ಪಡೆದನು.

ವಜ್ರಜಂಘ ಶ್ರೀಮತಿಯರು ಭೋಗೋಪಭೋಗಗಳನ್ನನುಭವಿಸಿದರು. ಅವರಿಗೆ ಮಗನೋರ್ವನು ಜನಿಸಿದನು.

ಪುಷ್ಕಲಪಾಲನ ಮೇಲೆ ಶತ್ರುಗಳು ಮುತ್ತಿಗೆ ಹಾಕಲು, ವಜ್ರಜಂಘನು ಅಲ್ಲಿಗೆ ಶ್ರೀಮತಿಯೊಂದಿಗೆ ಹೋಗಿ ಆತನಿಗೆ ಸಹಾಯಮಾಡಿದನು. ಆತನ ರಾಜ್ಯವನ್ನು ಭದ್ರಪಡಿಸಿಕೊಟ್ಟನು. ಹಿಂದಿರುಗಿ ಬರುವಾಗ ಎರಡು ವಿಷಸರ್ಪಗಳು ಕೇವಲಜ್ಞಾನವನ್ನು ಹೊಂದಿದ್ದ ತನ್ನ ತಮ್ಮಂದಿರಾದ ಸಗರಸೇನ ಮತ್ತು ಮುನಿಸೇನರ ಪ್ರಭಾವದಿಂದ ವಿಷವನ್ನು ತ್ಯಜಿಸಿದ ವಿಷಯವನ್ನು ತಿಳಿದು ಅವರಿಂದ ಧರ್ಮಶ್ರವಣ ಮಾಡಿದನು.

ಅರಮನೆಗೆ ಹಿಂದಿರುಗಿದ ಶ್ರೀಮತಿ-ವಜ್ರಜಂಘರು ಮಾರನೆಯ ದಿನ ದೀಕ್ಷೆಯನ್ನು ಕೈಗೊಳ್ಳಬೇಕೆಂದು ಸಂಕಲ್ಪವನ್ನು ಕೈಗೊಂಡು ಮಲಗಿರುವಾಗ ಅವರ ಮಗ ರಾಜ್ಯವನ್ನು ಬೇಗ ಪಡೆಯಬೇಕೆಂಬ ಆತುರದಿಂದ ಅವರು ಮಲಗಿದ ಕೋಣೆಗೆ ವಿಷದ ಧೂಪವನ್ನು ಹಾಕಿ ತಂದೆ-ತಾಯಿಗಳನ್ನು ಕೊಂದನು.

ಶ್ರೀಮತಿ-ವಜ್ರಜಂಘರು ಸತ್ತು ಉತ್ತರಕುರುವಿನಲ್ಲಿ ಅವಳಿಗಳಾಗಿ ಹುಟ್ಟಿದರು. ಅಲ್ಲಿಂದ ಮುಂದೆ ಸೌಧರ್ಮಕಲ್ಪದಲ್ಲಿ ದೇವತೆಗಳಾಗಿ ಹುಟ್ಟಿದರು.

ಜಂಬೂದ್ವೀಪದ ವಿದೇಹ ಕ್ಷೇತ್ರದಲ್ಲಿ ಕ್ಷಿತಿಪ್ರತಿಷ್ಠವೆಂಬ ನಗರ. ಸೌಧರ್ಮಕಲ್ಪದಲ್ಲಿ ದೇವತೆಯಾಗಿದ್ದ ವಜ್ರಜಂಘನು ಅಲ್ಲಿಂದ ಚ್ಯುತನಾಗಿ, ಈ ನಗರದಲ್ಲಿ ವೈದ್ಯ ಸುವಿಧಿಯ ಮಗ ಜೀವಾನಂದನಾಗಿ ಹುಟ್ಟಿದನು. ಅಷ್ಟಾಂಗ ಆಯುರ್ವೇದ ಪಂಡಿತನಾದನು. ವೈದ್ಯನ ಮಗ ಜೀವಾನಂದ, ರಾಜಕುಮಾರ ಮಹೀಧರ, ಮಂತ್ರಿಕುಮಾರ ಸುಬುದ್ಧಿ, ಶ್ರೇಷ್ಠಿಯ ಮಗ ಗುಣಕರ, ವ್ಯಾಪಾರಿಯ ಮಗ ಪೂರ್ಣಚಂದ್ರ ಈ ಐವರೂ ಒಟ್ಟಾಗಿ ಬೆಳೆಯುತ್ತಿದ್ದರು. ಅದೇ ಪಟ್ಟಣದಲ್ಲಿ ಶ್ರೀಮತಿಯು ಈಶ್ವರಚಂದ್ರಶ್ರೇಷ್ಠಿಗೆ ಕೇಶವನೆಂಬ ಮಗನಾಗಿ ಹುಟ್ಟಿದಳು. ಆರು ಮಂದಿಯೂ ಗಾಢಸ್ನೇಹಿತರಾಗಿದ್ದರು. ಕುಷ್ಠರೋಗದಿಂದ ಬಳಲುತ್ತಿದ್ದ ಮುನಿಯೋರ್ವರಿಗೆ ಜೀವಾನಂದನು ತನ್ನ ಸ್ನೇಹಿತರ ಸಹಾಯದಿಂದ ಚಿಕಿತ್ಸೆಯನ್ನು ಮಾಡಿ ಅವರನ್ನು ರೋಗಮುಕ್ತರನ್ನಾಗಿ ಮಾಡಿದನು. ಕೊನೆಗೆ ಅವರೆಲ್ಲರೂ ಧರ್ಮಕಾರ್ಯದಲ್ಲಿ ತೊಡಗಿ ದೀಕ್ಷೆ ಕೈಗೊಂಡು ಸಾಮಾನಿಕದೇವತೆಗಳಾಗಿ ಹುಟ್ಟಿದರು.

ಜಂಬೂದ್ವೀಪದ ವಿದೇಹಕ್ಷೇತ್ರದ ಪೂರ್ವಭಾಗದಲ್ಲಿ ಪುಷ್ಕಲಾವತಿ ದೇಶದಲ್ಲಿ ಪುಂಡರೀಕಿಣಿ ಎಂಬ ನಗರ. ಅಲ್ಲಿಯ ದೊರೆ ವಜ್ರಸೇನ. ಈತನ ರಾಣಿ ಧಾರಿಣಿ. ಇವರಿಗೆ ಐದು ಮಂದಿ ಸಾಮಾನಿಕದೇವರು ಮಕ್ಕಳಾಗಿ ಜನಿಸಿದರು. ವೈದ್ಯನ ಮಗನು ವಜ್ರನಾಭನಾಗಿಯೂ, ರಾಜನ ಮಗನು ಬಾಹುವಾಗಿಯೂ, ಮಂತ್ರಿಯ ಮಗನು ಸುಬಾಹುವಾಗಿಯೂ, ಶ್ರೇಷ್ಠಿ ಮತ್ತು ವ್ಯಾಪಾರಿಯ ಮಕ್ಕಳು ಪೀಠ ಮಹಾಪೀಠರಾಗಿಯೂ ಜನಿಸಿದರು. ಕೇಶವನಾಗಿದ್ದ ಸಾಮಾನಿಕದೇವನು ಸುಯಶನೆಂಬ ರಾಜಪುತ್ರನಾಗಿ ಜನಿಸಿದನು.

ವಜ್ರನಾಭನನ್ನು ಸಿಂಹಾಸನದಲ್ಲಿರಿಸಿ, ವಜ್ರಸೇನನು ತಪವನ್ನಾಚರಿಸಿದನು. ವಜ್ರನಾಭನು ತನ್ನ ತಮ್ಮಂದಿರಿಗೆ ಕೆಲವು ಪ್ರಾಂತಗಳನ್ನು ನೀಡಿದನು. ಸುಯಶನು ವಜ್ರನಾಭನ

ಸಾರಥಿಯಾದನು. ವಜ್ರಸೇನನಿಗೆ ಕೇವಲಜ್ಞಾನ ಉತ್ಪನ್ನವಾಯಿತು. ವಜ್ರನಾಭನ ಆಯುಧ ಶಾಲೆಯಲ್ಲಿ ಚಕ್ರರತ್ನವು ಪ್ರವೇಶಿಸಿತು. ವಜ್ರನಾಭನು ದಿಗ್ವಿಜಯವನ್ನು ಮಾಡಿದನು. ಆತನ ಧರ್ಮನಿಷ್ಠೆ ದಿನೇ ದಿನೇ ವೃದ್ಧಿಸುತ್ತಾ ಹೋಯಿತು.

ವಜ್ರಸೇನ ಕೇವಲಿಯಿಂದ ಸಮವಸರಣದಲ್ಲಿ ಉಪದೇಶವನ್ನು ಕೇಳಿದ ವಜ್ರನಾಭ ಹಾಗೂ ಆತನ ತಮ್ಮಂದಿರು ಮತ್ತು ಸಾರಥಿ ಸುಯಶ ಇವರೆಲ್ಲರೂ ದೀಕ್ಷೆಯನ್ನು ಕೈಗೊಂಡರು. ತಮ್ಮ ತಮ್ಮ ತಪೋಶಕ್ತಿಗೆ ಅನುಸಾರವಾಗಿ ಅನೇಕ ಋದ್ಧಿಗಳನ್ನು ಪಡೆದರು. ವಜ್ರನಾಭನು ತೀರ್ಥಂಕರತ್ವ ನಾಮಕರ್ಮವನ್ನು, ಬಾಹುವು ಚಕ್ರವರ್ತಿಯ ಯೋಗವನ್ನು, ಸುಬಾಹುವು ಅತಿಮಾನುಷ ಬಲದ ಯೋಗವನ್ನು ಪಡೆದರು. ಪೀಠ-ಮಹಾ ಪೀಠರು ಇವರ ಋದ್ಧಿಯನ್ನು ನೋಡಿ ಈರ್ಷೆಗೊಂಡ ಕಾರಣ ಸ್ತ್ರೀಜನ್ಮಯೋಗವನ್ನು ಪಡೆದರು. ಈ ಆರು ಮಂದಿಯೂ ಸಲ್ಲೇಖನಧಾರಿಗಳಾಗಿ ಜೀವಿತಾಂತ್ಯದಲ್ಲಿ ಸರ್ವಾರ್ಥ ಸಿದ್ಧಿಯಲ್ಲಿ ದೇವೇಂದ್ರರಾಗಿ ಜನಿಸಿದರು.

ಕುಲಕರರ ಸಂತತಿಯಲ್ಲಿ ಕೊನೆಯದಾಗಿ ಬರುವ ನಾಭಿ ಮತ್ತು ಮರುದೇವಿಯರಲ್ಲಿ ವಜ್ರನಾಭನ ಆತ್ಮವು ಸರ್ವಾರ್ಥಸಿದ್ಧಿಯಿಂದ ಚ್ಯುತಗೊಂಡು, ಮರುದೇವಿಯಲ್ಲಿ ನೆಲೆ ಸಿತು. (ಕುಲಕರರ ಸರಣಿಯನ್ನು ಹೇಳುವಾಗ ಕುಲಕರ ವಿಮಲವಾಹನನ ಪೂರ್ವಭವಾ ವಳಿಯ ಕಥೆಯನ್ನು ಸಹ ನಿರೂಪಿಸಲಾಗಿದೆ). ಮರುದೇವಿಗೆ ಹದಿನಾಲ್ಕು ಸ್ವಪ್ನಗಳಾದವು. ಸ್ವಪ್ನಫಲಗಳನ್ನು ಕೇಳಲಾಗಿ ನಾಭಿರಾಜನು 'ನಿನ್ನ ಮಗನು ಕುಲಕರೋತ್ತಮನಾಗುವನು' ಎಂದು ಹೇಳಿದನು. ಇಂದ್ರನಿಗೆ ಆಸನಕಂಪವಾಯಿತು. ದೇವತೆಗಳು ನಾಭಿರಾಜ-ಮರು ದೇವಿಯರಲ್ಲಿಗೆ ಬಂದು ಹದಿನಾಲ್ಕು ಸ್ವಪ್ನಗಳ ಫಲವನ್ನು ವಿವರಿಸಿದರು. ಚೈತ್ರಮಾಸದ ಕೃಷ್ಣಪಕ್ಷದ ಅಷ್ಟಮಿಯಲ್ಲಿ ಮರುದೇವಿಯು ಅವಳಿಗಳಿಗೆ ಜನ್ಮವನ್ನು ನೀಡಿದಳು. ದೇವದುಂದುಭಿ ಮೊಳಗಿತು. ಪುಷ್ಪವೃಷ್ಟಿಯಾಯಿತು. ಸಕಲ ದಿಕ್ಕುಮಾರಿಯರೂ ತಾಯಿ ಮಗುವಿನ ಸೇವೆಗೆ ನಿಂತರು. ಈ ಸಮಯದಲ್ಲಿ ಸೌಧರ್ಮೇಂದ್ರನಿಗೆ ಆಸನಕಂಪನ ವಾಯಿತು. ಇದರಿಂದಾಗಿ ಮೊದಲು ಆತನು ಕೋಪಗೊಂಡರೂ ಅನಂತರ ತನ್ನ ಅವಧಿಜ್ಞಾನದಿಂದ ಪ್ರಥಮ ಜಿನನ ಜನನದ ವೃತ್ತಾಂತವನ್ನು ತಿಳಿದು, ಜಿನ ಶಿಶುವಿನ ಜನ್ಮಾಭಿಷೇಕ ಕಲ್ಯಾಣಕ್ಕೆ ದೇವತೆಗಳೊಂದಿಗೆ ಸಂಭ್ರಮದಿಂದ ಹೊರಟನು. ಮರುದೇವಿಗೆ ಜಿನಬಾಲಕನ ಜನ್ಮಾಭಿಷೇಕದ ಹಬ್ಬವನ್ನು ನೆರವೇರಿಸಲು ಬಂದಿರುವುದನ್ನು ತಿಳಿಸಿ, ಆಕೆಗೆ ಭಯವುಂಟಾಗದಿರಲೆಂದು ಮಾಯಾನಿದ್ರೆಯನ್ನು ಉಂಟುಮಾಡಿ ಮಾಯಾಶಿಶುವನ್ನು ಪಕ್ಕದಲ್ಲಿ ಇರಿಸಿ, ಜಿನಶಿಶುವನ್ನು ಕರೆದುಕೊಂಡು ಹೋದನು. ಮಗುವಿಗೆ ಕ್ಷೀರಸಮು ದ್ರಾದಿ ಪವಿತ್ರ ಜಲದಿಂದ ಅಭಿಷೇಕವನ್ನು ದೇವತೆಗಳು ಮಾಡಿದರು. ದೇವೇಂದ್ರನು ಅಭಿಷೇಕದ ನಂತರ ಮಗುವಿನ ಮೈಯನ್ನು ಒರೆಸಿ ಅಲಂಕರಿಸಿದನು. ಹೆಬ್ಬೆರಳಿಗೆ ಅಮೃತವನ್ನು ಅಳವಡಿಸಿದನು. ಜಿನಶಿಶುವನ್ನು ತಾಯಿಯ ಬಳಿಯಲ್ಲಿ ಬಿಟ್ಟು ದೇವತೆಗಳು ಹಿಂದಿರುಗಿದರು.

ಜಿನಶಿಶುವಿನ ತೊಡೆಯಲ್ಲಿ ವೃಷಭಲಾಂಛನವು ಇದ್ದುದರಿಂದಲೂ ಮರುದೇವಿಯು ಕನಸಿನಲ್ಲಿ ವೃಷಭನನ್ನು ಕಂಡುದರಿಂದಲೂ ಆ ಶಿಶುವಿಗೆ ವೃಷಭನೆಂದು ಹೆಸರನ್ನು ಇಟ್ಟರು. ಆ ಶಿಶುವಿನೊಂದಿಗೆ ಜನಿಸಿದ ಮತ್ತೊಂದು ಮಗುವಿಗೆ ಸುಮಂಗಲಾ ಎಂದು

ಹೆಸರಿಟ್ಟರು. ವೃಷಭನಿಗೆ ವರ್ಷ ತುಂಬುವುದರ ಒಳಗಾಗಿ ಸೌಧರ್ಮೇಂದ್ರನು ವಂಶಾವಳಿಯನ್ನು ಸ್ಥಾಪಿಸುವುದಕ್ಕೋಸ್ಕರ ಕಬ್ಬಿನ ಜಲ್ಲೆಯನ್ನು ಜಿನಶಿಶುವಿನ ಕೈಗೆ ಉಡುಗೊರೆಯಾಗಿ ಕೊಟ್ಟನು. ಅಂದಿನಿಂದ ವೃಷಭನ ವಂಶವನ್ನು ಇಕ್ಷ್ವಾಕುವಂಶವೆಂಬ ಹೆಸರಿನಿಂದ ಕರೆದು ಪ್ರತಿಷ್ಠಾಪಿಸಲಾಯಿತು. ದೇವಕುಮಾರರ ಒಡನಾಟದಿಂದ ವೃಷಭನು ಬೆಳೆದು ಯೌವನಾವಸ್ಥೆ ತಲುಪಿದನು.

ಒಮ್ಮೆ ಅವಳಿಯುಗಳಗಳಲ್ಲಿ ಗಂಡುಮಗುವು ಅಕಾಲಮರಣಕ್ಕೆ ತುತ್ತಾಗಲು, ಹೆಣ್ಣುಮಗು ಉಳಿಯಿತು. ಹುಡುಗಿಗೆ ತಂದೆ ತಾಯಿಗಳು ಸುನಂದೆ ಎಂದು ಹೆಸರಿಟ್ಟರು. ತಂದೆತಾಯಿಗಳೂ ಸಹ ಸತ್ತು, ಆ ಹುಡುಗಿ ಅನಾಥಳಾಗಿ ಬೆಳೆದು, ಯೌವನಾವಸ್ಥೆಗೆ ಕಾಲಿರಿಸಿದಳು. ಪ್ರಜೆಗಳು ಬಂದು ನಾಭಿರಾಜನಿಗೆ ಸುನಂದೆಯ ಬಗೆಗೆ ತಿಳಿಸಲಾಗಿ ಆತನು, 'ಇವಳು ಋಷಭನಿಗೆ ವಿಧೇಯ ಹೆಂಡತಿಯಾಗಿರಲಿ' ಎಂದು ಹೇಳಿದನು. ದೇವೇಂದ್ರನು ಋಷಭನ ಪಾದಗಳಿಗೆರಗಿ ಸುಮಂಗಲಾ ಮತ್ತು ಸುನಂದೆಯರನ್ನು ಮದುವೆಯಾಗಬೇಕೆಂದು ಬೇಡಿದಾಗ ವೃಷಭನು ತನ್ನ ಸಮ್ಮತಿಯನ್ನು ನೀಡಿ ಮದುವೆ ಮಾಡಿಕೊಂಡನು.

ಬಾಹು ಮತ್ತು ಪೀಠರು ಸರ್ವಾರ್ಥಸಿದ್ಧಿಯಿಂದ ಬಂದು ಸುಮಂಗಲಾಳ ಗರ್ಭದಲ್ಲಿ ಅವಳಿಗಳಾಗಿ ಜನಿಸಿದರು. ಹಾಗೆಯೇ ಸುಬಾಹು ಮತ್ತು ಮಹಾಪೀಠರು ಸರ್ವಾರ್ಥಸಿದ್ಧಿಯಿಂದ ಬಂದು ಸುನಂದೆಯ ಗರ್ಭದಲ್ಲಿ ಅವಳಿಗಳಾಗಿ ಜನಿಸಿದರು. ಸುಮಂಗಲಾಳಿಗೆ ೧೪ ಸ್ವಪ್ನಗಳಾದವು. ' ನಿನ್ನ ಮಗನು ಚಕ್ರವರ್ತಿಯಾಗುವನು' ಎಂದು ಸ್ವಾಮಿಯು ಸ್ವಪ್ನಫಲವನ್ನು ತಿಳಿಸಿದನು. ಸುಮಂಗಲಾಳಿಗೆ ಭರತ ಬ್ರಾಹ್ಮಿಯರೂ ಸುನಂದೆಗೆ ಬಾಹುಬಲಿ ಸುಂದರಿಯರೂ ಅವಳಿಗಳಾಗಿ ಜನಿಸಿದರು. ಅನಂತರ ಕಾಲಾನುಕ್ರಮದಲ್ಲಿ ಸುಮಂಗಲಾದೇವಿಗೆ ೪೯ ಮಂದಿ ಅವಳಿಗಳಾದರು.

ವೃಷಭನಿಗೆ ರಾಜ್ಯಾಭಿಷೇಕವನ್ನು ಮಾಡಲಾಯಿತು. ಪ್ರಜೆಗಳು ವಿನಯದಿಂದ ನಡೆದುಕೊಂಡುದರಿಂದ ದೇವತೆಗಳು ಅಲ್ಲಿ ವಿನೀತಾನಗರಿಯನ್ನು (ಅಯೋಧ್ಯೆ) ನಿರ್ಮಿಸಿದರು. ವೃಷಭನು ಅಲ್ಲಿಯ ಪ್ರಥಮರಾಜನಾದನು.

ಕಲ್ಪವೃಕ್ಷದಿಂದ ಆಹಾರವು ಬರುವುದು ನಿಂತಿತು. ಕಂಗಾಲಾದ ಪ್ರಜೆಗಳಿಗೆ ವೃಷಭನು ಕುಂಭವನ್ನು ಮಾಡಿ, ಆಹಾರವನ್ನು ಬೇಯಿಸಿ ತಿನ್ನುವ ವಿಧಾನವನ್ನು ಹೇಳಿಕೊಟ್ಟನು. ಕುಂಬಾರರು, ಬಡಗಿಗಳು, ನೇಕಾರರು, ನಾಯಿಂದರು, ವ್ಯಾಪಾರಿಗಳು ಹೀಗೆ ಅನೇಕ ಕೆಲಸಗಾರರು ಪ್ರಜೆಗಳ ಅನುಕೂಲಕ್ಕಾಗಿ ಉಂಟಾದರು. ಋಷಭನು ಭರತನಿಗೆ ೭೨ ಕಲೆಗಳನ್ನು ಕಲಿಸಿದನು. ಭರತನು ತನ್ನ ತಮ್ಮಂದಿರಿಗೆ ಅವುಗಳನ್ನು ಕಲಿಸಿದನು. ಬಾಹುಬಲಿಗೆ ಸ್ತ್ರೀಪುರುಷರ ಲಕ್ಷಣ-ಉಪಲಕ್ಷಣಗಳನ್ನೂ ಗಜ ಅಶ್ವ ಮೊದಲಾದುವುಗಳ ಲಕ್ಷಣಗಳನ್ನೂ ಹೇಳಿಕೊಟ್ಟನು. ಬ್ರಾಹ್ಮಿಗೆ ೧೮ ವರ್ಣಮಾಲೆಗಳನ್ನು, ಸುಂದರಿಗೆ ಗಣಿತ ಶಾಸ್ತ್ರವನ್ನು ಬೋಧಿಸಿದನು. ವಿವಾಹವಿಧಿಗೆ ಈತನೇ ಆದಿಮಾರ್ಗದರ್ಶಕನಾದನು. ತಪ್ಪಿತಸ್ಥರಿಗೆ ದಂಡವನ್ನು ಕೊಡುವವರನ್ನು ಉಗ್ರರೆಂದೂ, ಮಂತ್ರಿ ಮೊದಲಾದವರ ಕೆಲಸವನ್ನು ನಿರ್ವಹಿಸುವವರನ್ನು ಭೋಗರೆಂದೂ, ಸ್ವಾಮಿಯ ಅನುವರ್ತಿಗಳಾದವರನ್ನು ರಾಜನ್ಯರೆಂದೂ, ಉಳಿದವರನ್ನು ಕ್ಷತ್ರಿಯರೆಂದೂ ಕರೆದು ಪ್ರಜೆಗಳಲ್ಲಿ ನಾಲ್ಕು ವರ್ಗಗಳನ್ನು ಮಾಡಿದನು.

ಒಮ್ಮೆ ವಸಂತೋತ್ಸವದಲ್ಲಿ ವೃಷಭಸ್ವಾಮಿಯು ಪುಷ್ಪಗಳ ಆಭರಣವನ್ನು ಧರಿಸಿ ಭಾಗಿಯಾಗಿದ್ದನು. ವಸಂತೋತ್ಸವದ ವೈಭವಗಳನ್ನು ನೋಡುತ್ತಿದ್ದ ಸ್ವಾಮಿಯು 'ಇಂತಹ ಕ್ರೀಡೆ ಮತ್ತೆಲ್ಲಿಯಾದರೂ ಇದೆಯೇ?' ಎಂದು ಯೋಚಿಸಿದನು. ಅವಧಿಜ್ಞಾನವನ್ನು ಪ್ರಯೋಗಿಸಿದಾಗ ತಾನು ಹಿಂದೆ ಸ್ವರ್ಗದಲ್ಲಿ ಮತ್ತು ಅನುತ್ತರ ಸ್ವರ್ಗದಲ್ಲಿ ಅನುಭವಿಸಿದ ಸುಖವನ್ನು ನೆನೆದುಕೊಂಡನು. ವೃಷಭನು ಅತೃಪ್ತಿಗೊಳಿಸುವ ಲೌಕಿಕ ಸುಖದ ಬಗೆಗೆ ಹೇಯಭಾವನೆಯನ್ನು ತಳೆದು ವೈರಾಗ್ಯಪರನಾದನು. ಲೋಕಾಂತಿಕ ದೇವತೆಗಳು ಬಂದು ಸ್ವಾಮಿಯ ಭಾವನೆಯನ್ನು ದೃಢಪಡಿಸಿದರು. ಋಷಭನಾಥನು ಮುನಿದೀಕ್ಷೆಯನ್ನು ಕೈಗೊಳ್ಳುವ ವಿಚಾರವನ್ನು ತಳೆದು ನಂದನವನದಿಂದ ಹೊರಟನು.

ಭರತನಿಗೆ ರಾಜ್ಯಾಭಿಷೇಕವನ್ನು ಮಾಡಿ, ಉಳಿದ ಮಕ್ಕಳಿಗೂ ಭೂಮಿಯನ್ನು ವಿಭಾಗ ಮಾಡಿಕೊಟ್ಟು ಒಂದು ವರ್ಷಕಾಲ ವೃಷಭಸ್ವಾಮಿಯು ದಾನಕಾರ್ಯದಲ್ಲಿ ನಿರತನಾಗಿ ಇದ್ದನು. ಕೃಷ್ಣಪಕ್ಷದ ಚೈತ್ರಮಾಸದ ಉತ್ತರಾಷಾಢ ನಕ್ಷತ್ರದಲ್ಲಿ ಸ್ವಾಮಿಯು ದೀಕ್ಷಾಬದ್ಧನಾದನು. ಇಂದ್ರನು ದೇವತೆಗಳೊಂದಿಗೆ ಬಂದು ದೀಕ್ಷಾಕಲ್ಯಾಣವನ್ನು ನೆರವೇರಿಸಿದನು. ಸಿದ್ಧಾರ್ಥವನದಲ್ಲಿ ಅಶೋಕಮರದಡಿ ನಿಂತು ವಸ್ತ್ರಾಭರಣಗಳನ್ನು ತ್ಯಜಿಸಿದನು. ಇಂದ್ರನು ಸ್ವಾಮಿಯ ಭುಜದ ಮೇಲೆ'ದೇವದೂಷ್ಯ'ವನ್ನು ಹಾಕಿದನು. ನಾಲ್ಕು ಮುಷ್ಟಿಗಳಲ್ಲಿ ಲೋಚನ್ನು ಮಾಡಿಕೊಂಡನಂತರ ಐದನೆಯ ಮುಷ್ಟಿಯಲ್ಲಿ ಲೋಚನ್ನು ಮಾಡಿಕೊಳ್ಳಲು ಹೋದ ಸಮಯದಲ್ಲಿ ದೇವನೊಬ್ಬನು 'ಸ್ವಾಮಿಯೇ ನಿನ್ನ ಕೂದಲಿನ ಬಳ್ಳಿಯು ಭುಜದ ಮೇಲೆ ಮರಕತದಂತೆ ಶೋಭಿಸುತ್ತಿದೆ. ಅದು ಹಾಗೆಯೇ ಇರಲಿ' ಎಂದು ಬೇಡಿದಾಗ ಸ್ವಾಮಿಯು ಕೂದಲನ್ನು ಹಾಗೆಯೇ ಬಿಟ್ಟನು. ಲೋಚನ್ನು ಮಾಡಿದ ಸ್ವಾಮಿಯ ಪವಿತ್ರಕೂದಲನ್ನು ಕ್ಷೀರಸಾಗರದಲ್ಲಿ ಬಿಡಲಾಯಿತು. ಕಚ್ಛ ಮಹಾಕಚ್ಛಾದಿ ನಾಲ್ಕುಸಾವಿರ ರಾಜರು ಸ್ವಾಮಿಯನ್ನು ಅನುಸರಿಸಿ ದೀಕ್ಷೆಯನ್ನು ಕೈಗೊಂಡರು.

ಸ್ವಾಮಿಯು ಉಗ್ರವಾದ ತಪಸ್ಸಿನಲ್ಲಿ ತೊಡಗಿದನು. ಉಳಿದವರು ವ್ರತವನ್ನು ಪಾಲಿಸಲಾಗದೆ ವ್ರತಭ್ರಷ್ಟರಾದರು. ಈ ಕಡೆ ಭೂಮಿಯನ್ನು ತಮಗೂ ನೀಡೆಂದು ಸ್ವಾಮಿಯನ್ನು ಪೀಡಿಸುತ್ತಿದ್ದ ನಮಿ-ವಿನಮಿಯರಿಗೆ, ಧರಣೇಂದ್ರನು ವೈತಾಢ್ಯನಗರವನ್ನಿತ್ತನು.

ಒಂದು ವರ್ಷ ಉಪವಾಸದ ಅನಂತರ ಸ್ವಾಮಿಗೆ ಶ್ರೇಯಾಂಸನಿಂದ, ವಿಧಿಪೂರ್ವಕವಾಗಿ ಆಹಾರದಾನವಾಯಿತು. ಸ್ವಾಮಿಯನ್ನು ನೋಡಿದ ಶ್ರೇಯಾಂಸನಿಗೆ ಜಾತಿಸ್ಮರಣೆಯುಂಟಾಯಿತು. ಅಷ್ಟರಲ್ಲಿ ಅದೇ ತಾನೆ ತೆಗೆದ ಕಬ್ಬಿನ ರಸವನ್ನು ಯಾರೋ ತಂದುಕೊಟ್ಟರು. ಇದು ಆಹಾರದಾನಕ್ಕೆ ಯೋಗ್ಯವೆಂದು ತಿಳಿದು ಇಕ್ಷುರಸವನ್ನು ಆಹಾರವಾಗಿ ನೀಡಿದನು. ಆಹಾರದಾನದ ಮಹಿಮೆಯ ಫಲವಾಗಿ ಶ್ರೇಯಾಂಸನ ಗೃಹದಲ್ಲಿ ರತ್ನವೃಷ್ಟಿ ಉಂಟಾಯಿತು.

ಸ್ವಾಮಿಯು ಮ್ಲೇಚ್ಛಯವನಾದಿ ದೇಶಗಳನ್ನು ಸಂಚರಿಸುತ್ತಾ ಅಯೋಧ್ಯೆಗೆ ಬಂದನು. ಅಲ್ಲಿ ಕೃಷ್ಣಪಕ್ಷದ ಫಾಲ್ಗುಣಮಾಸದ ಉತ್ತರಾಷಾಢ ನಕ್ಷತ್ರದಲ್ಲಿ ಸ್ವಾಮಿಗೆ ಕೇವಲಜ್ಞಾನ ಪ್ರಾಪ್ತವಾಯಿತು. ಇಂದ್ರನು ದೇವತೆಗಳೊಂದಿಗೆ ಕೇವಲಜ್ಞಾನ ಕಲ್ಯಾಣವನ್ನು ಆಚರಿಸಲು ಬಂದನು. ಸಮವಸರಣದ ರಚನೆಯಾಯಿತು. ಸ್ವಾಮಿಯು ಸಮವಸರಣವನ್ನು ಪೂರ್ವಾಭಿಮುಖವಾಗಿ ಪ್ರವೇಶಿಸಿದನು.

ಭರತನ ಆಯುಧಶಾಲೆಯಲ್ಲಿ ಚಕ್ರರತ್ನವು ಪ್ರವೇಶಿಸಿತು. ಈ ಕಡೆ ವೃಷಭನಾಥನಿಗೆ ಕೇವಲಜ್ಞಾನವಾದ ವಿಷಯವನ್ನು ತಿಳಿದ ಭರತನು ಮರುದೇವಿಯನ್ನು ಆನೆಯಮೇಲೆ ಕೂರಿಸಿಕೊಂಡು ಸ್ವಾಮಿಯ ದರ್ಶನಕ್ಕೆ ಹೋದನು. ಮರುದೇವಿಯು ಸ್ವಾಮಿಯ ದರ್ಶನ ಮಾತ್ರದಿಂದ ಕ್ಷಪಕಶ್ರೇಣಿಯನ್ನು ಪಡೆದು ಎಂಟು ಕರ್ಮಗಳನ್ನೂ ನಾಶಮಾಡಿ ಮುಕ್ತಿಯನ್ನು ಪಡೆದಳು. ಈ ಅವಸರ್ಪಿಣಿ ಕಾಲದಲ್ಲಿ ಮೋಕ್ಷವನ್ನು ಪಡೆದವರಲ್ಲಿ ಮರುದೇವಿ ಮೊದಲಿಗಳು.

ಸ್ವಾಮಿಯ ಉಪದೇಶವನ್ನು ಕೇಳಿ ಭರತನ ವೃಷಭಸೇನಾದಿ ೫೦೦ ಮಕ್ಕಳೂ ೭೦ ಮೊಮ್ಮಕ್ಕಳೂ ದೀಕ್ಷೆಯನ್ನು ತೆಗೆದುಕೊಂಡರು. ಬ್ರಾಹ್ಮಿಯು ಭರತನ ಅಪ್ಪಣೆಯನ್ನು ಪಡೆದು ದೀಕ್ಷೆಯನ್ನು ತೆಗೆದುಕೊಂಡಳು. ಸುಂದರಿಗೆ ಭರತನ ಅಪ್ಪಣೆ ದೊರೆಯಲಿಲ್ಲ. ಭರತ-ಸುಂದರಿಯರು ಶ್ರಾವಕರ ವ್ರತವನ್ನು ಧಾರಣೆಮಾಡಿದರು. ವೃಷಭಸೇನಾದಿಗಳು ವೃಷಭನ ಗಣಭೃತರಾದರು. ಸ್ವಾಮಿಯು ಧರ್ಮೋಪದೇಶಮಾಡುವ ಸ್ಥಳಗಳಲ್ಲೆಲ್ಲಾ ದೇವತೆಗಳು ಸಮವಸರಣ ಮಂಟಪವನ್ನು ರಚಿಸುತ್ತಿದ್ದರು.

ಭರತನು ದಿಗ್ವಿಜಯವನ್ನು ಮುಗಿಸಿಕೊಂಡು ಹಿಂದಿರುಗಿದಾಗ ಆತನಿಗೆ ಚಕ್ರವರ್ತಿಯ ಪಟ್ಟವನ್ನು ಕಟ್ಟಲಾಯಿತು. ಅನಂತರ ಭರತನು ತನ್ನ ಕುಟುಂಬದವರನ್ನು ನೋಡಲು ಹೊರಟನು. ಕೃಶಳಾಗಿದ್ದ ಸುಂದರಿಯ ಅವಸ್ಥೆಯನ್ನು ನೋಡಿ ಅವನು ಕುಪಿತನಾದನು. ಅನಂತರ ಆತನಿಗೆ ಸುಂದರಿಯು ಜೀವಿಸಲು ಎಷ್ಟು ಬೇಕೋ ಅಷ್ಟು ಒಣಗಿದ ಫಲಗಳನ್ನು ಮಾತ್ರ ಸ್ವೀಕರಿಸುತ್ತಿರುವುದಾಗಿ ತಿಳಿದುಬಂದಿತು. ಪ್ರವ್ರಜಿತೆಯಾಗಲು ಭರತನು ಅನುಮತಿಯನ್ನು ನೀಡಿದನು. ಸುಂದರಿಯು ದೀಕ್ಷಾಬದ್ಧಳಾದಳು.

ಭರತನಿಗೆ ತನ್ನ ತಮ್ಮಂದಿರು ತಾನು ಚಕ್ರೇಶ್ವರ ಪಟ್ಟವನ್ನು ಪಡೆಯುವಾಗ ಬಂದಿರಲಿಲ್ಲವೆಂಬುದು ತಿಳಿಯಿತು. 'ನಿಮಗೆ ರಾಜ್ಯದ ಇಚ್ಛೆಯಿದ್ದರೆ ಭರತನನ್ನು ಸೇವಿಸಿ' ಎಂದು ದೂತರನ್ನು ತಮ್ಮಂದಿರ ಬಳಿಗೆ ಕಳುಹಿಸಿದನು. ಅವರು ವೃಷಭ ಸ್ವಾಮಿಯ ಬಳಿಗೆ ಹೋಗಿ ನಡೆದ ವಿಷಯವನ್ನು ತಿಳಿಸಿದಾಗ ಸ್ವಾಮಿಯು ಲೌಕಿಕ ಲಾಲಸೆ ಮುಗಿಯುವಂತಹದ್ದಲ್ಲ, ಆತ್ಮನಿಗ್ರಹವೇ ಸರಿಯಾದ ಮಾರ್ಗವೆಂದು ತಿಳಿಸಿದಾಗ ಅವರೆಲ್ಲರೂ ದೀಕ್ಷೆಯನ್ನು ಸ್ವೀಕರಿಸಿದರು. ಈ ಕಡೆ ಚಕ್ರರತ್ನವು ಅಯೋಧ್ಯೆಯನ್ನು ಪ್ರವೇಶಿಸದೆ ಇದ್ದಾಗ, ಬಾಹುಬಲಿಯು ಅಜೇಯನಾಗಿರುವುದೇ ಅದಕ್ಕೆ ಕಾರಣವೆಂದು ತಿಳಿದುಬಂತು. ಸುವೇಗನು ಭರತನ ದೌತ್ಯವನ್ನು ತೆಗೆದುಕೊಂಡು ಹೋದಾಗ ಬಾಹುಬಲಿಯು ತನ್ನ ರಾಜ್ಯ ಹಾಗೂ ಪ್ರಾಣವು ಭರತನಿಗೆ ಬೇಕಿದ್ದರೆ ಆತನೇ ತನ್ನನ್ನು ಕಾಣಬೇಕೆಂದು ಹೇಳಿಕಳಿಸಿದನು.

ಯುದ್ಧದ ಆರಂಭದಲ್ಲಿ ದೇವತೆಗಳು ಬಂದು ಸಂಧಾನವನ್ನು ನಡೆಸಲು ಹೋಗಿ ವಿಫಲರಾದರು. ಕೊನೆಗೆ ಭರತ ಬಾಹುಬಲಿಗಳು ಸೈನ್ಯದೊಂದಿಗೆ ಯುದ್ಧಮಾಡುವ ಬದಲು ದೃಷ್ಟಿಯುದ್ಧಾದಿ ದ್ವಂದ್ವಯುದ್ಧವನ್ನು ಮಾಡಲಿ ಎಂದು ತಿಳಿಯಹೇಳಿದರು.

ಈ ಸಂದರ್ಭದಲ್ಲಿ ಭರತನ ಸೈನಿಕರಿಗೆ ತಾವಿಲ್ಲದೆ ಭರತನಿಗೆ ಬಾಹುಬಲಿಯನ್ನು ಜಯಿಸುವುದು ಕಷ್ಟವೆಂದು ಸಂಶಯ ಉಂಟಾಯಿತು. ಆಗ ಭರತ ತನ್ನ ಕೈಗೆ ಸರಪಣಿಯನ್ನು ಕಟ್ಟಿಸಿಕೊಂಡು ಎಳೆಯುವಂತೆ ಹೇಳಿ, ಹಾಗೆ ತನ್ನನ್ನು ಎಳೆದ ಸೈನಿಕರಾದಿಯಾಗಿ ಎಲ್ಲರೂ ಕೆಳಗೆ ಬೀಳುವಂತೆ ಮಾಡಿ ತನ್ನ ಶಕ್ತಿ ಪ್ರದರ್ಶನವನ್ನು ಮಾಡಿ ಸೈನಿಕರ

ಸಂಶಯವನ್ನು ನಿವಾರಿಸಿದನು.

ದೃಷ್ಟಿಯುದ್ಧ, ಧ್ವನಿಯುದ್ಧ, ಮಲ್ಲಯುದ್ಧ, ದಂಡಯುದ್ಧಗಳಲ್ಲಿ ಭರತನು ಸೋಲುತ್ತಾ ಬಂದನು. ಭರತನು ಕೊನೆಗೆ ಚಕ್ರರತ್ನವನ್ನು ಬಾಹುಬಲಿಯ ಮೇಲೆ ಪ್ರಯೋಗ ಮಾಡಿದನು. ಅದು ಆತನನ್ನು ಪ್ರದಕ್ಷಿಣೆ ಮಾಡಿ ಮತ್ತೆ ಭರತನ ಕೈಗೆ ಬಂದು ಸೇರಿತು. ಇದರಿಂದ ಕೋಪಗೊಂಡ ಬಾಹುಬಲಿಯು ಮುಷ್ಟಿಯನ್ನು ಏರಿಸಿ ಭರತನನ್ನು ಕೊಲ್ಲಲು ಮುನ್ನುಗ್ಗಿದನು. ಆತನ ಬಳಿಗೆ ಹೋದ ತಕ್ಷಣ 'ಛೇ, ಅಣ್ಣನನ್ನು ಕೊಲ್ಲಲು ಚಿಂತಿಸಿದ ನನ್ನ ಕ್ರೌರ್ಯಕ್ಕೆ ಧಿಕ್ಕಾರವಿರಲಿ' ಎಂದು ಬಗೆದು ಸಾಮ್ರಾಜ್ಯಲಕ್ಷ್ಮಿಯಲ್ಲಿ ವಿರಕ್ತಿಯನ್ನು ಹೊಂದಿದನು. ತಕ್ಷಣ ಐದು ಮುಷ್ಟಿಗಳಿಂದ ಕೂದಲನ್ನು ಕಿತ್ತನು. ದೇವತೆಗಳು ಹರ್ಷೋದ್ಗಾರ ಮಾಡಿದರು. ಬಾಹುಬಲಿಯು, ತಂದೆಯ ಬಳಿಗೆ ಈಗ ಹೋದರೆ ತನ್ನ ತಮ್ಮಂದಿರಿಗಿಂತಲೂ ಸಂನ್ಯಾಸಪದವಿಯಲ್ಲಿ ತನಗೆ ಕೆಳದರ್ಜೆಯ ಸ್ಥಾನ ದೊರೆಯುವುದೆಂದು ತಿಳಿದು, ಕೇವಲಜ್ಞಾನ ಪ್ರಾಪ್ತಿಯಾದ ನಂತರ ಅಲ್ಲಿಗೆ ಹೋಗಲು ನಿಶ್ಚಯಿಸಿದನು. ಈ ಗರ್ವಮನೋಭಾವದಿಂದ ತಪಸ್ಸಿಗೆ ನಿಂತ ಬಾಹುಬಲಿಯನ್ನು ಭರತನು ಪೂಜಿಸಿ, ಸೋಮಯಶನನ್ನು ರಾಜ್ಯದಲ್ಲಿ ಸ್ಥಾಪಿಸಿ ಅಯೋಧ್ಯೆಗೆ ಹಿಂದಿರುಗಿದನು.

ಒಂದು ವರ್ಷಕಾಲ ಬಾಹುಬಲಿ ಉಗ್ರ ತಪಶ್ಚರ್ಯೆಯಲ್ಲಿ ತೊಡಗಿದ. ವೃಷಭನ ಆದೇಶದಂತೆ ಬ್ರಾಹ್ಮಿಸುಂದರಿಯರು ಬಂದು ಆತನಲ್ಲಿರುವ ಮಾನಕಷಾಯದ ಸೂಚನೆಯನ್ನು ನೀಡಿದರು. ಆಗ ಬಾಹುಬಲಿಯು ಅದರಿಂದ ದೂರನಾಗಿ ಕೇವಲಜ್ಞಾನವನ್ನು ಪಡೆದನು.

ಈ ಕಡೆ ಭರತನ ಮಗ, ಮುಂದೆ ೨೪ನೆಯ ತೀರ್ಥಂಕರನಾಗುವ ಮರೀಚಿಯು ಕಠೋರವ್ರತವನ್ನು ಧಾರಣೆಮಾಡಲಾಗದೆ ವ್ರತಭಂಗವನ್ನು ಮಾಡಿದ. ಕಪಿಲನೊಂದಿಗೆ ಸೇರಿ ತನ್ನದೇ ಆದ ಒಂದು ಪಂಗಡವನ್ನು ಕಟ್ಟಿದ.

ಒಮ್ಮೆ ಭರತನು ವೃಷಭಸ್ವಾಮಿಯ ಸಮವಸರಣಕ್ಕೆ ಬಂದು ಮಹಾವ್ರತಧಾರಿಗಳಾದ ತನ್ನ ತಮ್ಮಂದಿರನ್ನು ಮತ್ತೆ ಹಿಂದಿರುಗಿ ಬರುವಂತೆ ಕರೆದಾಗ, ವೃಷಭ ಸ್ವಾಮಿಯು ಭರತನಿಗೆ ತಿಳಿಯಹೇಳಿದನು. ಅವರಿಗಾಗಿ ಆಹಾರವನ್ನು ತರಿಸಿದ ಭರತನಿಗೆ ಮತ್ತೆ ಸ್ವಾಮಿಯಿಂದ ಉಪದೇಶವಾಯಿತು. ಖೇದಗೊಂಡ ಭರತ ದಾನಮಾಡಲು ಯೋಗ್ಯರಾದವರಾರೆಂದು ಚಿಂತಿಸುತ್ತಿರುವಾಗ, ಇಂದ್ರನು ಉತ್ತಮ ಗೃಹಸ್ಥರಿಗೆ ಆಹಾರದಾನವನ್ನು ನೀಡಲು ಸೂಚಿಸಿದನು. ಶಾಸ್ತ್ರಾಧ್ಯಯನದಲ್ಲಿ ತೊಡಗಿದ ಗೃಹಸ್ಥರು ದಾನಯೋಗ್ಯರೆನಿಸಿಕೊಂಡು ಅವರು ಮುಂದೆ ಬ್ರಾಹ್ಮಣರೆನಿಸಿಕೊಂಡರು.

ವೃಷಭಸ್ವಾಮಿಯ ಸಮವಸರಣ ಸಭೆ ನಡೆದ ಶತ್ರುಂಜಯದಲ್ಲಿ ಪುಂಡರೀಕ ಗಣಧರ ಮತ್ತು ಇತರ ಮುನಿಗಳು ಮುಕ್ತಿಯನ್ನು ಪಡೆದರು. ವೃಷಭಸ್ವಾಮಿಯು ಅಷ್ಟಪದ ಪರ್ವತವನ್ನು ಏರಿ ಉಪವಾಸವನ್ನು ಕೈಗೊಂಡು ಪರ್ಯಂಕಾಸನದಲ್ಲಿ ಕುಳಿತು ಧ್ಯಾನದಲ್ಲಿ ನಿರತನಾದನು. ಮಾಘಮಾಸದ ಕೃಷ್ಣಪಕ್ಷದ ೧೩ನೆಯ ದಿನದ ಬೆಳಗ್ಗೆ ಅಭಿಜಿತ್ ನಕ್ಷತ್ರವು ಚಂದ್ರನನ್ನು ಹೊಂದುವ ಸಮಯದಲ್ಲಿ ಸ್ವಾಮಿಯು ನಿರ್ವಾಣವನ್ನು ಹೊಂದಿದನು. ಇತರ ಸಾವಿರ ಮುನಿಗಳಿಗೂ ಮುಕ್ತಿಯು ದೊರೆಯಿತು. ದೇವತೆಗಳು ಇವರೆಲ್ಲರಿಗೂ

ಉತ್ತರಾದಿಕ್ರಿಯೆಗಳನ್ನು ನಡೆಸಿದರು.

ಭರತನು ವೃಷಭಸ್ವಾಮಿಯ ಅಂತ್ಯಕ್ರಿಯೆ ನಡೆದ ಸ್ಥಳದಲ್ಲಿ ಚೈತ್ಯವನ್ನು ಕಟ್ಟಿಸಿದನು. ಅಲ್ಲದೆ ತನ್ನ ತಮ್ಮಂದಿರ ಪ್ರತಿಮೆಯನ್ನು ಕೆತ್ತಿಸಿದನು. ಆ ಸ್ಥಳವು ಮನುಷ್ಯರಿಂದ ಹಾಳಾಗದಿರಲೆಂದು ಅದನ್ನು ದುರ್ಗಮವಾಗುವಂತೆ ನಿರ್ಮಾಣಮಾಡಿಸಿದನು.

ಒಮ್ಮೆ ಭರತನು ಸ್ನಾನಮಾಡಿ ಅಮೂಲ್ಯ ವಸ್ತ್ರ ಒಡವೆಗಳನ್ನು ಧರಿಸಿಕೊಂಡು ಕನ್ನಡಿಯ ಕೋಣೆಗೆ ಹೋಗಿ ತನ್ನ ಅಂಗಾಂಗಗಳ ಸೌಂದರ್ಯವನ್ನು ನೋಡಿಕೊಳ್ಳುತ್ತಿರುವಾಗ, ಆತನ ಬೆರಳೊಂದು ಕಳಾಹೀನವಾಗಿರುವುದು ಕಂಡಿತು. ತಾನು ತೊಟ್ಟಿದ್ದ ಉಂಗುರವು ಕಳಚಿ ಬಿದ್ದು ಅದು ಸೌಂದರ್ಯಹೀನವಾಗಿದೆ ಎಂದು ಭರತ ಅರಿತ. ತನ್ನ ಎಲ್ಲಾ ಒಡವೆಗಳನ್ನು ಒಂದೊಂದಾಗಿ ಕಳಚಿಟ್ಟುನೋಡಿದಾಗ, ಶರೀರದ ಕಾಂತಿ ಮಸುಕಾದುದನ್ನು ಗಮನಿಸಿದ ಭರತನು ವೈರಾಗ್ಯಪರನಾದನು. ಕ್ಷಪಕಶ್ರೇಣಿಗೆ ಏರಿ ಶುದ್ಧಧ್ಯಾನದಿಂದ ಘಾತಿಕರ್ಮಗಳನ್ನು ನಾಶಮಾಡಿ ಕೇವಲಜ್ಞಾನವನ್ನು ಪಡೆದನು. ಇಂದ್ರನು ಆತನಲ್ಲಿಗೆ ಬಂದು, ಕೇವಲಿಯೇ ಮುನಿಯ ವೇಷವನ್ನು ಧಾರಣೆಮಾಡು, ನಿನ್ನನ್ನು ಪೂಜಿಸಿ ದೀಕ್ಷಾಕಲ್ಯಾಣವನ್ನು ಮಾಡಬೇಕಾಗಿದೆ ಎಂದು ಬೇಡಿದಾಗ ಭರತನು ತನ್ನ ಕೂದಲನ್ನು ಐದು ಮುಷ್ಟಿಗಳಿಂದ ಕಿತ್ತುಕೊಂಡನು. ಕಮಂಡಲ ಪಿಂಛಾದಿಗಳನ್ನು ಹಿಡಿದನು. ಕೇವಲಜ್ಞಾನವನ್ನು ಪಡೆದವನು ದೀಕ್ಷಿತನಾಗದೆ ಪೂಜಿಸಲು ಯೋಗ್ಯನಾಗುವುದಿಲ್ಲ.

ಭರತನನ್ನು ಅನುಸರಿಸಿ ೧೦ ಸಾವಿರ ರಾಜರು ಮುನಿದೀಕ್ಷೆಯನ್ನು ಸ್ವೀಕರಿಸಿದರು. ಭರತನ ಮಗ ಆದಿತ್ಯಯಶನಿಗೆ ಪಟ್ಟವನ್ನು ಕಟ್ಟಲಾಯಿತು. ಭರತನು, ಒಂದು ಲಕ್ಷ ಪೂರ್ವಗಳವರೆಗೆ ಸಂಚರಿಸಿ ಉಪದೇಶವನ್ನು ಮಾಡಿ, ಅಷ್ಟಪದವನ್ನು ಏರಿ ಉಪವಾಸವನ್ನು ಕೈಗೊಂಡು ಅನಂತ ಚತುಷ್ಟಯಗಳನ್ನು ಪಡೆದು ಸಿದ್ಧಶಿಲೆಯನ್ನು ಏರಿದನು.

## ದಿಗಂಬರ-ಶ್ವೇತಾಂಬರ ಸಂಪ್ರದಾಯ ಕಥೆಗಳಲ್ಲಿ ಕಂಡುಬರುವ ಪ್ರಮುಖ ವ್ಯತ್ಯಾಸಗಳು

ದಿಗಂಬರ-ಶ್ವೇತಾಂಬರ ಸಂಪ್ರದಾಯಗಳಲ್ಲಿ ಕಂಡುಬರುವ ವ್ಯತ್ಯಾಸಗಳನ್ನು ಮೂರು ದೃಷ್ಟಿಕೋನಗಳಿಂದ ಗಮನಿಸಬಹುದಾಗಿದೆ. ಆಯಾ ಪರಂಪರೆಗಳು ಅಂಗೀಕರಿಸುವ ಕೆಲವು ಮೂಲಭೂತ ತತ್ತ್ವಗಳಲ್ಲಿನ ವ್ಯತ್ಯಾಸಗಳು ಆಚರಣೆಯಲ್ಲಿನ ವ್ಯತ್ಯಾಸಗಳು ಹಾಗೂ ಆಯಾ ಪರಂಪರೆಯ ಆಮ್ನಾಯಗಳಿಂದ ರೂಪಗೊಂಡು ಬಂದ ಕಥಾಂಶದೊಳಗಿನ ವ್ಯತ್ಯಾಸಗಳು.

ಅವುಗಳಲ್ಲಿ ಮೊದಲೆರಡು ಅಂಶಗಳಲ್ಲಿ ಕಂಡುಬರುವ ಕೆಲವು ಮುಖ್ಯ ವ್ಯತ್ಯಾಸಗಳನ್ನು ಹೀಗೆ ಗುರುತಿಸಬಹುದಾಗಿದೆ.

**ಕೇವಲಜ್ಞಾನಿಯ ಸ್ವರೂಪ :** ಲೌಕಿಕವಾದ ಯಾವ ಚಟುವಟಿಕೆಗಳನ್ನಾಗಲಿ, ದೈಹಿಕ ಕ್ರಿಯೆಗಳನ್ನಾಗಲಿ (ಉದಾ : ಆಹಾರ ಸೇವನೆ) ಕೇವಲಿಯು ಹೊಂದಿರುವುದಿಲ್ಲವೆಂದು ದಿಗಂಬರ ಪರಂಪರೆಯು ಹೇಳುತ್ತದೆ. ಇದರ ಪ್ರಕಾರ ಈ ಕ್ರಿಯೆಗಳು ಕೇವಲಜ್ಞಾನದ ವಿರೋಧ ಕ್ರಿಯೆಗಳಾಗಿವೆ. ಕೇವಲಿಗಳು ತಾನಾಗಿಯೇ ಉದ್ಭವಿಸುವ ದಿವ್ಯಧ್ವನಿಯ ಮೂಲಕ ಬೋಧಿಸುವರು. ಶ್ವೇತಾಂಬರ ಪರಂಪರೆಯು ಜಿನರನ್ನು ಚಟುವಟಿಕೆಗಳ

ನ್ನೊಳಗೊಂಡೇ ಕೇವಲಜ್ಞಾನವನ್ನು ಅನುಭವಿಸುವವರನ್ನಾಗಿ ಪರಿಗಣಿಸಿದೆ.[೪೪]

**ನಗ್ನತ್ವ** : ದಿಗಂಬರ ಪರಂಪರೆಯು ಸಾಧಕ ಮುನಿಗೆ ನಗ್ನತೆಯ ಸಾಧನೆಯತ್ತ ಹೆಚ್ಚು ಒತ್ತನ್ನು ಕೊಡುತ್ತದೆ. ಲಜ್ಜೆ ಮೊದಲಾದ ಪರೀಷಹಗಳನ್ನು ತ್ಯಜಿಸಿ, ಸಂಪೂರ್ಣ ಅಪರಿಗ್ರಹಿಯಾಗಿ ಮೋಕ್ಷವನ್ನು ಸಾಧಿಸಲು ಇದು ಸಹಕಾರಿಯಾಗಿದೆ. ಮತ್ತು ಕಡ್ಡಾಯ ವಾಗಿ ಪಾಲಿಸಬೇಕಾದ ಆಚರಣೆಯಾಗಿದೆ. ಶ್ವೇತಾಂಬರ ಪರಂಪರೆಯು ಐಚ್ಛಿಕ ರೂಪ ದಲ್ಲಿ ಇದನ್ನು ಪರಿಗಣಿಸುತ್ತದೆ. ಇವರು ವಸ್ತ್ರದ ಕಡೆಗೆ ಅನಾಸಕ್ತಿ ಇರಬೇಕೆಂದು ಹೇಳು ತ್ತಾರೆಯೇ ಹೊರತು ನಗ್ನತ್ವವನ್ನು ಮೋಕ್ಷಸಾಧನೆಗೆ ಬೇಕೇಬೇಕಾದ ಆಚರಣೆಯೆಂದು ಪರಿಗಣಿಸುವುದಿಲ್ಲ.[೪೫]

**ಸ್ತ್ರೀಮುಕ್ತಿವಿಷಯ** : ಮೋಕ್ಷಸಾಧನೆಗೆ ಬೇಕಾದ ವಜ್ರವೃಷಭನಾರಾಚಸಂಹನನ ವನ್ನೊಳಗೊಂಡ ಶರೀರವು (ಪರೀಷಹಗಳನ್ನು ತಾಳಿಕೊಳ್ಳಲು ಯೋಗ್ಯವಾದ ದೃಢವಾದ ಶರೀರ) ಸ್ತ್ರೀಯರಿಗೆ ಇರುವುದಿಲ್ಲವಾಗಿ ಮುಕ್ತಿ ಅವರಿಗೆ ಅಸಾಧ್ಯವೆಂದು ದಿಗಂಬರ ಪರಂಪರೆಯು ಹೇಳುತ್ತದೆ. ಅದಕ್ಕೆ ತದ್ವಿರುದ್ಧವಾಗಿ ಶ್ವೇತಾಂಬರ ಪರಂಪರೆಯು ಸ್ತ್ರೀ ಮುಕ್ತಿಯನ್ನು ಹೇಳಿದೆ. ಹತ್ತೊಂಬತ್ತನೆಯ ತೀರ್ಥಂಕರ ಮಲ್ಲಿಯನ್ನು ಸ್ತ್ರೀಯೆಂದೇ ಪರಿಗಣಿಸಲಾಗಿದೆ. ಅಲ್ಲದೆ ಮರುದೇವಿ ಮೋಕ್ಷಕ್ಕೆ ಸಂದವರಲ್ಲಿ ಮೊದಲಿಗಳು. ಈ ವ್ಯತ್ಯಾಸಗಳು ಮೂಲಭೂತವಾಗಿ ನಗ್ನತ್ವದ ವಿಷಯವಾಗಿ ಬಂದಿರುವ ಅವರ ನಂಬಿಕೆ ಗಳಾಗಿವೆ.[೪೬]

ಈ ಮೇಲಿನ ಮೂಲಭೂತ ಅಂಶಗಳಿಗೆ ಚ್ಯುತಿಯಾಗದಂತೆ ಆಯಾ ಪರಂಪರೆಗಳಲ್ಲಿ ಬೆಳೆದುಬಂದಿರುವ ಪುರಾಣದ ಕಥಾಂಶಗಳು ನಿರೂಪಿತವಾಗಿವೆ.

## ಆದಿತೀರ್ಥಂಕರನ ಚರಿತ್ರೆಯಲ್ಲಿ ಕಂಡುಬರುವ ಕೆಲವು ಕಥಾವ್ಯತ್ಯಾಸಗಳು

ಜಯವರ್ಮ, ಮಹಾಬಲ, ಲಲಿತಾಂಗ, ವಜ್ರಜಂಘ, ಆರ್ಯ, ಶ್ರೀಧರದೇವ, ಸುವಿಧಿ, ಅಚ್ಯುತೇಂದ್ರ, ವಜ್ರನಾಭಿ, ಅಹಮಿಂದ್ರ,- ಇವು ದಿಗಂಬರ ಪರಂಪೆಯಲ್ಲಿ ಬರುವ ಆದಿತೀರ್ಥಂಕರನ ಪೂರ್ವಭವಾವಳಿಗಳು. ಧನ, ಆರ್ಯ, ಮಹಾಬಲ, ಲಲಿ ತಾಂಗ, ವಜ್ರಜಂಘ, ಭೋಗಭೂಮಿಜ, ಸೌಧರ್ಮೇಂದ್ರ, ಜೀವಾನಂದ, ವಜ್ರನಾಭ ಮತ್ತು ಸರ್ವಾರ್ಥಸಿದ್ಧಿಜ—ಇವು ಶ್ವೇತಾಂಬರ ಪರಂಪರೆಯಲ್ಲಿ ಬರುವ ಆದಿತೀರ್ಥಂ ಕರನ ಪೂರ್ವಭವಾವಳಿಗಳು.

ದಿಗಂಬರ ಪರಂಪರೆಯಲ್ಲಿ ಕಂಡುಬರುವ ಜಯವರ್ಮನ ಪಾತ್ರಕ್ಕಿಂತ, ಶ್ವೇತಾಂಬರ ಪರಂಪರೆಯಲ್ಲಿ ಕಂಡು ಬರುವ ಧನನ ಪಾತ್ರ ಮಹತ್ತರವಾಗಿ ಕಂಡುಬರುತ್ತದೆ. ಇಲ್ಲಿ ಬರುವ ಕಥಾಸ್ವರೂಪಗಳೆರಡೂ ತೀರಾ ಭಿನ್ನವಾದವುಗಳು. ಜಯವರ್ಮನು, ಭೋಗಾನು ಭವದ ಆಕಾಂಕ್ಷೆಯ ಬುತ್ತಿಯನ್ನು ಆ ಭವದಲ್ಲಿ ಕಟ್ಟಿಕೊಂಡರೆ, ಧನನು ಆಹಾರವೇ ದೊರಕದ ಅತ್ಯಂತ ವಿಷಮಕಾಲದಲ್ಲಿ ಮುನಿಗಳಿಗೆ ಭಕ್ತಿಪೂರ್ವಕವಾಗಿ ಆಹಾರವನ್ನು ನೀಡಿದ ಪುಣ್ಯಪುರುಷ.

ಅರವಿಂದನಿಗೆ ಕೃತಕ ರಕ್ತದ ಸರೋವರವನ್ನು ಕಟ್ಟಿಸಿಕೊಡುವ ವೃತ್ತಾಂತ ಹಾಗೂ ಆತನು ಕೋಪಗೊಂಡು ಮಗನನ್ನು ಇರಿಯಲು ಹೋಗಿ ಸತ್ತನೆಂಬ ವೃತ್ತಾಂತ ದಿಗಂಬರ

ಪರಂಪರೆಯಲ್ಲಿ ಬರುತ್ತದೆ. ಶ್ವೇತಾಂಬರ ಪರಂಪರೆಯ ಕಥೆಯಲ್ಲಿ ಈ ಅಂಶ ಇಲ್ಲ. ಆತ ವಿನಾಕಾರಣ ಎಲ್ಲರ ಮೇಲೆ ಕ್ರೋಧಗೊಂಡವನಾಗಿ ಕೊನೆಗೆ ಜ್ವರದಿಂದ ಬಳಲಿ ಸಾಯುತ್ತಾನೆ.

ದಿಗಂಬರರ ಪ್ರಕಾರ, ಸ್ವಯಂಪ್ರಭೆಯ ಹಿಂದಿನ ಭವದಲ್ಲಿ ಹುಟ್ಟಿದ ನಿರ್ನಾಮಿಕೆ, ದುರ್ಗಂಧದೇಹವನ್ನುಳ್ಳವಳಾಗಿ ದರಿದ್ರಕುಲದಲ್ಲಿ ಜನಿಸಿ ಅತ್ಯಂತ ಕಷ್ಟಕಾರ್ಪಣ್ಯಗಳಿಗೊಳಗಾದವಳು. ಶ್ವೇತಾಂಬರರಲ್ಲಿ ಈಕೆಯ ದುರ್ಗಂಧದೇಹದ ವಿಚಾರ ಬರುವುದಿಲ್ಲ. ಸ್ವಯಂಪ್ರಭೆಯಾಗಿದ್ದ ಈಕೆ ನಿರ್ನಾಮಿಕೆಯಾಗಿ ದರಿದ್ರಕುಲದಲ್ಲಿ ಜನಿಸಿ ಮತ್ತೆ ಸ್ವಯಂಪ್ರಭೆಯಾಗಿ ಲಲಿತಾಂಗನನ್ನು ಸೇರಿಕೊಳ್ಳುತ್ತಾಳೆ.

ದಿಗಂಬರರ ಪ್ರಕಾರ ವಜ್ರಜಂಘ-ಶ್ರೀಮತಿಯರ ೪೯ ಅವಳಿ ಮಕ್ಕಳೂ ಉತ್ತಮ ಸಂಸ್ಕಾರವಂತರು; ತಮ್ಮ ತಾತನೊಂದಿಗೇ ದೀಕ್ಷಾಬದ್ಧರಾಗಿ ತಂದೆತಾಯಿಗಳಿಗಿಂತ ಮುನ್ನವೇ ಮೋಕ್ಷಾರ್ಥಿಗಳಾಗಿ ಗೃಹಸ್ಥಧರ್ಮವನ್ನು ತ್ಯಜಿಸಿದರು. ಆದರೆ ಶ್ವೇತಾಂಬರ ಪರಂಪರೆಯು ವಜ್ರಜಂಘ-ಶ್ರೀಮತಿಯರ ಏಕೈಕ ಪುತ್ರನು ರಾಜ್ಯಾಕಾಂಕ್ಷೆಯಿಂದ ತಂದೆತಾಯಿಗಳನ್ನು ಧೂಪದ ಹೊಗೆ ಹಾಕಿ ಕೊಂದನೆಂದು ಹೇಳುತ್ತದೆ.

ಮರುದೇವಿ ಕಂಡದ್ದು ಹದಿನಾಲ್ಕು ಸ್ವಪ್ನಗಳೆಂದು ಶ್ವೇತಾಂಬರ ಪರಂಪರೆಯ ಕಥೆಯು ನಿರೂಪಿಸುತ್ತದೆ. ದಿಗಂಬರ ಪರಂಪರೆಯಲ್ಲಿ ಬರುವ ಮತ್ಸ್ಯಯುಗಳ ಮತ್ತು ಸಿಂಹಾಸನವನ್ನು ಬಿಟ್ಟು ಉಳಿದುವನ್ನು ಅದು ನಿರೂಪಿಸುತ್ತದೆ.

ದಿಗಂಬರ ಪರಂಪರೆಯು, ಶ್ರೇಯಾಂಸನು ನೀಡಿದ ಇಕ್ಷುರಸವನ್ನು ವೃಷಭನು ಸ್ವೀಕರಿಸಿದುದಕ್ಕಾಗಿ ಇಕ್ಷ್ವಾಕುವಂಶದ ಪ್ರತಿಷ್ಠೆಯಾಯಿತೆಂದು ಹೇಳುತ್ತದೆ. ಸೌಧರ್ಮೇಂದ್ರನು ವಂಶಾವಳಿಯನ್ನು ಸ್ಥಾಪಿಸಲೆಂದೇ ಮಗುವಿನ ಕೈಗೆ ಕಬ್ಬಿನ ಜಲ್ಲೆಯನ್ನಿತ್ತು ಇಕ್ಷ್ವಾಕು ವಂಶದ ಪ್ರತಿಷ್ಠೆಯನ್ನು ಮಾಡಿದನೆಂದು ಶ್ವೇತಾಂಬರ ಪರಂಪರೆಯು ಹೇಳುತ್ತದೆ.

ದಿಗಂಬರ ಪರಂಪರೆಯ ಪ್ರಕಾರ ವೃಷಭನು ಮದುವೆಯಾದುದು ಕಚ್ಛ ಮಹಾಕಚ್ಛರ ತಂಗಿಯರಾದ ಯಶಸ್ವತಿ ಸುನಂದೆಯರನ್ನು. ಶ್ವೇತಾಂಬರ ಪರಂಪರೆಯ ಪ್ರಕಾರ ವೃಷಭನು ಅವಳಿಗಳಲ್ಲಿ ಒಂದಾಗಿ ಹುಟ್ಟಿದನು. ಈಕೆಯನ್ನು (ನಂದಾ) ಹಾಗೂ ಬೇರೆ ಅವಳಿಗಳಲ್ಲಿ ಒಂದಾದ, ಅನಾಥವಾಗಿದ್ದ ಸುನಂದಾಳನ್ನು ಈತನು ಮದುವೆಯಾದನು. ಅಲ್ಲದೆ ಭರತ ಬ್ರಾಹ್ಮಿಯರೂ, ಬಾಹುಬಲಿ ಸುಂದರಿಯರೂ ಅವಳಿ ಮಕ್ಕಳು. ಅವರನ್ನು ಅವರ ಬಲಸಹೋದರರಿಗೆ ಮದುವೆ ಮಾಡಲಾಗಿತ್ತು.

ದಿಗಂಬರ ಪರಂಪರೆಯ ಪ್ರಕಾರ ವೃಷಭನಿಗೆ ವೈರಾಗ್ಯವು ನೀಲಾಂಜನೆಯ ನೃತ್ಯವನ್ನು ನೋಡಿ ಉಂಟಾದರೆ, ಶ್ವೇತಾಂಬರ ಪರಂಪರೆಯ ಪ್ರಕಾರ ವಸಂತೋತ್ಸವವನ್ನು ನೋಡಿ ವೈರಾಗ್ಯವುಂಟಾಗುತ್ತದೆ.

ವಸ್ತ್ರಾಭರಣಗಳನ್ನು ತ್ಯಜಿಸಿದ ಸ್ವಾಮಿಯ ಮೇಲೆ ದೇವೇಂದ್ರನು ದೇವದೂಷ್ಯವನ್ನು ಹಾಕುವ ವಿಚಾರವಾಗಲಿ ತಲೆಗೂದಲಿನ ಒಂದು ಭಾಗವನ್ನು ಹಾಗೆಯೇ ಬಿಡಲು ದೇವೇಂದ್ರನು ಸೂಚಿಸಿದ ವಿಷಯವಾಗಲಿ ದಿಗಂಬರ ಪರಂಪರೆಯಲ್ಲಿ ಕಂಡುಬರುವುದಿಲ್ಲ.

ದಿಗಂಬರ ಪರಂಪರೆಯ ಪ್ರಕಾರ, ತೀರ್ಥಂಕರರ ಉಪದೇಶ ಗಣಧರರ ವ್ಯಾಖ್ಯಾನದ

ಮೂಲಕ ಜೀವಕೋಟಿಗಳಿಗೆ ತಲುಪುತ್ತದೆ. ಆದರೆ ಶ್ವೇತಾಂಬರ ಪರಂಪರೆಯ ಪ್ರಕಾರ ಗಣಧರರ ವ್ಯಾಖ್ಯಾನದ ಆವಶ್ಯಕತೆಯಿಲ್ಲ. ಗಣಧರರು ತಮಗೆ ಆದಿನಾಥನು ಉಪದೇಶಿಸಿದ ವಿಷಯಗಳಿಗೆ ಅನುಸಾರವಾಗಿ ಹನ್ನೆರಡು ಅಂಗಶಾಸ್ತ್ರಗಳನ್ನು ರಚಿಸಿದರೆಂದು ಬರುತ್ತದೆ. ಅಲ್ಲದೆ ಈ ಪರಂಪರೆಯ ಪ್ರಕಾರ ಒಂದೇ ಸಮವಸರಣ ಮಂಟಪ ಎಲ್ಲೆಡೆಗೂ ಹೋಗುವುದಿಲ್ಲ. ಆದಿನಾಥ ಉಪದೇಶಿಸಿದ ಕಡೆಯಲ್ಲೆಲ್ಲ ಬೇರೆ ಬೇರೆ ಮಂಟಪ ಸಿದ್ಧವಾಗುತ್ತದೆ.

ದಿಗಂಬರ ಪರಂಪರೆಯ ಪ್ರಕಾರ ಬಾಹುಬಲಿಗೆ ಅಣ್ಣನ ನೆಲದ ಮೇಲೆ ನಿಂತಿರುವೆನೆಂಬ ಕಾರಣದಿಂದ ಮಾನಕಷಾಯವುಂಟಾಯಿತು. ಶ್ವೇತಾಂಬರ ಪರಂಪರೆ ಪ್ರಕಾರ ಸಮವಸರಣಕ್ಕೆ ಹೋದರೆ ತನ್ನ ತಮ್ಮಂದಿರಿಗಿಂತ ಕಡಿಮೆ ದರ್ಜೆಯ ಮುನಿಯಾಗ ಬೇಕಾಗುತ್ತದೆಂದುಕೊಂಡ ಬಾಹುಬಲಿ ಮಾನಕಷಾಯವುಳ್ಳವನಾಗಿ ತಪಸ್ಸಿಗೆ ನಿಂತನು. ದಿಗಂಬರ ಪರಂಪರೆಯ ಪ್ರಕಾರ ನರೆಗೂದಲನ್ನು ನೋಡಿ ಭರತ ವೈರಾಗ್ಯ ಹೊಂದಿದರೆ, ಶ್ವೇತಾಂಬರ ಪರಂಪರೆಯ ಪ್ರಕಾರ ಆತನು ನಿರಾಭರಣವಾಗಿದ್ದ ತನ್ನ ಕೈಬೆರಳನ್ನು ನೋಡಿ ವೈರಾಗ್ಯಪರನಾದನು. ಹಾಗೆ ವೈರಾಗ್ಯವನ್ನು ಪಡೆದ ಭರತ ಕ್ಷಪಕ ಶ್ರೇಣಿಯನ್ನು ಏರಿ ಕೇವಲಿಯಾದನು. ಅನಂತರ ದೇವತೆಗಳ ಕೋರಿಕೆಯ ಪ್ರಕಾರ ದೀಕ್ಷಿತನಾದನು. ದಿಗಂಬರ ಪರಂಪರೆಯ ಪ್ರಕಾರ ದೀಕ್ಷಿತನಾದ ಹೊರತು ಕೇವಲಜ್ಞಾನವೆಂಬುದಿಲ್ಲ.

ಈ ಮೇಲಿನ ಕೆಲವು ವ್ಯತ್ಯಾಸಗಳ ಜೊತೆಗೆ ವ್ಯಕ್ತಿ ಹಾಗೂ ಸ್ಥಳನಾಮಗಳ ನಿರ್ದೇಶನದಲ್ಲಿಯೂ ಎರಡೂ ಪರಂಪರೆಗಳಲ್ಲಿ ವ್ಯತ್ಯಾಸಗಳು ಕಂಡುಬರುತ್ತವೆ.

## ಟಿಪ್ಪಣಿಗಳು

೧. H.D.Velankar, Jinarathnakosha, Vol. I, Poona 1944. P. 216.

೨. ಮಿರ್ಜಿ ಅಣ್ಣಾರಾಯ (ಅನು) 'ಭಾರತೀಯ ಸಂಸ್ಕೃತಿಗೆ ಜೈನಧರ್ಮದ ಕೊಡುಗೆ' (ಮೂಲ) ಹೀರಾಲಾಲ್ ಜೈನ್, ೧೯೭೧, ಪು. ೨೧೧.

೩. ಖುಶಾಲ್‌ಚಂದ್ ಗೋರಾವಾಲ (ಸಂ. ಮತ್ತು ಹಿಂದಿ ಅನು.) ಪೀಠಿಕೆ, ಎಚ್. ಎಲ್. ಜೈನ್ ಮತ್ತು ಆ. ನೇ. ಉಪಾಧ್ಯೆ, 'ಮಹಾಕವಿ ಧನಂಜಯ ವಿರಚಿತ ದ್ವಿಸಂಧಾನ ಕಾವ್ಯಂ', ಮುನ್ನುಡಿ.

೪. ನಾಥೂರಾಮ್ ಪ್ರೇಮೀ, ಜೈನ್ ಸಾಹಿತ್ಯ ಔರ್ ಇತಿಹಾಸ್, ಹಿಂದೀ ಗ್ರಂಥ ರತ್ನಾಕರ್, ಬೊಂಬಾಯಿ, ೧೯೫೬, ಪು. ೪೯೧.

ನಾಭೇಯ ನೇಮಿಕಾವ್ಯವು ಕಾವ್ಯಮಾಲಾ ಸೀರೀಸ್, ಬೊಂಬಾಯಿ, ಇವರಿಂದ ಅಚ್ಚಾಗಿದೆ.

೫. ಎಚ್. ಎಲ್. ಜೈನ್ ಮತ್ತು ಆ. ನೇ. ಉಪಾಧ್ಯೆ, (ಪ್ರ. ಸಂ.) ಪನ್ನಾಲಾಲ್ ಜೈನ್ (ಸಂ. ಅನು.), 'ಪುರುದೇವ ಚಂಪೂ' ೧೯೭೨, ಪ್ರಸ್ತಾವನೆ.

೬. ಅದೇ.

೭. ಅದೇ.

೮. H. D. Velankar, ಪೂರ್ವೋಕ್ತ.

೯. ಅದೇ.

೧೦. ಅದೇ.

೧೧. ಅದೇ.

೧೨. ಅದೇ.

೧೩. ಅದೇ.

೧೪. ಅದೇ.

೧೫. ಸ್ವಸ್ತಿಶ್ರೀ ನೇಮಿಸಾಗರ ಸ್ವಾಮಿಗಳವರ ಅಭಿನಂದನ ಗ್ರಂಥ. ಸಂ. ಸ್ವಸ್ತಿ ಶ್ರೀ ಲಕ್ಷ್ಮೀಸೇನ ಸ್ವಾಮಿಗಳು, ೧೯೫೩, 'ಗೀತವೀತರಾಗ' ಲೇ. ಡಿ. ಪದ್ಮನಾಭಶರ್ಮ, ಭುವನಹಳ್ಳಿ. ಪು. ೧೬೯-೧೭೬.

೧೬. ಅದೇ.

೧೭. ಅದೇ.

೧೮. ಅದೇ.

೧೯. ಚಾವುಂಡರಾಯ ಪುರಾಣ, ಆದಿಪುರಾಣ ಭಾಗ, ಪದ್ಯ ೨೪.

೨೦. ಅದೇ.

೨೧. ಟಿ. ವಿ. ವೆಂಕಟಾಚಲಶಾಸ್ತ್ರೀ, 'ಕನ್ನಡ ನೇಮಿನಾಥ ಪುರಾಣಗಳ ತೌಲನಿಕ ಅಧ್ಯಯನ', ಮೈಸೂರು, ೧೯೭೩, ಪು. ೩೬-೩೭.

೨೨. ನಾಥೂರಾಮ್ ಪ್ರೇಮೀ, ಪೂರ್ವೋಕ್ತ, ಪು. ೧೩೩.

೨೩. ಶಾಂತಿರಾಜಶಾಸ್ತ್ರಿ (ಸಂ.) ಮಹಾಪುರಾಣ ಪ್ರಶಸ್ತಿ ಶ್ಲೋಕಗಳು.

೨೪. ಶಾಂತಿರಾಜಶಾಸ್ತ್ರಿ (ಸಂ.) ಮಹಾಪುರಾಣ ೧. ಮುನ್ನುಡಿ.

೨೫. ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ, ಭಾಗ ೨, ಮೈಸೂರು ೧೯೭೫, ಪು. ೨೪೩.

೨೬. ನಾಥೂರಾಮ್ ಪ್ರೇಮೀ, ಪೂರ್ವೋಕ್ತ, ಪು. ೧೩೯.

೨೭. ಗುರುದೇವ, ಸಂ. ೩೨, ಸಂ. ೬೬, ಪು. ೩೮೪.

೨೮. ನಾಥೂರಾಮ್ ಪ್ರೇಮೀ, ಪೂರ್ವೋಕ್ತ, ಪು. ೩೧೪-೩೧೫.

೨೯. Winternitz, G. Buhler's The life of Hemachandra, Foreword.

೩೦. ಅದೇ.

೩೧. ಮಿರ್ಜಿ ಅಣ್ಣಾರಾಯ, ಪೂರ್ವೋಕ್ತ, ಪು. ೨೧೧.

೩೨. ಅದೇ.

೩೩. ಅದೇ.

೩೪. H.D. Velankar, ಪೂರ್ವೋಕ್ತ.

೩೫. ಅದೇ.

೩೬. ಅದೇ.

೩೭. ಅದೇ.

೩೮. ಅದೇ.

೩೯. ಮಿರ್ಜಿ ಅಣ್ಣಾರಾಯ, ಪೂರ್ವೋಕ್ತ, ಪು. ೨೧೧.

೪೦. ಅದೇ.

೪೧. ಈ ಕೃತಿಯ ಪ್ರಕಾಶಕರು, ಶ್ರೀ ಆತ್ಮಾನಂದ ಜೈನಸಭಾ, ಕೇರ್ ಆಫ್ ಶ್ರೀ ಗೋಡೀಜೀ ಜೈನ್ ಮಂದಿರ, ಪಾಯಧುತೀ, ಬೊಂಬಾಯಿ ೩.

೪೨. ಮಿರ್ಜಿ ಅಣ್ಣಾರಾಯ, ಪೂರ್ವೋಕ್ತ, ಪು. ೨೨೦.

೪೩. ಜಯಕುಮಾರ ಸುಲೋಚನೆಯರ ಸ್ವಯಂವರ, ಅವರ ಪೂರ್ವಭವಾವಳಿಗಳ ವಿವರಗಳು ಇಲ್ಲಿ ಬರುತ್ತವೆ.

೪೪. Padmanabh S. Jain, 'The Jain Path of Purification', London, 1977, ಪು. ೩೯.

೪೫. ಅದೇ.

೪೬. ಅದೇ, ಪು. ೪೦.

## ಅಧ್ಯಾಯ ೪

# ಪ್ರಾಕೃತ ಆದಿಪುರಾಣಗಳು : ಕರ್ತೃ, ಕೃತಿ-ಪರಿಚಯ

ಪ್ರಾಕೃತ ಭಾಷೆಯಲ್ಲಿ ಆದಿತೀರ್ಥಂಕರನ ಚರಿತ್ರೆಯ ಹರವು ಸ್ವತಂತ್ರ ಕೃತಿಗಳಲ್ಲಿ, ಮಹಾಪುರಾಣಗಳಲ್ಲಿ, ಶ್ವೇತಾಂಬರ ಆಗಮಗ್ರಂಥಗಳಲ್ಲಿ ಮತ್ತು ಇತರ ಕೃತಿಗಳಲ್ಲಿ ಕೆಲವೆಡೆ ವಿಸ್ತೃತರೂಪದಲ್ಲಿಯೂ ಮತ್ತೆ ಕೆಲವೆಡೆ ಸಂಕ್ಷೇಪರೂಪದಲ್ಲಿಯೂ ವ್ಯಾಪಿಸಿರುವುದು ಕಂಡುಬರುತ್ತದೆ.

### ಪ್ರಾಕೃತ ಆದಿತೀರ್ಥಂಕರ ಚರಿತೆಗಳು

೧. **ಆದಿಜಿನಸ್ತುತಿ** : (ಕಾಲ ?) (ಕರ್ತೃ ?) ೫೧ ಗಾಹೆಗಳಿವೆ.

೨. **ಆದಿನಾಥಚರಿತ್ರ** : ಕಾಲ-ಕ್ರಿ. ಶ. ೧೧೦೩. ಕರ್ತೃ-ವರ್ಧಮಾನ. ಈತನು ಅಭಯದೇವಸೂರಿಯ ಶಿಷ್ಯ. ಐದು ಅಧ್ಯಾಯಗಳಲ್ಲಿ ಪ್ರಥಮ ತೀರ್ಥಂಕರನ ಜೀವನವನ್ನು ವಿವರಿಸಲಾಗಿದೆ. ೧೧,೦೦೦ ಶ್ಲೋಕಗಳಿವೆ.

೩. **ಆದಿನಾಥ ದೇಶನೋದ್ಧಾರ** : (ಕಾಲ ?) (ಕರ್ತೃ ?) (ಪ್ರಾಕೃತ) ೮೮ ಗಾಹೆಗಳಿವೆ.

೪. **ಆದಿನಾಥ ಫಾಗ್** : (ಕಾಲ ?) ಕರ್ತೃ-ಪುಷ್ಪದಂತ (ಅಪಭ್ರಂಶ).

೫. **ಆದಿನಾಥ ಫಾಗ್** : (ಕಾಲ?) ಕರ್ತೃ-ಶ್ರೀದತ್ತ (ಪ್ರಾಕೃತ).

೬. **ಆದಿಪುರಾಣ** : (ಕಾಲ?) ಕರ್ತೃ-ರಯಧು (ಅಪಭ್ರಂಶ). ಮೇಘೇಶ್ವರ ಚರಿತ್ರವೆಂದೂ ಇದನ್ನು ಕರೆಯಲಾಗಿದೆ. ಇದು ಖೇಮರಾಜನಿಗಾಗಿ ರಚಿಸಿದ ಕೃತಿ. ಸ್ವಯಂಭೂ, ಚತುರ್ಮುಖ ಮತ್ತು ಪುಷ್ಪದಂತರನ್ನು ಇದರಲ್ಲಿ ಉಲ್ಲೇಖಿಸಲಾಗಿದೆ.

೭. **ಋಷಭಜಿನಸ್ತುತಿ** : (ಕಾಲ ?) (ಕರ್ತೃ ?) (ಅಪಭ್ರಂಶ).

೮. **ಋಷಭದೇವ ಚರಿತ್ರ** : (ಕಾಲ ?) ಕರ್ತೃ-ಭವನತುಂಗ (ಪ್ರಾಕೃತ). ೩೨೩ ಗಾಥೆಗಳಿವೆ. ಧರ್ಮೋಪದೇಶ ಶತಕವೆಂಬ ಹೆಸರೂ ಇದಕ್ಕಿದೆ.[೧]

೯. **ಋಷಭ ಪಂಚಾಶಿಕಾ** : (ಕಾಲ ?) ಕರ್ತೃ-ಧನಪಾಲಕವಿ. ಈತ ಶೋಭನಮುನಿಯ ತಮ್ಮ. ಪ್ರಾಕೃತ ಭಾಷೆಯಲ್ಲಿರುವ ಈ ಕೃತಿಯಲ್ಲಿ ಐವತ್ತು ಪದ್ಯಗಳಿವೆ. ಈ ಕೃತಿಯ ಮೇಲೆ ಪ್ರಭಾನಂದನ ಟೀಕೆ, ನೇಮಿಚಂದ್ರಗಣಿಯ ವಿವರಣೆಗಳಿವೆ. ಮಹಾಮೇರುಗಣಿ, ಧರ್ಮಶೇಖರ ಇವರು ಅವಚೂರ್ಣಿಗಳನ್ನು ಬರೆದಿದ್ದಾರೆ.[೨]

'ಋಷಭಪಂಚಾಶಿಕಾ'ದಲ್ಲಿ ಪ್ರಥಮ ತೀರ್ಥಂಕರರ ಜೀವನಕ್ಕೆ ಸಂಬಂಧಿಸಿದ ಉಲ್ಲೇಖಗಳು ಲಭಿಸುತ್ತವೆ. ಈ ಸ್ತುತಿಯು ಕಲಾಯುಕ್ತವೂ ಕಲ್ಪನಾಪೂರ್ಣವೂ ಆಗಿದೆ. ಇದರಲ್ಲಿ ಅಲಂಕಾರಗಳ ಒಳ್ಳೆಯ ಮಿಂಚಿದೆ. ಕವಿಯ ಶಬ್ದಗಳಲ್ಲಿ ಜೀವನವೊಂದು ಮಹಾಸಾಗರ. ಅದರಲ್ಲಿ ಋಷಭ ಭಗವಾನನೇ ಒಂದು ನೌಕೆ. ಜೀವನವು ಒಂದು ಕಳ್ಳಕಾಕರು ವ್ಯಾಪಿಸಿದ ಒಂದು ಅರಣ್ಯ. ಅದರಲ್ಲಿ ಋಷಭನೇ ಒಬ್ಬ ರಕ್ಷಕ. ಜೀವನವು ಮಿಥ್ಯಾಮಯವಾದ ಒಂದು ಇರುಳು. ಅದರಲ್ಲಿ ಋಷಭನೇ ಉದಯೋನ್ಮುಖ ಸೂರ್ಯ. ಜೀವನವು ಒಂದು ರಂಗಭೂಮಿ. ಇದರಲ್ಲಿ ಪ್ರತಿಯೊಂದು ಪಾತ್ರವೂ ಕೊನೆಯಲ್ಲಿ

ಪ್ರಸ್ಥಾನಗೈಯಲೇ ಬೇಕು.[೩]

೧೦. **ಋಷಭಸ್ತೋತ್ರ** : (ಕಾಲ ?) ಕರ್ತೃ–ಪದ್ಮನಂದಿನ್ (ಪ್ರಾಕೃತ). ೭೦ ಗಾಹೆಗಳಿವೆ.[೪]

೧೧. **ಋಷಭಾದಿ ಪಂಚತೀರ್ಥ ಲಘುಚರಿತ್ರ** : (ಕಾಲ ?) ಕರ್ತೃ–ಮೇರುತುಂಗ.[೫]

ಮೇಲೆ ಹೇಳಿದ ಕೃತಿಗಳೇ ಅಲ್ಲದೆ, ಭಾಷೆಯೇ ಅನುಮಾನಾಸ್ಪದವಾಗಿರುವ ಕೆಲವು ರಚನೆಗಳಿವೆ. ವಿನಯಚಂದ್ರನ (ಕ್ರಿ. ಶ. ೧೪೧೭) 'ಆದಿನಾಥಚರಿತ್ರ', ಮುನಿಸುಂದರನ 'ಆದಿನಾಥದೇಶನಾ', ಸಕಲಕೀರ್ತಿಯ 'ಆದಿನಾಥಪುರಾಣ', ಚಂದ್ರಕೀರ್ತಿಯ 'ಆದಿನಾಥ ಪುರಾಣ' ಅಥವಾ 'ಋಷಭದೇವ ಪುರಾಣ', ಶಾಂತಿದಾಸನ 'ಆದಿನಾಥಪುರಾಣ', ವಿನಯ ಚಂದ್ರನ 'ಆದೀಶ್ವರಚರಿತ್ರ', ಮುನಿಸುಂದರ ಸೂರಿಯ ಶಿಷ್ಯನಾದ ಸೋಮಮಂಡನ ಗಣಿಯ 'ಋಷಭ ಪಂಚಾಶಿಕಾ' ಗ್ರಂಥಗಳೂ ಕಂಡುಬರುತ್ತವೆ.[೬]

ಕಾಲ, ಭಾಷೆಗಳು ಅನುಮಾನಾಸ್ಪದವಾಗಿರುವ ಇನ್ನು ಕೆಲವು ಆದಿಪುರಾಣ ಕೃತಿಗಳೂ ಕಂಡುಬರುತ್ತವೆ. ಅವುಗಳು 'ಋಷಭದೇವಚರಿತ್ರ', 'ಋಷಭದೇವಧವಲ ಪ್ರಬಂಧ', 'ಋಷಭೋಲ್ಲಾಸ' ಮೊದಲಾದ ಕಾವ್ಯಗಳಾಗಿವೆ.[೭]

## ಪ್ರಾಕೃತ ಮಹಾಪುರಾಣಗಳು : (ತ್ರಿಷಷ್ಠಿಶಲಾಕಾಪುರುಷಚರಿತ್ರೆಗಳು)

೧. **ಮಹಾಪುರುಷಚರಿತ** : (ಚಉಪ್ಪನ್ನಮಹಾಪುರಿಸಚರಿಯಂ) (ಕ್ರಿ. ಶ. ೮೬೯) ನಿರ್ವೃತಿಕುಲದ ಮಾನದೇವಸೂರಿಯ ಶಿಷ್ಯನಾದ ಶೀಲಾಂಕನು ಈ ಗ್ರಂಥದ ಕರ್ತೃ. ಗ್ರಂಥಕಾರನು ತನ್ನ ಪರಿಚಯವನ್ನು ಮೂರು ಹೆಸರುಗಳಲ್ಲಿ ನೀಡಿದ್ದಾನೆ. ಸೀಲಂಕ (ಶೀಲಾಂಕ), ವಿಮಲಮತಿ ಮತ್ತು ಸೀಲಾಯರಿಯ (ಶೀಲಾಚಾರ್ಯ).

ಈ ಗ್ರಂಥದ ವಸ್ತು ಮುಖ್ಯವಾಗಿ ಧರ್ಮಕಥೆ. ಅಲ್ಲದೆ ತನ್ನ ಸಂಪ್ರದಾಯದ ಪ್ರಧಾನ ಪುರುಷರ ಜೀವನಚರಿತ್ರೆಯ ಸಂಕಲನವೂ ಪ್ರಸ್ತುತ ಗ್ರಂಥದ ಮುಖ್ಯ ವಿಷಯವಾಗಿದೆ. ವರ್ತಮಾನ ಅವಸರ್ಪಿಣೀ ಕಾಲದ ೫೪ ಉತ್ತಮಪುರುಷರ (ಮಹಾಪುರುಷರ) ಚರಿತ್ರೆ ವರ್ಣಿತವಾಗಿದೆ. ಸಮವಾಯಾಂಗ ಸೂತ್ರವನ್ನು ಅನುಸರಿಸಿ ಇಲ್ಲಿ ೫೪ ಪುರುಷರನ್ನು ಮಹಾಪುರುಷರೆಂದು ಹೇಳಲಾಗಿದೆ. ೯ ಮಂದಿ ಪ್ರತಿವಾಸುದೇವರನ್ನು ಮಹಾಪುರುಷ ರೆಂದು ಪರಿಗಣಿಸಿಲ್ಲ. ಶಾಂತಿನಾಥ, ಕುಂತುನಾಥ, ಮತ್ತು ಆರನಾಥ ಈ ಮೂವರು ತೀರ್ಥಂಕರರೂ ಆಗಿದ್ದರು, ಚಕ್ರವರ್ತಿಗಳೂ ಆಗಿದ್ದರು. ಹೀಗಾಗಿ, ೫೧ ಮಹಾಪುರುಷರ ಚರಿತ್ರೆ ಇಲ್ಲಿ ವರ್ಣಿತವಾಗಿದೆ. ಆದರೂ ಕವಿ ಅವುಗಳ ಗಣನೆಯನ್ನು ಪ್ರತ್ಯೇಕವಾಗಿಯೇ ತೆಗೆದುಕೊಂಡಿದ್ದಾನೆ. ಪ್ರತಿ ಮಹಾಪುರುಷರ ಚರಿತ್ರೆಯ ಆರಂಭದಲ್ಲೂ ಸ್ತುತಿರೂಪದ ಗಾಹೆಯನ್ನು ಹೇಳಿ ಒಟ್ಟು ೫೪ ಅಧ್ಯಾಯಗಳಲ್ಲಿ ಮಹಾಪುರಾಣವನ್ನು ರಚಿಸಿದ್ದಾನೆ. ಕೆಲವು ಅಧ್ಯಾಯಗಳು ಕೇವಲ ಟಿಪ್ಪಣಿರೂಪದಲ್ಲಿ ಕಂಡುಬರುತ್ತವೆ. ಉದಾ : 'ಮಹಾಪಉಮ ಚಕ್ಕವಟ್ಟಿಚರಿಯಂ', 'ದತ್ತವಾಸುದೇವ-ನಂದಿಮಿತ್ತ ಬಲದೇವಾಣ ಚರಿಯಂ'— ಇತ್ಯಾದಿ.

ಪ್ರತಿ ತೀರ್ಥಂಕರರ ಚರಿತದಲ್ಲಿಯೂ ತೀರ್ಥಂಕರರ ಜೀವಿತಕಾಲ, ಹೆಸರು, ಎತ್ತರ ಈ ಮೊದಲಾದ ವಿವರಗಳು ಇವೆ. ತೀರ್ಥಂಕರರ ಆಧ್ಯಾತ್ಮಿಕ ಜೀವನದ ರೀತಿಯು

ಪೀಠಿಕಾರೂಪದಲ್ಲಿ ಗಾಹೆಯ ಮೂಲಕ ಬರುತ್ತದೆ.

ಗ್ರಂಥರಚನೆಯು ಗದ್ಯಪದ್ಯಾತ್ಮಕವಾಗಿದೆ. ಪದ್ಯಭಾಗದಲ್ಲಿ ಸುಭಾಷಿತಗಳೇ ಅಲ್ಲದೆ ಕಥಾಪ್ರಸಂಗಗಳೂ ಬರುತ್ತವೆ. ಅಧಿಕಾಂಶ ಪದ್ಯಭಾಗವು ಆರ್ಯಾಛಂದದಲ್ಲಿದೆ. ಆರ್ಯೆಯ ವಿವಿಧ ಪ್ರಕಾರಗಳು ಹಾಗೂ ದಂಡಕಾದಿ ವಿಭಿನ್ನ ಛಂದಗಳು ಕಂಡುಬರುತ್ತವೆ. ಇದರಲ್ಲಿ ಗದ್ಯಪ್ರಯೋಗವಿದ್ದರೂ ಅಲ್ಲಲ್ಲಿಯೇ ಪದ್ಯಗಂಧಿಯಾದ ಗದ್ಯವು ಕಂಡುಬರುತ್ತದೆ.[೮]

ಈ ಗ್ರಂಥದಲ್ಲಿ ಅಡಕವಾಗಿರುವ 'ವಿಬುಧಾನಂದ ನಾಟಕ' ಎಂಬುದು ಸಂಸ್ಕೃತದಲ್ಲಿದೆ. ಹೀಗೆ ನಾಟಕವೊಂದು ಕೃತಿಯ ಅಂಗವಾಗಿ ಸೇರಿಕೊಂಡು ಬರುವುದು ಪ್ರಾಚೀನ ಸಾಹಿತ್ಯದಲ್ಲಿಯೇ ಅತ್ಯಪೂರ್ವವಾದುದು.[೯]

ಶೀಲಾಂಕನ ಚಉಪ್ಪನ್ನಮಹಾಪುರಿಸಚರಿಯವು ಉತ್ತರಕಾಲೀನ ಕವಿಗಳ ಮೇಲೆ ಸಾಕಷ್ಟು ಪ್ರಭಾವ ಬೀರಿರುವುದು ಕಂಡುಬರುತ್ತದೆ. ಕ್ರಿ. ಶ. ೧೧೧೬ ರಲ್ಲಿ ರಚಿತವಾಗಿರುವ ವರ್ಧಮಾನ ಕವಿಯ ಪ್ರಾಕೃತ'ವೃಷಭದೇವಚರಿತ', ಕ್ರಿ. ಶ. ೧೨ನೆಯ ಶತಮಾನದ ಭದ್ರೇಶ್ವರ ಕವಿಯ 'ಕಹಾವಲಿ' ಮೊದಲಾದ ಗ್ರಂಥಗಳು ಇದಕ್ಕೆ ಉದಾಹರಣೆಗಳಾಗಿವೆ. ಮೊದಮೊದಲಲ್ಲಿ ಪೀಟರ್‌ಸನ್, ಡಬ್ಲ್ಯೂ. ಶೂಬ್ರಿಂಗ್, ಜಾಕೋಬಿ, ವಿಂಟರ್ನಿಡ್ಜ್, ಬನಾರಸೀದಾಸ್ ಜೈನ್ ಮೊದಲಾದ ವಿದ್ವಾಂಸರು ಶೀಲಾಂಕನ ಚಉಪ್ಪನ್ನಮಹಾಪುರಿಸಚರಿಯವನ್ನು ಹೇಮಚಂದ್ರನ ತ್ರಿಷಷ್ಟಿ ಶಲಾಕಾಪುರುಷಚರಿತದ ಮೂಲ ಆಕರವನ್ನಾಗಿ ಪರಿಗಣಿಸಿದ್ದರು. ಆದರೆ, ಎಲ್. ಆಲ್ಸ್ ಡೋರ್ಫ್‌ರವರು ಮೇಲಿನ ಅಭಿಪ್ರಾಯವನ್ನು ಸ್ಪಷ್ಟ ಆಧಾರಗಳ ಮೂಲಕ ಮಾರ್ಪಡಿಸಿದರು.[೧೦]

ಜಿನಸೇನಾಚಾರ್ಯರು ಮಹಾಪುರಾಣವನ್ನು ರಚಿಸಹೊರಟರೂ ಪೂರ್ಣಗೊಳಿಸಲಾಗಲಿಲ್ಲ. ಆ ಕಾರ್ಯವನ್ನು ಮಾಡಿದವರು ಆಚಾರ್ಯರ ಶಿಷ್ಯರಾದ, ಶೀಲಾಚಾರ್ಯನ ಸಮಕಾಲೀನರಾದ ಗುಣಭದ್ರಾಚಾರ್ಯರು. ಹೀಗಾಗಿ ಏಕಕರ್ತೃಕ ಮಹಾಪುರಾಣದ ಸಂಪೂರ್ಣಗ್ರಂಥಗಳಲ್ಲಿ ಶೀಲಾಂಕನ ಚಉಪ್ಪನ್ನಮಹಾಪುರಿಸಚರಿಯವೇ ಮೊದಲನೆಯದಾಗಿದೆ.

'ರಿಸಹಸಾಮಿ-ಭರಹಚಕ್ಕವಟ್ಟಿಚರಿಯಂ' ಅಧ್ಯಾಯವು ವಿಮಲವಾಹನ ಕುಲಕರನ ಪೂರ್ವಭವ ಕಥೆಯಿಂದ ಪ್ರಾರಂಭಗೊಳ್ಳುತ್ತದೆ. ಋಷಭದೇವನು ಪೂರ್ವಭವಗಳಲ್ಲಿ ಧನ, ಭೋಗಭೂಮಿಜ, ಸೌಧರ್ಮದೇವ, ಮಹಾಬಲ, ಲಲಿತಾಂಗದೇವ, ವಜ್ರಜಂಘ, ಉತ್ತರಕುರುಭೂಮಿಜ, ಸೌಧರ್ಮಕಲ್ಪದೇವ, ಜೀವಾನಂದ, ಅಚ್ಯುತಕಲ್ಪದೇವ ಮತ್ತು ವಜ್ರನಾಭನಾಗಿದ್ದ ವೃತ್ತಾಂತಗಳು ಬರುತ್ತವೆ.

ಅನಂತರ ಮರುದೇವಿಯ ೧೪ ಸ್ವಪ್ನಗಳು, ವೃಷಭತೀರ್ಥಂಕರನ ಜನನ, ಜನ್ಮಾಭಿಷೇಕ, ವಿವಾಹ, ರಾಜ್ಯಾಭಿಷೇಕ, ಸಂತಾನಪ್ರಾಪ್ತಿ, ವಿದ್ಯಾದಾನ, ವೈರಾಗ್ಯ, ತಪ, ನಮಿವಿನಮಿಗಳ ಸಂಗತಿ, ಶ್ರೇಯಾಂಸನಿಂದ ಆಹಾರದಾನ, ಕೇವಲಜ್ಞಾನೋತ್ಪತ್ತಿ, ಸಮವಸರಣ ರಚನೆ, ಉಪದೇಶ, ಮರುದೇವಿಯ ಮುಕ್ತಿ, ಭರತನ ದಿಗ್ವಿಜಯ, ಭರತಬಾಹುಬಲಿಗಳ ದ್ವಂದ್ವಯುದ್ಧ, ಬಾಹುಬಲಿಯ ತಪಸ್ಸು, ಬ್ರಾಹ್ಮೀ ಸುಂದರಿಯರಿಂದ ಮಾನಕಷಾಯ ನಿವಾರಣೆ, ಬಾಹುಬಲಿಗೆ ಕೇವಲಜ್ಞಾನೋತ್ಪತ್ತಿ, ಋಷಭತೀರ್ಥಂಕರನ ಮುಕ್ತಿ,

ಭರತನ ನಿರ್ವೇಗ-ತಪಸ್ಸು-ಮುಕ್ತಿ ಈ ಕಥಾಂಶಗಳು ಬರುತ್ತವೆ.

ಹೇಮಚಂದ್ರನಲ್ಲಿಯೂ ಸಹ ಇದೇ ಕಥೆಯ ಜಾಡು ಕಂಡುಬರುತ್ತದೆ. ಸ್ವಲ್ಪ ವ್ಯತ್ಯಾಸಗಳೂ ಕಂಡುಬರುತ್ತವೆ. ಉದಾಹರಣೆಗೆ, ಮಹಾಬಲನ ವೈರಾಗ್ಯ ಸನ್ನಿವೇಶದಲ್ಲಿ, ಶೀಲಾಂಕನಲ್ಲಿ 'ವಿಬುಧಾನಂದ ನಾಟಕ'ವು ಬರುತ್ತದೆ. ಇದರಲ್ಲಿ ವೈರಾಗ್ಯಭಾವಜನಕ ಪ್ರಸಂಗವು ಬರುತ್ತದೆ. ಲಕ್ಷ್ಮೀಧರ ರಾಜಕುಮಾರನು ರಾಜಶೇಖರನ ಮಗಳಾದ ರಾಜ ಕುಮಾರಿ ಬಂಧುಮತಿಯಲ್ಲಿ ಅನುರಕ್ತನಾಗಿರುತ್ತಾನೆ. ತನ್ನ ತಂದೆ ಚಂದ್ರಾಪೀಡ ನೊಂದಿಗೆ ಕಾರಣಾಂತರದಿಂದ ಭಿನ್ನಾಭಿಪ್ರಾಯವನ್ನು ತಳೆದ ಲಕ್ಷ್ಮೀಧರನು, ತನ್ನ ಸ್ನೇಹಿತ ವಿದೂಷಕನೊಂದಿಗೆ ರಾಜ್ಯವನ್ನು ಬಿಟ್ಟು ರಾಜಶೇಖರನ ಆಸ್ಥಾನಕ್ಕೆ ಬರುತ್ತಾನೆ. ರಾಜ ಶೇಖರನಿಗೆ ತನ್ನ ಮಗಳನ್ನು ಈತನಿಗೆ ಕೊಡುವ ಆಸೆ. ಈತನ ಮಗಳೇ ಬಂಧುಮತಿ ಯೆಂದು ರಾಜಕುಮಾರ ಅರಿಯನು. ಕೊನೆಗೆ ಈ ವಿಷಯ ತಿಳಿದು ವಿವಾಹ ಜರುಗುತ್ತದೆ. ರಾಜಕುಮಾರನಿಗೆ ಹಾವು ಕಚ್ಚಿ, ಆತ ಸಾಯುತ್ತಾನೆ. ಬಂಧುಮತಿ ಚಿತೆ ಏರುತ್ತಾಳೆ.[೧೧] ಹೇಮಚಂದ್ರನ ಆದಿಪುರಾಣದ ಪ್ರಕಾರ ಇನ್ನು ತನಗೆ ಕೇವಲ ಒಂದು ತಿಂಗಳು ಮಾತ್ರ ಆಯುಷ್ಯವಿರುವುದೆಂದು ತಿಳಿದು ಮಹಾಬಲನು ವೈರಾಗ್ಯಪರನಾಗುವನು. ಅಲ್ಲದೆ ಉಳಿದ ಕೆಲವು ಪ್ರಸಂಗಗಳಲ್ಲಿ ಹೇಮಚಂದ್ರನು ವಿಸ್ತಾರವಾಗಿ ವರ್ಣನೆಯನ್ನು ಮಾಡಿದ್ದಾನೆ. ಆದರೆ ಶೀಲಾಂಕನಲ್ಲಿ ಕೆಲವು ವಿವರಗಳು ದೊರೆಯುವುದಿಲ್ಲ. ಉದಾಹರಣೆಗೆ : ಸ್ವಾಮಿಯ ಅಂತ್ಯಕ್ರಿಯೆಯ ವರ್ಣನೆ, ಭರತ ಚಕ್ರವರ್ತಿಯಿಂದ ಸೈನಿಕರ ಗರ್ವಭಂಗ ಪ್ರಸಂಗ, ಇತ್ಯಾದಿ. ನಾಟಕೀಯತೆಯನ್ನೂ ಸ್ವಭಾವನಿರೂಪಣೆಯನ್ನೂ ಕವಿ ತಂದಿರುವ ರೀತಿ ಗಮನಾರ್ಹವಾದುದು. ಉದಾಹರಣೆಗೆ ಸಾಗರಚಂದ್ರನ ಕಥೆಯನ್ನು ನೋಡ ಬಹುದು.

ಹೇಮಚಂದ್ರನ ತ್ರಿಷಷ್ಟಿಶಲಾಕಾಪುರುಷಚರಿತದಲ್ಲಿರುವ ವರ್ಣನೆಯ ಹರವು ಇಲ್ಲಿ ಇಲ್ಲದಿದ್ದರೂ ಶೀಲಾಂಕನು ವೃಷಭತೀರ್ಥಂಕರನಿಗೆ ಹಾಗೂ ಭರತಚಕ್ರವರ್ತಿಗೆ ಸಂಬಂಧಿಸಿದ ಕಥಾಸಂದರ್ಭಗಳನ್ನು ಕೆಲವೆಡೆ ಸಂಗ್ರಹಿಸಿ ನೀಡಿದ್ದಾನೆ.

ಶ್ವೇತಾಂಬರ ಪರಂಪರೆಯಲ್ಲಿ ಬರುವ ವೃಷಭತೀರ್ಥಂಕರನ ಚರಿತ್ರೆಯು ಸಮಗ್ರ ವಾಗಿ ಇಲ್ಲಿ ಒಂದೆಡೆ ದೊರೆಯುತ್ತದೆ:

೨. **ತಿಸಟ್ಠಿಮಹಾಪುರಿಸಗುಣಾಲಂಕಾರು (ಮಹಾಪುರಾಣ)** (ಕಾಲ : ಕ್ರಿ. ಶ. ೯೫೯-೯೬೫): ಪುಷ್ಪದಂತನು ಇದರ ಕರ್ತೃ. ಈತನನ್ನು ಅಪಭ್ರಂಶಭಾಷೆಯ ಕವಿಯನ್ನಾಗಿಯೇ ಅಲ್ಲದೆ, ಭಾರತದ ಮಹಾಕವಿಗಳಲ್ಲಿ ಒಬ್ಬನನ್ನಾಗಿ ಪರಿಗಣಿಸಲಾಗಿದೆ. ಈತನ ಇತರ ಗ್ರಂಥಗಳು 'ಣಾಯಕುಮಾರ ಚರಿಉ' ಮತ್ತು 'ಜಸಹರ ಚರಿಉ'.

ಪುಷ್ಪದಂತನು ಮೂಲತಃ ಎಲ್ಲಿಯವನೆಂದು ತಿಳಿಯಲು ಯಾವ ಆಧಾರಗಳೂ ಇಲ್ಲ. ಈತನು ತನ್ನ ಹಿಂದಿನ ಆಶ್ರಯದಾತನಾಗಿದ್ದ ರಾಜನೋರ್ವನಿಂದ ಅಪಮಾನಿತನಾಗಿ ಮಾನ್ಯಖೇಟಕ್ಕೆ ಬಂದನೆಂದು ತಿಳಿದುಬರುತ್ತದೆ. ಇಲ್ಲಿಗೆ ಬಂದನಂತರ ರಾಷ್ಟ್ರಕೂಟ ದೊರೆ, ಕೃಷ್ಣನ ಮಂತ್ರಿ ಭರತನ ಆಶ್ರಯದಲ್ಲಿ ಮಹಾಪುರಾಣವನ್ನೂ ಆತನ ಮಗ ನನ್ನಯನ ಆಶ್ರಯದಲ್ಲಿ 'ಜಸಹರ ಚರಿಉ' ಮತ್ತು 'ಣಾಯಕುಮಾರ ಚರಿಉ' ಗ್ರಂಥ ಗಳನ್ನೂ ಬರೆದನೆಂದು ತಿಳಿದುಬರುತ್ತದೆ.

ಪುಷ್ಪದಂತನು ತನ್ನ ಬಗೆಗೆ ಕೆಲವು ವಿಚಾರಗಳನ್ನು ಹೇಳಿಕೊಂಡಿದ್ದಾನೆ. ಈತ ಕಾಶ್ಯಪಗೋತ್ರಕ್ಕೆ ಸೇರಿದವನು. ತಂದೆ-ತಾಯಿಗಳು ಮೊದಲಲ್ಲಿ ಶೈವರಾಗಿದ್ದರು. ಅನಂತರ ಜೈನ ಮುನಿಗಳ ಉಪದೇಶದ ಪ್ರಭಾವದಿಂದ ಜೈನಮತೀಯರಾದರು. ತಂದೆ ತಾಯಿಗಳಂತೆ ಪುಷ್ಪದಂತನೂ ಸಹ ಜೈನಧರ್ಮದ ನಿಷ್ಠಾವಂತ ಅನುಯಾಯಿ. ಜಿನ ಧರ್ಮದಲ್ಲಿ ಅಪಾರವಾದ ಪ್ರೀತಿಗೌರವಗಳನ್ನುಳ್ಳವನು.

ಪುಷ್ಪದಂತನಿಗೆ 'ಖಂದ' (ಸ್ಕಂದ) ಎಂಬ ಹೆಸರೂ ಇದ್ದಿತೆಂದು ತಿಳಿದುಬರುತ್ತದೆ. ಬಹುಶಃ ಇದು ಆತನನ್ನು ಪ್ರೀತಿಯಿಂದ ಸಂಬೋಧಿಸುತ್ತಿದ್ದ ಹೆಸರು ಇರಬೇಕು.[೧೨] 'ಅಭಿಮಾನ ಮೇರು', 'ಕವ್ವಪಿಸಲ್ಲ' ಇವು ಬಿರುದುಗಳಾಗಿದ್ದುವೆಂದು ಈತನ ಕಾವ್ಯ ಗಳಿಂದಲೇ ತಿಳಿದುಬರುತ್ತದೆ.

ಈತನು ಸಂಸ್ಕೃತಭಾಷೆಯನ್ನು ಬಲ್ಲವನಾಗಿದ್ದನೆಂಬುದಕ್ಕೆ ಮಹಾಪುರಾಣ ಮತ್ತು ಯಶೋಧರಚರಿತ್ರೆಗಳಲ್ಲಿ ಬಂದಿರುವ ಭರತ ಮತ್ತು ನನ್ನಯರ ಪ್ರಶಂಸೆಯು ಸಾಕ್ಷಿ ಯಾಗಿವೆ.

ತಿಸಟ್ಠಿಮಹಾಪುರಿಸಗುಣಾಲಂಕಾರು ಎಂಬುದು ಆದಿಪುರಾಣ ಮತ್ತು ಉತ್ತರಪುರಾಣ ವೆಂದು ಎರಡು ಭಾಗಗಳಲ್ಲಿವೆ. ಇದರಲ್ಲಿ ೬೩ ಪುರುಷರ ಚರಿತ್ರೆಯಿದೆ. ಆದಿಪುರಾಣದಲ್ಲಿ ೮೦, ಉತ್ತರಪುರಾಣದಲ್ಲಿ ೪೨ ಸಂಧಿಗಳಿವೆ. ಎರಡರ ಶ್ಲೋಕಗಳ ಸಂಖ್ಯೆ ಸು. ೨೦,೦೦೦. ಸು. ಆರು ವರುಷಗಳ ಅವಧಿಯಲ್ಲಿ ಈ ಗ್ರಂಥವನ್ನು ರಚಿಸಿದನು. ಈತನೇ ಹೇಳಿ ಕೊಂಡಿರುವಂತೆ ಈ ಮಹಾನ್ ಗ್ರಂಥದಲ್ಲಿ 'ಎಲ್ಲವೂ ಇದೆ; ಇದರಲ್ಲಿ ಇಲ್ಲದಿರುವುದು ಮತ್ತೆಲ್ಲಿಯೂ ಇಲ್ಲ.'[೧೩] ಇದರ ಮೇಲೆ ಅನೇಕ ಟಿಪ್ಪಣಿ ಗ್ರಂಥಗಳನ್ನು ಸಹ ಬರೆಯ ಲಾಗಿದೆ. ಇದರಲ್ಲಿ ಪ್ರಭಾಚಂದ್ರ ಮತ್ತು ಶ್ರೀಚಂದ್ರರ ಟಿಪ್ಪಣಿ ಉಪಲಬ್ಧವಿದೆ. ಸ್ವಯಂ ಪುಷ್ಪದಂತನೇ ಟಿಪ್ಪಣಿಯೊಂದನ್ನು ಬರೆದಿದ್ದನೆಂದು ಶ್ರೀಚಂದ್ರನ ಟಿಪ್ಪಣಿಯಿಂದ ತಿಳಿದುಬರುತ್ತದೆ.[೧೪]

ಕವಿಯು ಗ್ರಂಥದ ಉತ್ಥಾನಿಕೆಯಲ್ಲಿ ಸ್ಮರಿಸಿರುವ ದಾರ್ಶನಿಕರಲ್ಲಿ, ಕವಿಗಳಲ್ಲಿ ಮೂವರು ಮಾತ್ರ ಜೈನಮತೀಯರಾಗಿದ್ದಾರೆ. ಅಕಲಂಕ, ಚತುರ್ಮುಖ ಮತ್ತು ಸ್ವಯಂಭೂ. ಇವರಲ್ಲಿ ಕೊನೆಯ ಇಬ್ಬರು ಅಪಭ್ರಂಶ ಭಾಷೆಯ ಮಹಾಕವಿಗಳು. ಅಲ್ಲದೆ ಕವಿಯು ಆಗಮ ಸಿದ್ಧಾಂತಗ್ರಂಥವಾದ ಧವಲ-ಜಯಧವಲ ಗ್ರಂಥಗಳ ಸ್ಮರಣೆ ಮಾಡಿ ದ್ದಾನೆ (I-೯). ಷಟ್‌ಖಂಡಾಗಮ ಸಿದ್ಧಾಂತದ ಮೇಲೆ ಧವಲಾ ಟೀಕೆಯನ್ನು, ಕಷಾಯ ಪಾಹುಡದ ಮೇಲೆ ಜಯಧವಲಾ ಟೀಕೆಯನ್ನು ವೀರಸೇನರು ರಚಿಸಿದರು. ಜಯಧವಲಾ ಟೀಕೆಯನ್ನು ಪೂರ್ಣಗೊಳಿಸಿದವರು ಜಿನಸೇನರು. ಇವರು ಮಹಾಪುರಾಣದ ಕರ್ತೃ. ಇವರ ಮಹಾಪುರಾಣವನ್ನು ಪುಷ್ಪದಂತನು ನೋಡಿರಬಹುದು. ಎರಡರ ಕಥಾವಸ್ತುವೂ ಒಂದೇ. ಪುಷ್ಪದಂತನಿಗೆ ಮಹಾಪುರಾಣವನ್ನು ಅಪಭ್ರಂಶಭಾಷೆಯಲ್ಲಿ ರಚಿಸಲು, ಅಲ್ಲಿಂದಲೇ ಪ್ರೇರಣೆ ದೊರೆತಿರಬಹುದು. ಆದರೆ ಕವಿಯು ಈ ಬಗೆಗೆ ಯಾವ ಸೂಚನೆಯನ್ನೂ ನೀಡಿಲ್ಲ.[೧೫]

ಕವಿ ಆದಿಪುರಾಣವನ್ನು 'ನಾಭೇಯ ಚರಿಉ' ಎಂದು ಕರೆದಿದ್ದಾನೆ. ಜಿನಸೇನರ ಆದಿಪುರಾಣದೊಂದಿಗೆ ಹೋಲಿಸಿದರೆ ಇಲ್ಲಿ ವರ್ಣನಕ್ರಮದಲ್ಲಿ ವ್ಯತ್ಯಾಸ ಕಂಡುಬರು

ತ್ತದೆ. ಜಿನಸೇನರ ಮಹಾಪುರಾಣದಲ್ಲಿ ೪ರಿಂದ ೧೧ನೇ ಪರ್ವದವರೆಗೆ ವೃಷಭದೇವನ ವರ್ಣನೆ ಇದೆ. ಅನಂತರ ಆತನ ಗರ್ಭಾವತರಣ, ಜನ್ಮ, ದೀಕ್ಷೆ ಮೊದಲಾದ ಕಲ್ಯಾಣಗಳ ವರ್ಣನೆಯಿದೆ. ಆದರೆ ಪುಷ್ಪದಂತನ ಮಹಾಪುರಾಣದಲ್ಲಿ ಪ್ರಾರಂಭದಿಂದಲೇ ಋಷಭದೇವನ ಕಲ್ಯಾಣಗಳ ವರ್ಣನೆಯಿದೆ. ಅದೇ ಪ್ರಸಂಗದಲ್ಲಿ ಪ್ರಾರಂಭದಲ್ಲಿ ಕುಲಕರರ ವರ್ಣನೆಯು ಬರುತ್ತದೆ. ೨ನೆಯ ಸಂಧಿಯಿಂದ ಋಷಭನ ಪೂರ್ವಭವಗಳ ವರ್ಣನೆಯು ಪ್ರಾರಂಭವಾಗುತ್ತದೆ. ಅಂದರೆ ಕಥಾವಿವರದ ದೃಷ್ಟಿಯಿಂದ ನಾಭೇಯ ಚರಿತ್ರೆಯ ಪೂರ್ವಾರ್ಧದಲ್ಲಿ ಋಷಭತೀರ್ಥಂಕರನ ಉತ್ತರ ಚರಿತ್ರೆಯಿದೆ. ಉತ್ತರಾರ್ಧದಲ್ಲಿ ಪೂರ್ವಚರಿತ್ರೆಯಿದೆ.

ತನ್ನ ನಾಭೇಯ ಚರಿತವು ಧರ್ಮದ ಅನುಶಾಸನದ ಆನಂದದಿಂದ ತುಂಬಿರುವುದಾಗಿ ಪುಷ್ಪದಂತನು ಸ್ಪಷ್ಟಪಡಿಸಿದ್ದಾನೆ (I-೪). ನಾಭೇಯ ಚರಿತ್ರೆಯ ಮುಖ್ಯ ಧ್ವನಿ ಜಿನಭಕ್ತಿ. ಈ ಭಕ್ತಿ ಪರಂಪರಾನುಗತವಾಗಿ ಬಂದಿರುವುದಾದರೂ ಭಕ್ತಿಯ ಅಭಿವ್ಯಕ್ತಿಯಲ್ಲಿ ಕವಿಯ ನಿಜವಾದ ಅನುಭೂತಿಯು ಪ್ರಕಟವಾಗುತ್ತದೆ.[೧೬] ರಾಗ-ವಿರಾಗಗಳ ಸಂವೇದನೆ, ಪ್ರಕೃತಿ ಚಿತ್ರಣ ಮೊದಲಾದುವುಗಳಿಂದ ಕಾವ್ಯಮಯವಾಗಿದೆ.

ಅತ್ಯಂತ ಸುಂದರ, ಗಂಭೀರ, ಮತ್ತು ಅಲಂಕಾರಗಳಿಂದ ಕೂಡಿದ, ಕಾಮನನ್ನು ನಾಶಮಾಡುವ ಆಧ್ಯಾತ್ಮಿಕತೆಯ ವಾಣಿಯಾಗಿದೆ ಈತನ ಕಾವ್ಯ (I-೮).

೩. **ಚಉಪ್ಪನ್ನಮಹಾಪುರಿಸಚರಿಯ** : ಕರ್ತೃ–ಆಮ್ರ; (ಕಾಲ : ೧೧೩೩?) ಮುಖ್ಯವಾಗಿ ಆರ್ಯಾಛಂದದಲ್ಲಿ ರಚಿತವಾಗಿರುವ ಈ ಗ್ರಂಥದಲ್ಲಿ ೧೦೩ ಅಧಿಕಾರಗಳಿವೆ. ೧೦,೦೫೦ ಶ್ಲೋಕಗಳ ಈ ಗ್ರಂಥ ೭೩೫ ಗಾಥೆಗಳನ್ನೂ ೧೦೦ ಇತರ ವಿಧದ ವೃತ್ತಗಳನ್ನೂ ಹೊಂದಿದೆ. ೫೪ ಮಹಾಪುರುಷರ ಚರಿತ್ರೆಯ ಸಮಾಪ್ತಿಯ ನಂತರ ೯ ಪ್ರತಿವಾಸುದೇವರನ್ನು ಸೇರಿಸಿದರೆ ೬೩ ಶಲಾಕಾಪುರುಷರಾಗುತ್ತಾರೆಂದು ಹೇಳಿ ಉಪಸಂಹಾರಮಾಡಲಾಗಿದೆ. ಇದರಲ್ಲಿ ತೀರ್ಥಂಕರರ, ಯಕ್ಷ-ಯಕ್ಷಿಯರ ಉಲ್ಲೇಖವಿದೆ. ಕ್ರಿ. ಶ. ೧೧೩೩ರಲ್ಲಿ ರಚಿತವಾದ 'ಆಖ್ಯಾನ ಮಣಿಕೋಶ'ದ ಕರ್ತೃ ಆಮ್ರದೇವ ಸೂರಿಯೇ ಚಉಪ್ಪನ್ನಮಹಾಪುರಿಸಚರಿಯದ ಕರ್ತೃವಿರಬಹುದೆಂದು ಊಹೆಯಿದೆಯಾದರೂ ಸ್ಪಷ್ಟ ಆಧಾರವಿಲ್ಲ. ಗ್ರಂಥದ ಪ್ರಾರಂಭದಲ್ಲಿ ಮತ್ತು ಅಂತ್ಯದಲ್ಲಿ ಗ್ರಂಥಕಾರನು ತನ್ನನ್ನು 'ಅಮ್ಮ' ಎಂಬ ಶಬ್ದದಿಂದ ಪರಿಚಯಮಾಡಿಕೊಂಡಿರುವನೇ ಹೊರತು, ಬೇರೆ ಪರಿಚಯ ಸಾಮಗ್ರಿಗಳನ್ನು ನೀಡಿಲ್ಲ.[೧೭]

೪. **ಕಹಾವಲಿ** : ಕಾಲ–ಕ್ರಿ. ಶ. ೧೨ನೆಯ ಶತಮಾನ. ಕರ್ತೃ–ಭದ್ರೇಶ್ವರ. ೬೩ ಮಹಾಪುರುಷರ ಚರಿತ್ರೆ ವರ್ಣಿತವಾಗಿದೆ. ಭದ್ರೇಶ್ವರನು ಅಭಯದೇವನ ಗುರುವಾಗಿದ್ದನು. ಪ್ರಾಕೃತ ಗದ್ಯದಲ್ಲಿ ರಚನೆಯಿದೆ. ಅಲ್ಲಲ್ಲಿ ಪದ್ಯಗಳೂ ಇವೆ.[೧೮]

## ಶ್ವೇತಾಂಬರ ಆಗಮಗ್ರಂಥಗಳಲ್ಲಿ ಆದಿತೀರ್ಥಂಕರನ ಚರಿತೆಗಳು

ಈಗ ಉಪಲಬ್ಧವಿರುವ ಶ್ವೇತಾಂಬರ ಆಗಮ ಸಾಹಿತ್ಯವು ಈ ರೀತಿಯಲ್ಲಿದೆ : ಹನ್ನೊಂದು (ಹನ್ನೆರಡು) ಶ್ರುತಾಂಗಗಳು; ಹನ್ನೆರಡು ಉಪಾಂಗಗಳು; ಆರು ಛೇದಸೂತ್ರಗಳು; ನಾಲ್ಕುಮೂಲಸೂತ್ರಗಳು; ಹತ್ತು ಪ್ರಕೀರ್ಣಕಗಳು ಮತ್ತು ಚೂಲಿಕೆಗಳು. ಮಹಾ

ವೀರನ ನಿರ್ವಾಣದ ನಂತರ ೧,೦೦೦ ವರ್ಷಗಳವರೆಗೆ ಆಗಮಸಾಹಿತ್ಯವು ಶ್ರುತಪರಂಪರೆಯಲ್ಲಿ ನಡೆದುಬಂದಿತು. ಈ ಅವಧಿಯಲ್ಲಿ ೧೨ನೆಯ ದೃಷ್ಟಿವಾದ ಲುಪ್ತವಾಯಿತು. ಅಲ್ಲದೆ ಉಳಿದ ಆಗಮ ಸಾಹಿತ್ಯಗಳೂ ಸಹ ಸಂಪೂರ್ಣವಾಗಿ ತಮ್ಮ ಮೂಲರೂಪದಲ್ಲಿ ಉಳಿದಿರಲಿಲ್ಲ. ಉಳಿದು ಬಂದ ಆಗಮ ಸಾಹಿತ್ಯಗಳ ಸಂಕಲನ ಕಾರ್ಯವು ಕಾಲದಿಂದ ಕಾಲಕ್ಕೆ ನಾಲ್ಕು ವಾಚಕರ ನೇತೃತ್ವದಲ್ಲಿ ನಡೆದವು. ಸ್ಥೂಲಭದ್ರಾಚಾರ್ಯರ ನೇತೃತ್ವದಲ್ಲಿ ಪಾಟಲೀಪುರದಲ್ಲಿಯೂ ಆರ್ಯಸ್ಕಂಧಿಲನ ನೇತೃತ್ವದಲ್ಲಿ ಮಧುರೆಯಲ್ಲಿಯೂ ಅದೇ ಸಮಯದಲ್ಲಿ ನಾಗಾರ್ಜುನ ಸೂರಿಯ ನೇತೃತ್ವದಲ್ಲಿ ವಲಭಿಯಲ್ಲಿಯೂ ಅನಂತರ ದೇವರ್ಧಿಗಣಿ ಕ್ಷಮಾಶ್ರವಣನ ನೇತೃತ್ವದಲ್ಲಿ ವಲಭಿಯಲ್ಲಿಯೂ ಆಗಮ ಸಾಹಿತ್ಯದ ಸಂಕಲನ ಕಾರ್ಯವು ನಡೆಯಿತು. ಕ್ರಿ. ಶ. ೫ ನೆಯ ಶತಮಾನದಲ್ಲಿ ನಡೆದ ಕೊನೆಯ 'ವಲಭೀ ವಾಚನ' ಕಾಲದಲ್ಲಿ ಆಗಮಗಳನ್ನು ಸಂಕಲಿಸಿ ಲಿಪಿಬದ್ಧಗೊಳಿಸಲಾಯಿತು ಎಂದು ತಿಳಿದುಬರುತ್ತದೆ.

ಈ ಮೇಲೆ ಹೇಳಿರುವ ಆಗಮ ಸಾಹಿತ್ಯಗಳಲ್ಲಿ, ಕೆಲವು ಆದಿತೀರ್ಥಂಕರನ ಚರಿತ್ರೆಯನ್ನು ನಿರೂಪಿಸುತ್ತವೆ; ಇವು ಅರ್ಧಮಾಗಧಿಯ ರಚನೆಗಳು.

೧. **ಸ್ಥಾನಾಂಗ** (ಠಾಣಾಂಗ) : ಈ ಶ್ರುತಾಂಗವು ಹತ್ತು ಅಧ್ಯಾಯಗಳಿಂದ ಕೂಡಿದೆ. ಸಾವಿರಕ್ಕೂ ಹೆಚ್ಚು ಸೂತ್ರಗಳಿವೆ. ಸಂಖ್ಯಾರೂಪದಲ್ಲಿ ಜೈನಸಿದ್ಧಾಂತದ ವಿವರಣೆ ಬರುತ್ತದೆ. ಪುರುಷರನ್ನು ನಾನಾ ದೃಷ್ಟಿಯಿಂದ ವಿಂಗಡಿಸುತ್ತಾ ಅರ್ಹಂತರನ್ನು ಧರ್ಮಪುರುಷರೆಂದೂ ಚಕ್ರವರ್ತಿಗಳನ್ನು ಭೋಗಪುರುಷರೆಂದೂ ವಾಸುದೇವರನ್ನು ಕರ್ಮಪುರುಷರೆಂದೂ ಕರೆಯಲಾಗಿದೆ. ಪ್ರಥಮ ಹಾಗೂ ಅಂತಿಮ ತೀರ್ಥಂಕರರನ್ನುಳಿದು, ಮಿಕ್ಕ ತೀರ್ಥಂಕರರನ್ನು ಚಾತುರ್ಯಾಮ ಧರ್ಮಪ್ರವರ್ತಕರೆಂದು ಕರೆಯಲಾಗಿದೆ.

೨. **ಸಮವಾಯಾಂಗ** [೧೯] : ಶ್ರುತಾಂಗಗಳಲ್ಲಿ ಒಂದಾದ ಸಮವಾಯಾಂಗವು ನಾಲ್ಕನೆಯ ಸ್ಥಾನದಲ್ಲಿ ಬರುತ್ತದೆ. ಇದರಲ್ಲಿ ೧೯೬ನೇ ಸೂತ್ರದಿಂದ ೨೧೯ನೇ ಸೂತ್ರದವರೆಗೆ ಕುಲಕರರ ಹಾಗೂ ೫೪ ಮಹಾಪುರುಷರ ಉಲ್ಲೇಖವಿದೆ. ಋಷಭನನ್ನು ಕೋಸಲೀಯನೆಂದು ಕರೆಯಲಾಗಿದೆ (ಸೂತ್ರ ೧೦೨). ಮಹಾವೀರ, ನೇಮಿನಾಥ, ಪಾರ್ಶ್ವನಾಥ, ಮಲ್ಲಿ ಮತ್ತು ವಾಸುಪೂಜ್ಯ ತೀರ್ಥಂಕರರನ್ನು 'ಗೃಹಸ್ಥ ಪ್ರವ್ರಜಿತ' ಎಂದು ಕರೆಯಲಾಗಿದೆ. ಕುಲಕರರ, ತೀರ್ಥಂಕರರ, ಚಕ್ರವರ್ತಿಗಳ, ಬಲದೇವ-ವಾಸುದೇವರ, ಪ್ರತಿಶ್ರುತಿಗಳ-ತಂದೆ ತಾಯಿ, ಜನ್ಮಸ್ಥಳ, ದೀಕ್ಷಾಸ್ಥಾನ, ಗುಣವಿಶೇಷ ಮೊದಲಾದುವುಗಳನ್ನು ನಾಮಾವಳೀ ಕ್ರಮದಿಂದ ಉಲ್ಲೇಖಿಸಲಾಗಿದೆ. ಉತ್ತಮ ಪುರುಷರ ಸಂಖ್ಯೆಯನ್ನು ೫೪ ಎಂದು ನಿರ್ದಿಷ್ಟಗೊಳಿಸಲಾಗಿದೆ. ಈ ರೀತಿಯ ಉಲ್ಲೇಖವು ಶ್ವೇತಾಂಬರ ಸಾಹಿತ್ಯದಲ್ಲಿ ದೊರೆಯುವ ಪ್ರಾಚೀನ ಉಲ್ಲೇಖವಾಗಿದೆ.

೩. **ಜಂಬೂದ್ವೀಪ ಪ್ರಜ್ಞಪ್ತಿ** : ಉಪಾಂಗಗಳಲ್ಲಿ ಒಂದಾದ ಇದು ಎರಡು ವಿಭಾಗಗಳಿಂದ ಕೂಡಿದೆ. ಪೂರ್ವಾರ್ಧದಲ್ಲಿ ನಾಲ್ಕು ವಕ್ಷಸ್ಕಾರಗಳೂ, ಉತ್ತರಾರ್ಧದಲ್ಲಿ ಮೂರು ವಕ್ಷಸ್ಕಾರಗಳೂ ಇವೆ. ಒಟ್ಟು ೧೭೬ ಸೂತ್ರಗಳಿವೆ. ಪೂರ್ವಭಾಗದ ದ್ವಿತೀಯ ವಕ್ಷಸ್ಕಾರದ ಮೂರನೆಯ ಆರಕದಲ್ಲಿ ವೃಷಭಸ್ವಾಮಿಯ ವೃತ್ತಾಂತವು ಬರುತ್ತದೆ. ಋಷಭಸ್ವಾಮಿಯ ತ್ರಿಜಗಜ್ಜನಪೂಜನೀಯತೆ, ದೀಕ್ಷಾಗ್ರಹಣದ ಅನಂತರದ ಕರ್ತವ್ಯ, ಶ್ರಮಣಾವಸ್ಥೆ, ಕೇವಲ

ಜ್ಞಾನಪ್ರಾಪ್ತಿ, ಉಪದೇಶ, ನಿರ್ವಾಣ ಕಲ್ಯಾಣ, ಅಂತ್ಯಕ್ರಿಯೆಯ ನಿರೂಪಣೆಗಳು ಬರುತ್ತವೆ.

ಇಲ್ಲಿ ವೃಷಭನಾಥನನ್ನು ಪೀಠಿಕಾರೂಪವಾಗಿ ನಾನಾ ವಿಶೇಷಣಗಳಿಂದ ಕರೆದು ಪರಿಚಯಿಸಲಾಗಿದೆ. ಅರಹಾ, ಕೋಸರೀಯ, ಪ್ರಥಮರಾಯ, ಪ್ರಥಮ ಜಿನ, ಪ್ರಥಮ ಕೇವಲಿ, ಪ್ರಥಮ ತೀರ್ಥಂಕರ, ಪ್ರಥಮ ಧರ್ಮಾತ್ಮ, ಪ್ರಥಮ ಚಕ್ರವರ್ತಿ ಎಂದು ಕರೆಯಲಾಗಿದೆ.[೨೦]

ಸ್ವಾಮಿಗೆ ವೈರಾಗ್ಯಭಾವನೆಯು ಮೂಡಲು ವಿಶೇಷವಾದ ಕಾರಣ ಕಂಡುಬರುವುದಿಲ್ಲ. ಲೌಕಿಕ ಸುಖವನ್ನು ನಿಂದನೀಯವೆಂದು ತಿಳಿದು ವೈರಾಗ್ಯಭಾವವನ್ನು ತಾಳುತ್ತಾನೆ. ದೀಕ್ಷೆಯನ್ನು ಗ್ರಹಣಮಾಡುವಾಗ ತನ್ನ ಅಲಂಕಾರಗಳನ್ನು ತ್ಯಜಿಸಿ, ನಾಲ್ಕು ಮುಷ್ಟಿಗಳಲ್ಲಿ ಲುಂಛನವನ್ನು ಮಾಡುತ್ತಾನೆ. ಉಳಿದ ಕೂದಲು ಮರಕತಮಣಿಯಂತೆ ಶೋಭಿಸುತ್ತಿದ್ದುದರಿಂದ ಆ ಕೂದಲನ್ನು ಹಾಗೆಯೇ ಬಿಡಲು ದೇವೇಂದ್ರನು ಪ್ರಾರ್ಥಿಸಿದುದರಿಂದ ಅದನ್ನು ವೃಷಭನಾಥನು ಹಾಗೆಯೇ ಬಿಡುತ್ತಾನೆ (ಹೇಮಚಂದ್ರನಲ್ಲಿಯೂ ಸಹ ಈ ಹೇಳಿಕೆ ಕಂಡುಬರುತ್ತದೆ).

ಮೂರನೆಯ ವಕ್ಷಸ್ಕಾರದಲ್ಲಿ ಭರತಚಕ್ರವರ್ತಿಯ ಜನನ, ದಿಗ್ವಿಜಯ, ರಾಜ್ಯಾಭಿಷೇಕ, ನಿರ್ವಾಣ, ಭರತಭೂಮಿಯ ಹೆಸರಿನ ಅನ್ವರ್ಥತೆಯ ಕಥನ ಮೊದಲಾದವು ಬರುತ್ತವೆ.

ದ್ವಿತೀಯಭಾಗದಲ್ಲಿ ಆದಿತೀರ್ಥಂಕರನ ಜನ್ಮಾಭಿಷೇಕದ ವರ್ಣನೆ ವಿಸ್ತಾರವಾಗಿ ಬರುತ್ತದೆ.

೪. **ಕಲ್ಪಸೂತ್ರ** : ಆರು ಛೇದಸೂತ್ರಗಳಲ್ಲಿ ಇದು ಐದನೆಯದಾಗಿದೆ. ಭದ್ರಬಾಹು ಇದರ ಕರ್ತೃ. ಇದರ ಕಾಲ ಸು. ಕ್ರಿ. ಶ. ೫೧೩.

ಅಧ್ಯಯನದ ದೃಷ್ಟಿಯಿಂದ ಕಲ್ಪಸೂತ್ರವನ್ನು ಮೂರು ವಿಭಾಗಗಳಾಗಿ ವಿಂಗಡಿಸಬಹುದು : ತೀರ್ಥಂಕರರು, ಕುಲತಿಲಕರು ಮತ್ತು ಪರ್ಯೂಷಣ (ಮಳೆಗಾಲದಲ್ಲಿ ಮುನಿಗಳು ಅನುಸರಿಸಬೇಕಾದ ನಿಯಮಗಳು).

ಕಶ್ಯಪಗೋತ್ರದ ಕೋಸಲದೇಶದ ಅರ್ಹಂತ ಋಷಭನು—ಋಷಭ, ಪ್ರಥಮಚಕ್ರಿ, ಪ್ರಥಮ ಭಿಕ್ಷು, ಪ್ರಥಮ ಜಿನ, ಪ್ರಥಮ ತೀರ್ಥಂಕರ ಎಂಬ—ಐದು ಹೆಸರುಗಳಿಂದ ಪ್ರಸಿದ್ಧನಾಗಿದ್ದನು ಎನ್ನಲಾಗಿದೆ.[೨೧]

೨೦೪ ರಿಂದ ೨೨೮ ಸೂತ್ರಗಳವರೆಗೆ ವೃಷಭನಾಥನ ಜನನ, ರಾಜ್ಯಭಾರ, ವಿದ್ಯಾಬೋಧನೆ, ಪರಿನಿಷ್ಕ್ರಮಣ, ಕೇವಲಜ್ಞಾನ, ಮುಕ್ತಿಪದಪ್ರಾಪ್ತಿಯೇ ಮೊದಲಾದ ವಿಚಾರಗಳು ಬರುತ್ತವೆ. ಪಂಚಕಲ್ಯಾಣಗಳ ವೈಭವದ ವರ್ಣನೆ ಇಲ್ಲಿ ಬರುವುದಿಲ್ಲ. ಸ್ವಾಮಿಯು ತನ್ನ ಅನುತ್ತರ ಅಬೋಧ ಜ್ಞಾನ ದರ್ಶನಗಳಿಂದ ತನ್ನ ನಿಷ್ಕ್ರಮಣ ಕಾಲವನ್ನು ಅರಿತು ವೈರಾಗ್ಯಪರನಾಗಿ ದೀಕ್ಷೆಗೊಳ್ಳುವ ಪ್ರಸಂಗ, ನಾಲ್ಕು ಮುಷ್ಟಿಗಳಲ್ಲಿ ಲುಂಛನ—ಈ ವಿಚಾರಗಳು ಬರುತ್ತವೆ.

## ಆಗಮಗಳ ಟೀಕಾಸಾಹಿತ್ಯ

ಆಗಮಗಳ ಟೀಕಾಸಾಹಿತ್ಯವೆಂದು ಪ್ರಸಿದ್ಧವಾಗಿರುವ ಭದ್ರಬಾಹುಕೃತ ಆವಶ್ಯಕ ನಿರ್ಯುಕ್ತಿಯಲ್ಲಿ ಪ್ರಾಸಂಗಿಕವಾಗಿ ಕುಲಕರರ ಪೂರ್ವಭವಾದಿಗಳ ವರ್ಣನೆ ಬರುತ್ತದೆ. ಋಷಭದೇವನ ವರ್ಣನೆಯನ್ನು ವಿಸ್ತಾರರೂಪದಲ್ಲಿ ಮಾಡಲಾಗಿದೆ.[೨೨] ಜಿನದಾಸಗಣಿ ಮಹತ್ತರನ ಆವಶ್ಯಕ ಚೂರ್ಣಿಯಲ್ಲಿ (ಕಾಲ : ಕ್ರಿ. ಶ. ೬-೭ನೇ ಶ.) ಋಷಭ-ಭರತ ಚರಿತ್ರೆಯು ಬರುತ್ತದೆ. ಕುಲಕರರ ಚರಿತ್ರೆ, ಪೂರ್ವ ಭವಾವಳಿಗಳ ವಿವರಗಳೊಂದಿಗೆ ವೃಷಭನ ಚರಿತ್ರೆಯು ಬರುತ್ತದೆ. ಜೈನಪರಂಪರೆಯ ಅನುಸಾರವಾಗಿ, ವೃಷಭನು ಅಗ್ನಿಯ ಉತ್ಪಾದನೆಯನ್ನು ಕಲಿಸಿದನೆಂದೂ ಶಿಲ್ಪಕಲೆಯ ಶಿಕ್ಷಣವನ್ನು ನೀಡಿದನೆಂದೂ ಹೇಳಲಾಗಿದೆ (ಕುಂಭಕಾರ, ಚಿತ್ರಕಾರ, ವಸ್ತ್ರಕಾರ, ಕರ್ಮಕಾರ, ಮತ್ತು ಕಾಶ್ಯಪ ಈ ಐವರನ್ನು ಮುಖ್ಯ ಶಿಲ್ಪಿಗಳೆಂದು ಕರೆಯಲಾಗಿದೆ). ಹರಿಭದ್ರನ ಆವಶ್ಯಕ ಟೀಕೆ (ಕಾಲ : ಕ್ರಿ. ಶ. ೭೫೦)ಯಲ್ಲಿಯೂ ವೃಷಭತೀರ್ಥಂಕರನ ಕಥೆ ಬರುತ್ತದೆ. ಆವಶ್ಯಕ ಚೂರ್ಣಿ ಹಾಗೂ ಆವಶ್ಯಕ ಟೀಕೆಯಲ್ಲಿ ವರ್ಣಿತವಾಗಿರುವ ವಿಷಯಗಳಿಗೂ ಹೇಮಚಂದ್ರನ ಗ್ರಂಥದಲ್ಲಿ ವರ್ಣಿತವಾಗಿರುವ ವಿಷಯಗಳಿಗೂ ಹೆಚ್ಚಿನ ಹೋಲಿಕೆಗಳು ಕಂಡುಬರುತ್ತವೆ.[೨೩]

## ಆದಿತೀರ್ಥಂಕರನ ಚರಿತ್ರೆಯನ್ನು ನಿರೂಪಿಸುವ ಅನ್ಯಕೃತಿಗಳು

೧. **ತಿಲೋಯ ಪಣ್ಣತ್ತಿ** : ದಿಗಂಬರ ಪರಂಪರೆಯಲ್ಲಿ ಮಾನ್ಯವಾಗಿರುವ ಯತಿ ವೃಷಭನ ಈ ಗ್ರಂಥವು ಪ್ರಾಕೃತ ಗಾಥಾರೂಪದಲ್ಲಿದೆ. ಅಲ್ಲಲ್ಲಿ ಪ್ರಾಕೃತ ಗದ್ಯವೂ ಸಹ ಕಂಡುಬರುತ್ತದೆ (ಕಾಲ : ಕ್ರಿ. ಶ. ೬ನೇ ಶತಮಾನದಿಂದ ೯ನೇ ಶತಮಾನದ ಒಳಗೆ).

೪ನೆಯ ಮಹಾಧಿಕಾರದಲ್ಲಿ ೧೪ ಕುಲಕರರ ನಿರೂಪಣೆ, ಶಲಾಕಾಪುರುಷರ ಸಂಖ್ಯೆ ಮತ್ತು ಹೆಸರು, ೨೪ ತೀರ್ಥಂಕರರ ಅವತರಣಸ್ಥಾನ, ಜನ್ಮಸ್ಥಾನ, ತಂದೆತಾಯಿಗಳ ಹೆಸರು, ಜನ್ಮತಿಥಿ, ನಕ್ಷತ್ರಗಳ ಹೆಸರು, ವಂಶ ನಿರ್ದೇಶನ, ಆಯುಃಪ್ರಮಾಣ, ಕುಮಾರಾವಸ್ಥೆಯ ಕಾಲ, ಉತ್ಸೇಧ (ಎತ್ತರ), ಶರೀರವರ್ಣ, ರಾಜ್ಯಕಾಲ, ಚಿಹ್ನೆ, ದೀಕ್ಷಾಸ್ಥಾನ, ಕೇವಲಜ್ಞಾನ, ಸಮವಸರಣ ನಿರೂಪಣೆ, ಗಣಧರಸಂಖ್ಯೆ, ಯೋಗನಿವೃತ್ತಿ ಇತ್ಯಾದಿ ವಿವರಗಳು ಬರುತ್ತವೆ. ೪೨೧ರಿಂದ ೧೪೧೦ನೆಯ ಗಾಹೆಯವರೆಗೆ ಋಷಭನಾಥ ಹಾಗೂ ಭರತಾದಿ ಚಕ್ರವರ್ತಿಗಳಿಗೆ ಸಂಬಂಧಿಸಿದ ವಿವರಗಳು ಬರುತ್ತವೆ. ಋಷಭನು ಸರ್ವಾರ್ಥಸಿದ್ಧಿಯಿಂದ ಅವತೀರ್ಣನಾದನು, ಅಯೋಧ್ಯಾನಗರಿಯಲ್ಲಿ ಮರುದೇವಿಮಾತೆ ಹಾಗೂ ನಾಭಿರಾಜ ತಂದೆಗೆ ಚೈತ್ರಶುಕ್ಲ ನವಮಿಯ ದಿನ ಉತ್ತರಾಷಾಢಾ ನಕ್ಷತ್ರದಲ್ಲಿ ಉದಯಿಸಿದನು, ಋಷಭನ ಒಟ್ಟು ಆಯು ೮೪ ಲಕ್ಷ ಪೂರ್ವ, ಚಿಹ್ನೆ ಎತ್ತು—ಇತ್ಯಾದಿ ಮುಖ್ಯಾಂಶಗಳ ಉಲ್ಲೇಖಗಳು ಲಭಿಸುತ್ತವೆ.[೨೪]

೨. **ಪಉಮಚರಿಯಂ** : ವಿಮಲಸೂರಿ ಇದರ ಕರ್ತೃ. ಕಾಲ : ಕ್ರಿ. ಶ. ೧. ಐವತ್ತಾರು ಅಧ್ಯಾಯಗಳಿವೆ. ಮೂರನೆಯ 'ವೃಷಭ ಹಾಗೂ ಬ್ರಾಹ್ಮಣ' ಎಂಬ ಅಧಿಕಾರದಲ್ಲಿ ವಿದ್ಯಾಧರ ಲೋಕದ ವರ್ಣನೆಯಲ್ಲಿ ಪ್ರಾಸಂಗಿಕವಾಗಿ ವೃಷಭತೀರ್ಥಂಕರನ ವೃತ್ತಾಂತವು ಬರುತ್ತದೆ. ಶ್ವೇತಾಂಬರ ಪರಂಪರೆಯನ್ನು ಅನುಸರಿಸುವ ಈ ಕಾವ್ಯದಲ್ಲಿ ರೇಖಾಮಾತ್ರ

ವಾಗಿ ಋಷಭನ ಕಥೆ ಬರುತ್ತದೆ. ಈ ಸಂಕ್ಷಿಪ್ತ ಹರವಿನಲ್ಲಿಯೂ ಕೆಲವೆಡೆ ಕಥೆಯಲ್ಲಿ ಕೆಲವು ವ್ಯತ್ಯಾಸಗಳು ಕಂಡುಬರುತ್ತವೆ.

ಜನ್ಮಾಭಿಷೇಕದ ನಿಮಿತ್ತ ಜಿನಮಾತೆಯ ಬಳಿ ಮಾಯಾಶಿಶುವನ್ನು ಇರಿಸಿ ಜಿನಬಾಲಕನನ್ನು ಕರೆದುಕೊಂಡು ಹೋಗಿ ಹಿಂದಿರುಗಿಸುವ ವ್ಯಕ್ತಿ ಇಲ್ಲಿ ಇಂದ್ರನ ಸೇನಾಧಿಪತಿ ಹರನೈಗಮೇಷಿ.

ಇಲ್ಲಿ ಬರುವ ಬ್ರಾಹ್ಮಣೋತ್ಪತ್ತಿಯ ವಿವರ ಹೀಗಿದೆ : ತಾನು ಸನ್ಮಾನ ಮಾಡಿದ ಶ್ರಾವಕರು ಮುಂದೆ ಮಿಥ್ಯಾಚಾರಿಗಳಾಗುತ್ತಾರೆ ಎಂದು ವೃಷಭತೀರ್ಥಂಕರನಿಂದ ತಿಳಿದು ಭರತ ಕುಪಿತನಾಗುತ್ತಾನೆ. ಅವರನ್ನು ನಗರದಿಂದ ಹೊರದೂಡಲು ಆಜ್ಞೆ ಮಾಡುತ್ತಾನೆ. ಜನರಿಂದ ಹೊಡೆತ ತಿನ್ನುತ್ತ ಅವರು ಆದಿತೀರ್ಥಂಕರನಲ್ಲಿ ಶರಣು ಹೋಗುತ್ತಾರೆ. 'ಮಾ-ಹಣ' ಎಂಬ ಉದ್ಗಾರವನ್ನು ತೆಗೆದು ಆದಿತೀರ್ಥಂಕರನು ಅವರನ್ನು ತಡೆದುದರಿಂದ ಅವರನ್ನು ಮುಂದೆ ಮಾಹಣ (ಬ್ರಾಹ್ಮಣ) ಎಂದು ಕರೆಯಲಾಯಿತು (IV-೮೫). ಈ ರೀತಿಯ ವಿವರಣೆ ಶ್ವೇತಾಂಬರ ಪರಂಪರೆಯ ಇತರ ಸಾಹಿತ್ಯದಲ್ಲಾಗಲಿ, ದಿಗಂಬರ ಪರಂಪರೆಯ ಸಾಹಿತ್ಯದಲ್ಲಾಗಲಿ ಕಂಡುಬರುವುದಿಲ್ಲ ಎಂಬುದು ಗಮನಾರ್ಹ.

ಈ ಕಾವ್ಯದಲ್ಲಿ ಆದಿತೀರ್ಥಂಕರನ ಚರಿತ್ರೆಗೆ ಸಂಬಂಧಿಸಿದಂತೆ ಬರುವ ಮತ್ತೊಂದು ವಿಶೇಷವೇನೆಂದರೆ, ದ್ವಂದ್ವಯುದ್ಧವನ್ನು ಮಾಡಲು ಸೂಚಿಸುವವನು ಸ್ವಯಂ ಬಾಹುಬಲಿ. ಎರಡೂ ಕಡೆಯ ಸೈನ್ಯವು ಬಂದು ನಿಂತಿರುವಾಗ ಬಾಹುಬಲಿ ಭರತನನ್ನು ಕುರಿತು 'ಹೇ ಚಕ್ರಧರ, ಮನುಷ್ಯರನ್ನು ವಧಿಸುವುದರಿಂದ ಲಾಭವೇನು? ಈ ಯುದ್ಧಭೂಮಿಯ ಮಧ್ಯೆ ನಿಂತು ನಾವಿಬ್ಬರೂ ದೃಷ್ಟಿ ಹಾಗೂ ಮುಷ್ಟಿಯುದ್ಧವನ್ನು ಮಾಡೋಣ'[೨೫] ಎನ್ನುವನು. ಇಲ್ಲಿ ಜಲಯುದ್ಧದ ಉಲ್ಲೇಖವಿಲ್ಲ.

ಮೇಲ್ಕಂಡ ಗ್ರಂಥಗಳೇ ಅಲ್ಲದೆ ಸಂಘದಾಸಗಣಿಯ ವಸುದೇವ ಹಿಂಡಿ(ಕ್ರಿ. ಶ. ೬ನೆಯ ಶತಮಾನಕ್ಕಿಂತ ಪೂರ್ವ)ಯಲ್ಲಿ ಈ ಕಥೆ ರೇಖಾಮಾತ್ರವಾಗಿ ಬರುತ್ತದೆ. ಸ್ವಯಂಭೂ ವಿರಚಿತ ಪಉಮಚರಿಉ ( ಕ್ರಿ. ಶ. ೯-೧೦ನೇ ಶ.) ಕೃತಿಯಲ್ಲಿ ಪ್ರಥಮ ಅಧ್ಯಾಯದ ಕೊನೆಯ ಭಾಗದಿಂದ ೪ನೆಯ ಅಧ್ಯಾಯದವರೆಗೆ ವೃಷಭ ತೀರ್ಥಂಕರ ಹಾಗೂ ಭರತಚಕ್ರವರ್ತಿಗಳ ಕಥೆ ಬರುತ್ತದೆ. ವೃಷಭತೀರ್ಥಂಕರನನ್ನು ಪುರಾಣ ಮಹೇಶ್ವರ ಎಂದು ಕರೆಯಲಾಗಿದೆ (ಭಾಗ III-ಕಡವಕ ೨ ಮತ್ತು ೯). ಗುಣಭದ್ರಗಣಿಯ ಮಹಾವೀರಚರಿತ (ಕ್ರಿ. ಶ. ೧೧ನೇ ಶ.), ದೇವೇಂದ್ರಸೂರಿಯ ಸುದಂಸಣಾಚರಿಯ (ಕ್ರಿ. ಶ. ೧೨೧೩) ಮೊದಲಾದ ಕೃತಿಗಳಲ್ಲಿ ವೃಷಭತೀರ್ಥಂಕರನ ಕಥೆ ಪ್ರಾಸಂಗಿಕವಾಗಿ ಬರುತ್ತದೆ.

## ಟಿಪ್ಪಣಿಗಳು

೧. ೧ ರಿಂದ ೮ರ ವರೆಗಿನ ಟಿಪ್ಪಣಿಗಳನ್ನು H.D.Velankar, Jinarathna Kosha 1944 ಆಧಾರದಿಂದ ಕೊಡಲಾಗಿದೆ.

೨. ಅದೇ, ಪು. ೫೮. (ಕ್ಲಾಟ್ ಅವರಿಂದ ಈ ಕೃತಿ ಸಂಪಾದಿತವಾಗಿ ಜರ್ಮನ್ ಭಾಷೆಗೆ ಅನುವಾದವಾಗಿದೆ. ಎಚ್. ಆರ್. ಕಪಾಡಿಯಾ ಅವರಿಂದ ಪುನಸ್ಸಂಪಾದಿತವಾಗಿದೆ.)

೩. ಮಿರ್ಜಿ ಅಣ್ಣಾರಾಯ (ಅನು.), ಭಾರತೀಯ ಸಂಸ್ಕೃತಿಗೆ ಜೈನಧರ್ಮದ ಕೊಡುಗೆ, ಮೂಲ–ಹೀರಾಲಾಲ್ ಜೈನ್, ಸೊಲ್ಲಾಪುರ, ೧೯೭೧. ಪು. ೧೫೩.

೪. Velankar, ಪೂರ್ವೋಕ್ತ.

೫. ಅದೇ.

೬. ಅದೇ.

೭. ಅದೇ.

೮. ಟಿ. ವಿ. ವೆಂಕಟಾಚಲಶಾಸ್ತ್ರೀ, 'ಕನ್ನಡ ನೇಮಿನಾಥ ಪುರಾಣಗಳ ತೌಲನಿಕ ಅಧ್ಯಯನ', ಮೈಸೂರು, ೧೯೭೩, ಪು. ४೧.

೯. 'ಚಉಪ್ಪನ್ನ ಮಹಾಪುರಿಸಚರಿಯಂ' (ಸಂ. ಅಮೃತಲಾಲ್ ಮೋಹನ್‌ಲಾಲ್ ಭೋಜಕ್), ವಾರಣಾಸಿ, ೧೯೬೧, ಪ್ರಸ್ತಾವನೆ. ಪು. ४೯.

೧೦. ಅದೇ.

೧೧. ಸಂಸ್ಕೃತ ನಾಟಕಗಳಲ್ಲಿ ದುರಂತವಿಲ್ಲ. ಆದರೆ ಇಲ್ಲಿ ಸಂಸ್ಕೃತನಾಟಕದ ನಿಯಮವನ್ನು ಉಲ್ಲಂಘಿಸಿರುವುದು ಅಪೂರ್ವವಾಗಿ ಕಂಡುಬರುತ್ತದೆ.

೧೨. ನಾಥೂರಾಮ್ ಪ್ರೇಮೀ, ಜೈನ್ ಸಾಹಿತ್ಯ ಔರ್ ಇತಿಹಾಸ್, ಬೊಂಬಾಯಿ, ೧೯೫೬, ಪು. ೨೨೫.

೧೩. ಅದೇ, ಪು. ೨೩೧.

೧೪. ಅದೇ, ಪು. ೨೩೬.

೧೫. ತಿಸಟ್ಠಿ ಮಹಾಪುರಿಸ ಗುಣಾಲಂಕಾರು, (ಮಹಾಪುರಾಣ) (ಸಂ. ಪಿ. ಎಲ್. ವೈದ್ಯ), ಭಾರತೀಯ ಜ್ಞಾನಪೀಠ, ನವದೆಹಲಿ, ೧೯೪೪. ಪು. ೭.

೧೬. ಅದೇ, ಪು. ೫೧.

೧೭. ಅಮೃತ್‌ಲಾಲ್ ಮೋಹನ್‌ಲಾಲ್ ಭೋಜಕ್, ಪೂರ್ವೋಕ್ತ, ಪು. ४೨.

೧೮. ಮಿರ್ಜಿ ಅಣ್ಣಾರಾಯ, ಪೂರ್ವೋಕ್ತ , ಪು. ೧೬೬.

೧೯. ಸಮವಾಯಾಂಗ ಸೂತ್ರ, ಸಂ. ಶ್ರೀ ದಾಸೀಲಾಲ್‌ಜೀ, ಜೈನ್ ಶಾಸ್ತ್ರೋದ್ಧಾರ್‌ಸಮಿತಿ, ರಾಜಕೋಟ್.

೨೦. ಣಾಭಿಸ್ಸಣಂ ಕುಲಕರಸ್ಸ ಮರುದೇವಾಏ ಭಾರಿಯಾಯೇ ಕುಚ್ಛಿಂಸಿ
ಏತ್ಥಣಂ ಉಸಭೇ ಣಾಮಂ ಅರಹಾ ಕೋಸಲೀಏ ಪಢಮರಾಯಾ
ಪಢಮಜಿಣೇ ಪಢಮ ಕೇವಲೀ ಪಢಮ ತಿತ್ಥಯರೇ ಪಢಮಧಮ್ಮವರ
ಚಾಉರಂತ ಚಕ್ಕವಟ್ಟೀ ಸಮುಪ್ಪಜ್ಜಿತ್ಥಾ (ಸೂತ್ರ ೩೯, ದ್ವಿತೀಯ ವಕ್ಷಸ್ಕಾರ)

೨೧. ಉಸಭೇಣ ಅರಹಾ ಕೋಸಲೀಏ, ಕಾಸವೇ ಗೋತ್ತೇಣಂ
ತಸ್ಸಣಂ ಪಂಚಣಾಮಧೇಜ್ಜಾ ಏವಮಾಹಿಜ್ಜಂತಿ | ತಂಜಹಾ
ಉಸಭೇ ಇವಾ ಪಢಮರಾಯಾ ಇವಾ ಪಢಮ ಬಿಕ್ಖಾಚರೆ ಇವಾ
ಪಢಮ ಜಿಣೇ ಇವಾ ಪಢಮ ತಿತ್ಥಯರೇ ಇವಾ (ಸೂತ್ರ ೨೧೦).

೨೨. ಜಗದೀಶಚಂದ್ರ ಜೈನ್, 'ಪ್ರಾಕೃತ್ ಸಾಹಿತ್ಯ್ ಕಾ ಇತಿಹಾಸ್' ಶ್ವೇತಾಂಬರ ಸಂಸ್ಥಾ, ರತಲಾಮ್, ೧೯೩೫, ಪು. ೨೦೬.

೨೩. ಅಮೃತ್‌ಲಾಲ್ ಮೋಹನ್‌ಲಾಲ್ ಭೋಜಕ್, ಪೂರ್ವೋಕ್ತ.

೨೪. 'ಶ್ರೀಯತಿ ವೃಷಭಾಚಾರ್ಯ ವಿರಚಿತ ತಿಲೋಯ ಪಣ್ಣತ್ತಿ', ಭಾಗ ೧, ಸಂ. ಆ. ನೇ. ಉಪಾಧ್ಯೆ ಮತ್ತು ಹೀರಾಲಾಲ್ ಜೈನ್, ಶೋಲಾಪುರ, ೧೯೫೬.

೨೫. ಭಣಿಓ ಯ ಬಾಹುಬಲಿಣಾ, ಚಕ್ಕಹರೊ ಕಿಂವಹೇಣ ಲೋಯಸ್ಸ
ದೋಣ್ಣಂ ಪಿ ಹೋಉ ಜುಜ್ಝಂ ದಿಟ್ಠೀಮುಟ್ಠೀ ಹಿ ರಣಮಜ್ಝೇ ||
IV-೪೩. Paumachariyam-I, Prakrit Text Society, Varanasi-೫, ೧೯೬೨.

## ಅಧ್ಯಾಯ ೫

# ಕನ್ನಡ ಆದಿಪುರಾಣಗಳು : ಕರ್ತೃ, ಕೃತಿ-ಪರಿಚಯ

### ಪಂಪ

ಕನ್ನಡ ಸಾಹಿತ್ಯದಲ್ಲಿ ಕಾಲದಿಂದ ಕಾಲಕ್ಕೆ ಆದಿಪುರಾಣಗಳು ರಚನೆಗೊಂಡು ಬಂದಿವೆ. ಚಂಪು, ಗದ್ಯ, ಸಾಂಗತ್ಯ, ಯಕ್ಷಗಾನಗಳೆಂಬ ವಿವಿಧ ರಚನಾರೂಪಗಳನ್ನೊಳಗೊಂಡು ಈ ಕೃತಿಗಳು ರಚಿತವಾಗಿವೆ. ಆಯಾ ಕಾಲದ ಸಾಹಿತ್ಯಾಭಿರುಚಿಗೆ ತಕ್ಕಂತೆ ಇವುಗಳೂ ಸಹ ಬೆಳೆದು ಬಂದಿರುವುದು ಗಮನಾರ್ಹ. ಅವುಗಳಲ್ಲಿ ಪಂಪನ ಆದಿಪುರಾಣ ಅಗ್ರಮಾನ್ಯವಾಗಿ ನಿಲ್ಲುತ್ತದೆ, ಕಾಲದ ಹಾಗೂ ಸತ್ತ್ವದ ದೃಷ್ಟಿಯಿಂದ.

ಪಸರಿಪ ಕನ್ನಡಕ್ಕೊಡೆಯನೊರ್ವನೆ ಸತ್ಕವಿ ಪಂಪನಾವಗಂ
ವಸುಧೆಗೆ ಚಕ್ರಿಯಂತಮರಭೂಮಿಗೆ ವಾಸವನಂತೆ ಸಂತತಂ
ರಸೆಗುರುಗೇಂದ್ರನಂತೆ ಗಗನಕ್ಕೆ (ವಿಕರ್ತನನಂತೆ) ಧಾತ್ರಿಯೊಳ್
ಪೆಸರ್ವಡೆದಿರ್ದನೀಗಳೆಮಗೀಗೆ ತದೀಯ ವಚೋವಿಳಾಸಮಂ (ಪುಣ್ಯಾಸ್ರವ I-೧೬)

ಎಂದು ಹೃದಯತುಂಬಿ ಹಾಡಿದ್ದಾನೆ ಕವಿ ನಾಗಚಂದ್ರ. ಪಂಪನ ಉತ್ತರಕಾಲೀನ ಕವಿಗಳಲ್ಲಿ ಅನೇಕರು ಈತನ ಕಾವ್ಯಗುಣಗಳನ್ನು ಒಂದಲ್ಲ ಒಂದು ರೀತಿಯಲ್ಲಿ ಹಾಡಿ ಹೊಗಳಿ, ಆತನ ಕಾವ್ಯಗುಣದ ವಿಶೇಷತೆಯನ್ನು ತಮ್ಮದಾಗಿಸಿಕೊಳ್ಳಲು ಆಶಿಸಿದ್ದಾರೆ. ಪಂಪ ಕವಿಯ ಬಗೆಗೆ ಇಂದಿಗೂ ವಿಮರ್ಶಾತ್ಮಕ ಅಧ್ಯಯನ ನಿರಂತರವಾಗಿ ನಡೆಯುತ್ತಲೇ ಬಂದಿದೆ. ಇವೆಲ್ಲ ಆತನ ಸಾರಸ್ವತ ಪ್ರಪಂಚದ ಹೆಗ್ಗಳಿಕೆಗೆ ನಿದರ್ಶನಗಳಾಗಿವೆ.

ಕವಿಯ ಸ್ವವಿಷಯ ಕುರಿತ ಸಂಗತಿಗಳಿಂದಲೂ ಶಾಸನದ ಆಧಾರದಿಂದಲೂ ಆತನ ಬಗೆಗೆ ಕೆಲವು ವಿಷಯಗಳನ್ನು ಸಂಗ್ರಹಿಸಬಹುದಾಗಿದೆ.

ಅಪಾರ ಖ್ಯಾತಿಗೆ, ಸಹೃದಯರ ಆದರಕ್ಕೆ ಪಾತ್ರನಾಗಿರುವ ಪಂಪನು ತನ್ನನ್ನು ಪಂಪ ಎಂಬ ಹೆಸರಿನಿಂದ ಕರೆದುಕೊಂಡಿದ್ದರೂ ಆತನ ಹುಟ್ಟು ಹೆಸರು ಬೇರೆಯದಾಗಿರಬೇಕೆಂದು ಅದನ್ನು ಕಂಡುಹಿಡಿಯುವ ಕೆಲವು ಪ್ರಯತ್ನಗಳು ನಡೆದಿವೆ.

ಮುಳಿಯ ತಿಮ್ಮಪ್ಪಯ್ಯನವರು, "ನಾಕಿ ನಾಕಿಗ ನಾಗವರ್ಮ, ರನ್ನ-ರತ್ನ, ಜನ್ನ-ಜನ್ನಿಗ, ಜನಾರ್ದನ, ಎಂಬ ಪ್ರಸಿದ್ಧ ಕನ್ನಡ ಕವಿಗಳ ಹೆಸರುಗಳು ತದ್ಭವ ಸಂಸ್ಕೃತ ರೂಪಗಳೊಡನೆ ಆಯಾ ಕಾವ್ಯಗಳಲ್ಲೇ ದೊರೆಯುತ್ತವೆ. ಪೊನ್ನ ಎಂಬುದು ದೇಸಿಯೇ ಆಗಿರಬೇಕೆಂದು ತೋರುತ್ತಿದೆ. ಆದರೆ 'ಪಂಪ' ಎಂಬುದು ಮೂರರೊಳಗಾವ ಪಂಗಡವನ್ನು ಹೊಂದಿರಬಹುದು ಎಂಬುದನ್ನು ಯಾರೂ ಗಮನಿಸಿದಂತೆ ತೋರುವುದಿಲ್ಲ...ಪದ್ಮಪ್ರಭ ಎಂಬುದು ಆರನೆಯ ತೀರ್ಥಂಕರನ ಹೆಸರು. 'ಪದ್ಮ ಪ್ರಭ'–ಪದ್ಮಪ್ಪ (ಪದ್ಮ+ಅಪ್ಪ) – ಪದ್ಮಪ – ಪದ್ದಪ (ಪ್ಪ), ಪಮ್ಮಪ ಎಂದು ತಿರುಗುತ್ತಾ ಬಂದು ನಡುವಣ 'ಮ್ಮ'ಕಾರವು, ಹಿಂದೆ ದೃಷ್ಟಾಂತಿಸಿದಂತೆ ಸೊನ್ನೆಯಾಗಿ ಪಂಪ ಎಂದು ನೆಲೆಗೊಂಡಿರಬೇಕು......"[೧] ಎಂದು ಅಭಿಪ್ರಾಯ ಪಟ್ಟಿದ್ದಾರೆ. ಈ ಮೇಲಿನ ವಿಚಾರಗಳನ್ನು ಆಂಶಿಕವಾಗಿ ಒಪ್ಪಿಕೊಂಡು, ಪಂಪನ ಹುಟ್ಟು ಹೆಸರು, 'ಪದ್ಮಪ್ರಭ' ಎಂದು ಇದ್ದಿರಬೇಕೆಂದು ಕ. ವೆಂ. ರಾಜ

ಗೋಪಾಲರು ಅಭಿಪ್ರಾಯಪಟ್ಟಿದ್ದಾರೆ. ಪಂಪನು ೧೬ನೆಯ ಆಶ್ವಾಸದಲ್ಲಿ ವಿಶೇಷವಾಗಿ ಸ್ತುತಿಸಿರುವ 'ಮಾಣಿಕ್ಯ-ಜಿನೇಂದ್ರ' ಪದ್ಮಪ್ರಭ ತೀರ್ಥಂಕರನೆಂದು ಆಧಾರಗಳಿಂದ ಸ್ಪಷ್ಟಪಡಿಸಿ, ಪದ್ಮಪ್ರಭ ತೀರ್ಥಂಕರನು ಪಂಪನ ಮನೆದೇವರಿರಬೇಕೆಂದೂ ಆ ಹೆಸರೇ ಆತನದ್ದಾಗಿರಬೇಕೆಂದೂ ತಿಳಿಸಿದ್ದಾರೆ.[೨]

ಈ ಅಭಿಪ್ರಾಯಗಳೇನೇ ಇದ್ದರೂ, ಪಂಪನೇ ತನ್ನ ಹೆಸರನ್ನು ಹೇಳಿಕೊಳ್ಳದೆ ಇರುವುದು ಒಂದು ಕೊರತೆಯಾಗಿಯೇ ಉಳಿಯುತ್ತದೆ.

ಆದಿಪುರಾಣದ ಕೊನೆಯಲ್ಲಿ ಅದನ್ನು ತಾನು ಮುಗಿಸಿದ್ದು, 'ಶಕವರ್ಷಮೆಂಟುನೂಱಕ್ಕೆ ಕಡೆಯೊಳಱುವತ್ತುಮೂಱು ಸಂದಂದು' ಪ್ಲವ ಸಂವತ್ಸರದ ಕಾರ್ತಿಕ ನಂದೀಶ್ವರದಲ್ಲಿ ಎಂದು ಹೇಳಿದ್ದಾನೆ. ಇದು ಶಾಲಿವಾಹನ ಶಕ ೮೬೩ನೆಯ ವರ್ಷಕ್ಕೆ ಅಂದರೆ ಕ್ರಿ. ಶ. ೯೪೧ಕ್ಕೆ ಸರಿಹೊಂದುತ್ತದೆ. ಇದೇ ಆದಿಪುರಾಣದ ರಚನಾಕಾಲವೆಂದು ಇದುವರೆಗೂ ಸಾಮಾನ್ಯ ನಂಬಿಕೆಯಾಗಿತ್ತು. ಆದರೆ ಪಂಪನು ಕೊಟ್ಟಿರುವ "ಸಿತಪಕ್ಷದ ಪಂಚಮಿ ದಿನಪತಿವಾರಂ ಶುಭದ ಮೂಲ ನಕ್ಷತ್ರದೊಳನ್ವಿತಮಾಗೆ" ಎಂಬ ತಿಥಿವಾರ ನಕ್ಷತ್ರಗಳು ಕ್ರಿ. ಶ. ೯೪೧ನೆಯ ವರ್ಷಕ್ಕೆ ಸರಿಹೊಂದುವುದಿಲ್ಲವೆಂದೂ ೯೪೨ನೆಯ ಅಕ್ಟೋಬರ್ ೧೬ನೆಯ ತಾರೀಖು ಭಾನುವಾರಕ್ಕೆ ಸರಿಹೊಂದುವುದೆಂದೂ ಮಂಜೇಶ್ವರ ಶ್ರೀ ಗೋವಿಂದ ಪೈ ಅವರು ಲೆಕ್ಕ ಮಾಡಿ ನಿರ್ಧರಿಸಿದ್ದಾರೆ. 'ದುಂದುಭಿ ಸಂವತ್ಸರೋದ್ಭವಂ ಪಂಪಂ' ಎಂದು ಮತ್ತೊಂದು ಪದ್ಯದಲ್ಲಿ ಹೇಳಿದೆ. ಇದರ ಪ್ರಕಾರ ಆದಿಪುರಾಣವನ್ನು ಬರೆಯುವ ಹೊತ್ತಿಗೆ ಪಂಪನಿಗೆ ೩೯ ವರ್ಷ ವಯಸ್ಸೆಂದು ಗೊತ್ತಾಗುತ್ತದೆ. ಪಂಪ ಹುಟ್ಟಿದ್ದು ಶಾಲಿವಾಹನ ಶಕ ೮೨೪ಕ್ಕೆ ಸಲ್ಲುವ ಕ್ರಿ. ಶ. ೯೦೨-೩ ರಲ್ಲಿ ಎನ್ನಬಹುದು; ಹುಟ್ಟಿದ ದಿನ ಇಂಥದೆಂದು ಹೇಳಲಾಗುವುದಿಲ್ಲ.[೩] ಆದರೆ ಈ ತಿಥಿನಕ್ಷತ್ರಗಳಲ್ಲಿ ಹೊಂದಾಣಿಕೆಯಿಲ್ಲದಿರುವುದನ್ನು ಗಮನಿಸಿ, ಈ ಪದ್ಯಗಳಿಗೆ ಪಾಠಾಂತರವನ್ನು ಹೊಂದಿಸಿ ಬರೆದು ಪಂಚಮಿ ದಿನವನ್ನು ಪೌರ್ಣಮಿಯ ದಿನವೆಂದೂ ಕ್ರಿ. ಶ. ೯೪೧ ರ ನವೆಂಬರ್ ೭ರಂದು ಆದಿಪುರಾಣವು ಮತ್ತು ಕ್ರಿ. ಶ. ೯೪೨ ಮಾರ್ಚ್ ತಿಂಗಳಲ್ಲಿ 'ವಿಕ್ರಮಾರ್ಜುನ ವಿಜಯ'ವು ಪ್ರಕಟಗೊಂಡಿತೆಂದೂ ಪಂಪನು ಜನಿಸಿದ್ದು ೯೦೨ ಎಂದೂ ಗುರುತಿಸಲಾಗಿದೆ.[೪]

ಜಿನವಲ್ಲಭನ ಗಂಗಾಧರಂ (ಕುರಿಕ್ಯಾಲ) ಶಾಸನದಲ್ಲಿ ಪಂಪನಿಗೆ ಜಿನವಲ್ಲಭನೆಂಬ ತಮ್ಮನೊಬ್ಬನಿದ್ದಂತೆಯೂ ಪಂಪನ ಮಾತಾಪಿತೃಗಳು ಅಬ್ಬಣಬ್ಬೆ ಭೀಮಪ್ಪಯ್ಯರೆಂದೂ ತಿಳಿದುಬಂದಿದೆ. ಅಲ್ಲದೆ ಪಂಪನ ತಾಯಿ ಅಬ್ಬಣಬ್ಬೆ ಅಣ್ಣಿಗೆಱೆಯ ಜೋಯಿಸಸಿಂಘನ ಮೊಮ್ಮಗಳೆಂದೂ ಪಂಪನ ತಂದೆ ಭೀಮಪ್ಪಯ್ಯ ನಿಡುಂಗೊಂಡೆಯ ಅಭಿಮಾನ ಚಂದ್ರನ ಮೊಮ್ಮಗನೆಂದೂ ಆ ಶಾಸನದಲ್ಲಿ ಹೇಳಿದೆ.[೫] ಪಂಪನ ತಂದೆ ಬ್ರಾಹ್ಮಣಕುಲಕ್ಕೆ ಒಪ್ಪುವ ಧರ್ಮ ಎಂದರೆ ಜೈನಧರ್ಮವೇ ಎಂದು ನಂಬಿ ಆ ಧರ್ಮಕ್ಕೆ ಸೇರಿಕೊಂಡನು.

ಪಂಪನ ತಂದೆಯ ಕಡೆಯ ಪೂರ್ವಜರು ವೆಂಗಿಮಂಡಲದವರು. ಇದು ಕೃಷ್ಣಾ ಗೋದಾವರೀ ನದಿಗಳ ನಡುವೆ ಪೂರ್ವಕ್ಕೆ ಸಮುದ್ರವೇ ಮೇರೆಯಾಗಿ, ಪಶ್ಚಿಮಕ್ಕೆ ಪೂರ್ವಘಟ್ಟಗಳೇ ಮೇರೆಯಾಗಿರುವ ಭೂಪ್ರದೇಶ. ತಾಯಿಯ ಕಡೆಯವರು ಬೆಳ್ವೊಲ ಪ್ರಾಂತದವರು. ಇದು ಈಗಿನ ಧಾರವಾಡ ಜಿಲ್ಲೆಯ ಗದಗ, ರೋಣ ಮತ್ತು ನವಲಗುಂದ

ಭಾಗಗಳನ್ನೊಳಗೊಂಡಿದ್ದು ಬೆಳ್ವೊಲ ೩೦೦ ಎಂದು ಶಾಸನಗಳಲ್ಲಿ ಉಲ್ಲೇಖಿಸಲ್ಪಟ್ಟಿದೆ. ತಂದೆಯ ಕಡೆಯವರು ವೆಂಗಿನಾಡಿನ ಸಪ್ತಗ್ರಾಮಗಳಲ್ಲಿ ಒಂದಾದ ವೆಂಗಿಪಳು ಅಥವಾ ವೆಂಗಿಪರ್ರು ಎಂಬ ಪ್ರಸಿದ್ಧವಾದ ಅಗ್ರಹಾರಕ್ಕೆ ಮೂಲತಃ ಸೇರಿದವರು. ಈ ಅಗ್ರಹಾರ ಈಗಿನ ಗುಂಟೂರು ಜಿಲ್ಲೆಯ ಬಾಪಟ್ಲಾ ತಾಲ್ಲೂಕಿನಲ್ಲಿರುವ ವಂಗೀಪುರವೆಂದು ಗುರುತಿಸಲಾಗಿದೆ. ವೆಂಗಿಪರ್ರು ಕಮ್ಮೆ ಬ್ರಾಹ್ಮಣರೆಂದು ಹೆಸರಾಗಿದ್ದ ಇವರು ಜಮದಗ್ನಿ ಪಂಚಾರ್ಷೇಯ ಪ್ರವರದ ಶ್ರೀವತ್ಸ ಗೋತ್ರಜರು. ಇವರು ವಿದ್ಯಾವಂತರೂ ಕರ್ಮನಿಷ್ಠರೂ ಸ್ಥಿತಿವಂತರೂ ಉದಾರಿಗಳೂ ಆಗಿದ್ದು, ವೆಂಗಿನಾಡಿನ ಸಪ್ತಗ್ರಾಮಗಳೆಂದು ಹೆಸರಾಗಿದ್ದಂತೆ ತೋರುವ ವೆಂಗಿಪರ್ರು, ವಸಂತ, ಕೊಟ್ಟೂರು, ನಿಡುಗುಂದಿ (ನಿಡುಗೊಂಡೆ), ವಿಕ್ರಮಪುರ ಈ ಮುಂತಾದ ಅಗ್ರಹಾರಗಳಲ್ಲಿ ತಮ್ಮ ವೈದಿಕ ವೃತ್ತಿಯಿಂದ ಜನಪ್ರಿಯರಾಗಿದ್ದರೆಂದು ಭಾವಿಸಬಹುದು.[೬]

ಪಂಪನ ಪೂರ್ವಜರು ವೆಂಗಿಪಜ್ರು ಎಂಬ ಗ್ರಾಮಕ್ಕೆ ಸೇರಿದವರೆಂದೂ ಕ್ರಮೇಣ ಜೀವನೋಪಾಯಕ್ಕಾಗಿ ಅವರು ಬೋದನದಲ್ಲಿ ನೆಲೆಸಬೇಕಾಯಿತೆಂದೂ ತಿಳಿದುಬರುತ್ತದೆ.[೭] ಬೋದನ ಬಹಳ ಪ್ರಾಚೀನ ಹಾಗೂ ಚಾಳುಕ್ಯರ ಒಂದು ಶಾಖೆಗೆ ರಾಜಧಾನಿ ಕೂಡ. ಪಂಪನ ಆತ್ಮೀಯನಾದ ಇಮ್ಮಡಿ ಅರಿಕೇಸರಿಯ ಹಾಗೂ ಆತನ ವಂಶದ ಹಿರಿಯರಲ್ಲಿ ಪ್ರಥಮನಾದ ಯುದ್ಧಮಲ್ಲನಿಂದ ಹಿಡಿದು ಅವರಿಗೆ ಬೋದನ ರಾಜಧಾನಿ. ಈ ಸಂಗತಿಯು ಶಾಸನಗಳಿಂದ ಹಾಗೂ ಪಂಪನ ಪ್ರಶಸ್ತಿ ಕಾವ್ಯ 'ವಿಕ್ರಮಾರ್ಜುನ ವಿಜಯ' ಇವುಗಳಿಂದ ಖಚಿತವಾಗಿದೆ.[೮] ಕಳೆದು ಹೋಗಿರುವ ಕನ್ನಡನಾಡು—ಈಗ ಆಂಧ್ರ ಹಾಗೂ ಮಹಾರಾಷ್ಟ್ರಗಳ ಪರಿಸರದಲ್ಲಿ ಅಡಗಿಹೋದ ನಾಡು—ಪಂಪಕವಿಯ, ಅವನ ಪೂರ್ವಜರ.....ನೆಲೆವೀಡಾಗಿತ್ತು. ಪಂಪನು ಬನವಾಸಿಯನ್ನು ಕಂಡು ಆ ನಾಡಿನ ನಿಸರ್ಗ ಸೌಂದರ್ಯವನ್ನು ನಿರೂಪಿಸಿದ ಮಾತ್ರಕ್ಕೆ ಅದು ಅವನ ನೆಲೆವೀಡಲ್ಲವೆಂಬುದನ್ನು ಖಚಿತಪಡಿಸಿದೆ ಈ ಶಾಸನ. ಆ ಮಹಾಕವಿಯ ಬಗ್ಗೆ ಏನಾದರೂ ಸ್ಮಾರಕ ಎಂದಾದರೂ ಯಾರಾದರೂ ಕಟ್ಟಿದರೆ ಬೋದನದಲ್ಲಿ ಕಟ್ಟಬೇಕೆಂದು ಸೂಚಿಸುವ ಮೈಲಿಗಲ್ಲಾಗಿದೆ. ಬೋದನ ಈಗ ಆಂಧ್ರ ಪ್ರದೇಶದ ನಿಜಾಮಾಬಾದ್ ಜಿಲ್ಲೆಯಲ್ಲಿ ಇದೇ ಹೆಸರಿನ ತಾಲ್ಲೂಕು ಸ್ಥಳವೂ ಆಗಿದೆ.[೯]

ಪಂಪನು ಕವಿಯಾದಂತೆ ಕಲಿಯೂ ಆಗಿದ್ದನು ಎಂಬುದನ್ನು ಆತನ ಪಂಪಭಾರತವು ಧ್ವನಿಸಿದರೂ(XIV-೪೯, ೫೦, ೫೧) ಚಾಮುಂಡರಾಯನಲ್ಲಿ ದೊರಕುವಂತೆ ನೇರ ಸಾಕ್ಷಿಗಳು ಪಂಪನಲ್ಲಿ ದೊರೆಯುವುದಿಲ್ಲ. ಆದರೂ ಪಂಪ ವೀರೋಚಿತ ವಿಶೇಷಣಗಳಿಂದ ತನ್ನನ್ನು ಬಣ್ಣಿಸಿಕೊಂಡಿರುವುದು ಸುಳ್ಳಲ್ಲ.

ಪಂಪಂ ಧಾತ್ರೀವಳಯ ನಿ | ಳಿಂಪಂ ಚತುರಂಗ ಬಳ ಭಯಂಕರಣಂ ನಿ ||
ಷ್ಕಂಪಂ ಲಲಿತಾಲಂಕರ | ಣಂ ಪಂಚಶರೈಕರೂಪನಪಗತ ಪಾಪಂ || (ಪಂಪಭಾ. XIV-೪೯)

ಪಂಪ ಬಾಳಿದುದು ಹತ್ತನೆಯ ಶತಮಾನದಲ್ಲಿ. ಅದು ರಾಷ್ಟ್ರಕೂಟರ, ಚಾಳುಕ್ಯರ ಪ್ರಾಬಲ್ಯದ ಕಾಲ; ಕ್ಷಾತ್ರ ತೇಜಸ್ಸು ಪ್ರಜ್ವಲಿಸುತ್ತಿದ್ದ ಕಾಲ. ವೀರರ ಆದರ್ಶ, ಸಾಹಸ, ಛಲ, ಬಲ, ನನ್ನಿ, ಧರ್ಮ, ಚಾಗ, ಅಭಿಮಾನ, ಶೌಚ ಇವೆಲ್ಲವೂ ಪಂಪ ಬಾಳಿದ ಸಮಾಜದ ಮನೆ ಮಾತಾಗಿತ್ತು. ಚಾಳುಕ್ಯವಂಶದ ಎರಡನೆಯ ಅರಿಕೇಸರಿ, ಪಂಪ ಕವಿಯ

ಪೋಷಕ.[೧೦] ಈ ಅರಿಕೇಸರಿಯ ತಂದೆ ಪ್ರಸಿದ್ಧನಾದ ನರಸಿಂಗ ಮಹೀಶ; ತಾಯಿ ಜಾಕವ್ವೆ.[೧೧] ಅರಿಕೇಸರಿಯನ್ನು 'ಗುಣಾರ್ಣವ'ನೆಂದೂ 'ಆರೂಢಸರ್ವಜ್ಞ'ನೆಂದೂ ಕವಿ ಹೊಗಳಿದ್ದಾನೆ.[೧೨] ಕುರಿಕ್ಯಾಲ ಶಾಸನವು 'ವಿಕ್ರಮಾರ್ಜುನವಿಜಯ'ವನ್ನು ಬರೆದುದಕ್ಕಾಗಿ ಅರಿಕೇಸರಿಯು ಪಂಪನಿಗೆ ನೀಡಿದ ಧರ್ಮಪುರದ ದತ್ತಿಯ ಬಗೆಗೆ ಸೂಚಿಸುತ್ತದೆ.

ಪಂಪನು ತನ್ನ ಹಿಂದಿನ ಕವಿಗಳಲ್ಲಿ ವ್ಯಾಸರನ್ನಲ್ಲದೆ[೧೩] ಮತ್ತಿನ್ನಾವ ಕವಿಗಳನ್ನೂ ಸ್ಮರಿಸಿಲ್ಲ. ಈತನಿಗೆ ತನ್ನ ಕವಿತಾಶಕ್ತಿಯ ಬಗೆಗೆ ತುಂಬ ಆತ್ಮವಿಶ್ವಾಸ. 'ಸುಕವಿಜನ ಮನೋಮಾನಸೋತ್ತಂಸಹಂಸಂ', 'ಕವಿತಾಗುಣಾರ್ಣವಂ', 'ಸಂಸಾರಸಾರೋದಯಂ', 'ಸರಸ್ವತೀಮಣಿಹಾರಂ' ಇವು ಈತನ ಬಿರುದುಗಳು. 'ಕವಿತಾಗುಣಾರ್ಣವ' ಎಂಬುದು ಆಶ್ವಾಸಾಂತ್ಯ ಗದ್ಯಗಳಲ್ಲಿ, ಆತನ ಎರಡೂ ಕಾವ್ಯಗಳಲ್ಲಿ ಬರುತ್ತದೆ. ತನ್ನ ಪೋಷಕನಾದ ಅರಿಕೇಸರಿಯ ಬಿರುದು 'ಗುಣಾರ್ಣವ' ಎಂಬುದನ್ನು, ತನ್ನ ಬಿರುದಾದ 'ಕವಿತಾಗುಣಾರ್ಣವ' ಎಂಬುದನ್ನು ಅಲ್ಲಲ್ಲಿ ವಿಕ್ರಮಾರ್ಜುನವಿಜಯದಲ್ಲಿ ಒಟ್ಟಿಗೆ ಹೇಳಿದ್ದಾನೆ. 'ಸುಕವಿಜನಮನೋಮಾನಸೋತ್ತಂಸಹಂಸಂ', 'ಸಂಸಾರಸಾರೋದಯಂ' ಎಂಬುದು 'ಆದಿಪುರಾಣ'ದ ಪ್ರತಿ ಆಶ್ವಾಸದಲ್ಲಿಯೂ ಬರುತ್ತದೆ. ರನ್ನನು ಈತನನ್ನು 'ಸುಭಗ' ಕವಿಯೆಂದೂ[೧೪] ನಾಗಚಂದ್ರನು 'ಸುಕವಿ' ಎಂದೂ[೧೫] ಆಚಣ್ಣನು 'ಹಂಪದೇವ'ನೆಂದೂ[೧೬] ಮಧುರನು 'ಆದಿಪಂಪ'ನೆಂದೂ ಹೊಗಳಿದ್ದಾರೆ, ಗೌರವಿಸಿದ್ದಾರೆ. ಆದಿಕವಿ ಪಂಪನನ್ನು 'ನಾಡೋಜ'ನೆಂದೂ 'ಮಹಾಕವಿ' ಎಂದೂ ಸಾಹಿತ್ಯಜ್ಞರು ಕರೆದಿದ್ದಾರೆ.

ಪಂಪ ತನ್ನ ವ್ಯಕ್ತಿಚಿತ್ರವನ್ನು ಕುರಿತ ಮಾತುಗಳನ್ನು ಆದಿಪುರಾಣ ಪೀಠಿಕೆಯಲ್ಲಿ ಹೇಳಿಕೊಂಡಿದ್ದಾನೆ.

ಕದಲೀಗರ್ಭಶ್ಯಾಮಂ | ಮೃದುಕುಟಿಲಶಿರೋರುಹಂ ಸರೋರುಹವದನಂ |
ಮೃದುಮಧ್ಯಮತನು ಹಿತಮಿತ| ಮೃದುವಚನಂ ಲಲಿತಮಧುರಸುಂದರವೇಷಂ ||

( ಆದಿಪು. I-೨೯)

ಪಂಪನಿಗೆ ಬಾಳೆಯ ಸುಳಿಯಂತೆ ನಸುಗಪ್ಪಾದ ಮೈಬಣ್ಣ; ಮೃದುವಾದ ಗುಂಗುರು ಕೂದಲು; ತಾವರೆಯಂತೆ ದುಂಡುಮುಖ; ಎತ್ತರವೂ ಕುಳ್ಳೂ ಅಲ್ಲದ ಮಧ್ಯಮತರದ ಆಕೃತಿ; ಹಿತಮಿತವಾದ ಮೃದುವಚನ; ದುಂದುಭಿಯಂತೆ ಗಂಭೀರವಾದ ದನಿ; ಒಟ್ಟಾರೆ ಹೇಳುವುದಾದರೆ ಆತನದು ಲಲಿತ ಮಧುರ ಸುಂದರ ರೂಪು.

ಪಂಪನ ಕೃತಿಗಳು ಎರಡು. 'ಆದಿಪುರಾಣ' ಮತ್ತು 'ವಿಕ್ರಮಾರ್ಜುನವಿಜಯ' ಅಥವಾ 'ಪಂಪಭಾರತ'. "ಮುನ್ನಿನ ಕಬ್ಬಮನೆಲ್ಲಮಿಕ್ಕಿಮೆಟ್ಟಿದವು ಸಮಸ್ತಭಾರತಮುಮಾದಿ ಪುರಾಣ ಮಹಾಪ್ರಬಂಧಮುಂ" (ವಿಕ್ರವಿ. XIV-೫೯) ಎಂದು ಹೇಳಿದ್ದಾನೆ. ಇಂತಹ ಆತ್ಮವಿಶ್ವಾಸವುಳ್ಳ ಕವಿ ಭಾರತವನ್ನು ಆರು ತಿಂಗಳಲ್ಲಿ, ಆದಿಪುರಾಣವನ್ನು ಮೂರು ತಿಂಗಳಲ್ಲಿ ರಚಿಸಿದನೆಂದು ತಾನೇ ಹೇಳಿಕೊಂಡಿದ್ದಾನೆ. "ಬೆಳಗುವೆನಿಲ್ಲಿ ಲೌಕಿಕಮನಲ್ಲಿ ಜಿನಾಗಮಮಂ" (ವಿಕ್ರವಿ. XIV-೬೦) ಎಂದು ಹೇಳಿದ್ದಾನೆ. ಕವಿತಾರಚನೆಯಿಂದ ಪಂಪನು ಅಪೇಕ್ಷಿಸುವ ಫಲ ಇತರರಂತೆ ಪೂಜೆ, ನೆಗಳ್ತೆ, ಲಾಭ ಮುಂತಾದ ಲೌಕಿಕ ಪ್ರಾಪ್ತಿಗಳಾಗಿರದೆ ಜಿನೇಂದ್ರ ಗುಣಸ್ತುತಿಯಿಂದ ಪಡೆಯುವ ಇಂದ್ರಪೂಜೆ, ಭುವನಸ್ತುತಮಪ್ಪ ನೆಗಳ್ತೆ, ಮುಕ್ತಿ ಇವೇ ಹೆಚ್ಚಿನದೆನ್ನುತ್ತಾನೆ. ಸುಸಂಸ್ಕೃತ ಮನೆತನದಲ್ಲಿ ಹುಟ್ಟಿ,

ಗುರುಕುಲದಲ್ಲಿ ಅಧ್ಯಯನವನ್ನು ನಡೆಸಿದ ಪಂಪನಲ್ಲಿ ಆಧ್ಯಾತ್ಮಿಕ ಮನೋಭಾವ ಸಹಜವಾಗಿ ಮೂಡಿಬಂದಿದೆ. ಲೌಕಿಕ ಧಾರ್ಮಿಕ ಕಾವ್ಯಗಳೆಂದು ಪಂಪ ವಿಂಗಡಿಸಿರುವ ಮಾತು ವಿರೋಧಾಭಾಸವೆಂಬ ದೃಷ್ಟಿಕೋನ ಕೆಲವು ವಿಮರ್ಶಕರಲ್ಲಿ ಕಂಡುಬರುತ್ತದೆ. ಲೌಕಿಕ ಕಾವ್ಯವೆನಿಸಿದಲ್ಲಿಯೂ ಬದುಕಿನ ಮೌಲ್ಯಗಳನ್ನು ಕಂಡುಕೊಳ್ಳಲು ಹೆಣಗಾಡಿದ್ದಾನೆ ಎಂಬೀ ಮುಂತಾದ ಮಾತುಗಳನ್ನು ಅವರಲ್ಲಿ ಕಾಣಬಹುದು.[೧೭] ಆದರೆ ಈ ಮಾತು ಸರಿದೋರದು. ಆದಿಪುರಾಣದ ನಾಯಕನಾದ ವೃಷಭ ಧಾರ್ಮಿಕ ವ್ಯಕ್ತಿ; ಭಾರತ ಲೌಕಿಕ ಕಥೆ. ಈ ದೃಷ್ಟಿಯಿಂದ ಪಂಪನ ವಿಂಗಡಣೆ ಸಮಂಜಸವಾಗಿದೆ. ಅಲ್ಲದೆ ಪಂಪನ ದೃಷ್ಟಿಕೋನ ಆಯಾ ಕಾವ್ಯಗಳಲ್ಲಿ ಆತನೇ ತಿಳಿಸಿರುವಂತೆ ಧಾರ್ಮಿಕ, ಲೌಕಿಕಗಳಾದರೂ ಹಾಗೆ ಅಡ್ಡಗೆರೆಯನ್ನು ಹಾಕಿ ನೋಡುವುದು ಸಾಧುವಾಗಿ ಕಾಣಿಸುವುದಿಲ್ಲ. ಧಾರ್ಮಿಕ ನೆಲೆಗೆ ಏರುವುದು ಲೌಕಿಕ ಅಡಿಪಾಯದಿಂದಲೇ. ಇವು ಒಂದಕ್ಕೊಂದಕ್ಕೆ ಪೂರಕವಾದವುಗಳು.

ಆದಿಪುರಾಣ ಒಂದು ಚಂಪೂಕಾವ್ಯವಾಗಿದ್ದು ಒಟ್ಟು ೧೬ ಆಶ್ವಾಸಗಳಿವೆ. ನಡುನಡುವೆ ಗದ್ಯಭಾಗದ ವಿನ್ಯಾಸದಿಂದ ಕೂಡಿ ವಿವಿಧ ಪದ್ಯಜಾತಿಗಳನ್ನೊಳಗೊಂಡ ೧೬೩೦ ಪದ್ಯಗಳಿವೆ. ವೃಷಭನಾಥನೇ ಆದಿಪುರಾಣದ ನಾಯಕ. ಆತನ ಕಥೆಯ ಜೊತೆಗೆ ಆತನ ಮಕ್ಕಳಾದ ಭರತ ಬಾಹುಬಲಿಗಳ ಕಥೆ ಪ್ರಮುಖವಾಗಿ ಬರುತ್ತದೆ. ವೃಷಭನ ಭವಾವಳಿಗಳಾದ ಜಯವರ್ಮ, ಮಹಾಬಲ, ಲಲಿತಾಂಗ, ವಜ್ರಜಂಘ, ಆರ್ಯ, ಶ್ರೀಧರದೇವ, ಸುವಿಧಿ, ಅಚ್ಯುತೇಂದ್ರ, ವಜ್ರನಾಭಿ ಮತ್ತು ಅಹಮಿಂದ್ರರ ಕಥೆಯೂ ಆತನ ವರ್ತಮಾನ ಕಥೆಯಾದ ಪಂಚಕಲ್ಯಾಣರೂಪದ ವಿವರಗಳೂ ಬರುತ್ತವೆ. ಜೊತೆಗೆ ಪ್ರಥಮಚಕ್ರಿಯಾದ ಭರತ, ಪ್ರಥಮ ಕಾಮದೇವನಾದ ಬಾಹುಬಲಿ, ಆದಿದಾನತೀರ್ಥಪ್ರವರ್ತನಾದ ಶ್ರೇಯಾಂಸ, ಪ್ರಥಮಗಣಧರ ವೃಷಭಸೇನ, ಜನ್ಮಜನ್ಮಗಳಲ್ಲಿ ಜೊತೆಜೊತೆಯಲ್ಲಿಯೇ ಸುಖದುಃಖವರ್ತಿಗಳಾದ ಐವರು ಮಕ್ಕಳು—ಇವರುಗಳ ಭವಾವಳಿ, ವರ್ತಮಾನ ವೃತ್ತಾಂತಗಳೂ ಇದರಲ್ಲಿ ನಿರೂಪಿತವಾಗಿವೆ. ಇವರುಗಳ ಜೊತೆಗೆ ಮಹಾಬಲ ಹಾಗೂ ಆತನ ಸಹಮಂತ್ರಿಗಳ, ಯುಗಂಧರ ತೀರ್ಥಂಕರರೇ ಮೊದಲಾದವರ ಕಥೆಗಳೂ ಸಂಕ್ಷೇಪರೂಪದಲ್ಲಿ ಬಂದಿವೆ.

ಗ್ರಂಥದ ಮೊದಲ ಆರು ಆಶ್ವಾಸಗಳು ಆದಿನಾಥನ ಪೂರ್ವಜನ್ಮದ ಕಥೆಗೆ, ಉಳಿದ ನಾಲ್ಕು ಆಶ್ವಾಸಗಳು ಆತನ ವರ್ತಮಾನಭವದ ನಾಲ್ಕು ಕಲ್ಯಾಣಗಳಿಗೆ ಹಾಗೂ ಧರ್ಮೋಪದೇಶ ಮೊದಲಾದ ವಿವರಗಳಿಗೆ ಮೀಸಲಾಗಿವೆ. ಕೊನೆಯ ನಾಲ್ಕು ಆಶ್ವಾಸಗಳಲ್ಲಿ ಆದಿನಾಥನ ನಿರ್ವಾಣಕಲ್ಯಾಣದ ವಿಷಯವಿದೆ.

ಜಿನಸೇನರ 'ಪೂರ್ವಪುರಾಣ' ಈತನ ಕೃತಿಗೆ ಆಕರ. ಇಲ್ಲಿ ಕವಿ ಮೂಲದ ಸನ್ನಿವೇಶವನ್ನು ಕೆಲವೆಡೆ ಹಿಗ್ಗಿಸಿ, ಕುಗ್ಗಿಸಿ, ಕುಶಲ ಸಂಗ್ರಾಹಕನೂ, ಸಂಯೋಜಕನೂ ಆಗಿ ಕಂಡುಬರುತ್ತಾನೆ.

ಜೈನಪುರಾಣದ ಸಂಪ್ರದಾಯದಂತೆ ಲೋಕಸ್ವರೂಪದಿಂದಲೇ ಕಥೆಯ ಆರಂಭವಾಗುತ್ತದೆ. ತಾನು ಹೇಳಿಕೊಂಡಿರುವ ಪದ್ಧತಿಯಿಂದಲೇ ಕಾವ್ಯವನ್ನು ರೂಪಿಸಿದ್ದಾನೆ. ಲೋಕ, ದೇಶ, ಪುರ, ರಾಜ್ಯ, ತೀರ್ಥ, ತಪೋದಾನ, ಗತಿ ಮತ್ತು ಫಲ ಎಂಬ ಎಂಟು ಆಖ್ಯಾನಗಳ ಪುರಾಣ ಲಕ್ಷಣಗಳ ಚೌಕಟ್ಟಿನಲ್ಲಿ ಪಂಪನ ಕಲಾಕುಸುರಿ ರೂಪಿತವಾಗಿದೆ.

ಪುರಾಣ ಕಾವ್ಯವಾದರೂ ಶುಷ್ಕತೆಯಿಲ್ಲ. ತೀರ ಮತೀಯ ವಿವರಗಳನ್ನೊಳಗೊಂಡ ಭಾಗವನ್ನು ಬಿಟ್ಟರೆ ಕಾವ್ಯ ರಸಭಾವ ಸಮೃದ್ಧಿಯಿಂದ ಕೂಡಿದೆ. ಜನ್ಮಜನ್ಮಾಂತರದ ನಿರೂಪಣೆಯಲ್ಲಿ ಜನ್ಮಜನ್ಮದಲ್ಲಿ ಜೀವನ ತೊಳಲಾಟ, ರಾಗಮೋಹ, ಹುಟ್ಟುಸಾವುಗಳ ಕೋಟಲೆ ಇವುಗಳ ಹೃದಯಸ್ಪರ್ಶಿ ನಿರೂಪಣೆಯಿದೆ.

ಆದಿಪುರಾಣದಲ್ಲಿ ಹಲವಾರು ಕಡೆಗಳಲ್ಲಿ ಸಂಸ್ಕೃತ ಕಾವ್ಯಗಳಲ್ಲಿ ಸಾಮಾನ್ಯವಾಗಿ ಕಾಣಸಿಗದ ರಸಸ್ಥಾನಗಳಿವೆ. ಪಂಪ ಹೇಳಿದಂತೆ ಧರ್ಮ ಮತ್ತು ಕಾವ್ಯಧರ್ಮ ಇವುಗಳ ಸಮನ್ವಯವು ಬಹುಶಃ ಸಾಧಿಸಿದೆ. ಇಲ್ಲಿ ಧರ್ಮ ಎಂಬ ಸಾಮಾನ್ಯಪದದಲ್ಲಿ ಜೈನಧರ್ಮ, ವಿಶ್ವಧರ್ಮ ಇರಡೂ ಸೇರಿಕೊಂಡಿವೆ. ಸಂಸಾರಸಾಗರದಲ್ಲಿ ಮುಳುಗಿದವರನ್ನು ದಯೆ, ದಮ, ದಾನ, ತಪಸ್ಸು, ಶೀಲ ಎಂಬ ಈ ತತ್ತ್ವಗಳೇ ಮೈಯಾಗಿರುವ ಧರ್ಮವು ಮುಕ್ತಿಪಡೆಯುವವರೆಗೆ ಎತ್ತುವುದು. ಜೈನಧರ್ಮದಲ್ಲಿ ಹೇಗೋ ಯಾವ ಧರ್ಮದಲ್ಲಿಯೂ ಈ ತತ್ತ್ವ ಮಾನ್ಯವಾಗುವಂಥದು.[೧೮]

ಕಥೆಯನ್ನು ನಿರೂಪಿಸಿರುವ ವಿಧಾನ ವೈವಿಧ್ಯಮಯವಾದುದು. ಒಮ್ಮೊಮ್ಮೆ ಪಾಂಡಿತ್ಯ ಪ್ರದರ್ಶನದ ಆರ್ಭಟ, ಕೆಲವೊಮ್ಮೆ ಮೃದುಮಧುರಮಾತು ಹೀಗೆ ಸಮ್ಮಿಶ್ರಗೊಂಡು ನಡಿಗೆ ಸಾಗುತ್ತದೆ. ಅನೇಕ ವರ್ಣನಾ ವಿನ್ಯಾಸಗಳಿಂದ, ಸುಂದರ ಸನ್ನಿವೇಶರಚನೆಗಳಿಂದ, ಅಲಂಕಾರ ವೈವಿಧ್ಯದಿಂದ, ಈ ಮೊದಲಾದ ಕಾವ್ಯಗುಣಗಳಿಂದ ಈ ಕಾವ್ಯ ಅಪೂರ್ವವೆನಿಸುತ್ತದೆ.

ಪಂಪಭಾರತ ಪಂಪನ ದ್ವಿತೀಯವೂ ಅದ್ವಿತೀಯವೂ ಆದ ಕೃತಿಯಾಗಿದೆ. 'ಇದು ಕನ್ನಡದ ಅಗ್ರಕಾವ್ಯ, ಆದಿಕಾವ್ಯ. ಈ ಭಾಷೆಯ ಒಂದು ಅವಿಭಕ್ತವಾದ ಅಂಗ; ಈ ಸಾಹಿತ್ಯದ ಪೋಷಕ ಶಕ್ತಿ, ಕಾವ್ಯೋನ್ನತಿಯ ಶಿಖರಸ್ಥಾನ'[೧೯] ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ.

ಇದರಲ್ಲಿ ಒಟ್ಟು ಹದಿನಾಲ್ಕು ಆಶ್ವಾಸಗಳಿವೆ. ಆಶ್ವಾಸ ೧ ರಿಂದ ೫ರ ವರೆಗೆ ಆದಿಪರ್ವವಿದೆ. ಸಭಾಪರ್ವ, ಅರಣ್ಯಪರ್ವ, ವಿರಾಟಪರ್ವ, ಉದ್ಯೋಗಪರ್ವ, ಭೀಷ್ಮಪರ್ವ, ದ್ರೋಣಪರ್ವ, ಕರ್ಣಪರ್ವ, ಶಲ್ಯಪರ್ವ, ಗದಾಪರ್ವ, ಸೌಪ್ತಿಕ ಪರ್ವ, ಸ್ತ್ರೀಪರ್ವ, ಶಾಂತಿಪರ್ವಗಳು ಉಳಿದ ಆಶ್ವಾಸಗಳಲ್ಲಿ ಬಂದಿವೆ.

ಬಹಳ ವಿಸ್ತಾರವಾದ ಸಂಸ್ಕೃತದ ಮಹಾಭಾರತ ಕಥೆಯನ್ನು ಇಷ್ಟು ಅಂದವಾಗಿ ಸಂಗ್ರಹಿಸಿ ಮುಖ್ಯವಾದ ವಿಷಯವನ್ನೊಂದೂ ಬಿಡದೆ, ಮೂಲಕಾವ್ಯದ ಪುನರುಕ್ತಿಗಳಿಗೂ ಕಥೆಗೆ ಅವಶ್ಯವಲ್ಲದ ಉಪಾಖ್ಯಾನಗಳಿಗೂ ಎಡೆಗೊಡದೆ, ಕಥಾಸರಣಿಯು ನಿರರ್ಗಳವಾಗಿ ಹರಿಯುವಂತೆ ರಚಿಸುವ ಕೌಶಲವು ಪಂಪನಿಗಲ್ಲದೆ ಬೇರೊಬ್ಬ ಕವಿಗೆ ಸಲ್ಲದು. ಕಥೆಯನ್ನು ಅಲ್ಲಲ್ಲಿ ಅಲ್ಪ ಸ್ವಲ್ಪ ಮಾರ್ಪಡಿಸಿದ್ದರೂ ಈ ಕಾವ್ಯಕ್ಕೆ ವ್ಯಾಸ ಭಾರತವೇ ಮೂಲವೆಂದು ತೋರುವುದು.[೨೦]

ಇಲ್ಲಿ ಅರ್ಜುನನನ್ನೇ ನಾಯಕನನ್ನಾಗಿ ಮಾಡಿ ಭಾರತಕಥೆಯನ್ನು ನಿರೂಪಿಸಲಾಗಿದೆ. ತನ್ನ ಆಶ್ರಯದಾತನಾದ ಅರಿಕೇಸರಿಯನ್ನು ಅರ್ಜುನನಿಗೆ ಸಮೀಕರಿಸಿ ಹೇಳಿರುವುದರಿಂದ ಇದು ಒಂದು ರೀತಿ ದ್ವಿಸಂಧಾನಕಾವ್ಯವಾಗಿ ಕಂಡುಬರುತ್ತದೆ. ಗುಣಾರ್ಣವ ಭೂಭುಜನಂ ಕಿರೀಟಿಯೊಳ್ ತಗುಳ್ಚಿ ಪೋಲಿಪೊಡೆನಗಚ್ತೆಯಾದುದು (I-೧೪) ಎಂದು ಹೇಳಿಕೊಂಡಿ

ದ್ದಾನೆ. ತನ್ನ ಪ್ರಭುವಾದ ಅರಿಕೇಸರಿಯ (ಗುಣಾರ್ಣವನ) ವಂಶವರ್ಣನೆಯನ್ನು ಗ್ರಂಥಾರಂಭದಲ್ಲಿ ವಿಸ್ತಾರವಾಗಿ ಮಾಡಿದ್ದಾನೆ. ಅಲ್ಲದೆ ದೇವತಾಸ್ತುತಿಯಲ್ಲಿ ತನ್ನ ಸ್ವಾಮಿಯ ಬಿರುದುಗಳಾದ 'ಉದಾತ್ತ ನಾರಾಯಣ', 'ಉದಾರಪರಮೇಶ್ವರ', 'ಪ್ರಚಂಡ ಮಾರ್ತಾಂಡ', 'ಸಹಜ ಮನೋಜ' ಎಂಬುದನ್ನು ಸಂದರ್ಭಕ್ಕೆ ತಕ್ಕಂತೆ ಉಪಯೋಗಿಸಿ ಇಂತಹ ಸ್ವಾಮಿಯು ತನ್ನ ಇಷ್ಟಾರ್ಥವನ್ನು ಕೊಡಲಿ ಎಂದು ಪ್ರಾರ್ಥಿಸಿದ್ದಾನೆ.

ಅರ್ಜುನನನ್ನು ಕಥಾನಾಯಕನನ್ನಾಗಿ ಮಾಡಿಕೊಂಡು ಸುಭದ್ರೆಗೆ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಟ್ಟಿರುವುದು ಇಲ್ಲಿ ಮುಖ್ಯ ವ್ಯತ್ಯಾಸ. ದ್ರೌಪದಿಯ ಸ್ಥಾನ ಮಾತ್ರ ಸಂದಿಗ್ಧ. ವ್ಯಾಸಭಾರತದಲ್ಲಿ ಪಂಚಪಾಂಡವರಿಗೆಲ್ಲ ಅವಳೊಬ್ಬಳೆ ಸತಿ. ಅದು ಪಂಪನಿಗೆ ಒಪ್ಪಿಗೆಯಾಗದೆ ಅರ್ಜುನನೊಬ್ಬನಿಗೇ ಅವಳನ್ನು ಧರ್ಮಪತ್ನಿಯನ್ನಾಗಿಸಿದನು. ಆದರೆ ಇದರಿಂದ ಎಷ್ಟೋ ಎಡೆಗಳಲ್ಲಿ ಅಸಾಂಗತ್ಯಗಳು ತಲೆಯೆತ್ತಿವೆ. ಜೂಜಿನ ಪ್ರಸಂಗದಲ್ಲಿ ಅವಮಾನ ಹೊಂದಿ ಭೀಮನ ಪ್ರತಿಜ್ಞೆಗೂ ಭಾರತಯುದ್ಧಕ್ಕೂ ಕಾರಣಳಾದವಳು ದ್ರೌಪದಿ. ಆಕೆಯ ಬಿಚ್ಚಿದ ಮುಡಿ, 'ಮಹಾಭಾರತಕ್ಕಾದಿಯಾಯ್ತು'. 'ಸಾಮಾನ್ಯಮೆ ಬಗೆಯೆ ಭವತ್ಕೇಶಪಾಶ ಪ್ರಪಂಚಂ?' ಇಷ್ಟೆಲ್ಲಾ ಆದರೂ ಕೊನೆಯಲ್ಲಿ ಪಟ್ಟವನ್ನು ಕಟ್ಟಿಸಿಕೊಳ್ಳುವವಳು ಸುಭದ್ರೆ. ಅಲ್ಲದೆ ದ್ರೌಪದಿಯ ಪ್ರತಿಜ್ಞೆಯನ್ನು ಪೂರ್ಣಗೊಳಿಸಿ ಬಿಚ್ಚಿದ ಮುಡಿಯನ್ನು ಕಟ್ಟಿದವನು ಭೀಮ. ಈ ಕೆಲವು ಕಡೆ ಪಂಪನು ಪೇಚಿಗೆ ಸಿಲುಕಿದಂತೆ ತೋರುತ್ತದೆ. ಇದು ಏನೇ ಇದ್ದರೂ ಒಟ್ಟಾರೆ ಅವನ ಪ್ರತಿಭೆ ಇಲ್ಲಿ ಹೊನಲಾಗಿ ಹರಿದಿದೆ.

ಮಹಾಭಾರತದಲ್ಲಿ, ಮಹಾಪಾತ್ರಗಳು ಅನೇಕ. ವ್ಯಾಸ, ಭೀಷ್ಮ, ಶ್ರೀಕೃಷ್ಣ, ಧರ್ಮ, ಭೀಮ, ಅರ್ಜುನ, ದ್ರೌಪದಿ, ಕುಂತಿ, ಧೃತರಾಷ್ಟ್ರ, ದುರ್ಯೋಧನ, ಕರ್ಣ ಒಬ್ಬೊಬ್ಬರೂ ದಿಗ್ದಂತಿಗಳಂತೆ ಅದ್ವಿತೀಯರು. ಪಂಪನ ಯೋಗಕ್ಕೂ ಉಪಯೋಗಕ್ಕೂ ಅರ್ಜುನನೆ ಅರಿಕೇಸರಿಗೆ ಎಣೆಗೆಣೆ, ಇತರರಲ್ಲ. ಅರಿಕೇಸರಿಯ ಪಟ್ಟಾಭಿಷೇಕವೆ ಸಾಧ್ಯ. ಇದಕ್ಕೆ ತಕ್ಕ ಸಾಧನೆಯೆಂದರೆ ಅರ್ಜುನನ ವಿಕ್ರಮದ ವಿಜಯ.[೨೧]

ಕಾವ್ಯಧರ್ಮವೆನ್ನುವುದು ಕವಿತ್ವದ ಪರಿಪೂರ್ಣ ಮತ್ತು ಪರಿಪಕ್ವ ಸ್ಥಿತಿ. ಇದು ಪಂಪನಲ್ಲಿ ಪರಮಾವಧಿ ಮಟ್ಟದಲ್ಲಿದೆ.[೨೨]

'ನಿಚ್ಚಂಪೊಸತರ್ಣವಂಬೊಲತಿಗಂಭೀರಂ ಕವಿತ್ವಂ' ಎಂಬುದು ಪಂಪನ ಖ್ಯಾತಿ. ಇದು ಸುಳ್ಳಲ್ಲ.

## ಚಾಮುಂಡರಾಯ

ಕನ್ನಡದ ಏಕೈಕ 'ಮಹಾಪುರಾಣ'ದ ಕರ್ತೃ ಚಾಮುಂಡರಾಯ. ಆತನ ವೈಯಕ್ತಿಕ ಚರಿತ್ರೆಯು 'ಚಾವುಂಡರಾಯ ಪುರಾಣ'ದಿಂದಲೂ ಶ್ರವಣಬೆಳ್ಗೊಳದ ಕೆಲವು ಶಾಸನಗಳಿಂದಲೂ ಬಾಹುಬಲಿಸಾಹಿತ್ಯವನ್ನು ಕುರಿತ ಕೆಲವು ಗ್ರಂಥಗಳಿಂದಲೂ ಗೊಮ್ಮಟಸಾರ, ಅಜಿತಪುರಾಣ ಮೊದಲಾದ ಆಕರಗಳಿಂದಲೂ ಲಭಿಸುತ್ತದೆ.

'ಚಾವುಂಡರಾಯ ಪುರಾಣ'ದ ರಚನಾಕಾಲ ಕ್ರಿ. ಶ. ೯೭೮. ಈ ವಿಷಯ ಈ ಗ್ರಂಥದ ಕೊನೆಯಲ್ಲಿರುವ ಪದ್ಯದಲ್ಲಿ ತಿಳಿದುಬರುತ್ತದೆ. ಈ ಪುರಾಣವು ೯೦೦ನೆಯ ಈಶ್ವರ ಸಂವತ್ಸರದಲ್ಲಿ, ಎಂದರೆ ಕ್ರಿ. ಶ. ೯೭೮ ರಲ್ಲಿ, ಹುಟ್ಟಿದಂತೆ ವ್ಯಕ್ತವಾಗುತ್ತದೆ.[೨೩]

ಚಾಮುಂಡರಾಯನನ್ನು 'ಚಾಮುಂಡರಾಜ', 'ಚಾಮುಂಡರಾಯ', 'ಚಾವುಂಡರಾಯ', 'ಚಾವುಂಡಯ್ಯ', 'ಚಾಮುಂಡಯ್ಯ', 'ಚಾವುಂಡ', ಎಂಬ ಬೇರೆ ಬೇರೆ ಹೆಸರುಗಳಿಂದ ಶ್ರವಣಬೆಳಗೊಳದ ಶಾಸನದಲ್ಲಿ ಕರೆಯಲಾಗಿದೆ.[೫೪] ಚಾಮುಂಡರಾಯ ಎಂಬ ಹೆಸರು ನಮಿತೀರ್ಥಂಕರನ ಯಕ್ಷಿಯ ಹೆಸರಾದ 'ಚಾಮುಂಡಿ' ಎಂಬುದರಿಂದ ಬಂದುದಾಗಿರಬೇಕು ಎಂದು ತೀ. ನಂ. ಶ್ರೀಕಂಠಯ್ಯನವರು ಊಹಿಸಿದ್ದಾರೆ.[೫೫] ಬೊಪ್ಪಣ್ಣ ಪಂಡಿತನ (ಸು. ೧೧೮೦) 'ಗೊಮ್ಮಟ ಜಿನೇಂದ್ರ ಗುಣಸ್ತವ'ದಲ್ಲಿ[೫೬] ಗೋಮಟ, ಗೊಮ್ಮಟ ಎಂಬ ಹೆಸರುಗಳಿಂದ ಈತನನ್ನು ಕರೆಯಲಾಗಿದೆ. ನೇಮಿಚಂದ್ರಾಚಾರ್ಯರ (ಸು. ೯೭೦) ಗೊಮ್ಮಟಸಾರದಲ್ಲಿ 'ಗೊಮ್ಮಟ', 'ಗೊಮ್ಮಟರಾಯ'ನೆಂದೂ ಆತನನ್ನು ಹೆಸರಿಸಲಾಗಿದೆ.[೫೭] ಈ ಹೆಸರಿನ ಮೂಲವನ್ನು ಹುಡುಕುತ್ತ ತೀನಂಶ್ರೀಯವರು, ನೇಮಿನಾಥ ತೀರ್ಥಂಕರನ ಯಕ್ಷಿಕೂಷ್ಮಾಂಡಿನಿಯನ್ನು ಯಾವುದೋ ವಿಶೇಷ ಸಂದರ್ಭದಲ್ಲಿ ಹರಸಿಕೊಂಡುದಕ್ಕಾಗಿಯೇ ಆಕೆಯ ವಿಶೇಷ ಪ್ರಸಾದಕ್ಕೆ ಪಾತ್ರನಾದುದಕ್ಕಾಗಿ'ಗೊಮ್ಮಟ', 'ಗೊಮ್ಮಟರಾಯ' ಎಂಬ ಹೆಸರುಗಳು ಬಂದಿರಬೇಕು; ಕೂಷ್ಮಾಂಡಿ ಯಕ್ಷಿಯ ಪ್ರಾಕೃತ ರೂಪ 'ಗುಮ್ಮಡಿ' ಎಂಬುದರಿಂದ 'ಗೊಮ್ಮಟ','ಗೊಮ್ಮಟರಾಯ' ಎಂಬ ಹೆಸರುಗಳು ಬಂದಿರಬೇಕು ಎಂದು ಅಭಿಪ್ರಾಯಪಟ್ಟಿದ್ದಾರೆ. ಅಲ್ಲದೆ ಈ ವಿಷಯಕ್ಕೆ ಪೋಷಕವಾಗಿ ದೊಡ್ಡಯ್ಯನ 'ಭುಜಬಲಿಚರಿತೆ' (ಸು. ೧೫೪೦) ದೇವಚಂದ್ರನ 'ರಾಜಾವಳೀ ಕಥೆ' (೧೮೩೮) ಈ ಮೊದಲಾದ ಗ್ರಂಥಗಳಲ್ಲಿ ಚಾಮುಂಡರಾಯನು ಆ ಕೂಷ್ಮಾಂಡಿಯ ವಿಶೇಷ ಕೃಪೆಗೆ ಪಾತ್ರವಾಗಿಯೇ ಶ್ರವಣಬೆಳ್ಗೊಳದಲ್ಲಿ ಬಾಹುಬಲಿಯ ಮೂರ್ತಿಯನ್ನು ನಿಲ್ಲಿಸಿದಂತೆ ಹೇಳಿರುವುದು ಗಮನಿಸತಕ್ಕ ವಿಷಯವಾಗಿದೆ ಎಂದು ತಿಳಿಸಿದ್ದಾರೆ.[೫೮] ಚಾಮುಂಡರಾಯನಿಗಿದ್ದ 'ಗೊಮ್ಮಟ' ಎಂಬ ಹೆಸರಿನಿಂದಲೇ ಆತನು ಸ್ಥಾಪಿಸಿದ ಬಾಹುಬಲಿ ವಿಗ್ರಹಕ್ಕೆ 'ಗೊಮ್ಮಟೇಶ್ವರ' ಎಂಬ ಹೆಸರು ಬಂದಿರಬೇಕೆಂದು ಕೆಲವರು ಅಭಿಪ್ರಾಯಪಟ್ಟಿದ್ದಾರೆ. 'ಗೊಮ್ಮಟ' ಎಂದರೆ ಸುಂದರ ಎಂಬ ಅರ್ಥವೂ ಇದೆ. ಇದರಿಂದಾಗಿಯೂ ಈ ಹೆಸರು ಬಂದಿರಬೇಕೆಂದೂ ಅಭಿಪ್ರಾಯವಿದೆ.

ನೇಮಿಚಂದ್ರನು ಚಾಮುಂಡರಾಯನಿಗಾಗಿ, ಆತನ ಪ್ರಶ್ನೆಗಳಿಗನುಗುಣವಾಗಿ ಪಂಚಸಂಗ್ರಹವನ್ನು ಬರೆದ ಕಾರಣ ಅದನ್ನು 'ಗೊಮ್ಮಟಸಾರ', 'ಗೊಮ್ಮಟ ಸಂಗ್ರಹ ' ಎಂದು ಕರೆಯಲಾಗಿದೆ.[೫೯]

ಚಾಮುಂಡರಾಯನನ್ನು 'ರಾಯ' ಮತ್ತು 'ಅಣ್ಣ' ಎಂಬ ಹೆಸರಿನಿಂದಲೂ ಕರೆಯಲಾಗಿದೆ.[೬೦] ಚಾಮುಂಡರಾಯನು ಶ್ರವಣಬೆಳ್ಗೊಳದಲ್ಲಿ ಅಪರಿಮಿತವಾಗಿ ಧನವ್ಯಯ ಮಾಡಿ ಗೊಮ್ಮಟೇಶ್ವರ ಪ್ರತಿಷ್ಠೆಯನ್ನು ಮಾಡಿಸಿದನು. ರಾಚಮಲ್ಲನು ಇವನ ಔದಾರ್ಯಕ್ಕೆ ಮೆಚ್ಚಿ 'ರಾಯ' ಎಂಬ ಬಿರುದನ್ನು ಕೊಟ್ಟನು.[೬೧] ರಾಯ ಎಂಬುದು ಚಾಮುಂಡರಾಯ (ರಾಜ) ಎಂಬುದರ ಹ್ರಸ್ವರೂಪವಾಗಿರಬೇಕು. 'ಅಣ್ಣ' ಎಂಬ ಹೆಸರು, ಆತನ 'ಚಾವುಂಡರಾಯಪುರಾಣ'ದ ಆದಿಪುರಾಣ ಭಾಗದಲ್ಲಿಯೂ (I-೨೮) ಕೊನೆಯ ಪ್ರಶಸ್ತಿ ಪದ್ಯದಲ್ಲಿಯೂ ಛಂದೋಂಬುಧಿಯಲ್ಲಿಯೂ (I-೨೭) ದೊರೆಯುತ್ತದೆ. 'ಈತನ ಧಾರ್ಮಿಕ ವ್ಯಕ್ತಿತ್ವದಿಂದಾಗಿಯೇ ಬಹುಶಃ ಇತರರು ಆತನನ್ನು ಅಣ್ಣ ಎಂದು ಸಂಬೋಧಿಸಿರಬೇಕು.[೬೨] ಅನಂತಕವಿಯು ಆತನನ್ನು 'ಇಳೆಯಾಣ್ಮ', 'ಕುಂಭಿನಿಪತಿ', 'ಕ್ಷೋಣೀಶ',

'ಚಾವುಂಡಚಮೂಪತಿ', 'ಚೆನ್ನಿಗರೊಡೆಯ', 'ಮಂಡಲಪ' ಎಂದು ಮೊದಲಾದ ಗೌರವ ಸೂಚಕ ಹೆಸರುಗಳಿಂದ ಕರೆದಿದ್ದಾನೆ.

ಚಾಮುಂಡರಾಯನು ತನ್ನನ್ನು ಬ್ರಹ್ಮಕ್ಷತ್ರಿಯ ವಂಶಜನೆಂದು ಕರೆದುಕೊಂಡಿದ್ದಾನೆ. ಶ್ರವಣಬೆಳಗೊಳದ ಶಾಸನದಿಂದಲೂ ಇದು ತಿಳಿದುಬರುತ್ತದೆ.[೩೩] ಆತನು ಬ್ರಹ್ಮ-ಕ್ಷತ್ರಿಯ-ವೈಶ್ಯಕುಲದವನಾಗಿದ್ದನೆಂದೂ ಬಾಹುಬಲಿಚರಿತೆಯಲ್ಲಿ ಹೇಳಿರುವ 'ಬ್ರಹ್ಮ-ಕ್ಷತ್ರಿಯ-ವೈಶ್ಯ-ಶುಕ್ತಿ ಸುಮಣಿಃ' ಎಂಬ ಮಾತಿನ ಆಧಾರದಿಂದ ಆತನ ಪೂರ್ವಜರು ಮೊದಲಿಗೆ ಬ್ರಾಹ್ಮಣ ಮತ್ತು ವೈಶ್ಯರಾಗಿದ್ದು ಆನಂತರ ಕ್ಷತ್ರಿಯ ವೃತ್ತಿಯನ್ನು ಧಾರಣೆ ಮಾಡಿದವರಾಗಿರಬೇಕೆಂದೂ ಅಭಿಪ್ರಾಯವಿದೆ.[೩೪] ಮತ್ತೊಂದು ಅಭಿಪ್ರಾಯವೆಂದರೆ, ಬ್ರಹ್ಮಕ್ಷತ್ರ ಕುಲಗಳವರ ನಡುವೆ ವೈವಾಹಿಕ ಸಂಬಂಧವೇರ್ಪಟ್ಟು ಹುಟ್ಟಿದ ಸಂತಾನದಿಂದ ತೊಡಗಿದ ಕುಲವೂ ಆಗಿರಬಹುದು.[೩೫]

ಈತನ ತಂದೆತಾಯಿಗಳ ಬಗೆಗೆ ತಿಳಿದುಬಂದಿರುವುದು ಅತ್ಯಲ್ಪ. ಪಂಚಬಾಣನ 'ಭುಜಬಲಿ ಚರಿತೆ'ಯಲ್ಲಿ(ಕ್ರಿ. ಶ. ೧೬೧೪) ಚಾಮುಂಡರಾಯನ ತಾಯಿಯ ಹೆಸರನ್ನು ಕಾಳಲಾದೇವಿಯೆಂದೂ ಪತ್ನಿಯ ಹೆಸರನ್ನು ಅಜಿತಾದೇವಿಯೆಂದೂ ತಿಳಿಸಲಾಗಿದೆ. ಅನಂತ ಕವಿಯ 'ಗೋಮಟೇಶ್ವರ ಚರಿತೆ'ಯಲ್ಲಿ ಕಾಳಾಂಬಿಕೆ (I-೭೦), ಕಾಳಮ್ಮ (III-೨೪) ಎಂದೂ ತಾಯಿಯ ಹೆಸರನ್ನು ಹೇಳಲಾಗಿದೆ. ಮೈಸೂರು ಜಿಲ್ಲೆಯ ತಿರುಮಕೂಡಲು ನರಸೀಪುರ ತಾಲ್ಲೂಕಿನ ಅಲ್ಲೋಡು ಗ್ರಾಮದ ಶಾಸನದಲ್ಲಿ ಗೋವಿಂದಮಯ್ಯನೆಂಬುವನಿಗೆ ಮಾಬಲಯ್ಯ ಮತ್ತು ಈಸರಯ್ಯ ಎಂಬ ಇಬ್ಬರು ಮಕ್ಕಳೆಂದೂ ಇವರು ನೊಂಬಳಕುಲಾನ್ತಕದೇವನ (ಇಮ್ಮಡಿ ಮಾರಸಿಂಹನ ಬಿರುದು) ಸೇವೆಯಲ್ಲಿದ್ದರೆಂದೂ ಮಾಬಲಯ್ಯನ ಮಗ ಚಾಮುಂಡರಾಯನೆಂದೂ ನೇರವಾಗಿ ಉಲ್ಲೇಖಿಸಿದೆ. ಶಾಸನದ ಕಾಲ ಕ್ರಿ. ಶ. ೯೮೩. 'ನೊಳಂಬ ಕುಲಾನ್ತಕ' ಎಂಬುದು ಇಮ್ಮಡಿ ಮಾರಸಿಂಹನ ಬಿರುದು ಎನ್ನುವುದರಿಂದಲೂ ಗೋವಿಂದಮಯ್ಯನೂ ಆತನ ಸಂತತಿಯವರೂ ಗಂಗರಾಜರಲ್ಲಿ ಸ್ವಾಮಿಭಕ್ತಿಯುಳ್ಳವರಾಗಿ ಉನ್ನತ ಸೇವೆಯಲ್ಲಿದ್ದಂತೆ ತಿಳಿಯುವುದಕ್ಕೆ ಪೂರ್ವೋಕ್ತ ಶಾಸನದಲ್ಲಿ ಆಸ್ಪದವಿರುವುದರಿಂದಲೂ ಅಲ್ಲಿ ಹೇಳಿರುವ ಚಾವುಂಡನು 'ಚಾವುಂಡ ರಾಯಪುರಾಣ'ದ ಕರ್ತೃವಾದ ಚಾಮುಂಡರಾಯನೇ ಇರಬಹುದೆಂದು ಊಹಿಸಲು ಸಾಧ್ಯವಿದೆ.[೩೬]

ಚಾಮುಂಡರಾಯನಿಗೆ ನಾಗವರ್ಮನೆಂಬ ತಮ್ಮನಿದ್ದ. ಆ ತಮ್ಮನನ್ನು ಯುದ್ಧದಲ್ಲಿ ವೈರಿಗಳು ಕೊಂದರೆಂಬುದು[೩೭] ಹಾಗೂ ಜಿನದೇವನೆಂಬ ಮಗನಿದ್ದು ಅವನು "ಜಿನ ಗೃಹಮಂ ಬೆಳ್ಗೊಳದೊಳ್ ಜನಮೆಲ್ಲಂ ಪೊಗಳೆ ಮನ್ತ್ರಿ ಚಾಮುಂಡನನ್ದನನೊಲವಿಂದ ಮಾಡಿಸಿದಂ ಜಿನದೇವಣನಜಿತಮುನಿಪರ ಗುಡ್ಡಂ"[೩೮] ಎಂದು ತಿಳಿಯುತ್ತದೆ.

ಚಾಮುಂಡರಾಯನ ಗುರುಗಳು ಇಬ್ಬರು. ೧೦ನೆಯ ಶತಮಾನದ ತುಂಬ ಪ್ರಭಾವ ಶಾಲಿಯಾಗಿದ್ದ ಅಜಿತಸೇನಾಚಾರ್ಯರು,[೩೯] ಮತ್ತು ನೇಮಿಚಂದ್ರಸಿದ್ಧಾಂತ ಗುರುಗಳು ಆ ಕಾಲದ ಪ್ರಖ್ಯಾತ ಗುರುಗಳಾಗಿದ್ದರು. ನೇಮಿಚಂದ್ರ ಸಿದ್ಧಾಂತ ಚಕ್ರವರ್ತಿಗಳು ಗೊಮ್ಮಟಸಾರ, ತ್ರಿಲೋಕಸಾರ ಎಂಬೆರಡು ಗ್ರಂಥಗಳನ್ನು ರಚಿಸಿದ್ದಾರೆ. ದೊಡ್ಡ ಬೆಟ್ಟದ ಮೇಲೆ ಗೊಮ್ಮಟ ಜಿನಬಿಂಬವನ್ನು ನಿಲ್ಲಿಸಿದ ಮೇಲೆ ಚಾಮುಂಡರಾಯನು ತನ್ನ ಗುರು

ನೇಮಿಚಂದ್ರನನ್ನು ಶ್ರವಣಬೆಳ್ಗೊಳದಲ್ಲಿ ಮಠಾಧಿಪತಿಯನ್ನಾಗಿ ಮಾಡಿದನೆಂಬ ಐತಿಹ್ಯವು ಲಭಿಸುತ್ತದೆ.

ಪಶ್ಚಿಮಗಂಗರ ಆಧಿಪತ್ಯದ ಗಂಗವಾಡಿ ತೊಂಬತ್ತಾರು ಸಾಸಿರ ಸೀಮೆಗೆ ರಾಜನಾಗಿದ್ದ ಎರಡನೆಯ ಮಾರಸಿಂಹ (ಕ್ರಿ. ಶ. ೯೬೧-೭೭) ಇವನ ಹಿರಿಯಮಗ ನಾಲ್ಕನೆಯ ರಾಚಮಲ್ಲ (ಕ್ರಿ. ಶ. ೯೭೪-೭೭) ಮತ್ತು ಅವನ ತಮ್ಮ ರಕ್ಕಸಗಂಗ (೯೭೭-೮೪) ಇವರ ಸೇವೆಯಲ್ಲಿ ಚಾಮುಂಡರಾಯನು ಯೋಧಾಗ್ರಣಿ, ಸೇನಾಪತಿ, ಸಂಧಿವಿಗ್ರಹಿ, ಮಂತ್ರಿ - ಈ ಪದವಿಗಳಲ್ಲಿದ್ದಂತೆ ತಿಳಿದು ಬರುತ್ತದೆ.[೪೦] ಆತನಿಗೆ ಯುದ್ಧದಲ್ಲಿ ಸೇನಾಪತಿಯಾಗಿ ನೆರವಾದಂತೆ ತೋರುತ್ತದೆ.[೪೧]

ಈತನಿಗೆ 'ಗುಣರತ್ನಭೂಷಣಂ', 'ಕವಿಜನಶೇಖರಂ' , 'ವೀರಮಾರ್ತಾಂಡ', 'ಸಮ್ಯಕ್ತ್ವರತ್ನಾಕರ', 'ಶೌಚಾಭರಣ', 'ದೇವಭೂಷಣ', 'ಸಮರಧುರಂಧರ', 'ರಣರಂಗಸಿಂಹ' , 'ವೈರಿ ಕುಲಕಾಲದಂಡ', 'ಅಸಹಾಯ ಪರಾಕ್ರಮ' ಮೊದಲಾದ ಬಿರುದುಗಳಿದ್ದುವು. ನೇಮಿಚಂದ್ರ ಸಿದ್ಧಾಂತ ಚಕ್ರವರ್ತಿಗಳು ಶ್ಲೇಷಾರ್ಥದಲ್ಲಿ 'ಸಮ್ಯಕ್ತ್ವ ರತ್ನಾಕರ', 'ಶೌಚಾಭರಣ', 'ಗುಣರತ್ನಭೂಷಣ' ಎಂಬ ಬಿರುದುಗಳನ್ನು ತೀರ್ಥಂಕರರನ್ನು ಸ್ತುತಿಸುವ ಸಂದರ್ಭದಲ್ಲಿ ಉಪಯೋಗಿಸಿ ಚಾಮುಂಡರಾಯನನ್ನು ಸಂಕೇತಿಸಿದ್ದಾರೆ.[೪೨] ಈ ಬಿರುದುಗಳು, ಪ್ರಶಸ್ತಿಗಳು, ಹೊಗಳುಭಟ್ಟರಿಂದ ಇವನಿಗೆ ಸಂದಿರುವ ಬೆಣ್ಣೆಯ ನುಡಿಗಳಲ್ಲ; ಬದುಕಿನ ಸಾಕ್ಷಿಯಾಗಿ ಇವನಿಗೆ ಸಂದಿರುವ ಬಹುಮುಖ ವಿಖ್ಯಾತಿಯ ನಿಜನುಡಿಗಳು.[೪೩]

ಚಾಮುಂಡರಾಯನ ವಿಖ್ಯಾತಿಯಿರುವುದು ಮೂರು ಕಾರ್ಯಗಳಿಗಾಗಿ ಎನ್ನಲಾಗಿದೆ. ಗೊಮ್ಮಟ ಸಂಗ್ರಹಸೂತ್ರವೆಂಬ ಕೃತಿ, ಜಿನಪ್ರತಿಮೆ ಮತ್ತು ದಕ್ಷಿಣ ಕುಕ್ಕುಟ ಜಿನ (ಬಾಹುಬಲಿ). ಇವುಗಳಲ್ಲಿ ಜಿನ ಪ್ರತಿಮೆಯು ಇಂದ್ರನೀಲಮಣಿಯದೆನ್ನಲಾಗಿದೆ. ಆದರೆ ಅದು ಈಗ ಎಲ್ಲಿಹೋಯಿತೆಂದು ತಿಳಿದುಬರುವುದಿಲ್ಲ.[೪೪]

ಚಾಮುಂಡರಾಯನ ಕೃತಿ 'ಚಾಮುಂಡರಾಯ ಪುರಾಣ'ಕ್ಕೆ 'ತ್ರಿಷಷ್ಟಿಲಕ್ಷಣ ಮಹಾಪುರಾಣ'(ಪ್ರತಿ ಅಧ್ಯಾಯದ ಕೊನೆಯ ಗದ್ಯದಲ್ಲಿ) 'ಮಹಾಪುರಾಣ'(ಪ್ರಶಸ್ತಿ ಪದ್ಯ) ಎಂಬ ಹೆಸರುಗಳಿವೆ.[೪೫] ತ್ರಿಷಷ್ಟಿಶಲಾಕಾಪುರುಷರ ಚರಿತೆಯನ್ನು ಕುರಿತು 'ಮಹಾ ಪುರಾಣ'ವು ಕನ್ನಡದಲ್ಲಿ ಇದೊಂದೆ ಎನ್ನುವ ಕಾರಣದಿಂದ ಈ ಗ್ರಂಥಕ್ಕೆ ಪ್ರಾಮುಖ್ಯವಿದೆ.

'ಕೂಚಿಭಟ್ಟಾರಕರು', 'ಶ್ರೀನಂದಿಮುನೀಶ್ವರರು', 'ಕವಿಪರಮೇಶ್ವರರು' ಮೊದಲಾಗಿ ಜಿನಸೇನ ಮತ್ತು ಗುಣಭದ್ರರು, ಈ ಕ್ರಮದಲ್ಲಿ ಚಾಮುಂಡರಾಯನು ತನ್ನ ಹಿಂದಿನ ಮಹಾಪುರಾಣಗಳನ್ನು ಉಲ್ಲೇಖಿಸಿ, ಆ ಪರಂಪರೆಯಲ್ಲಿ ತಾನೂ ಮಹಾಪುರಾಣವನ್ನು 'ಭವ್ಯಕೋಟಿಗಱಿಪಲ್' ಬರೆದಿದ್ದಾನೆ.

ಜೈನಪುರಾಣ ಸಂಪ್ರದಾಯದಂತೆ ಕೃತಿ ಪ್ರಾರಂಭವಾಗುತ್ತದೆ. ಜಿನಸ್ತುತಿ, ಆಚಾರ್ಯರ ಸ್ತುತಿಯ ಅನಂತರ ಕಥಾಪೀಠಿಕೆ ಬರುತ್ತದೆ. ಕವಿಯು ಕಥಾ ಮುಖದಲ್ಲಿ ವಕ್ತೃ, ಕಥೆ, ಶ್ರೋತೃಗಳ ಬಗೆಗೆ ಹೇಳಿದ್ದಾನೆ. ಧರ್ಮದ ಮಹಿಮೆಯನ್ನು ನೀಡಿದ್ದಾನೆ. ವೃಷಭಸ್ವಾಮಿಯಿಂದ ಬಂದ ಪುರಾಣಪರಂಪರೆಯನ್ನು ಮಹಾವೀರ ಸ್ವಾಮಿಗಳಿಂದ ಗೌತಮಗಣಧರನೂ ಅನಂತರ ಜಂಬೂಸ್ವಾಮಿಗಣಧರನೂ ತಿಳಿದುಕೊಂಡರು. ಈ ಪರಂಪರೆಯಿಂದ

ಬಂದ ಕಥೆಯಿದೆಂದು ತಿಳಿಸಿ, ಚಾಮುಂಡರಾಯನು ಕಥೆಯನ್ನು ಪ್ರಾರಂಭಿಸಿದ್ದಾನೆ.

ಈ ಕೃತಿ ಗದ್ಯಗ್ರಂಥವಾದರೂ ಕವಿ ಪದ್ಯಗಳನ್ನು ಬಳಸಿದ್ದಾನೆ. ಇದರ ಆದ್ಯಂತ ಭಾಗಗಳಲ್ಲಿಯೂ ಪ್ರತಿಯೊಬ್ಬ ತೀರ್ಥಂಕರರನ ಪುರಾಣಪ್ರಾರಂಭದಲ್ಲಿಯೂ ಕೃತಿಯ ಇನ್ನಿತರ ಕಡೆಗಳಲ್ಲಿಯೂ ಕಂದ ವೃತ್ತಗಳು ಕಂಡುಬರುತ್ತವೆ. ಇವುಗಳಲ್ಲಿ ಕೆಲವು ಕವಿಯ ಸ್ವರಚನೆಯವಾಗಿದ್ದರೆ, ಮತ್ತೆ ಕೆಲವು ಬೇರೆಡೆಯಿಂದ ತೆಗೆದುಕೊಂಡವು. ಕೆಲವಕ್ಕೆ ಕವಿಯೇ ಆಕರವನ್ನು ನೀಡಿದ್ದಾನೆ. ಕೆಲವು ಗಾಹೆಗಳು ಕುಂದಕುಂದರ 'ಬಾರಸ ಅಣುವೆಕ್ಖಾ' (೬೯ನೇ ಗಾಹೆ) ವಸುನಂದಿಯ ಸಮಯಸಾರ(೩೩೫ ನೇ ಗಾಹೆ)ದಿಂದ ತೆಗೆದುಕೊಂಡ ಗಾಹೆಗಳು.[೪೬] ಅಲ್ಲದೆ ಕೆಲವು ಸಂಸ್ಕೃತ ಶ್ಲೋಕಗಳಿಗೆ ಕವಿಪರಮೇಶ್ವರ, ಭೂಪಾಲನ ಜಿನಚತುರ್ವಿಂಶತಿಕಾ, ಜಟಾಸಿಂಗನ ವರಾಂಗಚರಿತೆ, ಪೂರ್ವಾಚಾರ್ಯ ಗುಣಭದ್ರರ ಉತ್ತರಪುರಾಣ, ಭೂಪಾಲಜಿನನ ಚತುರ್ವಿಂಶತಿಕಾಗಳು ಆಕರಗಳಾಗಿವೆ.[೪೭] ಬಿ. ಕೆ. ಖಡಬಡಿಯವರೂ ಸಹ ಈ ನಿಟ್ಟಿನಲ್ಲಿ ಕೆಲಸಮಾಡಿ ಇನ್ನಷ್ಟು ಆಕರಗಳನ್ನು ತೋರಿಸಿ ಕೊಟ್ಟಿದ್ದಾರೆ. ಬಾರಸ ಅಣುವೆಕ್ಖಾ, ಶಿವಾರ್ಯನ ಮೂಲಾರಾಧನೆಗಳಿಂದ ತೆಗೆದುಕೊಂಡ ಗಾಹೆಗಳನ್ನು ಸೂಚಿಸಿದ್ದಾರೆ.[೪೮]

'ಚಾವುಂಡರಾಯಪುರಾಣ'ದಲ್ಲಿ ೬೩ ಶಲಾಕಾಪುರುಷರ ಸಂಕ್ಷಿಪ್ತ ಕಥೆಯಿದೆ. ಶಲಾಕಾ ಪುರುಷರ ಅನುಕ್ರಮ ಹೀಗಿದೆ : (೧) ೨೪ ತೀರ್ಥಂಕರರು : ವೃಷಭ, ಅಜಿತ, ಶಂಭವ, ಅಭಿನಂದನ, ಸುಮತಿ, ಪದ್ಮಪ್ರಭ, ಸುಪಾರ್ಶ್ವ, ಚಂದ್ರಪ್ರಭ, ಪುಷ್ಪದಂತ, ಶೀತಲ, ಶ್ರೇಯಾಂಸ, ವಾಸುಪೂಜ್ಯ, ವಿಮಲ, ಅನಂತ, ಧರ್ಮ, ಶಾಂತಿ, ಕುಂಥು, ಅರ, ಮಲ್ಲಿ, ಮುನಿಸುವ್ರತ, ನಮಿ, ನೇಮಿ, ಪಾರ್ಶ್ವ, ವರ್ಧಮಾನ. (೨) ೧೨ ಚಕ್ರವರ್ತಿಗಳು : ಭರತ, ಸಗರ, ಮಘವ, ಸನತ್ಕುಮಾರ, ಶಾಂತಿ, ಕುಂಥು, ಅರ, ಸುಭೌಮ, ಪದ್ಮ, ಹರಿಷೇಣ, ಜಯಸೇನ, ಬ್ರಹ್ಮದತ್ತ. (೩) ೯ ಬಲದೇವರು : ವಿಜಯ, ಅಚಲ, ಸುಧರ್ಮ, ಸುಪ್ರಭ, ಸುದರ್ಶನ, ನಂದಿ, ನಂದಿಮಿತ್ರ, ರಾಮ, ಪದ್ಮ. (೪) ೯ ವಾಸುದೇವರು : ತ್ರಿಪೃಷ್ಠ, ದ್ವಿಪೃಷ್ಠ, ಸ್ವಯಂಭೂ, ಪುರುಷೋತ್ತಮ, ಪುರುಷಸಿಂಹ, ಪುಂಡರೀಕ, ದತ್ತ, ಲಕ್ಷ್ಮಣ, ಕೃಷ್ಣ, (೫) ೯ ಪ್ರತಿ ವಾಸುದೇವರು : ಅಶ್ವಗ್ರೀವ, ತಾರಕ, ಮೇರಕ, ಮಧುಕೈಟಭ, ನಿಶುಂಭ, ಬಲಿ, ಪ್ರಹರಣ, ರಾವಣ, ಜರಾಸಂಧ.

ಈ ಶಲಾಕಾಪುರುಷರಲ್ಲಿ, ತೀರ್ಥಂಕರರ ಚರಿತ್ರೆಯೇ ಪ್ರಮುಖವಾಗಿ ಬರುತ್ತದೆ. ಆಯಾಕಾಲದ ಚಕ್ರವರ್ತಿಗಳ ಕಥೆಯೂ ಪ್ರಾಸಂಗಿಕವಾಗಿ ಬರುತ್ತದೆ. ಭವಾವಳಿಗಳು, ಪಂಚಕಲ್ಯಾಣದ ನಿರೂಪಣೆ, ಧರ್ಮೋಪದೇಶ ಇವುಗಳ ನಿರೂಪಣೆಯಿದೆ.

ವೃಷಭನಾಥ, ಶಾಂತಿನಾಥ, ನೇಮಿನಾಥ, ಮತ್ತು ವರ್ಧಮಾನ ಇವರ ಕಥೆಗಳನ್ನು ಇಲ್ಲಿ ವಿಸ್ತರಿಸಿ ಬರೆದಿದ್ದಾನೆ. ವೃಷಭನಾಥನ ಕಥೆ ಎಲ್ಲಕ್ಕಿಂತಲೂ ವಿಸ್ತಾರವಾಗಿದೆ. ಅಜಿತ, ಪುಷ್ಪದಂತ, ಅನಂತ ಮೊದಲಾದವರ ಕಥೆ ತೀರಾ ಸಂಗ್ರಹವಾಗಿದೆ.

ಕವಿಗೆ ೬೩ ಮಹಾಪುರುಷರ ಕಥೆಯನ್ನು ಚಿತ್ತರಿಸುವುದಷ್ಟೇ ಗುರಿಯಾಗಿತ್ತು. ಕವಿಯ ಈ ಆಶಯ, ಈ ಕಾವ್ಯವನ್ನು ಒಂದು ಶಾಸ್ತ್ರಗ್ರಂಥವನ್ನಾಗಿಸಿದೆ. ಕವಿ ಕಥಾವಸ್ತುವಿಗೆ ಹಲವೆಡೆ ಪಂಪನನ್ನು ಆಶ್ರಯಿಸಿದ್ದಾನೆ. ಆದರೆ, ಆತನ ಕಾವ್ಯದೃಷ್ಟಿಯನ್ನು ಸ್ವೀಕರಿಸಿಲ್ಲ. ಕಾವ್ಯಧರ್ಮಗಳೆರಡನ್ನೂ ಸಮಾವೇಶಗೊಳಿಸುವುದು ಪಂಪನ ದೃಷ್ಟಿಯಾದರೆ,

ಚಾಮುಂಡರಾಯನದು ಶುದ್ಧ ಧರ್ಮದೃಷ್ಟಿ. ಹೇಗಿದ್ದರೂ ಆತನ ಸಂಗ್ರಹಗುಣ ಮೆಚ್ಚುವಂತಹದ್ದು. ಒಬ್ಬೊಬ್ಬ ತೀರ್ಥಂಕರನ ಚರಿತ್ರೆಯನ್ನೇ ಒಂದೊಂದು ಪುರಾಣವಾಗಿ ರಚಿಸಬಹುದಾಗಿರುವಾಗ, ಒಟ್ಟಿಗೆ ಅಡಕಗೊಳಿಸಿ ಹೇಳುವುದು ಸಂಗ್ರಹಕಾರನು ಪ್ರತಿಭಾವಂತನಾದಾಗ ಮಾತ್ರ ಸಾಧ್ಯ.

ಶಾಸ್ತ್ರ ದೃಷ್ಟಿ, ಪುರಾಣ ದೃಷ್ಟಿ, ಕಥಾಸಂಗ್ರಹ ದೃಷ್ಟಿ ಇಲ್ಲಿ ಪ್ರಧಾನವಾಗಿರುವುದರಿಂದ ಕಾವ್ಯದೃಷ್ಟಿ ಗೌಣವಾಗಿದೆ.[೪೯] ಈತನಿಗೆ ಜನಪ್ರಿಯ ಲೇಖಕನಾಗಬೇಕೆಂಬ ಇಷ್ಟವಿತ್ತೇ ಹೊರತು ಕವಿಯೆಂದೆನಿಸಿಕೊಳ್ಳುವ ಬಯಕೆಯೇ ಇರಲಿಲ್ಲ.[೫೦]

ಒಟ್ಟಿನಲ್ಲಿ 'ಚಾವುಂಡರಾಯ ಪುರಾಣವನ್ನು' ಜೈನ ಮಹಾಪುರಾಣದ ಕೈಪಿಡಿ ಎನ್ನಬಹುದಾಗಿದೆ.

## ಹಸ್ತಿಮಲ್ಲ

ಚಂಪೂಕೃತಿಗಳ ಆಧಿಕ್ಯದ ಕಾಲದಲ್ಲಿ 'ಪೂರ್ವಪುರಾಣ'ದಂತಹ ಸರಳವಾದ ಕಿರುಗದ್ಯ ಕೃತಿಯನ್ನು ತಂದುಕೊಟ್ಟ ಶ್ರೇಯಸ್ಸು ಹಸ್ತಿಮಲ್ಲನಿಗೆ ಸಲ್ಲುತ್ತದೆ. ಪುರಾಣ ವಸ್ತುವಿನಲ್ಲಿಯೂ ಸರಳತೆಯನ್ನು ತರಬಲ್ಲ ಮನೋಧರ್ಮವನ್ನು ನಾವು ಈ ಕವಿಯಲ್ಲಿ ಗುರುತಿಸಬಹುದು.

'ಹಸ್ತಿಮಲ್ಲ' ಎಂಬುದು ಈ ಕರ್ತೃವಿನ ನಿಜವಾದ ಹೆಸರಾಗಿರದೆ ಬೇರೆಯೇ ಇರಬೇಕು. ಅದು ಯಾವುದೆಂದು ತಿಳಿದುಬಂದಿಲ್ಲ ಎಂದು ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[೫೧]

ಪೂರ್ವಪುರಾಣದ ಕರ್ತೃವಿನ ಹೆಸರು, ಆತನ ಸಂಸ್ಕೃತ ಕೃತಿಗಳು, ಹಸ್ತಿಮಲ್ಲ ಎಂಬ ಹೆಸರಿನ ಸಂಸ್ಕೃತ ಕನ್ನಡ ಕವಿಗಳ ಭೇದಾಭೇದತ್ವ ಇವುಗಳಲ್ಲಿ ಸ್ವಲ್ಪಮಟ್ಟಿಗೆ ತೊಡಕಿರುವಂತೆ ಕಂಡುಬರುತ್ತದೆಯಾದರೂ, 'ಹಸ್ತಿಮಲ್ಲ' ವಿರಚಿತ 'ಪೂರ್ವಪುರಾಣ'ವೆಂದೇ ಸಮ್ಮತಿಸಿ ಸಂಸ್ಕೃತನಾಟಕಗಳ ಕರ್ತೃವಿಗೂ 'ಪೂರ್ವಪುರಾಣ' ಕರ್ತೃವಿಗೂ ಅಭೇದವನ್ನು ಕಲ್ಪಿಸಲಾಗಿದೆ.[೫೨] ಸಧ್ಯಕ್ಕೆ ಈ ಹಸ್ತಿಮಲ್ಲನನ್ನೇ ಇದರ ಕರ್ತೃವನ್ನಾಗಿ ಇಲ್ಲಿ ಪರಿಗಣಿಸಲಾಗಿದೆ.

ಹಸ್ತಿಮಲ್ಲ, ಸಂಸ್ಕೃತ ನಾಟಕಗಳ ರಚನೆಯಿಂದ ಒಂದು ವಿಶಿಷ್ಟ ಸ್ಥಾನವನ್ನು ಗಳಿಸಿಕೊಂಡಿದ್ದಾನೆ. ಈತನ ಕೆಲವು ಕೃತಿಗಳು ಹೀಗಿವೆ : ಅರ್ಜುನ ರಾಜನಾಟಕ, ಉದಯನ ರಾಜಕಾವ್ಯ, ಭರತರಾಜನಾಟಕ, ಮೇಘೇಶ್ವರ ನಾಟಕ, ಮೈಥಿಲೀ ಪರಿಣಯ ನಾಟಕ, ಸುಭದ್ರಾಹರಣ, ಅಂಜನಪವನಂಜಯ, ವಿಕ್ರಾಂತ ಕೌರವ, ಆದಿಪುರಾಣ, ಪುರುಚರಿತ್ರ.[೫೩] ಕವಿಚರಿತೆಕಾರರು ಈತನು ಶಕ ೧೨೧೨ ರಲ್ಲಿ (ಕ್ರಿ. ಶ. ೧೨೯೦) ಆದಿಪುರಾಣವನ್ನು ಬರೆದಿರುವುದಾಗಿ ತಿಳಿಸುತ್ತಾರೆ. ಇವನ ಗ್ರಂಥವು ನಮಗೆ ದೊರತಿಲ್ಲ. ಕೆ. ಬಿ. ಪಾಠಕರು ಇವನ ಗ್ರಂಥವನ್ನು ನೋಡಿರುವಂತೆ ಬರೆದಿದ್ದಾರೆ.[೫೪] ಕವಿಚರಿತೆಕಾರರು ಈತನ ಕಾಲವನ್ನು ನಿರ್ದಿಷ್ಟವಾಗಿ ತಿಳಿಸಿದ್ದರೂ, ಅದಕ್ಕೆ ಯಾವ ಆಧಾರವನ್ನೂ ಕೊಟ್ಟಿಲ್ಲ. ಆ.ನೇ. ಉಪಾಧ್ಯೆಯವರು ಈತನ ಕಾಲ ಕ್ರಿ. ಶ. ೮೯೭ ರಿಂದ ೧೩೪೯ರ ಮಧ್ಯದಲ್ಲಿ ಬರುತ್ತದೆಂದು, ಗುಣಭದ್ರರ ನಂತರ (ಕ್ರಿ. ಶ. ೮೯೭) ಹಾಗೂ ಆರ್ಯಪಾರ್ಯನ ಪೂರ್ವದಲ್ಲಿ

(ಕ್ರಿ. ಶ.೧೩೯೯) ಇದ್ದುದರಿಂದ ಈ ವಿಸ್ತೃತ ಗಡುವಿನಲ್ಲಿ ಒಂದು ಕಾಲವನ್ನು ನಿರ್ಣಯಿಸಬೇಕಾಗಿದೆ ಎಂದಿದ್ದಾರೆ.[೩೫]

ಹಸ್ತಿಮಲ್ಲನಿಗೆ ಆಶ್ರಯ ಕೊಟ್ಟಿದ್ದ ಪಾಂಡ್ಯರಾಜನು ಯಾರು ಎಂಬುದು ಸ್ಪಷ್ಟವಾಗಿಲ್ಲ. ಅವನು ಮೊದಲನೆಯ ಸುಂದರ ಪಾಂಡ್ಯನ (ಸು. ೧೨೫೦) ಉತ್ತರಾಧಿಕಾರಿ ಎಂದು ಭಾವಿಸಲಾಗಿದೆ. ಆದ್ದರಿಂದ ಹಸ್ತಿಮಲ್ಲನ ಕಾಲ ೧೨೫೦ರ ಅನಂತರದ್ದೆಂದು ತಿಳಿದುಬರುತ್ತದೆ. 'ಪೌಜು' ಎಂಬ ಪದಪ್ರಯೋಗ ಪೂರ್ವಪುರಾಣದಲ್ಲಿ ಕಂಡುಬರುವುದರಿಂದ, ಮಹಮದೀಯರು ಕರ್ನಾಟಕಕ್ಕೆ ದಂಡೆತ್ತಿಬಂದ ಕಾಲದ (ಕ್ರಿ. ಶ. ೧೯೯೪) ಅನಂತರ ಈ ಕೃತಿಯನ್ನು ಬರೆದಿರಬೇಕೆಂಬ ಊಹೆಯೂ ಇದೆ.[೩೬]

ಈತನ ವೈಯಕ್ತಿಕ ವಿಷಯಗಳ ಬಗೆಗೆ ಕೆಲವು ಮಾಹಿತಿ ಸಿಕ್ಕಿದೆ.

ವತ್ಸಕುಲದ ಗೋವಿಂದಭಟ್ಟನು ದೇವಾಗಮ ಸ್ತೋತ್ರವನ್ನು ಕೇಳಿ ಸಮ್ಯಗ್ದೃಷ್ಟಿಯಾದನು. ಬ್ರಾಹ್ಮಣನಾಗಿದ್ದ ಈತ ಜೈನಧರ್ಮವನ್ನು ಸ್ವೀಕರಿಸಿದನು. ಇವನಿಗೆ ಶ್ರೀಕುಮಾರ, ಸತ್ಯವಾಕ್ಯ, ದೇವರವಲ್ಲಭ, ಉದಯಭೂಷಣ, ಹಸ್ತಿಮಲ್ಲ ಮತ್ತು ವರ್ಧಮಾನರೆಂಬ ಆರು ಮಂದಿ ಗಂಡುಮಕ್ಕಳು. ಹಸ್ತಿಮಲ್ಲನಿಗೆ ಪಾರ್ಶ್ವಪಂಡಿತನೆಂಬ ಮಗನಿದ್ದನು. ತಂದೆಯಂತೆ ಮಗನೂ ಕೀರ್ತಿವಂತನೂ ಧಾರ್ಮಿಕನೂ ಶಾಸ್ತ್ರಜ್ಞನೂ ಆಗಿದ್ದನು ಎಂಬ ವಿವರಗಳು ಪ್ರತಿಷ್ಠಾ ತಿಲಕದ ಕರ್ತೃ ಬ್ರಹ್ಮಸೂರಿಯಿಂದ ತಿಳಿದುಬರುತ್ತದೆ.[೩೭] ಬ್ರಹ್ಮಸೂರಿ ಪಾರ್ಶ್ವ ಪಂಡಿತನ ಮೊಮ್ಮಗ. ಸಮಂತಭದ್ರರ ಶಿಷ್ಯರಾದ ಶಿವಕೋಟಿ ಮತ್ತು ಶಿವಾಯನರ ಗುರುಪರಂಪರೆಯಲ್ಲಿ ಬಂದ ವೀರಸೇನ, ಜಿನಸೇನ, ಗುಣಭದ್ರ, ಪ್ರಭಾಚಂದ್ರ ಆಚಾರ್ಯ ಪರಂಪರೆಯಿಂದ ಬಂದವನು.[೩೮]

ದೇವಚಂದ್ರನು 'ರಾಜಾವಳೀ ಕಥೆ'ಯಲ್ಲಿ (೧೮೩೮) ಒಬ್ಬ ಹಸ್ತಿಮಲ್ಲಾಚಾರ್ಯನ ಹೆಸರನ್ನು ಹೇಳಿ ಆತನು ಗುಣಭದ್ರನ ಶಿಷ್ಯನಾದ ವೇದಾಗಮ ಸ್ತೋತ್ರವ್ಯಾಖ್ಯಾನ ಕರ್ತೃವಾದ ಗೋವಿಂದ ಭಟ್ಟನ ಮಗನೆಂದೂ ಮದದ ಆನೆಯನ್ನು ಅಡಗಿಸಿದುದರಿಂದ ಆತನಿಗೆ ಹಸ್ತಿಮಲ್ಲ ಎಂಬ ಹೆಸರು ಬಂತೆಂದೂ ಆತನಿಗೆ ಪಾರ್ಶ್ವಪಂಡಿತ ಮೊದಲಾದ ಮಕ್ಕಳು ಇದ್ದರೆಂದೂ ಆತನು ಉಭಯಭಾಷಾ ಕವಿಚಕ್ರವರ್ತಿಯೆನಿಸಿದ್ದನೆಂದೂ ಆತನ ಶಿಷ್ಯ ಲೋಕಪಾಲಾರ್ಯನೆಂದೂ ಹೇಳಿದ್ದಾನೆ.[೩೯] ಆರ್ಯಪಾಲನ 'ಕಲ್ಯಾಣಾಭ್ಯುದಯ'ದಲ್ಲಿ ಸಾರಣ್ಯಪುರದ ಪಾಂಡ್ಯರಾಜನು ತನ್ನ ಮೇಲೆ ಬಿಟ್ಟ ಮದದಾನೆಯನ್ನು ಹಸ್ತಿಮಲ್ಲನು ವಶಪಡಿಸಿಕೊಂಡನೆಂಬ ಉಲ್ಲೇಖ ದೊರೆಯುವುದರಿಂದ, ಹಸ್ತಿಮಲ್ಲನ 'ವಿಕ್ರಾಂತ ಕೌರವ' ನಾಟಕದಲ್ಲಿ ಈ ಸಂಗತಿ ಸೂಚಿತವಾಗಿರುವುದರಿಂದ, ಈ ಪ್ರಸಂಗವನ್ನು ಒಪ್ಪಲೇಬೇಕಾಗಿದೆಯೆಂದು ಕೆ. ಜಿ. ಕುಂದಣಗಾರರು ಅಭಿಪ್ರಾಯಪಟ್ಟಿದ್ದಾರೆ.

ಅಂಜನಾಪವನಂಜಯದ ಒಂದು ಶ್ಲೋಕದಿಂದ ಕರ್ನಾಟಕವನ್ನು ವಶಪಡಿಸಿಕೊಂಡ ಒಬ್ಬ ಪಾಂಡ್ಯರಾಜನ ಕೃಪೆಗೆ ಹಸ್ತಿಮಲ್ಲನು ಪಾತ್ರನಾಗಿ ಅವನ ಬಂಧುವಿನಂತೆ ರಾಜಧಾನಿಯಲ್ಲಿದ್ದನು ಎಂದು ಗೊತ್ತಾಗುತ್ತದೆ.[೪೦]

ಹಸ್ತಿಮಲ್ಲನಿಗೆ 'ಸರಸ್ವತೀ ಸ್ವಯಂವರ ವಲ್ಲಭ', 'ಮಹಾಕವಿವಲ್ಲಭ', 'ಸೂಕ್ತಿರತ್ನಾಕರ' ಎಂಬ ಬಿರುದುಗಳಿದ್ದಂತೆ ಕಂಡುಬರುತ್ತದೆ. ಸತ್ಯವಾಕ್ಯ ಎಂಬುವನು ಇವನನ್ನು 'ಕವಿತಾಸಾಮ್ರಾಜ್ಯಲಕ್ಷ್ಮೀಪತಿ' ಎಂಬ ಹೆಸರಿನಿಂದ ಸಂಬೋಧಿಸಿ ಇವನ ಸೂಕ್ತಿಗಳನ್ನು

ತುಂಬಾ ಹೊಗಳಿದ್ದಾನೆ.[೬೧] 'ಉಭಯಭಾಷಾ ಚಕ್ರವರ್ತಿ' ಎಂಬ ಬಿರುದು 'ಪೂರ್ವ ಪುರಾಣ'ದಿಂದ ತಿಳಿದುಬರುತ್ತದೆ.

ಕವಿ ಹಸ್ತಿಮಲ್ಲನು ತನ್ನ ಕೃತಿಯಲ್ಲಿ ಪಾಂಡ್ಯದೇಶದ ಪಾಂಡ್ಯರಾಜನ ರಾಜಧಾನಿಯಾದ ಗುಡಿಪತ್ತನವನ್ನು ತನ್ನ ಜನ್ಮಭೂಮಿಯನ್ನಾಗಿ ಉಲ್ಲೇಖಿಸಿರುವನು. ಈಗಿನ ತಂಜಾವೂರು ಜಿಲ್ಲೆಗೆ ಸೇರಿದ ದೀಪನಗುಡಿಯೇ ಪ್ರಾಚೀನ ಗುಡಿಪತ್ತನ. ಈ ಹಸ್ತಿಮಲ್ಲನ ಮಗ ಪಾರ್ಶ್ವ ಪಂಡಿತನ ಮರಿಮಗನಾದ ಬ್ರಹ್ಮಸೂರಿಯ ತ್ರೈವರ್ಣಿಕಾಚಾರ ಗ್ರಂಥದ ಉಲ್ಲೇಖದಂತೆ ಈ ಪಾರ್ಶ್ವಪಂಡಿತನು ತನ್ನ ಬಂಧುಗಳೊಡನೆ ಗುಡಿಪತ್ತನವನ್ನು ತೊರೆದು ಹೊಯ್ಸಳ ರಾಜ್ಯದಲ್ಲಿ ಬಂದು ನೆಲೆಸಿದನು. ಈ ಹೇಳಿಕೆಯಂತೆ ಹಸ್ತಿಮಲ್ಲನು ತನ್ನ ಮಗ ಪಾರ್ಶ್ವ ಪಂಡಿತನ ಜೊತೆಯಲ್ಲಿಯೇ ಕರ್ನಾಟಕಕ್ಕೆ ಬಂದು ನೆಲೆಸಿದ್ದಿರಬೇಕು.[೬೨]

ಇತ್ತೀಚೆಗೆ ಡಾ. ಎಂ. ಡಿ. ವಸಂತ್‌ರಾಜ್‌ರವರು ಸಂಸ್ಕೃತ ಮಹಾಪುರಾಣದ ಕರ್ತೃ ವಾದ ಮಲ್ಲಿಷೇಣಾಚಾರ್ಯರಿಂದ ಕನ್ನಡ ಪೂರ್ವಪುರಾಣವು ರಚಿತವಾಗಿದೆ ಎಂದು ಅಭಿಪ್ರಾಯಪಟ್ಟಿದ್ದಾರೆ.[೬೩]

ಈ ಹೇಳಿಕೆಗೆ ಅವರು ಕೊಡುವ ಆಧಾರಗಳ ಮುಖ್ಯಾಂಶಗಳು ಹೀಗಿವೆ :

೧. ಹಸ್ತಿಮಲ್ಲನಿಂದ ರಚಿತವಾಗಿರುವ ವಿಕ್ರಾಂತಕೌರವಾದಿ ನಾಟಕಗಳಲ್ಲಿ ಯಾವುದಾದರೊಂದರಲ್ಲಿಯಾಗಲಿ ಇವನಿಗೆ ಉಭಯಭಾಷಾ ಚಕ್ರವರ್ತಿ ಎಂಬ ಪ್ರಶಸ್ತಿಯಿದ್ದುದರ ಬಗ್ಗೆ ಸೂಚನೆಯಿಲ್ಲ.

೨. ಹಸ್ತಿಮಲ್ಲಿಷೇಣಾಚಾರ್ಯ (ಹಸ್ತಿಮಲ್ಲಿಸೂರಿ) ಮತ್ತು ಹಸ್ತಿಮಲ್ಲ ಎಂಬ ಹೆಸರುಗಳ ಮೊದಲಲ್ಲಿ 'ಹಸ್ತಿ' ಪದವೊಂದರಲ್ಲಿ ಸಾಮ್ಯತೆಯಿದೆಯೆಂಬುದಷ್ಟಲ್ಲದೆ ಈ ಹೆಸರುಗಳು ಒಬ್ಬನೇ ವ್ಯಕ್ತಿಯ ನಿರ್ದೇಶಕವೆಂದು ಹೇಳಲು ಯಾವ ಆಧಾರವೂ ಇಲ್ಲ.

೩. ಹಸ್ತಿಮಲ್ಲನು ವಿಕ್ರಾಂತ ಕೌರವ ನಾಟಕದಲ್ಲಿ ನಾಂದಿ ಮಂಗಲ ನಿಮಿತ್ತವಾಗಿ ಹಾಗೂ ಅಂಕ ನಾಲ್ಕರಲ್ಲಿ, ವೃಷಭ ತೀರ್ಥಂಕರನು ಜನತೆಗೆ ಬಾಳುವೆಯ ಆಧಾರವನ್ನು ಬೋಧಿಸಿದ ಹಿರಿಮೆಯನ್ನು ಒತ್ತಿಹೇಳಿ, ಅದು ಎಷ್ಟು ಮಹತ್ತ್ವಪೂರ್ಣವಾದುದೆಂದು ತಿಳಿಸಿದ್ದಾನೆ. ಈ ಹಸ್ತಿಮಲ್ಲನೇ'ಪೂರ್ವಪುರಾಣ'ದ ಕರ್ತೃವಾಗಿದ್ದರೆ ನಿಶ್ಚಿತವಾಗಿ ಈ ಅಂಶವನ್ನು ಈ ಕೃತಿಯಲ್ಲಿ ಹೇಳುತ್ತಿದ್ದನು. ಆದರೆ ಹಸ್ತಿಮಲ್ಲಿಷೇಣನ ಪೂರ್ವಪುರಾಣದಲ್ಲಿ ಈ ಪ್ರಸಂಗವನ್ನು ಹೇಳಿಲ್ಲ.

೪. ಹಸ್ತಿಮಲ್ಲ ಗೃಹಸ್ಥನಾಗಿದ್ದ. ಹಸ್ತಿಮಲ್ಲಿಸೇನಾಚಾರ್ಯ ಸೇನಸಂಘದ ಆಚಾರ್ಯ. ಅಜಿತಸೇನಾಚಾರ್ಯ, ಕನಕಸೇನ, ಜಿನಸೇನ ಈ ಶಿಷ್ಯ ಪರಂಪರೆಯಿಂದ ಬಂದವನು.

೫. ಪೂಜ್ಯಪಾದ ಚರಿತೆಯಲ್ಲಿ ದೇವೇಂದ್ರನು ಹಸ್ತಿಮಲ್ಲಿ ಆಚಾರ್ಯ, ಹಸ್ತಿಮಲ್ಲಿ ಷೇಣಾಚಾರ್ಯ ಎಂಬ ಹೆಸರುಗಳನ್ನು ಉಲ್ಲೇಖಿಸಿದ್ದಾನೆ. ಹಸ್ತಿಮಲ್ಲಿ ಆಚಾರ್ಯನು ಆಗಾರ ಮತ್ತು ಅನಾಗಾರ ಶ್ರುತವನ್ನು ರಚಿಸಿದನೆಂದು ಹೇಳಿದ್ದಾನೆ.

೬. ದೇವೇಂದ್ರನು ಈ ಮೇಲಿನ ಉಲ್ಲೇಖದಲ್ಲಿ ನಾಟಕಗಳ ಕರ್ತೃತ್ವದ ಬಗೆಗೆ ಹೇಳಿಲ್ಲ.

೭. ಈತನಿಗೆ ಉಭಯಭಾಷಾಚಕ್ರವರ್ತಿ ಎಂಬ ಬಿರುದಿತ್ತು.

೮. ಮಲ್ಲಿಷೇಣನು ತನ್ನ ಮಹಾಪುರಾಣದ ಪ್ರಶಸ್ತಿಯಲ್ಲಿ, ಪ್ರಾಕೃತ ಸಂಸ್ಕೃತ ಉಭಯ ಕವಿತ್ವಧಾರಿಯಾದ ಭುವನತ್ರಯವರ್ತಿಯಾದ ಕೀರ್ತಿಹೊಂದಿದ ತನ್ನಿಂದ ಮಹಾ

ಪುರಾಣವು ಉದಯಿಸಿತು ಎಂದು ಹೇಳಿಕೊಂಡಿದ್ದಾನೆ. ಇಲ್ಲಿ ಹೇಳಿರುವ ಪ್ರಾಕೃತ ಶಬ್ದವು ಕನ್ನಡ ಭಾಷೆಯನ್ನು ಸೂಚಿಸುತ್ತಿರಬಹುದು. ವಾಗ್ಭಟಾದಿಗಳು ಪ್ರಾಕೃತಭಾಷೆಯಲ್ಲಿ ಕನ್ನಡವನ್ನು ಲಕ್ಷಿಸಿದ್ದಾರೆ.

೯. ಮಲ್ಲಿಷೇಣನು ಮಹಾಪುರಾಣದ ಪ್ರಶಸ್ತಿ ಪದ್ಯದಲ್ಲಿ, ಮುಲಗುಂದ ಎಂಬ ಹೆಸರಿನ ನಗರದಲ್ಲಿ ಜೈನಧರ್ಮಾಲಯದಲ್ಲಿದ್ದು, ಭವ್ಯರಿಗಾಗಿ ಸಂಕ್ಷೇಪರೀತಿಯ ಪ್ರಥಮಾನುಯೋಗ ಕಥನದ ವ್ಯಾಖ್ಯೆಯನ್ನು ರಚಿಸಿರುವುದಾಗಿ ಹೇಳಿದ್ದಾನೆ.

೧೦. ಕನ್ನಡದ ನೆಲೆಯಾದ ಮುಳಗುಂದದಲ್ಲಿ ಕನ್ನಡ ವ್ಯಾಖ್ಯೆ ನಡೆದಿರುವುದು ಸುಸಂಗತ. ವೃಷಭ ತೀರ್ಥಂಕರರ ಚರಿತ್ರೆ ಪ್ರಥಮಾನುಯೋಗದಲ್ಲಿಯೂ ಪ್ರಥಮಾನುಯೋಗ.

೧೧. ಜಿನಸೇನರ ಪೂರ್ವಪುರಾಣದ ಪ್ರಥಮ ಮಂಗಲಶ್ಲೋಕವನ್ನು ಪ್ರತಿಪರ್ವಗಳ ಆರಂಭದಲ್ಲಿ ಯೋಜಿಸಿಕೊಂಡರೂ ಈ ಗ್ರಂಥ ಎಷ್ಟೋ ಸಂಗತಿಗಳಲ್ಲಿ ವಿಭಿನ್ನವಾಗಿದೆ. ಮುಖ್ಯವಾಗಿ ಮನುಗಳ ಪತ್ನಿಯರ ಹೆಸರನ್ನು ಸೂಚಿಸುವುದು ಇದೊಂದೇ ಪುರಾಣ (ಆದರೆ ನಾಗರಾಜನ 'ಪುಣ್ಯಾಸ್ರವ'ದಲ್ಲಿಯೂ ಶಾಂತಿಕೀರ್ತಿಯ 'ಪುರುದೇವಚರಿತೆ'ಯಲ್ಲಿಯೂ ಈ ಅಂಶವು ಸೂಚಿತವಾಗಿರುವುದು ಗಮನಾರ್ಹ).

ಈ ಮೇಲಿನ ಆಧಾರಗಳೆಲ್ಲವೂ ಪೂರ್ವಪುರಾಣದ ಕರ್ತೃತ್ವದ ಬಗೆಗೆ ಸಾಕಷ್ಟು ಪುಷ್ಟಿ ಕೊಡುವ ಆಧಾರಗಳಾಗಿ ತೋರುತ್ತವೆ. 'ಹಸ್ತಿ' ಎಂಬ ಪದದ ಜೋಡಣೆ ಈ ಕವಿಯೊಂದಿಗೆ ಹೇಗಾಯಿತೆಂದು ತಿಳಿದುಬರುವುದಿಲ್ಲ. ಇನ್ನಷ್ಟು ಆಧಾರಗಳು ಸಿಗುವವರೆಗೆ ಇದರ ಬಗೆಗೆ ಖಚಿತವಾಗಿ ಏನೂ ಹೇಳುವುದಕ್ಕಾಗುವುದಿಲ್ಲ.

ಪೂರ್ವಪುರಾಣ ಹತ್ತು ಅಧ್ಯಾಯಗಳಿಂದ ಕೂಡಿದ ಕಿರುಗದ್ಯಕೃತಿ. ಇದರ ಏಳು ಪರ್ವಗಳಲ್ಲಿ ಆದಿನಾಥನ ಭವಾವಳಿ, ಅನಂತರ ಮೂರು ಪರ್ವಗಳಲ್ಲಿ ಆದಿನಾಥನ ಮತ್ತು ಅವನ ಮಕ್ಕಳ ಸಂಕ್ಷಿಪ್ತ ಚರಿತ್ರೆಯಿದೆ.

ಕವಿ ತನ್ನ ಹಿಂದಿನ ಕವಿಗಳ ಪ್ರಭಾವಕ್ಕೆ ಒಳಗಾಗಿದ್ದರೂ ಅಲ್ಲಲ್ಲಿ ಬೇರೆಯಾದ ಪರಂಪರೆಯನ್ನೂ ಅನುಸರಿಸಿದಂತೆ ತೋರುತ್ತದೆ. 'ಚಾವುಂಡರಾಯಪುರಾಣ'ದ ಗದ್ಯದಷ್ಟು ದೇಸೀತನ ಹಸ್ತಿಮಲ್ಲನ ಗದ್ಯದಲ್ಲಿಲ್ಲದಿದ್ದರೂ, ಅಲ್ಲಲ್ಲಿ ಮಿಂಚಿ ಮರೆಯಾಗುವ ಕಾವ್ಯಮಯ ತುಣುಕುಗಳನ್ನು ಮರೆಯುವಂತಿಲ್ಲ.

ವಿವರವಾದ ವರ್ಣನೆಗೆ ಇಲ್ಲಿ ಅವಕಾಶವಿಲ್ಲ. ಪಂಪನಲ್ಲಿ ಸಾಲಂಕೃತ ಕನ್ಯೆಯ ಚಿತ್ರಣವಿದ್ದರೆ, ಹಸ್ತಿಮಲ್ಲನಲ್ಲಿ ಇದು ಕಂಡುಬರುವುದಿಲ್ಲ. ಯಾವುದೇ ಆವೇಶಕ್ಕೊಳಗಾಗದೆ, ಕವಿ ನೇರವಾದ ರೀತಿಯಲ್ಲಿ ಕತೆಯನ್ನು ಹೇಳುತ್ತಾ ಹೋಗುತ್ತಾನೆ.[೬೪] ಪೂರ್ವಪುರಾಣದಲ್ಲಿ ಬಹುಶಃ ಮೂಲಾನುಸರಣವಿದ್ದರೂ ಕಾವ್ಯಗುಣ ಕಡಿಮೆಯಾಗಿದ್ದರೂ ಅದು ನಿರ್ಮಿತಿಪ್ರಧಾನ ಗದ್ಯಕೃತಿ. ಅದು 'ವಡ್ಡಾರಾಧನೆ' ಮತ್ತು 'ಚಾವುಂಡರಾಯಪುರಾಣ'ಗಳಂತೆ ಶಾಸ್ತ್ರ, ಸಂಪ್ರದಾಯ, ಪುರಾಣ ಈ ಮತೀಯ ಅಂಶಗಳನ್ನು ಒಳಗೊಂಡಿದ್ದರೂ ಅದನ್ನು ನಿರೂಪಿಸುವಲ್ಲಿ ಸಾಹಿತ್ಯಕೃತಿಯೊಂದನ್ನು ರಚಿಸುವ ದೃಷ್ಟಿಯನ್ನು ಪ್ರಕಟಿಸುತ್ತದೆ; ಶಾಸ್ತ್ರಗ್ರಂಥವನ್ನಲ್ಲ. ಪಂಪನ 'ಆದಿಪುರಾಣ'ವನ್ನೇ ಬಹುಮಟ್ಟಿಗೆ ಅನುಸರಿಸಿ ಈ ಚಿಕ್ಕ ಗ್ರಂಥವನ್ನು ಬರೆಯಲಾಗಿದೆ. ಇದರ ಗದ್ಯಶೈಲಿಯ ಮೇಲೆ ಬಹುಶಃ

'ಚಾವುಂಡರಾಯಪುರಾಣ'ದ ಪ್ರಭಾವದಿಂದ ತೋರಿದ ಅಚ್ಚಗನ್ನಡದ ಚೊಕ್ಕತನವಿದೆ.[೬೫]

ಕವಿ ಉಭಯಭಾಷಾ ಪಂಡಿತನಾದರೂ ಸಂಸ್ಕೃತದ ಪಾಂಡಿತ್ಯವನ್ನು ಮೆರೆಯಲು ಹೋಗಿಲ್ಲ.

ಈ ಕೃತಿಯನ್ನು ಪ್ರತ್ಯೇಕವಾಗಿ ಪರಿಗಣಿಸಿದಾಗ, ಜೈನಪುರಾಣದ ಕಥೆಯೊಂದನ್ನು ಸರಳವಾಗಿ ಹಿಡಿದಿಡುವ ಸ್ವತಂತ್ರ ಕನ್ನಡ ಗದ್ಯಕೃತಿಯ ಸ್ಥಾನವನ್ನು ಪಡೆಯುತ್ತದೆ.

## ನಾಗರಾಜ

'ಪುಣ್ಯಾಸ್ರವ'ನಾಗರಾಜನ ಏಕೈಕ ಕೃತಿರತ್ನ. ಈತನ ಕಾಲ ಕ್ರಿ. ಶ. ೧೩೩೧ ಎಂಬುದು ನಿರ್ವಿವಾದವಾದ ಸಂಗತಿ. ಈ ಪ್ರಬಂಧ(ಕಾವ್ಯ)ದ ರಚನೆ ಶಕ ೧೨೫೩ರಲ್ಲಿ ಪೂರ್ಣವಾಯಿತೆಂದು ನಿರ್ದೇಶಿಸಿದ್ದಾನೆ.[೬೬]

ಈತನು ಮಾಸಿವಾಳದವನು. (ಸೇಡಬಾಳದ ಬಳಿಯಿರುವ ಮಾಸ್ಯಾಳ?). ಕೃತಿಯ ಪ್ರತಿ ಅಧ್ಯಾಯದ ಕೊನೆಯಲ್ಲಿ ಬರುವ ಗದ್ಯಾಂತದಲ್ಲಿ ಇದು ಸ್ಪಷ್ಟವಾಗುತ್ತದೆ. (ಮಾಸಿವಾಳದ ನಾಗರಾಜವಿರಚಿತಮಪ್ಪ ಪುಣ್ಯಾಸ್ರವದೊಳು.....). ಸಗರ ಎಂಬ ನಗರದಲ್ಲಿ ಈತನ ಕಾವ್ಯಸಾಧನೆ ನಡೆಯಿತೆಂದು ತೋರುತ್ತದೆ (I-೩೩).

ಕವಿ ತನ್ನ ಸ್ವವಿಚಾರದ ಬಗೆಗೆ ಸಾಕಷ್ಟು ಹೇಳಿಕೊಂಡಿದ್ದಾನೆ. ಇವನ ತಂದೆ ಸೇವ್ಯಪುರದಲ್ಲಿ (ಸೇಡಬಾಳ?) ಜಿನಶಾಸಕನಾದ ವಿಟ್ಟಲದೇವ. ಇವನ ತಾಯಿ ಭಾಗೀರಥಿ. ಈತನ ಸಹೋದರ ತಿಪ್ಪರಸ. ಗುರು ಅನಂತವೀರ್ಯ. ಕೌಶಿಕ ಗೋತ್ರದವನು (I-೨೭, ೨೮, ೨೯, ೩೦).

ನಾಗರಾಜನಿಗೆ 'ಸುಲಲಿತ ಕವಿತಾಕಲ್ಪವಲ್ಲೀ ವಸಂತ', 'ಭಾರತೀ ಭಾಳನೇತ್ರ', 'ಸರಸ್ವತೀ ಮುಖತಿಲಕ', 'ರವಿಮುಖ ಮುಕುರ', 'ಕಲಾವಲ್ಲಭ', 'ವಿನಯನಿಧಿ' ಮೊದಲಾದ ಬಿರುದುಗಳಿದ್ದಂತೆ ತೋರುತ್ತದೆ. ಪೂರ್ವಾಚಾರ್ಯರಾದ ವೀರಸೇನ, ಜಿನಸೇನ, ಸಿಂಹಣಂದಿ, ಗೃದ್ಧಪಿಂಛಾಚಾರ್ಯ, ಕೊಂಡಕೊಂಡಾಚಾರ್ಯ, ಗುಣಭದ್ರ, ಪೂಜ್ಯಪಾದ, ಸಮಂತಭದ್ರ, ಅಕಳಂಕ, ದೇವೇಂದ್ರ, ಕುಮಾರಸೇನ, ಧರಸೇನ ಮೊದಲಾದವರನ್ನು ಸ್ತುತಿಸಿದ್ದಾನೆ. ಕವಿಗೆ ತನ್ನ ಪೂರ್ವಕವಿಗಳ ಬಗೆಗೆ ಅತ್ಯಂತ ಆದರ. ಪೊನ್ನನ 'ಓಜೆ', ಪಂಪನ 'ರೀತಿ', ರನ್ನನ 'ಪೊಸಮಾತು', ಗಜಾಂಕುಶನ 'ಅರ್ಥಗೌರವ', ಬಂಧುವರ್ಮರ 'ಜಾಣ್ನುಡಿ', ನಾಗಚಂದ್ರನ 'ದೇಸಿ' ಈ ವಿಶಿಷ್ಟ ಕಾವ್ಯಗುಣಗಳು ತನ್ನ ಕಾವ್ಯದಲ್ಲಿ ನೆಲೆಸಲೆಂದು ಆಶಿಸಿದ್ದಾನೆ (I-೧೮). ಪಂಪನನ್ನು ಕಂಡರಂತೂ ಆತನಿಗೆ ವಿಶೇಷವಾದ ಶ್ರದ್ಧಾಭಕ್ತಿ (I-೧೬). ಪಂಪನ 'ವಚೋವಿಲಾಸ'ವನ್ನು ಬಹುಮುಖವಾಗಿ ಮೆಚ್ಚಿಕೊಂಡ ಇವನು, ತನ್ನ ಕಾವ್ಯದಲ್ಲಿ ಅದಕ್ಕಾಗಿ ಪ್ರಾಮಾಣಿಕ ಪ್ರಯತ್ನವನ್ನು ಮಾಡಿದ್ದಾನೆ.

ಈತನ ಕೃತಿ ಪುಣ್ಯಾಸ್ರವ ಒಂದು ಧಾರ್ಮಿಕ ಚಂಪೂಕಾವ್ಯ. ಗದ್ಯವೇ ಮೇಲ್ಸೈಯಾಗಿ ನಿಂತಿದೆ.

ಧರ್ಮ ಹಾಗೂ ಕಥನ ಕಲೆ ಒಂದಕ್ಕೊಂದು ಪೂರಕವಾಗಿ ಪರಂಪರಾನುಗತವಾಗಿ ಜೈನಸಾಹಿತ್ಯದಲ್ಲಿ ಹರಿದು ಬಂದಿದೆ. ಸಂಸ್ಕೃತ-ಪ್ರಾಕೃತ ಭಾಷೆಗಳಲ್ಲಿ ಇದನ್ನು ವಿಪುಲವಾಗಿ ನೋಡಬಹುದು. ನಾಗರಾಜನ ಪುಣ್ಯಾಸ್ರವ ಈ ಕಥಾಕೋಶಗಳ ಗುಂಪಿಗೆ ಸೇರಿದೆ.

ನಾಗರಾಜನು ಸಂಸ್ಕೃತದ ಕಾವ್ಯವೊಂದನ್ನು ಆಧರಿಸಿ ಬರೆದಿರುವಂತೆ, ನಾಗರಾಜನ ಈ ಕನ್ನಡ ಕೃತಿಯನ್ನು ಆಧರಿಸಿ ಮರಾಠೀ ಓವಿಯಲ್ಲಿ ಪುಣ್ಯಾಸ್ರವ ಮೂಡಿಬಂದಿದೆ.

ಜಿನಸೇನನೆಂಬುವನು ಇದರ ಕರ್ತೃ. ಕಾಲ ಕ್ರಿ. ಶ. ೧೭೪೩. ರಾಮಚಂದ್ರ ಮುಮುಕ್ಷುವಿನ ಭಾಷೆ, ಶೈಲಿ ಅನಾಕರ್ಷಕ; ಆದರೆ ನಾಗರಾಜನ ಕಾವ್ಯ ಅತ್ಯಾಕರ್ಷಕ ಎಂಬೊಂದು ಕಾರಣವೇ ಮರಾಠಿ ಕವಿಯನ್ನು ಕನ್ನಡಕ್ಕೆ ಋಣಿಯಾಗಿಸಿರುವುದು.[೬೭]

ರಾಮಚಂದ್ರ ಮುಮುಕ್ಷುವಿನ ಸಂಸ್ಕೃತದ ಪುಣ್ಯಾಸ್ರವ ಕಥಾಕೋಶ ನಾಗರಾಜನಿಗೆ ಆಕರವಾಗಿದೆ.[೬೮] ಕವಿಯು

ಮುನ್ನಂ ಸಂಸ್ಕೃತದಿಂದ | ತ್ಯುನ್ನತಿವೆತ್ತಿರಲು ಕೇಳ್ದು ಸಗರದ ನಗರಂ
ಕನ್ನಡಿಸೆನೆ ನಾಗೇಂದ್ರಂ | ಕನ್ನಡಿಸಿದನೊಲಿದು ನೋಡಿ ಪುಣ್ಯಾಸ್ರವಮಂ ||

ಎಂದು ಹೇಳಿ ತನ್ನ ಕಾವ್ಯದ ಆಕರಕ್ಕೆ ಸಂಸ್ಕೃತ ಭಾಷೆಯೊಂದನ್ನು ಸೂಚಿಸಿರುವನೇ ಹೊರತು ಅದು ಯಾವುದೆಂಬುದನ್ನು ಸೂಚಿಸಿಲ್ಲ. ಆದರೂ ರಾಮಚಂದ್ರ ಮುಮುಕ್ಷುವಿನ ಪುಣ್ಯಾಸ್ರವ ಕಥಾಕೋಶದೊಂದಿಗಿರುವ ಸಾದೃಶ್ಯಗಳನ್ನು ಗುರುತಿಸಿ ವಿದ್ವಾಂಸರು ಅದೇ ಮೂಲವೆಂಬ ನಿರ್ಣಯಕ್ಕೆ ಬಂದಿದ್ದಾರೆ.

ಕನ್ನಡದ ಪುಣ್ಯಾಸ್ರವವೇ ರಾಮಚಂದ್ರ ಮುಮುಕ್ಷುವಿನ ಪುಣ್ಯಾಸ್ರವ ಕಥಾಕೋಶಕ್ಕೆ ಮೂಲವಾಗಿರಬಾರದೇಕೆ ಎಂಬ ಪ್ರಶ್ನೆ ಏಳುವುದು ಸಹಜ. ಏಕೆಂದರೆ ಚಂಪೂಕೃತಿಯನ್ನು ಗದ್ಯದಲ್ಲಿ ಬರೆಯುವುದು ಸುಲಭಸಾಧ್ಯ. ರಾಮಚಂದ್ರ ಮುಮುಕ್ಷುವಿಗೆ ಕನ್ನಡ ತಿಳಿಯುತ್ತಿತ್ತು. ಸಂಸ್ಕೃತದ ಗದ್ಯಗ್ರಂಥಗಳು ಕನ್ನಡದಲ್ಲಿ ಚಂಪುವಾಗಿ ಪರಿವರ್ತಿತವಾಗುತ್ತಿದ್ದ ಪರಿಪಾಟ ಪ್ರಬಲವಾಗಿತ್ತು; ರಾಮಚಂದ್ರ ಮುಮುಕ್ಷು ನಾಗರಾಜನ್ನನುಸರಿಸಿದ್ದರೆ ತನ್ನ ಗ್ರಂಥದಲ್ಲಿ ಇತರ ಮೂಲಗಳನ್ನು ಹೆಸರಿಸಿರುವಂತೆ ಈ ಮೂಲವನ್ನೂ ಖಂಡಿತ ಹೆಸರಿಸುತ್ತಿದ್ದ ಎಂದು ಹೇಳಿ ಈ ಕಾರಣಗಳಿಂದ ಸಂಸ್ಕೃತ ಗ್ರಂಥವೇ ಮೊದಲನೆಯದು ಮತ್ತು ಅದೇ ಕನ್ನಡ ಗ್ರಂಥಕ್ಕೆ ಮೂಲ ಎಂದು ಆ. ನೇ. ಉಪಾಧ್ಯೆಯವರು ತಿಳಿಸಿದ್ದಾರೆ.[೬೯]

ಪುಣ್ಯಾಸ್ರವದಲ್ಲಿ ಬರುವ ಕಥೆಗಳು ಶ್ರಾವಕ-ಶ್ರಾವಕಿಯರ ಕರ್ತವ್ಯದ ಮಹತ್ತ್ವವನ್ನು ತಿಳಿಸುತ್ತವೆ. ೧೨ ಅಧ್ಯಾಯಗಳ ಹರವಿನಲ್ಲಿ ೫೭ ಕಥೆಗಳನ್ನು ಹೇಳಲಾಗಿದೆ. ಮೊದಲ ಎರಡು ಅಧ್ಯಾಯಗಳಲ್ಲಿ ಪೂಜಾನುಮೋದ, ಮೂರನೆಯ ಅಧ್ಯಾಯದಲ್ಲಿ ದೇವಪೂಜಾವಿಧಾನ, ನಾಲ್ಕನೆಯ ಅಧ್ಯಾಯದಲ್ಲಿ ಪಂಚನಮಸ್ಕಾರಫಲ, ಐದು ಆರನೆಯ ಅಧ್ಯಾಯಗಳಲ್ಲಿ ಪರಮಾಗಮ ಶ್ರುತಮಹಿಮೆ, ಏಳು ಎಂಟನೆಯ ಅಧ್ಯಾಯಗಳಲ್ಲಿ ತಪಃಪ್ರಭಾವ, ಉಳಿದ ನಾಲ್ಕು ಅಧ್ಯಾಯಗಳಲ್ಲಿ ದಾನ, ದಾನಾನುಮೋದ, ಪುಣ್ಯಪ್ರಭಾವಗಳನ್ನು ಕುರಿತು ಕತೆಗಳು ಬಂದಿವೆ. ಇವು ಶ್ರಾವಕರ ಷಟ್ಕರ್ಮಗಳಾದ ದೇವಪೂಜಾ, ಗುರೂಪಾಸ್ತಿ, ಸ್ವಾಧ್ಯಾಯ, ಸಂಯಮ, ತಪ, ತ್ಯಾಗಗಳ ಮಹತ್ತ್ವವನ್ನು ಕುರಿತು ನಿರೂಪಿಸುತ್ತವೆ.

ಕವಿ ಸಂಪ್ರದಾಯದಂತೆ ಜಿನಸ್ತುತಿ, ಸರಸ್ವತಿಸ್ತುತಿ, ಪಂಚಪರಮೇಷ್ಠಿಗಳ ಸ್ತುತಿ, ಆಚಾರ್ಯಸ್ತುತಿ, ಕವಿಸ್ತವ, ಕುಕವಿನಿಂದೆಗಳ ಅನಂತರ ಕಥಾಪ್ರವೇಶವನ್ನು ಮಾಡಿದ್ದಾನೆ.

ಪ್ರತಿ ಅಧ್ಯಾಯದಲ್ಲಿಯೂ 'ಸರಸ್ವತೀ ಮುಖತಿಲಕಂ' ಎಂದು ಅಂತ್ಯಗೊಳ್ಳುವ ಮತ್ತು ಆ ಅಧ್ಯಾಯದ ಆಶಯವನ್ನು ಸೂಚಿಸುವ ಒಂದೊಂದು ನಾಂದೀ ಪದ್ಯವಿದೆ.

ಇಲ್ಲಿ ಅನೇಕ ಬಿಡಿಕಥೆಗಳಿದ್ದರೂ ಕಥೆಗಳ ಧಾರ್ಮಿಕಸೂತ್ರದಿಂದ ಒಂದು ರೀತಿಯ ಅನುಬಂಧವು ಕಂಡುಬರುತ್ತದೆ.

ನಾಗರಾಜ ಮಹಾಕವಿಯಲ್ಲದಿದ್ದರೂ ಸಹಜ ಕವಿ. ಉತ್ತಮಕವಿಯ ಸಲ್ಲಕ್ಷಣಗಳೆಲ್ಲವೂ ಅವನಲ್ಲಿ ಮೈಗೂಡಿವೆ.[೭೦]

'ಪುಣ್ಯಾಸ್ರವ' ಮತೀಯ ಧರ್ಮಗ್ರಂಥವಾದರೂ ನಾಗರಾಜನ ಕಾವ್ಯಪ್ರತಿಭೆಯಿಂದ ಅದೊಂದು ಕಾವ್ಯಮಯ ಗ್ರಂಥವೂ ಆಗಿದೆ. ಶುಷ್ಕತೆಯನ್ನು ನೀಗಿಕೊಂಡು ಉಕ್ತಿವೈಚಿತ್ರ್ಯಗಳನ್ನೊಳಗೊಂಡು ರಮಣೀಯವೆನಿಸುತ್ತದೆ. 'ವಸ್ತು ಪಾತ್ರ ಸ್ವರೂಪ ಸ್ವಭಾವಗಳನ್ನು ಬದಲಿಸುವ ಗೋಜಿಗೆ ಕೈಹಾಕದೆ, ಮೂಲಕ್ಕೆ ನಿಷ್ಠೆಯಿಂದಿದ್ದು, ಕತೆಯ ಎಲುಬು ಹಂದರದಲ್ಲಿ ಅಲಂಕಾರ ವರ್ಣನೆಗಳ ರೂಪದ ರಕ್ತಮಾಂಸ ಮಜ್ಜೆಗಳನ್ನು ತುಂಬಲು ಯತ್ನಿಸಿದ್ದಾನೆ.....ಏಕತಾನತೆ ಸೋತು ಬೇಸರ ನೀಗಿ ವಾಚಕರ ಮನಸ್ಸು ಪ್ರಫುಲ್ಲವಾಗುವಂತೆ, ವಿಷಯಗಳು ಪ್ರಸ್ಫುಟಗೊಂಡು ರಮಣೀಯವಾಗುವಂತೆ, ತಾತ್ತ್ವಿಕತೆಯೊಡನೆ ಭಾವ ಬೆಸೆದು ಹೊಸಮೆರುಗು ಮೂಡುವಂತೆ ನಾಗರಾಜ ಶ್ರಮಿಸಿದ್ದಾನೆ.'[೭೧]

'ಪುಣ್ಯಾಸ್ರವ' ಧರ್ಮನಿಷ್ಠರಿಗೆ ಪುಣ್ಯದ ಆಸ್ರವವಾಗಿರುವಂತೆ, ಕಾವ್ಯಪ್ರೇಮಿಗಳಿಗೆ ಕಾವ್ಯಾಸ್ವಾದದ ಆಸ್ರವವೂ ಆಗಿದೆ.

## ಶಾಂತಿಕೀರ್ತಿ

ಕನ್ನಡ ಸಾಹಿತ್ಯ ಎಲ್ಲ ರೀತಿಯ ಪರಿವರ್ತನೆಗಳನ್ನು ಒಗ್ಗಿಸಿಕೊಂಡು, ಜೀರ್ಣಿಸಿಕೊಂಡು ನಡೆದಿದೆ. ಚಂಪೂ, ಷಟ್ಪದಿಗಳ ಅನಂತರ ಹೊಸತನಕ್ಕಾಗಿ ಹಾತೊರೆದ ಸಾಹಿತಿಗಳು ಸಾಂಗತ್ಯಕ್ಕೆ ಪಟ್ಟಕಟ್ಟಿದರು. ಅವೇ ಹಿಂದಿನ ಕಥೆಗಳನ್ನು ಸಾಂಗತ್ಯದ ಎರಕದಲ್ಲಿ ಹಾಕಿದರು. 'ಕನ್ನಡ ಕವಿಗಳು ಮಾರ್ಗಸಾಹಿತ್ಯದ ಭಯಾವಹ ಮಾರ್ಗದಿಂದ ದೇಶ್ಯಸಾಹಿತ್ಯದ ಸರಳ, ಉತ್ಸಾಹಜನಕ ಮಾರ್ಗದಲ್ಲಿ ನಡೆಯತೊಡಗಿದ್ದು ಕಾಣುತ್ತದೆ; ಕನ್ನಡ ಸಾಹಿತ್ಯದ ಕನ್ನಡತನ ಪರಿಸ್ಫುಟವೂ ಪ್ರಸನ್ನವೂ ಆಗಿ ಜನಸಾಮಾನ್ಯರನ್ನು ಬಳಸಿದ್ದು ಕಾಣುತ್ತದೆ.[೭೨]

ಹದಿನೆಂಟನೆಯ ಶತಮಾನದಲ್ಲಿ ಸಾಂಗತ್ಯಗ್ರಂಥಗಳನ್ನು ಸಮೃದ್ಧವಾಗಿ ನೀಡಿದ ಕವಿ ಶಾಂತಿಕೀರ್ತಿ. ಈತ 'ಶಾಂತಿಕೀರ್ತಿಮುನಿ' ಎಂಬ ಹೆಸರಿನಿಂದಲೂ ಕಾವ್ಯವನ್ನು ರಚಿಸಿದ್ದಾನೆ. ಕವಿಚರಿತೆಕಾರರು ಇವರು ಬೇರೆ ಬೇರೆ ಕವಿಗಳೆಂದೇ ಗುರುತಿಸಿದ್ದಾರೆ. ಶಾಂತಿಕೀರ್ತಿಮುನಿಯ ಕಾಲ ಕ್ರಿ. ಶ. ೧೫೫೯ ಎಂದೂ ಅವನ ಕೃತಿ 'ಶಾಂತಿನಾಥ ಪುರಾಣ'ವೆಂದೂ ಆದರೆ ಶಾಂತಿಕೀರ್ತಿಯ ಕಾಲ ಕ್ರಿ. ಶ. ೧೭೫೫ ಎಂದೂ ಅವನ ಕೃತಿ ಆರಾಧನಾಸಾರದ ಟೀಕೆ ಎಂದೂ ಹೇಳಿದ್ದಾರೆ.[೭೩] ಆದರೆ ಇವರಿಬ್ಬರೂ ಬೇರೆ ಬೇರೆ ಅಲ್ಲ, ಅವರು ಹೇಳಿಕೊಂಡಿರುವ ಸ್ವವಿಷಯಗಳು ಒಂದೇ ಆಗಿರುವುದರಿಂದ ಇಬ್ಬರೂ ಒಬ್ಬನೇ ವ್ಯಕ್ತಿ ಎಂದು ಪ್ರೊ. ಬಿ. ಬಿ. ಮಹೀಶವಾಡಿಯವರು ಸ್ಪಷ್ಟಪಡಿಸಿದ್ದಾರೆ.[೭೪]

ಕವಿ 'ಪುರುದೇವ ಚರಿತೆ'ಯನ್ನು ಮುಗಿಸಿದ ಕಾಲ ಶಕ. ೧೬೪೭—ಅಂದರೆ ಕ್ರಿ. ಶ. ೧೭೨೫ (XI ೯೧, ೯೨). 'ಶಾಂತೀಶ್ವರ ಚರಿತ್ರೆ'ಯನ್ನು ಶಕ ೧೬೫೩—ಅಂದರೆ ಕ್ರಿ. ಶ. ೧೭೩೧ ರಲ್ಲಿ—ಪೂರ್ಣಗೊಳಿಸಿದ್ದಾನೆ. ಈತನು ತನ್ನ ಎಲ್ಲ ಕೃತಿಗಳ ಕೊನೆಯಲ್ಲಿಯೂ ಸಾಮಾನ್ಯವಾಗಿ ಗ್ರಂಥವು ಪೂರ್ಣಗೊಂಡ ಸ್ಥಳ, ಕಾಲವನ್ನು ನೀಡಿದ್ದಾನೆ. 'ಪುರುದೇವ

ಚರಿತೆ' ಮತ್ತು 'ಶಾಂತೀಶ್ವರ ಚರಿತೆ'ಯನ್ನು ತೌಳವದೇಶದ ವೇಣುಪುರದ (ಮೂಡಬಿದ್ರೆ) ವೃಷಭ ಜಿನಾಲಯದಲ್ಲಿ ಬರೆದಿರುವುದಾಗಿ ತಿಳಿಸಿದ್ದಾನೆ.

ಈತನು ದಿಗಂಬರ ಸಾಧು ಧರ್ಮದಂತೆ ಸಂಚಾರೀ ಜೀವಿಯಾಗಿದ್ದನು. ಆತ ಕೊಲ್ಹಾಪುರದಿಂದ ಮೂಡಬಿದ್ರೆಯವರೆಗೆ ಸಂಚರಿಸಿದ್ದುಂಟು ಎಂದು ಆತನ ಗ್ರಂಥಗಳ ಆಧಾರದಿಂದ ತಿಳಿದುಬರುತ್ತದೆ.[೬೫] ಕವಿ ತನ್ನ ಸಾಂಸಾರಿಕ ಜೀವನದ ಬಗೆಗೆ ಹೇಳಿಕೊಂಡಿಲ್ಲ. ಕವಿ ಈ ಕಾವ್ಯಗಳನ್ನು ಬರೆಯುವ ಕಾಲಕ್ಕೆ ಮುನಿಯಾಗಿದ್ದಿರಬೇಕೆಂದು ತೋರುತ್ತದೆ.

ಈತನು ಮುಖ್ಯವಾಗಿ ಸಾಂಗತ್ಯಕವಿ. ವ್ಯಾಖ್ಯಾನ ಗ್ರಂಥಗಳಲ್ಲಿ ಗದ್ಯ ಹಾಗೂ ಕಂದಗಳು ಬರುತ್ತವೆ. ಉಪಲಬ್ಧವಿರುವ ಈತನ ಕೃತಿಗಳು ಹನ್ನೆರಡು.[೬೬] 'ಪುರುದೇವ ಚರಿತೆ'ಯ ೧೨ನೇ ಅಧ್ಯಾಯವನ್ನು ಸ್ವತಂತ್ರವಾಗಿ ಪರಿಗಣಿಸಿದರೆ ಈತನ ಕೃತಿಗಳು ಹದಿಮೂರು ಆಗುತ್ತವೆ.

**ಪುರುದೇವ ಚರಿತೆ** : ಇದರಲ್ಲಿ ಒಟ್ಟು ಹನ್ನೆರಡು ಸಂಧಿಗಳಿವೆ; ಮೊದಲ ನಾಲ್ಕು ಸಂಧಿಗಳಲ್ಲಿ ಪುರುದೇವನ ಭವಾವಳಿ ಕಥೆಯು ಬರುತ್ತದೆ. ಉಳಿದ ಅಧ್ಯಾಯಗಳಲ್ಲಿ ಪುರುದೇವನ ಪಂಚಕಲ್ಯಾಣ, ತತ್ತ್ವೋಪದೇಶ, ಭರತ-ಬಾಹುಬಲಿಗಳ ವೃತ್ತಾಂತ ನಿರೂಪಿತವಾಗಿವೆ. ೧೨ನೆಯ ಸಂಧಿಯಲ್ಲಿ ಚತುರ್ವಿಂಶತಿ ತೀರ್ಥಂಕರರ ವರ್ಣ, ಆಯುಷ್ಯಾದಿಗಳ ವಿವರವಿದೆ. ಒಟ್ಟು ೧೨೮೪ ಪದ್ಯಗಳಿವೆ.

ಪಂಚ ಪರಮೇಷ್ಠಿಗಳ ಸ್ತುತಿಗಳೊಂದಿಗೆ ಗ್ರಂಥವನ್ನು ಆರಂಭಿಸಿದ್ದಾನೆ. ಪ್ರಥಮ ಜಿನೇಶನ ಪುಣ್ಯಕಥೆಯನ್ನು ಅಧ್ಯಾತ್ಮ ವಿಚಾರವಾಗಿ ಬರೆದಿರುವೆನೆಂದು ಸ್ಪಷ್ಟಪಡಿಸಿದ್ದಾನೆ. ಜನಸಾಮಾನ್ಯರಿಗೆ ಈ ಕಥೆಯನ್ನು ತಿಳಿಸುವುದು ಆತನ ಉದ್ದೇಶವೇ ಹೊರತು ಹೊಸದನ್ನು ಹೇಳಬೇಕೆಂದಲ್ಲ.

ಅದರಿಂದ ಸಂಸ್ಕೃತ ಪ್ರಾಕೃತಪಭ್ರಂಶಕ | ಮುದಿತ ಪೈಶಾಚಿಕವಾದಿ
ಹದಿನೆಂಟು ಭಾಷೆಯನರಿಯದ ಜನರಿಗೆ | ಮುದದಿಂ ಕನ್ನಡದಿಂ ಪೇಳುವೆನು || (I-೧೮)

ಎಂದು ಹೇಳಿ ಕಥೆಯನ್ನು ಪ್ರಾರಂಭಿಸಿರುವನು.

ಕವಿಗೆ ತನ್ನ ಹಿಂದಿನ ಕವಿಗಳ ಬಗೆಗೆ ಅಭಿಮಾನವಿದೆಯಾದರೂ ಪ್ರತ್ಯೇಕವಾಗಿ ಯಾವ ಕವಿಯನ್ನೂ ಹೆಸರಿಸಿಲ್ಲ. ತಾನು ಪ್ರಭಾವಿತನಾಗಿರುವ ಪಂಪ, ಚಾಮುಂಡರಾಯರನ್ನೂ ಸಹ ಸ್ಮರಿಸಿಲ್ಲ.

ಆದಿತೀರ್ಥಂಕರನ ಕಥೆಯನ್ನು ಕೇವಲ ವರದಿಯಂತೆ ಹೇಳದೆ, ಸ್ವಾರಸ್ಯವಾಗಿ ಹೇಳಬೇಕೆಂಬ ಮನೋಭಾವವನ್ನು ಕವಿ ತೋರಿದ್ದಾನೆ. ಸಾಂಗತ್ಯದ ನಿರರ್ಗಳ ಧಾಟಿ ಕತೆಗೆ ಹೊಂದಿಕೊಂಡಿದೆ. ಪುರಾಣಕಥೆಯೊಂದನ್ನು ಸರಳೀಕರಿಸಿಯೂ ಹೇಳಬಹುದೆಂಬುದನ್ನು ತೋರಿಸಿದ್ದಾನೆ.

ಚತುರ್ವಿಂಶತಿ ತೀರ್ಥಂಕರ ಕಲ್ಯಾಣ : ಆದಿಪುರಾಣದ ೧೨ನೆಯ ಸಂಧಿಯನ್ನು ಸ್ವತಂತ್ರ ಕೃತಿಯೆಂದೇ ತಿಳಿಯಲಾಗಿದೆ. ೧೭೭ ಸಾಂಗತ್ಯಗಳಿವೆ. ಇದನ್ನೂ ಸಹ ಮೂಡಬಿದರೆಯ ಬಸದಿಯಲ್ಲಿ ೧೭೨೫ರಲ್ಲಿ ಬರೆದು ಮುಗಿಸಿದ್ದಾನೆ.[೬೭]

ಭರತ ಕ್ಷೇತ್ರದಿ ಹುಂಡಾವಸರ್ಪಿಣಿಯೊಳು | ವರ ಧರ್ಮವ ಪ್ರಕಟಿಸಿದಾ
ಪುರುಜಿನರಾದಿ ವೀರಾಂತ್ಯಮಿಪ್ಪತ್ತನಾ | ಲ್ವರ ಕಲ್ಯಾಣ ಪೇಳ್ವೆಕಿರಿದಾ || (I-೧೨)

ಎಂದು ಹೇಳಿ ಪ್ರತಿತೀರ್ಥಂಕರರನ ಭವಾವಳಿ, ತಂದೆ-ತಾಯಿ, ಪಂಚಕಲ್ಯಾಣ, ವರ್ಣ, ಆಯುಷ್ಯ, ಲಾಂಛನ, ಗಣಧರ ಸಂಖ್ಯೆ ಇವುಗಳ ವಿವರವನ್ನು ಸಂಕ್ಷೇಪವಾಗಿ ನೀಡಿದ್ದಾನೆ.

ಉತ್ತರ ಪುರಾಣ : ೧೮೦ ಸಾಂಗತ್ಯಗಳನ್ನೊಳಗೊಂಡ ಎರಡು ಸಂಧಿಗಳ ಗ್ರಂಥ. ಪುರುದೇವ ಚರಿತೆಯ ಕಾಲ, ಸ್ಥಳವನ್ನೇ ಇಲ್ಲೂ ನಿರ್ದೇಶಿಸಲಾಗಿದೆ.

ಶಾಂತೀಶ್ವರ ಚರಿತೆ [೭೮] : ಇದರ ೧೧ ಸಂಧಿಗಳಲ್ಲಿ ಒಟ್ಟು ೧೨೫೮ ಸಾಂಗತ್ಯಗಳಿವೆ. ಪೊನ್ನ ಕಮಲಭವರ ಶಾಂತಿನಾಥನನ್ನು ಕುರಿತ ಕೃತಿಗಳು ಚಂಪೂಕೃತಿಗಳು. ಅದನ್ನು ಸುಲಭಗೊಳಿಸಿ ಕವಿ ಸಾಂಗತ್ಯದಲ್ಲಿ ಬರೆದಿದ್ದಾನೆ. ಅಲ್ಲಲ್ಲಿ ಕಂದ ವೃತ್ತಗಳೂ ಬೆರೆತಿವೆ. 'ಇದರಲ್ಲಿ ಜೈನ ಪ್ರಕ್ರಿಯೆಗಳ ಹೊರೆ ಕಡಿಮೆ ಇರುವುದರಿಂದ ಕಾವ್ಯಾಸ್ವಾದನೆ ಸುಲಭವಾಗಿದೆಯಲ್ಲದೆ ಜೈನೇತರರಿಗೆ ಉತ್ತಮ ಪ್ರವೇಶಿಕೆಯೂ ಆಗಿದೆ.[೭೯]

ತೀರ್ಥಂಕರರನ ಜೀವನದ ಘಟನೆಗಳು, ಭವಾವಳಿಗಳು, ಇವುಗಳಿಂದ ಇಡಿಕಿರಿದ 'ಶಾಂತಿನಾಥ ಚರಿತ್ರೆ'ಯಲ್ಲಿ ರಸಮಡುಗಳು ತೀರಾ ಕಡಿಮೆ. ಏಳನೆಯ ಸಂಧಿಯಲ್ಲಿ ಜನ್ಮಾಭಿಷೇಕದ ವರ್ಣನೆಯಲ್ಲಿ ಆದಿಕವಿ ಪಂಪನ ಪ್ರಭಾವ ಕಂಡುಬರುತ್ತದೆ.[೮೦]

ಈ ಕೃತಿಯನ್ನು ಗೋಕಾಕ್ ನಗರದ ಸುಪಾರ್ಶ್ವನಾಥ ಬಸದಿಯಲ್ಲಿ ಕ್ರಿ. ಶ. ೧೭೪೨ ರಲ್ಲಿ ಬರೆದು ಮುಗಿಸಲಾಗಿದೆ.

ಷಟ್ಪ್ರಾಭೃತ ವ್ಯಾಖ್ಯಾನ, ಆರಾಧನಾಸಾರವ್ಯಾಖ್ಯಾನ, ಷೋಡಶಭಾವನಾ ಚರಿತೆ, ಪಾರ್ಶ್ವನಾಥ ಚರಿತೆ, ದ್ವಾದಶಾನುಪ್ರೇಕ್ಷೆ ವ್ಯಾಖ್ಯಾನ, ತೀರ್ಥಂಕರ ಸ್ತುತಿ, ಭುಜಬಲಿಚರಿತೆ, ಚೌವ್ವೀಸ ತೀರ್ಥಂಕರ ಸ್ತೋತ್ರ, ತ್ರೈಲೋಕ್ಯಭೂಷಣ ಇವು ಶಾಂತಿಕೀರ್ತಿಯ ಇತರ ಕೃತಿಗಳು.[೮೧]

ಈ ಕೃತಿಸರಣಿಯನ್ನು ಗಮನಿಸಿದರೆ ಶಾಂತಿಕೀರ್ತಿಗೆ ಜೈನಧರ್ಮದಲ್ಲಿದ್ದ ಒಲವು ಆಸಕ್ತಿಗಳು ಸ್ವಯಂವೇದ್ಯವಾಗುತ್ತವೆ. ಈತನ ಧಾರ್ಮಿಕ ಒಲವು ಕಾವ್ಯರೂಪದಲ್ಲಿ ಮೈದಾಳಿ ನಿಂತಿದೆ. ವೃಷಭ, ಶಾಂತಿ, ಪಾರ್ಶ್ವ—ಈ ಮೂರು ತೀರ್ಥಂಕರರ ಕಥೆಯನ್ನು ಸಾಂಗತ್ಯದಲ್ಲಿ ತಂದುಕೊಟ್ಟಿರುವ ಹಿರಿಮೆ ಈತನದಾಗಿದೆ. ಕವಿ ಈ ಮೂವರ ಬಗೆಗಿನ ತನ್ನ ಭಕ್ತಿಗೌರವಗಳನ್ನು ಕಾವ್ಯಮುಖೇನ ಅರ್ಪಿಸಿದ್ದಾನೆ.

ಪರಂಪರಾನುಗತವಾಗಿ ಬಂದ ಕಥೆಯನ್ನು—ತತ್ತ್ವಗಳನ್ನು ಸಾಂಗತ್ಯರೂಪದಲ್ಲಿ ಅಳವಡಿಸಿರುವುದು ಈತನ ವೈಶಿಷ್ಟ್ಯವಾಗಿದೆ.

## ಬೊಮ್ಮಣ್ಣ

ಕನ್ನಡ ಸಾಹಿತ್ಯದಲ್ಲಿ ೧೮ನೇ ಶತಮಾನವು ಯಕ್ಷಗಾನದ ಪ್ರಾಬಲ್ಯದ ಕಾಲವಾಗಿದೆ. ಇವುಗಳಲ್ಲಿ ಸಾಹಿತ್ಯಕಾಂಶವು ಹೆಚ್ಚಿಗೆ ಕಂಡುಬಾರದಿದ್ದರೂ, ಗೇಯತೆಯ ಕಲಾದೃಷ್ಟಿಯಿದೆ. ಪುರಾಣ ಕಥೆಗಳನ್ನು ಆಧರಿಸಿ ಇವುಗಳ ರಚನೆಯುಂಟಾಗಿದೆ. ಇದರ ರಚನಾಕಾರರು ಅಷ್ಟಾಗಿ ಪಂಡಿತರಲ್ಲ. 'ಕುರಿತೋದದೆಯುಂ ಕಾವ್ಯಪರಿಣತಮತಿ'ಗಳಾದವರು. ಈ ಸಾಲಿಗೆ ಸೇರಿದ ಕವಿಗಳಲ್ಲಿ ಬೊಮ್ಮಣ್ಣ ಕವಿಯೂ ಒಬ್ಬನಾಗಿದ್ದಾನೆ.

ಬೊಮ್ಮಣ್ಣ ಕವಿಯನ್ನು ಕುರಿತು ಕವಿಚರಿತೆಕಾರರು ಹೇಳಿರುವ ವಿಷಯಗಳಿಷ್ಟು : ಈತನು ನಯಸೇನನ 'ಧರ್ಮಾಮೃತ'ವನ್ನು ಶಕ ೧೬೭೧ ಶುಕ್ಲವರ್ಷದಲ್ಲಿ (೧೭೪೯) ಪ್ರತಿಮಾಡಿದ್ದಾನೆ. ಕೆಳಗಣ ಪದ್ಯದಲ್ಲಿ ತಾನು ಕವಿಯೆಂದೂ ನಾಗೇಂದ್ರನ ಮಗನೆಂದೂ ಹೇಳಿಕೊಂಡಿದ್ದಾನೆ.

ಇಂದ್ರಾನ್ವಯೋದ್ಭವಂ ನಾ
ಗೇಂದ್ರನ ತನುಜಾತನಾದ ಬೊಮ್ಮಣ ಕವಿ ದೇ
ವೇಂದ್ರಸುಬೃಂದಾರ್ಚಿತ ಜಿನ
ಚಂದ್ರನ ಚೈತ್ಯಾಲಯದೊಳೆ ಬರೆದಂ ಮುದದಿಂ[೮೨]

ಇಲ್ಲಿ ಹೇಳಿರುವ ಬೊಮ್ಮಣ್ಣ ಕವಿಯೇ 'ಆದಿಪರಮೇಶ್ವರ ಯಕ್ಷಗಾನ'ವನ್ನು ಬರೆದ ಬೊಮ್ಮಣ್ಣ ಕವಿಯೆಂದು ತಿಳಿದುಬರುತ್ತದೆ. ಯಕ್ಷಗಾನದ ಆದಿಯಲ್ಲಿ ಕವಿ ತಾನು ಇಂದ್ರಾನ್ವಯಕ್ಕೆ ಸೇರಿದವನೆಂದೂ ಉರಗೇಂದ್ರನ (ನಾಗೇಂದ್ರನ) ಮಗನೆಂದೂ ಹೇಳಿಕೊಂಡಿದ್ದಾನೆ.

ಅರುಹಾನಾರಾಧಿಸುವಯಿಂದ್ರಾನ್ವಯದುರಗೇಂದ್ರನಾತ್ಮಜನು
ಪುರುಪರಮೇಶ್ವರನಾಕಥೆಯೊಳಾಚರಿಪಾ ಬೊಮ್ಮಣ್ಣ ಕವಿಯು (ಆದಿಯ.ಪರಿಚ್ಛೇದ I)

ಎಂಬ ಮಾತಿನಲ್ಲಿ ಇದು ಸ್ಪಷ್ಟವಾಗಿದೆ.

ಪ್ರತಿಯನ್ನು ತೆಗೆಯುವ ಕಾರ್ಯವು ಶಕವರ್ಷ ೧೭೬೯ರಲ್ಲಿ (೧೮೪೭) ಪ್ಲವಂಗ ಸಂವತ್ಸರದಲ್ಲಿ ಸಂಪೂರ್ಣವಾಯಿತೆಂದು ಇದರ ಪ್ರತಿಕಾರನಾದ ಪುಟ್ಟಯ್ಯನು ಹೇಳಿಕೊಂಡಿದ್ದಾನೆ. "ಮಹಿಷೂರದೊರೆ ಕೃಷ್ಣರಾಜೇಂದ್ರನ ಪುರಿಗುತ್ತರದೊಳೆಸೆವ ವೇಣಾಖ್ಯ ಪುರಿ ವಿರಾಜಿಸುತಿಹುದು"—ಎಂದು ಹೇಳಿ ಆ ಪುರದ ಚೈತ್ಯಾಲಯದಲ್ಲಿ ತಾನು ಯಕ್ಷಗಾನವನ್ನು ಬರೆದುದಾಗಿಯೂ ತಿಳಿಸಿದ್ದಾನೆ. ಕವಿ ಇಲ್ಲಿ ಹೇಳಿರುವ ಮಹಿಷೂರ ದೊರೆ ಕೃಷ್ಣರಾಜೇಂದ್ರ ದೊರೆ. ಮೈಸೂರರರಸರಲ್ಲೊಬ್ಬರಾದ ಎರಡನೆಯ ಕೃಷ್ಣರಾಜಒಡೆಯರ ಕಾಲದಲ್ಲಿ ಕವಿ ಈ ಕೃತಿ ಯನ್ನು ಬರೆದಿರಬಹುದೆಂದು (೧೭೩೪-೧೭೬೬) ಕವಿಚರಿತೆಕಾರರು ಕೊಟ್ಟಿರುವ ಕಾಲದ ಆಧಾರದ ಮೇರೆಗೆ ಹೇಳಬಹುದಾಗಿದೆ.

ಬೊಮ್ಮಣ್ಣ ಕವಿಯ ಸ್ಥಳ ಶ್ರೀರಂಗಪಟ್ಟಣಕ್ಕೆ ಉತ್ತರದ ಕಡೆಗಿರುವ ವೇಣುಪುರಿ. ಇದನ್ನು ಕವಿ ವಂಶನಗರಿ ಎಂದು ಕರೆದಿದ್ದಾನೆ. ಅಲ್ಲಿಯ ಸುಪಾರ್ಶ್ವನಾಥನನ್ನು ನಾಗಕುಮಾರ ಷಟ್ಪದಿಯಲ್ಲಿ ಸ್ಮರಿಸಿದ್ದಾನೆ.....'ವೇಣು ಅಥವಾ ವಂಶ ಎಂದರೆ ಬಿದಿರು ಎಂದರ್ಥ. ಕವಿ ಹೇಳುವ ವೇಣುಪುರ ಅಥವಾ ವಂಶನಗರವೆಂಬುದು ವಾಸ್ತವವಾಗಿ ತುಮಕೂರು ಜಿಲ್ಲೆಯ ಬಳಿಯಿರುವ ಈಗಿನ ಬಿದರೆ ಗ್ರಾಮ. ಈ ಊರಿನಲ್ಲಿ ಇಂದಿಗೂ ಕವಿಯ ಆರಾಧ್ಯ ದೈವವಾದ ಸುಪಾರ್ಶ್ವನಾಥನ ಬಸದಿಯಿದೆ.'[೮೩]

ಬೊಮ್ಮಣ್ಣ ಕವಿ ಕೃತಿಕಾರ ಮನೆತನದವನು. ಅಲ್ಲದೆ ಆತ ಅರ್ಚಕ. (ಇಂದ್ರಾನ್ವಯ) ವಂಶಕ್ಕೆ ಸೇರಿದವನು. ಕವಿಯ ತಂದೆ ನಾಗೇಂದ್ರನೆಂಬ ಸಂಗತಿ ಈತನ ಎಲ್ಲ ಕೃತಿಗಳಲ್ಲೂ ನಮೂದಿತವಾಗಿದೆ. ಜಿನಪೂಜೆಯ ಜೊತೆಗೆ ಸಾರಸ್ವತೋಪಾಸಕನೂ ಆಗಿದ್ದಾನೆ.[೮೪] ಆತನ ತಂದೆ ಯಾವ ಕಾವ್ಯಗಳನ್ನು ಬರೆದನೋ, ಯಾವ ಕಾವ್ಯಗಳನ್ನು ಪ್ರತಿ ಮಾಡಿದನೋ ತಿಳಿಯದು. ಆದರೆ ಬೊಮ್ಮಣ್ಣನ ಮಗನ ವಿಚಾರ ಮತ್ತು ಮಗನ ಕೃತಿಗಳ ವಿಚಾರ

ಸಾರಷ್ಟು ತಿಳಿಯುತ್ತದೆ. ಮನ್ಮಥ ಮಣಿದರ್ಪಣ (ಭಾಮಿನಿ ಷಟ್ಪದಿ), ಪದ್ಮಾವತಿ ಕೊರವಂಜಿ ಯಕ್ಷಗಾನ, ರಾಮವಿಜಯ ಕಾವ್ಯದ ಎರಡು ಸಂಧಿ(ಸಾಂಗತ್ಯ)ಗಳ ಕರ್ತೃವಾದ ನಾಲ್ಕನೆಯ ಮಂಗರಸ ಕವಿ ಈತನ ಮಗ. ಈ ಮಗನ ಮೂಲ ಹೆಸರು ರಾಯಣ್ಣನೆಂದು ತಿಳಿದುಬರುತ್ತದೆ.[೮೫]

ಬೊಮ್ಮಣ್ಣ ಕವಿಯ ಕೃತಿಗಳು ಎರಡು. 'ಆದಿಪರಮೇಶ್ವರನ ಯಕ್ಷಗಾನ'[೮೬] ಮತ್ತು 'ನಾಗಕುಮಾರ ಷಟ್ಪದಿ'.

'ನಾಗಕುಮಾರ ಷಟ್ಪದಿ'ಯಲ್ಲಿ ೩೨ ಸಂಧಿಗಳಿವೆ. ೨೯೮೮ ಪದ್ಯಗಳಿವೆ. ಕಥಾನಾಯಕ ನಾಗಕುಮಾರ, ನೇಮಿನಾಥನ ಕಾಲದಲ್ಲಿ ಆಗಿಹೋದ ಮಹಾಪುರುಷ ಮತ್ತು ಒಬ್ಬ ಕಾಮದೇವ. ಬಾಹುಬಲಿ ಕವಿಯನ್ನನುಸರಿಸಿ ಈ ಕಾವ್ಯವನ್ನು ಬರೆದಿದ್ದಾನೆ. ಇದು ಸಾಧಾರಣ ಮಟ್ಟದ ಕಾವ್ಯವಾಗಿದೆ.

'ಆದಿಪರಮೇಶ್ವರನ ಯಕ್ಷಗಾನ'ವನ್ನು ಆದಿನಾಥ ಪುರಾಣ ಯಕ್ಷಗಾನವೆಂದೂ ಕರೆಯಲಾಗುತ್ತದೆ. ಆದಿಪರಮೇಶ್ವರನ ಯಕ್ಷಗಾನ ಪಂಡಿತರ ಕೃತಿಯಲ್ಲ. ಜನಸಾಮಾನ್ಯರಿಗೆ ಬರೆದ ದೇಸೀಗಬ್ಬ (ಇದರಲ್ಲಿ ಅನೇಕ ಅಶುದ್ಧ ಪಾಠಗಳಿವೆ. ವಿಸಂಧಿಗಳು, ಅಶುದ್ಧ ರೂಪಗಳು ಬಹಳಷ್ಟು ಇವೆ). ಇದರಲ್ಲಿ ಆ ಕಾಲದ ನಂಬಿಕೆ, ಆಚರಣೆಗಳು ಸ್ಪಷ್ಟವಾಗಿ ಗೋಚರಿಸುತ್ತವೆ.

ಇದರಲ್ಲಿ ಒಟ್ಟು ಏಳು ಪರಿಚ್ಛೇದಗಳಿವೆ. ಮೊದಲ ನಾಲ್ಕು ಪರಿಚ್ಛೇದಗಳಲ್ಲಿ ವೃಷಭನಾಥನ ಭವಾವಳಿಯೂ ನಾಲ್ಕನೆಯ ಪರಿಚ್ಛೇದದ ಮಧ್ಯದಿಂದ ಏಳನೆಯ ಪರಿಚ್ಛೇದದವರೆಗೆ ಪಂಚಕಲ್ಯಾಣಗಳ ವೃತ್ತಾಂತವೂ ಭರತಬಾಹುಬಲಿಗಳ ಕಥೆಯೂ ಬರುತ್ತದೆ.

ಕವಿ ಸಂಪ್ರದಾಯದಂತೆ ಆಚಾರ್ಯಸ್ತುತಿ, ಪೂರ್ವ ಕವಿಗಳ ಸ್ಮರಣೆಯನ್ನು ಮಾಡಿದ್ದಾನೆ. ಪಂಪ, ರನ್ನ, ಗುಣವರ್ಮಾದಿಗಳನ್ನು ನೆನೆದು ಈ ಕಬ್ಬಿಗರು ತನ್ನ ಹೃದಯದಲ್ಲಿ ನೆಲಸಿ ವಾಕ್‌ಚತುರತೆಯನ್ನು ನೀಡಲಿ ಎಂದು ಆಶಿಸಿದ್ದಾನೆ. ಸುಕವಿಗಳ ಹೊಗಳಿಕೆ, ಕುಕವಿಗಳ ನಿಂದೆಯನ್ನು ಮಾಡಿದ್ದಾನೆ. ಲೋಕವರ್ಣನೆಯೊಂದಿಗೆ ಕವಿ ಕಥಾಮುಖವನ್ನು ಪ್ರವೇಶಿಸಿದ್ದಾನೆ. ಪ್ರತಿ ಪರಿಚ್ಛೇದದ ಆದಿಯಲ್ಲಿ ಆದಿಪರಮೇಶ್ವರನ ಸ್ತುತಿಯಿದೆ.

ಇದರಲ್ಲಿ ಸಂಗೀತಕೃತಿಗಳಂತಹ ಅನೇಕ ಛಂದೋವಿನ್ಯಾಸದ ಪದ್ಯಗಳಿವೆ. ತಾಳಬದ್ಧವಾದ ವಿವಿಧಗತಿಯಲ್ಲಿ ಅವು ಭಾವಕ್ಕೆ ತಕ್ಕಂತೆ ಸಾಗಿವೆ.

'ಇಲ್ಲಿ ಕವಿಯು ಕಾಲಕ್ರಮಾನುಗತವಾಗಿ ಕತೆಯ ಸನ್ನಿವೇಶಗಳನ್ನು ನಿರ್ಮಿಸಿಕೊಳ್ಳುತ್ತ ಅಲ್ಲಿ ಪಾತ್ರಗಳನ್ನು ನಮ್ಮೆದುರು ತಂದು ನಿಲ್ಲಿಸಿ, ಅವುಗಳ ಕ್ರಿಯೆ, ಭಾವನೆಗಳ ಪ್ರಕಟಣೆ ಹಾಗೂ ಸಂಭಾಷಣೆಗಳ ಮೂಲಕ ಪ್ರತಿ ಸನ್ನಿವೇಶವನ್ನೂ ನಾಟಕೀಯ ದೃಶ್ಯವಾಗಿ ಮಾರ್ಪಡಿಸಿಕೊಳ್ಳುತ್ತ ಕತೆಯನ್ನು ಮುಂದುವರಿಸುವುದು ಕಾಣಬಹುದು'[೮೭] ಎಂಬ ಯಕ್ಷಗಾನ ಸಂಬಂಧಿಯಾದ ಈ ಮಾತುಗಳನ್ನು ಆದಿಪರಮೇಶ್ವರನ ಯಕ್ಷಗಾನಕ್ಕೂ ಅನ್ವಯಿಸಿಕೊಳ್ಳಬಹುದಾಗಿದೆ.

ಕವಿಯು ರತ್ನಾಕರವರ್ಣಿಯಿಂದ ವಿಶೇಷವಾಗಿ ಪ್ರಭಾವಿತನಾಗಿರುವುದು ಕಂಡುಬರುತ್ತದೆ. ಅಲ್ಲಲ್ಲಿಯೇ ರತ್ನಾಕರವರ್ಣಿಯ ಆಶಯಗಳನ್ನು ತನ್ನ ಕೃತಿಯಲ್ಲಿ ಮೂಡಿಸಿದ್ದಾನೆ.

ಉದಾಹರಣೆಗೆ :

ಯೆಸ್ಟಿಷ್ಟೈಪೆರಿಗಂ ಮ
ತ್ತಷ್ಟಷ್ಟುಂ ದಾನ ಪೂಜೆ ಶೀಲುಪವಾಸವಿ
ವಿಷ್ಟರ ಮನ್ನಣೆ ಕೇಳ್ನಿ
ಕೃಷ್ಟಗೆ ದೊರೆಕೊಳದು ಪುಣ್ಯಪುರುಷರಿಗಲ್ಲದೆ ‖ (ಆದಿಯ. II)

ಎಷ್ಟೆಷ್ಟೈಸಿರಿ ಪೆರ್ಚುಗುಂ ತನಗೆ ತಾನಷ್ಟಷ್ಟು ಸದ್ಧರ್ಮ ಕು
ತ್ತೃಷ್ಟಂ ಮಾಡಲೆವೇಳ್ಕು ನೋಂಪಿಗಳನಾನಿರ್ಗ್ರಂಥರಂ ನಿಚ್ಚಸಂ
ತುಷ್ಟಂ ಮಾಡಲೆವೇಳ್ಕು ಧಾರ್ಮಿಕಜನಕ್ಕಾಧಾರವಾಗಲ್ಕೆ ವೇ
ಳ್ಕಿಷ್ಟುಂ ತಾಂ ಸುಕೃತಾನುಬಂಧಿಸುಕೃತಂ ರತ್ನಾಕರಾಧೀಶ್ವರಾ ‖ (ರತ್ನಾಕರ ಶತಕ, ೮೪)

ಕೃತಿಯ ಉದ್ದೇಶವೇನೆಂಬುದನ್ನು ಕವಿ ತನ್ನ ಕೃತಿಯ ಆದ್ಯಂತಗಳಲ್ಲಿ ಸ್ಪಷ್ಟಪಡಿಸಿದ್ದಾನೆ. ಈ ಕೃತಿಯು 'ಪುಣ್ಯಗಣ್ಯ'ವಾದುದೆಂದೂ, 'ಪಾಪಮೂಲನಿವಾರಕ'ವಾದುದೆಂದೂ ಹೇಳಿಕೊಂಡಿದ್ದಾನೆ.

ಕವಿ ಸಾಧಾರಣ ಮಟ್ಟದ ರಚನಾಕಾರನಾಗಿ ಕಂಡುಬರುತ್ತಾನೆ. ಪರಂಪರೆಯಂತೆ ಭವಾವಳಿ ಪಂಚಕಲ್ಯಾಣಗಳನ್ನು ವಿವರಿಸಿದ್ದರೂ ಭರತಬಾಹುಬಲಿಗಳ ಯುದ್ಧಪ್ರಸಂಗವನ್ನು ಸಂಪೂರ್ಣವಾಗಿ ವ್ಯತ್ಯಾಸ ಮಾಡಿಕೊಂಡಿರುವುದು ಧಾರ್ಷ್ಟ್ಯವೇ ಸರಿ.

ಆದಿತೀರ್ಥಂಕರನಿಗೆ ಸಂಬಂಧಿಸಿದ ಇನ್ನೂ ಕೆಲವು ಕೃತಿಗಳು ದೊರೆಯುತ್ತವೆ. ಅವುಗಳಲ್ಲಿ ವರ್ಧಮಾನ ಪಂಡಿತನ 'ಪುರುದೇವ ಚರಿತೆ' ಗದ್ಯದಲ್ಲಿದೆ.[೮೮] ಶಕವರುಷ ೧೮೧೦ರಲ್ಲಿ (೧೮೮೮) ಈ ಗ್ರಂಥ ಪೂರ್ಣವಾಯಿತೆಂದು ತಿಳಿಸಲಾಗಿದೆ. ಈತನು ಜಿನಚಂದ್ರಾರ್ಯರ ಶಿಷ್ಯನೆಂದು ಕವಿಚರಿತೆಕಾರರು ತಿಳಿಸಿದ್ದಾರೆ.[೮೯]

'ಆದೀಶ್ವರರ ಜನ್ಮಾಭಿಷೇಕ'ದ ಕಾಲ, ಕರ್ತೃ ತಿಳಿದುಬಂದಿಲ್ಲ. ಅಸಮಗ್ರವಾಗಿದೆ. ಶಿಥಿಲವಾಗಿದೆ.[೯೦] ಇದು ಹಾಡಿನ ರೂಪದಲ್ಲಿದ್ದು ತೀರಾ ಸಾಧಾರಣ ಮಟ್ಟದ್ದಾಗಿದೆ. ಚಂದ್ರಮನ (ಕಾಲ?) 'ಆದೀಶ್ವರರ ಸೋಬಾನೆ ಪದಗಳು' ಹಾಡಿನ ರೂಪದಲ್ಲಿದೆ.[೯೧] 'ಪುರುದೇವ ಕಥೆ' ಎಂಬ ಗ್ರಂಥದ ಕರ್ತೃ, ಕಾಲಗಳು ತಿಳಿದುಬಂದಿಲ್ಲ. ಇದು ಗದ್ಯದಲ್ಲಿದ್ದು, ಆದಿನಾಥನ ಭವಾವಳಿ ಕಥೆ ಇಲ್ಲಿ ಬರುತ್ತದೆ.[೯೨]

ಚತುರ್ವಿಂಶತಿ ತೀರ್ಥಂಕರರ ಸ್ತೋತ್ರದ ರೂಪದಲ್ಲಿ ಕೆಲವು ಕೃತಿಗಳು ಕಂಡುಬರುತ್ತವೆ. ಚಂದ್ರಸಾಗರವರ್ಣಿಯ 'ಪುರಾಣ ಸ್ತೋತ್ರ' ವಾರ್ಧಕ ಷಟ್ಪದಿಯಲ್ಲಿದೆ. ಒಟ್ಟು ೫೧ ಪದ್ಯಗಳಿವೆ. ಜಿನರ ಮಾತಾಪಿತೃಗಳ ವರ್ಣ, ಆಯುಸ್ಸು, ಲಾಂಛನ, ಯಕ್ಷಯಕ್ಷಿಯರು ಮೊದಲಾದ ವಿವರಗಳನ್ನು ಹೇಳುವಾಗ ವೃಷಭನಿಗೆ ಸಂಬಂಧಿಸಿದ ಆ ವಿವರಗಳನ್ನು ಹೇಳಲಾಗಿದೆ.[೯೩] 'ಚತುರ್ವಿಂಶತಿ ತೀರ್ಥಂಕರ ಮಂಗಳಪದ' ಹಾಡಿನ ರೂಪದಲ್ಲಿದೆ. (ಎರಡು ಪತ್ರಗಳು—ಎಂಟು ಸಾಲುಗಳು) ತೀರ್ಥಂಕರರ ಸ್ತುತಿ ಇದೆ. ಕಾಲ ಕರ್ತೃ ಯಾವುದೂ ತಿಳಿದುಬಂದಿಲ್ಲ.[೯೪] 'ಚತುರ್ವಿಂಶತಿ ತೀರ್ಥಂಕರ ಸ್ತುತಿ' ಕಂದದಲ್ಲಿದೆ.[೯೫] (ಎರಡು ಪತ್ರಗಳಲ್ಲಿದೆ). 'ತೀರ್ಥಂಕರ ಚರಿತ್ರೆ' ಗದ್ಯ, ಶ್ಲೋಕ, ಗಾಹೆಗಳನ್ನೊಳಗೊಂಡಿದೆ[೯೬] (೮೨ರಿಂದ ೧೧೦ ಪತ್ರಗಳಲ್ಲಿ ಇದು ಬರುತ್ತದೆ).

ಮೇಲೆ ಹೇಳಿದ ಕೃತಿಗಳು ಗಾತ್ರದಲ್ಲಾಗಲಿ, ಯೋಗ್ಯತೆಯಲ್ಲಾಗಲಿ ತೀರಾ ಸಪ್ಪೆ

ಯೆನಿಸುತ್ತವೆ. ಸಾಹಿತ್ಯಕ ಗಂಧವಿಲ್ಲದ ಇವು ಆದಿತೀರ್ಥಂಕರನ ಚರಿತ್ರೆಯನ್ನು ಕುರಿತ ಸಾಹಿತ್ಯದಲ್ಲಿ ಯಾವ ಗಣನೀಯ ಸ್ಥಾನವನ್ನೂ ಪಡೆಯುವುದಿಲ್ಲ.

## ಟಿಪ್ಪಣಿಗಳು

೧. ಮುಳಿಯ ತಿಮ್ಮಪ್ಪಯ್ಯ, 'ನಾಡೋಜ ಪಂಪ', ಗೀತಾ ಬುಕ್ ಹೌಸ್, ಮೈಸೂರು ೧೯೭೭, ಪು. ೪೧-೪೩.

೨. ಕನ್ನಡ ಸಾಹಿತ್ಯಪರಿಷತ್ಪತ್ರಿಕೆ, ಜೂನ್-ಡಿಸೆಂಬರ್ ೧೯೪೯, ಪು. ೭೦ ರಿಂದ ೮೫.

೩. ಎಲ್. ಗುಂಡಪ್ಪ, (ಸಂ.), 'ಆದಿಪುರಾಣ ಸಂಗ್ರಹ', ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೫೫, ಪೀಠಿಕೆ ಪು. ೨.

೪. ಸೀತಾರಾಮ ಜಾಗೀರ್‌ದಾರ್, 'ಸಾಪೇಕ್ಷ' ಬೆಂಗಳೂರು, ೧೯೯೦, ೧ ರಿಂದ ೧೩.

೫. ಟಿ. ವಿ. ವೆಂಕಟಾಚಲಶಾಸ್ತ್ರೀ, 'ಶಬ್ದಾರ್ಥವಿಹಾರ', ೧೯೭೯, ಪು. ೨೩ ರಿಂದ ೩೨.

೬. ಟಿ.ವಿ. ವೆಂಕಟಾಚಲಶಾಸ್ತ್ರೀ, 'ಪಂಪ', ಸಾಹಿತ್ಯ ಅಕಾದೆಮಿ, ನವದೆಹಲಿ, ೧೯೮೭, ಪು. ೧೧.

೭. ಸೀತಾರಾಮ ಜಾಗೀರ್‌ದಾರ್, ಪೂರ್ವೋಕ್ತ, ಪು. ೬೦.

೮. ಅದೇ, ಪು. ೭೧.

೯. ಅದೇ, ಪು. ೨೩.

೧೦. 'ಪಂಪಭಾರತಂ ಎಂಬ ವಿಕ್ರಮಾರ್ಜುನ ವಿಜಯಂ' (ಸಂ.) ಬೆಳ್ಳಾವೆ ವೆಂಕಟನಾರಣಪ್ಪ, ೧೯೩೧, (XIV,೪೦-೪೮)

೧೧. ಅದೇ, I-೧೦.

೧೨. ಅದೇ I-೫೦-೫೧.

೧೩. ಅದೇ, I-೧೩.

೧೪. ರನ್ನನ ಅಜಿತನಾಥಪುರಾಣಂ, I-೧೮.

೧೫. ನಾಗಚಂದ್ರನ ಮಲ್ಲಿನಾಥ ಪುರಾಣಂ, I-೨೫.

೧೬. ಆಚಣ್ಣನ ವರ್ಧಮಾನ ಪುರಾಣಂ, I-೧೮.

೧೭. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಪು. ೧೨೦-೧೨೩.

೧೮. ರಂ. ಶ್ರೀ. ಮುಗಳಿ, 'ಕನ್ನಡ ಸಾಹಿತ್ಯದ ಇತಿಹಾಸ', ಸಾಹಿತ್ಯ ಅಕಾದೆಮಿ, ದೆಹಲಿ, ದ್ವಿ. ಆ. ೧೯೭೮, ಪು. ೪೩.

೧೯. ಟಿ. ವಿ. ವೆಂಕಟಾಚಲಶಾಸ್ತ್ರೀ, 'ಪಂಪ', ಪು. ೫೪.

೨೦. ಬೆಳ್ಳಾವೆ ವೆಂಕಟನಾರಣಪ್ಪ (ಸಂ.) ಪೂರ್ವೋಕ್ತ, ಉಪೋದ್ಘಾತ, ಪು. XLVII.

೨೧. ದ. ರಾ . ಬೇಂದ್ರೆ, 'ಮಹಾಕವಿ ಪಂಪ ಹಾಗೂ ಅವನ ಕೃತಿಗಳು - ಆರು ಉಪನ್ಯಾಸಗಳು', ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೯, ಪು. ೨೮.

೨೨. ಕಲಬುರ್ಗಿ, ಆದಿಪುರಾಣ ಮತ್ತು ಪ್ರಭುಲಿಂಗಲೀಲೆ, ಕರ್ನಾಟಕ ಭಾರತಿ, ಸಂ. ೫, ಸಂ. ೧

ಪು. ೯೪.

೨೩. ಆರ್.ನರಸಿಂಹಾಚಾರ್ಯ, 'ಕರ್ನಾಟಕ ಕವಿಚರಿತೆ-I' (ದ್ವಿ. ಮು.) ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೨. ಪು. ೫೧.

೨೪. Epigraphia Carnatica II, p. 567.

೨೫. ತೀ. ನಂ. ಶ್ರೀ. 'ಸಮಾಲೋಕನ', ಮೈಸೂರು, ೧೯೫೯. ಪು. ೨೬೨.

೨೬. EPI-ca II, ೩೩೬ (೨೩೪).

೨೭. ನೇಮಿಚಂದ್ರಸಿದ್ಧಾಂತ ಚಕ್ರವರ್ತಿ, ಗೊಮ್ಮಟಸಾರ-ಜೀವಕಾಂಡ, ಪು ೨೩೩; ಕರ್ಮಕಾಂಡ, ಪು. ೯೬೮, ೯೬೯, ೯೭೧

೨೮. ತೀ. ನಂ. ಶ್ರೀ. ಪೂರ್ವೋಕ್ತ, ಪು. ೨೬೦-೨೬೨.

೨೯. ನಾಥೂರಾಮ್ ಪ್ರೇಮೀ, 'ಜೈನ್ ಸಾಹಿತ್ಯ್ ಔರ್ ಇತಿಹಾಸ್', ಹಿಂದೀ ಗ್ರಂಥ ರತ್ನಾಕರ್ ಲಿಮಿಟೆಡ್, ಬೊಂಬಾಯಿ, ೧೯೫೬.

೩೦. EPI-ca ii ೪೭೬ (೩೪೫).

ಛಂದೋಂಬುಧಿ—ನಾಗವರ್ಮ I-೨೮.

ಸಮಯ ಪರೀಕ್ಷೆ–ಬ್ರಹ್ಮಶಿವ I–೪೧

೩೧. ಆರ್. ನರಸಿಂಹಾಚಾರ್ಯ, ಕರ್ಣಾಟಕ ಕವಿಚರಿತೆ, ೨, ಬೆಂಗಳೂರು (ದ್ವಿ. ಮು.) ೧೯೭೩, ಪು. ೫೧.

೩೨. ಕನ್ನಡ ವಿಶ್ವಕೋಶ ಸಂ. ೭, ಪು. ೩೧೬.

೩೩. EPI- ca II ೩೮೮(೨೮೧).

೩೪. ನಾಥೂರಾಮ್ ಪ್ರೇಮೀ, ಪೂರ್ವೋಕ್ತ, ಪು. ೨೬೫.

೩೫. ಟಿ. ವಿ. ವೆಂಕಟಾಚಲಶಾಸ್ತ್ರೀ, 'ಚಾಮುಂಡರಾಯ', ಮೈಸೂರು, ೧೯೭೩, ಪು. ೫.

೩೬. ಅದೇ, ಪು. ೬.

೩೭. ಚಾವುಂಪು. ಗ್ರಂಥಾಂತ್ಯದ ವಚನಭಾಗ.

೩೮. EPI-ca II ೧೫೦ (೧೨೧).

೩೯. ಚಾವುಂಪು, ಆದಿಪುರಾಣ, ಭಾಗ ೧೮-೧; ಗೊಮ್ಮಟಸಾರ —ಜೀವಕಾಂಡ ೭೩೩.

೪೦. ಟಿ. ವಿ. ವೆಂಕಟಾಚಲಶಾಸ್ತ್ರೀ, 'ಕನ್ನಡ ನೇಮಿನಾಥ ಪುರಾಣಗಳ ತೌಲನಿಕ ಅಧ್ಯಯನ', ಮೈಸೂರು, ೧೯೭೩, ಪು. ೫೧.

೪೧. ಚಾವುಂಪು. ದ ಸಮಾಪ್ತಿ ಗದ್ಯ.

೪೨. ಗೊಮ್ಮಟಸಾರ, ಕರ್ಮಕಾಂಡ, ೩೫೯, ೩೯೭, ೪೫೧, ೮೯೬, ೯೬೭.

೪೩. ತ್ರಿಷಷ್ಟಿಶಲಾಕಾ ಮಹಾಪುರಾಣಂ, ಪದ್ಮನಾಭಶರ್ಮ (ಸಂ.) ೧೯೭೮, ಪ್ರಸ್ತಾವನೆ, ಎಂ. ಡಿ. ವಸಂತರಾಜ್, ಪು. ೭.

೪೪. ನಾಥೂರಾಮ್ ಪ್ರೇಮೀ, ಪೂರ್ವೋಕ್ತ, ಪು. ೨೬೭.

೪೫. ಬಿ. ಎಂ. ಶ್ರೀ.ಯವರು ಕನ್ನಡ ಕೈಪಿಡಿ ೨ನೇ ಸಂಪುಟದಲ್ಲಿ ರನ್ನನ ಅಜಿತಪುರಾಣ ಮತ್ತು ಚಾವುಂಡರಾಯಪುರಾಣದಲ್ಲಿ ಕಂಡುಬರುವ ಪರಸ್ಪರ ಹೋಲಿಕೆಗಳನ್ನು ಗಮನಿಸಿ ಇದ ರಲ್ಲಿ ರನ್ನನ ಕೈವಾಡ ಸೇರಿದೆಯೇ ಎಂಬ ಅನುಮಾನವುಂಟಾಗುತ್ತದೆ ಎಂದು ಹೇಳಿದ್ದಾರೆ. ಇನ್ನು ಕೆಲವರು ರನ್ನನಿಂದಲೇ ಇದು ರಚಿತವಾಗಿರಬೇಕೆಂದು ಅಭಿಪ್ರಾಯಪಟ್ಟಿದ್ದಾರೆ. ಆದರೆ ರನ್ನನು ಚಾವುಂಡರಾಯಪುರಾಣವನ್ನು ನೋಡಿ ತಿದ್ದಿಕೊಟ್ಟಿರುವ ಸಾಧ್ಯತೆಯಿದೆಯೇ ಹೊರತು ಆತನೇ ಬರೆದುದೆಂದು ಹೇಳಲಾಗುವುದಿಲ್ಲ. ಹಾಗೆ ನೋಡಿದರೆ ಆದಿಪುರಾಣ ದೊಂದಿಗೂ ಹೋಲಿಕೆ ಇದೆ. ಅಲ್ಲದೆ ರನ್ನನು ಈ ಕೃತಿಯನ್ನು ತನ್ನದೆಂದು ಎಲ್ಲಿಯೂ ಉಲ್ಲೇಖಿಸಿಲ್ಲ.

೪೬. A. N. Upadhye, 'Upadhye Papers', ಪ್ರಸಾರಾಂಗ, ಮೈಸೂರು ೧೯೮೩, ಪು. ೨೪೩.

೪೭. ಅದೇ.

೪೮. ಎಸ್. ಪಿ. ಪಾಟೀಲ, ಚಾವುಂಡರಾಯ ಪುರಾಣ: ಸಾಹಿತ್ಯಿಕ ತಾತ್ವಿಕ ತೌಲನಿಕ ಅಧ್ಯಯನ, ಪಿಎಚ್. ಡಿ., ಪ್ರಬಂಧ, ೧೯೮೫.

೪೯. ಕಮಲಾ ಹಂಪನಾ, 'ಚಾವುಂಡರಾಯ ಪುರಾಣ'(ಸಂ.) ಕನ್ನಡ ಸಾಹಿತ್ಯ ಪರಿಷತ್ತು, ೧೯೮೩, ಪು. ೬.

೫೦. ಗೋವಿಂದ ಪೈಯವರ ಮಾತು, ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ೩, ಬೆಂಗಳೂರು, ಪು. ೨೯೧.

೫೧. ಕೆ. ಭುಜಬಲಿಶಾಸ್ತ್ರಿ, 'ಸಂಸ್ಕೃತ ವಾಙ್ಮಯಕ್ಕೆ ಜೈನ ಕವಿಗಳ ಕಾಣಿಕೆ', ಮೂಡುಬಿದರೆ, ೧೯೭೧, ಪು. ೧೬೧, ಮತ್ತು ನಾಥೂರಾಮ್ ಪ್ರೇಮೀ, ಪೂರ್ವೋಕ್ತ, ಪು. ೩೬೬.

೫೨. ಎಸ್. ಪಿ. ಪಾಟೀಲರು ಹಸ್ತಿಮಲ್ಲ ವಿರಚಿತ ಪೂರ್ವಪುರಾಣಂ ಎಂದೇ ತಮ್ಮ ಸಂಪಾದನಾ ಕೃತಿಯನ್ನು ಪ್ರಕಟಿಸಿದ್ದಾರೆ.

೫೩. A. N. Upadhye, ಪೂರ್ವೋಕ್ತ, ಪು. ೨೨೫.

೫೪. ಆರ್. ನರಸಿಂಹಾಚಾರ್ಯ, ಕವಿಚರಿತೆ ೨, ಪು. ೪೬೪.

೫೫. A. N. Upadhye, ಪೂರ್ವೋಕ್ತ, ಪು. ೨೨೮.

೫೬. ಪೂರ್ವಪುರಾಣ, (ಸಂ.) ಕೆ. ಜಿ. ಕುಂದಣಗಾರ, ಕೊಲ್ಹಾಪುರ, ೧೯೪೩, ಪು. ೨-೩.

೫೭. A. N. Upadhye, ಪೂರ್ವೋಕ್ತ.

೫೮. ನಾಥೂರಾಮ್ ಪ್ರೇಮೀ, ಪೂರ್ವೋಕ್ತ, ಪು. ೩೬೫.

೫೯. ಆರ್. ನರಸಿಂಹಾಚಾರ್ಯ, ಕವಿಚರಿತೆ I, ಪು. ೪೬೪.

೬೦. ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ, ಮೈಸೂರು ವಿಶ್ವವಿದ್ಯಾನಿಲಯ, ಸಂ. ೪, ೧೯೭೭, ಪು. ೧೬೯೭.

೬೧. ಕೆ. ಭುಜಬಲಿಶಾಸ್ತ್ರಿ, ಪೂರ್ವೋಕ್ತ, ಪು. ೧೬೨.

೬೨. ಅದೇ, ಪು. ೧೬೧-೧೬೨.

೬೩. ಎಂ. ಡಿ. ವಸಂತರಾಜ್, 'ಪೂರ್ವಪುರಾಣಂ' ಗುರುದೇವ, ಸಂ. ೩೨. ಸಂ. ೬೬-೬೭, ೧೯೮೮.

೬೪. 'ಹಸ್ತಿಮಲ್ಲವಿರಚಿತ ಪೂರ್ವಪುರಾಣಂ'(ಸಂ.) ಎಸ್. ಪಿ. ಪಾಟೀಲ, ೧೯೮೨, ಪೀಠಿಕೆ, ಪು. ೧೩.

೬೫. ರಂ. ಶ್ರೀ. ಮುಗಳಿ, ಕನ್ನಡ ಸಾಹಿತ್ಯಚರಿತ್ರೆ, ಮೈಸೂರು, ೧೯೬೮, ಪು. ೨೧೨.

೬೬. ವಿವರಗಳಿಗೆ ನೋಡಿ, ಕಮಲಾ ಹಂಪನಾ, 'ನಾಗರಾಜ', ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂ. ೪, ಭಾಗ I, ಪು. ೩೩.

೬೭. ಅದೇ, ಪು. ೨೮.

೬೮. A. N. Upadhye, H. L. Jain (Ed.), Punyasrava–Kathakosa, ೧೯೬೪, Intro.

೬೯. ಅದೇ, ಪು. ೨೯-೩೦.

೭೦. ನಾಗರಾಜ ಕವಿವಿರಚಿತ ಪುಣ್ಯಾಸ್ರವ, (ಸಂ.) ದೇ. ಜವರೇಗೌಡ, ಮೈಸೂರು, ೧೯೭೭, ಪೀಠಿಕೆ ಪು. ೧೪೮.

೭೧. ಅದೇ ಪು. ೧೪೯.

೭೨. ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡಸಾಹಿತ್ಯ ಚರಿತ್ರೆ, ೫, ಮೈಸೂರು, ೧೯೮೧, ಪು. ೩೭೨.

೭೩. ಆರ್. ನರಸಿಂಹಾಚಾರ್ಯ, ಕರ್ನಾಟಕ ಕವಿಚರಿತೆ, ೨-೩, ಪು. ೧೪೦, ೧೧೦.

೭೪. ವಿವರಗಳಿಗೆ ನೋಡಿ, ಬಿ. ಬಿ. ಮಹೀಶವಾಡಿ, 'ಜೈನ ವಾಙ್ಮಯ ಪರಿಶೋಧನೆ' ಲೇಖನಗಳು : ೧. ಕವಿ ಶಾಂತಿಕೀರ್ತಿ, ೨. ಕವಿ ಶಾಂತಿಕೀರ್ತಿಯ ಮೇಲೆ ಹೊಸ ಬೆಳಕು, ಧಾರವಾಡ, ೧೯೭೭.

೭೫. ಅದೇ, ಪು. ೫೪.

೭೬. ಬಿ. ಬಿ. ಮಹೀಶವಾಡಿಯವರು ಈತನ ಹತ್ತು ಕೃತಿಗಳನ್ನು ಉಲ್ಲೇಖಿಸಿದ್ದಾರೆ. ವೀರಣ್ಣ ರಾಜೂರ ಅವರು 'ಕನ್ನಡ ಸಾಂಗತ್ಯ ಸಾಹಿತ್ಯ' ಗ್ರಂಥದಲ್ಲಿ ( ಪು. ೪೩೫-೪೩೬) ಮತ್ತೆರಡು ಕೃತಿಗಳನ್ನು ಸೂಚಿಸಿದ್ದಾರೆ.

೭೭. ಬಿ. ಬಿ. ಮಹೀಶವಾಡಿಯವರು ಇದರಲ್ಲಿ ೭೭ ಸಾಂಗತ್ಯಗಳಿವೆ ಎಂದು ಸೂಚಿಸಿದ್ದಾರೆ. ಆದರೆ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ದೊರೆತ ಪ್ರತಿಯಲ್ಲಿ ೧೭೭ ಸಾಂಗತ್ಯಗಳಿವೆ.

೭೮. ಈ ಕೃತಿ ೧೯೩೮ರಲ್ಲಿ ಪ್ರಕಟವಾಗಿದೆ. ಸಂಪಾದಕರು ನೇಮಿರಾಜ ಶಾಸ್ತ್ರಿ.

೭೯. ಹಂಪನಾ, 'ಸಾಮಾನ್ಯನಿಗೆ ಸಾಹಿತ್ಯಚರಿತ್ರೆ', ಸಂ. ೯, ಸಾಂಗತ್ಯ ಕವಿಗಳು, ಬೆಂಗಳೂರು, ೧೯೭೫, ಪು. ೯೪.

೮೦. ಅದೇ, ಪು. ೯೫.

೮೧. ಬಿ. ಬಿ. ಮಹೀಶವಾಡಿ, ಪೂರ್ವೋಕ್ತ; ವೀರಣ್ಣ ರಾಜೂರ, 'ಕನ್ನಡ ಸಾಂಗತ್ಯ ಸಾಹಿತ್ಯ', ಬೆಂಗಳೂರು, ೧೯೮೫, ಪು. ೪೩೭-೪೩೮, ಇವುಗಳಿಂದ ಸಂಗ್ರಹಿಸಲಾಗಿದೆ.

೮೨. ಆರ್. ನರಸಿಂಹಾಚಾರ್ಯ, 'ಕರ್ಣಾಟಕ ಕವಿಚರಿತೆ' ಸಂ. ೩, ಕಸಾಪ. ಬೆಂಗಳೂರು, ದ್ವಿ. ಮು. ೧೯೭೪, ಪು. ೫೫.

೮೩. ಹಂಪನಾ (ಸಂ.), ಬೊಮ್ಮಣನ ನಾಗಕುಮಾರ ಷಟ್ಪದಿ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೭ ಪು. ೧೧೪.

೮೪. ಅದೇ, ಪು. ೧೧೦.

೮೫. ಅದೇ, ಪು. ೧೧೧.

೮೬. ಮ. ರಾ. ಹೊಳಲಕೆರೆ ನಗರದ ಚಂದ್ರಪ್ಪನವರ ಬ್ರಹ್ಮಯ್ಯನವರಿಂದ ಪರಿಶೋಧಿಸಿ ಮಂಡ್ಯದ ಸನಾತನ ಧರ್ಮಪ್ರಚಾರಕ ಮುದ್ರಾಲಯದಲ್ಲಿ ಎಂ. ಎಸ್. ಧರಣೇಂದ್ರಯ್ಯನವರಿಂದ ಮುದ್ರಿಸಲ್ಪಟ್ಟಿತು.
ಹಂಪನಾ, ಬೊಮ್ಮಣ ಕವಿ ನಾಗಕುಮಾರ ಷಟ್ಪದಿ, ಪು. ೧೧೫ (ಈ ಮುದ್ರಿತ ಕೃತಿ ನನಗೆ ಲಭ್ಯವಾಗದ ಕಾರಣ, ಹಸ್ತಪ್ರತಿಯನ್ನು ಆಧರಿಸಿ ಅಧ್ಯಯನ ಮಾಡಲಾಗಿದೆ.)

೮೭. ವಿ. ಜಿ. ನಾಯಕ, ಲೇಖನ, ಯಕ್ಷಗಾನ ಸಾಹಿತ್ಯ ಮತ್ತು ಛಂದಸ್ಸು—'ಯಕ್ಷಗಾನ—ಎಂಟು ಉಪನ್ಯಾಸಗಳು' ಧಾರವಾಡ, ೧೯೮೫, ಪು. ೨೫.

೮೮. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ, ಸಂ. ೬, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ಪು. ೫೨೬.

೮೯. ಆರ್. ನರಸಿಂಹಾಚಾರ್ಯ, ಪೂರ್ವೋಕ್ತ, ಪು. ೩೧.

೯೦. ಕನ್ನಡ ಹಸ್ತಪ್ರತಿಗಳ ಮೈಕ್ರೋಫಿಲಂ ಸೂಚಿ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೮೮, ಪು. ೨೫.

೯೧. ಅದೇ.

೯೨. ಅದೇ.

೯೩. ಆರ್. ನರಸಿಂಹಾಚಾರ್ಯ, ಪೂರ್ವೋಕ್ತ, ಪು. ೧೬೩.

೯೪. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ, ಸಂ. ೬, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ಪು. ೧೬.

೯೫. ಅದೇ.

೯೬. ಅದೇ.

## ಅಧ್ಯಾಯ ೬

# ಕನ್ನಡ ಆದಿತೀರ್ಥಂಕರ ಚರಿತೆಗಳು : ತೌಲನಿಕ ಅಧ್ಯಯನ

ಕನ್ನಡ ಆದಿತೀರ್ಥಂಕರ ಚರಿತೆಗಳಲ್ಲಿ ಅಗ್ರಮಾನ್ಯವಾಗಿ ನಿಲ್ಲುವ ಕೃತಿಯಾದ ಪಂಪನ 'ಆದಿಪುರಾಣ' ಹಾಗೂ ಉತ್ತರಕಾಲೀನ ಕವಿಗಳಾದ ಚಾಮುಂಡರಾಯ, ಹಸ್ತಿಮಲ್ಲ, ನಾಗರಾಜ, ಶಾಂತಿಕೀರ್ತಿ ಮತ್ತು ಬೊಮ್ಮಣ್ಣ ಕವಿಗಳು ನಿರೂಪಿಸಿರುವ ಆದಿ ತೀರ್ಥಂಕರನ ಚರಿತೆಗಳನ್ನು ಈ ಅಧ್ಯಾಯದಲ್ಲಿ ಪರಿಶೀಲಿಸಲಾಗಿದೆ. ಕಥಾಹರವನ್ನು ಭವಾವಳಿಗಳು, ಪಂಚಕಲ್ಯಾಣಗಳು ಮತ್ತು ಭರತ-ಬಾಹುಬಲಿಗಳ ಚರಿತ್ರೆ ಎಂಬ ಮೂರು ವಿಭಾಗಗಳಲ್ಲಿ ವಿಂಗಡಿಸಿ ಆಯಾ ಕಥಾಭಾಗಗಳನ್ನು ತೌಲನಿಕವಾಗಿ ಅಧ್ಯಯನ ಮಾಡ ಲಾಗಿದೆ. ಪಂಪನ 'ಆದಿಪುರಾಣ'ಕ್ಕೆ ಜಿನಸೇನರ 'ಪೂರ್ವಪುರಾಣ' ಮುಖ್ಯವಾದ ಆಕರ ವಾದುದರಿಂದ ಜಿನಸೇನ-ಪಂಪರ 'ಆದಿನಾಥ ಚರಿತೆ'ಗಳನ್ನು ಮೊದಲಿಗೆ ತೌಲನಿಕವಾಗಿ ಪರಿಶೀಲಿಸಿ ಅನಂತರ ಉತ್ತರಕಾಲೀನ ಕಾವ್ಯಗಳನ್ನು ಆಯಾ ಕಥಾಘಟ್ಟಗಳ ಹಿನ್ನೆಲೆಯಲ್ಲಿ ಪರಿಶೀಲಿಸಲಾಗಿದೆ. ಈ ತೌಲನಿಕ ಅಧ್ಯಯನದಲ್ಲಿ ಆಯಾ ಕಾವ್ಯಗಳಲ್ಲಿ ಕಂಡುಬರುವ ಸಾಮ್ಯ-ವೈಷಮ್ಯ, ಪೂರ್ವಕವಿಗಳ ಪ್ರಭಾವ, ಸ್ವೋಪಜ್ಞತೆ ಇತ್ಯಾದಿ ವಿಚಾರಗಳನ್ನು ಗಮನಿಸಲಾಗಿದೆ.

## ಭಾಗ ೧ : ಭವಾವಳಿಗಳು

ತೀರ್ಥಂಕರ ಚರಿತ್ರೆಗಳು ಮುಖ್ಯವಾಗಿ ಭವಾವಳಿಗಳ ಮತ್ತು ಪಂಚಕಲ್ಯಾಣಗಳ ವಿವರಗಳನ್ನು ತಮ್ಮ ಕಥಾಸಂವಿಧಾನದಲ್ಲಿ ಒಳಗೊಂಡಿರುತ್ತವೆ. ಒಬ್ಬ ತೀರ್ಥಂಕರನ ಚರಿತ್ರೆಯನ್ನು ಪರಿಶೀಲಿಸುವುದೆಂದರೆ, ಆತನು ಚರಮದೇಹಿಯಾಗಿದ್ದ ಕೊನೆಯ ಭವದ ಪಂಚಕಲ್ಯಾಣಗಳನ್ನೊಳಗೊಂಡ ಪುಣ್ಯಕಥೆ ಮಾತ್ರವಲ್ಲ; ಆತನ ಹಿಂದಿನ ಭವರಾಶಿಗಳ ಬೆನ್ನು ಹತ್ತುವುದೂ ಆಗಿದೆ. ಈ ಎರಡು ರೂಪಗಳು ಎಲ್ಲ ತೀರ್ಥಂಕರ ಪುರಾಣಗಳಲ್ಲಿ ಸಿದ್ಧರೂಪವಾಗಿ ಕಂಡುಬಂದರೂ, ಭವಾವಳಿಗಳ ಕಥೆಗಳು ಸಿದ್ಧರೂಪದ ಏಕತಾನತೆಯ ಅಪವಾದವನ್ನು ನೀಗಿ, ಆದಷ್ಟೂ ಕಾವ್ಯವನ್ನು ವೈವಿಧ್ಯಮಯಗೊಳಿಸುವ, ರೋಚಕ ಗೊಳಿಸುವ ಭಾಗವಾಗಿ ಪರಿಣಮಿಸುತ್ತವೆ. ಪಂಚಕಲ್ಯಾಣಗಳ ವಿವರದಲ್ಲಿಯಂತೂ ಅದು ಒಂದೇ ಪಡಿಯಚ್ಚಾಗಿ ಬರುವುದು ಅನಿವಾರ್ಯ. ಅಲ್ಲಿ ಕವಿಯ ಪ್ರತಿಭಾಪ್ರದರ್ಶನಕ್ಕೆ ಅವಕಾಶ ಕಡಿಮೆ. ಇಲ್ಲಿ ಪುರಾಣದ ಚೌಕಟ್ಟನ್ನು ಮೀರಿ, ಮತ್ತಿನ್ನಾವ ಕಲ್ಪನೆಯನ್ನೊ ಮಾಡಿಕೊಂಡು ಪ್ರತಿಭೆಯ ಗರಿಗೆದರಲು ಅವಕಾಶವಿಲ್ಲ. ಜೈನಪುರಾಣಗಳಲ್ಲಿ ಸ್ವಾತಂತ್ರ್ಯ ವಹಿಸಿ ತನ್ನ ಕವಿತಾಸಾಮರ್ಥ್ಯವನ್ನು ಮೆರೆಯಲು ಕವಿಗೆ ಇರುವ ಹೆಚ್ಚಿನ ಅವಕಾಶವೆಂದರೆ ಭವಾವಳಿಯೊಂದೇ.

ಜೈನಪುರಾಣಗಳಲ್ಲಿ ಕಂಡುಬರುವ ಭವಾವಳಿ ವಿವರಗಳು ಆಯಾ ಜೀವಿಯ ಆತ್ಮ ವಿಕಾಸದ ಹಂತಗಳಾಗಿ ಕಂಡುಬರುತ್ತವೆ. ಒಂದು ಜೀವ ತನ್ನ ಸತ್ಕರ್ಮ ದುಷ್ಕರ್ಮಗಳಿ ಗನುಸಾರವಾಗಿ ಸದ್ಗತಿ ದುರ್ಗತಿಗಳನ್ನು ಪಡೆಯುತ್ತದೆ. ಧರ್ಮದಲ್ಲಿ ವಿಶ್ವಾಸವುಳ್ಳ

ಪದವನ್ನು ಮುಟ್ಟಿದರೆ ಆ ಜೀವ ಭವ್ಯನಾಗಿ ಕಾಲಲಬ್ಧಿಯನ್ನು ಪಡೆಯಲು ಯೋಗ್ಯನಾಗುತ್ತಾನೆ. ಜೀವಿಯು ಅನಾದಿಕಾಲದಿಂದ ಸುತ್ತಿಸುಳಿದು ಬಂದಿರುತ್ತಾನಾದರೂ ಪುರಾಣಗಳು ಗಣನೆಗೆ ತೆಗೆದುಕೊಂಡು ವರ್ಣಿಸುವ ಭವಗಳು ಮಾತ್ರ ಕಾಲಲಬ್ಧಿಯು ದೊರೆತ ನಂತರದ್ದು. ಅದನ್ನು ದೊರಕಿಸಿಕೊಂಡ ಜೀವಿಯು ಮುಂದೆ ತನ್ನ ಆತ್ಮವಿಕಾಸವನ್ನು ಪಡೆಯುತ್ತಾ, ಕೊನೆಗೆ ಈ ಸಂಸ್ಕೃತಿಯ ಕೋಟಲೆಯಿಂದ ಸಂಪೂರ್ಣವಾಗಿ ಕಳಚಿಕೊಂಡು ಭವ್ಯಾತ್ಮಸ್ವರೂಪನೇ ತಾನಾಗುತ್ತಾನೆ.

ಇಲ್ಲಿ ಯಾವ ಭವ-ಭಾವಗಳ ಅವಸ್ಥಾಂತರವೂ ಇಲ್ಲ, ಭ್ರಮಣೆಯಿಲ್ಲ, ಭ್ರಮೆಯಿಲ್ಲ. ಅನಂತ ಜ್ಞಾನ-ದರ್ಶನ-ವೀರ್ಯ-ಸುಖಗಳ ಅಧಿಪತಿಯಾಗಿ ಲೋಕಾಗ್ರದಲ್ಲಿ ಮೆರೆಯುತ್ತಾನೆ.

ವೃಷಭನು ಬೇರೆ ಬೇರೆ ಜನ್ಮಗಳನ್ನೆತ್ತಿ, ಹೆಚ್ಚು ಹೆಚ್ಚು ಆತ್ಮ ಪರಿಪಾಕವನ್ನು ಹೊಂದಿದ ಕಥೆಯನ್ನಷ್ಟೇ ಅಲ್ಲದೆ, ಅದರೊಂದಿಗೆ ಸಂಬಂಧಗೊಂಡು ಬರುವ ಜೀವಿಗಳೂ ಸಹ ಸಹವಾಸ ಪುಣ್ಯಫಲವೆಂಬಂತೆ ಪರಿಪಕ್ವಗೊಳ್ಳುತ್ತ, ಜೊತೆಜೊತೆಯಲ್ಲಿಯೇ ಭವಾಂತರಗಳಲ್ಲಿ ಪಯಣಬೆಳಸುವ ರೀತಿ ಅತ್ಯಂತ ರೋಚಕವಾಗಿರುತ್ತದೆ ; ಅಚ್ಚರಿಯದಾಗಿರುತ್ತದೆ. ನಾಟಕದ ದೃಶ್ಯಗಳಂತೆ ಈ ಜನ್ಮಗಳು ಒಂದನ್ನೊಂದು ಹಿಂಬಾಲಿಸುತ್ತವೆ.

ಒಂದು ಜೀವ ಆದಿನಾಥನ ಭವಾಂತರಗಳಲ್ಲಿ ಹೆಂಡತಿಯಾಗಿ, ಮಗನಾಗಿ, ಗೆಳೆಯನಾಗಿ, ಸಹದೇವಚರನಾಗಿ, ದಾನಪ್ರವರ್ತಕನಾಗಿ ಬೆಸೆದು ಬಂದರೆ, ಮತ್ತೊಂದು ಜೀವ ಮಂತ್ರಿಯಾಗಿ, ಸಹದೇವಚರನಾಗಿ, ಮಗನಾಗಿ ಬೆಂಬತ್ತಿ ಬರುತ್ತದೆ. ಮಗದೊಂದು ಕಡೆ ತಿರ್ಯಗ್ಜೀವಗಳು ದಾನಾನುಮೋದದ ಪುಣ್ಯಫಲದಿಂದ ಸಹದೇವಚರರಾಗಿ ಮಕ್ಕಳಾಗಿ ಆ ನಾಯಕ ಜೀವವನ್ನು ಅನುಸರಿಸುತ್ತವೆ. ಹೀಗೆ ಹತ್ತು ಹಲವು ಭವಾವಳಿಯ ಮುಖಗಳನ್ನು ನಾವು ಕಾಣುತ್ತೇವೆ. ಸಂಬಂಧಗಳು ಮಾರ್ಕೊಳ್ಳುವ ರೀತಿ ವಿಚಿತ್ರವೆನಿಸುವುದರ ಜೊತೆಗೆ, ಜೀವನದ ವೈಚಿತ್ರ್ಯವನ್ನೂ ಜಟಿಲತೆಯನ್ನೂ ಸೂಚಿಸುತ್ತ ಹೋಗುತ್ತದೆ. ಪರಿಣಾಮ ವಿಶುದ್ಧವಾಗಿದ್ದರೆ ಸಂಬಂಧವೂ ಸಹ ದ್ವೇಷರಹಿತವಾಗಿ ಸ್ನೇಹತತ್ಪರತೆಯಿಂದ ಕೂಡಿರುವುದಕ್ಕೆ ಇಲ್ಲಿ ಬರುವ ಭವಸಂಬಂಧಾವಳಿಗಳು ಒಳ್ಳೆಯ ಉದಾಹರಣೆಗಳಾಗಿವೆ. " 'ಆದಿಪುರಾಣ'ವು ಒಂದು ವ್ಯಕ್ತಿಯ ಒಂದು ಜನ್ಮದ ಕಥೆಯಲ್ಲ. ಅದರಲ್ಲಿ ಅನೇಕ ಭವ ಇಲ್ಲವೆ ಜನ್ಮಗಳ ಮುಸಿಯಲ್ಲಿ ಅನುಭವದ ಕುದಿಗೊಂಡು, ಭೋಗದಿಂದ ತ್ಯಾಗಕ್ಕೆ ತೆರಳಿ, ಕೊನೆಯ ಜನ್ಮದಲ್ಲಿ ವೈರಾಗ್ಯವುಂಟಾಗಿ ತಪಸ್ಸಿನಿಂದ ಮುಕ್ತಿಯನ್ನು ಪಡೆದ ಆದಿದೇವನ ಮತ್ತು ಇತರ ವ್ಯಕ್ತಿಗಳ ಕಥೆ ಬರುತ್ತದೆ. ಆದಿನಾಥನ ಮೊದಲಿನ ಹತ್ತು ಜನ್ಮಗಳ ಕಥೆಯಲ್ಲಿ ಅದ್ಭುತರಮ್ಯ ಅಥವಾ ಸಾಂಪ್ರದಾಯಿಕ ಕಥೆ ಮಾತ್ರ ಇಲ್ಲ. ಪರಿಪೂರ್ಣತೆಗಾಗಿ ಜನ್ಮದಿಂದ ಜನ್ಮಕ್ಕೆ ವಿಕಾಸಗೊಳ್ಳುತ್ತ ನಡೆದಿರುವ ಜೀವನ ಜನ್ಮಯಾತ್ರೆಯ ಪ್ರತೀಕವಿದೆ."[೧] ಆದಿನಾಥನ ಭವಗಳಲ್ಲಿ ಎಲ್ಲಿಯೂ ಇಳಿಮುಖವೆಂಬುದಿಲ್ಲ ಎಂಬ ವಿಚಾರವನ್ನು ಈ ಮಾತುಗಳು ಪುಷ್ಟೀಕರಿಸುತ್ತವೆ.

## ಜಯವರ್ಮ ಭವ

ಪುರಾಣಗಳಲ್ಲಿ ವರ್ಣಿತವಾಗಿರುವ ಆದಿತೀರ್ಥಂಕರನಿಗೆ ಕಾಲಲಬ್ಧಿ ದೊರೆತ ಮೊದಲ

ನೆಯ ಭವ ಮಹಾಬಲ ಭವವಾದರೂ, ಅದಕ್ಕಿಂತ ಹಿಂದೆ ಬರುವ ಭವ ಜಯವರ್ಮಭವ. ಇನ್ನೂ ಕಾಲಲಬ್ಧಿ ದೊರೆಯದಿದ್ದ ಈ ಭವವನ್ನು, ಮಹಾಬಲನ ಭವನಿರೂಪಣೆಯಲ್ಲಿ ಪ್ರಾಸಂಗಿಕವಾಗಿ ಅಡಕಗೊಳಿಸಿ ವರ್ಣಿಸಲಾಗಿದೆ.

ಮಹಾಬಲನಾಗುವ ಮುನ್ನ ಯಾವ ಭವದಲ್ಲಿ ಭೋಗಗಳ ಇಚ್ಛೆಯಿಂದ ಒಡಗೂಡಿದ ಧರ್ಮವೆಂಬ ಬೀಜವನ್ನು ಬಿತ್ತಿದ್ದನೋ ಆ ಭವವೇ ಜಯವರ್ಮ ಭವ. "ಈ ಕಥೆ ತೊಡಗುವಾಗ್ಗೇ ಉನ್ನತ ಪದವಿಯಲ್ಲಿದ್ದ ಒಬ್ಬ ಮನುಷ್ಯನು ಅನಾಸ್ತಿಕತೆಯ ಮತ್ತು ಅಚ್ಚ ಪಾಶವ ಪ್ರೀತಿ ಪಕ್ಷಪಾತಗಳ ಆಸಕ್ತಿಗಳ ಸ್ಥಿತಿಯಿಂದ ಧರ್ಮಮಾರ್ಗಕ್ಕೆ ಓಲುವ ಸೂಚನೆಯಿದೆ." ³

ರಾಜ ಶ್ರೀಷೇಣನು, ಹಿರಿಯನಾದ ಜಯವರ್ಮನನ್ನು ನಿರ್ಲಕ್ಷಿಸಿ ಕಿರಿಯಮಗ ಶ್ರೀವರ್ಮನಿಗೆ ರಾಜ್ಯವನ್ನು ಕೊಡುವುದು, ಇದರಿಂದ ಜಯವರ್ಮನು ವೈರಾಗ್ಯಪರನಾಗುವುದು, ದೀಕ್ಷಾಕಾಲದಲ್ಲಿ ಹಾವು ಕಚ್ಚಿದ ಸಮಯದಲ್ಲಿ ಆಕಾಶಮಾರ್ಗದಲ್ಲಿ ಹೋಗುತ್ತಿದ್ದ ವಿದ್ಯಾಧರ ದಂಪತಿಗಳನ್ನು ಕಂಡು ನಿದಾನವನ್ನು ಕೈಗೊಂಡು ಸಾಯುವುದು ಈ ಭವದ ಕಥಾಚೌಕಟ್ಟು.

## ಆದಿಪುರಾಣ-ಪೂರ್ವಪುರಾಣ

ಗಂಧಿಲದೇಶದ ಸುರಪುರಾಧೀಶ್ವರ ಶ್ರೀಷೇಣ. ಆತನ ಹೆಂಡತಿ ಸೌಂದರಿಯು "ಸೌಂದರಿಯರ ಗಾಡಿಗಳೊಳಗೊಂದೊಂದನೆ ನೆರಪಿ ಮಾಡಿದಂ ಬಿದಿಯೆನೆ" ಎಂಬ ಮಾತಿಗೆ ಅನ್ವರ್ಥಳಾಗಿದ್ದಳು. ಇವರಿಗೆ ಜಯವರ್ಮ ಶ್ರೀವರ್ಮ ಎಂಬ ಇಬ್ಬರು ಮಕ್ಕಳು. ಅವರಲ್ಲಿ, "ಕಿರಿಯಾತನೆ ನೃಪತಿಗಂ ಪರಿವಾರಕ್ಕಮಣುಗನಾಗಿ ಬಳೆಯೆ" ಶ್ರೀಷೇಣನು ಹಲವು ಕಾಲ ಅರಸುಗೆಯ್ದನು. "ಒಮ್ಮೆಯೆ ಮುಪ್ಪುಕುತ್ತದೊಳೊಡಂಬಟ್ಟೊತ್ತೆ ಮತ್ತಲ್ಲಿ ಮೆಳ್ಪಡದಾರ್ತಣ್ಮೆ" ತಪಸ್ಸಿಗೆ ಹೋಗುವ ಸಮಯದಲ್ಲಿ, ತನ್ನ ಅಗ್ರಪುತ್ರ ಜಯವರ್ಮನಿದ್ದರೂ "ಅವಂ ಮುಟ್ಟಲ್ಲನೆಂದೊಳ್ಪೊಡಂಬಡುವನ್ನಂ" ಕಿರಿಯಾತ ಶ್ರೀವರ್ಮನನ್ನೇ ರಾಜ್ಯದಲ್ಲಿ ಇರಿಸಿದನು. ಈ ಸಂದರ್ಭದಲ್ಲಿ 'ಆದಿಪುರಾಣ'ದಲ್ಲಿ ಬರುವ ಜಯವರ್ಮನ ಮನದೊಳಗಾದ ಬೇಗುದಿಯ ಚಿತ್ರಣವು ಸಹಜತೆಯಿಂದ ಮೈಗೂಡಿ ಬಂದಿದೆ. ಇಂತಹ ಸ್ಥಿತಿಯಲ್ಲಿ ಸಾಮಾನ್ಯ ಮಾನವನಲ್ಲಿ ಉದಿಸಬಹುದಾದ ಭಾವನೆಗಳನ್ನು ಕವಿ ಇಲ್ಲಿ ಸೆರೆಹಿಡಿದಿರುವ ರೀತಿ ಗಮನಾರ್ಹ. ತನ್ನ ಸ್ಥಿತಿ ಹೀಗಾಗಲು 'ಅವಮಾನಪವಮಾನಾವಧೂತನಾದ' ಜಯವರ್ಮನು—

ಪ್ರಭು ಕಿಱಿಯಾತನಂ ನಿಱಿಸಿ ರಾಜ್ಯದೊಳೆನ್ನನವಸ್ತುಮಾಡಿ ಪೂ
ಣ್ದಭಿಭವಮೀಗಳೀಭವದೊಳಿಂತಿದು ನೀಗದು ರಾಜ್ಯಲಕ್ಷ್ಮಿಗ
ನ್ಯ ಭವದೊಳಪ್ಪೊಡಂ ನೆಱೆಯೆ ನೋಂಪೆನೆನುತ್ತೆ ಜಗನ್ನುತ ಸ್ವಯಂ
ಪ್ರಭಗುರುಪಾದಮೂಲದೊಳೆ ಕೊಂಡನಖಂಡಿತ ಜೈನದೀಕ್ಷೆಯಂ (II-೩೯)

ಪ್ರಭು, ಕಿರಿಯಾತನನ್ನು ರಾಜ್ಯದಲ್ಲಿರಿಸಿ ತನ್ನನ್ನು 'ಅವಸ್ತು'ವನ್ನಾಗಿ ಮಾಡಿದ ಅವಮಾನವು ಈ ಭವದಲ್ಲಿ ತೀರದು; ರಾಜ್ಯಲಕ್ಷ್ಮಿಯನ್ನು ಅನ್ಯಭವದಲ್ಲಿಯಾದರೂ ಪಡೆಯಲು ನೋಂಪಿಯನ್ನು ಕೈಗೊಳ್ಳುವೆನು ಎಂದು ಜಗತ್‌ಶ್ರೇಷ್ಠರಾದ ಸ್ವಯಂಪ್ರಭ

ಗುರುಪಾದ ಸನ್ನಿಧಿಯಲ್ಲಿ ಅಖಂಡಿತವಾದ ಜಿನದೀಕ್ಷೆಯನ್ನು ಕೈಗೊಂಡನು.

ಹೀಗೆ ದೀಕ್ಷಿತನಾಗಿ, ತಾನು ಹರಿದು ಕಿತ್ತೆಸೆದ ಕುಂತಳಗಳನ್ನು ತನ್ನ ಬೊಗಸೆಯಲ್ಲಿ ತುಂಬಿಕೊಂಡು 'ತುಂಬಿಯ ಬಂಬಲ್ಗಳಂ ಕೆಂದಾವರೆಯರಲ್ಗಳೊಳ್ ಪುದಿದುಯ್ವಂತೆ' ಒಯ್ದು ಹುತ್ತದಲ್ಲಿ ಮರೆಮಾಡಿ ಹಾಕಲೆಂದು ಕೈಗಳನ್ನು ಒಳಗೆ ಚಾಚಿದಾಗ, 'ಭೋಂಕ ನೊಗೆತರ್ಪ' ಮಹೋರಗವು ಬಂದು ಹಲ್ಲುಗಳನ್ನೂರಿ ಕಿಡಿಕಾರುತ್ತ ರಕ್ತ ಸುರಿಯುವಂತೆ ಕಚ್ಚಿತು (ಆತನ ಸುಕುಮಾರತ್ವವನ್ನು ಸೂಚಿಸಲು ಕವಿ ಆತನ ಕರಗಳನ್ನು ಕೆಂದಾವರೆ ಅರಲಿಗೆ ಹೋಲಿಸಿರುವುದನ್ನು ಗಮನಿಸಬೇಕು. ಬಹುಶಃ ಇಂತಹ ಸುಕುಮಾರನಿಗೆ ರಾಜ್ಯಭಾರ ನೀಗದೆಂಬ ಅಂತರಾರ್ಥವನ್ನು ಹುದುಗಿಸಿರುವಂತೆ ಕಂಡುಬರುತ್ತದೆ). ದೀಕ್ಷೆ ಯನ್ನು ಕೈಗೊಂಡು, ಈ ಉಪಸರ್ಗವನ್ನು ಸಹಿಸಿಕೊಂಡು ತನ್ನ ಸಮಾಧಿಯಿಂದ ಮುಕ್ತಿ ಸುಖವನ್ನು ಹಾರೈಸಿ ಮುಡಿಪಬಹುದಾಗಿದ್ದ ಸನ್ನಿವೇಶವದು. ಆದರೆ ಹಾಗಾಗಲಿಲ್ಲ. ಅದೇ ಸಮಯದಲ್ಲಿ—

ಎಸೆವ ವಿಮಾನಘಂಟೆಗಳ ಮೆಲ್ಲುಲಿ ಕಿನ್ನರಗೇಯದೊಳ್ ಪೊದ
ಟ್ದೆಸೆಯೆ ವಿಚಿತ್ರಪಾತ್ರಪರಿನರ್ತ್ತನಮುಣ್ಮುವ ತೂರ್ಯ್ಯನಾದದೊಳ್
ಪೊಸಯಿಸೆ ಸೋಂಕಿನೊಳ್ ನಲಿವ ನಲ್ಲಳಲಂಪನೊಡರ್ಚ್ಚೆ ಲೀಲೆ ಕ
ಣ್ಗಸದಳಮಾಗೆ ಪಾಱುವಮಹೀಧರನೆಂಬ ವಿಯಚ್ಚರೇಂದ್ರನಂ (II- ೪೧)

ಭೋಂಕನೆ ಕಂಡು—

ವಿಮಾನ ಘಂಟೆಗಳ ಮೆಲ್ಲುಲಿ ಕಿನ್ನರಗೀತೆಗಳಲ್ಲಿ ಬೆರೆತು ಶೋಭಿಸುತ್ತಿತ್ತು. ವಿಚಿತ್ರ ಪಾತ್ರಪರಿವರ್ತನವು ಹೊಮ್ಮುತ್ತಿದ್ದ ತೂರ್ಯ ಗಾನದಲ್ಲಿ ಹೊಸತನವನ್ನು ತಂದಿತು. ತನ್ನ ವಿದ್ಯಾಧರ ಪ್ರಿಯತಮನ ಒತ್ತಿನಲ್ಲಿ ಕುಳಿತು ಸೋಂಕಿನಿಂದಲೇ ನಲಿಯುವ ನಲ್ಲೆಯ ಲಲ್ಲೆಯು ಸಂತೋಷವನ್ನುಂಟುಮಾಡುತ್ತಿತ್ತು. ಅಸದಳವಾದ ವಿದ್ಯಾಧರನ ಲೀಲೆಯು ಕಣ್ಣಿಗೆ ಅಸದೃಶವಾಗಿತ್ತು.

ಆ ವೈಭವವನ್ನು ನೋಡಿ ಆ ವಿದ್ಯಾವಿಲಾಸಕ್ಕೆ ಬೆರಗಾಗಿ "ಎನ್ನತಪಂಬಟ್ಟ ಫಲಮುಂ ಟಕ್ಕುಮಪ್ಪೊಡೆ ವಿದ್ಯಾಧರನಪ್ಪೆನ್" ಎಂದು ಅಲ್ಲಿಯೆ ಕಣ್ಣು ಪಳಂಚುವಂತೆ, ಮನವು ಕೀಲಿಸುವಂತೆ, ನೆಚ್ಚುಮೆಚ್ಚಿ ಸೋತುಹೋಗಿ ಸಾಯುವ ಸಮಯದಲ್ಲಿ ವೈಭವಾಕಾಂಕ್ಷೆಯ ನಿದಾನವನ್ನು ಕೈಗೊಂಡನು. ಜಯವರ್ಮನು ತಾನಾಗಿಯೇ ಮೋಕ್ಷಸುಖದ ಸಿರಿಯನ್ನು ಕೈಜಾರಿಸಿಕೊಂಡನಲ್ಲ ಎಂದು ಪರಿತಪಿಸಿದವನಂತೆ ಕವಿ ಈ ಮಾತುಗಳನ್ನು ಹೇಳಿಸಿದ್ದಾನೆ: "ಅವಿವೇಕದಿಂದ ತಪೋವಲ್ಲಿಯೊಳಪ್ಪನಲ್ಪ ಸುಖಮೆಲ್ಲಮನ್ ಅಲ್ಪಸುಖಕ್ಕೆ ಮಾಱಿ ಬಂದಿಲ್ಲಿ ನಿದಾನಂದಿಂದತಿಬಳಂಗೆ ಮಹಾಬಳನಾಗಿ ಪುಟ್ಟಿದಂ" (II-೪೨).

ಪಂಪಕವಿಯು ಪೂರ್ವಪುರಾಣವನ್ನೇ ಅನುಸರಿಸಿದ್ದರೂ, ಅಲ್ಲಿ ಗೋಚರಿಸದ ವರ್ಣನಾವೈಖರಿಯ ಸೊಬಗು; ಔಚಿತ್ಯಪೂರ್ಣವಾಗಿ ಸನ್ನಿವೇಶಗಳನ್ನು ಸೂಕ್ಷ್ಮಸಂವೇದನೆ ಯಿಂದ ನಿರೂಪಿಸುವ ವಿಧಾನಗಳು ಮನಸೆಳೆಯುವಂತಿವೆ. ಮೂಲದಲ್ಲಿರುವ ಮುಖ್ಯಾಂಶಗಳಿಗೆ ಮತ್ತಷ್ಟು ಮೆರುಗನ್ನು ನೀಡಿದ್ದಾನೆ.

ಶ್ರೀಷೇಣನ ಪತ್ನಿಯ ರೂಪಾತಿಶಯವನ್ನು ವರ್ಣಿಸುವಲ್ಲಿ ಪಂಪನ ವರ್ಣನೆ ಶೋಭಿ ಸಿದೆ. ಪೂರ್ವಪುರಾಣದಲ್ಲಿ ಈ ವರ್ಣನಾಂಶವು ಬರುವುದಿಲ್ಲ. ತಂದೆಯಾದ ಶ್ರೀಷೇಣನು

ಹಿರಿಯಾತನನ್ನು ಬಿಟ್ಟು ಕಿರಿಯವನಿಗೆ ಪಟ್ಟಕಟ್ಟಲು ಕಾರಣವೇನು? ಈ ಸಂದರ್ಭದಲ್ಲಿ ಪೂರ್ವಪುರಾಣದಲ್ಲಿ ಮತ್ತು ಇತರ ಆದಿತೀರ್ಥಂಕರ ಕನ್ನಡ ಕಾವ್ಯಗಳಲ್ಲಿ ಬರುವ ವಿವರ ಕೇವಲ ತೇಲಿಸಿ ಹೇಳುವ ಕಾರಣವಾಗಿ ಕಂಡುಬರುತ್ತದೆಯೇ ಹೊರತು, ಬಲವಾದ ಕಾರಣವಾಗಿ ಕಂಡುಬರುವುದಿಲ್ಲ. ಪೂರ್ವಪುರಾಣದಲ್ಲಿ ತಂದೆಯು ಹಿರಿಯವನನ್ನು ಬಿಟ್ಟು ಕಿರಿಯ ಮಗನಿಗೆ ಪಟ್ಟ ಕಟ್ಟಲು ಕೊಡುವ ಕಾರಣವು ಕ್ಷಮಾರ್ಹವೆಂಬಂತೆ ಕಂಡುಬರುವುದಿಲ್ಲ. ಶ್ರೀವರ್ಮನು ಜನರಿಗೂ ತಂದೆತಾಯಿಗಳಿಗೂ ಅತ್ಯಂತ ಪ್ರೀತಿಪಾತ್ರನಾಗಿದ್ದನು. ಕಿರಿಯ ಮಗನಲ್ಲಿ ಪ್ರಜೆಗಳಿಗಿರುವ ಅನುರಾಗವನ್ನು, ಉತ್ಸಾಹವನ್ನು ನೋಡಿ, ಹಿರಿಯ ಮಗನನ್ನು ತಿರಸ್ಕರಿಸಿ ಚಿಕ್ಕ ಮಗನಾದ ಶ್ರೀವರ್ಮನಿಗೆ ಪಟ್ಟವನ್ನು ಕಟ್ಟಿದರು (ಪೂರ್ವಪುರಾಣ V-೨೦೬, ೨೦೭).

ಪಂಪ ಕೊಡುವ ಕಾರಣ ಈ ಮೇಲಿನ ಕಾರಣಗಳಿಗಿಂತ ಹೆಚ್ಚು ಸಮಂಜಸವಾಗಿ ತೋರುತ್ತದೆ. ಪೂರ್ವಪುರಾಣದಲ್ಲಿ ಬರುವ ಕಾರಣಗಳು ಲೋಕರೂಢಿಗೆ ಒಪ್ಪಿತವಾಗದ ಮಾತುಗಳು. ಪಂಪನು ಅದಕ್ಕೆ ಸರಿಯಾದ ಮಾರ್ಗವನ್ನು ಕಂಡುಕೊಂಡವನಂತೆ ಸೂಕ್ಷ್ಮತೆಯಿಂದ ಈ ಸನ್ನಿವೇಶವನ್ನು ನಿಭಾಯಿಸಿದ್ದಾನೆ. ತಂದೆ ಹಿರಿಯವನನ್ನು ಕಡೆಗಣಿಸಲು ಕಾರಣ ಆತನು ಅಸಮರ್ಥನೆಂಬುದು ನಿಜ. ಆದರೆ ಅದಕ್ಕಿಂತ ಹೆಚ್ಚಾಗಿ ಮುಪ್ಪು ಅವರಿಸಿ ತಂದೆಗೆ ರೋಗವು ಬಂದು ಒಕ್ಕರಿಸಿತು. ಶ್ರೀಷೇಣನು ಭ್ರಾಂತನೂ ಆರ್ತನೂ ಆದನು. ಆತನು 'ಮೆಳ್ಪಡೆದು' 'ಆರ್ತು' ಇರುವ ಸಮಯದಲ್ಲಿ ಮಾಡಿದ ಕೆಲಸವಿದು. ಶ್ರೀಷೇಣನು ಹಾಗೆ ಮಾಡಲು ಆತನಿಗೆ ಆ ಸಮಯದಲ್ಲಿದ್ದ ಮಾನಸಿಕ ಅಸ್ವಸ್ಥತೆಯೂ ಕಾರಣವೆಂದು ಸೂಚ್ಯವಾಗಿ ಹೇಳಿದ್ದಾನೆ. ಇದು ಪಂಪನ ಔಚಿತ್ಯಪ್ರಜ್ಞೆಗೆ ಸೂಕ್ಷ್ಮತೆಗೆ ಸಾಕ್ಷಿ.

ಪೂರ್ವಪುರಾಣದಲ್ಲಿ ತಮ್ಮನಿಗೆ ಪಟ್ಟ ಕಟ್ಟಿದಾಗ ಜಯವರ್ಮನು ತನ್ನ ಪಾಪಕರ್ಮಕ್ಕೆ ತಾನೇ ನಿಂದಿಸಿಕೊಂಡು, ವೈರಾಗ್ಯಪರನಾಗಿ ದೀಕ್ಷಿತನಾಗುವ ವಿವರ ಬರುತ್ತದೆಯೇ ಹೊರತು, ತಂದೆಯನ್ನು ನಿಂದಿಸುವ ವಿವರ ಬರುವುದಿಲ್ಲ. ಮುಂದಿನ ಜನ್ಮದಲ್ಲಾದರೂ ರಾಜ್ಯವನ್ನು ಪಡೆಯುವೆನೆಂದು ಛಲತೊಡುವುದಿಲ್ಲ. ಆದರೆ, ಪಂಪನು ಈ ಸಂದರ್ಭದಲ್ಲಿ ಮಾನವನಿಗೆ ಒದಗಿಬರುವ ಸಹಜ ಭಾವನೆಗಳನ್ನು ಮನಮುಟ್ಟುವಂತೆ ಚಿತ್ರಿಸಿದ್ದಾನೆ. ಆದಿಪುರಾಣದಲ್ಲಿ ಕಂಡುಬರುವ ಜಯವರ್ಮನಿಗಿಂತ, ಪೂರ್ವಪುರಾಣದಲ್ಲಿ ಕಂಡು ಬರುವ ಜಯವರ್ಮನು ಸಾಧುವಾಗಿ ತೋರುತ್ತಾನೆ. ಇಲ್ಲಿ ಆತನ ಅಸಮರ್ಥತೆಯ ವಿಚಾರವಾಗಲಿ, ತಂದೆಯ ಕಾರ್ಯವನ್ನು ನಿಂದಿಸುವ ತಿರಸ್ಕಾರದ ಭಾವವಾಗಲಿ ಇಲ್ಲ.

ಪೂರ್ವಪುರಾಣದಲ್ಲಿ ಕೂದಲಿನ ರಾಶಿಯನ್ನು ಹುತ್ತದೊಳಗಿಡುವ ಪ್ರಸಂಗವು ಬರುವುದಿಲ್ಲ. ದೀಕ್ಷಿತನಾದ ಸಂದರ್ಭದಲ್ಲಿ, ಹಾವು ಕಚ್ಚುತ್ತದೆ. ಆ ಸಂದರ್ಭದಲ್ಲಿ ವಿದ್ಯಾಧರನ ವೈಭವವನ್ನು ನೋಡಿ ತನಗೂ ಅಂತಹ ವೈಭವ ಉಂಟಾಗಲಿ ಎಂದು ನಿದಾನವನ್ನು ಕೈಗೊಳ್ಳುತ್ತಾನೆ. ಇಲ್ಲಿ ಪಂಪನು ಕೊಡುವ ವಿದ್ಯಾಧರನ ವೈಭವದ ಚಿತ್ರಣವು ಇಲ್ಲ. ಪೂರ್ವಪುರಾಣದಲ್ಲಿ ನಿರೂಪಣಾಮಾತ್ರವಾಗಿ ಕಂಡುಬರುವ ಈ ಪ್ರಸಂಗ ಪಂಪನ ಆದಿಪುರಾಣದಲ್ಲಿ ಹೊಸ ಕಳೆಯಿಂದ ಮೈದುಂಬಿ ನಿಂತಿದೆ.

## ಉತ್ತರಕಾಲೀನ ಕಾವ್ಯಗಳು

**ಚಾವುಂಡರಾಯ ಪುರಾಣ :** ಚಾಮುಂಡರಾಯನು ಇಲ್ಲಿ ಪೂರ್ವಪುರಾಣ ಮತ್ತು ಆದಿಪುರಾಣಗಳ ಆಶಯವನ್ನು ಸಂಗ್ರಹವಾಗಿ ನಿರೂಪಿಸುವ ಕೌಶಲವನ್ನು ತೋರಿದ್ದಾನೆ. ಕಾವ್ಯಸೌಂದರ್ಯವು ಇಲ್ಲಿ ತೋರದಿದ್ದರೂ, ಕಥೆಯ ಮುಖ್ಯಾಂಶನಿರೂಪಣೆಯ ಗದ್ಯಾಂಶದಲ್ಲಿ ಕಂಡುಬರುವ ಗಾಂಭೀರ್ಯವೇ ಈ ಕಾವ್ಯಭಾಗದ ಹೆಚ್ಚಳಿಕೆ.

"ಕಿಱಿಯಾತನೆ ಪರಿವಾರಕ್ಕಮರಸಂಗಮಣುಗನಾಗಿ ಬಳೆಯೆ ಶ್ರೀಷೇಣಂ ಪಿರಿಯ ಮಗಂ ಯೋಗ್ಯನಲ್ಲೆಂದು" ಕಿರಿಯ ಮಗನಿಗೆ ರಾಜ್ಯವನ್ನು ಕೊಟ್ಟು ತಪಸ್ಸಿಗೆ ತೆರಳಿದನು. ಇಲ್ಲಿ ಶ್ರೀಷೇಣನು ಮುಪ್ಪಿನಿಂದ ಭ್ರಾಂತನಾದ ವಿಚಾರವು ಬಂದಿಲ್ಲ. ಪೂರ್ವಪುರಾಣದಲ್ಲಿ ಬರುವಂತೆ, ಶ್ರೀವರ್ಮನು, ಪ್ರಜೆಗಳಿಗೆ ತಂದೆತಾಯಿಗಳಿಗೆ ಅನುರಾಗವನ್ನುಂಟು ಮಾಡುವವನಾಗಿದ್ದನು ಎಂಬ ವಿಚಾರದ ಜೊತೆಗೆ ಆದಿಪುರಾಣದಲ್ಲಿ ಬರುವ ಆತನ ಅಸಾಮರ್ಥ್ಯದ ಬಗೆಗೂ ಉಲ್ಲೇಖವನ್ನು ನೀಡಲಾಗಿದೆ. ಮುಂದೆ ಪಂಪನನ್ನೇ ಅನುಸರಿಸಿ, ಜಯವರ್ಮನ ಮನದ ಅಳಲನ್ನು ಸುಂದರವಾಗಿ ಚಿತ್ರಿಸಿದ್ದಾನೆ : "ಕ್ರಮಕ್ಕೆ ಪುಟ್ಟಿದ ನಿರ್ದಂತೆನ್ನ ತಮ್ಮಂಗೆ ರಾಜ್ಯಮಂ ಕೊಟ್ಟನೀ ಭವದೊಳ್ ಪಡೆಯದೊಡಮನ್ಯಭವದೊಳಪ್ಪೊಡಂ ರಾಜ್ಯಮಂ ಪಡೆವೆನ್" ಎಂದು ದೀಕ್ಷಿತನಾದನು. ಅನಂತರ ಹುತ್ತದೊಳಗೆ ಕುಂತಳಗಳನ್ನು ಹಾಕುವಾಗ ಹಾವು ಕಚ್ಚಿ ಸಾಯುವ ಸಂದರ್ಭದಲ್ಲಿ ವಿದ್ಯಾಧರನ ವೈಭವವನ್ನು ನೋಡಿ ನಿದಾನವನ್ನು ಕೈಗೊಂಡು ಸತ್ತನು—ಎಂಬ ನಿರೂಪಣೆ ಆದಿಪುರಾಣಕ್ಕೆ ಸಮನಾಗಿದೆ.

ಚಾವುಂಡರಾಯಪುರಾಣವು ಕಥಾಚೌಕಟ್ಟಿನ ಸಂಕ್ಷಿಪ್ತತೆಯ ದೃಷ್ಟಿಯಿಂದ ತನ್ನ ಉತ್ತರಕಾಲೀನವಾದ ಕೆಲವು ಕಾವ್ಯಗಳಿಗೆ ಮಾದರಿಯಾಗಿ ನಿಂತಿರುವುದನ್ನು ಮುಂದೆ ಗಮನಿಸಬಹುದಾಗಿದೆ.

**ಹಸ್ತಿಮಲ್ಲನ ಪೂರ್ವಪುರಾಣ :** ಹಸ್ತಿಮಲ್ಲನ ಪೂರ್ವಪುರಾಣವು ಈ ಪ್ರಸಂಗದಲ್ಲಿ ಮುಖ್ಯವಾಗಿ ಪಂಪ ಚಾಮುಂಡರಾಯರ ಜಾಡನ್ನು ಹಿಡಿದಿದೆ. ಪೂರ್ವಪುರಾಣದ ಪ್ರಭಾವವೂ ಕಂಡುಬರುತ್ತದೆ. ಚಾಮುಂಡರಾಯನು ಹನ್ನೆರಡು ಸಾಲುಗಳಲ್ಲಿ ಈ ಪ್ರಸಂಗವನ್ನು ವರ್ಣಿಸಿದ್ದರೆ ಹಸ್ತಿಮಲ್ಲನು ಎಂಟು ಸಾಲುಗಳಲ್ಲಿ ಇನ್ನೂ ಅಡಕಗೊಳಿಸಿ ಹೇಳಿದ್ದಾನೆ. ಇಲ್ಲಿ ಶ್ರೀಷೇಣನು ಜಯವರ್ಮನಿಗೆ ರಾಜ್ಯವನ್ನು ಕೊಡದೆ ಇರಲು ಕಾರಣ ಆತನು 'ಸಮರ್ಥನಲ್ಲ'ಎಂಬುದು ಮಾತ್ರ. ತನ್ನ ಪೂರ್ವಕಾಲೀನ ಕಾವ್ಯಗಳಲ್ಲಿರುವಂತೆ, ಕಿರಿಯನಾದ ಶ್ರೀವರ್ಮನು ಪುರಜನರಿಗೆ, ತಂದೆತಾಯಿಗಳಿಗೆ ಪ್ರಿಯನಾಗಿದ್ದನೆಂಬ ಕಾರಣದಿಂದ ತಂದೆಯು ಕಿರಿಯನಿಗೇ ರಾಜ್ಯವನ್ನು ನೀಡಿದನೆಂಬ ಅಂಶವು ಅಷ್ಟೊಂದು ಸಮಂಜಸವಲ್ಲವೆಂದು ತಿಳಿದು ಹಸ್ತಿಮಲ್ಲನು ಅದನ್ನು ಕೈಬಿಟ್ಟಿರಬಹುದು. ತಂದೆಯ ಬಗೆಗೆ ಈತ ಅಸಮಾಧಾನದ ಮಾತುಗಳನ್ನು ಆಡುವುದಿಲ್ಲವೆಂಬಲ್ಲಿ ಪೂರ್ವಪುರಾಣದ ಅನುಸರಣೆ ಇದೆ. ಸಾಯುವ ಸಮಯದಲ್ಲಿ ನಿದಾನವನ್ನು ಕೈಗೊಂಡ ರೀತಿಯನ್ನು ಪಂಪನು, "ಅವಿವೇಕದಿಂದ ತಪೋವಲ್ಲಿಯೊಳಪ್ಪನಲ್ಪ ಸುಖಮೆಲ್ಲಮನಲ್ಪಸುಖಕ್ಕೆ ಮಾಱಿ" ಎಂದು ಹೇಳಿದ್ದರೆ, ಹಸ್ತಿಮಲ್ಲನು ಇನ್ನೂ ಪರಿಣಾಮಕಾರಿಯಾಗಿ "ಸ್ವರ್ಗಾ

ಪವರ್ಗ ಕಾರಣಮಪ್ಪ ತಪೋರತ್ನಮಮಂ ನರಭೋಗಮೆಂಬ ತೌಡಿಂಗೆ ಮಾರಿ" ಎಂಬ ದೃಷ್ಟಾಂತವನ್ನು ಕೊಟ್ಟಿದ್ದಾನೆ.

**ಪುಣ್ಯಾಸ್ರವದ ಆದೀಶ್ವರರ ಕಥೆ** : ನಾಗರಾಜ ಕವಿಯು ಹೇಳುವ ಮುಖ್ಯಾಂಶಗಳನ್ನು ಕಾವ್ಯ ಶೈಲಿಯಲ್ಲಿ ಚೊಕ್ಕವಾಗಿ ಹೇಳಿ ಮುಗಿಸಿದ್ದಾನೆ.

ಶ್ರೀಷೇಣನು ತನಗೆ ವೈರಾಗ್ಯವುಂಟಾಗಲು, ಜಯವರ್ಮನು 'ಬುದ್ಧಿಹೀನ'ನಾದುದರಿಂದ ವಿದ್ಯಾಧರಶ್ರೀಯನ್ನು ಕಿರಿಯಮಗನಾದ ಶ್ರೀವರ್ಮನಿಗೆ ಕೊಟ್ಟನು. ಇದೇ ಜಯವರ್ಮನ ನಿರ್ವೇಗಕ್ಕೆ ಕಾರಣವಾಯಿತು. ದೀಕ್ಷೆಯನ್ನು ಕೈಗೊಂಡು ಲೋಚಮಾಡಿದ ಕುಂತಳಗಳನ್ನು ಹುತ್ತದಲ್ಲಿಡುವ ಸಮಯದಲ್ಲಿ ವಿಷಾಹಿಯೊಂದು ಆತನನ್ನು ಕಡಿಯಲು ವಿಷವು ಆವರಿಸಿತು. ಜಯವರ್ಮನು "ಪಸುರೇಜೆದಪೊನ್ನ ಕರುವಿನಿರವಂ ಪೋಲ್ತಂ". ಕವಿ ವಿಷವೇರಿದ ಜಯವರ್ಮನ ಅಸಹಾಯ ಸ್ಥಿತಿಯನ್ನು ಕರುವಿಗೆ ಹೋಲಿಸಿ ಸುಂದರವಾಗಿ ಚಿತ್ರಿಸಿದ್ದಾನೆ. ಹಾವು ಕಡಿದಾಗ ಜಯವರ್ಮನ ಸ್ಥಿತಿಯನ್ನು ಕಣ್ಣಿಗೆ ಕಟ್ಟುವಂತೆ ಹೋಲಿಕೆಯ ಮುಖಾಂತರ ಚಿತ್ರಿಸಿರುವವನು ಈತನೊಬ್ಬನೇ. ವಿಷವಾವರಿಸಿದ ಆ ಸಮಯದಲ್ಲಿ ಮಹೀಧರನೆಂಬ ವಿದ್ಯಾಧರನು "ಕನಕ ಕಿಂಕಿಣೀಸ್ವನ ಭರಿತ ದಿಗಂತರಾಳಂ ಮಣಿಮಯ ವಿಮಾನಾರೂಢಂ ಗಗನ ಪಥದೊಳ್ ಪೋಪುದಂ" ಜಯವರ್ಮನು ಕಂಡು ಕಂಠಗತ ಪ್ರಾಣನಾಗುತ್ತ "ಈ ತಪದ ಫಲದಿಂದೀ ವಿಯಚ್ಚರೇಂದ್ರನಪ್ಪೆನ್" ಎಂದು ನಿದಾನವನ್ನು ಕೈಗೊಂಡನು.

ಚಾವುಂಡರಾಯಪುರಾಣ, ಹಸ್ತಿಮಲ್ಲನ ಪೂರ್ವ ಪುರಾಣಗಳಿಗಿಂತ ಸ್ವಲ್ಪ ಹೆಚ್ಚಿನ ವಿವರಗಳನ್ನು ಒಳಗೊಂಡು ಪಂಪನ ಜಾಡನ್ನು ಹಿಡಿದಂತೆ ಈ ಸಂದರ್ಭವು ಕಂಡುಬರುತ್ತದೆ. ಆದರೆ ಆದಿಪುರಾಣದ ವೈಭವೋಪೇತ ವರ್ಣನೆ ಇಲ್ಲಿಲ್ಲ. ಸಂಕ್ಷಿಪ್ತ ಸರಳ ಕಾವ್ಯಶೈಲಿಯೇ ಇಲ್ಲಿಯ ವೈಶಿಷ್ಟ್ಯ.

**ಪುರುದೇವ ಚರಿತ** : ಶಾಂತಿಕೀರ್ತಿಯು ಆರು ಸಾಂಗತ್ಯಗಳಲ್ಲಿ (I-೭೫-೮೦) ಈ ಸಂದರ್ಭವನ್ನು ನಿರೂಪಣಾ ಮಾತ್ರವಾಗಿ, ಸಂಕ್ಷಿಪ್ತವಾಗಿ ಚಿತ್ರಿಸಿದ್ದಾನೆ. ಜಯವರ್ಮ ಶ್ರೀವರ್ಮರಲ್ಲಿ "ಶ್ರೀವರ್ಮನು ಅನುವಾಗಿ ಬೆಳೆಯೆ" ಮನುಜೇಶ ಪದವಿಯನ್ನು ಹಿರಿಯನಾದ ಜಯವರ್ಮನಿಗೆ ಕೊಡದೆ, ಶ್ರೀವರ್ಮನಿಗೆ ಕೊಟ್ಟನು. ಈ ಮಾನವಂತ ಈಗ ಪದವಿ ತನಗೆ ದೊರಕದೆ ಅಪಮಾನವಾಯಿತೆಂದು ಬಗೆದು, ವೈರಾಗ್ಯವನ್ನು ಪಡೆದು ಮುಂದಿನ ಜನ್ಮದಲ್ಲಾದರೂ ರಾಜ್ಯಪದವಿಯನ್ನು ಪಡೆಯುವೆನೆಂಬ ಛಲದಿಂದ ದೀಕ್ಷಿತನಾದನು. ಕೂದಲನ್ನು ಹುತ್ತದಲ್ಲಿ ಹಾಕಲು ಹೋದಾಗ ಹುತ್ತದಲ್ಲಿಯ ಹಾವು ಬಂದು ಕಚ್ಚಿತು. ಆ ಸಮಯದಲ್ಲಿ ಮಹೀಧರ ವಿದ್ಯಾಧರನ ವಿಭೂತಿಯನ್ನು ಕಂಡು 'ಈ ತಪದಿಂದ ಖಚರಪದವಕ್ಕೆಂದು ಆ ತಪೋಧನ ನಿದಾನಿಸಿದ' (I-೮೦).

ಆದಿಪುರಾಣ, ಚಾವುಂಡರಾಯಪುರಾಣ, ಹಸ್ತಿಮಲ್ಲನ ಪೂರ್ವಪುರಾಣಗಳಲ್ಲಿ ಬರುವ ಅಸಾಮರ್ಥ್ಯದ ವಿಚಾರ ಇಲ್ಲಿ ಬರುವುದಿಲ್ಲ. ಆದರೆ ತಂದೆಯನ್ನು ಕುರಿತು ಅಸಮಾಧಾನದ ಮಾತುಗಳನ್ನು ಹೇಳಿಕೊಂಡಿದ್ದಾನೆ. ಈ ಭಾಗದಲ್ಲಿ ಕವಿ ಚಾವುಂಡರಾಯ ಪುರಾಣಕ್ಕೆ ಹೆಚ್ಚು ಋಣಿಯಾದಂತೆ ಕಂಡುಬರುತ್ತದೆ. ಉದಾಹರಣೆಗೆ,

ತಾನು ದೀಕ್ಷೆಯನಾಂತನಿತ್ತಲಾ ಜಯವರ್ಮ| ನಾನಿರ್ದಂತೆನ್ನ ತಮ್ಮನಿಗೆ
ಮಾನವಪದವಿತ್ತನೆಂದು ತನಗಾದ| ಮಾನಭಂಗದ ವೈರಾಗ್ಯದೊಳು ||
ಇಂದಿನ ಜನ್ಮಕಿಲ್ಲದೊಡೇನು ರಾಜ್ಯವ | ಮುಂದೆ ಪಡೆಯಲಾರ್ಪೆನೆಂದು
ಬಂದು ಸ್ವಯಂಪ್ರಭ ಗುರುಗಳ ಸಾರಿಯಾ | ನಂದದಿಂ ದೀಕ್ಷೆಯನಾಂತು ||

(ಪುರುದೇವಚರಿತೆ I-೭೭, ೭೮)

ಶ್ರೀಷೇಣಂ...ತಪಕ್ಕೆ ಪೋದನಿತ್ತ ಜಯವರ್ಮಂ ಕ್ರಮಕ್ಕೆ ಪುಟ್ಟಿದನಿರ್ದಂತೆನ್ನ ತಮ್ಮಂಗೆ ರಾಜ್ಯಮಂ ಕೊಟ್ಟನೀಭವದೊಳ್ ಪಡೆಯದೊಡಮನ್ಯಭವದೊಳಪ್ಪೊಡಂ ರಾಜ್ಯಮಂ ಪಡೆವೆನೆಂದು ಸ್ವಯಂಪ್ರಭಗುರುಗಳ ಸಾರೆ ದೀಕ್ಷೆಯಂ ಕೊಂಡು (ಚಾವುಂಡರಾಯಪುರಾಣ, ಪುಟ ೨೧).

**ಆದಿಪರಮೇಶ್ವರನ ಯಕ್ಷಗಾನ** : ಬೊಮ್ಮಣ್ಣ ಕವಿಯ ಆದಿಪರಮೇಶ್ವರನ ಯಕ್ಷಗಾನದಲ್ಲಿ ಈ ಭಾಗವು ಹಿತಮಿತವಾದ ವರ್ಣನಾವಿಧಾನದಲ್ಲಿ ಆಕರ್ಷಣೀಯವಾಗಿ ಬಂದಿದೆ.

'ಪಿರಿಯನಂದನಗಿಂತ ವಿಕ್ರಮಿ ಕಿರಿಯ ಸುತ ಶ್ರೀವರ್ಮ' ಎನ್ನುತ್ತ ದೊರೆಯು ಆತನಿಗೇ ಪಟ್ಟವನ್ನು ಕಟ್ಟಿ ದೀಕ್ಷೆಗೆ ತೆರಳುತ್ತಾನೆ. ಇಲ್ಲಿ ಶ್ರೀವರ್ಮನ ಬಗೆಗೆ ವಿಶೇಷವಾದ ಪ್ರೀತಿಯಿತ್ತೆಂಬ ಮಾತನ್ನು ಹೇಳಿಲ್ಲ. ಕವಿ ಜಯವರ್ಮನಿಗೆ ರಾಜ್ಯ ದೊರೆಯದಿದ್ದ ಕಾರಣವನ್ನು ಕೊಡುವಾಗ ಹಸ್ತಿಮಲ್ಲನಂತೆ ಜಾಣತನವನ್ನು ಮೆರೆದಿದ್ದಾನೆ. ಜಯವರ್ಮನ ಸ್ಥಿತಿ ಚಿಂತಾಜನಕವಾಗುತ್ತದೆ.

ಅರಸುತಾ ಶ್ರೀಷೇಣ ತನ್ನಯ ಕಿರಿಯಸುತಗಿಳೆಯಿತ್ತು ದೀಕ್ಷೆಗೆ
ತೆರಳಿದನು ನೋಡೆಂದು ಜಯವರ್ಮನಿರದೆ ಪೇಳಿ
ಹಿರಿಯ ನಾನಿರ್ದಂತೆ ಕಿರಿಯಗೆ ಅರಸು ಪಟ್ಟವ ಕಟ್ಟಿ ತೆರಳಿದ
ಧರೆಯೊಳಿರವೆಂತೆನಗೆ? ದೀಕ್ಷೆಯೆ ಪರಮಸುಖವು (ಪರಿಚ್ಛೇದ-I )

ಎಂದು ಬಗೆದನು. ಈ ಸಂದರ್ಭದಲ್ಲಿ ಆದಿಪುರಾಣ, ಚಾವುಂಡರಾಯಪುರಾಣಗಳ ಅನುಕರಣೆ ಇದೆ.

ಅಪಮಾನಿತನಾದ ಜಯವರ್ಮ ಧರೆಯಲ್ಲಿ ಇನ್ನು ತನಗೆ ಇರವು ಎಂತು? ಎಂದು ಪರಿತಪಿಸುವ ಭಾಗ ಸಹಜವಾಗಿ ಬಂದಿದೆ. ಅಪಮಾನಗೊಂಡ ಜಯವರ್ಮ 'ಪಿರಿದು ತಪದ ಮಹಾತ್ಮೆ'ಯಿಂದಾದರೂ ಧರೆಯನ್ನು ಆಳುವೆನೆಂದು ದೀಕ್ಷೆಯ ಕೈಗೊಂಡನು. ಸಾಯುವ ಸಮಯದಲ್ಲಿ ನಿದಾನವನ್ನು ಕೈಗೊಂಡು, "ಸ್ವರ್ಗಾಪವರ್ಗಮಂ ಪಡೆವ ತಪೋರತ್ನಮಂ ನರಭೋಗವೆಂ(ಬ) ತಾಂ (ತೌ)ಡಿಂಗೆ ಮಾರಿ"ದಂತೆ ಮುಡುಪಿ ಮಹಾಬಲನಾಗಿ ಹುಟ್ಟಿದನು.

ಇಲ್ಲಿ ಬರುವ ಹೋಲಿಕೆಯನ್ನು ಕವಿ ಹಸ್ತಿಮಲ್ಲನ ಪೂರ್ವಪುರಾಣದಿಂದ ತೆಗೆದುಕೊಂಡಂತೆ ತೋರುತ್ತದೆ.

ಕವಿಯ ಸರಳ ಶೈಲಿಯ ಕಾವ್ಯಪ್ರತಿಭೆಗೆ ಈ ಭಾಗವು ಉದಾಹರಣೆಯಾಗಿದೆ. ಕಥೆಯನ್ನು ವರದಿಯನ್ನಾಗಿ ಒಪ್ಪಿಸದೆ, ಕಾವ್ಯಸೌಂದರ್ಯದ ಮೆರುಗನ್ನು ನೀಡಿದ್ದಾನೆ.

ಜಯವರ್ಮ ಭವವನ್ನು ಚಿತ್ರಿಸುವಲ್ಲಿ, ಕವಿಗಳು ಜಯವರ್ಮನು ಭೋಗಕ್ಕೆ ನೋಂತ

ವಿಚಾರವನ್ನು ಚಿತ್ರಿಸಿರುವರಲ್ಲದೆ, ಕಿರಿಯಾತನಿಗೆ ರಾಜ್ಯವನ್ನು ನೀಡಿ, ತಂದೆ ಆತನನ್ನು ಕಡೆಗಣಿಸಿದಾಗ ಜಯವರ್ಮನಲ್ಲುಂಟಾದ ಮಾನಸಿಕ ಸಂವೇದನೆಯನ್ನು ಸಹ ಪರಿಗಣಿಸಿದ್ದಾರೆ. ಒಂದೆಡೆ ನಿದಾನ ಶಲ್ಯದಿಂದುಂಟಾಗುವ ಕರ್ಮವಿಪಾಕದ ಜೈನ ಸಿದ್ಧಾಂತದ ರೀತಿ, ಮತ್ತೊಂದೆಡೆ ಲೌಕಿಕ ಹಂತದಲ್ಲಿಯ ವ್ಯಾವಹಾರಿಕ ತುಮುಲ-ಒಳತೋಟಗಳನ್ನು ಮೇಲಿನ ಕಾವ್ಯಗಳಲ್ಲಿ ಚಿತ್ರಿಸಲಾಗಿದೆ.

ಜೈನ ಪರಿಭಾಷೆಯ ಪ್ರಕಾರ ಶಲ್ಯವೆಂದರೆ 'ಇಂಥಾ ವ್ರತದಿಂದ ಇಂಥಾ ಫಲವೇ ಬರಬೇಕೆಂಬ ಇಚ್ಛೆ' ಧರ್ಮಧಾರಣೆ ಮಾಡುವುದಕ್ಕಾಗಿ ವ್ರತಪಾಲನೆಗೆ ಹೊರಟಾಗ ಮುಳ್ಳಿನಂತೆ ದುಃಖವನ್ನು ಕೊಡುವ ಭಾವಗಳು ಇವು. ಮಾಯಾ ಶಲ್ಯ, ಮಿಥ್ಯಾಶಲ್ಯ ಮತ್ತು ನಿದಾನ ಶಲ್ಯವೆಂದು ಇದರಲ್ಲಿ ಮೂರು ವಿಧಗಳಿವೆ. ಜಯವರ್ಮನು ಭೋಗಾರ್ಥ ನಿದಾನವನ್ನು ಕೈಗೊಂಡ ಸಂದರ್ಭ, ವ್ರತದಿಂದ ಗಳಿಸಿಕೊಳ್ಳಬಹುದಾಗಿದ್ದ ಆಧ್ಯಾತ್ಮಿಕತೆಯ ನಿಶ್ಚಲ ನೆಲೆಯನ್ನು ಗುರುತಿಸಿಕೊಳ್ಳದೆ, ಲೌಕಿಕತೆಯ ನಶ್ವರ ಫಲಕ್ಕಾಗಿ ನೋಂತ ಬಗೆ, ತನ್ಮೂಲಕ ಮಂದಿನ ಭವಕ್ಕೆ ಬೀಜಪ್ರಾಯವಾಗುವ ನಡವಳಿಕೆಯನ್ನು ತೋರಿದ ರೀತಿ, ಅದಕ್ಕಾಗಿ ಕವಿಗಳ ಪ್ರತಿಕ್ರಿಯಾರೂಪದ ಮರುಕದ ಉದ್ಗಾರ, ಇವೆಲ್ಲವೂ ಈ ಭವ ನಿರೂಪಣೆಯಲ್ಲಿ ನಾವು ಮುಖ್ಯವಾಗಿ ಪರಿಗಣಿಸಬಹುದಾದ ಅಂಶಗಳಾಗುತ್ತವೆ.

## ಮಹಾಬಲ ಭವ

ವೃಷಭತೀರ್ಥಂಕರನಿಗೆ ಕಾಲಲಬ್ಧಿಯು ದೊರೆತ ಹಿಂದಿನ ಭವಗಳ ಮೊದಲನೆಯ ಭವವೇ ಮಹಾಬಲ ಭವ. ಆದಿತೀರ್ಥಂಕರನಾಗುವ ಆತ್ಮ ತನ್ನ ಕರ್ಮದ ಕಾಳಿಮೆಯನ್ನು ಕಳೆದುಕೊಳ್ಳುತ್ತ ಶುದ್ಧಾತ್ಮ ಸ್ವರೂಪದ ಪ್ರಕಾಶವನ್ನು ಪಡೆಯಲು ಇಟ್ಟ ಮೊದಲ ಹೆಜ್ಜೆಯನ್ನು ಈ ಭವದಲ್ಲಿ ಗುರುತಿಸಬಹುದು. ಭವಾವಳಿಗಳ ದೃಷ್ಟಿಯಿಂದ ಮಹಾಬಲನ ಭವ ಎರಡನೆಯ ಭವವಾದರೂ, ಕಾಲಲಬ್ಧಿಯು ದೊರಕೊಂಡ ಭವದ ದೃಷ್ಟಿಯಿಂದ ಇದೇ ಆದಿತೀರ್ಥಂಕರನ ಮೊದಲನೆಯ ಭವ. ಜಯವರ್ಮ ಭವದಲ್ಲಿ ಕೈತಪ್ಪಿದ ಕಾಲಲಬ್ಧಿಯು ಈ ಭವದಲ್ಲಿ ದಕ್ಕುತ್ತದೆ. ಜಯವರ್ಮನ ಭವದಿಂದ ಆದಿ ತೀರ್ಥಂಕರನ ಚರಿತ್ರೆಯನ್ನು ಪ್ರಾರಂಭಿಸದೆ, ಮಹಾಬಲಭವದಿಂದ ಕಥೆಯನ್ನು ಪ್ರಾರಂಭಿಸಿರುವುದರ ಔಚಿತ್ಯ ಈ ಕಾರಣದಿಂದಾಗಿಯೇ ಎಂದು ತೋರುತ್ತದೆ.

ಈ ಭವದಲ್ಲಿ ಪೂರ್ವಪೀಠಿಕಾರೂಪವಾಗಿ, ಲೋಕಾಕಾರ-ದೇಶ ಪಟ್ಟಣಗಳ ವರ್ಣನೆಯು ಬರುತ್ತದೆ. ಪೂರ್ವಪುರಾಣದಲ್ಲಿ ಮನುಕುಲದ ವರ್ಣನೆ ಈ ಭಾಗದಲ್ಲಿಯೇ ಬರುತ್ತದೆ. ಆದಿಪುರಾಣದಲ್ಲಿ ಈ ವಿವರಣೆಗಳನ್ನು ವೃಷಭನ ಜನನದ ಪೂರ್ವಭಾವಿ ಪ್ರಕರಣದಲ್ಲಿ ವರ್ಣಿಸಲಾಗಿದೆ.

ಮಹಾಬಲನ ತಂದೆ ಅತಿಬಳ ವಿದ್ಯಾಧರನ ವರ್ಣನೆ, ಮಹಾಬಲನ ಜನನ, ರೂಪಾತಿಶಯ ವರ್ಣನೆ, ಅತಿಬಳನ ವೈರಾಗ್ಯ, ಮಹಾಬಲನ ರಾಜ್ಯಕ್ರಮ, ಜೀವಾಜೀವ ಸಿದ್ಧಾಂತ ಖಂಡನಮಂಡನಗಳು, ಅರವಿಂದ, ದಂಡಕ, ಸಹಸ್ರಬಲ, ಶತಬಲ ವಿದ್ಯಾಧರರಾಜರ ದೃಷ್ಟಾಂತ, ಜಯವರ್ಮಭವದ ನಿರೂಪಣೆ, ಮಹಾಬಲನ ವೈರಾಗ್ಯ, ಸಮಾಧಿಮರಣ—ಈ ಮುಖ್ಯಾಂಶಗಳು ಈ ಭವನಿರೂಪಣೆಯಲ್ಲಿ ಬರುತ್ತವೆ.

## ಮಹಾಬಲನ ಜನನ-ಯುವರಾಜ ಪದವಿ

**ಆದಿಪುರಾಣ-ಪೂರ್ವಪುರಾಣ :** ವಿದೇಹಕ್ಷೇತ್ರದಲ್ಲಿಯ ಗಂಧಿಳ ವಿಷಯದಲ್ಲಿರುವ ಅಳಕಾಪುರವೆಂಬ ಪಟ್ಟಣದ ವರ್ಣನೆಯಿಂದ ಕಥೆಯು ಪ್ರಾರಂಭಗೊಳ್ಳುತ್ತದೆ. ಕಥಾನಾಯಕ ಆದಿತೀರ್ಥಂಕರನ ಕಾಲಲಬ್ಧಿ ದೊರೆತ ಜನ್ಮಭೂಮಿ ಇದೇ. ಅದರ ಹಿರಿಮೆ ಸಾಮಾನ್ಯವಾದುದಲ್ಲ. ಉಪಮಾತೀತವಾದ ಸೀತೋದಾನದಿಯ ಕೃಪೆಯಿಂದ ವನರಾಶಿ ನಳನಳಿಸುತ್ತಿತ್ತು. ಪಂಪನು ಈ ಭಾಗದಲ್ಲಿ ಪ್ರಕೃತಿ ಚಿತ್ರಣವನ್ನು ಮೈಮರೆತು ನೀಡಿದ್ದಾನೆ.

ನನೆಯನೆ ಪೇಱೆ ಕೆಂದಳಿರೊಳೆಯ್ದೆ ಬೞಲ್ದೆಳಮಾವು ಬಂದ ಮಾ
ವನೆ ಮಱೆಗೊಂಡು ಬಗ್ಗಿಸುವ ಕೋಗಿಲೆ ಕೋಗಿಲೆಯಿರ್ಕೆ ದಾಣದೊಳ್
ಜಿನುಗುವ ತುಂಬಿ ತುಂಬಿಯೊಳರಲ್ದಲರೆಂಬಿವಱಿಂ ಬಸಂತರಾ
ಜನ ಮನೆಯಂತೆ ಕಣ್ಗೆಸೆದು ತೋಱುಗುಮಲ್ಲಿಯ ನಂದನಾಳಿಗಳ್ ( I-೬೫)

ಕೆಂದಳಿರುಗಳಲ್ಲಿರುವ ಮೊಗ್ಗುಗಳ ಭಾರದಿಂದ ಬಹಳವಾಗಿ ಬಳಲಿದ ಎಳೆಮಾವು, ಫಲಿಸಿದ ಮಾವುಗಳ ಮರೆಯಲ್ಲಿ ಕೂಗುತ್ತಿರುವ ಕೋಗಿಲೆ, ಕೋಗಿಲೆಗಳಿರುವೆಡೆಯಲ್ಲಿ ಗುನುಗುಟ್ಟುವ ದುಂಬಿ, ದುಂಬಿಗಳಿರುವೆಡೆಯಲ್ಲಿ ಅರಳಿನಿಂತಿರುವ ಹೂವುಗಳು—ಇವುಗಳಿಂದ ಉದ್ಯಾನಗಳು ವಸಂತರಾಜನ ಮನೆಯಂತೆ ಕಂಗೊಳಿಸುತ್ತಿದ್ದವು.

ಹೊಸಮೊಗ್ಗು, ಹೂವಿನ ಬಿಳುಪು, ಎಳೆಚಿಗುರಿನ ಕೆಂಪು, ದುಂಬಿಗಳಿಂದಾಗಿ ಶೋಭಿಸುವ ಕಪ್ಪು—ಇವು ಬಣ್ಣಗೊಟ್ಟಂತೆ ಶೋಭಿಸುತ್ತಿದ್ದವು. "ಬಸಂತದೊಳ್ ಬಸದಿಯ ಬಾಗಿಲಂ ತೆಱೆದ ಮಾಳ್ಕೆಯೊಳಿರ್ದುವು ಬಂದ ಮಾವುಗಳ್"— ಈ ರೀತಿಯಾಗಿ ಪಂಪನು ಈ ಭಾಗದಲ್ಲಿ ಪ್ರಕೃತಿಯ ಪ್ರೇಮಿಯಾಗಿ, ಗಿಡ, ಬಳ್ಳಿ, ಮರ, ಚಿಗುರು, ಮೊಗ್ಗು, ಹೂಗಳಾದಿಯಾಗಿ ಸುಂದರ ಚಿತ್ರವನ್ನು ಕೊಟ್ಟಿದ್ದಾನೆ. ಇಂತಹ ಸುಂದರ ಪ್ರಕೃತಿಯ ಮಡಿಲಿನಲ್ಲಿ, ಕೋಟೆ-ಕೊತ್ತಳ, ಅರಮನೆ ಮೊದಲಾದ ವೈಭವೋಪೇತ ವಿಳಾಸದಲ್ಲಿದ್ದ ಅಳಕಾಪುರವನ್ನು ಅತಿಬಳನೆಂಬ ರಾಜನು ಆಳುತ್ತಿದ್ದನು. ವಿದ್ಯಾಧರಕುಲಕ್ಕೆ ಮಂದಾರ ವೃಕ್ಷದಂತಿದ್ದ ಅತಿಬಲರಾಜನ ಪತ್ನಿ, ಖೇಚರಾಮರ ಕಾಂತೆಯರೆಲ್ಲರ ಶೋಭೆಯನ್ನು ಮೀರಿಸುವ ಮನೋಹರಿ. ಇವರಿಗೆ ಮಹಾಬಲನು ಮಗನಾಗಿ ಹುಟ್ಟಿದನು. ಬಾಲ್ಯದಲ್ಲಿಯೇ, ಸಕಲ ಕಲೆ, ವಿಜ್ಞಾನ, ಶಸ್ತ್ರ, ಶಾಸ್ತ್ರಗಳಲ್ಲಿ ಪರಿಣತನಾದನು. ಮನಮೋಹಿಸುವ ರೂಪಲಾವಣ್ಯ. ಯೌವನಕ್ಕೆ ಕಾಲಿರಿಸಿದಾಗ ಮಹಾಬಲನು ಯುವರಾಜಪದವಿಯನ್ನು ಹೊಂದಿದನು.

ಪಂಪನಲ್ಲಿ ಹದವರಿತು ಕ್ರೋಡೀಕೃತಗೊಂಡು ಬಂದಿರುವ ಈ ಭಾಗ ಪೂರ್ವಪುರಾಣದಲ್ಲಿ ಸುದೀರ್ಘವರ್ಣನೆಯಿಂದ ಬಂದಿದೆ. ಮಹಾಬಲನ ವಿಚಾರವಾಗಿ ಹೇಳುವಾಗ ಪಂಪನಿಗಿಂತ ಒಂದು ಕೈ ಮೇಲೆನಿಸುವಂತೆ, ಆತನ ವಿದ್ಯಾತಿಶಯತೆಯ ಜೊತೆಗೆ ಗುಣಾತಿಶಯತೆಯನ್ನೂ ಸಹ ವರ್ಣಿಸಲಾಗಿದೆ. ಉದಾಹರಣೆ :

ಕಲಾಸು ಕೌಶಲಂ ಶೌರ್ಯಂ ತ್ಯಾಗಃ ಪ್ರಜ್ಞಾ ಕ್ಷಮಾ ದಯಾ
ಧೃತಿಃ ಸತ್ಯಂ ಚ ಶೌಚಂ ಚ ಗುಣಾಸ್ತಸ್ಯ ನಿಸರ್ಗಜಾಃ (IV-೧೩೪)

ವಿದ್ಯೆಗಳಲ್ಲಿ ನಿಪುಣತೆ, ಪರಾಕ್ರಮ, ದಾನ, ಬುದ್ಧಿ, ಕ್ಷಮೆ, ದಯೆ, ಧೈರ್ಯ, ಸತ್ಯ,

ಲೋಭವಿಲ್ಲದಿರುವಿಕೆ ಇವೇ ಮೊದಲಾದುವು ಆ ಮಹಾಬಲನ ಸ್ವಾಭಾವಿಕ ಗುಣಗಳಾಗಿದ್ದವು. ಆದಿಪುರಾಣದಲ್ಲಿ ಆತನು ವಿದ್ಯಾಯೋಗ್ಯತೆಯನ್ನು ಪಡೆದು, ಯೌವನಕ್ಕೆ ಕಾಲಿರಿಸಿದಾಗ ಯುವರಾಜಪದವಿಯನ್ನು ಪಡೆದನೆಂಬ ಅಂಶವು ಮಾತ್ರ ಬರುತ್ತದೆ. ಪೂರ್ವಪುರಾಣದಲ್ಲಿ ಬರುವ ಮಹಾಬಲನ ವಿನಯ ಮೊದಲಾದ ಗುಣಗಳು ಅವನ ಯೋಗ್ಯತೆಯನ್ನು ಹೆಚ್ಚಿಸುವಂಥವುಗಳೆಂದು ತಿಳಿದು, ಅತಿಬಲರಾಜನು ಅವನಿಗೆ ಯುವರಾಜಪದವಿಯನ್ನು ಕೊಟ್ಟನು ಎಂಬ ಅಂಶವು, ಮಹಾಬಲನ ವ್ಯಕ್ತಿತ್ವದ ಶೋಭೆಯನ್ನು ಮತ್ತಷ್ಟು ಪರಿಸ್ಫುಟಗೊಳಿಸಿದೆ.

## ಉತ್ತರಕಾಲೀನ ಕಾವ್ಯಗಳು

ಪೂರ್ವಪುರಾಣ ಮತ್ತು ಆದಿಪುರಾಣಗಳಲ್ಲಿ ಬರುವ ವರ್ಣನಾಭಾಗಗಳೆಲ್ಲವನ್ನೂ ಉತ್ತರಕಾಲೀನ ಕಾವ್ಯಗಳು ಕೈಬಿಟ್ಟಿವೆ. ಅಳಕಾಪುರದ ವರ್ಣನೆಯಾಗಲಿ, ಅತಿಬಲನ ವರ್ಣನೆಯಾಗಲಿ, ಮಹಾಬಲನ ವಿದ್ಯಾತಿಶಯ ಗುಣಾತಿಶಯಗಳ ವರ್ಣನೆಯಾಗಲಿ ಇಲ್ಲಿ ಕಂಡುಬರುವುದಿಲ್ಲ. ಕೇವಲ ವರದಿರೂಪವಾಗಿ ಇಲ್ಲಿ ಪ್ರಸಂಗವನ್ನು ನಿರೂಪಿಸಲಾಗಿದೆ, ಅಷ್ಟೆ. ಆದಿಪರಮೇಶ್ವರನ ಯಕ್ಷಗಾನದಲ್ಲಿ ಮಾತ್ರ ಉಳಿದ ಉತ್ತರಕಾಲೀನ ಕಾವ್ಯಗಳಲ್ಲಿ ದೊರೆಯದ ಸಂಕ್ಷಿಪ್ತ ವರ್ಣನಾ ವಿಧಾನವು ಲಭಿಸುತ್ತದೆ. ಪೂರ್ವಪುರಾಣ ಆದಿಪುರಾಣಗಳಲ್ಲಿ ದೊರೆಯುವ ಸವಿವರ ವಿವರಣೆ ಇಲ್ಲಿಲ್ಲದಿದ್ದರೂ, ಕವಿ ಅಲ್ಲಿಯ ಕೆಲವು ಅಭಿಪ್ರಾಯಗಳನ್ನು ಸಂಗ್ರಹಿಸಿರುವುದಲ್ಲದೆ, ಸರಳೀಕರಿಸಿ ಜನಪದಧಾಟಿಯಲ್ಲಿ ಹೇಳಿದ್ದಾನೆ :

ಸಿರಿಯಿಂದ ಸೊಬಗಿಂದ ಸರಸ ಕಲಾವಿದ | ಪರಿಜನಾಪುರಜನಾವಾರನಾರಿಯರ ||
ವಿಲಸದಿಂ ಪುರವನು ಬಳಸಿದುದ್ಯಾನದಿಂ | ಜಲಖ್ಯಾತಿಯೊಳುತೀವಿ ಜಲದಕುಮುದದಿ ||
(ಪರಿಚ್ಛೇದ- i)

ವೈಭವಯುತವಾದ ಅಳಕಾಪುರ ಸೊಬಗಿನಿಂದ ವಿರಾಜಿಸುತ್ತಿತ್ತು. ಧರೆಗೆ ಕೌತುಕವಾಗಿ ವಿರಾಜಿಸುವ ಅಳಕಾಪುರದ ದಂಪತಿಗಳಿಗೆ ಮಹಾಬಲನು ಜನಿಸಿದನು. ಈತನು "ಧನದೊಳು ಧನಪನು"; "ಘನವಿಭವದೊಳಿಂದ್ರ" ; ತನಗೆ ಸರಿಸಾಟಿಯಿರುವವರಾರೂ ಇಲ್ಲ ಎನ್ನುವಂತೆ ಸುಖಿಸುತ್ತಿದ್ದನು.

## ಅತಿಬಳನ ವೈರಾಗ್ಯ ಸನ್ನಿವೇಶ–ಮಹಾಬಲನ ರಾಜ್ಯಕ್ರಮ

**ಆದಿಪುರಾಣ–ಪೂರ್ವಪುರಾಣ :** ಪಂಪನು ಅತಿಬಳನ ವೈರಾಗ್ಯಕ್ಕೆ ಒಂದು ಸನ್ನಿವೇಶವನ್ನು ಕಲ್ಪಿಸಿದ್ದಾನೆ. ಈ ರೀತಿಯ ಸನ್ನಿವೇಶವನ್ನು ನಾವು ಜೈನಪುರಾಣಗಳಲ್ಲಿ ಅನೇಕ ಕಡೆಗಳಲ್ಲಿ ಕಾಣಬಹುದಾಗಿದೆ. ಪುರಾಣಸಮಯವಾಗಿ ಕಂಡುಬರುವ ಈ ಸನ್ನಿವೇಶವನ್ನು ನಿರೂಪಿಸುವಲ್ಲಿ ಪಂಪನು ತೋರಿರುವ ವರ್ಣನಾವೈಖರಿಯ ಸೊಬಗು ಆಸ್ವಾದ್ಯದೃಶವಾದುದು.

ತೊಡರ್ದಿರ್ೕಪುತ್ರಕಲತ್ರಮೋಹದೊಳಿದೇಕಟ್ಟಿರ್ದಪ್ಪೆ ನಿನ್ನ ಮೆಳ್
ಪಡಿದೇಕಾರಣಮಂತಕಂ ಕಡುಪಿನಿಂ ಕಂಠಗ್ರಹಂಗೆಯ್ಕುದಿಂ
ತಡೆಯಂ ಚೇತರಿಸೆಂದು ಬಂದು ಕಿವಿಯೊಳ್ ಪೇಟ್ಪಿಂತೆವೊಲ್ ಕೆಂನೆಯಿಂ
ದೊಡೆದೋರೊಂದೊಗೆತಂದುವಂದು ನರೆಗಳ್ ವಿದ್ಯಾಧರಾಧೀಶನಾ || ( I-೨೯)

ಈ ಪುತ್ರಕಳತ್ರ ವ್ಯಾಮೋಹದಲ್ಲಿ ಇದೇಕೆ ಮುಳುಗಿರುವೆ? ನಿನ್ನ ಮರುಳಿಗೇನು ಕಾರಣ? ಯಮನು ಇನ್ನು ನಿನ್ನ ಗೋಣನ್ನು ಹಿಡಿಯದೆ ಬಿಡನು. ಎಚ್ಚರಗೊಳ್ಳು ಎಂದು ಕಿವಿಯಲ್ಲಿ ಹೇಳುತ್ತಿವೆಯೋ ಎಂಬಂತೆ ನೆರೆಗಳು ಅತಿಬಳನ ಕೆನ್ನೆಯಿಂದ ಹೊರ ಹೊಮ್ಮಿದುವು.

ವೈರಾಗ್ಯಪರನಾದ ರಾಜನು ಮಗನಿಗೆ ರಾಜ್ಯವನ್ನೊಪ್ಪಿಸಿ ಸಾವಿರಾರು ರಾಜರು, ಐನೂರು ಅರಸಿಯರಾದಿಯಾಗಿ ಒಡಗೂಡಿ ಗಣಧರಕೇವಲಿಗಳ ಪಾದಮೂಲದಲ್ಲಿ ದೀಕ್ಷಿತನಾದನು. ಆತನ ವೈರಾಗ್ಯನಿಷ್ಠೆ ಇನ್ನೂ ಹಣ್ಣಾಯಿತು. ಮತ್ತೆ ಮತ್ತೆ ಸಂಸಾರ ಸುಖದ ಹೇಯತೆಯನ್ನು ನೆನೆದನು. 'ಅತಿ ತೃಷ್ಣಾಪರನಾಗಿ ಮುನ್ನೆ ತೊಡೆದಿರ್ದಾ ಗಾಂಪೆ ಸಾಲ್ಗುಂ' 'ಅದು ನನ್ನ ಆಕೃತಿಯನ್ನು ಮರೆಮಾಡಿ ಮುಪ್ಪುಚಪ್ಪರಿಸುವಂತೆಸಗಿತು; ಚಿಃ ಕೆಮ್ಮಿನಿಂದ ನರಳುತ್ತಿರುವಂತೆ ಮಾಡಿ ನಿಷ್ಕಾರಣವಾಗಿ ನನ್ನನ್ನು ಸಂಸಾರದಲ್ಲಿ ದೂಡಿತು' ಎಂದರಿತು ಅದರಿಂದ ಬಿಡುಗಡೆ ಹೊಂದಲು ಘೋರ ತಪೋಧನನಾದನು'(I-೮). "ಸುತ್ತಮುತ್ತಲ ಜಗತ್ತಿನ ದೃಶ್ಯಗಳು ಜುಗುಪ್ಸೆಯನ್ನುಂಟುಮಾಡಲು ಹೇಸಿ ವೈರಾಗ್ಯ ತಾಳುವ ಪರಿ ಒಂದು ಬಗೆಯಾದರೆ, ವಿದ್ಯಾಧರಾಧೀಶನಾಗಿ ಸಮಸ್ತಸುಖಸಂಪತ್ತು ಅಧಿಕಾರ ಅಟ್ಟಹಾಸಗಳಿಂದ ಮೆರೆದ ಅತಿಬಳನಿಗೆ ತನ್ನ ನರೆಗೂದಲೇ ತನ್ನನ್ನು ಮೂದಲಿಸುವಂತೆ ತೋರಿಬಂದಿತೆಂಬ ಚಿತ್ರ ಎಂಥವನನ್ನಾದರೂ ಬಡಿದೆಬ್ಬಿಸುವಂತಿದೆ. . . . ಇದು ಅಭಾವವೈರಾಗ್ಯವಲ್ಲ; ಭೋಗದ ಅಸಾರತೆಯನ್ನು ತಾನಾಗಿ ತಾನು ಅರಿತು ಕಣ್ತೆರೆದ ಸಹಜ ವೈರಾಗ್ಯ. ಇಂಥ ಚಿತ್ರಗಳು ಒಂದಾದ ಮೇಲೆ ಒಂದು ಬರುತ್ತವೆ. ಪಂಪನ ಕುಶಲ ಕೈ ಆ ಒಂದೊಂದು ಸಂದರ್ಭವನ್ನೂ ನಿತ್ಯನೂತನವನ್ನಾಗಿ ಮಾಡುವ ಪರಿಣತಿಯನ್ನು ಪಡೆದಿದೆ.[೩] ಭೋಗದ ಬೆನ್ನಿನಲ್ಲಿಯೇ ಸಂಸಾರದ ಅಸಾರತೆಯನ್ನು ಮನಗಾಣಿಸುವ ರೀತಿ ಇಲ್ಲಿ ಕಂಡುಬರುತ್ತದೆ.

ಈ ಕಡೆ ಮಹಾಬಲನು ತನ್ನ ನಾಲ್ಕು ಮಂತ್ರಿಗಳಾದ ಸ್ವಯಂಬುದ್ಧ, ಮಹಾಮತಿ, ಸಂಭಿನ್ನಮತಿ ಮತ್ತು ಶತಮತಿ ಎಂಬುವರಲ್ಲಿ ರಾಜ್ಯಭಾರವನ್ನೊಪ್ಪಿಸಿ ನಿಶ್ಚಿಂತೆಯಿಂದ ವಿದ್ಯಾಧರಸ್ತ್ರೀಯರೊಂದಿಗೆ ನಲಿಯುತ್ತ ಸಂತೋಷದಿಂದಿದ್ದನು.

ಪೂರ್ವಪುರಾಣದಲ್ಲಿ ಬರುವ ಇಲ್ಲಿಯ ವೃತ್ತಾಂತಗಳಿಗೂ ಆದಿಪುರಾಣದ ವೃತ್ತಾಂತ ಗಳಿಗೂ ಕೆಲವು ವ್ಯತ್ಯಾಸಗಳು ಕಂಡುಬರುತ್ತವೆ. ಪೂರ್ವಪುರಾಣದಲ್ಲಿ ಅತಿಬಳನ ವೈರಾಗ್ಯಕ್ಕೆ ಯಾವ ಸನ್ನಿವೇಶವೂ ಕಾರಣವಾಗಿ ಬರುವುದಿಲ್ಲ. ಅವನು ಇದ್ದಕ್ಕಿದ್ದಂತೆ ಲೌಕಿಕ ಸುಖದಲ್ಲಿ ಕಂಡುಕೊಂಡ ಅಸಾರತೆಯ ಭಾವನೆಯೇ ಅದಕ್ಕೆ ಕಾರಣವಾಯಿತು. ಆತನಿಗೆ ರಾಜ್ಯವು 'ವಿಷಪುಷ್ಪ'ದಂತೆ, 'ಸರ್ಪವು ವಾಸಿಸುವ ಹುತ್ತದಂತೆ' ಕಂಡುಬಂದಿತು. ಯೌವನ, ಭೋಗಗಳು ಕ್ಷಣಿಕವೆನಿಸಿದವು.

'ಈ ಶರೀರ, ಮೃತ್ಯುವೆಂಬ ಸಿಡಿಲಿನಿಂದ ನಾಶವಾಗುತ್ತದೆ'. 'ಸಂಪತ್ತು ತೆರೆಮಾಲೆ

ಯಂತೆ ಚಂಚಲ'—ಈ ಮೊದಲಾಗಿ ಚಿಂತಿಸಿ ರಾಜ್ಯಸುಖವನ್ನು ತೊರೆದನು. ನಾನಾ ಉಪಮಾಲಂಕಾರಮಾಲೆಗಳಿಂದ ಜಿನಸೇನಾಚಾರ್ಯರು ನಿರ್ವೇಗಭಾವವನ್ನು ಸ್ಪಷ್ಟ ಪಡಿಸಿದ್ದಾರೆ. ಪಂಪನು ಈ ನಿರ್ವೇಗಭಾವವನ್ನು ತನ್ನದೇ ಆದ ಧಾಟಿಯಲ್ಲಿ ಎರಡು ವೃತ್ತಗಳಲ್ಲಿ ಹಿಡಿದಿಟ್ಟಿದ್ದಾನೆ. ಪೂರ್ವಪುರಾಣದಲ್ಲಿ ಅತಿಬಳನ ತಪಸ್ಸಿನ ಹಿರಿಮೆಯ ವರ್ಣನೆ ಬರುತ್ತದೆ. ಪಂಪನು ಮುಖ್ಯ ಕಥಾಭಾಗವನ್ನು ದೃಷ್ಟಿಯಲ್ಲಿಟ್ಟುಕೊಂಡು ಅದನ್ನು ಕೈಬಿಟ್ಟಂತೆ ತೋರುತ್ತದೆ.

ಪೂರ್ವಪುರಾಣದಲ್ಲಿ ತಂದೆಯು ದೀಕ್ಷೆಯನ್ನು ಕೈಗೊಂಡ ಬಳಿಕ, ಮಹಾಬಲನು ರಾಜ್ಯಭಾರವನ್ನು ದಕ್ಷತೆಯಿಂದ ವಹಿಸಿಕೊಂಡನೆಂದು ನಿರೂಪಿತವಾಗಿದೆ. ತನ್ನ ಭುಜಬಲ ವನ್ನು ಪ್ರಕಟಿಸುತ್ತ, ಅತಿಕ್ರೂರಿಯೂ ಆಗದೆ ಅತಿ ಮೃದು ಸ್ವಭಾವದವನಾಗಿಯೂ ಆಗದೆ ಮಧ್ಯಮರೀತಿಯಲ್ಲಿ ಲೋಕವನ್ನು ವಶಪಡಿಸಿಕೊಂಡನು. ಧರ್ಮ-ಅರ್ಥ-ಕಾಮಗಳೆಂಬ ಮೂರು ಪದಾರ್ಥಗಳನ್ನು ಒಂದಕ್ಕೊಂದು ಬಾಧೆಯಿಲ್ಲದಂತೆ ಸೇವಿಸುತ್ತಿದ್ದನು. ರಾಜ್ಯ ಭಾರವನ್ನು ನಾಲ್ವರು ಮಂತ್ರಿಗಳಿಗೆ ವಹಿಸಿದ್ದರೂ ಅವರೊಡನೆ ರಾಜ್ಯಕಾರ್ಯವನ್ನು ಚರ್ಚಿಸುತ್ತಿದ್ದನು; ನಿಶ್ಚಯಿಸುತ್ತಿದ್ದನು. ಪೂರ್ವಪುರಾಣದಲ್ಲಿ ಬರುವ ಮಹಾಬಲ ರಾಜ್ಯ ಕಾರ್ಯನಿಪುಣನಾಗಿದ್ದಾನೆ. ಕೇವಲ ವಿದ್ಯಾಧರಸ್ತ್ರೀಸುಖದಲ್ಲಿ ಮೈಮರೆತವನಲ್ಲ.

ಆದಿಪುರಾಣ ಮತ್ತು ಪೂರ್ವಪುರಾಣಗಳ ಕಥಾಚೌಕಟ್ಟು ಒಂದೇ ಆದರೂ, ಅವುಗಳ ಆಂತರ್ಯದಲ್ಲಿ ಮೂಡಿ ಬಂದಿರುವ ವ್ಯತ್ಯಾಸಗಳು ಗಮನಾರ್ಹ. ಪಂಪನು ಮಹಾಬಲ ನನ್ನು ವಿಷಯಾಸಕ್ತಿಯಲ್ಲಿಯೇ ಹೆಚ್ಚು ತತ್ಪರತೆಯುಳ್ಳವನನ್ನಾಗಿ ಚಿತ್ರಿಸಿಕೊಂಡು ಬಂದಿ ದ್ದಾನೆ. ಹೀಗಾಗಿ ಸ್ವಯಂಬುದ್ಧನು ಆತನ ಉದ್ಧಾರಕ್ಕಾಗಿ ಹೆಜ್ಜೆ ಹೆಜ್ಜೆಗೂ ತುಡಿಯುವು ದನ್ನು ಪೂರ್ವಪುರಾಣಕ್ಕಿಂತ ಹೆಚ್ಚಾಗಿ ಇಲ್ಲಿ ಕಾಣುತ್ತೇವೆ. ಪೂಜಾನಿಮಗ್ನನಾಗಿ ಹೋದ ಸಂಚಾರದ ಸಮಯದಲ್ಲಿ, ಆಸ್ಥಾನದ ಉತ್ಸವ ಕಾರ್ಯದಲ್ಲಿ, ಸ್ವಯಂಬುದ್ಧನು ತನ್ನ ರಾಜನ ಧರ್ಮೋದ್ಧಾರಕ್ಕಾಗಿ ಶ್ರಮಿಸುವುದನ್ನು ಕಾಣುತ್ತೇವೆ.ಸ್ವಯಂಬುದ್ಧನು ವಿದ್ಯಾಧರ ಮಹಾಬಲನಿಗೆ ಮಾಡಿದ ಧರ್ಮೋಪದೇಶ, ನಿರೂಪಿಸಿದ ದೃಷ್ಟಾಂತ ಕಥೆ—ಇವೆಲ್ಲವೂ ಕೇವಲ ನಿರೂಪಣಾರ್ಥವಾಗಿ ಬಾರದೆ ಧರ್ಮೋದ್ಧಾರದ ಉತ್ಕಟೇಚ್ಛೆಗಳಾಗಿ ಕಂಡುಬರು ತ್ತವೆ. ಪಂಪನು ಸ್ವಯಂಬುದ್ಧನಿಂದಲೂ ಮಹಾಬಲನ ವಿಷಯಲಂಪಟತೆಯ ಬಗೆಗೆ ಅಲ್ಲಲ್ಲಿ ಹೇಳಿಸಿದ್ದಾನೆ.

ಪೂರ್ವಪುರಾಣದಲ್ಲಿ ಬರುವ ಮಹಾಬಲ ಧರ್ಮಾರ್ಥಕಾಮಗಳ ಮೇಳವನ್ನುಳ್ಳವನು. ಆದಿಪುರಾಣದಲ್ಲಿ ಚಿತ್ರಿತನಾಗಿರುವ ಮಹಾಬಲ ಧರ್ಮವನ್ನು ಸ್ವಲ್ಪವೂ ಅರಿತವ ನೆಂದಲ್ಲ. ಆದರೂ ಆ ಮೇಳ ಹದವರಿತಿಲ್ಲ. ವಿಷಯಾಸಕ್ತಿಗೇ ಹೆಚ್ಚು ಮನಸ್ಸನ್ನು ಕೊಟ್ಟವನೆಂಬುದಕ್ಕೆ ನಿದರ್ಶನವಾಗಿ, ಚಾರಣಮುನಿಗಳನ್ನು ಕಂಡು ಸ್ವಯಂಬುದ್ಧನು ಮಹಾಬಲನ ಬಗೆಗೆ ಹೇಳುವ ಮಾತನ್ನು ಉದಾಹರಿಸಬಹುದಾಗಿದೆ. 'ಸ್ವಾಮಿ, ನನ್ನ ರಾಜ ಮಹಾಬಲನು, ಇನ್ನೂ ಸಹ ತನ್ನ ಭೋಗಾಕಾಂಕ್ಷೆಯನ್ನು ಬಿಡಲು ಸ್ವಲ್ಪವೂ ಮನಸ್ಸು ಮಾಡಿಲ್ಲ. ಆತನು ಭವ್ಯನೋ ಅಭವ್ಯನೋ ತಿಳಿಸಿ' ಎಂದು ಆತಂಕಗೊಂಡು ಕೇಳುತ್ತಾನೆ. ರಾಜ್ಯಕ್ಕೆ ಹಿಂದಿರುಗಿ ಬರುವಾಗಲೂ ಸ್ವಯಂಬುದ್ಧನಿಗೆ ಮಹಾಬಲನದೇ ಚಿಂತೆ. ಮಹಾ ಬಲನು ತನ್ನ ಮುದಿತನದಲ್ಲಿಯೂ ಶಕ್ತಿಹೀನನಾಗದೆ ಭೋಗಾಕಾಂಕ್ಷೆಯಿಂದ ಕೂಡಿರುವು

ದನ್ನು ಕಂಡು, ಸ್ವಯಂಬುದ್ಧನು ಆಶ್ಚರ್ಯಗೊಂಡು ಹೇಳುವ ರೀತಿ ಇದು :

ಮುಸುಮುತ್ತಂತೆ ತೆರಳ್ದ ತನ್ನ ಮೊಗಮಂ ಕಂಡಳ್ಕನೋ ಕೂಡೆ ಜೋ
ಲ್ಬು ಸಡಿಲ್ದಿರ್ದೊಡಜೊಳ್ಳೆತನಮಮಂ ಮೇಣ್ ಕಾಣನೋ ಸಂತತ
ವ್ಯಸನೋದ್ರೇಕದ ಕುಂದನೇನೊಣರನೋ ಶಕ್ತಿಕ್ಷಯಂಗಾಣನೋ
ಬಿಸುಡಂ ಮುನ್ನಿನ ತನ್ನ ಲಂಪಳಿಕೆಯಂ ಮತ್ತಂ ಜರಾಜರ್ಜ್ಝರಂ (II-೪೫)

ಮುದಿ ಮುಸುವದಂತೆ ಮುದ್ದೆಯಾದ ಮುಖವನ್ನು ಕಂಡು ಹೆದರನೇ? ಜೋತುಬಿದ್ದು ಸಡಿಲಗೊಂಡ ಶರೀರದ ಅಳ್ಳೆಜೊಳ್ಳತನವನ್ನು (ನಿಸ್ಸಾರತೆಯನ್ನು) ಕಾಣುವುದಿಲ್ಲವೇ? ವ್ಯಸನೋದ್ರೇಕದಿಂದುಂಟಾದ ಕುಂದನ್ನು ತಿಳಿಯನೇ ? ಶಕ್ತಿಹೀನತೆಯನ್ನು ಕಾಣನೇ? ಮುಪ್ಪಿನಿಂದ ಜರ್ಜರಿತನಾದರೂ ತನ್ನ ಮೊದಲಿನ ಲಂಪಟತನವನ್ನು ಬಿಡಲಿಲ್ಲ! ಎಂದು ಮಹಾಬಲನ ಸ್ಥಿತಿಯನ್ನು ಕುರಿತು ಮರುಗುವಲ್ಲಿ, ಆತಂಕಗೊಳ್ಳುವಲ್ಲಿ ಮೇಲೆ ಹೇಳಿದ ಅಂಶವು ಪ್ರಕಟಗೊಳ್ಳುತ್ತದೆ. ಜಯವರ್ಮನು ತಾನು ಮಾಡಿಕೊಂಡ ನಿದಾನ ಶಲ್ಯದ ಫಲವೆಂಬಂತೆ ಭೋಗದಲ್ಲಿಯೇ ಹೆಚ್ಚಾಗಿ ಮುಳುಗಿದ್ದನೆಂಬುದನ್ನು ಸಮರ್ಥಿಸುವುದಕ್ಕಾಗಿ ತಕ್ಕ ಭೂಮಿಕೆಯನ್ನು ಸಿದ್ಧಪಡಿಸಿಕೊಂಡಿರುವುದು ಪಂಪನ ಸ್ವೋಪಜ್ಞತೆಯ ಪ್ರತೀಕವಾಗಿದೆ. ಪೂರ್ವಪುರಾಣದಲ್ಲಿ ಕಾಣದ ಈ ಸೂಕ್ಷ್ಮಾಂಶದ ವಿವರ ಪಂಪನಲ್ಲಿ ಸಾಕಾರಗೊಂಡು ಬಂದಿದೆ.

## ಉತ್ತರಕಾಲೀನ ಕಾವ್ಯಗಳು

**ಚಾವುಂಡರಾಯಪುರಾಣ** : ಚಾವುಂಡರಾಯನು ಈ ಭಾಗದಲ್ಲಿ ಆದಿಪುರಾಣದ ಭಾಗವನ್ನು ಸಂಗ್ರಹಿಸಿ ಬರೆದಿದ್ದಾನೆ. "ತನ್ನ ಕೆನ್ನೆಯ ನೆರೆಯಂ ಕಂಡು ನಿರ್ವೇಗ ಕಾರಣಮಾಗೆ" ಮಹಾಬಲನಿಗೆ ರಾಜ್ಯವನ್ನು ಕೊಟ್ಟನು ಎಂಬಲ್ಲಿ ಅದು ವ್ಯಕ್ತವಾಗುತ್ತದೆ. ಪೂರ್ವಪುರಾಣದಲ್ಲಿ ಅತಿಬಲನು ಅನೇಕ ವಿದ್ಯಾಧರರಾಜರೊಡನೆ ದೀಕ್ಷೆಯನ್ನು ತೆಗೆದುಕೊಂಡನು ಎಂದು ಬಂದಿದೆ. ಚಾವುಂಡರಾಯನು ಪಂಪನನ್ನು ಅನುಸರಿಸಿ "ಸಾಸಿರ್ವರರಸು ಮಕ್ಕಳುಮಯ್ನೂರ್ವರರಸಿಯರುಂಬೆರಸು ಗಣಧರ ಕೇವಲಿಗಳ ಪಾದಮೂಲದೊಳ್ ತಪಮಂ ಕೈಗೊಂಡನ್" (ಪು. ೧೮) ಎಂದು ಹೇಳಿದ್ದಾನೆ. ಮಹಾಬಲನು ಸ್ವಯಂಬುದ್ಧ, ಮಹಾಮತಿ, ಸಂಭಿನ್ನಮತಿ, ಶತಮತಿಯೆಂಬ ನಾಲ್ವರು ಮಂತ್ರಿಗಳಿಗೆ ರಾಜ್ಯಭಾರವನ್ನು ಕೊಟ್ಟು, ತಾನು ನಿಶ್ಚಿಂತೆಯಿಂದ ಇದ್ದನೆಂಬ ಅಂಶ ಮಾತ್ರ ಇಲ್ಲಿ ಬರುತ್ತದೆ. ಆದಿಪುರಾಣದಲ್ಲಿ ಬರುವ ಮುಂದಿನ ವಿವರಣೆಯಾದ, ವಿದ್ಯಾಧರಸ್ತ್ರೀಯರೊಡನೆ ಮಹಾಬಲನು ಕ್ರೀಡಿಸುತ್ತಿದ್ದನೆಂಬ ವಿವರ ಬರುವುದಿಲ್ಲ. ಚಾವುಂಡರಾಯಪುರಾಣದಲ್ಲಿ ಮಹಾಬಲನ ಪಾತ್ರದ ಬೆಳವಣಿಗೆಗೆ ಅವಕಾಶವೇ ಇಲ್ಲ. ಕಥೆಯ ಮುಖ್ಯಾಂಶದ ಕಡೆಗಷ್ಟೇ ಕವಿಯ ಗಮನ.

**ಹಸ್ತಿಮಲ್ಲನ ಪೂರ್ವಪುರಾಣ** : ಮಹಾಬಲನ ವೈರಾಗ್ಯ ಸನ್ನಿವೇಶ ಚಾವುಂಡರಾಯಪುರಾಣವನ್ನು ಅನುಸರಿಸಿ ಬಂದಿದೆ. ಹಸ್ತಿಮಲ್ಲನು, ಚಾಮುಂಡರಾಯನು ಹೇಳಿರುವ ಮಾತನ್ನೇ ಅನುಕರಿಸಿ ಹೇಳಿದ್ದಾನೆ. ಉದಾಹರಣೆಗೆ,

ಅತಿಬಲರಾಜನೊಂದು ದಿವಸಂ ಕೆನ್ನೆಯ ನೆರೆಯಂ ಕಂಡು ವೈರಾಗ್ಯ ಪರಾಯಣನಾಗಿ ಮಹಾಬಳಂಗೆ ರಾಜ್ಯಮಂ ಕೊಟ್ಟೈನೂರರಸಿಯರುಂ ಸಾಸಿರ್ವರಸು ಗಳ್ಬೆರಸು ಗಣಧರ ಕೇವಲಿಗಳ ಸಮೀಪದೊಳ್ ದೀಕ್ಷೆಗೊಂಡು ಕೇವಲಜ್ಞಾನಮಂ ಪಡೆದಂ"(ಹಪೂರ್ವ. ii)

ಒಂದು ದಿವಸಂ ತನ್ನ ಕೆನ್ನೆಯ ನೆರೆಯಂ ಕಂಡು ನಿರ್ವೇಗ ಕಾರಣಮಾಗೆ ಮಹಾಬಳಂಗೆ ರಾಜ್ಯಮಂ ಕೊಟ್ಟತಿಬಳಂ ಸಾಸಿರ್ವರರಸುಮಕ್ಕಳುಮಯ್ನೂರ್ವರರಸಿಯರುಂ ಬೆರಸು ಗಣಧರ ಕೇವಲಿಗಳ ಪಾದಮೂಲದೊಳ್ ತಪಮಂ ಕೈಗೊಂಡನ್ (ಚಾವುಂಪು. ಪುಟ ೧೭-೧೮)

ಮಹಾಬಲನು ಮಂತ್ರಿಗಳ ಕೈಗೆ ರಾಜ್ಯವನ್ನು ಒಪ್ಪಿಸಿ ತಾನು ನಿಶ್ಚಿಂತನಾಗಿದ್ದನೆಂಬ ಪೂರ್ವಪುರಾಣ, ಆದಿಪುರಾಣ, ಚಾವುಂಡರಾಯಪುರಾಣಗಳಲ್ಲಿ ಬರುವ ವೃತ್ತಾಂತವನ್ನು ಹಸ್ತಿಮಲ್ಲನು ಕೈಬಿಟ್ಟಿದ್ದಾನೆ. ಅಲ್ಲದೆ, ಕಥೆಯನ್ನು ಓಡಿಸುವುದರಲ್ಲಿ ಚಾಮುಂಡರಾಯ ನಿಗಿಂತಲೂ ಆತುರತೋರಿದ್ದಾನೆ.

**ಪುಣ್ಯಾಸ್ರವದ ಆದೀಶ್ವರರ ಕಥೆ** : ಅತಿಬಳನ ವೈರಾಗ್ಯ ಸನ್ನಿವೇಶದಲ್ಲಿ, ಪೂರ್ವ ಪುರಾಣದ ಅನುಕರಣೆಯ ಛಾಯೆ ಕಂಡುಬರುತ್ತದೆ. ಅತಿಬಲನು ಇದ್ದಕ್ಕಿದ್ದಂತೆ ಮಗ ಮಹಾಬಲನಿಗೆ ರಾಜ್ಯವನ್ನು ಒಪ್ಪಿಸಿಬಿಟ್ಟನು. ಪೂರ್ವಪುರಾಣದಲ್ಲಿ ಆತನು ವೈರಾಗ್ಯ ಪರನಾಗಿ ಲೌಕಿಕ ನಶ್ವರತೆಯನ್ನು ಮನಗಂಡನೆಂದು ಬಂದಿದ್ದರೆ ಇಲ್ಲಿ ಆ ಅಂಶವೂ ಇಲ್ಲ. ತನ್ನ ನಾಲ್ವರು ಮಂತ್ರಿಗಳಿಗೆ ರಾಜ್ಯವನ್ನು ಮಹಾಬಲನು ಒಪ್ಪಿಸಿದನೆಂಬ ವಿಷಯ ವಾಗಲಿ. ವಿದ್ಯಾಧರಸ್ತ್ರೀಯರೊಡನೆ ನಲಿಯುತ್ತಿದ್ದ ವಿಷಯವಾಗಲಿ ಅಥವಾ ಆತನ ಧರ್ಮಾಚರಣೆಯ ಕಾರ್ಯತತ್ಪರತೆಯ ವಿಷಯವಾಗಲಿ ಬರುವುದಿಲ್ಲ. ಸಂಕ್ಷಿಪ್ತತೆಯ ದೃಷ್ಟಿಯಿಂದ ಇದು ಚಾವುಂಡರಾಯಪುರಾಣ, ಹಸ್ತಿಮಲ್ಲನ ಪೂರ್ವಪುರಾಣಗಳನ್ನು ಹೋಲುತ್ತದೆ.

**ಪುರುದೇವ ಚರಿತ** : ಎರಡು ಸಾಂಗತ್ಯಗಳಲ್ಲಿ ಕವಿ ಅತಿಬಲನ ವೈರಾಗ್ಯ ಸನ್ನಿವೇಶ ಮತ್ತು ದೀಕ್ಷೆಯನ್ನು ಪಡೆದ ವೃತ್ತಾಂತಗಳನ್ನು ಹೇಳಿದ್ದಾನೆ.

ಮಹಾಬಲನೆಂಬ ಸುತನಿಗೆ,

ಯುವರಾಜ ಪದವಿಯ ಕೊಟ್ಟಿರುತಿರಲೊಂದು | ದಿವಸ ಕೆನ್ನೆಯ ನರೆಗಂಡು
ಕುವರಗೆ ಖೇಚರಪದವನಿತ್ತು ತಾ | ಭವವಿನಾಶವ ಮಾಡ ಬಗೆದು ||
ಸಾವಿರ ರಾಜಕುಮಾರರು ನೂರ್ವರು | ದೇವಿಯರ ಗಣಧರರೆಂಬ
ಕೇವಲಿಗಳ ಮೂಲದೊಳ್ ಜಿನದೀಕ್ಷೆಯ | ತಾವೆಲ್ಲ ಧರಿಸಿದರಿತ್ತ || (I-೪೧-೪೨)

ಮಹಾಬಲನು ನಾಲ್ಕು ಮಂತ್ರಿಗಳಲ್ಲಿ ರಾಜ್ಯವನ್ನಿರಿಸಿ ತಾನು ನಿಶ್ಚಿಂತೆಯಿಂದ ಇದ್ದ ಎಂಬ ವೃತ್ತಾಂತವು ಚಾವುಂಡರಾಯಪುರಾಣದಂತೆಯೇ ಬರುತ್ತದೆ. ಈ ಅಂಶ ಉಳಿದ ಮೇಲಿನ ಎರಡು ಕಾವ್ಯಗಳಲ್ಲಿ ಇಲ್ಲದಿರುವುದನ್ನು ಗಮನಿಸಬಹುದು.

**ಆದಿಪರಮೇಶ್ವರನಯಕ್ಷಗಾನ** : ಬೊಮ್ಮಣ್ಣಕವಿಯು ಈ ಸನ್ನಿವೇಶಕ್ಕೆ ನಾಟಕೀಯತೆ ಯನ್ನು ತಂದು ಕಲಾಪೂರ್ಣಗೊಳಿಸಿದ್ದಾನೆ. ಅತಿಬಲನು ಒಮ್ಮೆ 'ರಕ್ತಿವಧುವನು ತೊರೆ ವುದಕೆ ವಿರಕ್ತಿಯ ಸೂಚನೆ ಇದು' ಎಂಬಂತೆ ದರ್ಪಣದ ಮೂಲಕ ತನ್ನ ಕಟ್ಬಾಯ ಕೆನ್ನೆಯಲ್ಲಿ ನೆರೆಗೂದಲನ್ನು ಕಂಡನು. ತಕ್ಷಣ 'ಮನಸ್ಸು ಜಗ್ಗಿತು', 'ದೇಹ ಕುಗ್ಗಿತು',

ವೈರಾಗ್ಯ ದಿಂದ 'ತಲೆಬಾಗಿತು', ನೃಪನ ಅಂತರಂಗದಲ್ಲಿ ವೈರಾಗ್ಯಭಾವವು ಮೊಳಗಿತು. ಒಂದು ರೀತಿಯ ಆರ್ತಭಾವದ ಛಾಯೆ ಆತನ ವೈರಾಗ್ಯ ಸನ್ನಿವೇಶದಲ್ಲಿ ಕಂಡುಬರುತ್ತದೆ. ಉದಾಹರಣೆಗೆ :

ಕಂದ ಬಾ ಕಾರುಣ್ಯ ವಿತರಣ ಸಿಂಧು ಬಾ, ನೋಡೆನ್ನ ಯೌವನ ಕುಂದಿತು

ಎನ್ನುತ್ತ ಕುವರನಿಗೆ ರಾಜ್ಯವನ್ನಿತ್ತು ದೀಕ್ಷಿತನಾದನು.

ಇಲ್ಲಿ ಕವಿಯು ಸನ್ನಿವೇಶವನ್ನು ನಮ್ಮ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾನೆ. ವಿದ್ಯಾಧರ ರಾಜನಿಗೆ ವೈರಾಗ್ಯ ಮೂಡಿದ ತಕ್ಷಣ ಕ್ರಿಯೆ ವೇಗವಾಗಿ ನಡೆದು ಹೋಗುತ್ತದೆ. ಉಳಿದ ಆದಿತೀರ್ಥಂಕರ ಪುರಾಣಗಳಲ್ಲಿ ಕಾಣದ ಧಾಟಿಯು ಇಲ್ಲಿ ಕಂಡುಬಂದು, ಕವಿಯ ಸ್ವೋಪಜ್ಞತೆಗೆ ಉತ್ತಮ ನಿದರ್ಶನವಾಗಿದೆ.

ಬೊಮ್ಮಣ್ಣ ಕವಿ, ಪೂರ್ವಪುರಾಣದಲ್ಲಿ ವರ್ಣಿತವಾಗಿರುವ ಅತಿಬಲನ ತಪಸ್ಸಿನ ವಿಧಾನವನ್ನು ಸಂಕ್ಷಿಪ್ತವಾಗಿ ವರ್ಣಿಸಿದ್ದಾನೆ. ಅತಿಬಲನಿಗೆ ಕೇವಲಜ್ಞಾನೋತ್ಪತ್ತಿಯಾದಾಗ ದೇವದುಂದುಭಿ ಮೊಳಗಿ, ದೇವತೆಗಳೆಲ್ಲರೂ ದೇವನನ್ನು ಪೂಜಿಸಲು ಬಂದರು; ಮಹಾಬಲನೂ ಸಹ ಕೇವಲಿಯನ್ನು ಪೂಜಿಸಿ ಬಂದನು ಎಂಬ ವೃತ್ತಾಂತವನ್ನು ಕವಿ ಹೊಸದಾಗಿ ಸೇರಿಸಿದ್ದಾನೆ.

## ಜೀವಾಜೀವ ವಾದ ಮಂಡನೆ

**ಆದಿಪುರಾಣ–ಪೂರ್ವಪುರಾಣ :** ಅಜೀವವಾದದ ಖಂಡನೆ, ಜೀವವಾದದ ಮಂಡನೆಯಲ್ಲಿ ಸ್ವಯಂಬುದ್ಧನು ಗೆದ್ದು ಜಯಪತ್ರವನ್ನು ಪಡೆದ ಪ್ರಸಂಗದಲ್ಲಿ ಪೂರ್ವ ಪುರಾಣದ ಅನುಕರಣೆಯಿದ್ದರೂ ಪಂಪನು ಅಲ್ಲಿಯ ವಿವರಗಳನ್ನು ಕ್ರೋಡೀಕರಿಸುವ ಕೌಶಲವನ್ನು ತೋರಿ ಅಲ್ಲಲ್ಲಿ ಕಾವ್ಯಸೌಂದರ್ಯವನ್ನು ಮೆರೆದಿದ್ದಾನೆ.

ಈ ಪ್ರಸಂಗದಲ್ಲಿ ಬರುವ ಪಂಪನ ಕೆಲವು ಮಾತುಗಳು ಅತ್ಯಂತ ಮನನೀಯವಾಗಿವೆ.

ಮಹಾಬಲನನ್ನು ಎಚ್ಚರಿಸಿ ಹೇಳುವ ಮಾತುಗಳು ಪೂರ್ವಪುರಾಣದಿಂದ ಪ್ರೇರಿತವಾಗಿ ಬಂದಿದ್ದರೂ ಪಂಪನು ಆ ಮಾತುಗಳಿಗೆ ತನ್ನ ಪ್ರತಿಭೆಯ ಮೆರುಗನ್ನು ನೀಡಿ ಸುಂದರ ವಾಗಿ ನಿರೂಪಿಸಿರುವುದನ್ನು ಕಾಣಬಹುದಾಗಿದೆ. ಉದಾಹರಣೆಗೆ :

ಭವರಾಶಿ ನಿಮಗ್ನರಂ ದಯೆದಮಂ ದಾನಂ ತಪಂ ಶೀಲಮೆಂ
ಬಿವೆ ಮೆಯ್ಯಾಗಿರೆ ಸಂದ ಧರ್ಮಮೆ ವಲಂ ಪೊತ್ತೆತ್ತುಗುಂ ಮುಕ್ತಿಪ
ರ್ಯ್ಯವಸಾನಂಬರಮಾನುಷಂಗಿಕಫಲಂ ಭೂಪೇಂದ್ರ ದೇವೇಂದ್ರರಾ
ಜ್ಯವಿಳಾಸಂ ಪೆಱತಲ್ತು ನಂಬು ಖಚರಕ್ಷ್ಮಾಪಾಲ ಚೂಡಾಮಣೀ (II-೭)

ದಯೆ, ದಮ, ದಾನ, ತಪ, ಶೀಲ ಇವುಗಳೇ ಧರ್ಮದ ಮೈ. ಭವರಾಶಿಯಲ್ಲಿ ತೊಳಲಾಡುತ್ತಿರುವವರನ್ನು ಮುಕ್ತಿಯ ಕೊನೆಯ ಹಂತದವರೆಗೆ ಎತ್ತುವ ಸಾಧನ. ಉಳಿದೆಲ್ಲ ಭೋಗ ಭಾಗ್ಯಗಳು ಪುಣ್ಯವಿಶೇಷದಿಂದ ದೊರೆತವುಗಳು ಮಾತ್ರ ಎಂಬ ಮಾತುಗಳಲ್ಲಿ ಪಂಪನು ಧರ್ಮದ ಸಮಗ್ರರೂಪವನ್ನು ಸರಳೀಕರಿಸಿ ನುಡಿದಿದ್ದಾನೆ.

"ಧರ್ಮದ ಸತ್ಯಸ್ವರೂಪವನ್ನು ಅದರ ದಾರಿಯಲ್ಲಿ ನಡೆಸುವ ಪ್ರಗತಿ ಚೈತನ್ಯವನ್ನು ಕುರಿತ ಮೊದಲಸ್ವರ ಇಲ್ಲಿ ನುಡಿದು ಕೇಳುತ್ತದೆ."[೪] ನಿಜ. ಆದಿದೇವನ ಭವದಲ್ಲಿಯ

ಪ್ರಥಮ ಉಪದೇಶದ ಅಮೃತನಾದವಿದು. ಧರ್ಮದ ಸಾರವು ಇಲ್ಲಿ ಹೆಪ್ಪುಗಟ್ಟಿನಿಂತು ವಿಶ್ವವ್ಯಾಪಿಯಾಗಿ ನಿಲ್ಲಬಲ್ಲ ವಿಶಾಲಾರ್ಥದ ಸಾಂದ್ರತೆ ಈ ವೃತ್ತದಲ್ಲಿ ಹುದುಗಿದೆ.

ಪೂರ್ವಪುರಾಣದಲ್ಲಿ ಈ ಧರ್ಮೋಪದೇಶದ ಮಾತು ಬಂದಿರುವ ರೀತಿ ಹೀಗಿದೆ :

ದಯಾಮೂಲೋ ಭವೇದ್ಧರ್ಮೋ ದಯಾ ಪ್ರಾಣಾನುಕಂಪನಂ |
ದಯಾಯಾಃ ಪರಿರಕ್ಷಾರ್ಥಂ ಗುಣಾಃ ಶೇಷಾಃ ಪ್ರಕೀರ್ತಿತಾ ||
ಧರ್ಮಸ್ಯ ತಸ್ಯ ಲಿಂಗಾನಿ ದಮಃ ಕ್ಷಾಂತಿರಹಿಂಸತಾ |
ತಪೋ ದಾನಂ ಚ ಶೀಲಂ ಚ ಯೋಗೋ ವೈರಾಗ್ಯಮೇವ ಚ || ( V-೨೧-೨೨)

ಧರ್ಮವು ದಯಾಮೂಲವಾದುದು. ಪ್ರಾಣಿಗಳಲ್ಲಿ ಕೃಪೆಯನ್ನಿಡುವುದು ದಯೆಯು. ದಯೆಯನ್ನು ಕಾಪಾಡಿಕೊಳ್ಳುವುದಕ್ಕೋಸ್ಕರವೇ ಬೇರೆ ಗುಣಗಳು ಹೇಳಲ್ಪಟ್ಟಿವೆ. ಆ ದಯಾಮೂಲ ಧರ್ಮಕ್ಕೆ ಇಂದ್ರಿಯನಿಗ್ರಹವೂ ಕ್ಷಮೆಯೂ ಹಿಂಸೆಯನ್ನು ಮಾಡದಿರುವಿಕೆಯೂ ತಪಸ್ಸೂ ದಾನವೂ ಶೀಲವೂ ಧ್ಯಾನವೂ ವೈರಾಗ್ಯವೂ ಚಿಹ್ನೆಗಳು.

ಪೂರ್ವಪುರಾಣದಲ್ಲಿ ಶುಷ್ಕವಾಗಿ ಕಂಡುಬರುವ ವಾದ ವಿವಾದ ವಿಧಾನವು ಪಂಪನಲ್ಲಿ ಅಲ್ಲಲ್ಲಿ ಸ್ವಾರಸ್ಯಕರವಾಗಿ ಬಂದಿರುವುದನ್ನು ಗಮನಿಸಬಹುದಾಗಿದೆ. ಉದಾ.ಗೆ :

ಒಡಲೊಳೆ ಜೀವಮಿರ್ದ್ದುಗಡ ಸಂಚಿಸುತಿಪ್ಪುದು ಪುಣ್ಯಪಾಪಮಂ
ಗಡ ಬಱಿಕತ್ತ ಬೇಱ ಪೆಱ ತೊಂದೊಡಲೊಳ್ ಗಡ ತಾನೆ ನಿಂದೊಡಂ
ಬಡಿಪುದು ಧರ್ಮಕರ್ಮ್ಮಫಲಮಂ ಗಡ ಸತ್ತನೆ ಮತ್ತೆ ಪುಟ್ಟುವಂ
ಗಡ ಪುಸಿಕಾಣ ಡಂಬಮಿದು ಖೇಚರ ನೀನಿದನೆಂತು ನಂಬಿದೋ (II– ೮)

ತಲೆವಱಿದುಟ್ಟುದಿಕ್ಕಿ ಸುರಲೋಕಸುಖಂಗಳ ನುಣ್ಪೆನೆಂಬ ಬ
ತ್ತಲಿಗರ ಮಾತುಗೊಳ್ಳದಿರು ಬಾಳ್ವಿನಮಿಂದ್ರಿಯ ವರ್ಗದಿಚ್ಛೆಯಂ
ಸಲಿಸಿ ಬಸಂತದೊಳ್ ಕಳಿಕೆಗರ್ಚಿದ ಕೋಗಿಲೆಯಂತೆ ಬಿಚ್ಚತಂ
ನಲಿವುದು ಕಂಡರಾರ್ ಮಱು ಭವಂಗಳನಿಲ್ಲಿ ವಿಯಚ್ಚರೇಶ್ವರ (II-೯)

ಎಂಬೆಡೆಗಳಲ್ಲಿ ಚಾರ್ವಾಕದರ್ಶನದ ಸಾರವು ಮೂಡಿನಿಂತಿದೆ. ಎದುರಾಳಿಗಳ ಪಟ್ಟುಗಳನ್ನು ಮಂಡಿಸುವಾಗಲೂ ಕವಿ ಜಾಗೃತನಾಗಿ ಸಮತೋಲನವನ್ನು ಕಾಪಾಡಿಕೊಂಡು ಬಂದಂತೆ ಕಾಣುತ್ತದೆ. ಇಲ್ಲದೆ ಇದ್ದರೆ ಸ್ವಯಂಬುದ್ಧನ ವಾದಸರಣಿಗೆ, ಗೆಲುವಿಗೆ ಬೆಲೆಯಾದರೂ ಎಲ್ಲಿ?

ಈ ಸಂದರ್ಭದಲ್ಲಿ ವಿಮರ್ಶಕರೊಬ್ಬರು ಹೇಳಿರುವ ಮಾತುಗಳು ಗಮನಾರ್ಹವಾಗಿ ಕಂಡುಬರುತ್ತವೆ : " 'ಒಡಲೊಳ್ ಜೀವಮಿರ್ದು ಗಡ....ತಲೆವರಿದುಟ್ಟುದಿಕ್ಕಿ.....' ಇತ್ಯಾದಿ ಮಾತುಗಳ ಅಧಿಕೃತ ಧಾಟಿ ನೋಡಿದರೆ ಪಂಪ ಜಿನಸೇನನ ಹಾಗೆ ನಿಶ್ಚಿತ ಸ್ಥಿರದಿಂದ ಹೇಳೊಕಾಗದೆ ನಿಜವನ್ನು ಶೋಧಿಸ್ತಾ ಇದಾನೆ ಅನ್ನಿಸುತ್ತದೆ" [೫] ಎಂಬ ಮಾತುಗಳು ಸತ್ಯದೂರವಾದವುಗಳಾಗಿವೆ. ಮೇಲಿನ ಮಾತುಗಳು ಪಂಪನ ಅಸ್ಥಿರ ಮನೋಭಾವದಿಂದ ಬಂದವುಗಳಲ್ಲ, ಸಂಘರ್ಷವಾದುವಲ್ಲ. ಜೀವಿ ಲೌಕಿಕ ನೆಲೆಗಟ್ಟಿನ ಬುನಾದಿಯಲ್ಲಿ ಅರಳಿ ನಿಂತು ಶಾಶ್ವತ ನೆಲೆಯಾದ ಅಲೌಕಿಕತೆಯತ್ತ ಮುಖಮಾಡಿ ನಿಲ್ಲುವ ಒಂದು ಸಾಮರಸ್ಯದ ದೃಷ್ಟಿ ಪಂಪನದು. ಅದನ್ನು ಕಾವ್ಯದುದ್ದಕ್ಕೂ ಕಾಣುತ್ತೇವೆ. ಇಲ್ಲಿ ವಸ್ತುತಃ ಮೇಲಿನ ಪದ್ಯಗಳು ಬಂದಿರುವುದು ಆಯಾ ಮತೀಯ ದೃಷ್ಟಿಕೋನಗಳ ಉತ್ತಮ ನಿರೂಪಣೆಯೇ

ಹೊರತು ಪಂಪನ ಸಂಘರ್ಷ ಮನೋಭಾವವನ್ನು ವ್ಯಕ್ತಪಡಿಸುವಂತಹವಲ್ಲ ಎಂಬುದನ್ನು ಗಮನಿಸಬೇಕು.

ಚಾರ್ವಾಕವಾದದ ಮುಂದಿನ ವಚನಭಾಗದಲ್ಲಿ ಬಂದಿರುವ ವಿಜ್ಞಾನವಾದದ ನಿರೂಪಣೆ ವಿದ್ವತ್ಪೂರ್ಣವಾಗಿದೆ. ಕವಿಗೆ ಸಂಸ್ಕೃತ ಪಾಂಡಿತ್ಯ ಪ್ರದರ್ಶನವೇ ಮೇಲುಗೈಯಾದಂತೆ ತೋರುತ್ತದೆ.

ಎದುರಾಳಿಗಳಾದ ಶತಮತಿಯಾದ್ಯರ ಪಟ್ಟು ಸಾಮಾನ್ಯವಾದುದೇನಲ್ಲ. ಅವರನ್ನು ವಾದದಲ್ಲಿ ಗೆದ್ದ ವಾದಿಮಲ್ಲ ಸ್ವಯಂಬುದ್ಧ. ಜೀವತತ್ತ್ವವನ್ನು ಮಂಡಿಸಲು ಸ್ವಯಂಬುದ್ಧನು ನಾನಾ ವಾಗ್ಧೋರಣೆಗಳ ಜೊತೆಗೆ ಅರವಿಂದ, ದಂಡಕ, ಸಹಸ್ರಬಲ, ಶತಬಲರ ಕಥೆಗಳನ್ನು ಹೇಳುವನು. ಇವುಗಳಲ್ಲಿ ಅರವಿಂದ ಮತ್ತು ದಂಡಕರ ವೃತ್ತಾಂತ ಕಥಾರೂಪವಾಗಿ ಬಂದಿದ್ದರೆ, ಸಹಸ್ರಬಲ ಮತ್ತು ಶತಬಲರ ವೃತ್ತಾಂತ ಕೇವಲ ವರದಿರೂಪದಲ್ಲಿ ಬರುತ್ತದೆ.

"ಮೂಲದಲ್ಲಿ ಇಷ್ಟರ ಮಟ್ಟಿಗೆ ಕಂಡುಬಾರದ, ಶಕ್ತಿಶಾಲಿಯಾದ ಈ ಪ್ರತಿವಾದ ಆಧುನಿಕರನ್ನು ಆಕರ್ಷಿಸುವ ಮಟ್ಟಿಗೆ ಆಕರ್ಷಕವಾಗಿದೆ. ಪ್ರತಿವಾದವನ್ನು ಸಮರ್ಥವಾಗಿ ನಿರೂಪಿಸಿ, ಸ್ವಪಕ್ಷಕ್ಕೆ ಗೆಲವು ದೊರಕಿಸುವ ಯತ್ನ ಕವಿಯದು. ಈ ದಿಕ್ಕಿನಲ್ಲಿ ಪ್ರತಿವಾದಿಗಳ ವಾದವನ್ನು ನಿರಾಕರಿಸಿ ಸ್ವಯಂಬುದ್ಧನು ಸುದೀರ್ಘವಾಗಿ ಹೂಡಿದ ತರ್ಕಸರಣಿ, ನಿರೂಪಿಸಿದ ದೃಷ್ಟಾಂತ ಕಥೆಗಳು ಕಾವ್ಯದಲ್ಲಿ ಏಕಮುಖವಾದ ತ್ವರಿತಗತಿಯನ್ನು, ಕಾವ್ಯದ ರಸವನ್ನು ಬಯಸುವವರಿಗೆ ಅಷ್ಟು ಹಿಡಿಸದೆ ಹೋಗಬಹುದು. ಆದರೆ ಜಿನಧರ್ಮದ ಅಗ್ಗಳಿಕೆಯನ್ನು ಎತ್ತಿಹಿಡಿಯುವ ಈ ಸಂದರ್ಭವನ್ನು ಕವಿ ಸರಿಯಾಗಿ ಉಪಯೋಗಿಸಿಕೊಳ್ಳದೆ ಬಿಡುವುದಿಲ್ಲ." [೬]

## ಉತ್ತರಕಾಲೀನ ಕಾವ್ಯಗಳು

ಈ ದಾರ್ಶನಿಕತೆಯ ನಿರೂಪಣೆಯ ಪ್ರಸಂಗವನ್ನು ಉತ್ತರಕಾಲೀನ ಕವಿಗಳು ನಾಮಮಾತ್ರವಾಗಿ ಸೂಚಿಸಿ ಕೈಬಿಟ್ಟಿದ್ದಾರೆ. ಆದಿಪರಮೇಶ್ವರನ ಯಕ್ಷಗಾನದಲ್ಲಿ,ಈ ಪ್ರಸಂಗದಲ್ಲಿ ಪಂಪನ ಅನುಕರಣೆಯಿದ್ದು, ಅಲ್ಲಿಯ ಅಭಿಪ್ರಾಯಗಳಿಗೆ ಚ್ಯುತಿಬಾರದಂತೆ ಇದನ್ನು ಸಂಗ್ರಹಿಸಲಾಗಿದೆ.

ಕುಲ, ರೂಪು, ಆಯುಸಂಪದ, ಇಂದ್ರಭೋಗ, ಸೌಂದರ್ಯ, ರಾಜೇಂದ್ರ ವೈಭವಾದಿಗಳು

> ಮುನ್ನ ಜಿನೇಂದ್ರ ಧರ್ಮವ ನಂಬಿದಲ್ಲದೆ | ಮುನ್ನ ಸಂಪದ ತನ್ನ ತಾ ಬಹುದೆ
> . . . ನೃಪತಿ ಶ್ರೀಜಿನ ಚರಣವ ನೆರೆನಮ್ಮಿದಾನಪೂಜೆಯನೆಸಗ್ಗೆ

ಎಂಬುದು ಸ್ವಯಂಬುದ್ಧನ ಉಪದೇಶ. ಸ್ವಯಂಬುದ್ಧ ನಿರೂಪಿಸಿದ ದಾನ, ಪೂಜೆ ಶೀಲೋಪವಾಸಾದಿ ಜಿನಧರ್ಮಸ್ವರೂಪವನ್ನು ಮಿಥ್ಯಾಮತಿಗಳಾದ ಮಹಾಮತಿ, ಸಂಭಿನ್ನಮತಿ, ಶತಮತಿಗಳು ಖಂಡಿಸಿದ ಬಗೆಯನ್ನು ಕವಿ ಎಂಟು ಪದ್ಯಗಳಲ್ಲಿ ವಿವರಿಸಿದ್ದಾನೆ. ಅವುಗಳಲ್ಲಿ ಕೆಲವು ಹೀಗಿವೆ.

ಕಂಜಮುಖಿಯರ ಭೋಗರಂಜನೆಗೆ ಸಾಟಿಬಹ |
ಸಂಜೀವನವು ಬೇರೆ ರಂಜಿಪುದೆ ನೃಪತಿ |
ನಂಬಿರುವ ಸತಿಸುತರ ಹಂಬಲನು ಪರಿದು ದಿ |
ಗಂಬರನುಮಾಗುವುದು ಸಂಭ್ರಮವೆ ನೃಪತಿ ||
ನಿನ್ನ ಸಂಪದ ನೋಡಲಾರದೆ ಛಿನ್ನಭಿನ್ನವ ಮಾಡಿಕೆಡಿಸುವ |
ಚುನ್ನ(ಛಲ್ಲ)ಕರ ನುಡಿವಿಡಿಯದಿರ ಪ್ರಸನ್ನನಿಧಿಯೆ ||
ಬೆತ್ತಲಿಗರ್ನುಡಿಗೇಳಿ ರಾಜ್ಯಸಂಪತ್ತ ತೊರೆದೀಡಾಡಿ ಜ್ಯೋಗಿಯಾ |
ಗ್ಯತ್ತ ಪರದೇಶತ್ವಮೊಪ್ಪುದು ಯತ್ತಣೆರವು?

ಹೀಗೆ ಬಗೆಬಗೆಯಾಗಿ ಮಹಾಮತಿ ಮೊದಲಾದ ಮಂತ್ರಿಗಳು ತಮ್ಮ ವಾದಸರಣಿಯನ್ನು ಉಪದೇಶಾತ್ಮಕ ರೀತಿಯಲ್ಲಿ ಮಹಾಬಲನ ಮುಂದೆ ಒಡ್ಡುತ್ತಾರೆ. ಕವಿ ಸನ್ನಿವೇಶಕ್ಕೆ ಎಷ್ಟು ಬೇಕೋ ಅಷ್ಟು ಎಂಬಂತೆ ವಿವರಿಸಿರುವ ಧಾಟಿ ಗಮನಾರ್ಹವಾಗಿದೆ.

ಅರವಿಂದರಾಜನ ಕಥೆ : ಅರವಿಂದನೆಂಬ ವಿದ್ಯಾಧರ ರಾಜನು ದಾಹಜ್ವರದಿಂದ ಬಳಲಿ, ತನ್ನ ಮೇಲೆ ಬಿದ್ದ ರಕ್ತದ ಹನಿಯಿಂದ ತಂಪನ್ನು ಪಡೆದು, ರೌದ್ರಧ್ಯಾನದಿಂದೊಡಗೂಡಿ ರಕ್ತದ ಮಡುವಿನಲ್ಲಿ ಮೀಯಬೇಕೆಂಬ ಬಯಕೆಯುಳ್ಳವನಾಗಿ ತನ್ನ ಮಗನಿಗೆ ರಕ್ತದ ಮಡುವನ್ನು ನಿರ್ಮಿಸಲು ಆಜ್ಞಾಪಿಸಿದನು. ಮಗನು ಪಾಪಭೀರುವಾಗಿ, ಕೃತಕ ರಕ್ತಜಲವನ್ನು ತುಂಬಿಸಿದನು. ಅದರಲ್ಲಿ ಕ್ರೀಡಿಸುವಾಗ ಈ ವಿಚಾರವು ಅರವಿಂದ ರಾಜನಿಗೆ ತಿಳಿಯಿತು. ಅವನು ಕೋಪಗೊಂಡು ಮಗನನ್ನೇ ಇರಿಯಲು ಹೋಗಿ ಬಿದ್ದು ಸತ್ತನು. ನರಕವನ್ನು ಹೊಂದಿದನು. ರೌದ್ರಧ್ಯಾನದ ಫಲದ ನಿದರ್ಶನ ರೂಪದ ಕಥೆಯಾಗಿ ಇದು ಬರುತ್ತದೆ.

**ಆದಿಪುರಾಣ–ಪೂರ್ವಪುರಾಣ** : ಜೀವವೆಂಬುದಿದೆ. ತಾನು ಮಾಡಿದ ಪುಣ್ಯ-ಪಾಪ ಕರ್ಮ ಫಲಗಳಿಗನುಗುಣವಾಗಿ ಅವುಗಳನ್ನು ತಾನೇ ಭೋಗಿಸಬೇಕಾಗುತ್ತದೆ ಎಂಬುದಕ್ಕೆ ಅರವಿಂದರಾಜನ ಶ್ರುತಾನುಭೂತ ಕಥೆಯನ್ನು ಸಾಕ್ಷಿಯಾಗಿ ತೆಗೆದುಕೊಂಡು, ಸ್ವಯಂಬುದ್ಧನು ನಿರೂಪಿಸುವ ಕಥೆಯಿದು.

ಖೇಚರರಾಜನಾದ ಅರವಿಂದ ತನ್ನ ಮಕ್ಕಳಾದ ಹರಿಶ್ಚಂದ್ರ-ಕುರುವಿಂದರೊಡನೆ ಸುಖವಾಗಿ ಇದ್ದನು. ಆದರೆ ಈ ಸುಖ ಎಷ್ಟು ಕಾಲ ಉಳಿದೀತು? ಪುಣ್ಯಪುರುಷರಿಗೇ ಇದು ಅಶಾಶ್ವತ ಎಂದ ಮೇಲೆ ಇನ್ನು ಅರವಿಂದನ ಪಾಡೇನು? ಅರವಿಂದರಾಜ 'ಬಹ್ವಾರಂಭಸಂರಂಭ ರೌದ್ರಧ್ಯಾನ ಪರಿಣತ; ಅಲ್ಲದೆ ಉಪಾರ್ಜಿತ ನರಕಾಯುಷಿ' ; ಅಷ್ಟೇ ಅಲ್ಲ ಮೃತ್ಯುವನ್ನು ಹತ್ತಿರದಲ್ಲಿಯೇ ಹೊಂದಿರುವವನು.

ಸುಖದ ಸುಪ್ಪತ್ತಿಗೆಯಲ್ಲಿದ್ದ ವಿದ್ಯಾಧರರಾಜನ ಸ್ಥಿತಿ ಹಾಗೆಯೇ ಉಳಿಯಲಿಲ್ಲ. ಪಾಪ ಕರ್ಮದ ಪ್ರತಿಫಲವೋ ಎಂಬಂತೆ 'ಉರಿಯಳುರ್ವಂತೆ ದಾಹಜ್ವರಂ ಅಳುರೆ; ಪೊರಳ್ದು ನಾಡೆಯುಂ ಕೊರಗಿದನಂದು ಅರವಿಂದಂ'. ಆತನ ಸ್ಥಿತಿ 'ಕೊಳದಿಂದ ಕರಿಪತಿ ಕಿಚ್ಚಿಕ್ಕೆ ಕೊರಗಿದ ಅರವಿಂದ'ದ ರೀತಿ ಆಯಿತು. ಮಲಯಮಾರುತವೇ ಆಗಲಿ, ಶ್ರೀಗಂಧ ಲೇಪನಾದಿಗಳೇ ಆಗಲಿ, ಆತನ ದಾಹಜ್ವರವನ್ನು ನಿವಾರಿಸದಾದವು. ಉಪಚರಿಸುವವರಲ್ಲಿ ಈತನದು ಒಂದೇ ಉಗ್ಗಡ. 'ಕುಳಿರ್ವ ತಿಳಿನೀರನುಡುಗದೆ ತಳಿ'; 'ತಳಿರಂ ಪಾಸು';

'ಜಳದೆಯಿಂ ಬೀಸು' ಎಂದು ಉಮ್ಮಳಿಸಿ, ಕಳವಳಿಸಿ, ತಳಮಳಕ್ಕೆ ಒಳಗಾದನು. ಪಾಪ ಕರ್ಮೋದಯದ ಸಮಯದಲ್ಲಿ ತನ್ನ ವಿದ್ಯೆಗಳೂ ಸಹಾಯಕ್ಕೆ ಬಾರದಾದಾಗ ಹಿರಿಯ ಮಗ ಹರಿಶ್ಚಂದ್ರನಿಗೆ ತನ್ನನ್ನು ಗಗನಗಾಮಿನೀವಿದ್ಯಾಸಹಾಯದಿಂದ ಉತ್ತರ ಕುರುವಿಗೆ ಬಿಡಲು ಹೇಳಿದನು. ಅಲ್ಲಿನ ಸುರತರುಗಳ ತಂಪಾದ ನೆರಳಿನಲ್ಲಿ, ಕಲ್ಪಲತೆಯ ಮಂಟಪ ಗಳಲ್ಲಿ, ಮಂದಾರವನ ಬೀದಿಗಳಲ್ಲಿ ಓಡಾಡಿ ತನ್ನ ದೇಹದ ಪರಿತಾಪವನ್ನು ಹೋಗ ಲಾಡಿಸಿಕೊಳ್ಳುವುದಾಗಿ ಹೇಳಿದನು. ಆದರೆ ಆತನಿಗೆ ಗಗನಗಾಮಿನೀ ವಿದ್ಯೆಯು ಸಹಾಯ ಮಾಡುವುದಿಲ್ಲವೆಂದು ನಿರಾಕರಿಸಿತು. ಅಷ್ಟರಲ್ಲಿ "ಪರಸ್ಪರ ಕಲಹ ಕಲುಷಿತ ಗೃಹಕೋ ಕಿಳಂಗಳೊಂದೊಂದು ತಿನೆ ಪನಿತ ಶೋಣಿತ ಬಿಂದುಗಳ್ ತನ್ನ ಮೆಯ್ಗೆ ಪಾಪ ಪರಿಪಾಕದಿಂ ತಣ್ಪಂ ಪಡೆಯೆ ಪರಮೌಷಧಮಂ ಪಡೆದೆನ್" ಎಂದುಕೊಂಡನು. ರಕ್ತಜಲ ದಿಂದ ಲೀಲಾಸರೋವರವನ್ನು ಬೇಗನೆ ಮಾಡೆಂದು ರಾಜನು ಆಜ್ಞೆಯಿತ್ತನು. ಮಗನು ಪಾಪಭೀರುವಾದುದರಿಂದ 'ನಿಸ್ತ್ರಿಂಶ ಕರ್ಮಕ್ಕೆ ಕೊಕ್ಕರಿಸಿದ'ನಾದರೂ ತಂದೆಯ ಉಪ ರೋಧದಿಂದ ಮನಸ್ಸಿಲ್ಲದ ಮನಸ್ಸುಳ್ಳವನಾಗಿ ಕಾಡಿಗೆ ಹೋದಾಗ ಅಲ್ಲಿದ್ದ ಮುನಿ ಗಳಿಂದ, ಅರವಿಂದನು ಸಾವಿಗೆ ಹತ್ತಿರನಾಗಿರುವನೆಂದೂ, ನರಕಾಯುಷ್ಯಬಂಧಿಯಾ ಗಿರುವನೆಂದೂ ತಿಳಿದು ಕರುಣರಸಾರ್ದ್ರಹೃದಯವುಳ್ಳವನಾಗಿ ಪ್ರಾಣಿಗಳನ್ನು ಕೊಲ್ಲ ಲಾರದೆ ಹಿಂದಿರುಗಿದನು. ಕೃತಕ ರಕ್ತಜಲದಲ್ಲಿ ಅರವಿಂದನು ಅನುರಾಗದಿಂದ ಇಳಿದು ಓಲಾಡುತ್ತಿರುವಾಗ ಜಲವನ್ನು ಮುಕ್ಕಳಿಸಿ ನೋಡಿದನು. "ಈ ಬೂತು ಎನ್ನಂ ಬಂಚಿಸಿ ದನ್" ಎಂದು ತೀರದ ನರಕಾಯುಷ್ಯವನ್ನು ನೆಱಪುವಂತೆ ಮುಳಿದು, "ವಿಘೂರ್ಣಮಾನ ಲೋಹಿತಲೋಚನಂ, ದಶನನಿಪೀಡಿತ ದಶನವಸನನ್, ಅಸಿಧೇನುಮಂ ಕಿೞ್ತು ನಡನಡ ನಡುಗಿ ತಡದಡಿಸುತ್ತುಂ ಇೞಿಯಲ್ ಪರಿವಾತಂ ವಾಪೀಸೋಪಾನಮನಡರುತ್ತುಂ ಜಾಱುವರಿದು ಕೆಡೆದುರದೊಳ್ ನಟ್ಟ ಸುರಿಗೆ ಬೆನ್ನೊಳ್ಮೂಡೆ" ಗತಜೀವಿತನಾದನು. ನರಕಕ್ಕೆ ಇಳಿದನು. ಇಲ್ಲಿ ರೌದ್ರಾವೇಶಗೊಂಡ ಅರವಿಂದನ ಪ್ರತಿಕ್ರಿಯೆಗಳು, ಕಣ್ಣುಗಳನ್ನು ಕೆಂಪಾಗಿಸಿಕೊಂಡು ಹಲ್ಲುಗಳನ್ನು ಕಡಿಯುತ್ತ ಕೋಪದ ಭರದಲ್ಲಿ ನಡನಡನಡುಗಿ ತಡಬಡಿಸುತ್ತ ಬರುವ ರೀತಿ, ಕೋಪದಿಂದ ಆತನು ಕಳೆದುಕೊಂಡ ವಿವೇಕ, ಇವೆಲ್ಲವನ್ನೂ ಪಂಪನು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾನೆ. ಕೋಪೋದ್ರೇಕಗೊಂಡ ಅರವಿಂದನ ಪ್ರತಿಯೊಂದು ಕ್ರಿಯೆಯ ಚಿತ್ರಮಾಲೆಯನ್ನು ನಮ್ಮ ಕಣ್ಮುಂದೆ ಕ್ರಮವಾಗಿ ಸುರುಳಿ ಬಿಚ್ಚಿದ್ದಾನೆ. ಅರವಿಂದನಿಗುಂಟಾದ ಘೋರಮನಃಸ್ಥಿತಿಯನ್ನು ಓದುಗರಿಗೆ ಅರಿವು ಮಾಡಿ ಸಿದ್ದಾನೆ.

ಅರವಿಂದನ ಕಥೆಯ ನಿರೂಪಣೆಯಲ್ಲಿ ಪಂಪನು ಪೂರ್ವಪುರಾಣವನ್ನು ಹೆಚ್ಚು ಅನುಸರಿಸಿದ್ದಾನಾದರೂ, ಅಲ್ಲಿಯ ಪಡಿಯಚ್ಚಲ್ಲ. ಅಲ್ಲಿಯ ಕಥೆಯ ಸೌಂದರ್ಯಕ್ಕೆ ಮತ್ತಷ್ಟು ಕಳೆಯೇರುವಂತೆ ಮಾಡಿದ್ದಾನೆ. ಉದಾಹರಣೆಗೆ ಅರವಿಂದನು ಮಾಡಿಸಿ ಕೊಳ್ಳುವ ಶೈತ್ಯೋಪಚಾರದ ರೀತಿ ಪೂರ್ವಪುರಾಣದಲ್ಲಿ ನಿರೂಪಣಾಮಾತ್ರವಾಗಿ ಬಂದಿ ದ್ದರೆ, ಪಂಪನಲ್ಲಿ ನಾಟಕೀಯ ಧಾಟಿಯಲ್ಲಿ ಬಂದಿದೆ. ಹಾಗೆಯೇ, ಅರವಿಂದನು ಕೋಪಗೊಂಡು ಮಗನನ್ನು ಕೊಲ್ಲಲು ಹೋಗುವ ದೃಶ್ಯವು, ಪಂಪನಲ್ಲಿ ಹೆಚ್ಚು ಪ್ರಭಾವ ಕಾರಿಯಾಗಿ ಬಂದಿದೆ.

ಕೆಲವೆಡೆ ಕಥಾಂಶಗಳಲ್ಲಿ ಗೌಣವ್ಯತ್ಯಾಸಗಳು ಕಂಡುಬರುತ್ತವೆ. ಪಂಪನಲ್ಲಿ ಗೃಹ ಕೋಗಿಲೆಗಳೆರಡು ಕಾದಾಡುವಾಗ ರಕ್ತದ ಹನಿ ಬಿದ್ದಿತೆಂದು ಬಂದಿದ್ದರೆ, ಪೂರ್ವಪುರಾಣ ದಲ್ಲಿ ಹಲ್ಲಿಗಳೆರಡು ಜಗಳವಾಡುವಾಗ ಹನಿಯು ಬಿದ್ದಿತೆಂದು ಹೇಳಲಾಗಿದೆ.

ಈ ಭಾಗದಲ್ಲಿ ಬರುವ ಗೃಹಕೋಗಿಲೆಗಳ, ಹಲ್ಲಿಗಳ ಕಚ್ಚಾಟವು ಪ್ರತಿಮಾರೂಪವಾಗಿ ಬಂದಂತಿದೆ. ಅರವಿಂದರಾಜನ ಮನದ ರೌದ್ರತಾಭಾವದ ಎಳೆ ಈ ಪ್ರಾಣಿಗಳ ಕಾದಾಟ ದಲ್ಲಿ ಅಡಗಿರುವಂತೆ ಕಂಡುಬರುತ್ತದೆ.

ಪಂಪನು ಕೆಲವೆಡೆ ನೇರವಾಗಿ ಪೂರ್ವಪುರಾಣದಲ್ಲಿ ಬರುವ ಮಾತುಗಳನ್ನು ತೆಗೆದು ಕೊಂಡಿರುವುದನ್ನು ಗಮನಿಸಬಹುದು. ಉದಾಹರಣೆಗೆ :

> ನರಕಾಯುರಪರ್ಯಾಪ್ತಂ ಪರ್ಯಾಪಿಪಯಿಷನ್ನಿವ |
> ದಧೇ ಸ ತುಗ್ವಧೇ ಚಿತ್ತಮಧೀಃ ಪಾಪೋದಧೇರ್ವಿಧುಃ || (ಪೂರ್ವಪು. V-೧೧೨)

ಪಾಪವೆಂಬ ಸಮುದ್ರಕ್ಕೆ ಚಂದ್ರನಂತಿರುವವನೂ ಬುದ್ಧಿಹೀನನೂ ಆದ ಆ ಅರವಿಂದ ರಾಜನು ಸಾಲದಂತಿರುವ ನರಕಾಯುಷ್ಯವನ್ನು ಪೂರ್ತಿಮಾಡುವುದಕ್ಕೋಸ್ಕರವೋ ಎಂಬಂತೆ ಮಗನ ವಧೆಯಲ್ಲಿ ಮನಸ್ಸುಮಾಡಿದನು. ನೆಱೆಯದ ನರಕಾಯುಷ್ಯಮಂ ನೆಱಪುವನೆಂಬಂತೆ (ಆದಿಪು. ಆಶ್ವಾಸ ii) ಅರವಿಂದನು ಸತ್ತನಂತರ ಆತನ ಮಗನಾದ ಕುರುವಿಂದನು ಶೋಚನೀಯ ಸ್ಥಿತಿ ಯನ್ನು ಹೊಂದಿದನೆಂದು ಹೇಳಿ ಅಲ್ಲಿಗೆ ಅರವಿಂದನ ವೃತ್ತಾಂತವನ್ನು ಪೂರ್ವಪುರಾಣದಲ್ಲಿ ಮುಗಿಸಲಾಗಿದೆ. ಪಂಪನು ಕುರುವಿಂದನ ವಿಚಾರ ವನ್ನು ಅರವಿಂದನ ಸಾವಿನನಂತರ ಅನಗತ್ಯವೆಂದು, ಅಷ್ಟೊಂದು ಮುಖ್ಯವಲ್ಲವೆಂದು ಕೈಬಿಟ್ಟಿರಬೇಕು.

**ಚಾವುಂಡರಾಯಪುರಾಣ :** ಚಾಮುಂಡರಾಯನು ಈ ಭಾಗದಲ್ಲಿ ಆದಿಪುರಾಣವನ್ನು ಅನುಸರಿಸಿರುವನೆಂಬುದಕ್ಕೆ ಎರಡು ಮುಖ್ಯ ಅಂಶಗಳ ಜೊತೆಗೆ ಆತನು ನೇರವಾಗಿ ಆದಿಪುರಾಣದಿಂದ ತೆಗೆದುಕೊಂಡಿರುವ ವಚನಭಾಗವೂ ಸಾಕ್ಷಿಯಾಗಿ ನಿಲ್ಲುತ್ತದೆ. ಚಾಮುಂಡರಾಯನು ಇಲ್ಲಿ ತೋರಿರುವ ಸ್ವೋಪಜ್ಞತೆಯೆಂದರೆ ಸಂಗ್ರಾಹಕತೆಯೊಂದೇ.

ಗೃಹಕೋಗಿಲೆಗಳ ಕಾದಾಟದಿಂದ ಬಿದ್ದ ರಕ್ತಬಿಂದುವಿನಿಂದ ಅರವಿಂದನ ದೇಹ ತಂಪಾದಂತೆ ಆಯಿತು ಎಂಬಲ್ಲಿ, ಅರವಿಂದನ ಮಗ ಕುರುವಿಂದನು ತಂದೆಯ ಆದೇಶ ದಂತೆ ಮೃಗಾವಾಸಕ್ಕೆ ಹೋಗಿ ಅಲ್ಲಿ ಮುನಿಗಳಿಂದ ತಂದೆಯ ನರಕಾಯುಷ್ಯದ ಬಗೆಗೆ ತಿಳಿದುಕೊಂಡನು ಎಂಬಲ್ಲಿ ಆದಿಪುರಾಣವನ್ನು ಕವಿ ಅನುಸರಿಸಿದ್ದಾನೆಂದು ತಿಳಿದು ಬರುತ್ತದೆ. ಈ ಎರಡು ಅಂಶಗಳು ಪೂರ್ವಪುರಾಣದಲ್ಲಿ ಸ್ವಲ್ಪ ಬೇರೆಯಾಗಿ ಬರುವುದನ್ನು ಗಮನಿಸಬಹುದು. ಪೂರ್ವಪುರಾಣದಲ್ಲಿ ಕುರುವಿಂದನು ಕಾಡಿಗೆ ಹೋದನೆಂಬ ಉಲ್ಲೇಖ ಬರುವುದಿಲ್ಲ. ದಿವ್ಯಜ್ಞಾನಿಗಳ ಮಾತಿನಿಂದ ತಂದೆಯ ವಿಷಯವನ್ನರಿತನೆಂದು ಮಾತ್ರ ಬರುತ್ತದೆ.

ಪಂಪನಿಂದ ನೇರವಾಗಿ ತೆಗೆದಿಟ್ಟಿರುವ ಭಾಗಕ್ಕೆ ಉದಾಹರಣೆ :

> ಚಂದನ ದ್ರವ್ಯಾದಿ ಶೀತಲಕ್ರಿಯೆಯುಂ ಸಂತಾಪಮನೆಂತುಮಾಱಿಸಲಾಱದಿರೆ ಪುಣ್ಯ ಕ್ಷಯದೊಳ್ ತನ್ನ ವಿದ್ಯೆಗಳುಂ ಬೆಸೆಗಯ್ಯದಿರೆ ಹರಿಶ್ಚಂದ್ರನಂ ಕರೆದು ದುಸ್ಸಹಾವಸ್ಥೆ ಯನಱಿಪಿ ನೀನೆನ್ನಂ ವಿದ್ಯೆಯಿಂದುತ್ತರ ಕುರುವನ್ನೆಯ್ದಿಸು . . . . (ಚಾವುಂಪು. ಪುಟ ೧೮-೧೯)

ಅಂತನೇಕ ಪ್ರಕಾರ ಶೀತಳ ಕ್ರಿಯೆಗಳಿಂ ಶರೀರ ಸಂತಾಪಮನೆಂತುಂ ಮಾಣಿಸಲಾಱದೆ ಪುಣ್ಯಕ್ಷಯದೊಳ್ತನ್ನ ವಿದ್ಯೆಗಳುಂ ತನಗೆ ಬೆಸಕೆಯ್ಯದಿರೆ ಹರಿಶ್ಚಂದ್ರನೆಂಬ ತನ್ನ ಹಿರಿಯ ಮಗನಂ ಕರೆದು ತನ್ನ ದುಸ್ಸಹಾವಸ್ಥಾಂತರಮನಱಿಪಿ ನೀನೆನ್ನಂ ನಿನ್ನ ಗಗನಗಾಮಿನೀ ವಿದ್ಯೆಯಿನುತ್ತರ ಕುರುವನ್ನೆದಿಸು (ಆದಿಪು, ಆಶ್ವಾಸ ii).

**ಹಸ್ತಿಮಲ್ಲನ ಪೂರ್ವಪುರಾಣ** : ಈ ದೃಷ್ಟಾಂತ ಪ್ರಸಂಗವನ್ನು ಹಸ್ತಿಮಲ್ಲನು ಕಿರಿದರಲ್ಲಿ ನೇರವಾಗಿ ಹೇಳಿ ಮುಗಿಸಿದ್ದಾನೆ. ಪಾಪವ್ಯಾಪಾರದಿಂದ ಅರವಿಂದನು ನರಕಾಯುಷ್ಯವನ್ನು ಕಟ್ಟಿಕೊಳ್ಳುತ್ತಾನೆ ಎಂದಿದೆ. ಬಹ್ವಾರಂಭ-ರೌದ್ರಧ್ಯಾನದ ಪರಿಣಾಮಗಳ ವಿವರವಿಲ್ಲ. ಜಿನಸೇನರ ಪೂರ್ವಪುರಾಣದಲ್ಲಿರುವಂತೆಯೇ ಇಲ್ಲಿ ಹಲ್ಲಿಗಳ ಕಾದಾಟದ ಪ್ರಸಂಗವು ಬರುತ್ತದೆ. ಸಂಗ್ರಹವಾಗಿ ಕಥೆಯನ್ನು ಮುಗಿಸಿರುವುದರಿಂದ, ಇದರ ಮೂಲ ಆಕರವನ್ನು ನಿರ್ಧರಿಸುವುದು ಕಷ್ಟವಾದರೂ, ಹಲ್ಲಿಗಳ ನಿರೂಪಣೆಯೊಂದರಿಂದ ಮಾತ್ರ ಪೂರ್ವಪುರಾಣವು ಇದರ ಆಕರವಿರಬಹುದೆಂದು ಊಹಿಸಬಹುದಾಗಿದೆ.

**ಪುಣ್ಯಾಸ್ರವದ ಆದೀಶ್ವರರ ಕಥೆ** : ಇದರಲ್ಲಿ ಅರವಿಂದನ ವೃತ್ತಾಂತವು ಇತರ ಆದಿತೀರ್ಥಂಕರ ಚರಿತ್ರೆಗಳಲ್ಲಿ ಬರುವಂತೆ ಇದ್ದರೂ, ಇಲ್ಲಿಯ ನಿರೂಪಣಾವಿಧಾನ ದಲ್ಲಿಯ ಕೆಲವು ಆಂತರಿಕ ವ್ಯತ್ಯಾಸಗಳನ್ನು ಪರಿಶೀಲಿಸಿದಾಗ, ಉಳಿದ ಕಾವ್ಯಗಳಿಗಿಂತ ಇದು ಭಿನ್ನವಾಗಿರುವುದನ್ನು ಗಮನಿಸಬಹುದಾಗಿದೆ.

ಈ ದೃಷ್ಟಾಂತ ಕಥೆ ನೇರವಾಗಿ ಅರವಿಂದನ ದಾಹಜ್ವರ ವೃತ್ತಾಂತದಿಂದ ಪ್ರಾರಂಭ ವಾಗುತ್ತದೆ. "ಬೇಸಗೆಗಾಲದಲ್ಲಿ ದಳ್ಳುರಿವೆರಸಿರ್ದ ದಾವಾಶಿಖಿಯಂತೆ" ದಾಹಜ್ವರವು ಇರಲು, ತನ್ನ ಅಗ್ರ ತನುಜನನ್ನು ಕುರಿತು "ಹರಿಶ್ಚಂದ್ರಾ, ಎನ್ನ ಕೊಂಡೊಯ್ದು ಶೀತಲಸ್ಥಾನದೊಳಿರಿಸಿ ಜೀವಮಂ ಕಾವುದು" ಎಂದು ಕೇಳಿಕೊಂಡಾಗ ಜಲವರ್ಷ ವಿದ್ಯೆ ಗಳನ್ನು ಮಗನು ತಂದೆಯಲ್ಲಿಗೆ ಕಳಿಸಿಕೊಟ್ಟನು (ಉಳಿದ ಕಾವ್ಯಗಳಲ್ಲಿ ಬರುವಂತೆ ಉತ್ತರ ಕುರುವಿನ ಉಲ್ಲೇಖ ಇಲ್ಲಿಲ್ಲ). ಅವು ಅರವಿಂದರಾಜನಿಗೆ ಶಾಂತಿಯನ್ನುಂಟುಮಾಡಲು ಶಕ್ತಿಯಿಲ್ಲದೆ ಹಿಂದಿರುಗಿದವು. ಗೃಹಕೋಗಿಲೆಗಳೆರಡು ಕಾದಾಡುವಾಗ ಅರವಿಂದನ ಮೇಲೆ ರಕ್ತಬೀಳಲು, ಅವನ ದೇಹ ತಂಪಾಯಿತು (ಆದಿಪುರಾಣ ಹಾಗೂ ಚಾವುಂಡರಾಯ ಪುರಾಣಗಳಲ್ಲಿ ಮಾತ್ರ ಗೃಹಕೋಗಿಲೆಗಳ ಉಲ್ಲೇಖ ಬರುತ್ತದೆ. ಉಳಿದೆಡೆ ಹಲ್ಲಿಗಳ ಉಲ್ಲೇಖ ಬರುತ್ತದೆ). ತಂದೆಯು ರೋಗನಿವಾರಣೆಯ ಮಾರ್ಗವನ್ನು ಹೇಳಲಾಗಿ ನೆತ್ತರ ಖೇಡ ಕುಳಿಯನ್ನು ಮಾಡುವುದಕ್ಕೋಸ್ಕರ ಪ್ರಾಣಿಗಳನ್ನು ಹಿಡಿದುತರಲು ಕಾಡಿಗೆ ಹೋದನು. ಜಿನಸೇನರ ಪೂರ್ವಪುರಾಣದಲ್ಲಿ ಮತ್ತು ಕನ್ನಡ ಆದಿತೀಥಂಕರ ಚರಿತ್ರ ಗಳಲ್ಲಿ ಮನಸ್ಸಿಲ್ಲದ ಮನಸ್ಸಿನಿಂದ ಮಗನು ಆ ಕೆಲಸಕ್ಕೆ ತೊಡಗುವನೆಂಬ ನಿರೂಪಣೆ ಬರುತ್ತದೆ. ಇದರಲ್ಲಿ ಹಾಗಲ್ಲ. ಮಗ ಕುರುವಿಂದನು ಉತ್ಸಾಹದಿಂದಲೇ ಮೃಗಗಳಿದ್ದೆಡೆಗೆ ಹೋಗಿ ಹಾಸುಬಲೆ, ಗೂಟದ ಬಲೆ, ಆಸೆ ಬಲೆ, ತಡಿಕೆ ಬಲೆ ಹೀಗೆ ನಾನಾ ವಿಧದ ಬಲೆಗಳನ್ನು ಒಡ್ಡಿ ಮೃಗಗಳನ್ನು ಹಿಡಿಯಲು ಉದ್ಯುಕ್ತನಾಗಿರುವಾಗ ಜೈನಮುನಿಗಳನ್ನು ಕಂಡನು.

ಪಾಸುವಲೆ ಗೂಂಟವಲೆ ಮ |
ತ್ತಾಸೆಯ ಬಲೆ ತಡಿಕೆವಲೆಗಳೆಂಬಿವನವನ

ತ್ಯಾಸುರಮಾಗಿರೆ ಸವೆಯ |
ಲ್ಯಾಸಮಯದೊಳೊರ್ವ ಜೈನಮುನಿಪತಿ ಕಂಡಂ (X-೩೭)

ಅವರು ಈ ಬಲೆಗಳನ್ನೆಲ್ಲಾ ನಿವಾರಿಸಿ, ನಿನ್ನ ತಂದೆ ಅಲ್ಪಾಯುಷಿ, ನರಕಕ್ಕೆ ಹೋಗುವವನಿದ್ದಾನೆ ಎನ್ನಲು ಮಗನಿಗೆ ಆಶ್ಚರ್ಯ. "ನಮ್ಮ ತಂದೆ ಜ್ಞಾನವಂತಂ ನರಕಕ್ಕೆಂತು ಪೋಪನ್" ಎಂದು ಪ್ರಶ್ನಿಸಿದಾಗ, ಮುನಿಗಳು 'ನಿನ್ನ ತಂದೆಯ ಬಳಿಗೆ ಹೋಗಿ ಅಡವಿಯಲ್ಲಿ ಮೃಗಗಳೇ ಅಲ್ಲದೆ ಮತ್ತೆ ಇನ್ನೂ ಯಾವ ವಸ್ತು ಉಂಟೆಂದು ನೀನು ಕೇಳಿದಾಗ, ಮುನಿಗಳ ಇರವಿನ ವಿಷಯವನ್ನು ಹೇಳಿದರೆ ನಿನ್ನ ತಂದೆ ಜ್ಞಾನಿ ಎಂದು ತಿಳಿ' ಎಂದು ಹೇಳಿದನು. ಅದರಂತೆ ಹರಿಶ್ಚಂದ್ರನು ತಂದೆಯ ಬಳಿಗೆ ಹೋಗಿ ಕೇಳಿದಾಗ, ಆತನು 'ಮೃಗಗಳ ವಿಚಾರ ಹೊರತು ಮತ್ತೇನೂ ಅರಿಯೆ' ನೆಂದನು. ಈ ವಿವರಗಳು ಪುಣ್ಯಾಸ್ರವದ ಆದೀಶ್ವರರ ಕಥೆಯಲ್ಲಿ ಮಾತ್ರ ಕಂಡುಬರುತ್ತವೆ. ಉಳಿದ ವಿವರಗಳು ಅರವಿಂದನ ಕಥೆಯ ರೂಪರೇಖೆಯಂತೆಯೇ ಇವೆ.

ಹರಿಶ್ಚಂದ್ರನ ಪಾತ್ರಚಿತ್ರಣದಲ್ಲಿ ಸ್ವಲ್ಪ ವ್ಯತ್ಯಾಸವನ್ನು ಈ ಕಾವ್ಯದಲ್ಲಿ ಗಮನಿಸಬಹುದಾಗಿದೆ. ತಂದೆಯ ಬಗೆಗೆ ಹರಿಶ್ಚಂದ್ರನಿಗೆ ವಿಶೇಷ ಅಭಿಮಾನ. ತಂದೆಯ ರೋಗ ನಿವಾರಣೆಗೆ ಹಿಂದುಮುಂದು ನೋಡದೆ ಅವನ ಮಾತಿನಂತೆ ರಕ್ತವನ್ನು ಮಡುವಿನಲ್ಲಿ ತುಂಬಿಸಲು ಸಿದ್ಧನಾದುದು ಮತ್ತು ಮುನಿಗಳಲ್ಲಿ ತನ್ನ ಜ್ಞಾನವಂತ ತಂದೆ ನರಕಕ್ಕೆ ಹೋಗುವುದಾದರೂ ಹೇಗೆ ಸಾಧ್ಯ? ಎಂದು ಕೇಳುವ ಪ್ರಶ್ನೆ ಇವುಗಳು ಈ ಮಾತಿಗೆ ಪುಷ್ಟಿ ಕೊಡುತ್ತವೆ.

ಈ ಕೆಲವು ಹೊಸ ವಿವರಗಳನ್ನು ಗಮನಿಸಿದಾಗ ಕವಿಗೆ ಬೇರೆಯಾದ ಆಕರವು ಇದ್ದಿರಬೇಕೆಂದು ಊಹಿಸಬಹುದಾಗಿದೆ.

**ಪುರುದೇವ ಚರಿತ :** ಪೂರ್ವಪುರಾಣ, ಆದಿಪುರಾಣ ಮತ್ತು ಚಾವುಂಡರಾಯಪುರಾಣಗಳಿಗೆ ಹೆಚ್ಚು ಅನುವರ್ತಿಯಾಗಿರುವಂತೆ ಪುರುದೇವ ಚರಿತ್ರೆಯು ಕಂಡುಬರುತ್ತದೆ.

ಗೃಹಗೋಧಿಕಗಳು ಕಾದಾಡಿದಾಗ ರಕ್ತದ ಬಿಂದುವು ಅರವಿಂದನ ಮೇಲೆ ಬಿದ್ದಿತೆನ್ನುವಾಗ ಕವಿ ನೇರವಾಗಿ ಪೂರ್ವಪುರಾಣದ ಪದವನ್ನೇ ತೆಗೆದುಕೊಂಡಿದ್ದಾನೆ. ಸಂಗ್ರಾಹಕತೆಯ ದೃಷ್ಟಿಯಿಂದ ಚಾವುಂಡರಾಯಪುರಾಣ ಮತ್ತು ಹಸ್ತಿಮಲ್ಲನ ಪೂರ್ವಪುರಾಣಗಳನ್ನು ಹೋಲುತ್ತದೆಯಾದರೂ, ಶಾಬ್ದಿಕವಾಗಿ ಹೆಚ್ಚು ಚಾವುಂಡರಾಯಪುರಾಣಕ್ಕೆ ಹೋಲುತ್ತದೆ. ಈ ಭಾಗದಲ್ಲಿ ಚಾವುಂಡರಾಯಪುರಾಣವು ಆದಿಪುರಾಣಕ್ಕೆ ಋಣಿಯಾಗಿರುವುದನ್ನು ಗಮನಿಸಿದ್ದೇವೆ. ಹೀಗಾಗಿ ಶಾಂತಿಕೀರ್ತಿಯೂ ಸಹ ಈ ಭಾಗದಲ್ಲಿ ಹೆಚ್ಚು ಋಣಿಯಾಗಿರುವುದು ಇವರೆಡು ಪುರಾಣಗಳಿಗೆ.

ಠಕ್ಕಮಾಡಿದನಿವನಿಕ್ಕುವೆನೆನುತಾಗ | ದೊಕ್ಕನೆ ಸುರಗಿಯ ಕಿಳ್ತು |
ಪೊಕ್ಕ ಬಾವಿಯನೇರುವಲ್ಲಿ ಬೀಳಲು ತನ್ನ | ದೊಕ್ಕೆಯೊಳ್ ಕೂಡೆ ಸುರಗಿಯು || (I-೫೭)

ಹಾಗೆ ನೆಟ್ಟಸುರಗಿಯು ಅವನ ಪ್ರಾಣವನ್ನು ತೆಗೆದುಕೊಂಡಿತು. ಅರವಿಂದನು ನರಕಕ್ಕೆ ಹೋದನೆಂಬ ನಿರೂಪಣೆ ಮುಂದೆ ಬರುತ್ತದೆ.

ಶಾಂತಿಕೀರ್ತಿಯ ಪುರುದೇವ ಚರಿತವು ಪೂರ್ವಪುರಾಣ, ಚಾವುಂಡರಾಯಪುರಾಣ, ಹಸ್ತಿಮಲ್ಲನ ಪೂರ್ವಪುರಾಣ ಕಾವ್ಯಗಳಿಗಿಂತ ಹೆಚ್ಚು ವರ್ಣನಾತ್ಮಕವಾಗಿರುವುದನ್ನು

ಗಮನಿಸಬಹುದಾಗಿದೆ.

**ಆದಿಪರಮೇಶ್ವರನ ಯಕ್ಷಗಾನ :** ಇಲ್ಲಿ ಉಳಿದ ಕಾವ್ಯಗಳಿಗಿಂತ ವಿಭಿನ್ನಗತಿಯಲ್ಲಿ ಕೆಲವು ವಿವರಗಳು ರೂಪುಗೊಂಡಿರುವುದನ್ನು ಗಮನಿಸಬಹುದು. ಆದರೂ ಕವಿ ಕಥೆಯ ಮೂಲಾಂಶಕ್ಕೆ ಧಕ್ಕೆಯನ್ನು ತಂದಿಲ್ಲ.

ಪುಲ್ಲೆಗಳು (ಪಲ್ಲಿಗಳು) ಕಡಿದಾಡಲು ರಕ್ತವು ಬಿದ್ದಾಗ, ರಕ್ತವು ಎಲ್ಲಿ ಬಿದ್ದಿತೋ ಆ ಜಾಗದಲ್ಲಿ ಅರವಿಂದನು ತಂಪನ್ನು ಹೊಂದಿದನು. ಉಳಿದ ಆದಿತೀರ್ಥಂಕರನ ಚರಿತ್ರೆಗಳಲ್ಲಿ ದೇಹವಿಡೀ ಕ್ಷಣಕಾಲ ತಂಪನ್ನು ಹೊಂದಿದ ವಿಚಾರ ಬಂದಿದೆ. ಕವಿಯು ಇಲ್ಲಿ ಇಡೀ ದೇಹವನ್ನು ತಂಪಿಸಿಕೊಳ್ಳಲು ರಕ್ತದ ಮಡುವಿಗಾಗಿ ಅರವಿಂದನು ಆಸೆಪಟ್ಟನು ಎಂಬುದನ್ನು ಸೂಚಿಸಲು ಈ ಒಂದು ವ್ಯತ್ಯಾಸವನ್ನು ಮಾಡಿಕೊಂಡಿರಬಹುದು.

ಅರವಿಂದನ ಅತಿಪರಿಗ್ರಹಾದಿ ಪಾಪಕಾರ್ಯಗಳು ಯಾವುವೆಂದರೆ ಆತನು ಪರವಧು-ಪರಧನ ಹಿಂಸಾಪರನಾದುದು. ಇಲ್ಲಿ ಬರುವ ಗಗನಗಾಮಿ ವಿದ್ಯಾದೇವತೆ ಹೆಣ್ಣು ದೇವತೆ (ಉಳಿದೆಡೆ ವಿದ್ಯಾದೇವತೆ ಎಂದು ಮಾತ್ರ ಬರುತ್ತದೆ).

ಬೊಮ್ಮಣ್ಣನು ಮಾಡಿಕೊಂಡಿರುವ ಈ ವ್ಯತ್ಯಾಸಗಳಲ್ಲಿ ಕಾವ್ಯಮಯವಾದ ಅಂಶಗಳೇನೂ ಕಂಡುಬಾರವು, ಕೇವಲ ಪ್ರಾಸಂಗಿಕ ವ್ಯತ್ಯಾಸಗಳಾಗಿ ಕಂಡುಬರುತ್ತವೆ, ಅಷ್ಟೆ.

## ದಂಡಕನ ಕಥೆ

**ಆದಿಪುರಾಣ-ಪೂರ್ವಪುರಾಣ :** ಶತ್ರುಮಂಡಳಕ್ಕೆ ವಿನಾಶಕನಾದ ದಂಡಕನಿಗೆ ಸೌಂದರಿ ಎಂಬುವಳು ಪತ್ನಿ. ಇವರ ಮಗ ಮಣಿಮಾಳಿ ಉಗ್ರಪ್ರತಾಪಿ. ದಂಡಕನು ಇಳೆಯನ್ನು ಘಾತಿಸಿ ತಕ್ಕವರನ್ನು ಸುಲಿಗೆ ಮಾಡಿ, ಹಣವನ್ನು ಸಂಗ್ರಹಿಸಿ ಅದನ್ನು ಹೂತು ಮಿಳಮಿಳನೆ ನೋಡುತ್ತಿದ್ದನು. ಆತನ ಕಡು ಲೋಭವನ್ನು ಪಂಪನು ವರ್ಣಿಸಿರುವ ರೀತಿ ಪ್ರಭಾವಶಾಲಿಯಾದುದು. 'ತನ್ನುಂಡುದುಂ ತಪ್ಪುದೆಂದು' (ತಾನು ಊಟಮಾಡಿದರೂ ಸಹ ಹಣವು ಕೈತಪ್ಪುವುದೆಂದು) ಇರಲು, ಶಕ್ತಿಗುಂದಿ ಸತ್ತು ಹೆಬ್ಬಾವಾಗಿ ಹುಟ್ಟಿದನು. ಜಾತಿಸ್ಮರನಾಗಿ ತಾನು ಹೂತಿಟ್ಟ ಭಂಡಾರದ ಬಳಿ ಆ ಹೆಬ್ಬಾವು ಸುತ್ತಿ ಸುಳಿಯುತ್ತಿತ್ತು. ಮಣಿಮಾಲಿಗಲ್ಲದೆ ಅಲ್ಲಿ ಉಳಿದವರಿಗೆ ಪ್ರವೇಶವಿಲ್ಲ. ಒಮ್ಮೆ ಮಣಿಮಾಲಿಯು ರತಿ ಚಾರಣರೆಂಬ ಅವಧಿಜ್ಞಾನಿಗಳಲ್ಲಿ ಅಜಗರದ ವೃತ್ತಾಂತವನ್ನು ಕೇಳಿ, ಆ ಹಾವು ತನ್ನ ತಂದೆಯಾಗಿದ್ದಿತೆಂದು ತಿಳಿದು, ಅದರ ಸಮೀಪಕ್ಕೆ ಬಂದು ಬೋಧೆಯನ್ನು ಮಾಡಿದನು. 'ಲೋಭವನ್ನು, ವಿಷಯಾಸಕ್ತಿಯ ವಿಷಯವನ್ನು ಬಿಟ್ಟು ನಿರ್ವಿಷನಾಗು' ಎಂದು ಎಚ್ಚರಿಸಿದಾಗ, ದಂಡಕನು ಮೋಹಾಂಧಕಾರವನ್ನು ಬಿಟ್ಟು ಆಹಾರತ್ಯಾಗ ಮಾಡಿ ಸೌಧರ್ಮೇಂದ್ರದಲ್ಲಿ ದೇವನಾಗಿ ಜನಿಸಿದನು. 'ನಿಜನಂದನೋಪಕೃತಿ'ಯನ್ನು ನೆನೆದು ದೇವಸಮೂಹದೊಡನೆ ಆತನಿಗೆ ಉತ್ಕೃಷ್ಟವಾದ ರತ್ನಗಳನ್ನು ಅರ್ಪಿಸಿದನು. ಪರಂಪರಾನುಗತವಾಗಿ ಬಂದಿರುವ ಈ ರತ್ನಗಳನ್ನು ಮಹಾಬಲನು ಈಗಲೂ ಧರಿಸಿರುವನೆಂದು ಸ್ವಯಂಬುದ್ಧನು ತಿಳಿಸಿದನು.

ದಂಡಕನ ಕಥೆ ಪೂರ್ವಪುರಾಣದಲ್ಲಿರುವಂತೆಯೇ ಆದಿಪುರಾಣದಲ್ಲಿ ವರ್ಣಿತವಾಗಿದೆ. ದಂಡಕನ ಮಗನಾದ ಮಣಿಮಾಲಿಯು ಅಜಗರನಾಗಿದ್ದ ದಂಡಕನಿಗೆ ಮಾಡುವ ಉಪ

ದೇಶವು ಪೂರ್ವಪುರಾಣದಲ್ಲಿ ಆದಿಪುರಾಣದ ಭಾಗಕ್ಕಿಂತ ವಿವರವಾಗಿದೆ. ಆದಿಪುರಾಣದಲ್ಲಿ ಈ ಭಾಗವು ಎರಡು ಕಂದ ಪದ್ಯಗಳಲ್ಲಿ ಮುಗಿದುಹೋಗುತ್ತದೆ. ಕೆಲವೆಡೆ ಪಂಪನು ಜಿನಸೇನರ ಹೇಳಿಕೆಗಳನ್ನು ಕನ್ನಡೀಕರಿಸುವ ಭಾಗವೂ ಇಲ್ಲಿ ಕಂಡುಬರುತ್ತದೆ.

ಅಥ ಸೌ ಪುತ್ರನಿರ್ದಿಷ್ಟ ಧರ್ಮವಾಕ್ಯಾಂಶುಮಾಲಿನಾ |
ಗಲಿತಾಶೇಷಮೋಹಾಂಧತಮಸಃ ಸಮಜಾಯತ || (V-೧೩೨)

ಆಮೇಲೆ ಈ ಅಜಗರವು ಮಗನು ಹೇಳಿದ ಧರ್ಮವಾಕ್ಯವೆಂಬ ಸೂರ್ಯನಿಂದ, ಮೋಹವೆಂಬ ಕತ್ತಲೆಯನ್ನೆಲ್ಲ ಕಳೆದುಕೊಂಡಿತು ಎಂಬ ಶ್ಲೋಕಭಾಗವು ಪಂಪನಲ್ಲಿ ಗದ್ಯರೂಪದಲ್ಲಿ ಹೀಗೆ ಬಂದಿದೆ :

"ತನ್ನಂ ಪ್ರತಿಬೋಧಿಸಿದ ನಿಜ ತನೂಜನ ವಚನ ತಿಗ್ಮರೋಚಿರುಚಿ ನಿಚಯದಿನಾತ್ಮೀಯ ಚೇತೋನಿಚಯ ಮೋಹಾಂಧಂ ತಮಸ್ತೋಮಮಂ ಕಳೆದು" (ಆದಿಪು., ಆಶ್ವಾಸ ii).

## ಉತ್ತರಕಾಲೀನ ಕಾವ್ಯಗಳು

**ಚಾವುಂಡರಾಯಪುರಾಣ** : ಪೂರ್ವಪುರಾಣದಲ್ಲಿ ದಂಡಕನನ್ನು ವಿಷಯಾಸಕ್ತ, ಮಾಯಾಚಾರಿ, ಮತ್ತು ಆರ್ತಧ್ಯಾನವುಳ್ಳವನೆಂದು ಹೇಳಲಾಗಿದೆ. ಪಂಪನ ಆದಿಪುರಾಣದಲ್ಲಿ ಈತ 'ಇಳೆಯನ್ನು ಘಾತಿಸಿ ಅರ್ಹರನ್ನು ಸುಲಿಗೆ ಮಾಡಿ ಹಣವನ್ನು ಭೂಮಿಯಲ್ಲಿ ಬಚ್ಚಿಟ್ಟು ತಾನೂ ಅನುಭವಿಸದ ಕಡುಲೋಭಿ. ದಂಡಕನು ಅನ್ಯಾಯದಲ್ಲಿ ದ್ರವ್ಯವನ್ನು ಹೆಚ್ಚಿಸಿ, ಅದನ್ನು ಹೂತಿಟ್ಟು ಕಡುಲೋಭದಿಂದ ಸತ್ತು ಅಜಗರನಾದನೆಂದು ಚಾಮುಂಡರಾಯನು ಹೇಳಿದ್ದಾನೆ. ಚಾವುಂಡರಾಯಪುರಾಣದಲ್ಲಿ ಇಲ್ಲಿಂದ ಮುಂದೆ ಬರುವ ಗದ್ಯಭಾಗವು (ಒಂದೆರಡು ಪದಗಳನ್ನು ಚಾಮುಂಡರಾಯನು ಸುಲಭೀಕರಿಸಿ ಹೇಳಿರುವುದನ್ನು ಬಿಟ್ಟರೆ) ಆದಿಪುರಾಣದ ಗದ್ಯಭಾಗವೇ ಆಗಿದೆ. ಉದಾಹರಣೆಗೆ :

ಮಗಂ ಮಣಿಮಾಳಿಯಂ ಕಂಡು ಜಾತಿಸ್ಮರನಾಗಿ ಮಣಿಮಾಳಿಯಲ್ಲದುೞಿದವರಾರುಮಂ ಸಾರಲೀಯದೆ ಭಂಡಾರಮಂ ಕಾದು ಕೊಂಡಿರ್ಪುದುಮೊಂದು ದಿವಸಂ ಮಣಿಮಾಳಿ, ರತಿಚಾರಣರೆಂಬ ಚಾರಣರನವಧಿ ಜ್ಞಾನಿಗಳಂ ಕಂಡಜಗರ ವೃತ್ತಾಂತಮಂ ಬೆಸಗೊಂಡು ವಿಷಯ ವಿಷಧರನಾತ್ಮೀಯ ಜನಕನೆಂದಱಿದು ತತ್ಸಮೀಪಕ್ಕೆವಂದು (ಆದಿಪು., ಆಶ್ವಾಸ ii)

ಮಗಂ ಮಣಿಮಾಳಿಯುಮಂ ಕಂಡು ಜಾತಿಸ್ಮರನಾಗಿ ಮಗನಲ್ಲದುೞಿದವರಾರುಮಂ ಸಾರಲೀಯುದೆ ಭಂಡಾರಮಂ ಕಾದುಕೊಂಡಿರ್ಪಿನಮೊಂದು ದಿವಸಂ ಮಣಿಮಾಳಿ ರತಿಚಾರಣರೆಂಬವಧಿ ಜ್ಞಾನಿಗಳನಜಗರ ವೃತ್ತಾಂತಮಂ ಬೆಸಗೊಂಡು ತಮ್ಮಯ್ಯನೆಂದಱಿದು ಅದಱ ಕೆಲಕ್ಕೆ ಬಂದಿಂತೆಂದಂ (ಚಾವುಂಪು., ಪುಟ ೧೯-೨೦)

ಮಣಿಮಾಳಿಯ ಧರ್ಮೋಪದೇಶ ಒಂದೆರಡು ಮಾತುಗಳಲ್ಲಿಯೇ ಮುಗಿದುಹೋಗುತ್ತದೆ. "ನೀನತಿಲೋಭದೊಳ್ ಆರ್ತಧ್ಯಾನದೊಳ್ ಸತ್ತು ತಿರ್ಯಗ್ಗತಿಯೊಳ್ ಪುಟ್ಟಿನಮೆದಪ್ಪೆ, ಇನ್ನಪ್ಪೊಡಂ ಎನ್ನಂದ ಧರ್ಮಮಂ ಕೈಕೊಳ್ಳು"—ಮುಂದೆ ಕಥೆ ಪೂರ್ವಪುರಾಣ, ಆದಿಪುರಾಣದ ಜಾಡನ್ನು ಸಂಕ್ಷಿಪ್ತವಾಗಿ ಅನುಸರಿಸಿದೆ.

**ಹಸ್ತಿಮಲ್ಲನ ಪೂರ್ವಪುರಾಣ** : ಈ ಕಾವ್ಯದಲ್ಲಿ ಬರುವ ಕಥಾಚೌಕಟ್ಟು ಪೂರ್ವಕವಿಗಳ ಕಥೆಯ ಜಾಡನ್ನು ಅನುಸರಿಸಿ ಬರುವಂತಿದ್ದರೂ, ಚಾವುಂಡರಾಯಪುರಾಣದಲ್ಲಿ

ಬರುವ ನಿರೂಪಣೆಗೆ ಕವಿ ಹೆಚ್ಚು ಋಣಿಯಾಗಿರುವಂತೆ ಕಂಡುಬರುತ್ತದೆ. ಚಾವುಂಡ ರಾಯಪುರಾಣಕ್ಕಿಂತ ಸಂಗ್ರಾಹಕತೆ ಇಲ್ಲಿ ಹೆಚ್ಚು. ಚಾವುಂಡರಾಯಪುರಾಣದಲ್ಲಿ ಬರುವ ಕೆಲವು ವಿವರಗಳನ್ನು ಬಿಟ್ಟು ಕಥೆಯನ್ನು ಎಂಟುಸಾಲುಗಳಲ್ಲಿ ಮುಗಿಸಿದ್ದಾನೆ. ಹೀಗಾಗಿ, ಪೂರ್ವಪುರಾಣ, ಆದಿಪುರಾಣ, ಚಾವುಂಡರಾಯಪುರಾಣಗಳಲ್ಲಿ ಬರುವ ಎಷ್ಟೋ ಸಂಗತಿ ಗಳನ್ನು ಇಲ್ಲಿ ಕೈಬಿಡಲಾಗಿದೆ. ದಂಡಕ ಅತಿಲೋಭದಿಂದ ಸತ್ತುದು, ಅಜಗರನಾಗಿ ಹುಟ್ಟಿ ಮಗ ಮಣಿಮಾಲಿಗಲ್ಲದೆ ಇತರರಿಗೆ ಭಂಡಾರದ ಬಳಿಗೆ ಬಿಡದೆ ಇರುತ್ತಿದ್ದುದು, ರತಿಚಾರಣ ಮುನಿಗಳಿಂದ ತಂದೆಯ ವೃತ್ತಾಂತವನ್ನು ಅರಿತು ಬೋಧಿಸಿದುದು, ಅಜ ಗರವು ಸಂನ್ಯಾಸವನ್ನು ಕೈಗೊಂಡು ಸೌಧರ್ಮೇಂದ್ರದಲ್ಲಿ ದೇವನಾಗಿ ಹುಟ್ಟಿದುದು, ದೇವಲೋಕದಿಂದ ಬಂದು ಮಣಿಮಾಳಿಗೆ ದಿವ್ಯಾಭರಣಗಳನ್ನು ನೀಡಿದುದು—ಈ ಮುಖ್ಯ ವಿವರಗಳನ್ನು ಮಾತ್ರ ನೀಡಿದ್ದಾನೆ. ಇಲ್ಲಿ ದಂಡಕನ ಗುಣವಿಶೇಷದ ಬಗೆಗಾಗಲಿ, ಯಾವ ರೀತಿ ಹಣವನ್ನು ಸಂಗ್ರಹಿಸಿದನೆಂಬುದರ ವಿವರವಾಗಲಿ, ಮಣಿಮಾಲಿಯ ಉಪದೇಶದ ಸಾರವಾಗಲಿ ಇಲ್ಲ. ದೇವಲೋಕದಿಂದ ಬಂದ ದೇವನಾಗಿದ್ದ ದಂಡಕನು ಮಣಿಮಾಲಿಗೆ ದಿವ್ಯಾಭರಣಗಳನ್ನು ಕೊಟ್ಟ ಅಂಶ ಇದೆಯೇ ಹೊರತು, ಪೂಜಿಸಿದ ಉಲ್ಲೇಖ ಬರುವು ದಿಲ್ಲ. ಕವಿ ಕಥೆಯನ್ನು ಎಷ್ಟು ಸಂಗ್ರಹವಾಗಿ ಹೇಳಬಹುದೋ ಅಷ್ಟು ಸಂಗ್ರಹವಾಗಿ ಹೇಳಿದ್ದಾನೆ.

**ಪುಣ್ಯಾಸ್ರವದ ಆದೀಶ್ವರರ ಕಥೆ** : ಇತರ ಕಾವ್ಯಗಳಿಗಿಂತ ಇಲ್ಲಿ ಕೆಲವು ವಿವರಗಳು ಭಿನ್ನವಾಗಿ ದೊರೆಯುತ್ತವೆ. ದಂಡಕನು ಸತ್ತು ತಿರ್ಯಗ್ಯೋನಿಯಲ್ಲಿ ಕಾಳೋರಗವಾಗಿ ಹುಟ್ಟಿದುದು 'ಅತಿಮೋಹನೀಯವಶ'ದಿಂದ ಎಂಬ ಉಲ್ಲೇಖ ದೊರೆಯುತ್ತದೆ. 'ನಿನ್ನಿಂ ದಿನ್ನೈದುಗುಂ ದಿವಮಂ' ಎಂದು ಹೇಳಿದಾಗ ಮಣಿಮಾಲಿಯು ದಂಡಕನನ್ನು ಅಣುವ್ರತ ಧಾರಣೆಯಲ್ಲಿ ತೊಡಗಿಸುತ್ತಾನೆ. ಈ ಬಗೆಯ ವಿವರ ಪುಣ್ಯಾಸ್ರವದ ಆದೀಶ್ವರರ ಕಥೆಯಲ್ಲಿ ಮಾತ್ರ ಕಂಡುಬರುತ್ತದೆ. ಕಥೆಯ ಮೂಲ ಆಶಯಕ್ಕೆ ಧಕ್ಕೆ ಬಂದಿಲ್ಲ.

**ಪುರುದೇವ ಚರಿತ** : ನಾಲ್ಕು ಸಾಂಗತ್ಯಗಳಲ್ಲಿ ದಂಡಕನ ವೃತ್ತಾಂತ ಮುಗಿದುಹೋಗು ತ್ತದೆ. ಹಸ್ತಿಮಲ್ಲನ ಕಥೆಯ ರೂಪರೇಖೆಯ ಧಾಟಿಯಲ್ಲಿ ಇಲ್ಲಿ ಕಥೆ ಮುಗಿಯುತ್ತದೆ. ದಂಡಕನು ಸತ್ತು ಹಾವಾಗಿ ಹುಟ್ಟಿದಾಗ ಮಣಿಮಾಲಿಗೆ ಮಾತ್ರ ಭಂಡಾರವನ್ನು ಪ್ರವೇಶ ಮಾಡಲು ಬಿಡುತ್ತಿದ್ದ ವಿಚಾರವು ಉಳಿದ ಕಾವ್ಯಗಳಲ್ಲಿ ಬಂದರೆ, ದಂಡಕನ ಸತಿ ಸುಂದರಿಗೂ ಅಲ್ಲಿ ಪ್ರವೇಶವಿತ್ತೆಂಬುದನ್ನು ತಿಳಿಸಿದ್ದಾನೆ. ಮುನಿಗಳ ಹೆಸರು ಉಳಿದೆಡೆ ಮತಿಚಾರಣರೆಂದಿದ್ದರೆ ಇಲ್ಲಿ ಹಸ್ತಿಮಲ್ಲನ ಪೂರ್ವಪುರಾಣದಲ್ಲಿ ಬರುವಂತೆ ರತಿಚಾರಣ ರೆಂದೇ ಇದೆ. ಕಾವ್ಯದ ಸೊಗಸನ್ನು ಹೆಚ್ಚಿಸುವ ವ್ಯತ್ಯಾಸಗಳು ಇಲ್ಲಿ ಬಂದಿಲ್ಲ.

**ಆದಿಪರಮೇಶ್ವರನ ಯಕ್ಷಗಾನ** : ಪೂರ್ವಪುರಾಣ, ಆದಿಪುರಾಣಗಳಲ್ಲಿ ಬರುವ ಹೆಚ್ಚಿನ ವಿವರಗಳಿಗೂ ಹೋಗದೆ, ಇತರ ಆದಿತೀರ್ಥಂಕರ ಕಾವ್ಯಗಳಲ್ಲಿ ಕಂಡುಬರುವ ಅತಿ ಸಂಗ್ರಾಹಕತೆಗೂ ಇಳಿಯದೆ ಕವಿ ಮಧ್ಯವರ್ತಿ ಮಾರ್ಗವನ್ನು ಅನುಸರಿಸಿದ್ದಾನೆ. ದಂಡಕ 'ಗುಣಹೀನ', 'ಕಡುಲೋಭಿ'. ಇಲ್ಲಿ ಮಣಿಮಾಲಿಯು ಚಾರಣಮುನಿಗಳಿಂದ ತಂದೆಯ ವೃತ್ತಾಂತವನ್ನು ಅರಿತು, ಅವರನ್ನೇ ತಂದೆಯಾಗಿದ್ದ ಅಜಗರನಿಗೆ ಉಪದೇಶ ಮಾಡಲು ಕರೆದುಕೊಂಡು ಹೋಗುವನು. ಮುನಿಗಳೇ ಉಪದೇಶವನ್ನು ನೀಡುವುದು

ಹೆಚ್ಚು ಔಚಿತ್ಯಪೂರ್ಣವಾಗಿ ಕವಿಗೆ ಕಂಡಿರಬೇಕು. ಮಣಿಮಾಲಿ 'ಗುಣರತ್ನ'ವೇ ಆದರೂ ಧರ್ಮೋಪದೇಶದ ಸಂದರ್ಭದಲ್ಲಿ ಮುನಿಶ್ರೇಷ್ಠರಿಂದಲೇ ಉಪದೇಶವನ್ನು ಮಾಡಿಸಿರುವುದು ಧರ್ಮೋಪದೇಶ ಪ್ರಸಂಗದ ಮಹತ್ತ್ವವನ್ನು ಇನ್ನೂ ಹೆಚ್ಚಿಸಿದೆ. ಮುನಿಗಳು ಅಜಗರನಲ್ಲಿಗೆ ಬಂದು ಕರ್ಮೋದ್ದಂಡತೆಯ ಸ್ಥಿತಿಯನ್ನು ತಿಳಿಸಿ—

ಬಿಡು ಬಿಡು ಲೋಭತ್ವಚಿತ್ತವ ತೊಡು ತೊಡುತ್ತಮ ಗುಣಮತಿಯ
ಒಡಲೊಳಾತ್ಮನ ಧ್ಯಾನವನು ನೀ ಬಿಡದೆ ನಡಸು

ಎಂದು ಮುನಿಗಳು ಪಿಂಚವನ್ನು ತಲೆಯಮೇಲೆ ಇಟ್ಟಾಗ, ಅದು ಸಂನ್ಯಾಸವನ್ನು ತೆಗೆದುಕೊಂಡು ಸತ್ತು ದೇವನಾಗಿ ಹುಟ್ಟಿತು. ಚಾಮುಂಡರಾಯಾದಿ ಪುರಾಣಗಳಿಗಿಂತ ಇಲ್ಲಿ ಕಥಾನಿರೂಪಣೆ ಹೆಚ್ಚು ಕಾವ್ಯಮಯವಾಗಿದೆ.

## ಶ್ರುತದೃಷ್ಟಾದಿ ಕಥೆಗಳ ವಿವರ

**ಆದಿಪುರಾಣ-ಪೂರ್ವಪುರಾಣ ಮತ್ತು ಉತ್ತರಕಾಲೀನ ಕಾವ್ಯಗಳು** : ಸಹಸ್ರಬಲನು ಮಗನಾದ ಶತಬಲನಿಗೆ ರಾಜ್ಯವನ್ನು ಒಪ್ಪಿಸಿ ಶುಕ್ಲಧ್ಯಾನದಿಂದ ಮೋಕ್ಷಪಡೆದದ್ದು; ಶತಬಲನು ತನ್ನ ಮಗನಾದ ಅತಿಬಲನಿಗೆ ರಾಜ್ಯವನ್ನು ಕೊಟ್ಟು ಶ್ರಾವಕವ್ರತದಿಂದ ಮುಡುಪಿ ಮಹೇಂದ್ರ ಕಲ್ಪಜನಾಗಿದ್ದ ಸಂದರ್ಭದಲ್ಲಿ, ಮಂತ್ರಿಗಳು ಕುವರ ಮಹಾಬಲನೊಡನೆ ಮಂದರಗಿರಿಯ ಚೈತ್ಯಾಲಯಗಳನ್ನು ಪೂಜಿಸಲು ಬಂದಾಗ ಮಹೇಂದ್ರ ಕಲ್ಪಜನು ಮಹಾಬಲನನ್ನು ನೋಡಿ ಆತನಿಗೆ ಜಿನಧರ್ಮವನ್ನು ಮರೆಯದಿರೆಂದು ಹೇಳುವ ಈ ಎರಡು ಶ್ರುತದೃಷ್ಟ ಕಥೆಗಳು ಪೂರ್ವಪುರಾಣದಂತೆಯೇ ಇತರ ಕನ್ನಡ ಆದಿತೀರ್ಥಂಕರ ಕಾವ್ಯಗಳಲ್ಲಿಯೂ ಯಾವ ವ್ಯತ್ಯಾಸವೂ ಇಲ್ಲದೆ, ಕಾವ್ಯಲೇಪನವಿಲ್ಲದೆ ನಿರೂಪಣಾಮಾತ್ರವಾಗಿ ಬಂದಿವೆ.

ಮಹಾಬಲ ಭವದ ನಿರೂಪಣೆಯ ಉದ್ದಕ್ಕೂ ಎರಡು ಪ್ರಮುಖವಾದ ಅಂಶಗಳನ್ನು ಆದಿತೀರ್ಥಂಕರನ ಕಥೆಯಲ್ಲಿ ಕಾಣಬಹುದಾಗಿದೆ. ಒಂದು ಭೋಗಾಸಕ್ತ ಜೀವಿಯ ರೀತಿ; ಮತ್ತೊಂದು ಭೋಗಜೀವನದ ಅಪಾಯವನ್ನು ಕಂಡುಕೊಂಡ ಜೀವ, ಆ ಭೋಗಾಸಕ್ತ ಜೀವಿಯ ಬಗೆಗೆ ತೋರುವ ಕಳಕಳಿ. ಧರ್ಮೋಪಕಾರ ಮನೋಭಾವನೆಯು ಈ ಭವದ ತುಂಬ ಹಬ್ಬಿ ನಿಂತಿದೆ. ಸ್ವಯಂಬುದ್ಧನ ಪಾತ್ರದ ಔನ್ನತ್ಯ ಎಷ್ಟು ಹಿರಿದಾಗುತ್ತದೆಂದರೆ, ಈ ಭಾಗದಲ್ಲಿ ಕಥಾ ನಾಯಕನ ಭವಗಳಲ್ಲೊಂದಾದ ಮಹಾಬಲನ ಪಾತ್ರವೂ ಹಿಂದುಳಿದು ಸ್ವಯಂಬುದ್ಧನೇ ಮೇಲ್ಮೈಯಾಗಿ ನಿಲ್ಲುತ್ತಾನೆ. ಧರ್ಮೋಪಕಾರದ ಹಿರಿಮೆಯ ಮುಂದೆ ಇತರ ಅಂಶಗಳು ಮಸುಕಾಗುತ್ತವೆ.

ಈ ಭವದ ನಿರೂಪಣೆಯಲ್ಲಿ ನಾವು ಹತ್ತುಹಲವು ವಿಷಯಗಳನ್ನು ಕಾಣುತ್ತೇವೆ. ಸಂಕೀರ್ಣ ವಿನ್ಯಾಸದೊಂದಿಗೆ ಈ ಭವನಿರೂಪಣೆ ಇದೆ. ಈ ಭವದ ಆರಂಭದಲ್ಲಿಯೇ ಭೋಗ-ತ್ಯಾಗಗಳ ಪೂರ್ವ ಪೀಠಿಕಾ ಮಾದರಿಯನ್ನು ಕಾಣುತ್ತೇವೆ. ಮಹಾಬಲನ ತಂದೆ ಅತಿಬಲ ವಿದ್ಯಾಧರನ ರಾಜ್ಯದ ವರ್ಣನೆ, ಮಹಾಬಲನ ಜನನಾದಿ ವೃತ್ತಾಂತಗಳ ವೈಭವೋಪೇತವಾದ ವರ್ಣನೆಗಳು ಬರುತ್ತಿದ್ದಂತೆಯೇ ಅತಿಬಲನ ವೈರಾಗ್ಯ ಸನ್ನಿವೇಶದ ತ್ಯಾಗ ಸಂದೇಶವು ಧ್ವನಿಸುತ್ತದೆ. ಇದು ಆದಿಪುರಾಣದಲ್ಲಿ ಮೈದೋರಿರುವ ವೈರಾಗ್ಯದ

ಮೊದಲ ಗೀತೆಯಾಗಿದೆ. ಅನಿತ್ಯಾದಿ ಅನುಪ್ರೇಕ್ಷೆಗಳ[೭] ಭಾವವು ಈ ವೈರಾಗ್ಯ ಸಂದರ್ಭದಲ್ಲಿ ಪ್ರತಿಪಾದಿತವಾಗಿದೆ. ಪಂಪನಲ್ಲಿ ಈ ವೈರಾಗ್ಯ ಪ್ರತಿಪಾದನೆಯ ಭಾವ ವಿವರವಾಗಿ ಬಂದಿದ್ದರೆ, ಉತ್ತರಕಾಲೀನ ಕಾವ್ಯಗಳಲ್ಲಿ ಈ ಭಾಗವು ಸೂಚ್ಯವಾಗಿ ಮಾತ್ರ ಕಂಡುಬರುತ್ತದೆ. ಪಂಪನು ಈ ರೀತಿಯ ಭಾವನೆಗಳನ್ನು ಹಿಡಿದಿಡುವುದರಲ್ಲಿ ಅಸದೃಶನೆನಿಸಿದ್ದಾನೆ. ಮುಂದುವರಿದು ಜೈನ-ಜೈನೇತರ ಸಿದ್ಧಾಂತದ ವಾದವಿವಾದಗಳು, ಜೈನಸಿದ್ಧಾಂತದ ಪ್ರತಿಪಾದನೆ, ಅದರ ಅಂಗವಾಗಿ ಬರುವ ನಾಲ್ಕು ಧ್ಯಾನಗಳ ಕಥೆ ಹಾಗೂ ದೃಷ್ಟಾಂತಗಳು, ಸ್ವಯಂಬುದ್ಧನು ಚಾರಣಮುನಿಗಳನ್ನು ದರ್ಶನ ಮಾಡಿದುದು, ಮಹಾಬಲನಿಂದ ವ್ರತ ಪರಿಪಾಲನೆ ಇವೆಲ್ಲ ಅಂಶಗಳು ಸೇರಿ ಸಂಕೀರ್ಣ ನಿರೂಪಣೆ ಕಂಡು ಬರುತ್ತದೆ.

ಜೈನ ಹಾಗೂ ಕೆಲವು ಜೈನೇತರ ಸಿದ್ಧಾಂತ ಪ್ರತಿಪಾದನೆಯ ವಿಚಾರದಲ್ಲಿಯಾದರೂ ಪಂಪ ಉತ್ತುಂಗ ಶಿಖರಕ್ಕೇರುತ್ತಾನೆ. ಆತ ನೀಡುವ ಕಲಾಪೂರ್ಣ ಚಿತ್ರಣಗಳು ಓದುಗರ ಸ್ಮೃತಿಪಟಲದಲ್ಲಿ ಅಚ್ಚಳಿಯದೆ ಉಳಿಯುತ್ತವೆ. ಆದಿಪರಮೇಶ್ವರನ ಯಕ್ಷಗಾನವನ್ನುಳಿದು ಉತ್ತರಕಾಲೀನ ಕೃತಿಗಳು ಅದರ ವರ್ಣನೆಯ ಪ್ರಯತ್ನಾಂಶವನ್ನೂ ಕೈಗೊಂಡಿಲ್ಲ. ಒಂದು ಸಿದ್ಧಾಂತವನ್ನು ಇತರ ಸಿದ್ಧಾಂತಗಳ ಹಿನ್ನೆಲೆಯಲ್ಲಿ ಒರೆಗೆ ಹಚ್ಚಿದಾಗಲೇ ಅದರ ಸತ್ತ್ವದ ಹಿರಿಮೆ ಪ್ರಕಾಶಿಸುವುದು. ಇಂತಹ ಪ್ರಯತ್ನ ನಮ್ಮ ಸಂಸ್ಕೃತಿಯಲ್ಲಿ ಆಗಿಂದಾಗ್ಗೆ ನಡೆಯುತ್ತಿದ್ದುದು ಕಂಡುಬರುತ್ತದೆ. ಅಂತಹ ಒಂದು ಚಿತ್ರಣವನ್ನು ಜಿನಸೇನಾಚಾರ್ಯರನ್ನು ಅನುಸರಿಸಿರುವ ಪಂಪ ಉತ್ಕೃಷ್ಟವಾಗಿ ನೀಡಿದ್ದಾನೆ. ಆದಿಪರಮೇಶ್ವರನ ಯಕ್ಷಗಾನದಲ್ಲಿ ಕವಿ ಬೊಮ್ಮಣ್ಣನು ಇದರ ಒಂದು ಸಂಕ್ಷಿಪ್ತ ಚಿತ್ರಣವನ್ನಾದರೂ ಕೈಗೊಂಡಿರುವುದು ಶ್ಲಾಘನೀಯ. ಉಳಿದ ಕಡೆಗಳಲ್ಲಿ ಅದು ನಾಮಮಾತ್ರವಾಗಿ ತೇಲಿಹೋಗುತ್ತದೆ.

ಅರವಿಂದಾದಿಗಳ ಕಥೆಗಳಲ್ಲಿ ಪ್ರಮುಖವಾಗಿ ಜೈನಧರ್ಮದಲ್ಲಿ ನಿರೂಪಣೆಗೊಂಡಿರುವ ನಾಲ್ಕು ಧ್ಯಾನಗಳು ಪ್ರತಿಪಾದಿತವಾಗಿವೆ. ಈ ಪುರಾಣಕಾವ್ಯಗಳು ಎಡೆ ದೊರೆತಾಗಲೆಲ್ಲ ಇಂತಹ ವಿವಿಧ ತಾತ್ತ್ವಿಕ ನಿರೂಪಣೆಯ ಚಿತ್ರಣವನ್ನು ಒಂದಲ್ಲ ಒಂದು ವಿಧದಲ್ಲಿ ಕೈಗೊಳ್ಳುತ್ತವೆ. ರೌದ್ರ-ಆರ್ತ ಧ್ಯಾನಗಳಿಂದ ಆಗುವ ಹಾನಿಯನ್ನೂ ಧರ್ಮಧ್ಯಾನ ಶುಕ್ಲ ಧ್ಯಾನಗಳಿಂದಾಗುವ ಆತ್ಮೋದ್ಧಾರದ ವಿಷಯವನ್ನೂ ಓದುಗರಿಗೆ ತಿಳಿಸುವುದೇ ಇಲ್ಲಿಯ ಪ್ರಮುಖವಸ್ತುವಾಗಿ ನಿಲ್ಲುತ್ತದೆ. ಈ ಘಟ್ಟದಲ್ಲಿ ಬರುವ ಅರವಿಂದನ ಕಥೆ ವಿಶೇಷವಾಗಿ ಕಥಾರೋಚಕತೆಯನ್ನು ಹೊಂದಿದೆ.

ಸ್ವಯಂಬುದ್ಧನು ಮಹಾಬಲನಿಗೆ ಧರ್ಮಜಾಗೃತಿಯನ್ನುಂಟುಮಾಡಲು ತೋರಿರುವ ಧಾರ್ಮಿಕ ಕಳಕಳಿಯು ಈ ಭಾಗದಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವಾಗಿದೆ. ಸಮ್ಯಕ್ತ್ವದ ಎಂಟು ಅಂಗಗಳಲ್ಲಿ[೮] ಬರುವ ಉಪಗೂಹನ, ಸ್ಥಿತಿಕರಣ, ಪ್ರಭಾವನಾಂಗಗಳಿಗೆ ವಿಶೇಷವಾದ ಒತ್ತನ್ನು ನೀಡಿರುವುದು ಕಂಡುಬರುತ್ತದೆ. ಮಹಾಬಲನ ಭೋಗಲಾಲಸೆಯನ್ನು ನೀಗಿಸಿ, ಧರ್ಮದ ಬಗೆಗೆ ಒಲವು ಮೂಡಿಸಿ ಸಮ್ಯಕ್ತ್ವಧಾರಿಯನ್ನಾಗಿಸುವ ಹೊಣೆಯನ್ನು ಸ್ವತಃ ಅಷ್ಟಾಂಗ ಸಮ್ಯಕ್ತ್ವಧಾರಿಯಾದ ಸ್ವಯಂಬುದ್ಧನಲ್ಲಿ ಕಾಣುತ್ತೇವೆ. ತನ್ನ ಆತ್ಮೋನ್ನತಿಯ ಜೊತೆಜೊತೆಗೆ ಮತ್ತೊಂದು ಆತ್ಮದ ಉದ್ಧಾರಕ್ಕೆ ಮನನೀಡಿದ, ಆ ನಿಟ್ಟಿನಲ್ಲಿ ಪ್ರಯತ್ನಶೀಲವಾದ ಚಿತ್ರಣ ಇಲ್ಲಿ ಕಂಡುಬರುತ್ತದೆ. 'ಪರಸ್ಪರೋ

ಪಗ್ರಹೋ ಜೀವಾಣಾಂ' ಎಂಬ ಮಾತು ಇಲ್ಲಿ ಉದ್ದಕ್ಕೂ ಸಾಫಲ್ಯವನ್ನು ಹೊಂದಿದೆ. ಜೀವರುಗಳು ಒಬ್ಬರು ಇನ್ನೊಬ್ಬರಿಗೆ ಮಾಡುವ ಧರ್ಮೋಪಕಾರದ ಮಹಾಕಾರ್ಯವನ್ನು ನಾವಿಲ್ಲಿ ನೋಡಬಹುದು. ಇದು ಕೇವಲ ಒಂದು ಜನ್ಮಕ್ಕೇ ನಿಲ್ಲುವಂತಹದಲ್ಲ. ಇದೇ ಮನೋಭಾವವು ಸ್ವಯಂಬುದ್ಧ ಪ್ರೀತಿಂಕರ ಆಚಾರ್ಯನಾಗಿ ಮುಂದೆ ವಜ್ರಜಂಘಾರ್ಯಭವದಲ್ಲಿ ಇಂತಹ ಉಪಕಾರವನ್ನು ಎಸಗುವುದನ್ನು ಕಾಣುತ್ತೇವೆ.

## ಲಲಿತಾಂಗದೇವ ಭವ

ಆದಿಪುರಾಣದಲ್ಲಿ ಬರುವ ರಸಘಟ್ಟಗಳಲ್ಲಿ ಲಲಿತಾಂಗದೇವ ಭವವೂ ಒಂದು. ವಿದ್ವಾಂಸರಿಂದ ತಲೆದೂಗಿಸಿಕೊಂಡಿರುವ ಭಾಗವಿದು. ಸಾಹಿತ್ಯದ ಕಾಸಾರಗಳಂತೆ ಲಲಿತಾಂಗ ವಜ್ರಜಂಘರ ಪ್ರಸಂಗಗಳು ಕಾವ್ಯದಲ್ಲಿ ಶೋಭಿಸುತ್ತವೆ.[೧೦]

ಕಾಲಲಬ್ಧಿ ದೊರೆತ ಮಹಾಬಲನು ಸಮಾಧಿಮರಣವನ್ನು ಪಡೆದು ಲಲಿತಾಂಗದೇವನಾಗಿ ಈಶಾನ ಕಲ್ಪದ ಶ್ರೀಪ್ರಭವಿಮಾನದಲ್ಲಿ ಹುಟ್ಟಿದನು. ಅವಧಿಜ್ಞಾನದಿಂದ ಹಿಂದಿನ ವೃತ್ತಾಂತಗಳನ್ನರಿತು ಚೈತ್ಯಾಲಯಗಳಿಗೆ ವಂದಿಸಿ ಬಂದನು. ನಾಲ್ಕುಸಾವಿರ ದೇವಿಯರಲ್ಲಿ ಹಾಗೂ ಸ್ವಯಂಪ್ರಭೆ, ಕನಕಲತೆ, ಕನಕಮಾಲೆ, ವಿದ್ಯುಲ್ಲತೆ ಎಂಬ ನಾಲ್ಕು ಮಹಾದೇವಿಯರಲ್ಲಿ ಸ್ವರ್ಗಸುಖವನ್ನು ಅನುಭವಿಸಿದನು. ಅನೇಕ ಸ್ವಯಂಪ್ರಭಾದೇವಿಯರು ಗತಿಸಿದರು. ಕೊನೆಯಲ್ಲಿ ಹುಟ್ಟಿದ ಸ್ವಯಂಪ್ರಭೆಯೊಡನೆ ವಿಶೇಷ ಅನುರಾಗದಿಂದ ಲಲಿತಾಂಗನು ಇದ್ದನು. ಆಯುಷ್ಯವು ಇನ್ನು ಆರು ತಿಂಗಳಿದೆ ಎನ್ನುವಾಗ ಲಲಿತಾಂಗನು ತನ್ನ ಸಾವಿನ ಕಟುಸತ್ಯವನ್ನು ಅರಿತು, ಸ್ವರ್ಗಸುಖವನ್ನು ಹಾಗೂ ಸ್ವಯಂಪ್ರಭೆಯನ್ನು ಬಿಟ್ಟು ಹೋಗಬೇಕಾಗುವ ಸಂದರ್ಭವನ್ನು ನೆನೆದು ದುಃಖಿಸಿದನು. ಸಾಮಾನಿಕ ದೇವತೆಗಳ ಪ್ರತಿಬೋಧನೆಯಿಂದ ಶುಭಪರಿಣಾಮದಿಂದ ಸತ್ತು ವಜ್ರಜಂಘನಾಗಿ ಹುಟ್ಟಿದನು.

**ಆದಿಪುರಾಣ-ಪೂರ್ವಪುರಾಣ :** ಕಥಾವಸ್ತುವಿನ ದೃಷ್ಟಿಯಿಂದ ಪಂಪನು ಪೂರ್ವಪುರಾಣವನ್ನು ಅನುಸರಿಸಿದ್ದರೂ ಕಾವ್ಯಕಲ್ಪನೆಯ ದೃಷ್ಟಿಯಿಂದ ಆದಿಪುರಾಣವೇ ಮೇಲ್ಮೆಯಾಗಿ ನಿಲ್ಲುತ್ತದೆ. ಪೂರ್ವಪುರಾಣದಲ್ಲಿ ಬರುವ ಕೆಲವು ಭಾಗಗಳಿಗೆ ಪುಟಕೊಟ್ಟು ಬೆಳಗುವಂತೆ ಮಾಡಿರುವ ಹಿರಿಮೆ ಪಂಪನ ಪ್ರತಿಭಾಸಾಮರ್ಥ್ಯಕ್ಕೆ ದ್ಯೋತಕವಾಗಿದೆ. ಪೂರ್ವಪುರಾಣದಲ್ಲಿ ಬರುವ ವರ್ಣನೆ, ಹೋಲಿಕೆ ಇವು ಪುರಾಣಶೈಲಿಯದಾದರೆ, ಆದಿಪುರಾಣದಲ್ಲಿ ಬರುವ ಈ ಭಾಗವು ರಸಾರ್ದ್ರತೆಯಿಂದ ಸೊಬಗಡರಿ ಮನೋಹರವಾಗಿದೆ.

'ದಿವಿಜೇಂದ್ರ ರುಂದ್ರ ವಿಭವದ ಆಗರಂ ಈ ಲೋಕದೊಳಂ ಇದೊಂದೆ ಸಾರಂ' ಎನಿಸುವ ಶ್ರೀಪ್ರಭವಿಮಾನದಲ್ಲಿ ಲಲಿತಾಂಗದೇವನಾಗಿ ಮಹಾಬಲ ವಿದ್ಯಾಧರನು ಪುನರ್ಭವ ಹೊಂದಿದನು. ನವಯೌವನ ಪರಿಪೂರ್ಣನಾದ ಸರ್ವಲಕ್ಷಣ ಸಂಪನ್ನನಾದ ಲಲಿತಾಂಗನ ಹುಟ್ಟಿನಿಂದ ದೇವಲೋಕದಲ್ಲಿ ಸಂಭ್ರಮವುಂಟಾಯಿತು.

ದೇವತೆಗಳಿಂದ ಸಂಭ್ರಮದ ಸ್ವಾಗತ, ಸ್ವಯಂಪ್ರಭೆಯಲ್ಲಿ ವಿಶೇಷ ಅನುರಾಗ, ಸಾವಿನ ಸೂಚನೆ, ಲಲಿತಾಂಗನ ಶೋಕ, ಸಾಮಾನಿಕ ದೇವತೆಗಳಿಂದ ಧರ್ಮಬೋಧನೆ—ಈ ಮೊದಲಾದ ವೃತ್ತಾಂತಗಳೆಲ್ಲವೂ ಪೂರ್ವಪುರಾಣವನ್ನೇ ಆಶ್ರಯಿಸಿ ಬಂದ ಸಂಗತಿಗಳು. ಆದರೆ ವಾಗ್ಧೋರಣೆಯಲ್ಲಿ ವ್ಯತ್ಯಾಸವಿದೆ. ಕೆಲವೆಡೆ ನಿರೂಪಣೆ ಪೂರ್ವಪುರಾಣದಲ್ಲಿ

ಬರುವುದಕ್ಕಿಂತ ಹೆಚ್ಚು ಸ್ವಾರಸ್ಯಪೂರ್ಣವಾಗಿದೆ. ಕಥಾರೀತಿ, ಒಂದೇ ಇದ್ದರೂ ಅಲ್ಲಿಯ ಕಥೆಯನ್ನು ಸುಮ್ಮನೆ ಹೇಳಿಬಿಡುವುದಷ್ಟೇ ಕವಿಯ ಗುರಿಯಲ್ಲ. ಆ ಕಥೆಗೆ ಜೀವತುಂಬಿ ಓದುಗರು ತನ್ಮಯರಾಗುವಂತೆ ಮಾಡುವ ಮೋಡಿ ಪಂಪನ ವರ್ಣನೆಯಲ್ಲಿದೆ.

ಪೂರ್ವಪುರಾಣದಲ್ಲಿ ಸ್ವಯಂಪ್ರಭೆಯ ರೂಪ ವಿಶೇಷದ ವರ್ಣನೆ ಅತ್ಯಂತ ಸಂಕ್ಷೇಪ ವಾಗಿ ಬಂದಿದೆ. ಉದಾಹರಣೆಗೆ :

ಅಥ ಸಾ ಕೃತನೇಪಥ್ಯಾ ಪ್ರಭಾತರಲವಿಗ್ರಹಾ |
ಪತ್ಯುರಂಕಗತಾ ರೇಜೇ ಕಲ್ಪಶ್ರೀರಿವ ರೂಪಿಣೀ || ( V- ೨೮೭)

ಕಾಂತಿಯಿಂದ ಚಲಿಸುತ್ತಿರುವ ಶರೀರವುಳ್ಳ ಆ ಸ್ವಯಂಪ್ರಭಾದೇವಿಯು ಅಲಂಕಾರ ಮಾಡಿಕೊಂಡು ಪತಿಯ ತೊಡೆಯ ಮೇಲೆ ಕುಳಿತು, ಸ್ತ್ರೀರೂಪವನ್ನು ಧರಿಸಿದ ಈಶಾನ ಕಲ್ಪದ ಲಕ್ಷ್ಮೀದೇವಿಯೋ ಎಂಬಂತೆ ಶೋಭಿಸಿದಳು. ಈ ಒಂದು ಶ್ಲೋಕದಲ್ಲಿ ರೇಖಾ ಮಾತ್ರವಾಗಿ ಚಿತ್ರಿತವಾಗಿರುವ ಆಕೆಯ ಸೌಂದರ್ಯದ ವರ್ಣನೆ, ಆದಿಪುರಾಣದಲ್ಲಿ ಐದು ವೃತ್ತಗಳಲ್ಲಿ ರೋಚಕವಾಗಿ ಹಿಗ್ಗಿನಿಂತಿದೆ (ii ೭೩-೭೭). ಆಕೆ 'ಲಲಿತಾಂಗನಳ್ಕೆರ್ದೆಗೆ ತೊಟ್ಟನೆ ಬೇಂಟಮೆ ಪುಟ್ಟುವಂತೆ' ಹುಟ್ಟಿದಳು. ಈ ಸ್ವಯಂಪ್ರಭೆ ಸಾಮಾನ್ಯ ದೇವಕನ್ನೆ ಯಲ್ಲ; ಲಲಿತಾಂಗನ ಹೃದಯದರಸಿ, ಈಕೆ 'ಸುಖದೊಂದು ಪಿಂಡ', 'ಪುಣ್ಯದ ಪುಂಜ', 'ಅಂಗಜಂಗೆ ಬಾಳ್', 'ಚಿತ್ತಜಂಗೆ ಕುಲದೈವ', 'ಅಂಗಜ ಚಕ್ರವರ್ತಿಗೆತ್ತಿದ ಪೊಸವಟ್ಟ', 'ಅಂಗಜನ ಕೈಪಿಡಿ'. ಹೀಗೆ ಆ ಸುದತಿಯ ರೂಪನ್ನು ಪರಿಪರಿಯಾಗಿ ಉತ್ಕೃಷ್ಟ ಪದಪುಂಜ ಗಳಿಂದ ವರ್ಣಿಸಿ, ಇನ್ನು ಬೇರೆ ಹೇಳಿದರೆ "ಚೀ ಕರಮೆಗ್ಗನಾಗೆನೆ?" ಎಂದು ಪಂಪ ಸುಮ್ಮನಾಗುತ್ತಾನೆ. ಪಂಪನ ಈ ರೀತಿಯ ವರ್ಣನೆಯಲ್ಲಿ ರೂಪಮಾಧುರ್ಯದ ಗಂಧ ವಿದೆ. ನಖಶಿಖಾಂತದವರೆಗೆ ವಿವಿಧ ಹೋಲಿಕೆಗಳಿಂದ ತುಂಬಿ ಬೇಸರತರಿಸುವ ವರ್ಣನಾ ವೈಖರಿಯಿರದೆ ಸ್ವಾರಸ್ಯಕರವಾದ ಬಣ್ಣನೆಯ ವಿಧಾನವಿದೆ.

ಕೆಲವೆಡೆ ಪೂರ್ವಪುರಾಣದ ಮಾತುಗಳು ಆದಿಪುರಾಣದಲ್ಲಿ ಯಥಾ ರೀತಿಯಲ್ಲಿ ಸಾಗುತ್ತವೆ. ಉದಾಹರಣೆಗೆ :

ಅಹೋಪರಮ್ಮೈಶ್ವರ್ಯಂ ಕಿಮೇತತ್ ಕೋಸ್ಮಿಕೇತ್ವಿಮೇ |
ಅನಮಂತ್ಯೇತ್ಯ ಮಾಂ ದೂರಾದಿತ್ಯಾಸೀದ್ವಿಸ್ಮಿತಃ ಕ್ಷಣಂ || (V-೨೬೪)

ಈ ಉತ್ಕೃಷ್ಟವಾದ ಐಶ್ವರ್ಯ ಯಾವುದು? ನಾನಾರು? ನಮಸ್ಕರಿಸುತ್ತಿರುವ ಇವ ನಾರು? ಬಂದು ದೂರದಿಂದ ನನ್ನನ್ನು ನಮಸ್ಕರಿಸುತ್ತಾರೆ. 'ಆನಾರ್ಗಿರ್ದ್ದ ವಿಮಾನ ಮಾವುದಿವರಾರೀಲೋಕಮೇನೆಂಬುದಾನೇ ನೋಂತಿಲ್ಲಿಗೆ ವಂದೆನ್' ಎಂದು ಲಲಿತಾಂಗ ದೇವನು ಸ್ವರ್ಗದಲ್ಲಿ ಅವತರಿಸಿದಾಗ ನಿದ್ದೆಯಿಂದೆಚ್ಚೆತ್ತವನಂತೆ ಕನವರಿಸುತ್ತಾನೆ.

ಭವ ಪ್ರತ್ಯಯ ಮೂಡಿದ ಲಲಿತಾಂಗನು ಸಮಸ್ತ ವಿಷಯಗಳನ್ನು ತಿಳಿದುಕೊಳ್ಳುವ ರೀತಿ ಹೀಗಿದೆ :

ಇದಂ ತಪಃಫಲಂ ದಿವ್ಯಮಯಂ ಸ್ವರ್ಗೋ ಮಹಾದ್ಯುತಿಃ |
ಇಮೇ ದೇವಾಸ್ಸಮುತ್ಸರ್ಪದ್ದೇಹೋದ್ಯೋತಾಃ ಪ್ರಣಾಮಿನಃ || (ಪೂರ್ವಪು. V-೨೭೭)

ಇದು ಶ್ರೇಷ್ಠವಾದ ತಪಸ್ಸಿನ ಫಲ. ಇದು ಮಹಾ ತೇಜೋಮಯವಾದ ಸ್ವರ್ಗ. ಸುತ್ತಲೂ ಹರಡುತ್ತಿರುವ ದೇಹಕಾಂತಿಯುಳ್ಳವರಾಗಿ ನಮಸ್ಕರಿಸುತ್ತಿರುವ ಇವರು

ದೇವತೆಗಳು.

> ಇದು ನಿಜಪೂರ್ವಪುಣ್ಯಫಲದಿಂ ದೊರೆಕೊಂಡ ವಿಮಾನಮೀವಿಮಾ
> ನದೊಳನುಬಂಧಿಸಿರ್ದ್ದುದಿದು ದೇವನಿಕಾಯಮಿದೀತ್ವದಂಘ್ರಿ ಪ
> ದ್ಮದ ಬಳಸಿರ್ಪ್ಪ ದಿವ್ಯಗಣಿಕಾಜನಂ . . . (ಆದಿಪು. ii-೬೮)

'ಇದು ಸುಖದೊಂದು ತುತ್ತತುದಿ', 'ರಾಗದ ಮೊತ್ತಮೊದಲ್', 'ನಿರಂತರಾಭ್ಯುದಯದ ಸಾಗರಂ', 'ವಿಭವದಾಗರಂ', 'ಈ ದಿವಿಜೇಂದ್ರ ರುಂದ್ರಲೋಕಮ್' ಎಂಬ ಈ ಮಾತುಗಳಲ್ಲಿ ಜಿನಸೇನರ ಭಾವನೆಗಳೇ ಪಂಪನಲ್ಲಿ ಸುಂದರವಾಗಿ ಧ್ವನಿತವಾಗಿರುವುದನ್ನು ಕಾಣಬಹುದಾಗಿದೆ.

ಲಲಿತಾಂಗದೇವನಿಗೆ ಲಲಿತಾಂಗನೆಂಬ ಹೆಸರು ಬರುವುದು ಆತನ ಲಲಿತಾಂಗತೆಯಿಂದ. ಅದು ಅನ್ವರ್ಥಕ. ಪಂಪನಲ್ಲಿ ಬರುವ ಈ ಮಾತು ಪೂರ್ವಪುರಾಣದಲ್ಲಿ ಇಲ್ಲ.

ಲಲಿತಾಂಗದೇವನು ಸುರಸುಂದರಿಯರ ನಡುವೆ ಇದ್ದರೂ ಜಿನಧರ್ಮವನ್ನು ಮರೆತವನಲ್ಲ. ಅಮಲೇರಿಸುವ ಸುಂದರ ಸ್ತ್ರೀಯರ ಮಧ್ಯದಲ್ಲಿದ್ದರೂ ಧರ್ಮ, ಅರ್ಥ, ಕಾಮಗಳಲ್ಲಿ ಅವರನ್ನು ಸಹವರ್ತಿಯಾಗಿ ಉಳ್ಳವನು. ಲಲಿತಾಂಗನು ಜನ್ಮವೆತ್ತಿದಾಗ ಆತನನ್ನು ಭೇಟಿಮಾಡಿದ ದೇವತೆಗಳು ಆತನಿಗೆ ಸೂಚಿಸಿದ ಮಾರ್ಗವಾದರೂ ಅದೇ ರೀತಿಯದು. ಪೂರ್ವಪುರಾಣದ ಈ ಮಹತ್ತರವಾದ ಅಭಿಪ್ರಾಯವು ಆದಿಪುರಾಣದಲ್ಲಿಯೂ ಮೂಡಿ ಬಂದಿದೆ.

ಈ ಸ್ವರ್ಗಸುಖದ ಅನುಭವ ಲಲಿತಾಂಗದೇವನ ಪೂರ್ವಜನ್ಮದ ತಪಸ್ಸಿನ ಫಲ. ಆದ್ದರಿಂದ ಧರ್ಮವನ್ನು ಸಂಪಾದಿಸಬೇಕು ಎಂದು ಜಿನಸೇನರು ಐದನೆಯ ಪರ್ವದಲ್ಲಿ ನೇರವಾಗಿ ಹೇಳಿದ್ದರೆ ಪಂಪನು ಅದನ್ನು ಅಲ್ಲಲ್ಲಿ ಸೂಚ್ಯವಾಗಿ ಹೇಳಿದ್ದಾನೆ.

ಲಲಿತಾಂಗನು ಸ್ವಯಂಪ್ರಭೆಯ ಒಲವಿನಾಗರದಲ್ಲಿ ಓಲಾಡಿ ಸ್ವರ್ಗಲೋಕಸುಖ ಸಾರವತ್ತಾಯಿತೆಂದು ತಿಳಿಯುತ್ತಾನೆ. ಆದರೆ ಈ ಭೌತಿಕ ಸುಖ ಎಷ್ಟರವರೆಗೆ ನಿಲ್ಲುವಂತಹದ್ದು? (ಜೈನರಲ್ಲಿ ದೇವತೆಗಳು ಅಮರರಲ್ಲ, ಅವರಿಗೂ ಮರಣವುಂಟು). ಲಲಿತಾಂಗನ ಆಯುಸ್ಸು ಇನ್ನು ಆರು ತಿಂಗಳು ಇದೆ ಎನ್ನುವಾಗ ಆತನು ತೊಟ್ಟಿದ್ದ ಆಭರಣಗಳ ಕಾಂತಿ ಕುಂದಿತು; ಧರಿಸಿದ್ದ ಪುಷ್ಪಮಾಲಿಕೆ ಬಾಡಿತು; ಶರೀರದ ಕಾಂತಿ ಇಳಿಮುಖವಾಯಿತು. ದೇವಸಂಕುಲ ಲಲಿತಾಂಗನ ಈ ಅವಸ್ಥೆಗೆ ದುಃಖಗೊಂಡಿತು. ಮರಣ ಸನ್ನಿಹಿತವಾದ ಲಲಿತಾಂಗದೇವ ಈಗ ಮಾನವರಿಗೆ ಹತ್ತಿರನಾದನು. ಆತನ ಒಳಗುದಿ, ತನ್ನವರನ್ನು ಹಾಗೂ ತನ್ನ ಪರಿಸರವನ್ನು ಬಿಟ್ಟು ಹೋಗಬೇಕಲ್ಲ ಎಂಬ ದುಃಖದ ಆವೇಗ ಸಹಜ ಸುಂದರವಾಗಿ ವರ್ಣಿತವಾಗಿದೆ. ಲಲಿತಾಂಗನ ಈ ಹೃದಯ ವಿದ್ರಾವಕ ಪ್ರಲಾಪ ಪೂರ್ವಪುರಾಣದಲ್ಲಿ ಇಲ್ಲವೇ ಇಲ್ಲ ಎಂಬುದು ಗಮನಾರ್ಹ. ಆದಿಪುರಾಣದಲ್ಲಿ ಈ ಭಾಗ ಮನಮಿಡಿಯುವ ಭಾಗವಾಗಿ ಬಂದಿದೆ. ಉದಾಹರಣೆಗೆ :

> ಸುರತರುನಂದನಂಗಳಿರ ರತ್ನಪಿನದ್ಧವಿಮಾನಕುಟ್ಟಿಮಾಂ
> ತರಸುರತಾಲಯಂಗಳಿರ ಚಾರುವಿಲೋಲ ಕಟಾಕ್ಷಪಾತ್ರಸೌಂ
> ದರಪರಿವಾರದೇವಿಯರಿರಾ ಕಡುಕೆಯ್ದು ಕೃತಾಂತನಿಂತು ನಿ

ನ್ನೆರಮೆಟಿದುಯ್ಯೆ ಬಾರಿಸದೆ ಕೆಮ್ಮನುಪೇಕ್ಷಿಸಿ ನೋಡುತಿರ್ಪಿರೇ (iii-೪)

ಎಂದು ಒಂದೊಂದನ್ನೂ ಕೂಗಿ ಕರೆದು ಪ್ರಶ್ನಿಸುತ್ತಾನೆ. ದುಃಖದ ಆವೇಗದಲ್ಲಿ ವಿವೇಚನೆಯನ್ನು ಕಳೆದುಕೊಳ್ಳುತ್ತಾನೆ. ಈಗ ಅವನ ದೃಷ್ಟಿ ಸ್ವಯಂಪ್ರಭೆಯತ್ತ ಹೊರಳುತ್ತದೆ. ಎಡೆಬಿಡದೆ ಅಗಲದಂತೆ ಪ್ರಾಣಕ್ಕೆ ಪ್ರಾಣವಾಗಿದ್ದ ಆ ಜೀವವನ್ನು ಕುರಿತು ತನ್ನನ್ನು ಉಳಿಸಿಕೊಳ್ಳುವಂತೆ ಅಂಗಲಾಚುತ್ತಾನೆ.

ಸಂತಸದಂತನೆಯ್ದಿ ಸುರತಾಮೃತದೊಳ್ ತಣಿದಟ್ಟಿಱಿಂ ಜಿಗಿ
ಲ್ಪಂತಿರೆ ಪತ್ತಿ ಮೆಯ್ಯುಳೆರಡಾದೊಡಮೇನಸುವೊಂದೆ ನೋೞ್ಪೊಡೆಂ
ಬಂತಿರೆ ಕೂಡಿ ನಿನ್ನೊಡನೆ ಭೋಗಿಸಲೀಯದೆ ಕಮ್ಮನೆನ್ನನು
ಯ್ವಂತಕನೆಂಬ ಬೂತನೆಲೆ ಮಾಣಿಸಲಾಗದೆ ಪೇೞ್ ಸ್ವಯಂಪ್ರಭೇ (iii-೫)

ಆದರೆ ಪ್ರಯೋಜನವೇನು? ಚತುರ್ಗತಿ ಭ್ರಮಣೆಯಲ್ಲಿ ಸಿಲುಕಿರುವವರ ಸಹಜಸ್ಥಿತಿಯಲ್ಲವೇ ಇದು? ನಾರಕಿ, ತಿರ್ಯಂಚ, ಮಾನವ, ದೇವರೆಲ್ಲರಿಗೂ ಹುಟ್ಟು-ಸಾವು ಸಮಾನವಾದುದು. ಈ ಒಂದು ಅಂಶವನ್ನು ಪಂಪನು ಮನದಟ್ಟು ಮಾಡಿಸಿರುವ ವಿಧಾನ ಅನುಪಮವಾಗಿದೆ.

ಮೃತ್ಯುಭೀತ ಚೇತನವೊಂದರ ತಳಮಳ, ಯಾತನೆ, ಯಾಚನೆಗಳನ್ನು ಪಂಪ ಇಲ್ಲಿ ಅನ್ಯಾದೃಶವಾಗಿ, ಅರ್ಥಪೂರ್ಣವಾಗಿ ಚಿತ್ರಿಸಿದ್ದಾನೆ. ಇಂಥ ಸ್ವೋಪಜ್ಞತೆಯಿಂದಲೇ ಅವನ ಕಾವ್ಯ ಮೂಲದಲ್ಲಿಲ್ಲದ ವಿಶಿಷ್ಟ ಶ್ರೀಮಂತಿಕೆಯನ್ನು ಆರ್ಜಿಸಿಕೊಂಡಿರುವುದು.[೧೧]

ಸಾವನ್ನು ಎದುರುಗೊಳ್ಳುವ ಧೀಶಕ್ತಿಯನ್ನು ಗಳಿಸುವುದು ಎಲ್ಲರಿಗೂ ಸಾಧ್ಯವಿಲ್ಲ. ಅಂತೆಯೇ ಲಲಿತಾಂಗದೇವ ಮೊದಲಿಗೆ ಸಾವಿನ ಸೂಚನೆಯಿಂದಲೇ ಅಳ್ಳೆದೆಯವನಾಗುತ್ತಾನೆ. ಆತನಿಗೆ ಸಹಜಸ್ಥಿತಿಯನ್ನು ತಿಳಿಸಿ ಧೈರ್ಯತುಂಬುವ ಕೆಲಸವನ್ನು ಮಾಡಿದವರು ಅಲ್ಲಿಯ ದೇವತೆಗಳು.

ಸಾಮಾನಿಕ ದೇವತೆಗಳಿಂದ ಉಪದೇಶವಾದಾಗ ಲಲಿತಾಂಗನು ಉಪಶಾಂತನಾದನು. ಈ ಭಾಗದಲ್ಲಿ ಬರುವ ಪಂಪನ ಮಾತುಗಳು ಪೂರ್ವಪುರಾಣದ ಅಭಿಪ್ರಾಯಗಳಿಗೆ ಅನುಗುಣವಾಗಿದ್ದರೂ ಹೇಳುವ ರೀತಿ ಮೂಲಕ್ಕಿಂತ ಪ್ರಭಾವಶಾಲಿಯಾಗಿದೆ. ಉದಾಹರಣೆಗೆ :

ಭೋ ಧೀರ ಧೀರತಾಮೇವ ಭಾವಯಾದ್ಯಶುಚಂ ತ್ಯಜ |
ಜನ್ಮಮೃತ್ಯುಜರಾತಂಕಭಯಾನಾಂ ಕೋ ನ ಗೋಚರಃ ||

ಸಾಧಾರಣೀಮಿಮಾಂ ವಿದ್ಧಿ ಸರ್ವೇಷಾಂ ಪ್ರಚ್ಯುತಿಂ ದಿವಃ |
ದ್ಯೌರಾಯುಷಿ ಪರಿಕ್ಷೀಣೇನ ವೋಢುಂ ಕ್ಷಮತೇ ಕ್ಷಣಂ || (ಪೂರ್ವಪು. VI-೧೦, ೧೧)

ಎಲೈ, ಧೀರನೇ! ಈಗ ದುಃಖವನ್ನು ಬಿಟ್ಟು ಧೀರತ್ವವನ್ನೇ ಭಾವಿಸು. ಜನ್ಮ, ಮರಣ, ಮುಪ್ಪು, ರೋಗ, ಭಯ ಮೊದಲಾದ ದುಃಖಗಳಿಗೆ ಯಾರು ವಿಷಯರಲ್ಲ? ಸ್ವರ್ಗದಿಂದ ಚ್ಯುತಿಯಾಗುವುದು ಎಲ್ಲಾ ದೇವತೆಗಳಿಗೂ ಸಮಾನವಾಗಿದೆಯೆಂದು ತಿಳಿ. ಆಯುಷ್ಯವು ತೀರಿಹೋದ ಮೇಲೆ ಸ್ವರ್ಗವೂ ಒಂದು ಕ್ಷಣಕಾಲದವರೆಗೂ ಪ್ರಾಣಿಯನ್ನು ಧರಿಸಿಕೊಳ್ಳುವುದಕ್ಕೆ ಸಮರ್ಥವಾಗುವುದಿಲ್ಲ.

ನಿನಗೊರ್ವ್ವಂಗಲ್ಲವಸ್ಥಾಂತರಮಮರಜನಕ್ಕೆಲ್ಲಮೀಪಾಂಗೆ ಕಾರು
ಣ್ಯನಿನಾದಂ ನಿನ್ನನಾದಂ ನಗಿಸುಗುಮೆಟೆದುಯ್ವಂತಕಂಗಿಲ್ಲಿ ದೇವಾಂ
ಗನೆಯರ್ ಮಾಱಾಂಪರೇ ಪೇೞ್ ಜನನಮೃತಿಜರಾತಂಕಶೋಕಾಗ್ನಿಯಿಂದಾ
ವನುಮೀಸಂಸಾರದೊಳ್ ಬೇಯದನೊಳನೆ ಶರಣ್ ಧರ್ಮದಿಂದೊಂದುಮುಂಟೇ (iii-೬)

"ಭೋಗದಿಂದ ನಿರಾಸೆ ದುಃಖ ಪತನಗಳು ತಪ್ಪಿದ್ದಲ್ಲ, ಧರ್ಮವೊಂದೇ ಉದ್ಧಾರದ ಶಕ್ತಿ"—ಎನ್ನುವುದನ್ನು ಕವಿ ಓದುಗರಾದ ನಮಗೆ ಮನದಟ್ಟು ಮಾಡಿದ್ದಾನೆ. ಸುಖಿಯೂ ಭೋಗಿಯೂ ಆದ ಪಾತ್ರವನ್ನು ಚಿತ್ರಿಸುವಾಗಲೂ ಕವಿಗೆ ಅದು ಆದಿನಾಥನ ಪೂರ್ವಭವ ವೆಂಬ ಕಾರಣದಿಂದಾಗಿ ಪ್ರೀತಿ ಗೌರವಗಳ ಭಾವವೇ ಇದೆ. ದೈಹಿಕ ಸುಖವನ್ನು ತುಚ್ಛವಾಗಿ ತಿಳಿದು, ದೇಹದಂಡನೆ ಮಾಡಿಕೊಂಡು ಮಹತ್ತಾದುದನ್ನು ಪಡೆಯಲು ಬಯಸುವುದಿಲ್ಲ. ಪಡೆದ ದೈಹಿಕ ಸುಖವೇ ಸರ್ವಸ್ವವೂ ಅಲ್ಲ. ಅದರ ಅರಿವು ಮೂಡಿ ವೈರಾಗ್ಯದತ್ತ ಮನಸ್ಸು ಹೊರಳುವುದು ಅಪೇಕ್ಷಣೀಯವೆನ್ನುವುದು ಕವಿಯ ಇಂಗಿತ."[೧೨] ನಿಜ, ಈ ಭವದ ಹಿನ್ನೆಲೆಯಲ್ಲಿ ಮೂಡಿರುವ ಈ ಸಾರ್ವತ್ರಿಕ ತತ್ವಪ್ರತಿಪಾದನೆಯ ರೀತಿ ಮನೋಜ್ಞ ವಾಗಿದೆ. ಲಲಿತಾಂಗಭವ ಮೇಲುನೋಟಕ್ಕೆ ಭೋಗದಾಗರದ ಓಲಾಟದಂತೆ ಕಂಡು ಬಂದರೂ ಮಾನಸಿಕ ನೆಲೆ ಹದಗೊಳ್ಳುತ್ತ ಬರುವ ಪೂರ್ವಪೀಠಿಕೆಯ ಮುಂದುವರಿಕೆ ಕಂಡುಬರುತ್ತದೆ. ಕೇವಲ ಭೌತಿಕಾಂಶವನ್ನೇ ನೆಮ್ಮಿ ಬೀಳದೆ, ಧರ್ಮದ ಉತ್ಕೃಷ್ಟತೆಯನ್ನು ಹೃದಯದಲ್ಲಿ ಹಮ್ಮಿಕೊಳ್ಳುವ ಭಾವನೆಯು ಇದರಲ್ಲಿ ಲೀನವಾಗಿದೆ.

**ಚಾವುಂಡರಾಯಪುರಾಣ :** ಚಾವುಂಡರಾಯಪುರಾಣದಲ್ಲಿ ರೇಖಾಮಾತ್ರವಾಗಿ ಹನ್ನೆ ರಡು ಸಾಲುಗಳಲ್ಲಿ ಈ ಭಾಗವು ಚಿತ್ರಿತವಾಗಿದೆ. ಲಲಿತಾಂಗದೇವನನ್ನು ದೇವತೆಗಳು ಎದುರುಗೊಳ್ಳುವ ವಿಷಯ, ಸಾಮಾನಿಕ ದೇವರ ಪ್ರತಿಬೋಧನೆಯ ಸಾರ, ಮಾಲೆ ಬಾಡುವ ವಿಷಯ ಈ ಮೊದಲಾದ ವಿಷಯಗಳನ್ನು ಕೈಬಿಟ್ಟು ಅತಿಸಂಗ್ರಹವಾಗಿ ಕಾವ್ಯ ಭಾಗವನ್ನು ನಿರೂಪಿಸಿದ್ದಾನೆ. ಲಲಿತಾಂಗದೇವನು ಸ್ವರ್ಗದಿಂದ ಚ್ಯುತನಾಗುವ ಸಂದರ್ಭ ದಲ್ಲಿ ಕೈಗೊಂಡ ಧ್ಯಾನದ ವರ್ಣನೆ ಪೂರ್ವಪುರಾಣದಲ್ಲಿ ಬರುವಂತೆಯೇ ಕಂಡುಬರು ತ್ತದೆ. ಪೂರ್ವಪುರಾಣದಲ್ಲಿ ಲಲಿತಾಂಗನು ಅಚ್ಯುತ ಸ್ವರ್ಗದಲ್ಲಿರುವ ಜಿನಬಿಂಬಗಳನ್ನು ಪೂಜಿಸಿ, ಚೈತ್ಯವೃಕ್ಷದ ಬುಡದಲ್ಲಿದ್ದು ಎರಡು ಕೈಗಳನ್ನು ಚೆನ್ನಾಗಿ ಜೋಡಿಸಿ ಪಂಚಪರ ಮೇಷ್ಠಿಗಳಿಗೆ ನಮಸ್ಕರಿಸಿ ಅದೃಶ್ಯನಾದನೆಂದಿದೆ. ಚಾವುಂಡರಾಯಪುರಾಣದಲ್ಲಿಯೂ ಸಹ ಇದೇ ಅನುಕರಣೆಯಿದೆ. ಪಂಪನಲ್ಲಿ ಈ ರೀತಿಯ ವರ್ಣನೆಯಿಲ್ಲ. ಅಚ್ಯುತ ಸ್ವರ್ಗದ ಲ್ಲಿರುವ ಜಿನೇಂದ್ರನನ್ನು ಪೂಜಿಸಿ ಅದೃಶ್ಯನಾದನು ಎಂದು ಮಾತ್ರ ಬರುತ್ತದೆ.

**ಹಸ್ತಿಮಲ್ಲನ ಪೂರ್ವಪುರಾಣ :** ಹಸ್ತಿಮಲ್ಲನು ಲಲಿತಾಂಗ ಭವದ ವರ್ಣನೆಯಲ್ಲಿ ಪೂರ್ವಪುರಾಣವನ್ನಾಗಲಿ, ಚಾವುಂಡರಾಯಪುರಾಣವನ್ನಾಗಲಿ ಹೆಚ್ಚು ಆಶ್ರಯಿಸದೆ, ಪಂಪನನ್ನು ಅನುಸರಿಸಿರುವುದನ್ನು ಹಲವಾರು ವಿವರಗಳಿಂದ ಸ್ಪಷ್ಟವಾಗಿ ಗುರುತಿಸಬಹು ದಾಗಿದೆ.

ಉದಾಹರಣೆಗೆ ಸಾವು ಸನ್ನಿಹಿತವಾದಾಗ ಲಲಿತಾಂಗನು ಸ್ವಯಂಪ್ರಭೆಯ ಅಗಲಿಕೆ ಗಾಗಿ, ಕಲ್ಪವೃಕ್ಷ ಉದ್ಯಾನ ಮೊದಲಾದವುಗಳ ಅಗಲಿಕೆಗಾಗಿ ಚಿಂತಿಸಿದನು ಎಂಬುದನ್ನು ಗಮನಿಸಬಹುದಾಗಿದೆ. ಆದಿಪುರಾಣದಲ್ಲಿ ಕಥಾವಿವರಗಳನ್ನು ಸಂಕ್ಷೇಪಿಸಿ ರೇಖಾಮಾತ್ರ

ವಾಗಿ ನೀಡಿದ್ದಾನೆ. ಚಾವುಂಡರಾಯಪುರಾಣಕ್ಕಿಂತ ಕವಿ ಒಂದೆರಡು ಅಂಶಗಳನ್ನು ಹೆಚ್ಚಿಗೆ ಹೇಳಿದ್ದಾನೆ. ಲಲಿತಾಂಗನ ಸಾವಿನ ಚಿಹ್ನೆ, ಅಗಲಿಕೆಯ ಶೋಕಗಳನ್ನು ಚಾಮುಂಡ ರಾಯನು ಉಲ್ಲೇಖಿಸಿಲ್ಲ, ಹಸ್ತಿಮಲ್ಲನಲ್ಲಿ ಈ ಉಲ್ಲೇಖಗಳಿವೆ.

**ಪುಣ್ಯಾಸ್ರವದ ಆದೀಶ್ವರರ ಕಥೆ** : ಕವಿ ನಾಗರಾಜನು ಮುಖ್ಯ ಕಥಾಚೌಕಟ್ಟಿನ ಹಿನ್ನೆಲೆ ಯಲ್ಲಿ ಈ ಭವವನ್ನು ಸಂಕ್ಷೇಪವಾಗಿ ನಿರ್ವಹಿಸಿದ್ದಾನೆ. "ಸುರಸೌಖ್ಯಸಾರಾಮೃತಶರನಿಧಿ ಯೊಳಗೆ ಮೂಡಿಮುಳುಗುತ್ತಿದ್ದ" ಲಲಿತಾಂಗನು, ಸ್ವಯಂಪ್ರಭೆಯಲ್ಲಿ ವಿವಿಧ ಸುಖನಿ ಮಗ್ನನಾಗಿರುವಾಗ ತನ್ನ ಆಯುಷ್ಯಾಂತದಲ್ಲಿ ಮರಣಚಿಹ್ನೆದೋರಿ ಖೇದಗೊಂಡನು. ಸಾಮಾನಿಕ ದೇವತೆಗಳು ಪ್ರತಿಬೋಧಿಸಿದಾಗ, ಶುಭ ಪರಿಣಾಮದಿಂದ ಮರಣವನ್ನು ಹೊಂದಿದನು. ಕಾವ್ಯವಿಶೇಷತೆಯ ಸೌಂದರ್ಯವಿಲ್ಲದೆ ಕಥಾನಿರೂಪಣೆಯಷ್ಟೇ ಇಲ್ಲಿ ಕಂಡುಬರುತ್ತದೆ. ಕಥಾಚೌಕಟ್ಟು ಉಳಿದ ಕವಿಗಳ ರೀತಿಯದೇ ಆದರೂ ನಿರ್ದಿಷ್ಟ ಆಕರವನ್ನು ಗುರುತಿಸುವುದು ಕಷ್ಟ.

**ಪುರುದೇವ ಚರಿತ** : ಹದಿನೈದು ಸಾಂಗತ್ಯಗಳಲ್ಲಿ ಈ ಭವದ ವರ್ಣನೆ ಬರುತ್ತದೆ. ಮಹಾಬಲ ಮುನಿನಾಥನು ಪರೀಷಹಗಳನ್ನು ಗೆದ್ದು 'ಸ್ವರ್ಗವನ್ನು ಸೂರೆಗೊಂಡನು'. ಪೂರ್ವಪುರಾಣ ಆದಿಪುರಾಣಗಳಲ್ಲಿ ಬರುವಂತೆ ಲಲಿತಾಂಗನನ್ನು ದೇವತೆಗಳು ಸಂದರ್ಶಿ ಸುವ ವಿಷಯ, ಮಾಲೆ ಬಾಡುವ ವಿಚಾರ, ಮೊದಲಾದುವುಗಳು ಇಲ್ಲಿ ಬರುವುದಿಲ್ಲ. ಲಲಿತಾಂಗನು ದೇವಿಯರೊಡನೆ ಪಂಚೇಂದ್ರಿಯ ಸುಖವನ್ನು ಉಪಭೋಗಿಸುತ್ತಿದ್ದ ರೀತಿಯನ್ನು ಒಂದೇ ಒಂದು ಸಾಂಗತ್ಯದಲ್ಲಿ ವರ್ಣಿಸಿ, ಲಲಿತಾಂಗನು ಭೋಗಸಾಗರದಲ್ಲಿ ಮುಳುಗಿದ್ದ ರೀತಿಯನ್ನು ನಿರೂಪಿಸಿದ್ದಾನೆ. 'ವನಿತಾಬಿಂಬಾಧರದಿಂದ ಪೊಡಮಟ್ಟ ಚುಂಬನದಿಂದ ರಸನ', 'ಕಂಕಣ ನೂಪುರಗಳ ಧ್ವನಿಯಿಂದ ಕಿವಿ', 'ರೂಪುಲಾವಣ್ಯಗಳ ಆಲೋಕನದಿಂದ ಕಣ್ಗಳು', 'ನಗೆಮುಖದಿಂದ ಹೊಮ್ಮುವ ನಿರುಪಮ ಸುಗಂಧದಿಂದ ಘ್ರಾಣ', 'ಪೆರ್ಮೊಲೆಯ ಸ್ಪರ್ಶದಿಂದ ಸ್ಪರ್ಶಸುಖ'—(ii-೪೫)—ಹೀಗೆ ಲಲಿತಾಂಗ ದೇವನು ತನ್ನ ದೇವಿಯರೊಂದಿಗೆ ಸುಖವನ್ನನುಭವಿಸುತ್ತಿದ್ದನು. ಲಲಿತಾಂಗನು ಸ್ವರ್ಗ ಲೋಕದಿಂದ ಧ್ಯಾನನಿರತನಾಗಿ ಚ್ಯುತನಾದ ರೀತಿ ಪೂರ್ವಪುರಾಣ ಮತ್ತು ಚಾವುಂಡ ರಾಯಪುರಾಣಗಳಲ್ಲಿ ಬಂದಿರುವಂತೆ ಬಂದಿದೆ. ಕವಿ ಈ ಭವದ ವರ್ಣನೆಯಲ್ಲಿ ಚಾವುಂಡರಾಯಪುರಾಣದ ಅನುಕರಣೆ ಮಾಡಿರುವುದನ್ನು ಗಮನಿಸಬಹುದಾಗಿದೆ.

**ಆದಿಪರಮೇಶ್ವರನ ಯಕ್ಷಗಾನ** : ಉತ್ತರಕಾಲೀನ ಕನ್ನಡ ಆದಿತೀರ್ಥಂಕರ ಚರಿತ್ರೆ ಗಳಲ್ಲಿ ಲಲಿತಾಂಗನ ಭವ ವಿವರವನ್ನು ವಿಸ್ತಾರವಾಗಿ ವರ್ಣಿಸಿರುವ ಕೃತಿ ಎಂದರೆ ಬೊಮ್ಮಣ್ಣನ ಆದಿಪರಮೇಶ್ವರನ ಯಕ್ಷಗಾನವಾಗಿದೆ.

'ಕಮಲರಿಪುಕರಭಾಸುರಾಂಗ'ನಾದ, 'ಕಮನೀಯಾತ್ಮಕ'ನಾದ ದಿವಿಜೇಂದ್ರನು ಜನಿ ಸಿದಾಗ ದೇವಘಂಟಾಸ್ವರವು ಮೊಳಗಿತು. ದೇವಿಯರು ಬಂದು ನೆರೆದಾಗ ಲಲಿತಾಂಗನಿಗೆ ಅವಧಿಜ್ಞಾನವು ಹುಟ್ಟಿತು. ತನ್ನ ಸುವಿಧಿಪೂರ್ವಕವಾದ ತಪ ಮಹಾತ್ಮೆಯಿಂದ ಮತ್ತು ಅತಿಶಯ ಜಿನದೀಕ್ಷೆಯ ಮಹಾತ್ಮೆಯಿಂದ, ದಿವಿಜಪದವಿ ದೊರೆಯಿತೆಂದು ತಿಳಿದು, ಜರೆ ಶೀತಾದಿ ರಹಿತನಾದ ದೇವನು ಚೈತ್ಯಾಲಯಗಳನ್ನು ಪೂಜಿಸಿ, ಸುರಗತಿಯ ಸೌಖ್ಯದಿಂದ ಸುರಕಾಂತೆಯರೊಡನೆ ಸುಖದಿಂದಿರುವಾಗ ಸ್ವಯಂಪ್ರಭೆ ವಿರಾಜಿಸಿದಳು. ಲಲಿತಾಂಗನು

ದೇವಿಯರೊಂದಿಗೆ ವನಕೇಳಿ, ಗಂಧಾಂಬುಕೇಳಿ, ವಿಲಾಸಕೇಳಿಗಳಲ್ಲಿರುವಾಗ ಅವಸಾನ ಚಿಹ್ನೆ ಕಾಣಿಸಿತು. ದಿವ್ಯಾಂಗದ ಕಳೆ—ಬೆಡಂಗು ತಗ್ಗಿತು. ಮಣಿಭೂಷಣದ ಕಾಂತಿ, ಕುಸುಮಮಾಲೆಯ ರಂಗು ಕುಂದಿತು. ಚಿಂತೆಯಿಂದ ಕೂಡಿದ ಲಲಿತಾಂಗನಿಗೆ ದೇವತೆಗಳು ಪರಿಪರಿಯಾಗಿ ಉಪದೇಶಮಾಡಿದರು.

ಕವಿ ಕೆಲವೆಡೆ ಪ್ರಭಾವಕಾರಿಯಾದ ಪದಪ್ರಯೋಗಗಳನ್ನು ಮಾಡಿ ವಾಗ್ಘೋರಣೆಯನ್ನು ಹರಿತಗೊಳಿಸಿದ್ದಾನೆ.

ಕ್ರೂರಕಾಲನಿಗಿಟ್ಟ ಕಬಳಾಹಾರ ನರಸುರ ನಾಗಲೋಕವು
ಮೀರಿಬಾಳುವನಾವ ಕಾಲ ಕ್ರೂರತನವಾ (ಪರಿಚ್ಛೇದ ii)

ಆರು ಪದ್ಯಗಳಲ್ಲಿ ಬರುವ ಸಾಮಾನಿಕ ದೇವತೆಗಳ ಸಮಾಧಾನದ ನುಡಿ ಉಪದೇಶ ಆದಿಪುರಾಣಕ್ಕೆ ಹೆಚ್ಚು ಹತ್ತಿರವಾದಂತೆ ಕಂಡುಬರುತ್ತದೆ.

ವಿವಿಧರೀತಿಯಲ್ಲಿ ಬೋಧಿಸಿದ ಸಾಮಾನಿಕ ದೇವತೆಗಳು ಕೊನೆಗೆ ಈ ರೀತಿ ಹೇಳುತ್ತಾರೆ :

ಅವಧಿಯಿಲ್ಲವೆ? ಚಿಂತೆಸಗಿದ ವಿವಿಧಪುಣ್ಯವು ಗೋಚರಿಲ್ಲವೆ?
ದಿವಿಜ ನೀ ಚಿಂತಿಪರೆ? ಧ್ಯಾನಿಸು ಧ್ರುವದೊಡೆಯನ (ಪರಿಚ್ಛೇದ ii)

ಅವಧಿಜ್ಞಾನದ ಬಗೆಗೆ ನೆನಕೆಯನ್ನುಂಟುಮಾಡುವ ವಿಷಯ ಇತರ ಕಾವ್ಯಗಳಲ್ಲಿ ಕಂಡುಬರುವುದಿಲ್ಲ.

ಪಂಪಕವಿಯ ಆದಿಪುರಾಣವನ್ನು ಕವಿ ಗಮನಿಸಿ ಹೆಚ್ಚಾಗಿ ಅದನ್ನೇ ಅನುಕರಿಸಿದ್ದಾನೆ ಎಂಬುದಕ್ಕೆ ಕೆಲವು ಉದಾಹರಣೆಗಳನ್ನು ನೀಡಬಹುದು :

ಒಂದು ಸಾಗರಮಾಯು ಸಂಪದದಿಂದ ಸಪ್ತಹಸ್ತದುತ್ಸೇ
ಧಂದವಹ ಸುವರ್ಣ ಛಾಯಾನಂದ ನಿಧಿಯೂ ||
ಜರೆಯು ಶೋಕ ವಿಷಾದ ರಹಿತನು ನಿರುತನಿದ್ರಾಲಸ್ಯಮಕ್ಷಿಯು
ವರಾನಿಮೇಷನು ಕಾಯ ಪ್ರವಿಚಾರುರುತರಂಗಾ (ಪರಿಚ್ಛೇದ ii)

ತಪ್ತತಪನೀಯಚ್ಛಾಯನುಂ ಸಪ್ತ ಹಸ್ತೋಚ್ಛ್ರಿತ ಶರೀರನುಂ ನಿದ್ರಾಲಸ್ಯಾಕ್ಷಿ ನಿಮೇಷ ಜರಾ ಶೋಕ ವಿಷಾದ ವಿರಹಿತನುಂ....(ಆದಿಪು. ಆಶ್ವಾಸ ii)

ಈ ಭವ ನಿರೂಪಣೆಯಲ್ಲಿ ಕವಿಯು ಅಲ್ಲಲ್ಲಿ ಸ್ವೋಪಜ್ಞತೆಯ ಛಾಯೆಯನ್ನು ಕೂಡ ಬೀರಿ, ಮೂಲ ಆಶಯಕ್ಕೆ ಚ್ಯುತಿಬಾರದಂತೆ ವಿವರಿಸಿದ್ದಾನೆ.

ಒಂದು ಜೀವ ಮತ್ತೊಂದು ಜೀವದೊಡನೆ ಭವಸಂಬಂಧವನ್ನು ಗಳಿಸಿಕೊಳ್ಳಲು ಕಾರಣವಾಗುವ ಮೋಹನೀಯ ಕರ್ಮಜಾಲದ ಬಂಧನವನ್ನು ಈ ಭವನಿರೂಪಣೆಯಲ್ಲಿ ಗಮನಿಸಬಹುದು. ಲಲಿತಾಂಗ-ಸ್ವಯಂಪ್ರಭೆಯರ ಮನಸ್ಸು ಪರಸ್ಪರ ಬೆಸೆದು ಗಾಢವಾಗುವ ಅಂಶವೂ ಇಲ್ಲಿ ಪ್ರಮುಖವಾಗಿ ನಿಲ್ಲುತ್ತದೆ.

ಶ್ರೀಪ್ರಭವಿಮಾನವಾದರೂ ಕೇವಲ ಭೌತಿಕತೆಗೇ ಬೆಲೆಯನ್ನು ನೀಡುವ ಸ್ವರ್ಗದ ನೆಲೆಯಲ್ಲ. ಧಾರ್ಮಿಕ ಕಾರ್ಯಗಳಿಗೂ ಅಲ್ಲಿ ಎಡೆಯುಂಟು. ಲಲಿತಾಂಗನು ಹುಟ್ಟುತ್ತಿದ್ದಂತೆ ದೇವತೆಗಳು ಬಂದು ಈ ಮಾತನ್ನು ಸ್ಪಷ್ಟಪಡಿಸುತ್ತಾರೆ. ಧರ್ಮಪ್ರಜ್ಞೆಯೊಂದೇ ಜೀವಿಗೆ ಸದ್ಗತಿಯನ್ನು ಒದಗಿಸಿಕೊಡುವ ಸೋಪಾನವೆಂಬುದನ್ನು ತಿಳಿಸಿಕೊಡುತ್ತಾರೆ.

ಲಲಿತಾಂಗ ಭವದಲ್ಲಿ ಆ ಭೋಗದಾಗರದ ನೆಲೆಯಲ್ಲಿಯೂ ಧರ್ಮಪ್ರಜ್ಞೆ ಮೀಟಿ ಮಿಡಿದಿರುವ ಅಂಶವನ್ನು ನಾವು ಮರೆಯುವಂತಿಲ್ಲ. ಈ ದೃಷ್ಟಿ ಪಂಪನಲ್ಲಿ ವಿಸ್ತೃತ ವಿವರಣೆಯೊಂದಿಗೆ ಬಂದಿದ್ದರೆ, ಉಳಿದೆಡೆಗಳಲ್ಲಿ ರೇಖಾಮಾತ್ರವಾಗಿ ಇಲ್ಲವೆ ಸಂಕ್ಷಿಪ್ತ ನಿರೂಪಣೆಯೊಂದಿಗೆ ಬಂದಿದೆ.

## ವಜ್ರಜಂಘ ಭವ

ವಜ್ರಜಂಘ-ಶ್ರೀಮತಿಯರ ವೃತ್ತಾಂತವನ್ನಷ್ಟೇ ಅಲ್ಲದೆ, ಅವರಿಗೆ ಸಂಬಂಧಿಸಿದ ಅನೇಕ ವ್ಯಕ್ತಿಗಳ ಭವಗಳ ಕಥೆಗಳನ್ನೂ ಒಳಗೊಂಡು ಈ ಭವದ ಹರವು ವಿಸ್ತಾರವಾದ ರೂಪವನ್ನು ಹೊಂದಿದೆ.

ಲಲಿತಾಂಗದೇವನು ಸ್ವರ್ಗದಿಂದ ಚ್ಯುತನಾಗಿ ಪುಷ್ಕಳಾವತೀ ದೇಶದ ರಾಜ ವಜ್ರಬಾಹುವಿಗೂ, ಸೌಂದರಿಗೂ (ವಸುಂಧರೆ-ಪೂರ್ವಪುರಾಣ) ವಜ್ರಜಂಘನೆಂಬ ಮಗನಾಗಿ ಹುಟ್ಟಿದನು. ಲಲಿತಾಂಗನ ವಿಯೋಗದಿಂದ ದುಃಖಿತೆಯಾದ ಸ್ವಯಂಪ್ರಭೆ ದೇವತೆಗಳ ಉಪದೇಶದಿಂದ ಉಪಶಾಂತಿಯನ್ನು ಪಡೆದು, ಪುಂಡರೀಕಿಣಿಯ ವಜ್ರದಂತ ನೃಪತಿಗೂ ಲಕ್ಷ್ಮೀಮತಿಗೂ ಶ್ರೀಮತಿಯೆಂಬ ಮಗಳಾಗಿ ಹುಟ್ಟಿದಳು. ಅವಳು ಪಂಡಿತೆಯಿಂದ ಕಲಾಪ್ರವೀಣೆಯಾದಳು. ಮುಂದೆ, ದೇವಸಂಕುಲವನ್ನು ನೋಡಿ ಶ್ರೀಮತಿ ಜಾತಿಸ್ಮರೆಯಾಗಿ ಮೂರ್ಛೆ ಹೋಗುವುದು, ತಂದೆತಾಯಿಗಳು ವಿಚಾರಿಸಲು ಬಂದುದು, ವಜ್ರದಂತ ಚಕ್ರವರ್ತಿಯ ಆಯುಧಾಗಾರದಲ್ಲಿ ಚಕ್ರರತ್ನ ಉತ್ಪನ್ನ, ಯಶೋಧರ ಮುನಿಗಳ ಕೇವಲಜ್ಞಾನೋದಯ, ಕೇವಲಿಗಳನ್ನು ಪೂಜಿಸಿ ಅವಧಿಜ್ಞಾನಸಂಪನ್ನನಾಗಿ ವಜ್ರದಂತನು ದಿಗ್ವಿಜಯಕ್ಕೆ ತೆರಳಿದುದು, ಪಂಡಿತೆ ಶ್ರೀಮತಿಯ ಮನದ ಅಳಲನ್ನು ಅರಿಯುವುದು, ಶ್ರೀಮತಿಯ ಹಿಂದಿನ ಭವಗಳ ವೃತ್ತಾಂತ, ಶ್ರೀಮತಿ ಬರೆದುಕೊಟ್ಟ ಚಿತ್ರಪಟದಿಂದ ಪಂಡಿತೆಯು ವಜ್ರಜಂಘನನ್ನು ಸಂದರ್ಶಿಸುವುದು, ದಿಗ್ವಿಜಯದಿಂದ ಹಿಂದಿರುಗಿದ ವಜ್ರದಂತನು ಮಗಳಿಗೆ ಸಮಾಧಾನ ಹೇಳುವುದು, ವಜ್ರದಂತ ಮೊದಲಾದವರ ಭವಾಂತರ ಕಥೆ, ವಜ್ರಜಂಘ ಶ್ರೀಮತಿಯರ ವಿವಾಹ, ಪುತ್ರರ ಜನನ, ವಜ್ರದಂತ, ವಜ್ರಬಾಹುಗಳ ವೈರಾಗ್ಯ, ವಜ್ರಜಂಘನು ಪುಂಡರೀಕಿಣಿಯಲ್ಲಾದ ಅರಾಜಕತೆಯನ್ನು ಹೋಗಲಾಡಿಸಲು ಪಯಣಬೆಳೆಸಿದುದು, ಚಾರಣಮುನಿಗಳಿಗೆ ಆಹಾರ ನೀಡಿದುದು, ತನ್ನ ಮಂತ್ರಿ ಮೊದಲಾದವರ ಭವ ವೃತ್ತಾಂತವನ್ನರಿತುದು, ಪುಂಡರೀಕಿಣಿಯನ್ನು ನಿಷ್ಕಂಟಕಗೊಳಿಸಿ ಹಿಂದಿರುಗಿದುದು, ಕಾಲಾನಂತರ ಸೆಜ್ಜೆಮನೆಯಲ್ಲಿ ಶ್ರೀಮತಿ ವಜ್ರಜಂಘರು ಗವಾಕ್ಷದ ಬಾಗಿಲನ್ನು ತೆರೆದಿಡುವುದನ್ನು ಮರೆತು ಮಲಗಿರುವಾಗ ಧೂಮವು ಸುತ್ತಿಕೊಂಡು ಅವರು ಸಾಯುವುದು ಈ ಹಲವಾರು ಸುದೀರ್ಘ ಘಟನಾವಳಿಗಳೊಂದಿಗೆ ಈ ಭವದ ಕಥೆ ಹೆಣೆದುಕೊಂಡು ಕಥೆಯು ತೊಡಕಾಗಿ ಕಂಡು ಬಂದರೂ ಭವಭವಾಂತರದ ಬಾಂಧವ್ಯವನ್ನು ಚಿತ್ರಿಸುವುದರಲ್ಲಿ ಇದು ಔಚಿತ್ಯಪೂರ್ಣವಾಗಿಯೇ ಕಂಡುಬರುತ್ತದೆ. ಭವದ ಇರವು ಹೇಗೋ, ಅದರ ನಿರೂಪಣೆಯೂ ಹಾಗೆಯೇ ತೋರಬೇಡವೇ? ಓದುಗರನ್ನು ಅದರಲ್ಲಿ ತನ್ಮಯಗೊಳಿಸಿ ಅದರ ಬಗೆಗೆ ಸ್ವಲ್ಪ ಹೊತ್ತಾದರೂ ಚಿಂತಿಸುವಂತೆ ಮಾಡಬೇಡವೇ?

## ವಜ್ರಜಂಘನ ಜನನ, ಬೆಳೆವಣಿಗೆ

**ಆದಿಪುರಾಣ–ಪೂರ್ವಪುರಾಣ :** ವಜ್ರಜಂಘನಾಗಿ ಹುಟ್ಟಿದಾಗ ಅಮರಲೋಕದ ವಾಸವಾಗಲಿ ಆ ಹೆಸರಾಗಲಿ ಅವನಿಗೆ ಇರಲಿಲ್ಲ ಎಂಬುದೊಂದು ವ್ಯತ್ಯಾಸವೇ ಹೊರತು, ಉಳಿದಂತೆ ಆತ ಸ್ವರ್ಗಸುಖವನ್ನೇ ಈ ಭೂಮಿಯಲ್ಲಿ ಅನುಭವಿಸಿದ. 'ಅಂಗರುಚಿ ರೂಪಿನ ಪೆಂಪಿನ ಗಾಡಿ ಏಳ್ಗೆ', 'ಮೇಲಾದ ವಿಳಾಸದ ಒಡ್ಡು' ಇವಿಷ್ಟೂ ಸ್ವರ್ಗದಿಂದ ಈತನ ಜೊತೆಗೇ ಇಳಿದುಬಂದಂತೆ ಆ ವಜ್ರಜಂಘನ ರೂಪು ಯೌವನವನ್ನು ಒತ್ತರಿಸು ತ್ತಿತ್ತು. ವಿಶೇಷವೆಂದರೆ ಆತನ ಮನಸ್ಸು ಸ್ವಯಂಪ್ರಭೆಯಿಂದ ಕಿತ್ತೊಗೆದಿರಲಿಲ್ಲ. ಗಾಢ ವಾದ ಆತ್ಮೀಯ ಬಂಧನದ ಬೆಸುಗೆ ಮನದಾಳದಲ್ಲಿ ನೆಲೆಯೂರಿತ್ತು. ವಜ್ರಜಂಘನ ಯೌವನವು ಏರುತ್ತಿದ್ದಂತೆ ಯೌವನಸಹಜವಾದ ಭಾವಗಳು ಮೂಡಲಿಲ್ಲ. 'ಈ ಮಹೀತಳದ ಭೋಗಮನೊಲ್ಲದೆ ತತ್‌ಸ್ವಯಂಪ್ರಭಾನನ ಸಕಳೇಂದು ಬಿಂಬದ ರಮ ಣೀಯಮನ್, ಅಕ್ಷಯ ಕಲ್ಪವೃಕ್ಷ ನಂದನವನದ ರಮ್ಯಮಂ' ನೆನೆದು ಸುರಲೋಕ ಸೌಖ್ಯವನ್ನು (ನರಲೋಕಸೌಖ್ಯವನ್ನು?) ದೂರಿಸಿದನು. ಹಾಗೆ ಗಗನತಳ ಕುಸುಮವನ್ನು ಬಯಸಿ ಮರುಳ್ಗೊಂಡ ಮರುಳನಂತೆ ದೇವಲೋಕದಲ್ಲಿ ತಾನು ಅನೇಕ ಕಾಲ ಅನುಭವಿ ಸಿದ ಅನುಭವಕ್ಕೆ ಮೊದಲಿಗಳೆನಿಸಿದ ಆ ಸ್ವಯಂಪ್ರಭೆಯನ್ನೇ ನೆನೆನೆನೆದು ತನಗಾಗಿ ಹಂಬಲಿಸಿ ಬಂದ ಸುಂದರ ಸ್ತ್ರೀಯರನ್ನು ನಿರಾಕರಿಸಿದನು.

> ಮಂದಾರಿಕಾ ಮಾಲೆಯೊಳ್ | ಕಡುಗಂಪಂ ಸವಿದೊಂದು ತುಂಬಿ ಪಸಿವಿಂ ಮೆಳ್ಪಟ್ಟು
> ಬಂಡುಣ್ಣದಿಪ್ಪೊರ್ವಡಮಿರ್ಕುಂ ಬಟಿಕಿಂತುಮನ್ಯಕುಸುಮಾಮೋದಕ್ಕೆ ಮೆಯ್ಯುರ್ಕುಮೇ?
> (ಆದಿಪು. iii-೧೨)

ಪುಣ್ಯವಶಾತ್, ವಜ್ರಜಂಘನು ಬಯಸಿದುದು ಗಗನಕುಸುಮವಾಗಲಿಲ್ಲ, ಮಂದಾರ ಮಾಲೆಯ ಕಡುಗಂಪಿನ ಸುಖ ಮತ್ತೊಮ್ಮೆ ನಿಲುಕುವುದನ್ನು ಮುಂದೆ ಗಮನಿಸಬಹುದು.

ವಜ್ರಜಂಘನಿಗೆ ಸಂಬಂಧಿಸಿದ ಈ ವಿಷಯಗಳು ಪೂರ್ವಪುರಾಣವನ್ನು ಆಶ್ರಯಿಸಿ ಬಂದಿದ್ದರೂ ಕವಿ ಸಂಪೂರ್ಣವಾಗಿ ಪೂರ್ವಪುರಾಣಕ್ಕೆ ಆಭಾರಿಯಾಗಿಲ್ಲ. ಪೂರ್ವ ಪುರಾಣದಲ್ಲಿ ವಜ್ರಜಂಘನ ರೂಪಾತಿಶಯದ ವರ್ಣನೆ ಅಡಿಯಿಂದ ಮುಡಿಯವರೆಗೆ ದೊರೆಯುತ್ತದೆ. ವಜ್ರಜಂಘನ ಕಣಕಾಲುಗಳು ವಜ್ರದಂತೆ ದೃಢವಾಗಿದ್ದುದರಿಂದ ಆತ ನಿಗೆ ವಜ್ರಜಂಘನೆಂದು ಹೆಸರಾಯಿತೆಂದು ಪೂರ್ವಪುರಾಣವು ತಿಳಿಸುತ್ತದೆ. ಆದಿಪುರಾಣ ದಲ್ಲಿ ಈ ಅಂಶವು ಇಲ್ಲ. ಪೂರ್ವಪುರಾಣದಲ್ಲಿ ಕೆಲವೆಡೆ ವರ್ಣನೆಯು ಪುರಾಣಸಮಯ ಗಳಾಗಿ ಕಂಡುಬಂದರೆ, ಕೆಲವೆಡೆ ಕಾವ್ಯತ್ವದ ಮೆರುಗಿನಿಂದ ಕೂಡಿ ಕಲ್ಪನಾವಿಲಾಸದ ಕಾವ್ಯಶೋಭೆಯಿಂದ ಕೂಡಿದೆ. ವರ್ಣನಾಚಾತುರ್ಯ ಬಣ್ಣಗಟ್ಟಿದೆ. ಉದಾಹರಣೆಗೆ :

'ವಜ್ರಜಂಘನ ಮಸ್ತಕದಲ್ಲಿ ಕಪ್ಪಾದ ಕುರುಳುಕೂದಲುಗಳು ಕಾಮನೆಂಬ ಕೃಷ್ಣ ಸರ್ಪದ ವೃದ್ಧಿಹೊಂದುತ್ತಿರುವ ಮರಿಗಳೋ ಎಂಬಂತೆ ಶೋಭಿಸುತ್ತಿದ್ದವು' (ಪೂರ್ವಪು. vi-೩೨), 'ವಜ್ರಜಂಘನು ಕಂಠದಲ್ಲಿ ಹಿಮಬಿಂದುವಿಗೆ ಸಮಾನವಾದ ಕಾಂತಿಯುಳ್ಳ ಮುಕ್ತಾಹಾರವನ್ನು ಧರಿಸಿದ್ದನು' (ಪೂರ್ವಪು. vi-೩೪).

ವಜ್ರಜಂಘನು ಸ್ತ್ರೀಯರಲ್ಲಿ ನಿಸ್ಪೃಹಭಾವವನ್ನು ಹೊಂದಿದವನಾಗಿದ್ದನೆಂಬುದಕ್ಕೆ

ಸ್ವಯಂಪ್ರಭಾದೇವಿಯ ಅನುರಾಗದ ನೆನಪಿನ ಭಾವನೆಯಿಂದಿರಬಹುದೆಂಬ ಕಾರಣವು ಊಹೆಯ ಎಳೆಯಾಗಿ ಪೂರ್ವಪುರಾಣದಲ್ಲಿ ಕಂಡುಬಂದರೆ, ಆದಿಪುರಾಣದಲ್ಲಿ ಅದು ಸ್ಪಷ್ಟವಾಗಿ ಉತವಾಗಿದೆ.

## ಉತ್ತರಕಾಲೀನ ಕಾವ್ಯಗಳು

ಆದಿಪರಮೇಶ್ವರನ ಯಕ್ಷಗಾನವು ವಜ್ರಜಂಘನ ಜನನ ವೃತ್ತಾಂತದ ಬಗೆಗೆ ಉಳಿದ ಉತ್ತರಕಾಲೀನ ಕಾವ್ಯಗಳಿಗಿಂತ ಹೆಚ್ಚಿನ ವಿವರವನ್ನು ನೀಡುತ್ತದೆ.

ಬೊಮ್ಮಣ್ಣ ಕವಿಯು ಉಳಿದ ಕವಿಗಳು ಹೇಳದೆ ಇರುವ ವರ್ಣನೆಗಳನ್ನು ತೆಗೆದು ಕೊಂಡು ಜಾನಪದೀಯ ವರ್ಣನೆಯ ಚತುರತೆಯನ್ನು ತೋರಿದ್ದಾನೆ. ಅಲ್ಲದೆ ಅಲೌಕಿಕತೆಯ ಮೆರುಗನ್ನು ನೀಡಿದ್ದಾನೆ. ವಜ್ರಜಂಘನ ಭವ ಅಸಾಧಾರಣವಾದುದು. ಮುನಿಗಳಿಗೆ ಆಹಾರದಾನವನ್ನು ನೀಡಿ ಪುಣ್ಯಭಾಜನವಾದ ಜೀವ. ಈ ಅಸಾಧಾರಣ ಜೀವಿಯ ಜನ್ಮವನ್ನು ಪೂರ್ವಭಾವಿ ಪೀಠಿಕೆಯಿಲ್ಲದೆ ಹೇಳುವುದಾದರೂ ಹೇಗೆ ಎಂಬ ದೃಷ್ಟಿಯಿಂದ ಕವಿ ಈ ಭಾಗವನ್ನು ವೈಭವೀಕರಿಸಿ ಹೇಳಿರುವಂತೆ ತೋರುತ್ತದೆ.

ನಾಲ್ನೀರ ಸ್ನಾನಮಾಡಿ ಶುಚಿಯಾಗಿ 'ತರುಣೆರನ್ನೆ' ವಸುಂಧರಿ ದೇವಾಲಯದಲ್ಲಿ ಜಿನೇಶ್ವರನಿಗೆ ಕೈಮುಗಿದು ನಿಂತಿರಬೇಕಾದರೆ—"ಮಂದಾರ ಮಾಲೆಯನೊಂದ ದಕ್ಷಿಣ ಹಸ್ತದಿಂದ ಪದ್ಮಾಂಬೆ ವಸುಂಧರೆಗಿಯ್ಯೆ" ಮತ್ತು "ದೇವೇಂದ್ರನಾಯತವುಳ್ಳ ನಂದನ ನಹನು" ಎಂದು ಹೇಳಲು, ಸಂತೋಷಗೊಂಡ ವಸುಂಧರಿ ದೇವಿಗೆ ವಂದಿಸಿ ಅರಮನೆಗೆ ಹಿಂದಿರುಗಿದಳು. ದೇವಾಲಯದಲ್ಲಿ ನಡೆದ ವಿಷಯವನ್ನು ರಾಜನಿಗೆ ಹೇಳಿದ್ದಾಯಿತು. ಅಂದಿನ ಇರುಳು ಲಲಿತಾಂಗ ದೇವನು ತನ್ನ ದಿವ್ಯಾಂಗವನ್ನುಳಿದು ಈಕೆಯ ಗರ್ಭದಲ್ಲಿ ಸೇರಿದನು. ಆ ಸಮಯದಲ್ಲಿ ರಾಣಿಗೆ ಒಂದು ಸ್ವಪ್ನವಾಯಿತು. "ಕೇಸರಿಶಿಶು ಒಂದು ತನ್ನ ವಾಸವಾ ಪೊಗುವಂತಾ ಭಾಸುರ ಸ್ವಪ್ನವ ಕಂಡು" ಎಚ್ಚತ್ತು ಪತಿಯಿಂದ ಸ್ವಪ್ನಫಲವನ್ನರಿತು ದೇವನೊಬ್ಬನು ಸ್ವರ್ಗದಿಂದ ಚ್ಯುತನಾಗಿ ತನಗೆ ಮಗನಾಗಿ ಜನಿಸುವನೆಂಬ ವಿಚಾರವನ್ನು ತಿಳಿದು ಸಂತುಷ್ಟಳಾದಳು. ವಜ್ರಯೋಗದಲ್ಲಿ ಮಗನು ಹುಟ್ಟಿದುದರಿಂದ ವಜ್ರಜಂಘನೆಂಬ ಹೆಸರನ್ನು ಮಗುವಿಗೆ ಇಡಲಾಯಿತು. ಇದು ಬೊಮ್ಮಣ್ಣ ಕವಿಯ ವಿಶೇಷವಾದ ಜನಸಾಮಾನ್ಯರಂಜಿತವಾದ ವರ್ಣನಾವಿಧಾನ. ಸ್ವಪ್ನ, ಸ್ವಪ್ನಫಲಗಳು ಉಳಿದ ಆದಿತೀರ್ಥಂಕರ ಚರಿತ್ರೆಗಳಲ್ಲಿ ಈ ಸಂದರ್ಭದಲ್ಲಿ ಬಾರದೇ ಇದ್ದರೂ ಜೈನ ಪುರಾಣಗಳಿಗೆ ಇದು ಹೊಸದೇನಲ್ಲ. ಅಲ್ಲದೆ ಆ ಕಾಲದಲ್ಲಿ ಪದ್ಮಾವತಿ ಯಕ್ಷಿಯ ಬಗೆಗೆ ಜನಮನದಲ್ಲಿ ಮೂಡಿದ್ದ ವಿಶೇಷ ನಂಬಿಕೆಯ ಬಗೆಗೂ ಇದು ಬೆಳಕನ್ನು ಚೆಲ್ಲುತ್ತದೆ.

## ಶ್ರೀಮತಿಯ ವೃತ್ತಾಂತ

**ಆದಿಪುರಾಣ–ಪೂರ್ವಪುರಾಣ :** ಲಲಿತಾಂಗನು ಸ್ವರ್ಗದಿಂದ ಚ್ಯುತನಾಗಿ ಬಂದಾಗ ಪ್ರಾಣ ಒಂದೇ ಎಂಬಂತಿದ್ದ ಸ್ವಯಂಪ್ರಭೆಯ ಸ್ಥಿತಿ ಏನಾಯಿತೆಂಬ ಚಿತ್ರಣವನ್ನು ಕೊಡುವಲ್ಲಿ ಪುನಃ ನಾವು ಲಲಿತಾಂಗಭವದ ಹಿನ್ನೋಟಕ್ಕೆ ಹೋಗುತ್ತೇವೆ. ಶ್ರೀಪ್ರಭ ವಿಮಾನದಲ್ಲಿ ನಡೆದ ಆ ಸನ್ನಿವೇಶದ ಸುರುಳಿ ಮತ್ತೆ ಬಿಚ್ಚಿಕೊಳ್ಳುತ್ತದೆ.

ಲಲಿತಾಂಗನನ್ನು ಕಳೆದುಕೊಂಡ ಸ್ವಯಂಪ್ರಭೆಗೆ ಎಲ್ಲವೂ ಶೂನ್ಯವಾಯಿತು.

ಅಲಕಂ ಮಂದಾರಶೂನ್ಯಂ ಕದಪು ಮಕರಿಕಾಪತ್ರಶೂನ್ಯಂ ಲಲಾಟಂ
ತಿಲಕಾಲಂಕಾರಶೂನ್ಯಂ ಘನಕುಚಯುಗಲಂ ಹಾರಶೂನ್ಯಂ ನಿತಂಬಂ
ಕಲಕಾಂಚೀದಾಮಶೂನ್ಯಂ ಚರಣಯುಗಲಮುಂ ನೂಪುರಾಲಾಪಶೂನ್ಯಂ
ಲಲಿತಾಂಗಂ ಪೋದೊಡಾಯ್ತಾಕೆಗೆ ದಿವಮನಿತುಂ ನಿರ್ಜ್ಜರಾರಣ್ಯಶೂನ್ಯಂ (iii-೧೩)

ನಿಜ ಹೃದಯವೇ ಶೂನ್ಯವಾಗಿರುವಾಗ ಇನ್ನು ಬಾಹ್ಯಾಲಂಕಾರದಲ್ಲಿ ಉತ್ಸಾಹ ಎಲ್ಲಿ ಮೂಡೀತು? ಇಡೀ ದೇವಲೋಕವು ಹಾಳು ಸುರಿದಂತೆನಿಸಿತು.

ಆಕೆಯ ವಿಪ್ರಲಂಭ ಶೃಂಗಾರದ ಆಲಾಪ, ದುಃಖದ ಆವೇಗ ಹೆಚ್ಚಾಗಿ ಓದುಗರ ಕರುಳು ಮಿಡಿಯುವಂತಿದೆ. ಲಲಿತಾಂಗನು ಸ್ವರ್ಗದಿಂದ ಚ್ಯುತನಾಗುತ್ತಿದ್ದ ಸಮಯದಲ್ಲಿ ಆಕೆಯೂ ಅಸಹಾಯಕಳೇ ಅಲ್ಲವೇ? ಆದರೂ ದುಃಖದ ಆವೇಗ ಈಕೆಗೂ ವಿವೇಚನೆಯನ್ನು ಕಳೆದುಕೊಳ್ಳುವಂತೆ ಮಾಡುತ್ತದೆ.'ಅಯ್ಯೋ ನೋಡುತ್ತಿದ್ದಂತೆಯೇ ವಿನಾಕಾರಣ ಅಂತಕನು ನಿನ್ನನ್ನು ಕರೆದೊಯ್ದನೆ? ಆದರೂ ನನ್ನ ಒಡಲು ಕರಗಲಿಲ್ಲ' ಎಂದು ದುಃಖಿಸಿದಳು. ಒಡಲು ಕರಗದಿದ್ದರೇನು ಮನಸ್ಸು ಲಲಿತಾಂಗನನ್ನು ಕಳೆದುಕೊಂಡ ವ್ಯಥೆಯಿಂದ ಕರಗಿ ನೀರಾಗಿದೆ. ಕರಗಿ ಕೊರಗಿ ಬಸವಳಿದು, ಆ ಲಲಿತಾಂಗನ ಲಲಿತಾಂಗಿ ಸ್ವಯಂಪ್ರಭೆಯು ಆತನಿಗಾಗಿ ಹಂಬಲಿಸಿದ ಬಗೆಯನ್ನು ಪಂಪನು ವರ್ಣಿಸಿರುವ ರೀತಿ ಅತ್ಯಂತ ಹೃದಯಸ್ಪರ್ಶಿಯಾದುದು :

ಮದನನ ಕೈದುವೆಲ್ಲಿದನನಂಗನ ಕೈಪೊಡೆಯೆಲ್ಲಿದಂ ವಿಳಾ
ಸದಕಣಿಯೆಲ್ಲಿದಂ ಚದುರಪುಟ್ಟಿದನೆಲ್ಲಿದಂ ವಿನೋ
ದದ ಮೊದಲೆಲ್ಲಿದಂ ಸೊಬಗಿನಾಗರಮೆಲ್ಲಿದನಿಚ್ಚೆಯಾಣ್ಮನೆ
ಲ್ಲಿದನೆರ್ದೆಯಾಣ್ಮನೆನ್ನರಸನೆಲ್ಲಿದನೋ ಲಲಿತಾಂಗವಲ್ಲಭಂ (iii-೧೫)

ಈಕೆಯ ಆರ್ತನಾದದ ಅಳಲನ್ನು ಹಿಂಗಿಸಿದ ಪುಣ್ಯಭಾಗಿಗಳು ಮಹತ್ತರದೇವಿಯರು. ಅವರಾಡುವ ಮಾತು ಅಲೌಕಿಕ ಚಿಂತನೆಯಲ್ಲಿರುವ ಸೂಕ್ಷ್ಮಮತಿಗಳಿಗೆ ಹೊಸದಲ್ಲದಿದ್ದರೂ, ಅವರ ಸಂದರ್ಭೋಚಿತವಾದ ಮಾತು ಸ್ವಯಂಪ್ರಭೆಗೆ ಆ ಸ್ಥಿತಿಯಲ್ಲಿ ಅನಿವಾರ್ಯವಾಗಿತ್ತು.

ಮುಂಪಿಂತೆಂಬುದಿದಲ್ತೆನಿ | ಳಿಂಪಯುಗಕ್ಕೆಲ್ಲಮಿಂತು ಬಾಯಟಿವುದೆ ಚಿಃ
ಗಾಂಪು ಬಗೆಗೊಂಡು ಜಿನಪತಿ | ಯಂ ಪೂಜಿಸು ಪಡೆವೆಯಿನಿಯನಂ ಮಱುಭವದೊಳ್(iii-೧೭)

ಎಂದು ಮಕ್ಕಳನ್ನು ಸಮಾಧಾನಪಡಿಸುವಂತೆ, ಸಂತೈಸಿದಾಗ ಸ್ವಯಂಪ್ರಭೆಯೂ ಸಹ ಗುರುಪಂಚಕವನ್ನು ನೆನೆದು ಸ್ವರ್ಗದಿಂದ ಚ್ಯುತಳಾಗಿ ಶ್ರೀಮತಿಯಾಗಿ ಜನಿಸಿದಳು. ಪಂಪನು ಲಲಿತಾಂಗ ದೇವನಲ್ಲಿದ್ದ ಅವಳ ಸ್ನೇಹದ ಗಾಢತೆಯನ್ನು ಮತ್ತಷ್ಟು ಬಲಪಡಿಸುವಂತೆ 'ಬೆಂಬೆಂಬನೆ ಬಾರದಂದು ಲಲಿತಾಂಗಿಯ ನಲ್ಮೆಗೆ ಬನ್ನಮಾಗದೇ?' ಎಂಬ ಮಾತನ್ನು ಸೇರಿಸಿದ್ದಾನೆ.

ಸ್ವಯಂಪ್ರಭೆಯ ರೂಪಾತಿಶಯದಂತೆಯೇ, ಶ್ರೀಮತಿಯ ರೂಪಾತಿಶಯದ ಹಿರಿಮೆ ಇದ್ದಿತು. ಶ್ರೀಮತಿಯ ಸೌಂದರ್ಯವನ್ನು ವಿವಿಧ ಪದಪುಂಜಗಳ ಬತ್ತಳಿಕೆಯಿಂದ ಒಂದಾದ ಮೇಲೆ ಒಂದರಂತೆ ವರ್ಣನೆಗಳನ್ನು ಮುಂದೊಡ್ಡುತ್ತಾನೆ.

ಕಾಮನ ಮಂತ್ರದೇವತೆಯೊ ಕಾಮನ ವಿದ್ಯೆಯೊ ಬದ್ಧರಂ ಗೆಲಲ್
ಕಾಮನ ನಿಚ್ಚಮರ್ಚಿಸುವ ಕೈದುವೊ ಕಾಮನ ಮೋಹಪಾಶಮೋ
ಕಾಮನ ಕಾಣ್ಬಕೈಪಿಡಿಯೋ ವಿಸ್ಮಯಮಾದಪುದೆಂಬಿನಂ ಮಗಳ್
ಶ್ರೀಮತಿಯೆಂಬಳಾಗಿ ನವಯೌವನಲಕ್ಷ್ಮಿಯನೆಯ್ದೆ ತಾಳ್ದಿದಳ್ (iii-೧೮)

ಮುಂದುವರಿದು ಕವಿ ಹೀಗೆ ನುಡಿಯುತ್ತಾನೆ : ಈಕೆಯ ಈ ಸೌಂದರ್ಯರಾಶಿ ಇವಳ ಈ ಪರಿಯ ಅಪ್ಸರಸ್ತ್ರೀ ಅಸದೃಶವಾದ ದೇಹಕಾಂತಿ, ಹೊಸಯೌವನದ ಬೆಡಗು, ರೂಪ ವಿಳಾಸ ಯಾರನ್ನು ತಾನೆ ಮೋಹಿಸದು? ಕಣ್ಣೆವೆ ಮಿಟುಕುವದೊಂದರಿಂದಲೇ ಈಕೆ ಮನುಜಾಂಗನೆಯೆಂಬ ಭೇದವನ್ನು ಮಾಡಬಹುದಲ್ಲದೆ ಉಳಿದಂತೆ ಇಲ್ಲ.

ವಜ್ರಜಂಘನಿಗೆ ಯೌವನವು ಅವತರಿಸುತ್ತಿದ್ದಂತೆಯೇ ಆತನ ಮನದಲ್ಲಿ ಸ್ವಯಂ ಪ್ರಭೆಯು ನೆಲೆಯಾದಳು. ಉಳಿದ ಹೆಣ್ಣುಗಳ ಬಗೆಗೆ ಆತನಿಗೆ ನಿಸ್ಪೃಹತೆ ಮೂಡಿತು. ಆದರೆ ಶ್ರೀಮತಿಗೆ ಪೂರ್ವಜನ್ಮದ ಸ್ಮರಣೆಯುಂಟಾಗಲು ಒಂದು ಸನ್ನಿವೇಶವು ಮೂಡಿ ಬರಬೇಕಾಯಿತು.

ಒಂದು ದಿನ ರಾತ್ರಿ ಶ್ರೀಮತಿ ತನ್ನ ಕೆಂಬೊನ್ನ ಕನ್ನೆ ಮಾಡದ ಕೊಠಡಿಯಲ್ಲಿ, ಮೃದುತಲ್ಪತಳದಲ್ಲಿ ಪವಡಿಸಿದ್ದಳು. ಪ್ರಾತಃಕಾಲದ ಸಮಯದಲ್ಲಿ ಯಶೋಧರ ಗುರುಗಳ ಕೇವಲಜ್ಞಾನದ ಒಸಗೆಗೆ ಹೊರಟ ದೇವನಿಕಾಯದ ಕಿಂಕಿಣೀನಾದ, ಮಂಗಳಗೇಯಾದಿಗಳ ನಾದ, ಅವರು ಹೂಮಳೆಗರೆಯುತ್ತಿದ್ದ ಕಂಪಿನಲ್ಲಿ ಬೆರೆತು ಬಂದ ಶೀತಲ ಗಂಧಮಾರುತ—ಇವುಗಳು ಆ ಅಮೃತಾಂಶುವಕ್ತ್ರೆಯನ್ನು ಎಚ್ಚರಿಸಿದವು. ಶ್ರೀಮತಿಯು ಎಚ್ಚರಗೊಂಡು ಉಪ್ಪರಿಗೆಯಲ್ಲಿ ನಿಂತು ದೇವನಿಕಾಯವನ್ನು ನೋಡುತ್ತಿದ್ದಂತೆಯೇ—

ಹಾ ಲಲಿತಾಂಗದೇವ ವನಿತಾವದನಾಂಬುಜಭೃಂಗ ನಿನ್ನ ಲೀ
ಲಾಲಸದೃಷ್ಟಿಪಾತಮೆರ್ದೆಯೊಳ್ ನೆಲಸಿರ್ದ್ದುವು ನಿನ್ನ ಮಾತುಗಳ್
ಕೀಲಿಸಿದಂತೆವೋಲ್ ಮನದೊಳಿರ್ದ್ದುವು ನಿನ್ನನೆ ಕಾಣಲಾಗದೆಂ
ದಾ ಲಲಿತಾಂಗಿ ಬೆಚ್ಚನುಸಿರ್ದಚ್ಚರಿವೆತ್ತಿರೆ ಮೂರ್ಛೆವೋಪುದುಂ (iii-೨೩)

ಪೂರ್ವಜನ್ಮಸ್ಮರಣೆಯನ್ನು ಪಡೆದ ಶ್ರೀಮತಿ ಮತ್ತೆ ವಿಪ್ರಲಂಭ ಶೃಂಗಾರಕ್ಕೆ ಒಳಗಾಗಿ ವೇದನೆಯನ್ನು ಸಹಿಸಲಾರದೆ ಮೂರ್ಛೆಹೋದಳು. ಎಲ್ಲಾ ದಾಸದಾಸಿಯರೂ ಗಡಬಡಿಸಿ ಬಂದು ಶೈತ್ಯೋಪಚಾರಮಾಡಿ ಎಚ್ಚರಿಸಿದರು. ಆದರೆ ಎಷ್ಟು ವಿಚಾರಿಸಿದರೂ ಮೌನಿಯಾಗಿದ್ದ ಆಕೆಯನ್ನು ಕಂಡು ಗಾಬರಿಗೊಂಡು, ವಜ್ರದಂತ-ಲಕ್ಷ್ಮೀಮತಿಯರಿಗೆ ತಿಳಿಸಲಾಗಿ ಅವರು ಅಲ್ಲಿಗೆ ಬಂದರು. ಶ್ರೀಮತಿಯ ಸ್ಥಿತಿಯನ್ನು ಕಂಡ ತಂದೆ-ತಾಯಿಗಳು ಬಗೆಬಗೆಯಾಗಿ ಪ್ರಶ್ನೆ ಮಾಡುವ ರೀತಿ ಸಹಜವಾಗಿ ಮೂಡಿಬಂದಿದೆ. ತಮ್ಮ ಮುದ್ದು ಮಗಳನ್ನು ಕುರಿತು ಕಳವಳದಿಂದ ಪ್ರಶ್ನಿಸುವ ರೀತಿ ಹೀಗಿದೆ—"ಹೀಗೇಕಾಯಿತು? ನಮ್ಮ ದೆಸೆಯಿಂದ ಏನಾದರೂ ಹೀಗಾಯಿತೇ? ಅಥವಾ ಸಖೀಜನರಿಂದ ಉಂಟಾಯಿತೋ? ಅಥವಾ ಬಂಧುಜನಗಳಿಂದುಂಟಾದ ಸಂಕಟವೊ? ಅಥವಾ ಮಿತ್ರವರ್ಗದಿಂದುಂಟಾಯಿತೋ?" (iii-೨೪) ಎಂದು ಕೇಳಿದರೂ ಶ್ರೀಮತಿ 'ಮೂಗುವಟ್ಟು' ಕುಳಿತಳು. ಮಗಳ ಉತ್ತರ ಕಣ್ಣೀರೊಂದೇ. ತಂದೆತಾಯಿಗಳು, ಶ್ರೀಮತಿಗೆ ಆಕೆಯ ನಡೆನುಡಿಗಳನ್ನು ನೆನಪಿಗೆ ತಂದುಕೊಡುವವರಂತೆ—"ಎದುರು ಬಂದರೆ ಏಳುವುದನ್ನೂ ನಮಸ್ಕರಿಸಿ ಆದರ

ದಿಂದ ಬಂದು ಎದುರುಗೊಳ್ಳುವುದನ್ನೂ ಪ್ರೀತಿಯಿಂದ ಬಾಯ್ಬಾಯಲ್ಲಿ ತಂಬುಲವನ್ನು ಸ್ವೀಕರಿಸುವುದನ್ನೂ ಮರೆತು ಕುಳಿತಿರುವೆ? ಕಂದಿ ಕುಂದಿದುದು ಏಕೆ ಈ ಲಲಿತಾಂಗ? ಈ ಮುಖ ಹೀಗೆ ಇಂದು ಏಕೆ ಅಕ್ಕ ಬಾಡಿದುದು? ಅವುದು ನಿನ್ನ ಉಬ್ಬೆಗ?" ಎಂದು ನವಿರಾಗಿ ಪ್ರಶ್ನಿಸಿದಾಗಲೂ ಆಕೆಯಿಂದ ಉತ್ತರವಿಲ್ಲ. ಇಲ್ಲಿ ಬಂದಿರುವ 'ಲಲಿತಾಂಗ' ಎಂಬ ಪದ ಧ್ವನಿಪೂರ್ಣವಾಗಿ ಕಂಡುಬರುತ್ತದೆ. "ಅವಳು ಯಾವನಿಲ್ಲದೆ ಮಮ್ಮಲ ಮರುಗುತ್ತಿರುವಳೋ ಆ ಲಲಿತಾಂಗನ ಹೆಸರನ್ನು ಅಲ್ಲಿ ಸೇರಿಸುವುದಂತೂ ಪಂಪನ ಕುಶಲ ಕಾವ್ಯಕರ್ಮಕ್ಕೊಂದು ಉಜ್ವಲ ಸಾಕ್ಷಿ."[೧೩] ವಜ್ರದಂತನು ಪತ್ನಿಗೆ ಸಮಾಧಾನವನ್ನು ಹೇಳುವ ಮಾತಿನಲ್ಲಿಯೂ ಸಹ ಶ್ರೀಮತಿಯಲ್ಲಿ ಆತನಿಗಿರುವ ಗಾಢವಾದ ಮಮತೆ ವ್ಯಕ್ತವಾಗುತ್ತದೆ. 'ಈಕೆ ಇನ್ನೂ ಕಿರಿಯವಳು. ನಮಗೇನನ್ನೂ ಹೇಳುವುದಿಲ್ಲ. ಅವಳ ಮನವನ್ನು ಅರಿಯುವವರೆಗೆ ನೀನು ಚಿಂತಿಸಬೇಡ' ಎಂದು ಹೆಂಡತಿಗೂ ಸಮಾಧಾನವನ್ನು ಹೇಳಿ, ಪಂಡಿತೆಯನ್ನು ಕರೆದು, ಶ್ರೀಮತಿಯ ಮನಸ್ಸಿನ ಸ್ಥಿತಿಯನ್ನು ಅರಿಯಲು ನಿಯೋಜಿಸಿ ಹೋದನು, ಆ ಚತುರಹೃದಯನಾದ ರಾಜ. "ಈ ಸನ್ನಿವೇಶದಲ್ಲಿ ಪ್ರೌಢ ಕಾವ್ಯದ ಚಮತ್ಕೃತಿ ಬಳಕೆ ಮಾತಿನ ಬೆಂಬಲದಿಂದ ನಿತ್ಯವಾದ ಮನುಷ್ಯಸ್ವಭಾವದ ಒಂದು ಮುಖವನ್ನು ಎತ್ತಿತೋರಿದೆ. ಪಂಪನ ಅಸಾಮಾನ್ಯ ಪ್ರತಿಭೆಗೆ ಇದೊಂದು ನೆನೆಯತಕ್ಕ ನಿದರ್ಶನವಾಗಿದೆ."[೧೪]

ಪೂರ್ವಪುರಾಣದಲ್ಲಿ ಸ್ವಯಂಪ್ರಭೆಯ ಅಳಲನ್ನು ಚಿತ್ರಿಸುವಲ್ಲಿ ಕವಿಸಮಯದ ದೃಷ್ಟಾಂತ ಮಾಲೆಗಳು ಕಂಡುಬರುತ್ತವೆಯೇ ಹೊರತು ಆದಿಪುರಾಣದಲ್ಲಿ ಕಂಡುಬರುವ ಮಿಡಿತ ಕಂಡುಬರುವುದಿಲ್ಲ. ಪತಿಯಿಲ್ಲದ ಹೆಣ್ಣು ಚಕ್ರವಾಕ ಪಕ್ಷಿಯಂತೆ, ವರ್ಷಾಕಾಲದಲ್ಲಿ ಹೆಣ್ಣುಕೋಗಿಲೆ ಮಧುರವಾದ ಆಲಾಪವನ್ನು ಬಿಟ್ಟಿರುವಂತೆ, ಶ್ರೀಮತಿ ಮೌನಿಯಾಗಿದ್ದಳು ಇತ್ಯಾದಿ ದೃಷ್ಟಾಂತಗಳನ್ನು ನೀಡಿದೆ. ಆಕೆಯ ದುಃಖದ ಉತ್ಕಟತೆಯು ಪೂರ್ವಪುರಾಣದಲ್ಲಿ ಜೀವಕಳೆಯಿಲ್ಲದೆ ವರ್ಣಿತವಾಗಿದ್ದರೆ ಆದಿಪುರಾಣದಲ್ಲಿ ವಿರಹಗೀತೆಯ ವಿಭಾವವು ಧ್ವನಿಸುತ್ತದೆ. ಆದಿಪುರಾಣದ ಹೃದಯವಂತಿಕೆ ಪೂರ್ವಪುರಾಣದಲ್ಲಿ ಕಂಡುಬರುವುದಿಲ್ಲ.

ಪೂರ್ವಪುರಾಣದಲ್ಲಿ ಸ್ವಯಂಪ್ರಭೆಯ ಶೋಕವನ್ನು ಶಮನಗೊಳಿಸಿದವನು ದೃಢಧರ್ಮನೆಂದು ಬಂದರೆ ಆದಿಪುರಾಣದಲ್ಲಿ ಮಹತ್ತರದೇವಿಯರೆಂದು ಬರುತ್ತದೆ. ಪಂಪನು ಲಲನಾಮಣಿಯಾದ ಸ್ವಯಂಪ್ರಭೆಗೆ ದೇವಿಯರಿಂದಲೇ ಧರ್ಮೋಪದೇಶ ಮಾಡಿಸಿರುವುದು, ಸಮಾಧಾನದ ನುಡಿಯನ್ನು ಹೇಳಿಸಿರುವುದು ಹೆಚ್ಚಿನ ಮಾಧುರ್ಯಕ್ಕೆ ಎಡೆಮಾಡಿಕೊಟ್ಟಿದೆ. ಶ್ರೀಮತಿಯ ವರ್ಣನೆ ಮಾಡುವಾಗ ಪೂರ್ವಪುರಾಣದ ಶೈಲಿ ಪುರಾಣದ ಶೈಲಿಯಲ್ಲಿಯೇ ಇದೆ. ಆದರೆ ಪಂಪನ ರೀತಿ ಕಾವ್ಯಸಮ್ಮೋಹನಾವೈಖರಿ. ಶ್ರೀಮತಿ ಮೂರ್ಛೆ ಹೋದ ಪ್ರಸಂಗದಲ್ಲಿ ಆದಿಪುರಾಣವು ಪೂರ್ವಪುರಾಣವನ್ನೇ ಅನುಸರಿಸಿದೆಯಾದರೂ ಶ್ರೀಮತಿಯನ್ನು ಸಮಾಧಾನಪಡಿಸಲು ಬಂದ ತಂದೆ-ತಾಯಿಗಳ ಪಾತ್ರವು ಪೂರ್ವಪುರಾಣದಲ್ಲಿ ಬಹಳ ಸಪ್ಪೆಯಾಗಿ ಚಿತ್ರಿತವಾಗಿದೆ. ಸನ್ನಿವೇಶವು ಬಹಳ ಔಪಚಾರಿಕವಾಗಿ ಕಂಡುಬರುತ್ತದೆ. ವಜ್ರದಂತನು ಪೂರ್ವಜನ್ಮದ ಪರಿಚಿತವ್ಯಕ್ತಿಯನ್ನು ನೆನೆದು ಶ್ರೀಮತಿಗೆ ಈ ಸ್ಥಿತಿಯುಂಟಾಗಿದೆ ಎಂದು ತನ್ನ ಪತ್ನಿಗೆ ಸಮಾಧಾನವನ್ನು ಹೇಳಿ,

ಶ್ರೀಮತಿಯನ್ನುಪಚರಿಸಲು ಪಂಡಿತೆಯೆಂಬ ದಾದಿಯನ್ನು ನಿಯಮಿಸಿ ಪತ್ನಿಯೊಡನೆ ಹಿಂದಿರುಗುತ್ತಾನೆ. ಪೂರ್ವಪುರಾಣದಲ್ಲಿ ಬರುವ ಈ ಔಪಚಾರಿಕ ಸನ್ನಿವೇಶವು ಆದಿ ಪುರಾಣದಲ್ಲಿ ನವಿರಾಗಿ ಸಹಜ ರೀತಿಯಲ್ಲಿ ಮಿಡಿದಿದೆ. ಮೂರ್ಛೆ ಹೋದ ಮಗಳು ಸಖಿಯರ ಉಪಚಾರದಿಂದ ಎಚ್ಚರವಾದರೂ ಮಾತನಾಡದಿರುವುದನ್ನು ತಿಳಿಸಿದಾಗ ಓಡಿಬಂದ ತಂದೆ "ಅಂಗ ಪುತ್ರಿ ಪರಿಷ್ವಂಗಂ ವಿಧೇಹುತ್ಸಂಗಮೇಹಿನೌ" (vi-೯೭) (ಎಲ್ಲೆ ಮಗಳೇ ನಮ್ಮನ್ನು ಆಲಿಂಗಿಸು, ನಮ್ಮ ತೊಡೆಗೆ ಬಾ) ಎಂದು ಔಪಚಾರಿಕವಾಗಿ ನುಡಿದು ತೃಪ್ತನಾಗಿ ತನ್ನ ಕರ್ತವ್ಯ ಮುಗಿಯಿತೆಂದುಕೊಂಡಂತೆ ತೋರುತ್ತಾನೆ. ಹೆಂಡತಿಯನ್ನು ಸಮಾಧಾನಪಡಿಸಿ ಮರುಮಾತಿಲ್ಲದೆ ಮಗಳ ಅಂತರ್ಯವನ್ನು ಪತ್ತೆ ಮಾಡಲು ಒಬ್ಬ ದಾದಿಯನ್ನು ನೇಮಿಸುತ್ತಾನೆ. ಇದು ಪೂರ್ವಪುರಾಣದ ರೀತಿ. ಆದರೆ ಆದಿಪುರಾಣದಲ್ಲಿ ತಂದೆಯ ಕಳವಳ-ಆತಂಕಗಳು ಹೆಚ್ಚು ಪ್ರಭಾವಕಾರಿಯಾಗಿ, ಮಾನವೀಯ ಮಿಡಿತದಿಂ ದೊಡಗೂಡಿ ಚಿತ್ರಿತವಾಗಿವೆ.

## ಉತ್ತರಕಾಲೀನ ಕಾವ್ಯಗಳು

**ಚಾವುಂಡರಾಯಪುರಾಣ :** ಶ್ರೀಮತಿಯ ವೃತ್ತಾಂತವನ್ನು ಕಥೆಯ ಮುನ್ನಡೆಗೆ ಎಷ್ಟು ಬೇಕೋ ಅಷ್ಟನ್ನು ಮಾತ್ರ ತೆಗೆದುಕೊಳ್ಳಲಾಗಿದೆ. ಶ್ರೀಮತಿಯ ಸೌಂದರ್ಯಾತಿಶಯದ ಬಗೆಗೆ ಇಲ್ಲಿ ವಿವರವಿಲ್ಲ. ಮಾಡದಲ್ಲಿ ಮಲಗಿದ್ದಾಗ ದೇವನಿಕಾಯವನ್ನು ನೋಡಿ, ಲಲಿತಾಂಗನನ್ನು ನೆನೆದು ಮೂರ್ಛಿತಳಾದ ಈಕೆಯನ್ನು ನೇರವಾಗಿ ತಂದೆತಾಯಿಗಳೇ ಬಂದು ಎಚ್ಚರಿಸಿದರು. ಎಷ್ಟು ಬೆಸಗೊಂಡರೂ 'ತಮಗೆಂತುಂ ಬಗೆವೇಟಿದೆ ಮೌನವ್ರತ ಪ್ರತಿಜ್ಞೆ'ಯಿಂದಿದ್ದ ಆಕೆಯ ವಿಷಯವನ್ನು ಪಂಡಿತೆಗೆ ಬಿಟ್ಟು ರಾಜದಂಪತಿಗಳು ತೆರಳಿ ದರು. ಶ್ರೀಮತಿ ಲಲಿತಾಂಗನನ್ನು ನೆನೆದು ವಿಲಪಿಸುವ ಬಗೆಯಾಗಲಿ, ತಂದೆತಾಯಿಗಳ ಸಮಾಧಾನದ ಅಕ್ಕರೆ ಆಸರೆಗಳ ಮಾತುಗಳಾಗಲಿ ಇಲ್ಲಿ ಕಂಡುಬರುವುದಿಲ್ಲ. ಕಥೆ ಯಾಂತ್ರಿಕವಾಗಿ ಚಲಿಸುತ್ತದೆಯೇ ಹೊರತು ಜೀವಾಂಶವೆಂಬುದಿಲ್ಲ. ಪೂರ್ವಪುರಾಣಕ್ಕೆ ಕವಿ ಹೆಚ್ಚು ಹತ್ತಿರವಾಗಿದ್ದಾನೆ.

**ಹಸ್ತಿಮಲ್ಲನ ಪೂರ್ವಪುರಾಣ :** ಲಲಿತಾಂಗನ ವಿಯೋಗದಿಂದ ಉಂಟಾದ ಆವೇಗ ವನ್ನು ಮಹತ್ತರ ದೇವಿಯರು ಉಪಶಮಗೊಳಿಸಿದರು (ಆದಿಪುರಾಣದಲ್ಲಿರುವಂತೆಯೇ ಮಹತ್ತರದೇವಿಯರ ಉಲ್ಲೇಖ ಇಲ್ಲಿದೆ). ಕಥಾಸರಣಿಯು ಮುಖ್ಯ ಘಟನೆಗಳಿಂದ ಮಾತ್ರ ಕೂಡಿದ್ದು, ಆದಿಪುರಾಣವನ್ನು ಕವಿ ಅನೇಕ ಕಡೆಗಳಲ್ಲಿ ಅನುಸರಿಸಿರುವಂತೆ ತೋರುತ್ತದೆ. ಉದಾಹರಣೆಗೆ :

ಶ್ರೀಮತಿಯ ತಂದೆತಾಯಿಗಳು ಶ್ರೀಮತಿಯ ಕಳೆಗುಂದಿದ ಮುಖವನ್ನು ನೋಡಿ "ನಿನಗೇಂ ಕಾರಣದಿಂದಿನಿತು ದುಃಖಮಾದುದು?" ಎಂದು ಆತ್ಮೀಯತೆಯಿಂದ ಪ್ರಶ್ನಿಸು ತ್ತಾರೆ. ಈ ಧಾಟಿ ಪೂರ್ವಪುರಾಣದಲ್ಲಾಗಲಿ ಚಾವುಂಡರಾಯಪುರಾಣದಲ್ಲಾಗಲಿ ಇಲ್ಲ. ಹಸ್ತಿಮಲ್ಲನು ಆದಿಪುರಾಣದ ಸಂಗತಿಗಳೆಲ್ಲವನ್ನೂ ತನ್ನ ಸಂಕ್ಷಿಪ್ತ ಕಥಾಚೌಕಟ್ಟಿನಲ್ಲಿ ಹೇಳಲು ಅವಕಾಶವಿಲ್ಲದವನಾಗಿ ಒಂದೇ ವಾಕ್ಯದಲ್ಲಿ ಆ ಭಾವವನ್ನು ಹಿಡಿಯಲು ಯತ್ನಿಸಿದ್ದಾನೆ. ಪ್ರಯತ್ನವಂತೂ ಶ್ಲಾಘನೀಯವಾದುದೇ.

**ಪುಣ್ಯಾಸ್ರವದ ಆದೀಶ್ವರರ ಕಥೆ** : ನಾಗರಾಜನ ಪುಣ್ಯಾಸ್ರವದ ಆದೀಶ್ವರರ ಕಥೆಯಲ್ಲಿ ಸ್ವಲ್ಪ ಬೇರೆಯಾದ ಸನ್ನಿವೇಶದಿಂದ ಈ ಸಂದರ್ಭವು ಬಂದಿದೆ.

ಒಂದು ದಿನ ವಜ್ರದಂತನು ಓಲಗಗೊಟ್ಟಿರಲು ಸೇವಕರು ಬಂದು, "ದೇವ ನಿಮ್ಮ ತಂದೆ ಯಶೋಧರ ತೀರ್ಥಕರ್ಗೆ ಕೇವಳಜ್ಞಾನಮುಂ ಶಸ್ತ್ರಾಗಾರದೊಳ್ ಚಕ್ರರತ್ನ ಪುಟ್ಟಿದುದು" ಎಂದು ಬಿನ್ನೈಸಿದರು. ಈ ಕಡೆ ದಾಸಿಯೊಬ್ಬಳು ಅತ್ಯಂತ ತ್ವರಿತಗತಿಯಲ್ಲಿ ಬಂದು ನಮಸ್ಕರಿಸಿ 'ಗಂಭೀರಧರಾಧಿನಾಥನಾದ ವಜ್ರದಂತನೇ ಕೇಳು. ಆಕಾಶಮಾರ್ಗದಲ್ಲಿ ನಡೆದ ದೇವನಿಕಾಯದ ವಿಮಾನ ರತ್ನ ಘಂಟಾರುತಿಯನ್ನು ಕೇಳಿ ಮರವಾನಿಸೆಯಂತೆ ನಿನ್ನ ಮಗಳು ಮೂರ್ಛಿತಳಾದಳು. ಮಾರಶರಕ್ಕೆ ತಾನೆ ಗುರಿಯಾದಳು' ಎಂದು ಬಿನ್ನೈಸಿದಳು. ವಜ್ರದಂತನು ಶೈತ್ಯೋಪಚಾರದಿಂದ ಆಕೆಯನ್ನು ಎಚ್ಚರಿಸಲು ಸೂಚಿಸಿ ತನ್ನ ಮುಂದಿನ ಘನಕಾರ್ಯಗಳಿಗೆ, ಮಂಗಳಕಾರ್ಯಗಳಿಗೆ ಮೊದಲು ಹೊರಟನು.

ಇಲ್ಲಿ ಸಂದರ್ಭವು ಮಿಕ್ಕೆಡೆಗಳಲ್ಲಿ ಕಂಡುಬಾರದ ನಾಟಕೀಯತೆಯಿಂದ ಕೂಡಿರುವುದೇನೋ ಸರಿಯೇ; ಆದರೆ ತಂದೆ ಮಗಳ ಬಗೆಗೆ ನಿಷ್ಠುರವಾಗಿ ನಡೆದುಕೊಂಡಂತೆ ತೋರುತ್ತಾನಾದರೂ ಕೇವಲಜ್ಞಾನದ ಒಸಗೆ ಮಾಡಿದಲ್ಲದೆ ರಾಜನು ನಿಯಮದ ಪ್ರಕಾರ ಮತ್ತಿನ್ನಾವ ಒಸಗೆಯನ್ನೂ ಕೈಗೊಳ್ಳುವಂತೆ ಇಲ್ಲ. ಇದು ಜೈನಪುರಾಣದ ರೀತಿ. ಹೀಗಾಗಿ ಇಲ್ಲಿ ವಜ್ರದಂತನು ಹೃದಯಹೀನನಾಗಿ ಕಾಣುವ ಸಂಭವವೇ ಅನಿವಾರ್ಯವೆಂದು ತೋರುತ್ತದೆ.

**ಪುರುದೇವಚರಿತ** :ಶಾಂತಿಕೀರ್ತಿಯು ಈ ಭಾಗವನ್ನು ಚಾವುಂಡರಾಯಪುರಾಣವನ್ನು ಅನುಸರಿಸಿ ಬರೆದಿದ್ದಾನೆ. ಅಲ್ಲಿಯ ಗದ್ಯವನ್ನು ಕವಿ ಇಲ್ಲಿ ಸಾಂಗತ್ಯರೂಪಕ್ಕೆ ಸರಳೀಕರಿಸಿ ಅಳವಡಿಸಿಕೊಂಡಂತಿದೆ.

ಶ್ರೀಮತಿ ಮೂರ್ಛೆಹೋದಳೆಂದು ತಿಳಿದಾಗ,

ಮಾತಾಪಿತೃಗಳೈತಂದು ನಾನಾವಿಧ | ಶೀತಲಕ್ರಿಯೆಯಿನೆಚ್ಚರಿಸಿ
ಮಾತನಾಡಿಸಲು ನುಡಿಯದಿರೆ ಪಂ | ಡಿತೆ ನೀ ತಿಳಿಯೆಂದೋದರಲ್ಲಿಂ (ಪುರುಚ.ii-೧೬)

ವಜ್ರದಂತನುಂ ಲಕ್ಷ್ಮೀಮತಿಯುಂ ಬಂದು ಮೂರ್ಛೆಯಿಂದೆಚ್ಚಱಿಸಿ ಬೆಸಗೊಳೆ ತಮಗೆಂತುಂ ಬಗೆವೇಟದೆ ಮೌನವ್ರತಪ್ರತಿಜ್ಞೆಯಿನಿರೆ ಪಂಡಿತೆಯಂ ನಿನ್ನ ಬಲ್ಲಂದದೊಳ್ ಬೆಸಗೊಳ್ಳೆಂದು ಪೋದರ್(ಚಾವುಂಪು. ಪು. ೨೩)

ನಾಲ್ಕು ಸಾಂಗತ್ಯಗಳಲ್ಲಿ ಈ ವೃತ್ತಾಂತವನ್ನು ಶಾಂತಿಕೀರ್ತಿ ಮುಗಿಸಿದ್ದಾನೆ. ಚಾವುಂಡರಾಯಪುರಾಣದಂತೆ ಕಥಾಚೌಕಟ್ಟು ಇದೆಯೇ ಹೊರತು ವಿವರಣೆಯಿಲ್ಲ.

**ಆದಿಪರಮೇಶ್ವರನ ಯಕ್ಷಗಾನ** : ಬೊಮ್ಮಣ್ಣ ಕವಿಗೆ ಪುಣ್ಯಪುರುಷರ ಗರ್ಭಾವತರಣವನ್ನು ವಿವರಿಸುವಲ್ಲಿ ಉತ್ಸಾಹ. ವಜ್ರಜಂಘನು ಹುಟ್ಟುವ ಮೊದಲು ಪವಾಡ ನಡೆದಂತೆ ಕ್ರಿಯೆ ನಡೆಯಿತು. ಆದರೆ ಇಲ್ಲಿ ಅಂತಹ ಪವಾಡ ನಿರೂಪಣೆಯಿಲ್ಲದಿದ್ದರೂ ಉತ್ಸಾಹಭರಿತ ವಿವರಣೆ ಕಂಡುಬರುತ್ತದೆ. ಮಹತ್ತರದೇವಿಯರಿಂದ ಬೋಧಿತಳಾದ ಸ್ವಯಂಪ್ರಭೆ ಅರ್ಹದ್ಭಕ್ತಿಯಿಂದ ಜಪವನ್ನು ಮಾಡಿ ಮುಡುಪಿದಳು.

'ಮಾರನಿಕ್ಕೆವನ'ದಂತಿದ್ದ ಪುಷ್ಕಳಾವತಿ ಶೋಭಿಸುತ್ತಿತ್ತು. ಅಲ್ಲಿಯ ರಾಜ ವಜ್ರದಂತ. ರಾಣಿ ಲಕ್ಷ್ಮೀಮತಿ.

ರಾಣಿ ಲಕ್ಷ್ಮೀಮತಿಯು ನಾಲ್ನೀರುಮಿಂದು 'ರೋಹಿಣಿ, ಶಶಿಯೊಡನಿಪ್ಪಂದದೊಳು' ರಾಜನೊಡನಿದ್ದಾಗ ಈಶಾನಕಲ್ಪದಿಂದ ಸ್ವಯಂಪ್ರಭೆಯು ಬಂದು ಲಕ್ಷ್ಮೀಮತಿಯ ಗರ್ಭದಲ್ಲಿ ಅವತರಿಸಿದಳು. ಬಾಲೇಂದುವಂತೆಸೆಯುವ ಆ ಎಳೆಬಾಲೆಗೆ ಶ್ರೀಮತಿ ಎಂದು ಹೆಸರನ್ನಿಟ್ಟು, ಘನಲೋಲೆಯಾದ ಪಂಡಿತೆಯೆಂಬ ದಾದಿಯನ್ನು 'ಲೀಲೆಯಿಂದ ಈಕೆ ಯನ್ನು ಸಾಕುವುದು' ಎಂದು ನಿಯಮಿಸಿದರು. ಪಂಡಿತೆ ಆಕೆಗೆ ಘನತರ ವಿದ್ಯಾದಿಗಾನ ವೀಣಾಭ್ಯಾಸಗಳನ್ನು ಮಾಡಿಸಿದಳು. 'ಮಿಂಚಿನ ಮಾಲೆಗೆ ಸ್ವರವು ಬಂದ ಭಾವದಿ' ಆಕೆಯ ಗಾನವಿದ್ಯೆ ಮೆರೆದಿತ್ತು.

ಈ ವರ್ಣನಾಭಾಗವು ಬೊಮ್ಮಣ್ಣ ಕವಿಯ ಕಾವ್ಯಭಾಗದಲ್ಲಿ ಮಾತ್ರ ಕಂಡುಬರುವ ವರ್ಣನಾಭಾಗ. ವರ್ಣನೆಯಲ್ಲಿ ಅಲ್ಲಲ್ಲಿ ಕಾವ್ಯದ ಮಿಂಚನ್ನೂ ಹೊರಹೊಮ್ಮಿಸಿದ್ದಾನೆ. ಕವಿಯ ಸ್ವೋಪಜ್ಞತೆಗೆ ಈ ಭಾಗವು ಉತ್ತಮ ಉದಾಹರಣೆಯಾಗಿದೆ.

ಒಂದು ದಿನ ಪಂಡಿತೆಯಾದಿಯಾಗಿ ಸಖೀವೃಂದ ಸಹಿತ ಮಣಿಮಾಡವನ್ನು ಹತ್ತಿದ ಶ್ರೀಮತಿ ಹಂಸತೂಲಿಕೆಯಲ್ಲಿ ಮಲಗಿದ್ದಳು. ಯಶೋಧರ ಕೇವಲಿಗಳ ಪೂಜೆಗೆ ಬಂದಿದ್ದ ಚತುರ್ನಿಕಾಯ ಅಮರರ ವಿಮಾನದ ಘಂಟಾರವವು ಮೊಳಗಲು ಎಚ್ಚೆತ್ತ ಶ್ರೀಮತಿ, 'ಥಳಥಳನೆ ಬೆಳಕು ಬೀರುತ್ತ ನಭವ ತೆಕ್ಕನೆ ತೀವಿ ಬಂದ ನವಮಣಿಮಯ' ವಿಮಾನವನ್ನು ಕಂಡು ಸಖಿಯರು ನೋಡುತ್ತಿದ್ದಂತೆಯೇ ಮೂರ್ಛೆಹೋದಳು. ಮುಂದೆ ಸಖಿಯರ ಶೈತ್ಯೋಪಚಾರ, ತಂದೆತಾಯಿಗಳ ಆಗಮನ ಆದಿಪುರಾಣದ ಅಭಿಪ್ರಾಯಕ್ಕೆ ಅನುಗುಣ ವಾಗಿ ಬಂದಿದೆಯಾದರೂ ಅಲ್ಲಿರುವ ಸವಿವರ ವರ್ಣನೆಯಿಲ್ಲ. ಆದರೂ, ಕವಿ ಅಲ್ಲಲ್ಲಿ ಚಿಕ್ಕಚಿಕ್ಕಮಾತುಗಳಲ್ಲಿ ಅಲ್ಲಿಯ ಆಶಯವನ್ನು ಹಿಡಿದಿಡಲು ಯತ್ನಿಸಿದ್ದಾನೆ. ವಜ್ರದಂತ ಲಕ್ಷ್ಮೀಮತಿಯರು ಬಂದು ಮುದದಿ ಗಲ್ಲವನ್ನು ಹಿಡಿದು ಮುದ್ದಿಸಿ, 'ಕಂಬನಿ ಬಟ್ಟಾಡು ತಿದೆ' 'ಉಸಿರದೆ ಮೌನ ಗೊಂಡಿರುವೆ' 'ದುಃಖಿಸುವ ಕಾರಣವೇನು?' ಎಂದು ಕಳಿಕಳಿ ಯಿಂದ ಪ್ರಶ್ನಿಸಿದರು. ಆದರೆ ಶ್ರೀಮತಿಯ ನೀರವತೆಯನ್ನು ಕಂಡು ಪಂಡಿತೆಗೆ ಅವಳ ಅಂತರಂಗವನ್ನು ತಿಳಿದುಕೊಳ್ಳಲು ಹೇಳಿ ಅಲ್ಲಿಂದ ತೆರಳಿದರು. ಕವಿ ಇಲ್ಲಿ ಆದಿಪುರಾಣ ವನ್ನು ಆಕರವಾಗಿಟ್ಟುಕೊಂಡಂತೆ ಕಂಡುಬರುತ್ತದೆ.

## ಪಂಡಿತೆ ಶ್ರೀಮತಿಯ ಮನದಳಲನ್ನು ತಿಳಿದುಕೊಳ್ಳಲು ಯಶಸ್ವಿಯಾದ ವೃತ್ತಾಂತ

**ಆದಿಪುರಾಣ-ಪೂರ್ವಪುರಾಣ :** ವಜ್ರದಂತ ಚಕ್ರವರ್ತಿಗೆ ಎರಡೊಸಗೆಗಳು ಒಟ್ಟಿಗೆ ಉಂಟಾದಾಗ ಜಿನಸಪರ್ಯೆಯು ಮೇಲೆಂದು ಪುಣ್ಯವಿಶೇಷದಿಂದ ಅರಿವಾಗಿ ಕೇವಲಿ ಯನ್ನು ಭಕ್ತಿಭಾವದಿಂದ ಪೂಜಿಸಿದನು. ಅವಧಿಜ್ಞಾನವನ್ನು ಪಡೆದನು. 'ಅಧಿಕಭಕ್ತರೇನಂ ಪಡೆಯರ್?'ಎಂಬ ಪ್ರಶ್ನೆಯಿಂದಲೇ ಪಂಪನು ಭಕ್ತಿಯ ವಿಶೇಷಲಾಭದ ಅರಿವು ಮೂಡಿ ಸುತ್ತಾನೆ. ಪೂರ್ವಪುರಾಣದಲ್ಲಿ ಎರಡೊಸಗೆಗಳಲ್ಲಿ ಅತಿಮುಖ್ಯವಾದುದು ಯಾವುದು ಎಂಬುದನ್ನು ಚಿಂತಿಸುವ ಅತಿ ಸುದೀರ್ಘವಾದ ವಿವರಗಳು ಕಂಡುಬರುತ್ತವೆ. ಆದರೆ ಪಂಪನಲ್ಲಿ ಈ ಭಾಗ ಔಚಿತ್ಯವರಿತು ಸಂಗ್ರಹವಾಗಿ ಬಂದಿದೆ.

ಶ್ರೀಮತಿಯ ಮನೋಗತವನ್ನರಿಯಲು, ಪಂಡಿತೆ ಆಕೆಯನ್ನು ಕನ್ನೆಮಾಡದ ಹೊರಗಿನ

ಉದ್ಯಾನವನಕ್ಕೆ ಕರೆದುಕೊಂಡು ಹೋದಳು. 'ಮನೋಭವಂಗಾಳುಮಿರ್ಪವೊಲಿರ್ದ' ಅತಿರಕ್ತಾಶೋಕದ ಸುತ್ತಿನಲ್ಲಿ ಕುಳಿತಿದ್ದ ಶ್ರೀಮತಿಯ 'ರೂಕ್ಷಾಳಕಂಗಳನೋಸರಿಸುತ್ತುಂ' 'ಮೆಲ್ಲನೆ ಕೆನ್ನೆಯನ್ನು ಮೇಳಿಸಿ' ಆಕೆಯನ್ನು ಪ್ರಶ್ನಿಸಿದಳು. ಪ್ರಕೃತಿಯ ಮಡಿಲು ಶ್ರೀಮತಿಯ ಯೌವನದ ಉತ್ಕಟತೆಯ ಪ್ರತೀಕದಂತಿದ್ದರೂ ಆಕೆ ಮಾತ್ರ ಲಲಿತಾಂಗ ನನ್ನು ನೆನೆದು ಉತ್ಕಟತೆಯನ್ನು ತೋರದೆ ಮ್ಲಾನಳಾಗಿಯೇ ಇದ್ದಳು. ರೂಕ್ಷತೆ ಆಕೆಯ ಅಳಕಂಗಳಿಗಷ್ಟೇ ಅಲ್ಲ, ಮನವನ್ನೂ ಆವರಿಸಿತ್ತೆಂಬುದನ್ನು ಕವಿಯು ಸೂಕ್ಷ್ಮವಾಗಿ ಧ್ವನಿಸಿದ್ದಾನೆ. ಪಂಡಿತೆ ಪ್ರೀತಿಯಿಂದ ಶ್ರೀಮತಿಯನ್ನು ತನ್ನಂತರಂಗಕ್ಕೆ ತೆಗೆದುಕೊಳ್ಳುವ ಆತ್ಮೀಯತೆಯ ಧಾಟಿಯನ್ನು ಪಂಪನು ಹೀಗೆ ಚಿತ್ರಿಸಿದ್ದಾನೆ : 'ನಿನ್ನ ಮನದ ಬಯಕೆಯನ್ನು ನನ್ನಲ್ಲಿ ಹೇಳದೆ ಮತ್ತಾರಿಗೆ ಹೇಳುವೆ? ನಿನ್ನಲ್ಲಿರುವ ಬೇಸರವನ್ನು ಅರಿಕೆಮಾಡಿಕೊಳ್ಳಲು ನನಗಿಂತಲೂ ಪ್ರೀತಿಪಾತ್ರರಾದವರು ನಿನಗೆ ಬೇಕೆ? 'ನಿನ್ನ ಮುಖವು ದುಂಬಿಗಳ ಝೇಂಕಾರವಿಲ್ಲದ ಕಮಲವನ್ನು ಹೋಲುವುದು. (ಸಂಗಾತಿಯಿಲ್ಲದೆ ಮುಖ ಬಾಡಿದೆ) ಮನಸ್ಸಿನಲ್ಲಾದ ನಿರ್ವೇಗವನ್ನು ಅವಶ್ಯವಾಗಿ ಕೂರ್ಪರಲ್ಲಿ ನುಡಿಯಬೇಕು. ಇಲ್ಲದಿದ್ದರೆ ಅದು ಹೋಗುವುದಾದರೂ ಹೇಗೆ? ನಿನ್ನ ಅಂತರಂಗವನ್ನು ನಿವೇದಿಸು' ಎಂದು ಹೇಳಿ ದಳು. "ಪಂಡಿತೆಯ ಹುಟ್ಟುಗುಣದ ಮೆದುವಾದ ನಡೆವಳಿ ನುಡಿವಳಿಗಳು ಶ್ರೀಮತಿಯ ಎದೆಯನ್ನು ಹೊಗಲಾರಂಭಿಸಿದುವು. ಮೆಲ್ಲಮೆಲ್ಲನೆ ಕುಮಾರಿಯ ಅಂತರ್ಭಾವವನ್ನು ಹೀರಿಕೊಂಡಳು."[೨೫] ದುಃಖದ ಆವೇಗದಲ್ಲಿ ಮ್ಲಾನಳಾಗಿದ್ದ ಅಂತರ್ಮುಖಿಯಾಗಿದ್ದ ಶ್ರೀಮತಿ ಈಗ ನಿಧಾನವಾಗಿ ತನ್ನ ಅಳಲನ್ನು ತೋಡಿಕೊಳ್ಳಲು ಸನ್ನದ್ಧಳಾದಳು. ಮನ ಶ್ಶಾಸ್ತ್ರಜ್ಞೆಯಂತೆ ಪಂಡಿತೆ ಕಾರ್ಯ ನಿರ್ವಹಿಸಿ ಯಶಸ್ವಿಯಾದಳು.

ಪೂರ್ವಪುರಾಣದಲ್ಲಿ ಬರುವ ವೃತ್ತಾಂತವನ್ನೇ ಆದಿಪುರಾಣವು ಆಧರಿಸಿದೆಯಾದರೂ ಅಲ್ಲಲ್ಲಿ ವಾಗ್ಧೋರಣೆ ಬೇರೆಯಾಗುತ್ತದೆ. ಪಂಡಿತೆ ಪೂರ್ವಪುರಾಣದಲ್ಲಿ ತಾಯಿ ಯೋಪಾದಿಯಲ್ಲಿ ಕಂಡುಬಂದರೆ, ಆದಿಪುರಾಣದಲ್ಲಿ ಪ್ರಾಣಸಖಿಯಾಗಿ ಕಂಡುಬರು ತ್ತಾಳೆ. ಪೂರ್ವಪುರಾಣದಲ್ಲಿ ಪಂಡಿತೆಯ ಆತ್ಮಪ್ರಶಂಸೆ ಹೆಚ್ಚಾಯಿತೆನಿಸುತ್ತದೆ. ಉದಾ ಹರಣೆಗೆ, ತಾನು ಯುಕ್ತಿಯಿಂದ ಕಾರ್ಯಗಳನ್ನು ಮಾಡುವುದರಲ್ಲಿ ಚತುರಳಾಗಿರುವುದ ರಿಂದ ಪಂಡಿತೆಯೆಂಬ ಹೆಸರು ತನಗೆ ಸಾರ್ಥಕವಾಗಿದೆ ಎಂದು ತಾನೇ ನೇರವಾಗಿ ಪಂಡಿತೆ ಹೇಳಿಕೊಂಡಿರುವಳು. ಶ್ರೀಮತಿಯು ಮೂರ್ಛೆ ಹೋದುದನ್ನು ಕುರಿತು ಇದೇನು, ನಿನ್ನ ಮೂರ್ಛೆ ಕಾಮಬಾಧೆಯಿಂದಾದ ಮೂರ್ಛೆಯೋ? ಪ್ರಾಯಶಃ ಯೌವನದಲ್ಲಿ ಕಾಮ ನೆಂಬ ಗ್ರಹವೇ ಪ್ರಾದುರ್ಭವಿಸುತ್ತದೆ (VI-೧೧೭-೧೨೦).

ಈ ರೀತಿಯಾಗಿ ಶ್ರೀಮತಿಗೆ ಕಾಮಬಾಧೆಯಿಂದಾಗಿ ಆಗಿರಬಹುದಾದ ಅವಸ್ಥೆ ಇದಾಗಿ ರಬಹುದೆಂದು ನುಡಿಯುವಳು. ಆದರೆ, ಪಂಪನಲ್ಲಿ ಈ ಬಗೆಯ ಊಹೆ ಕಂಡುಬರು ವುದಿಲ್ಲ. ಈ ಪ್ರಸಂಗ ಹೆಚ್ಚು ನವುರಾಗಿ ಬಂದಿರುವುದನ್ನು ಕಾಣಬಹುದು. ಆದಿಪುರಾಣದ ಪಂಡಿತೆ ಹೆಚ್ಚು ಆತ್ಮವಿಶ್ವಾಸಿಯಾಗಿ ಕಂಡುಬರುತ್ತಾಳೆ.

## ಉತ್ತರಕಾಲೀನ ಕಾವ್ಯಗಳು

**ಚಾವುಂಡರಾಯಪುರಾಣ** : ಪಂಡಿತೆ ಅಶೋಕವನಕ್ಕೆ ಶ್ರೀಮತಿಯನ್ನು ಕರೆದು

ಕೊಂಡು ಹೋಗಿ, 'ತನ್ನ ಬಲ್ಲಿಂದದೊಳ್ ಒಡಂಬಡಿಸಿ ಬೆಸಗೊಳಲು' ಶ್ರೀಮತಿ ತನ್ನ ವೃತ್ತಾಂತವನ್ನು ಹೇಳಲುದ್ಯುಕ್ತಳಾದಳೆಂದಷ್ಟೇ ಇಲ್ಲಿ ಬರುವ ಹೇಳಿಕೆ. ಪೂರ್ವಪುರಾಣ, ಆದಿಪುರಾಣಗಳಲ್ಲಿ ಕಂಡುಬರುವ ವಿವರಣೆಗಳನ್ನು ಕವಿ ಕೈಬಿಟ್ಟಿದ್ದಾನೆ.

**ಹಸ್ತಿಮಲ್ಲನ ಪೂರ್ವಪುರಾಣ** : ಶ್ರೀಮತಿಯನ್ನು ಪಂಡಿತೆ ನಾನಾವಿಧವಾಗಿ ಪ್ರಶ್ನಿಸಿದಾಗ (ಪ್ರಶ್ನೆಗಳ ವಿವರವಿಲ್ಲ) 'ಶ್ರೀಮತಿಯುಂಗುಟದಿಂ ನೆಲನಂಬರೆವುತಿಂತೆಂದಳ್' ಈ ಮಾತನ್ನು ಕವಿ ಆದಿಪುರಾಣದಿಂದ ನೇರವಾಗಿ ತೆಗೆದುಕೊಂಡಿದ್ದಾನೆ. ಸ್ವಭಾವಮುಗ್ಧೆಯಾದ ಶ್ರೀಮತಿ 'ಮುನ್ನಿನ ಜನ್ಮಂಗಳನಿಂತೆಂದು ಬರೆದುತೋರ್ಪಂತೆ ನೆಲನಂ ಬರೆಯುತ್ತುಮಪಗತ ಮುಖಮುದ್ರೆಯಾಗಿ' (ಆದಿಪು. ವಚನ, ಆಶ್ವಾಸ ii)

**ಪುಣ್ಯಾಸ್ರವದ ಆದೀಶ್ವರರ ಕಥೆ** : ಪಂಡಿತೆಯು ಶ್ರೀಮತಿಯನ್ನು ವಿಚಾರಿಸಿದಳೆಂಬುದನ್ನು ನಾಗರಾಜಕವಿಯು ಈ ರೀತಿ ಹೇಳಿದ್ದಾನೆ :

ಶ್ರೀಮತಿ ಮೋನದೊಳಿರುತಿರ
ಲಾ ಮಹಿಳೆಧಾತ್ರಿ ಕೇಳ್ದು ಪಂಡಿತೆ ನಡೆತಂ
ದಾ ಮಧುಕರ ಕುಂತಳೆಯಂ
ತಾಮರಸದಳಾಯತಾಕ್ಷಿಯಂ ಬೆಸಗೊಂಡಳ್ (ಪುಆಕ. ix-೪೩)

ಎಂಬ ಅಂಶವು ಮಾತ್ರ ಬರುತ್ತದೆ. ಪುಣ್ಯಾಸ್ರವದ ಪ್ರಕಾರ ಶ್ರೀಮತಿಗೆ ಪಂಡಿತೆ ಕೇವಲ ದಾಸಿ. ಇಲ್ಲಿ ಆತ್ಮೀಯತೆಯ ಬೆಸುಗೆಯ ವಿವರವಿಲ್ಲ. ಪ್ರಶ್ನಾವಳಿಯ ವಿವರಗಳಿಲ್ಲ. ಬೇಸರದಿಂದೊಡಗೂಡಿದ ಶ್ರೀಮತಿಯನ್ನು ವರ್ಣಿಸುವಾಗ ಪಂಪನಲ್ಲಿ ಕಂಡುಬರುವ ಸೂಕ್ಷ್ಮತೆ ಇಲ್ಲಿ ಮೈಗೂಡಿಲ್ಲ.

**ಪುರುದೇವಚರಿತ** : 'ಶ್ರೀಮತಿಯೊಡನೆ ಪಂಡಿತೆ ಪ್ರೇಮದಿಂದ ಬೆಸಗೊಳೆ ಪೇಳ್ದಗುಳ್ದಳು ಮುನ್ನ ಭವದ ವಿಸ್ತರವ' ಎಂಬಿಷ್ಟೇ ವಿವರದೊಂದಿಗೆ ಈ ವೃತ್ತಾಂತವು ಮುಗಿದು ಹೋಗುತ್ತದೆ.

**ಆದಿಪರಮೇಶ್ವರನ ಯಕ್ಷಗಾನ** : ಪೂರ್ವಪುರಾಣ, ಆದಿಪುರಾಣಗಳನ್ನು ಬಿಟ್ಟರೆ ಮತ್ತೆ ಹೆಚ್ಚು ವಿವರಣೆಗಳನ್ನು ಈ ಕಾವ್ಯದಲ್ಲಿ ಕಾಣುತ್ತೇವೆ.

ಪಂಡಿತೆ ಶ್ರೀಮತಿಯನ್ನು ನಾನಾ ವಿಧವಾಗಿ ಆಕೆಯ ದುಃಖದ ಕಾರಣವೇನೆಂದು ವಿಚಾರಿಸಿಕೊಳ್ಳುವ ರೀತಿಯಿದು :

ಕನಕಲತೆ ಕೇಳು ನಿನ್ನ ಮನದಭೀಷ್ಟವ ಸಲಿಪೆ
ಅನುಮಾನಿಸದೆಯಾ ಚಿಂತನೆಯನೆನಗುಸುರು
ವಂಚಿಸದೆ ಮನದ ಪ್ರಪಂಚಮೆಲ್ಲವನರುಹು
ಅಂಚೆಗಮನೆ ಮನದ ಚಿಂತೆಯೆಲ್ಲವನು (ಆದಿಯ-ಪರಿಚ್ಛೇದii)

ಶ್ರೀಮತಿಗೆ ಸಹಾಯಮಾಡುವ ಭರವಸೆಯನ್ನು ನೀಡಿ, ಆಕೆಯ ಮನದಳಲನ್ನು ತಿಳಿದುಕೊಳ್ಳಲು ಪಂಡಿತೆ ಪ್ರಯತ್ನಿಸುವಳು. ಕೇವಲ ವರದಿಮಾತ್ರವಾಗಿ ಚಾವುಂಡರಾಯ ಪುರಾಣಾದಿ ಕಾವ್ಯಗಳಲ್ಲಿ ಈ ವೃತ್ತಾಂತವು ಬಂದಿದ್ದರೆ, ಇಲ್ಲಿ ಆ ಧಾಟಿ ಮರೆಯಾಗಿ, ಓದುಗರನ್ನು ರಂಜಿಸುವ ವಿವರಣಾ ವಿಧಾನ ಕಂಡುಬರುತ್ತದೆ.

**ಶ್ರೀಮತಿ ಪಂಡಿತೆಯೊಡನೆ ತನ್ನ ಮನದಳಲನ್ನು ನಿವೇದಿಸಿಕೊಂಡ ವೃತ್ತಾಂತ– ಶ್ರೀಮತಿಯ ಭವವೃತ್ತಾಂತ :**

**ಆದಿಪುರಾಣ-ಪೂರ್ವಪುರಾಣ : ಧನಶ್ರೀಭವ :** ಶ್ರೀಮತಿ ನಿರ್ನಾಮಿಕೆಯಾಗಿ ಪಡಬಾರದ ಕಷ್ಟಗಳನ್ನು ಅನುಭವಿಸಿದುದಕ್ಕೆ ಕಾರಣವಾದ ಭವ ಧನಶ್ರೀಭವ.

ಪಲಾಲಕೂಟವೆಂಬ ಗ್ರಾಮ. ದೇವಲನೆಂಬ ಗ್ರಾಮಕೂಟನಿಗೂ ಆತನ ಕುಟುಂಬಿನಿ ವಸುಮತಿಗೂ ಧನಶ್ರೀ ಮಗಳಾಗಿ ಹುಟ್ಟಿದಳು. ಒಮ್ಮೆ ಸಮಾಧಿಗುಪ್ತ ಮುನಿಗಳು ತ್ರಿಗುಪ್ತಿಯಿಂದ ಆಚರಿಸುತ್ತಿದ್ದ ಅಧ್ಯಯನವು ಧನಶ್ರೀಗೆ ಅನಿಷ್ಟವೆನಿಸಿ, ಅಧ್ಯಯನಕ್ಕೆ ಅಂತರಾಯವನ್ನುಂಟುಮಾಡಲು ಕೊಳೆತನಾಯಿಯ ಹೆಣವನ್ನು ಅವರ ಆವಾಸದಲ್ಲಿ ಟ್ಟಳು. ಆ ಮುನಿಗಳು ಈಕೆಯ ಪಾಪಾರ್ಜನೆಗೆ ಕಾರಣವಾದ ದುರಾಚಾರವನ್ನು ಕಂಡು 'ಮಗಳೆ, ಮತಿಗೆಟ್ಟು ಸಂಸೃತಿಲತೆಯಲ್ಲಿ ಸಿಲುಕಿ ಹಾಕಿಕೊಳ್ಳುವಂತೆ ನೀನಿದನ್ನು ಮಾಡಿದೆಯಲ್ಲ? ದುರ್ಗತಿಗೆ ಕಾರಣವಾದ ಈ ವ್ಯತಿಕ್ರಮವು ಕಿರಿದು ದುಃಖವನ್ನು ಮಾಡುವುದೇ?' —ಎಂದು ನುಡಿದಾಗ ಧನಶ್ರೀ ಕೈಮುಗಿದು ಕ್ಷಮೆಯನ್ನು ಕೇಳಿದ ಕಾರಣ, ಅವರ ಉಪದೇಶದಿಂದ ಮುಂದಿನ ಜನ್ಮದಲ್ಲಿ ಮನುಷ್ಯಗತಿಯನ್ನೇನೋ ಪಡೆದಳು; ಆದರೆ ಪೂಜಾವ್ಯತಿಕ್ರಮದ ಫಲವನ್ನು ಆಕೆ ಅನುಭವಿಸಲೇಬೇಕಾಯಿತು.

**ನಿರ್ನಾಮಿಕೆ :** ಧನಶ್ರೀಯಾಗಿ ಹುಟ್ಟಿದಾಗ ಮಾಡಿದ ಪಾಪದ ಫಲವನ್ನನುಭವಿಸುವಂತೆ ನಿರ್ನಾಮಿಕೆಯ ಭವದಲ್ಲಿ ಆಕೆ ಅನೇಕ ಪಾಡುಪಟ್ಟಳು.

ಪಾಟಲೀಗ್ರಾಮದಲ್ಲಿ ನಾಗದತ್ತನೆಂಬ ವರ್ತಕ. ಆತನ ಪತ್ನಿ ವಸುದತ್ತೆ. ಇವರಿಗೆ ನಂದ-ನಂದಿಮಿತ್ರ-ವರಸೇನಾದಿ ಐವರು ಗಂಡುಮಕ್ಕಳೂ ಮದನಕಾಂತೆ, ಶ್ರೀಕಾಂತೆಯೆಂಬ ಇಬ್ಬರು ಹೆಣ್ಣುಮಕ್ಕಳೂ ಇದ್ದರು. ಕಡೆಯವಳಾದ ನಿರ್ನಾಮಿಕೆಯು ಗರ್ಭದಲ್ಲಿ ನೆಲೆಸಿದಾಗ ದಾರುಣಕರ್ಮದ ಪ್ರೇರಣೆಯಿಂದ ಕಾಯ್ತು ಚೂತಮನಡೆಸಿ ಸಿಡಿಲ್ ಪೊಯ್ದುದೆನಿಸೆ ಆಕೆಯ ಒಡಹುಟ್ಟಿದವರು ಹಾಗೂ ಆಕೆಯ ತಂದೆ ಸತ್ತರು.

ಅಜ್ಜಿ, ತಾಯಿ ಇಬ್ಬರೆ ಉಳಿದರು. ಪಾಪಕರ್ಮೋದಯ ಜೀವಿಯಾದ ಈಕೆ ಗರ್ಭದಲ್ಲಿ ಜನಿಸುತ್ತಿದ್ದಂತೆಯೇ ಉಂಟಾದ ದುರಂತವನ್ನು ಕವಿ ಚೆನ್ನಾಗಿ ವರ್ಣಿಸಿದ್ದಾನೆ. ಅರಸನು ಮನೆಯನ್ನು ಕಸಿದುಕೊಂಡನು. ಬೇರೆಯವರ ಹಂಗಿನಿಂದ ಅಜ್ಜಿ-ಅಬ್ಬೆಯರು ಬದುಕನ್ನು ದೂಡುತ್ತ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದರು. ಒಂಬತ್ತು ತಿಂಗಳು ತುಂಬಿದಾಗ ನಿರ್ನಾಮಿಕೆ ಹುಟ್ಟಿದಳು. ಆಕೆಯ ಮೆಯ್ಯ ದುರ್ಗಂಧಕ್ಕೆ ಹೇಸಿ ಕಂಡವರೆಲ್ಲರೂ ಎಳೆದು ಓಡಿಸಲು, ಅಜ್ಜಿ ಅಬ್ಬೆಯರು ಸ್ಮಶಾನದಲ್ಲಿ ಚಿಂದಿ ಬಟ್ಟೆಗಳಿಂದ ಆ ಮಗುವನ್ನು ಮುಚ್ಚಿಟ್ಟು, ಭಿಕ್ಷೆ ಬೇಡಿ ತಂದ ಎಂಜಲಿನ ಉಳಿಕೆಯನ್ನು ಅವಳಿಗೆ ಕೊಡುತ್ತಿದ್ದರು. ಹೆಸರಿಲ್ಲದ ಈಕೆ ನಿರ್ನಾಮಿಕೆಯಾಗಿಯೇ ಬೆಳೆದಳು. ಅಜ್ಜಿ-ಅಬ್ಬೆಯರಿಬ್ಬರೂ ಸತ್ತರು. ನಿರ್ನಾಮಿಕೆ ತನ್ನ ಪಾಪದ ಫಲವನ್ನು ತಿಳಿಯಲು ವಿಚಾರಣಚರಿತವೆಂಬ ಕಾಡನ್ನು ಪ್ರವೇಶಿಸಿ, ಅದಕ್ಕೆ ತಿಲಕಪ್ರಾಯವಾಗಿರುವ ಅಂಬರತಿಲಕವೆಂಬ ಗಿರಿಯನ್ನು ಏರಿ ಅಲ್ಲಿ ಪಿಹಿತಾಸ್ರವರೆಂಬ ಮುನಿಗಳನ್ನು ಕಂಡಳು. ಅವರನ್ನು ಕಂಡು ನಮಸ್ಕರಿಸಬೇಕೆಂಬ ಅರಿವೂ ಇಲ್ಲದ ಆಕೆ, ಕೊನೆಗೆ ಥಟ್ಟನೆ ಮನದಲ್ಲಿ ಉದ್ಭವಿಸಿದ ಅರಿವಿನಿಂದ ಅವರಿಗೆ

ನಮಸ್ಕರಿಸಿ, ತನ್ನ ಈ ಜನ್ಮದ ದುರ್ಗತಿಗೆ ಕಾರಣವಾದ ಧನಶ್ರೀಭವದ ವೃತ್ತಾಂತವನ್ನು ಕೇಳಿ ತಿಳಿದುಕೊಂಡಳು. ಅನಂತರ ಮುನಿಗಳು 'ಮುನ್ನಿನ ಗೆಯ್ದ ದೋಷಮಿನ್ನಱಿದು ಜಿನೇಂದ್ರಧರ್ಮಜಲದಿಂ ಕಳೆಕರ್ಚಿ ಕಳಂಕಪಂಕಮಂ' ಎಂದು ನುಡಿದಾಗ ಅನೇಕ ವ್ರತಗಳನ್ನು ಕೈಗೊಂಡು, ಈಶಾನಕಲ್ಪದ ಶ್ರೀಪ್ರಭ ವಿಮಾನದಲ್ಲಿ, ಲಲಿತಾಂಗದೇವನಿಗೆ ಸ್ವಯಂಪ್ರಭೆಯಾಗಿ ಹುಟ್ಟಿ, ಅಲ್ಲಿಂದ ಬಂದು ಲಲಿತಾಂಗದೇವನ ಸಮೇತ, ಪಿಹಿತಾಸ್ರವರನ್ನು ಪೂಜಿಸಿ ಬಂದಳು.

ಇಲ್ಲಿ ಬರುವ ವಿಚಾರಣಚರಿತವೆಂಬ ಕಾಡಿನ ಉಲ್ಲೇಖವಾಗಲಿ ಅಂಬರ ತಿಲಕವೆಂಬ ಗಿರಿಯ ಉಲ್ಲೇಖವಾಗಲಿ ಪ್ರತಿಮಾರೂಪದಲ್ಲಿ ಬಂದಿರುವಂತೆ ತೋರುತ್ತದೆ. ಭವವೆಂಬುದು ಕಾಡಿನಷ್ಟೇ ಘೋರವಾದುದು, ಜಟಿಲವಾದುದು, ಕೋಟಲೆಗೆ ಸಿಲುಕಿಸುವಂತಹುದು. ಇದರಲ್ಲಿ ಎಚ್ಚರಿಕೆಯಿಂದ ವಿಚಾರಿಸಿ ನಡೆಯಬೇಕು ಎಂಬುದನ್ನು ಸೂಚಿಸುತ್ತದೆ. 'ಅಂಬರತಿಲಕಗಿರಿ'ಯು ಈ ಜಟಿಲತೆಯನ್ನು ಮೀರಿನಿಲ್ಲುವ ಮುಕ್ತಿಮಾರ್ಗದ ಸಂಕೇತವಾಗಿರುವಂತೆ ಕಂಡುಬರುತ್ತದೆ. ನಿರ್ನಾಮಿಕೆ ಮುಂದೆ ಭವಕಾನನದ ಜಟಿಲತೆಯಿಂದ ಬಿಡುಗಡೆಯನ್ನು ಪಡೆದು ಮುಕ್ತಿಮಾರ್ಗವನ್ನೈದುವ ಭವ್ಯಜೀವವೆಂಬ ಸಂಕೇತವಿದೆ. ಪೂರ್ವಪುರಾಣದಲ್ಲಿ ಬರುವ ಈ ಅಂಶ ಆದಿಪುರಾಣದಲ್ಲಿಯೂ ಕಂಡುಬರುತ್ತದೆ.

ಶ್ರೀಮತಿಯು ಮುಂದೆ ಪಂಡಿತೆಯನ್ನು ಕುರಿತು, ಲಲಿತಾಂಗನು ಸತ್ತು ಈಗ ಎಲ್ಲಿ ಹುಟ್ಟಿರುವನೆಂದು ತಿಳಿಯದವಳಾಗಿ ಪರಿತಪಿಸುತ್ತಿರುವುದಾಗಿಯೂ ಲಲಿತಾಂಗನು ತನ್ನ ಮನದಲ್ಲಿ ಬೆಸೆದುಕೊಂಡಿರುವ ರೀತಿಯನ್ನೂ ವ್ಯಕ್ತಪಡಿಸುವಳು.

ಎರೆವ ಮರಲ್ವ ಲಲ್ಲಯಿಪ ಕಾಲ್ವಿಡಿವೆಂಬುದನಿಂಬುಕೆಯ್ವಳಂ
ಕರಣವಿಳಾಸಮಂ ಮೆಱೆವ ಮೇಳಿಸುವಂದಿನ ರೂಪು ಶಾಸನಂ
ಬರೆದುದು ಬರ್ಚ್ಚಿಸಿತ್ತಮರ್ದುದಱ್ಱುದಳಂಕಿದುದುರ್ಚ್ಚಿಪೊಕ್ಕು ಬೇ
ರ್ವ್ವರಿದುದು ಬೆಚ್ಚುದಚ್ಚೞಿದುದೆನ್ನೆರ್ದೆಯೊಳ್ ಲಲಿತಾಂಗದೇವನಾ (iii-೪೩)

ಎಂದು ನಿವೇದಿಸಿಕೊಂಡಳು. ಪೂರ್ವಭವದ ಗಾಢಪ್ರೇಮವನ್ನು ಈ ಭವದಲ್ಲಿ ಹೊತ್ತು ಮುಂದುವರಿಸುವ ರೀತಿ ಅತ್ಯಂತ ಪರಿಣಾಮಕಾರಿಯಾಗಿದೆ.

ಇನ್ನು ತನಗೆ ಲಲಿತಾಂಗನು ದೊರೆಯನೆಂದು ತಿಳಿದ ಶ್ರೀಮತಿ ತಾನು ಬರೆದಿಟ್ಟಿರುವ ಚಿತ್ರಪಟವನ್ನು ಪೂಜಿಸುತ್ತ ಕನ್ಯಾವ್ರತದಲ್ಲಿಯೇ ಕಾಲವನ್ನು ಕಳೆಯುವುದಾಗಿ ಪಂಡಿತೆಗೆ ತಿಳಿಸಿದಾಗ ಪಂಡಿತೆ ಸುಮ್ಮನಿರುವಳೆ? ' ನೀನು ಹೇಳಿದೆಯಲ್ಲ ಬಿಡು. ನಿನ್ನ ಮಾತಿನ ರೀತಿಯನ್ನು ನಾನು ಅರಿತೆ. ಶಕ್ತಿಯಿಂದ ಮುಕ್ತಿಯನ್ನು ಸಾಧಿಸಬೇಕು. ಮಂತ್ರಶಕ್ತಿ ಪ್ರಕಟನಪಟುಗಳಿಗೆ ಅಸಾಧ್ಯವಾದುದಾದರೂ ಏನು? ನಾನು ನಿನ್ನಿನಿಯನನ್ನು ಅರಸಲು ತೆರಳುವೆ, ಚಿಂತಿಸದಿರು; ನೀನು ಬರೆದ ಚಿತ್ರಪಟವನ್ನು ತೋರು. ಆ ಚಿತ್ರಪಟದಿಂದ ನಿನ್ನ ವಲ್ಲಭನನ್ನು ಹುಡುಕಿ ತರುವೆ' ಎಂದು ಆಶ್ವಾಸನೆ ನೀಡಿದಳು. ಆ ಚಿತ್ರಪಟದೊಳಗೆ ಸೂಚಿಸಿರುವ ಗುಪ್ತವಾದ ವಿಷಯಗಳನ್ನರಿತು, ಆ ಆತ್ಮವಿಶ್ವಾಸಿನಿ ಪಂಡಿತೆ ಚಿತ್ರಪಟವನ್ನು ಹಿಡಿದುಕೊಂಡು ತನ್ನ ಕಾರ್ಯನಿಮಿತ್ತ ಹೊರಟಳು.

'ಧನಶ್ರೀ' ಕಥೆಯನ್ನು ಪಂಪನು ಪೂರ್ವಪುರಾಣದಲ್ಲಿರುವಂತೆಯೇ ಸ್ವೀಕರಿಸಿದ್ದಾನೆ. ಆದರೆ ನಿರ್ನಾಮಿಕೆಯ ವೃತ್ತಾಂತದ ಕಥೆ ಪೂರ್ವಪುರಾಣದಲ್ಲಿ ಹೆಚ್ಚು ವಿವರಗಳಿಲ್ಲದೆ

ಬಂದಿದೆ. ನಿರ್ನಾಮಿಕೆ ದರಿದ್ರಕುಲದಲ್ಲಿ ಹುಟ್ಟಿದ ಸಂಗತಿ ಮಾತ್ರ ಪೂರ್ವಪುರಾಣದಲ್ಲಿ ಬರುತ್ತದೆ. ಆಕೆ ಪಟ್ಟ ಹಲವಾರು ಬವಣೆಗಳ ವೃತ್ತಾಂತ ಇಲ್ಲಿ ಇಲ್ಲ. ಪಂಪನು ಬೇರೆ ಮೂಲದಿಂದ, ಅಥವಾ ಆ ಕಾಲದಲ್ಲಿ ಪ್ರಚಲಿತವಿದ್ದ ಜನಪದ ಕಥೆಯ ಆಧಾರದಿಂದ ಈ ಕಥೆಯನ್ನು ಹಿಗ್ಗಿಸಿರುವಂತೆ ಕಂಡುಬರುತ್ತದೆ. ಪಾಪಕರ್ಮ ಫಲದ ವೃತ್ತಾಂತ ಹೃದಯವಿದ್ರಾವಕವೆನಿಸುವಷ್ಟು ಪ್ರಭಾವಕಾರಿಯಾಗಿ ಆದಿಪುರಾಣದಲ್ಲಿ ನಿರ್ನಾಮಿಕೆಯ ಬವಣೆಗಳ ಮೂಲಕ ಹೊರಹೊಮ್ಮಿದೆ. ಪಿಹಿತಾಸ್ರವ ಮುನಿಗಳು ನಿರ್ನಾಮಿಕೆಗೆ ನೀಡುವ ಉಪದೇಶ ಸುದೀರ್ಘವಾಗಿ ಬಂದಿದೆ. ಪಂಪನು ಆ ಭಾಗವನ್ನು ಕೈಬಿಟ್ಟಿದ್ದಾನೆ. ಮುನ್ನಿನ ಪಾಪವನ್ನು ಕಳೆಯಲು ಧರ್ಮವನ್ನಾಚರಿಸು ಎಂದಷ್ಟೇ ಹೇಳಿ ಮುಗಿಸಿದ್ದಾನೆ.

ಪೂರ್ವಪುರಾಣದಲ್ಲಿ ಶ್ರೀಮತಿ ಪಂಡಿತೆಯೊಡನೆ ತನ್ನ ಪ್ರಾಣವಲ್ಲಭನನ್ನು ಹುಡುಕಿ ಕೊಡು ನೀನೇ ಅದಕ್ಕೆ ಸಮರ್ಥಳು ಎಂದು ಉದ್ಗರಿಸುವಳು. ಅಲ್ಲದೆ ತಾನು ಬರೆದು ಚಿತ್ರಪಟವನ್ನು ತೆಗೆದುಕೊಂಡು ಹೋಗಿ ಅದರ ಸಹಾಯದಿಂದ ತನ್ನ ಪ್ರಾಣಸಖನನ್ನು ಹುಡುಕಿಕೊಂಡು ಬರುವಂತೆ ಶ್ರೀಮತಿಯೇ ಸೂಚಿಸುವಳು. ಆದರೆ ಪಂಪನು ಈ ಸಂದರ್ಭದಲ್ಲಿ ಶ್ರೀಮತಿಯ ಪಾತ್ರವನ್ನು ಇದಕ್ಕಿಂತಲೂ ಗಂಭೀರರೀತಿಯಲ್ಲಿ ನಿರ್ವಹಿಸಿರುವುದು ಶ್ಲಾಘನೀಯವಾಗಿದೆ. ಪ್ರಾಣವಲ್ಲಭನನ್ನು ನೆನೆಯುವುದೊಂದೆ ತನಗೆ ನೋಂಪಿಯೆಂಬಂತೆ ಕುಳಿತುಕೊಂಡ ಶ್ರೀಮತಿಯ ಮುಗ್ಧ ಚಿತ್ರಣ ಪೂರ್ವಪುರಾಣದಲ್ಲಿ ದೊರೆಯುವುದಿಲ್ಲ.

ಪೂರ್ವಪುರಾಣದಲ್ಲಿ ಬರುವ ಈ ಕೆಳಗಿನ ಶ್ಲೋಕವೊಂದು ಪಂಪನಲ್ಲಿ ವಿಸ್ತೃತಗೊಂಡು ಮನೋಹರವಾಗಿ ಮೂಡಿ ಬಂದಿದೆ (ಆದಿಪು. iii-೪೩). ಉದಾಹರಣೆಗೆ,

> ಉತ್ಕೀರ್ಣ ಇವ ದೇವೋಸೌ ಪಶ್ಚಾದ್ಯಾಪಿ ಮನೋ ಮಮ |
> ಅಧಿತಿಷ್ಠತಿ ದೈವೇನ ರೂಪೇಣಾನಂಗತಾಂ ಗತಃ || (vi-೧೬೨)

ದೇವರೂಪದಿಂದ ಚ್ಯುತನಾದ ಈ ಲಲಿತಾಂಗದೇವನು ಕಲ್ಲಿನಲ್ಲಿ ಪ್ರತಿಮೆಯನ್ನು ಬಿಡಿಸಿದಂತೆ ಈಗಲೂ ನನ್ನ ಮನಸ್ಸಿನಲ್ಲಿರುತ್ತಾನೆ ನೋಡು (ಆದಿಪು. iii-೪೩. ನೋ.ಪು. ೧೫೬).

## ಉತ್ತರಕಾಲೀನ ಕಾವ್ಯಗಳು

**ಚಾವುಂಡರಾಯಪುರಾಣ :** ಚಾವುಂಡರಾಯನು ಶ್ರೀಮತಿಯ ಭವಾಂತರ ವೃತ್ತಾಂತವನ್ನು ವರ್ಣಿಸುವಲ್ಲಿ ನೇರವಾಗಿ ಆದಿಪುರಾಣವನ್ನು ಅನುಸರಿಸಿದ್ದಾನೆ. ಪಂಪನಲ್ಲಿ ಕಂದಪದ್ಯದಲ್ಲಿ ಬರುವ ಹೋಲಿಕೆಯೊಂದನ್ನು ಬಿಟ್ಟು, ಅಲ್ಲಿ ಬರುವ ವಚನಭಾಗವನ್ನು ಇಡಿಯಾಗಿ ತೆಗೆದಿಟ್ಟಿದ್ದಾನೆ. ಉದಾಹರಣೆಗೆ :

> ಈ ಭವಕ್ಕೆ ಮೂಱನೆಯ ಭವದೊಳ್ ಧಾತಕೀಷಂಡದ ಮೂಡಣ ಮಂದರದ ಪರ ವಿದೇಹದ ಸೀತೋದಾನದಿಯ ಬಡಗಣ ತಡಿಯ ಗಂಧಿಲವಿಷಯದ ಪಾಟಲೀ ಗ್ರಾಮದೊಳ್ ನಾಗದತ್ತನೆಂಬ ಪರದಂಗಮಾತನ ಪರದಿತಿ ವಸುದತ್ತೆಗಂ ನಂದಂ ನಂದಮಿತ್ರಂ ನಂದಿ ಷೇಣಂ ವರಸೇನಂ ಜಯಸೇನನೆಂಬೈವರ್ ತನಯರಿಂದಂ ಮದನಕಾಂತೆಯುಂ ಶ್ರೀಕಾಂತೆ ಯುಮೆಂಬಿರ್ವರ್ ತನೂಜೆಯರಿಂದ ಕಡೆಯ ಗರ್ಭದೊಳಾಂ ನೆಲಸಲೊಡೆನ್ನದೊಂ

ದಶುಭಕರ್ಮೋದಯದಿನ್' (ಚಾವುಂಪು. ಪುಟ ೨೩).

ಆನೀಭವಕ್ಕೆ ಮೂಱನೆಯ ಭವದೊಳ್ ಧಾತಕೀಷಂಡದ ಮೂಡಣ ಮಂದರದಪರ ವಿದೇಹದ ಸೀತೋದಾನದಿಯ ಬಡಗಣ ತಡಿಯ ಗಂಧಿಳವಿಷಯದ ಪಾಟಳೀ ಗ್ರಾಮದೊಳ್ ನಾಗದತ್ತನೆಂಬ ಪರದಂಗಂ, ಆತನ ಪರದಿತಿ ವಸುದತ್ತೆಗಂ ಪುಟ್ಟಿದ ನಂದ , ನಂದಿಮಿತ್ರ, ನಂದಿಷೇಣ, ವರಸೇನ, ಜಯಸೇನರೆಂಬರೈವರ್ ತನಯರಿಂದಂ ಮದನಕಾಂತೆಯುಂ ಶ್ರೀಕಾಂತೆಯುಮೆಂಬಿರ್ವರ್ ತನೂಜೆಯರಿಂದಂ ಕಡೆಯ ಗರ್ಭದೊಳಾಂ ನೆಲಸಲೊಡಂ ಅಸ್ಮದನ್ಯಜನ್ಮೋಪಾರ್ಜಿತ ದಾರುಣ ಕರ್ಮಪ್ರೇರಣೆಯಿಂದಂ (ಆದಿಪು. ಆಶ್ವಾಸ iii)

ವ್ಯತ್ಯಾಸವೆಂದರೆ ಪಂಪನ ಕೊನೆಯ ಸಾಲುಗಳನ್ನು ಸುಲಭೀಕರಿಸಿ ಚಾಮುಂಡ ರಾಯನು ಹೇಳಿದ್ದಾನೆ. ಉಳಿದೆಡೆಗಳಲ್ಲಿ ಪಂಪನನ್ನು ಅನುಸರಿಸಿ ಅದರ ಸಂಗ್ರಹ ರೂಪವನ್ನು ನೀಡಿದ್ದಾನೆ. ಭವಾಂತರ ಕಥೆಗಳು ಸಾಕಷ್ಟು ದೀರ್ಘವಾಗಿಯೇ ಬಂದಿವೆ.

ಶ್ರೀಮತಿಯು ತನ್ನ ಭವದ ವೃತ್ತಾಂತಗಳನ್ನು ತಿಳಿಸಿ ಕೊನೆಗೆ 'ಎನ್ನೀಭವದೊಳಾತ ನಲ್ಲದೆ ಗಂಡನಲ್ಲದಂದಿಂತೆ ಕಾಲಮಂ ಕಳಿಪುವೆ' ನೆಂಬ ಒಂದೇ ಮಾತಿನಲ್ಲಿ ತನ್ನ ದೃಢ ನಿರ್ಧಾರವನ್ನು ತಿಳಿಸಿದಾಗ, ಪಂಡಿತೆ ಚಿತ್ರಪಟವನ್ನು ತೆಗೆದುಕೊಂಡು, ಅಲ್ಲಿಂದ ತೆರಳು ವಳು. ಪೂರ್ವಪುರಾಣ, ಆದಿಪುರಾಣಗಳಲ್ಲಿ ಬರುವ ವಿವರಣೆ ಇಲ್ಲಿ ಬರುವುದಿಲ್ಲ.

**ಹಸ್ತಿಮಲ್ಲನ ಪೂರ್ವಪುರಾಣ :** ಹಸ್ತಿಮಲ್ಲನು ಈ ಭಾಗದಲ್ಲಿ ಚಾಮುಂಡರಾಯ ನಂತೆಯೇ ಆದಿಪುರಾಣವನ್ನು ಅನುಸರಿಸಿದ್ದರೂ ಚಾವುಂಡರಾಯಪುರಾಣಕ್ಕಿಂತ ಹೆಚ್ಚಿನ ಜೀವಕಳೆಯನ್ನು ನಾವು ಈ ಪ್ರಸಂಗದಲ್ಲಿ ಕಾಣಬಹುದಾಗಿದೆ.

ನಿರ್ನಾಮಿಕೆಯ ಭವದ ವರ್ಣನೆಯಲ್ಲಿ ಆಕೆಯನ್ನು ಅಜ್ಜಿ ಮತ್ತು ತಾಯಿಯರು ಗುಹೆಯಲ್ಲಿಟ್ಟು ಮರೆಮಾಡಿ ಸಾಕುತ್ತಿದ್ದರೆಂದು ಕವಿ ವ್ಯತ್ಯಾಸ ಮಾಡಿಕೊಂಡಿದ್ದಾನೆ. ಚಿಂದಿಬಟ್ಟೆಯಲ್ಲಿ ಮುಚ್ಚಿಟ್ಟು ಯಾರಿಗೂ ಕಾಣದಂತೆ ಬೆಳೆಸಿದರು ಎಂಬುದಕ್ಕಿಂತ ಕವಿಗೆ ಈ ವಿವರವು ಹೆಚ್ಚು ಔಚಿತ್ಯಪೂರ್ಣವಾಗಿ ಕಂಡಿರಬೇಕು. ಧನಶ್ರೀಭವದ ಕಥೆಯೂ ಯಥಾವತ್ತಾಗಿ ಹಿಂದಿನ ಪುರಾಣಕಾವ್ಯಗಳ ರೀತಿಯಲ್ಲಿಯೇ ಬರುತ್ತದೆ. ಆದಿಪುರಾಣ ವನ್ನು ನೇರ ಆಕರವನ್ನಾಗಿ ಮಾಡಿಕೊಂಡಿರುವುದಕ್ಕೆ ಸಾಕ್ಷಿಯಾಗಿ, ಸಮಾಧಿಗುಪ್ತ ಮುನಿ ಗಳು ಆಕೆಯು ಮಾಡಿದ ದುಷ್ಕರ್ಮದ ನಿವಾರಣಾರ್ಥವಾಗಿ ಮಾಡಿಸಿದ ಧರ್ಮಕಾರ್ಯ ಗಳ ವಿವರವು ಸಾಕ್ಷಿಯಾಗಿದೆ.

ಶ್ರೀಮತಿಯು ಪಂಡಿತೆಯೊಡನೆ ತನ್ನ ಹಿಂದಿನ ಭವದ ವೃತ್ತಾಂತವನ್ನು ಹೇಳಿ, ಇನ್ನು ತನಗೆ ಲಲಿತಾಂಗನು ಈ ಭವದಲ್ಲಿ ದೊರೆಯುವುದು 'ಆಕಾಶಕುಸುಮದಂತಶಕ್ಯಂ' ಎಂದು ಹೇಳುವಳು. ಆದಿಪುರಾಣದಲ್ಲಿ ಬರುವ (ಪೂರ್ವಪುರಾಣದಲ್ಲಿಯೂ ಈ ಹೋಲಿಕೆ ಇದೆ) 'ವಂಧ್ಯಾಸ್ತನಂಧಯ ಸಮಾಗಮ ಸಮಾನಂ' ಎಂಬ ಹೋಲಿಕೆಗೆ ಬದಲಾಗಿ ಇಟ್ಟಂತೆ ಇದು ತೋರುತ್ತದೆ. "ಪಟಮನರ್ಚಿಸಿ ಕನ್ಯಾವ್ರತದಿಂದ ಕಾಲಮಂ ಕಳೆವೆನ್" ಎಂಬ ಮಾತುಗಳಾದಿಯಾಗಿ ಪಂಪನ ಅನುಸರಣೆಯು ಪ್ರಭಾವಕಾರಿಯಾಗಿ ಈ ಭಾಗ ದಲ್ಲಿ ಬಂದಿರುವುದನ್ನು ಕಾಣಬಹುದಾಗಿದೆ.

**ಪುಣ್ಯಾಸ್ರವದ ಆದೀಶ್ವರರ ಕಥೆ :** ಪೂರ್ವೋತ್ತರ ಕನ್ನಡ ಕಾವ್ಯಗಳಿಗೆ ಹೋಲಿಸಿದರೆ ಈ ಸಂದರ್ಭದಲ್ಲಿ ಅಲ್ಲಲ್ಲಿ ಕೆಲವು ವ್ಯತ್ಯಾಸಗಳು ಕಂಡುಬರುತ್ತದೆ. ನಿರ್ನಾಮಿಕೆಯ ತಂದೆ

ನಾಗದತ್ತ. ತಾಯಿ ವಸುಮತಿ (ಪೂರ್ವಪುರಾಣದಲ್ಲಿ ಸುರತಿ ಎಂದೂ, ಇತರೆಡೆ ವಸುದತ್ತೆ ಯೆಂದೂ ಬರುತ್ತದೆ). ಇಲ್ಲಿ ಬರುವ ಕಥೆ ಜಿನಸೇನರ ಪೂರ್ವಪುರಾಣಕ್ಕೆ ಹತ್ತಿರವಾಗಿದೆ. ಉಳಿದೆಡೆಗಳಲ್ಲಿ ಬರುವಂತೆ ಆಕೆಯ ಮೈಯ ದುರ್ಗಂಧದ ವಿಷಯವಾಗಲಿ, ಆಕೆಯನ್ನು ಸ್ಮಶಾನದಲ್ಲಿ ಬಚ್ಚಿಟ್ಟು ಬೆಳೆಸಿದ ವಿಷಯವಾಗಲಿ ಇಲ್ಲಿ ಬರುವುದಿಲ್ಲ. ನಿರ್ನಾಮಿಕೆಯ ಪೂರ್ವಭವದ ಹೆಸರು ಇಲ್ಲಿ ನಾಗಶ್ರೀಯೆಂದಿದೆ. ಉಳಿದ ಕಡೆ ಧನಶ್ರೀ ಎಂದು ಬರುತ್ತದೆ. ಉಳಿದಂತೆ ಈ ಕಥೆಯಲ್ಲಿ ವ್ಯತ್ಯಾಸಗಳು ಕಂಡುಬರುವುದಿಲ್ಲ. ಸಮಾಧಿಗುಪ್ತಮುನಿಗಳು ನಾಗಶ್ರೀಗೆ (ಧನಶ್ರೀ) ಹೇಳುವ ಮಾತುಗಳು ಆದಿಪುರಾಣದಲ್ಲಿ ಈ ಸಂದರ್ಭದಲ್ಲಿ ಬರುವ ಮಾತುಗಳನ್ನು ನೆನಪಿಗೆ ತರುತ್ತವೆ. ಉದಾಹರಣೆಗೆ :

ಎಲೆ ಮಗಳೆ ದುರಘ ನಿಳಯಕೆ | ನೆಲೆಗಟ್ಟಂ ಕಟ್ಟಿಕೊಂಡೆ ನಿನ್ನಯ ಜೀವ
ಕ್ಕಲಸದೆ ಬಗೆದೆ ಮಲೀಮಸ | ಫಲಮಂ ಬೆಳಸಲ್ಕೆ ಬೀಜಮಿಕ್ಕುವ ತೆಱದಿಂ

(ಪುಣ್ಯಾಸ್ರವ. X- ೪೪)

ಮತಿಗೆಟ್ಟ ಮಗಳೆ ಸಂಸ್ಕೃತಿ | ಲತೆಯೊಳ್ ತೊಡರಲ್ಕೆ ನೀನಿದಂ ನೆಗೞ್ದುದು
ರ್ಗತಿ ಹೇತು ಪೂಜ್ಯಪೂಜಾ | ವ್ಯತಿಕ್ರಮಂ ಕಿಱಿದು ದುಃಖಮಂ ಮಾಡುಗುಮೇ

(ಆದಿಪು, iii-೩೮)

ಪಂಪ ಧನಶ್ರೀಮಾಡಿದ ದುಷ್ಕೃತ್ಯದ ಫಲವನ್ನು ಪ್ರಶ್ನಾರ್ಥಕವಾಗಿ ಹೇಳಿ ಅವಳಿಗೆ ಮುಂದೊದಗಿ ಬರಬಹುದಾದ ಕಷ್ಟಪರಂಪರೆಗಳನ್ನು ಧ್ವನಿಸಿದ್ದರೆ, ನಾಗರಾಜನು "ಮಲೀಮಸ ಫಲಮಂ ಬೆಳಸಲ್ಕೆ ಬೀಜಮಿಕ್ಕುವ ತೆಱದಿಂ" ಎಂದು ಸುಂದರ ಉಪಮಾಲಂಕಾರದಿಂದ ಪಂಪನ ಆಶಯವನ್ನು ಪ್ರಭಾವಕಾರಿಯಾಗಿ ಸ್ಪಷ್ಟಪಡಿಸಿದ್ದಾನೆ. ಒಂದೆಡೆ ಆಕೆಯ ಕಾರ್ಯ 'ದುರಘನಿಳಯಕೆ ನೆಲೆಗಟ್ಟು' ಮತ್ತೊಂದೆಡೆ 'ಸಂಸ್ಕೃತಿ ಲತೆಯ ತೊಡರು'; ಆಶಯ ಒಂದೇ; ಆದರೆ ಹೇಳಿರುವ ರೀತಿ ವಿಭಿನ್ನ, ಸುಂದರ.

ಶ್ರೀಮತಿಯು "ಎನ್ನ ವಲ್ಲಭಂ...ಆತಂ ಗಂಡನಾದೊಡೆನ್ನ ಜನ್ಮ ಸಫಲಮಕ್ಕುಂ ಅಲ್ಲದಂದುಳಿದರನೊಲ್ಲೆನೆಂದು" ಪ್ರತಿಜ್ಞೆಯನ್ನು ಮಾಡಿದಾಗ ಪಂಡಿತೆಯೇ ಚಿತ್ರಪಟವನ್ನು ಬರೆದು ಕೊಡುವ ಸೂಚನೆಯನ್ನು ಮಾಡುತ್ತಾಳೆ. ಉಳಿದೆಡೆ, ಶ್ರೀಮತಿಯು ಈಗಾಗಲೇ ಬರೆದಿಟ್ಟ ಚಿತ್ರಪಟವನ್ನು, ಪಂಡಿತೆ ಕೊಂಡೊಯ್ಯುವಳೆಂದು ಬರುತ್ತದೆ. ಶ್ರೀಮತಿಯ ಸ್ವಭಾವ ಇಲ್ಲಿ ಇದರಿಂದಾಗಿ ಮತ್ತೂ ಮುಗ್ಧವಾಗಿ ಕಂಡುಬರುತ್ತದೆ.

**ಪುರುದೇವಚರಿತ** : ನಿರ್ನಾಮಿಕೆಯ ತಾಯಿಯ ಹೆಸರು ಇಲ್ಲಿ ಸುಮತಿ ಎಂದಿದೆ. ಹೀಗೆಯೇ ನಾಗದತ್ತನ ಐವರು ಗಂಡುಮಕ್ಕಳಲ್ಲಿ ಒಬ್ಬನ ಹೆಸರು ವರಷೇಣನೆಂಬುದರ ಬದಲು ನಂದಿ ಎಂದು ಬರುತ್ತದೆ. ತಾಯಿಯು ಸತ್ತನಂತರ ನಿರ್ನಾಮಿಕೆಯನ್ನು ಸಾಕುವವರು ಆಕೆಯ ಅಜ್ಜ-ಅಜ್ಜಿಯರು. ಈಕೆಯ ಮೈಯ ದುರ್ಗಂಧದ ವಿಷಯವಾಗಲೀ ಸ್ಮಶಾನದಲ್ಲಿ ಇಟ್ಟು ಬೆಳೆಸಿದ ವಿಷಯವಾಗಲಿ ಇಲ್ಲಿ ಬರುವುದಿಲ್ಲ.

ಶ್ರೀಮತಿ ತನ್ನ ನಿರ್ಧಾರವನ್ನು ಪಂಡಿತೆಗೆ ತಿಳಿಸುವ ಮಾತಿನಲ್ಲಿ ಶಾಂತಿಕೀರ್ತಿಯು ಚಾಮುಂಡರಾಯನನ್ನು ಅನುಸರಿಸಿದಂತಿದೆ. 'ಈ ಭವದೊಳಾತನೆ ಪತಿಯಲ್ಲದೊಡೀ ತೆರದೊಳೆ ಇಪ್ಪೆನ್' ಎಂದು ಇಲ್ಲಿ ಬಂದಿದ್ದರೆ, ಚಾವುಂಡರಾಯಪುರಾಣದಲ್ಲಿ 'ಈ ಭವದೊಳಾತನಲ್ಲದೆ ಗಂಡನಲ್ಲದಂದಿಂತೆ ಕಾಲಮಂ ಕಳಿಪುವೆನ್' ಎಂದು ಬಂದಿದೆ.

ಕೆಲವೆಡೆ ಕವಿಯು ಈ ಭಾಗದಲ್ಲಿ ಜಿನಸೇನರ ಪೂರ್ವಪುರಾಣವನ್ನು ಮತ್ತೆ ಕೆಲವೆಡೆ ಚಾವುಂಡರಾಯಪುರಾಣವನ್ನು ಅನುಸರಿಸಿರುವಂತೆ ಕಂಡುಬರುತ್ತದೆ.

**ಆದಿಪರಮೇಶ್ವರನ ಯಕ್ಷಗಾನ** : ನಿರ್ನಾಮಿಕೆಯ ಕಥೆಯು ಸಂಕ್ಷಿಪ್ತವಾಗಿ ಆದಿ ಪುರಾಣ ಹಾಗೂ ಅದನ್ನು ಅನುಸರಿಸಿರುವ ಕಾವ್ಯಗಳಲ್ಲಿ ಬರುವ ವಿಷಯ ವಿವರಗ ಳೊಂದಿಗೆ ಬರುತ್ತದೆ. ಆದರೆ ಕವಿ ಕೆಲವು ಹೆಚ್ಚಿನ ವರ್ಣನಾಂಶಗಳನ್ನು ಸೇರಿಸಿದ್ದಾನೆ. ತನ್ನನ್ನು ಸಾಕುತ್ತಿದ್ದ ಅಜ್ಜ ಅಜ್ಜಿಯರೂ ತೀರಿಕೊಂಡಾಗ, ಆಕೆ ಒಬ್ಬೊಂಟಿಗಳಾಗಿ ಪುರದ ಬಳಿಗೆ ಬಂದಾಗ—

ಗಂಟು ಮೂಗಿನ ಮೆಳ್ಳೆಗಣ್ಣಿನ ಅಂಟು ಪುಬ್ಬಿನ ಜೋಲುದುಟಿ ಕೊರ
ಳ್ಕಂಠ ಕುಗ್ಗಿದಯದೆಯದೆಯು ಕೈಕಾಲುಂಟು ಬೆರಲು ||
ಚೊಟ್ಟು ಕಾಲ್ಕೈಕೊರಟು ತಲೆ ಬಸುರ್ವಟ್ಟ ಬಾಗಿದ ಬೆನ್ನು ದುರ್ಗಂಧ
ಇಟ್ಟಣಿಸೆ ಕಂಡವರು ಕಲ್ಗಳೊಳಿಟ್ಟು ತಗುಳೆ
ಕೆಟ್ಟ ಪೀಡೆ ಪಿಶಾಚಬಂತೆಂದೊಟ್ಟಲೋಡಿಯು ತಿಂಬಲಿಲ್ಲದೆ
ಬಟ್ಟೆಗಾಣದೆ ಪೊರಟು ವಿಪುಲ್ಪಟ್ಟೆ ವಿಡಿದು || ೧೬ (ಪರಿಚ್ಛೇದ-iii)

ಈ ವರ್ಣನೆ ಬೊಮ್ಮಣ್ಣ ಕವಿಯಲ್ಲಿ ಮಾತ್ರ ಕಂಡುಬರುವ ವರ್ಣನೆ. ಕವಿ ನಿರ್ನಾ ಮಿಕೆಯ ಪಾಪಫಲದ ದಾರುಣ ಸ್ಥಿತಿಯನ್ನು ವರ್ಣಿಸುವ ಪ್ರಯತ್ನವನ್ನು ಮಾಡಿದ್ದಾನೆ.

ಧನಶ್ರೀಯ ಕಥೆಯಲ್ಲಿ ಕವಿ ಹಸ್ತಿಮಲ್ಲನ ಪೂರ್ವಪುರಾಣವನ್ನು ಅನುಸರಿಸಿರುವುದಕ್ಕೆ ಸಾಕ್ಷಿಯಾಗಿ ಈ ವಾಕ್ಯವೃಂದವು ಕಂಡುಬರುತ್ತದೆ :

"ಎನ್ನ ವಲ್ಲಭನಾದ ಲಲಿತಾಂಗ ದೇವನಾವೆಡೆಯಲ್ಲಿ ಪುಟ್ಟಿದನೆಂಬುದನರಿಯೆನಾತಂ ದೊರಕೊಂಬುದು ಗಗನಕುಸುಮದಂತೆ ಅಶಕ್ಯಮೆಂದು ಲಲಿತಾಂಗನೊಳಿರ್ದ ರತಿಪ್ರಪಂಚ ದೊಳ್ ಕಲಕೆಲವಂ ವಂಚಿಸಿ, ಉಳಿದ ಭಾವವನೊಂದು ಪಟದೊಳ್ಬರದು ಮೀಪಟಮನರ್ಚಿಸಿ ಕನ್ಯಾವ್ರತದಿಂ ಕಾಲಮಂ ಕಳೆವೆನೆಂದತಿ ಶೋಕದಿಂ ಮೌನದೊಳಿರ್ದೆನಿದೆನ್ನ ತೆರನ್" (ಆದಿಯ. ಪರಿಚ್ಛೇದ ii).

ಇದೇ ಗದ್ಯಭಾಗವು ಹಸ್ತಿಮಲ್ಲನ ಪೂರ್ವಪುರಾಣದ ಚತುರ್ಥಪರ್ವದಲ್ಲಿ (ಪುಟ ೧೯) ಬರುತ್ತದೆ. ವ್ಯತ್ಯಾಸವೆಂದರೆ "ಅವಂ ದೊರಕೊಂಬುದಿನ್ನು ಆಕಾಶಕುಸುಮದಂತಶಕ್ಯಂ" ಎಂದು ಹಸ್ತಿಮಲ್ಲನಲ್ಲಿದ್ದರೆ "ಆತಂದೊರಕೊಂಬುದು ಗಗನಕುಸುಮದಂತೆ ಅಶಕ್ಯಂ" ಎಂದು ಇಲ್ಲಿ ಹೇಳಲಾಗಿದೆ, ಅಷ್ಟೆ.

ಕವಿ ಈ ಭಾಗದಲ್ಲಿ ಹಸ್ತಿಮಲ್ಲನನ್ನು ಅನುಸರಿಸಿರುವುದು ಸುಸ್ಪಷ್ಟ. ಹಸ್ತಿಮಲ್ಲನು ಆದಿಪುರಾಣಕ್ಕೆ ಋಣಿಯಾಗಿದ್ದರೆ, ಬೊಮ್ಮಣ್ಣನು ಆದಿಪುರಾಣವನ್ನನುಸರಿಸಿದ ಹಸ್ತಿ ಮಲ್ಲನಿಗೆ ಋಣಿಯಾಗಿದ್ದಾನೆ.

## ದಿಗ್ವಿಜಯದಿಂದ ಹಿಂದಿರುಗಿದ ಬಂದ ವಜ್ರದಂತನು, ಶ್ರೀಮತಿಯನ್ನು ಭೇಟಿಯಾದ ಪ್ರಸಂಗ

**ಆದಿಪುರಾಣ-ಪೂರ್ವಪುರಾಣ** : ಷಟ್‌ಖಂಡಗಳನ್ನು ಬಾಯ್ ಕೇಳಿಸಿ ಬಂದ ವಜ್ರ ದಂತನು ಮಗಳ ಮದುವೆಯನ್ನು ಮಾಡಲು ಉದ್ಯುಕ್ತಚಿತ್ತನಾಗಿ ಬಂದನು. ಚಕ್ರವರ್ತಿತ್ವ

ವನ್ನು ಪಡೆದ ವಜ್ರದಂತನು ಆಕುಲೆಯಾದ ಶ್ರೀಮತಿಗೆ ಕರೆಯನ್ನು ಕಳುಹಿಸಿದನು. ಈಗ ಶ್ರೀಮತಿಯಲ್ಲಿ ಮೊದಲಿನ ಮೌನವಿಲ್ಲ. ಪಂಡಿತೆಯು ನೀಡಿರುವ ಭರವಸೆಯಿಂದಾಗಿಯೋ ಎಂಬಂತೆ ನಡೆನುಡಿಗಳಲ್ಲಿ ಸಹಜತೆ ಮೂಡಿದೆ. ಹಿಂದೆ ತಂದೆ ತಾಯಿಗಳು ಎದುರು ಬಂದಾಗ ಇದ್ದ ಆಸರಿಕೆ ಬೇಸರಿಕೆಗಳಿಲ್ಲ. ತಂದೆ ಹೇಳಿಕಳುಹಿಸಿದಾಗ ಶ್ರೀಮತಿ 'ವನಿತಾ ರೂಪದ ಕಾಮಕಲ್ಪಲತೆಯೋ' 'ಅಂಗನಾರೂಪದ ಅಬ್ಜಿನಿಯೋ' 'ಲಲನಾ ಸ್ವರೂಪದ ತನುಶ್ರೀ ರೂಪಮೊ' ಎಂಬಂತೆ ಮೆಲ್ಲನೆ ಬಂದು ಕಾಲಿಗೆ ಎರಗಿದಳು.

ಪೂರ್ವಪುರಾಣದಲ್ಲಿ ವಜ್ರದಂತ ಚಕ್ರವರ್ತಿಯು ಪುರಪ್ರವೇಶ ಮಾಡುವಾಗ, ಅವನು ಸಕಲಕಾರ್ಯಗಳನ್ನು ಮಾಡಿದವನಾಗಿದ್ದರೂ ತನ್ನ ಮಗಳ ವಿವಾಹ ಮಹೋತ್ಸವವನ್ನು ಮಾಡುವ ವಿಷಯದಲ್ಲಿ 'ಸ್ವಲ್ಪ ಚಿಂತಾಕುಲನಾಗಿ'—'ಅಧಿಕ ಶೋಭೆಯುಳ್ಳವನಾಗಿ' ಬಂದನು—ಎಂಬ ವರ್ಣನೆಯು ಏಕಕಾಲದಲ್ಲಿ ಬಂದು ಕಿಂಚಿತ್ ವಿರೋಧಾಭಾಸವಾಗಿ ಕಂಡುಬರುತ್ತದೆ. ಪಂಪನಲ್ಲಿ ವಜ್ರಜಂಘನು ಅವಧಿಜ್ಞಾನದಿಂದ ಎಲ್ಲವನ್ನೂ ಅರಿತವನಾಗಿ ಮಗಳ ಮದುವೆಯನ್ನು ಮಾಡಲು ಉದ್ಯುಕ್ತನಾಗಿ ಬಂದನೆಂದಿದೆಯೇ ಹೊರತು, ಚಿಂತಾಕ್ರಾಂತನಾಗಿದ್ದನೆಂಬ ಉಲ್ಲೇಖವಿಲ್ಲ. ಪೂರ್ವಪುರಾಣದಲ್ಲಿ ಬರುವ ಈ ಗೋಜನ್ನು ಪಂಪನು ಸೂಕ್ಷ್ಮರೀತಿಯಲ್ಲಿ ಬಿಡಿಸಿರುವುದು ಗಮನಾರ್ಹ. ವಜ್ರದಂತ ಚಕ್ರವರ್ತಿಯು ದಿಗ್ವಿಜಯದಿಂದ ಹಿಂದಿರುಗಿ ಬಂದಾಗ, ಶ್ರೀಮತಿಯು ಬಂದ ರೀತಿಯನ್ನು ಪಂಪನು ಕಾವ್ಯಮಯವಾಗಿ ಹೇಳಿದ್ದಾನೆ. ಪೂರ್ವಪುರಾಣದಲ್ಲಿ ಈ ಅಂಶವು ಕಂಡುಬರುವುದಿಲ್ಲ.

ಮಗಳನ್ನು ಕರೆಸಿ ವಜ್ರದಂತ ಚಕ್ರವರ್ತಿ ಮಾತನಾಡುವ ರೀತಿ ಪಂಪನಲ್ಲಿ ಹೀಗೆ ಬಂದಿದೆ : ತನ್ನ ಮಗಳ ನಿರಾಭರಣ ಸೌಂದರ್ಯವನ್ನು ನೋಡಿ, "ಈಕೆಯ ನಿರಾಭರಣ ಸೌಂದರ್ಯವು ಇನಿತು ಬೇಸಜೊಳ್ ಸೊಗಯಿಪ್ಪುದು" ಎಂದು ಮನದಲ್ಲಿಯೇ ಬಗೆದು, ಆಕೆಗೆ ತನ್ನ ಮುಖಭಾವದಿಂದಲೇ ಸಮಾಧಾನನೀಡುವವನಂತೆ ನಗುತ್ತಾ ಹೇಳುವ ಮಾತು, ಸಮಾಧಾನ ನೀಡುವ ಪರಿ ಮನನೀಯವಾಗಿದೆ. "ಮಹಾಕವಿಗಳಿಗೆಲ್ಲ ಸಾಮಾನ್ಯವಾಗಿರುವಂತೆ, ಪಂಪ ಕವಿಗೂ ಹೆಣ್ಣಿನ ಬಗ್ಗೆ ಅಪಾರ ಸಹಾನುಭೂತಿಯ ದೃಷ್ಟಿ. ಕೃತಿಯಲ್ಲಿ ಸ್ತ್ರೀಪಾತ್ರದ ಸ್ಥಾನಮಾನಗಳೇನೇ ಇರಲಿ, ಕರಗಿ ಮರುಗುವ ಮನೋಧರ್ಮ ಅವನದು. ಮಗಳು ಶ್ರೀಮತಿಯ ಬಗೆಗೆ ವಜ್ರದಂತ ನುಡಿಯುವ ಮಾತುಗಳು ದಿಟವಾಗಿ ಕವಿಯ ಸ್ನೇಹಲಿಪ್ತವಾದ ಹೃದಯದ ಮಾತುಗಳೇ..."[೧೭] 'ಮಗಳೆ, ಮನಸ್ತಮಂ ನಿನಗಿದೀಗಳೆ ಪಿಂಗುಗೆ' 'ಕುಂಕುಮದ್ರವಂ ನಗೆಮೊಗದೊಳ್, ಕನತ್ಕನಕ ಮೇಖಳೆ ಪೀನ ನಿತಂಬದೊಳ್, ಲಯಂನೆಗಟ್ಟಿದಿರೆ ನೂಪುರಂ ಪದ ಪಯೋರುಹದೊಳ್ ನೆಲೆಗೊಳ್ಗೆ, ಕೂಡುವೌ, ಬಗೆಗೊಳೆ ನಾಳೆನಾಡದು ಮಹೋತ್ಸವದಿಂ ನಿಜ ಜೀವಿತೇಶನೊಳ್'ಎಂದು ನುಡಿದನು (iii-೫೦). ಪೂರ್ವಪುರಾಣದಲ್ಲಿ ಬರುವ ಇಂತಹ ಭಾವವನ್ನೇ ಪಂಪನು ಇಲ್ಲಿ ಹಿಡಿದಿಟ್ಟಿದ್ದಾನಾದರೂ, ಈ ಸಂದರ್ಭದಲ್ಲಿ ಶ್ರೀಮತಿಯ ರೂಪಾಲಂಕಾರಗಳನ್ನಷ್ಟೇ ನಿರೂಪಿಸದೆ ಆಕೆಯು ಮುನ್ನಿನಂತೆ ಉತ್ಸಾಹಭರಿತಳಾಗಿರಲು ತಂದೆ ಮಗಳಿಗೆ ಅನುನಯದಿಂದ ನುಡಿದನೆಂದು ಪೂರ್ವಪುರಾಣದಲ್ಲಿ ಬರುತ್ತದೆ. 'ಮಗಳೇ ನೀನು ಸುಖವಾಗಿ ಸ್ನಾನಮಾಡಿ ಅಲಂಕಾರ ಮಾಡಿಕೊ. ಚಂದ್ರಬಿಂಬದಲ್ಲಿರುವ ಕನ್ನಡಿಯಲ್ಲಿ ನಿನ್ನ ಮುಖದ

ಅಲಂಕಾರವನ್ನು ನೋಡು (vii-೩). ನೀನು ಭೋಜನವನ್ನು ಮಾಡು. ನಿನಗಿಷ್ಟವಾದ ಸಖೀಜನರನ್ನು ಮಧುರಸಲ್ಲಾಪಗಳಿಂದ ಸಂತೋಷಪಡಿಸು. ನಿನಗಿಷ್ಟವಾದ ಪತಿಯ ಸಮಾಗಮವು ಉಂಟಾಗುತ್ತದೆ (vii-೪) ಎಂದು ಆಕೆಯ ಸ್ಥಿತಿಯನ್ನು ಪೂರ್ವಸ್ಥಿತಿಗೆ ತರಲು ಯತ್ನಿಸುವ ಈ ಭಾಗ, ಆದಿಪುರಾಣಕ್ಕಿಂತ ಹೆಚ್ಚು ವಿವರಗಳೊಂದಿಗೆ ಪೂರ್ವ ಪುರಾಣದಲ್ಲಿ ಬಂದಿದೆ.

## ಉತ್ತರಕಾಲೀನ ಕಾವ್ಯಗಳು

**ಚಾವುಂಡರಾಯಪುರಾಣ** : ಪೂರ್ವಪುರಾಣ, ಆದಿಪುರಾಣಗಳಲ್ಲಿ ಕಂಡುಬರುವ ಸಾರಸಂಗ್ರಹದ ಕಥಾಭಿತ್ತಿಮಾತ್ರ ಇಲ್ಲಿ ಕಂಡು ಬರುತ್ತದೆ. ಪಂಪನ ಅನುಕರಣೆಯ ಛಾಯೆಯನ್ನು ಅಲ್ಲಲ್ಲಿ ಗಮನಿಸಬಹುದಾಗಿದೆ. ಉದಾಹರಣೆಗೆ :

> ಅನ್ನೆಗಮಿತ್ತ ವಜ್ರದಂತ ಚಕ್ರವರ್ತಿ ದಿಕ್ಚಕ್ರಮಂ ಕ್ರಮದಿಂ ಬಾಯ್ಕೇಳಿಸಿ ಬಂದು ಪೊಬಿಲಂ ಪೊಕ್ಕು ಮಗಳ್ಗೆ ಬಳಿಯನಟ್ಟಿ ನೀನುಬ್ಬೆಗಂ ಬಡದಿರ್ ನಾಳೆಯೋ ನಾಳಿದೋ ನಿಜಪ್ರಿಯ ಸಮಾಗಮಮಕ್ಕುಂ(ಚಾವುಂಪು., ಪುಟ ೨೫)

> ಅನ್ನೆಗಮಿತ್ತ ಷಟ್‌ಖಂಡ ಮಂಡಿತ ವಸುಧಾಮಂಡಳಮಂ ಬಾಯ್‌ಕೇಳಿಸಿ ಸಿಂಹಾ ಸನಾರೂಢನ್...ನಿಜತನೂಜೆಗೆ ಬೞಿಯನಟ್ಟಿದಾಗಳ್...ಕೂಡುವೈ ಬಗೆಗೊಳ್ ನಾಳೆ ನಾಡಿದು ಮಹೋತ್ಸವದಿಂ ನಿಜಜೀವಿತೇಶನೊಳ್ (ಆದಿಪು., ಅಧ್ಯಾಯ iii)

ಇವುಗಳೊಂದಿಗೆ, 'ತ್ವದಿಷ್ಟಸಂಗಮೋವಶ್ಯಮದ್ಯ ಶ್ವೋ ವಾ ಭವಿಷ್ಯತಿ' (vii-೪) ಎಂಬ ಪೂರ್ವಪುರಾಣದ ಮಾತನ್ನೂ ಗಮನಿಸಬಹುದಾಗಿದೆ.

**ಹಸ್ತಿಮಲ್ಲನ ಪೂರ್ವಪುರಾಣ** : ಪೂರ್ವಪುರಾಣ-ಆದಿಪುರಾಣಗಳಲ್ಲಿ ಬರುವ ವರ್ಣನಾಭಾಗದ ವಿವರ ಇಲ್ಲಿಲ್ಲ. ಕವಿ ಆದಿಪುರಾಣದ ಭಾಗವನ್ನು ಅತಿ ಸಂಕ್ಷಿಪ್ತ ಗತಿಯಲ್ಲಿ ಮುಗಿಸಿದ್ದಾನೆ. ಷಟ್‌ಖಂಡ ಮಂಡಲವನ್ನು ಸಾಧಿಸಿ ಬಂದ ವಜ್ರದಂತನು ಅರಮನೆಯನ್ನು ಹೊಕ್ಕು ಸಿಂಹಾಸನಾರೂಢನಾಗಿ ಮಗಳಿಗೆ ಹೇಳಿ ಕಳಿಸಿದನು. ಕಾಲಿಗೆ ಎರಗಿನಿಂತ ಮಗಳಿಗೆ ಕಲ್ಯಾಣಭಾಗಿಯಾಗೆಂದು ಹರಸಿ, 'ಚಿಂತೆಬಿಡು, ಶೃಂಗಾರವಾಗು, ಜೀವಿತೇಶನನ್ನು ಕಾಣುವೆ' ಎಂದು ಭರವಸೆ ನೀಡಿದನು.

ಚಾವುಂಡರಾಯಪುರಾಣದ ಸಂಕ್ಷಿಪ್ತತೆಯೇ ಇಲ್ಲಿಯೂ ಕಂಡುಬಂದರೂ ಚಾವುಂಡ ರಾಯಪುರಾಣದಲ್ಲಿಲ್ಲದ ಶ್ರೀಮತಿ ಕಾಲಿಗೆರಗುವ ಪ್ರಸಂಗ, ರಾಜನ ಆಶೀರ್ವಾದದ ನುಡಿಗಳು ಇಲ್ಲಿ ಮೂಡಿಬಂದಿವೆ. ಹಸ್ತಿಮಲ್ಲನಲ್ಲಿ ಈ ಔಪಚಾರಿಕ ನಡೆನುಡಿಗಳಿಗೆ ಎಡೆಯಿದೆ.

**ಪುಣ್ಯಾಸ್ರವದ ಆದೀಶ್ವರರ ಕಥೆ** : ವಜ್ರದಂತನು, ತನ್ನ ಎಲ್ಲ ಕಾರ್ಯಗಳನ್ನೂ ಮುಗಿಸಿಕೊಂಡು ಹಿಂದಿರುಗಿ ಬಂದನು. ಶ್ರೀಮತಿಯನ್ನು ದುಃಸ್ಥಿತಿಯಲ್ಲಿ ಬಿಟ್ಟು ಹೋದ ವಜ್ರದಂತನು ಅಲ್ಲಿ ಹೃದಯಹೀನನಾಗಿ ಕಂಡರೂ, ಇಲ್ಲಿ ಅಷ್ಟೇ ಆತ್ಮೀಯ ಹೃದಯಿ ಯಾಗಿ ಕಂಡುಬರುತ್ತಾನೆ. ವಜ್ರದಂತ ಚಕ್ರವರ್ತಿಗೆ ನಮಸ್ಕರಿಸಿ ನಿಂತ ಶ್ರೀಮತಿಯ ಮುಖವನ್ನು ನೋಡಿ ಆತಂಕಗೊಂಡವನಾಗಿ

ಈಕೆಗೆ ಕಂದ ನಿನ್ನ ವದನಾಂಬುಜಮಿಂದು ವಿನೂತಚಂದ್ರಿಕಾ
ಲೋಕಮನಾಂತವೊಲ್ ಕರಗಿ ಪಾಡಳಿದಿರ್ದಪುದಂಗವಲ್ಲಿ ನಿ
ಬ್ಯಾಕುಳಿತೋಗ್ರಚಂಡಕರತಾಪಮನಾಂತವೊಲಿರ್ದುದಿಂತಿದಂ
ಪ್ರಾಕಟಮಾಗಿಯಾನಱಿದೆ ನೀಳಮದಾಳಿ ವಿಲೋಲಕುಂತಳೇ (ix-೪೫)

ಎಂದು ಕಳಕಳಿಯಿಂದ ನುಡಿಯುತ್ತಾನೆ. ಪೂರ್ವಪುರಾಣ, ಆದಿಪುರಾಣಗಳ ವರ್ಣನಾ ಭಾಗವು ಇಲ್ಲಿ ನೆನಪಿಗೆ ಬರುತ್ತದೆ. ಉಳಿದ ಕಾವ್ಯಗಳಲ್ಲಿ ಇಂತಹ ವರ್ಣನೆ ದೊರೆಯುವುದಿಲ್ಲ.

**ಪುರುದೇವಚರಿತ** : ಎರಡು ಸಾಂಗತ್ಯಗಳಲ್ಲಿ ಕವಿ ಇಲ್ಲಿಯ ಸಂದರ್ಭದ ಅಭಿಪ್ರಾಯವನ್ನು ಹೀಗೆ ನಿರೂಪಿಸಿದ್ದಾನೆ.

ಇತ್ತ ಚಕ್ರೇಶ್ವರ ದಿಗ್ವಿಜಯಂಗೆಯ್ದು | ಮತ್ತೆ ಪೊಳಲನೆಯ್ದಿ ಮಗಳ
ವೃತ್ತಾಂತಮೆಲ್ಲಮನವಧಿಯಿನ್ನರಿದು | ತಾ ಬಿತ್ತಾರದಿಂ ಪೇಳ್ದನಿಂತು
ಚಿಂತೆಯ ಮಾಡದೆ ಬಿಸುಡೆ ಮಗಳೆ | ನಿನ್ನ ಕಾಂತ ಬಂದಪನೆಂತೆನಲು
ಪಿಂತಣ ನಿನ್ನ ಪತಿಯ ನಿನ್ನ ನನ್ನ | ಜನ್ಮಾಂತರವನು ಪೇಳ್ವೆ ಕೇಳು (ii-೩೫, ೩೬)

ಚಾವುಂಡರಾಯಾದಿ ಉತ್ತರಕಾಲೀನ ಆದಿತೀರ್ಥಂಕರರ ಕಾವ್ಯಗಳಿಗಿಂತಲೂ ಇಲ್ಲಿ ಸಂಕ್ಷಿಪ್ತತೆ ಅಡಕವಾಗಿದೆ. 'ಚಿಂತೆಯ ಮಾಡದೆ ಬಿಸುಡೆ ಮಗಳೆ' ಎಂಬಲ್ಲಿ ಆಡುಮಾತಿನ ಧಾಟಿಯಿದೆ. ಚಾವುಂಡರಾಯಪುರಾಣಕ್ಕೆ ಹೆಚ್ಚು ಹತ್ತಿರವಾಗಿದೆ.

**ಆದಿಪರಮೇಶ್ವರನ ಯಕ್ಷಗಾನ** : ಹಸ್ತಿಮಲ್ಲನ ಗದ್ಯವನ್ನು ಕವಿ ಅಲ್ಲಲ್ಲಿ ಸ್ಥೂಲ ವ್ಯತ್ಯಾಸವನ್ನು ಮಾಡಿಕೊಂಡು ಪದ್ಯರೂಪದಲ್ಲಿ ಇಳಿಸಿರುವುದಷ್ಟೇ ಇದರ ವಿಶೇಷತೆಯಲ್ಲದೆ, ಉಳಿದಂತೆ ಕಾವ್ಯಾಂಶದ ಸ್ಪಂತಿಕೆ ಇಲ್ಲಿ ಕಂಡು ಬರುವುದಿಲ್ಲ. ಉದಾಹರಣೆಗೆ:

ಇತ್ತ ಷಟ್‌ಖಂಡ ಮಂಡಲವ ಸಾಧಿಸಿ ಬಂದು
ಚಿತ್ತೋತ್ಸಾಹದಿ ವಜ್ರದಂತ ಚಕ್ರೇಶಾ
ಪುರವನವನು ಪೊಕ್ಕು ಪರಮವೈಭವದಿಂದ
ಅರಮನೆಪೊಕ್ಕು ವಾಲಗಶಾಲೆಗೈದಿ
ಹರಸಿವಾಲಗವನು ಕರಸಿ ನಂದನೆಯನು
ತರುಣಿ ಮಣಿಯು ಬಂದು ಚರಣಯುಗಕೆರಗಿ
ಎತ್ತಿ ಕಲ್ಯಾಣಭಾಗಿಯು ನೀನಾಗೆಂದು
ಚಿತ್ತೋತ್ಸಾಹದಿ ಕುವರಿಯ ಸಂತವಿಟ್ಟ (ಪರಿಚ್ಛೇದ iii)

ಸಾಮಾನ್ಯವಾಗಿ ತನ್ನದೇ ಆದ ವರ್ಣನಾಂಶವನ್ನು ಸೇರಿಸುವುದು ಕವಿಯ ರೂಢಿ; ಅದರೆ ಇಲ್ಲಿ ಕವಿಯ ಮನಸ್ಸು ಅದಕ್ಕೆ ಏಕೋ ಒಲಿದಿಲ್ಲ.

## ವಜ್ರದಂತನ ಭವಾಂತರದ ಕಥೆ

**ಆದಿಪುರಾಣ-ಪೂರ್ವಪುರಾಣ** : ವಜ್ರದಂತ ಚಕ್ರವರ್ತಿಯು ಶ್ರೀಮತಿಗೆ ನಂಬಿಕೆಯುಂಟಾಗುವಂತೆ ಮಾಡಲು, ಯಶೋಧರ ಗುರುಗಳಲ್ಲಿ ಉಂಟಾದ ಅಧಿಕ ಭಕ್ತಿಯಿಂದ ಅವಧಿಜ್ಞಾನವು ತನಗೆ ಹುಟ್ಟಿದುದನ್ನು ತಿಳಿಸಿ, ಅದರಿಂದಾಗಿ ತನಗೆ ಶ್ರೀಮತಿಯ ಹಾಗೂ

ಆಕೆಯ ಕಾಂತನ ಹಾಗೂ ತನ್ನ ಜನ್ಮಾಂತರದ ಬಗೆಗೆ ತಿಳಿದಿರುವುದಾಗಿ ಹೇಳಿ, ತನ್ನ ಭವಾಂತರ ಕಥೆಗಳನ್ನು ಹೇಳಲು ತೊಡಗುವನು.

ವಜ್ರದಂತನು ಹಿಂದಿನ ಐದನೆಯ ಭವದಲ್ಲಿ ಪುಂಡರೀಕಿಣೀ ನಗರದ ಕೇಶವರಾಜನ ಮಗ ಚಂದ್ರಕೀರ್ತಿಯಾಗಿ ಜನಿಸಿದನು. ಚಂದ್ರಕೀರ್ತಿಯ ಗೆಳೆಯ ಜಯಕೀರ್ತಿ. ಇವರು ಅಣುವ್ರತಧಾರಿಗಳಾಗಿ, ಜೀವಿತಾಂತ್ಯದಲ್ಲಿ ಚಂದ್ರಸೇನಾಚಾರ್ಯರ ಸನ್ನಿಧಿಯಲ್ಲಿ ದೀಕ್ಷಿತ ರಾಗಿ ಸಮಾಧಿಮರಣವನ್ನು ಕೈಗೊಂಡು ಮಹೇಂದ್ರಕಲ್ಪದಲ್ಲಿ ಹುಟ್ಟಿದರು. ಪೂರ್ವ ಪುರಾಣದಲ್ಲಿ ಕೇಶವರಾಜನನ್ನು ಅರ್ಧಚಕ್ರಿ ಎಂದು ಹೇಳಲಾಗಿದೆ. ಉಳಿದಂತೆ ಆದಿ ಪುರಾಣವು ಪೂರ್ವಪುರಾಣದ ಭಾಗವನ್ನು ಅನುಸರಿಸಿದೆ.

ಮಹೇಂದ್ರಕಲ್ಪದಿಂದ ಚ್ಯುತರಾದ ಇವರು ಮಂಗಳಾವತೀದೇಶದ ಶ್ರೀಧರರಾಜನಿಗೂ ಮನೋಹರಿಗೂ, ಶ್ರೀವರ್ಮ-ವಿಭೀಷಣರೆಂಬ ಹೆಸರಿನಲ್ಲಿ ಬಲದೇವ-ವಾಸುದೇವರಾಗಿ ಜನಿಸಿದರು.

ಪೂರ್ವಪುರಾಣದಲ್ಲಿ ಶ್ರೀಧರರಾಜನ ಇಬ್ಬರು ಪತ್ನಿಯರಾದ ಮನೋಹರಾದೇವಿ ಮತ್ತು ಮನೋರಮೆಯರಲ್ಲಿ ಶ್ರೀವರ್ಮ ವಿಭೀಷಣರು ಜನಿಸಿದರೆಂದು ಬರುತ್ತದೆ. ಶ್ರೀಧರರಾಜನು ಇವರಿಬ್ಬರಿಗೆ ರಾಜ್ಯವನ್ನು ಒಪ್ಪಿಸಿ, ತಪವನ್ನು ಆಚರಿಸಿ ಮುಕ್ತಿಯನ್ನು ಪಡೆದನು.

ಮನೋರಮೆಯು ಮಕ್ಕಳ ಮೇಲಿನ ವ್ಯಾಮೋಹದಿಂದ ದೀಕ್ಷಿತಳಾಗದೆ ಶ್ರಾವಕ ವ್ರತವನ್ನು ನೋಂತು, ಕೊನೆಯಲ್ಲಿ ಈಶಾನಕಲ್ಪದ ಶ್ರೀಪ್ರಭವಿಮಾನದಲ್ಲಿ ಲಲಿತಾಂಗ ದೇವನಾಗಿ ಜನಿಸಿದಳು.(ಪೂರ್ವಪುರಾಣದಲ್ಲಿ ಮನೋಹರಾದೇವಿಯು ಶ್ರೀವರ್ಮನ ವ್ಯಾಮೋಹದಿಂದ ತಪವನ್ನು ಕೈಗೊಳ್ಳಲಿಲ್ಲ ಎಂದಿದೆ). ತನ್ನ ತಮ್ಮ ವಿಭೀಷಣನ ಮರಣ ದಿಂದ ಶೋಕತಪ್ತನಾದ ಶ್ರೀವರ್ಮನಿಗೆ ತಾಯಿಯಾಗಿದ್ದ ಲಲಿತಾಂಗದೇವನು ಬಂದು ಬೋಧಿಸಿದನು. ಪೂರ್ವಪುರಾಣದಲ್ಲಿ ಈ ವಿಷಯವು ಕೇವಲ ನಿರೂಪಣಾಮಾತ್ರವಾಗಿ ಬಂದಿದೆ. ಉದಾಹರಣೆಗೆ, 'ಎಲೈ ಮಗನೇ! ಮೂರ್ಖಜನರಂತೆ ನೀನು ದುಃಖಪಡಬೇಡ. ಸಂಸಾರದಲ್ಲಿ ಜನನ ಮರಣಾದಿ ಭಯಗಳು ಅವಶ್ಯವಾಗಿ ಉಂಟಾಗುವುವು ಎಂದು ತಿಳಿ (vii-೨೦). ಆದಿಪುರಾಣದಲ್ಲಿ ಈ ಸಂದರ್ಭವು ಅತ್ಯಂತ ಪ್ರಭಾವಯುತವಾಗಿ ಬಂದಿರುವುದನ್ನು ಗಮನಿಸಬಹುದಾಗಿದೆ. ಉದಾಹರಣೆಗೆ :

ಬಿದಿಯೆಂಬಾರಡಿಗಳ್ಳನೆನ್ನನುಜನಂ ಗೋವಿಂದನಂ ನಿರ್ನೆರು
ಯ್ದುದುಮಿನ್ನೇತೊದಳೊಂದೆ ಕಿಚ್ಚೆನಗಮಿಂತೀತಂಗಮಿನ್ನೀತನಿ
ಲ್ಲದೆ ಪೇಲ್ಮಾನಸವಾಟಿ ಮೋಹಮೆನಗಿನ್ನೇಬಾರ್ತೆಯೆಂದುಗ್ರಶೋ
ಕದಿನಾಕ್ರಂದಿಸಿದೆಂ ಸಹೋದರ ವಿಯೋಗೋದ್ವೇಗಮೇಗೆಯ್ಯದೋ (iii-೫೨)

ವಿಧಿಯೆಂಬ ದರೋಡೆಕೋರನು ತನ್ನ ತಮ್ಮ ಗೋವಿಂದನನ್ನು (ವಿಭೀಷಣನನ್ನು) ನಿಷ್ಕಾ ರಣವಾಗಿ ಒಯ್ದನು. ಸುಳ್ಳೇನು? ಇವನಿಗೂ ನನಗೂ ಒಂದೇ ಬೆಂಕಿ ತಗುಲಿತು. ತಮ್ಮನಿಲ್ಲದೆ ನನ್ನ ಮನಸ್ಸು ಆಳವಾದ ಮೋಹದಲ್ಲಿ ಮುಳುಗಿತು. ಇನ್ನೇನು ಗತಿ ಎಂದು ನಾನು ಉಗ್ರಶೋಕದಲ್ಲಿ ಅದ್ದಿದೆನು. ಸಹೋದರನ ವಿಯೋಗದಲ್ಲಿ ಉದ್ವೇಗ ದಿಂದುಂಟಾದ ಉಗ್ರಶೋಕಾಕ್ರಂದನವನ್ನೂ ಭಾವ ಸಮಗ್ರತೆಯನ್ನೂ ಕವಿ ಹೃದಯ

ಕರಗುವಂತೆ ವರ್ಣಿಸಿದ್ದಾನೆ. ಮಾತೃಚರೆಯಾಗಿದ್ದ ಲಲಿತಾಂಗದೇವನ ಸಮಾಧಾನದ ನುಡಿಗಳೂ ಸಹ ಹೃದಯಸ್ಪರ್ಶಿಯಾಗಿವೆ. 'ಕಟೆದವರ್ಗಟ್ಟುದಟ್ಟೊಡವರೇಟ್ಟರೇ? 'ಮೇಣ್ ಅವರಿಂ ಬಟಿಕ್ಕೆ ತಾಮುಟಿವರೇ?' 'ಧರ್ಮಮಂ ಘಟಿಯಿಸಿಕೊಳ್ಳುದೊಂದೆ ಚದುರ್' 'ಇಂತುಟು ಸಂಸ್ಕೃತಿಧರ್ಮಂ' 'ಅದೇಕೆ ಬಾಯಟಿವುದು? ' 'ಅದೇಕೆ ಚಿಂತಿಸುವುದು? ಅದೇಕೆ ಪಲುಂಬುವುದು? ಅದೇಕೆ ನೋವುದೋ?' 'ತನಯ, ತಾಯ್ತುಂದೆ, ತಮ್ಮ, ಕೆಳೆಯ, ಅಳಿಯ, ಆಳು, ಅಜ್ಜ, ಅಜ್ಜಿ, ನಿಜಾಂಗನೆ ಎಂದು ಹೀಗೆ ಯಾರಾರನ್ನು ಯಾವ ಯಾವ ಭವಸಂಬಂಧವನ್ನು ಕಂಡು 'ನೀನಾರ್ಗೆ ನಿಚ್ಚನೆನೆವೊ? ಆರ್ಗೇಕೆ ಶೋಕಿಪ್ಪೆ? ಮಾಣ್ ಮಾಣ್....ಪುತ್ರಾ ನಿನ್ನೊಡಲನೆ ಜಿನದೀಕ್ಷಾಕ್ಷಮಂ ಮಾಡು'(iii-೫೫)

ಇಲ್ಲಿ ಬರುವ ಬೋಧನೆಯ ಆತ್ಮೀಯ ಸರಳಶೈಲಿ ಓದುಗರ ಹೃದಯವನ್ನು ಸೆರೆಹಿಡಿಯುತ್ತದೆ. ಈ ಭಾಗ ಉಳಿದ ಆದಿತೀರ್ಥಂಕರ ಕನ್ನಡಕಾವ್ಯಗಳಲ್ಲಿಲ್ಲ. "ಮಾತೃಚರನಾದ ಲಲಿತಾಂಗನು ಶ್ರೀವರ್ಮನನ್ನು ಸಂತೈಸುವನೆಂಬಲ್ಲಿ ಪಂಪನು ಬರೆದಿರುವ ಪದ್ಯಗಳು ಕಾರುಣ್ಯ ವಾತ್ಸಲ್ಯ ಮಮತೆಗಳನ್ನು ಬಣ್ಣ ಬಣ್ಣವಾಗಿ ಹೊಮ್ಮಿಸುವ ಮೂರು ರತ್ನಗಳಂತಿವೆ." [೧೮] ಇಲ್ಲಿಯ ಬೋಧನೆಗಳು ಸ್ವಲ್ಪ ಸಮಯದವುಗಳಾದರೂ ಸಂಸಾರ ಜಂಜಡದಲ್ಲಿ ಸಿಲುಕಿರುವ ನಮ್ಮನ್ನು, ಆ ಬಗೆಗಿನ ಸತ್ಯಾಂಶವನ್ನು ಮನನಮಾಡಿಕೊಳ್ಳುವಂತೆ ಮಾಡುತ್ತವೆ. ಕಾವ್ಯಫಲವೆಂದರೆ ಇದೇ ಅಲ್ಲವೇ? ಪೂರ್ವಪುರಾಣದಲ್ಲಿ ಒಂದೇ ಒಂದು ಶ್ಲೋಕದಲ್ಲಿ ಈ ಪ್ರಸಂಗ ಔಪಚಾರಿಕವೆಂಬಂತೆ ಬಂದು ಹೋಗುತ್ತದೆ. ಉದಾಹರಣೆಗೆ :

ಅಂಗಪುತ್ರತ್ವಕಂ ಮಾಗಾಃ ಶುಚಮಜ್ಞೋ ಯಥಾ ಜನಃ |
ಜನನಾದಿಭಯೋವಶ್ಯಂ ಭಾವುಕಾ ವಿದ್ಧಿ ಸಂಸ್ಕೃತೌ || (ಪೂರ್ವಪು. vii-೭೦)

"ಎಲೈ ಮಗನೆ! ಮೂರ್ಖರಂತೆ ದುಃಖಪಡಬೇಡ. ಜನನಮರಣಾದಿ ಭಯಗಳು ಅವಶ್ಯವಾಗಿ ಉಂಟಾಗುವಂಥವೆಂದು ತಿಳಿ." ಇಲ್ಲಿಯ ಭಾವತಂತುವನ್ನೇ ಪಂಪ ಹೃದಯಂಗಮವಾಗಿ ಸುಂದರವಾಗಿ ಬಿತ್ತರಿಸಿದ್ದಾನೆ.

ಲಲಿತಾಂಗನ ಬೋಧನೆ ಶ್ರೀವರ್ಮನ ಪಾಲಿಗೆ ವ್ಯರ್ಥವಾಗಲಿಲ್ಲ. 'ಶೋಕರಸಮೆಲ್ಲ ಪೋಗಿ ನಿರ್ವೇಗರಸಂ ಪುಟ್ಟೆ' ದೀಕ್ಷಿತನಾಗಿ ತಪವನ್ನಾಚರಿಸಿ, ಅಚ್ಯುತ ಕಲ್ಪದಲ್ಲಿ ಇಪ್ಪತ್ತೆರಡು ಸಾಗರದಷ್ಟು ಪರಮಾಯುಷ್ಯವನ್ನು ಗಳಿಸಿ ಅಚ್ಯುತೇಂದ್ರನಾದನು. ಅಲ್ಲಿಂದ ಚ್ಯುತನಾಗಿ ಯಶೋಧರ-ವಸುಮತಿ ರಾಜದಂಪತಿಗಳಿಗೆ ವಜ್ರದಂತನಾಗಿ ಹುಟ್ಟಿದನು.

## ಉತ್ತರಕಾಲೀನ ಕಾವ್ಯಗಳು

**ಚಾವುಂಡರಾಯಪುರಾಣ :** ಪೂರ್ವಪುರಾಣದಲ್ಲಿ ಹೇಳಿರುವಂತೆ ಕೇಶವರಾಜನನ್ನು ಇಲ್ಲಿ ಅರ್ಧಚಕ್ರಿಯೆಂದು ಹೇಳಲಾಗಿದೆ. ಶ್ರೀಧರರಾಜನ ಇಬ್ಬರು ಪತ್ನಿಯರಾದ ಮನೋಹರಾದೇವಿ ಮತ್ತು ಮನೋರಮೆಯಲ್ಲಿ ಶ್ರೀವರ್ಮ, ವಿಭೀಷಣರು ಜನಿಸಿದರೆಂಬ ಪೂರ್ವಪುರಾಣದ ವಿವರಗಳು ಇಲ್ಲಿಯೂ ಕಂಡುಬಂದರೂ, ಆದಿಪುರಾಣವನ್ನು ಉದ್ದಕ್ಕೂ ಅನುಸರಿಸಿರುವುದು ಕಂಡುಬರುತ್ತದೆ. ಆದರೆ ಆದಿಪುರಾಣದಲ್ಲಿ ಬರುವ ಬೋಧನೆಯ ವಿವರಗಳು, ಅಲ್ಲಿಯ ನಿರೂಪಣಾ ಸೌಂದರ್ಯ ಇಲ್ಲಿಲ್ಲ. ಚಾಮುಂಡ

ರಾಯನು ಪಂಪನ ವಚನಭಾಗವನ್ನು ಅನುಕರಿಸಿರುವುದಕ್ಕೆ ಸಾಕ್ಷಿಯಾಗಿ ಇಲ್ಲಿ ಕೆಲವು ಸಾಲುಗಳನ್ನು ಗಮನಿಸಬಹುದಾಗಿದೆ :

ಆನೀ ಭವಕ್ಕೈದನೆಯ ಭವದೊಳೀ ಪುಂಡರೀಕಿಣಿಯೊಳರ್ಧಚಕ್ರವರ್ತಿ ವಾಸುದೇವಂಗೆ ಚಂದ್ರಕೀರ್ತಿಯೆಂಬ ಮಗನಾಗಿ ಜಯಕೀರ್ತಿಯೆಂಬ ಕೆಳೆಯನುಮಾನುಮೊಡವಳೆದು ಗೃಹೀತಾಣುವ್ರತದೆ ಗೃಹಸ್ಥಧರ್ಮದೊಳಿರ್ವರುಂ ನೆಗಳ್ದು ಜೀವಿತಾಂತ್ಯದೊಳ್ ಪ್ರೀತಿವರ್ಧನೋದ್ಯಾನದೊಳ್ ಚಂದ್ರಸೇನಾಚಾರ್ಯರ ಪಕ್ಕದೊಳ್ ಸಂನ್ಯಸನಂಗೈದು ಸಮಾಧಿವಡೆದು ಮುಡಿಪಿ ಮಹೇಂದ್ರಕಲ್ಪದೊಳ್ ಸಪ್ತಸಾಗರ ಪ್ರಮಿತ ಜೀವಿತನಂ ದೇವನಾಗಿ ಪುಟ್ಟಿದೆಂ (ಚಾವುಂಪು., ಪು. ೨೫).

ಆನೀ ಭವಕ್ಕೈದನೆಯ ಭವದೊಳೀಪುಂಡರೀಕಿಣಿಯೊಳ್ ಕೇಶವಮಹೀಶಂಗೆ ಚಂದ್ರಕೀರ್ತ್ತಿ ಯೆಂಬ ಮಗನಾಗಿ ಜಯಕೀರ್ತ್ತಿಯೆಂಬ ಕೆಳೆಯನುಮಾನುಮೊಡವಳೆದು, ಗೃಹೀತಾಣುವ್ರತನೆಂ ಗೃಹಸ್ಥಧರ್ಮ್ಮಕ್ರಮದೊಳ್ ಮದೀಯವಯಸ್ಯಮಾನಂ ನೆಗಳ್ದು ಜೀವಿತಾಂತ್ಯದೊಳ್ ಪ್ರೀತಿವರ್ಧನೋದ್ಯಾನದೊಳ್ ಚಂದ್ರಸೇನಾಚಾರ್ಯರ ಪಾದಪದ್ಮ ಪಾರ್ಶ್ವದೊಳ್ ಸನ್ಯಸನವಿಧಿಯೊಳ್ ಪರಿತ್ಯಕ್ತಾಹಾರ ಶರೀರನೆಂ ಸಮಾಧಿವಡೆದು ಮಹೇಂದ್ರ ಕಲ್ಪದೊಳ್ ಸಪ್ತಸಾಗರೋಪಮ ಪ್ರಮಿತ ಜೀವಿತನೆಂ ಸಾಮಾನಿಕ ದೇವನಾಗಿ ಪುಟ್ಟಿದೆಂ (ಆದಿಪು. ಅಧ್ಯಾಯ iii).

**ಹಸ್ತಿಮಲ್ಲನ ಪೂರ್ವಪುರಾಣ** : ಚಾವುಂಡರಾಯಪುರಾಣದಂತೆಯೇ ಸಂಕ್ಷಿಪ್ತ ಧಾಟಿಯನ್ನು ಹಿಡಿದು ಕವಿ ನೇರವಾಗಿ ಆದಿಪುರಾಣವನ್ನು ಅನುಸರಿಸಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಪೂರ್ವಪುರಾಣ ಹಾಗೂ ಚಾವುಂಡರಾಯಪುರಾಣಗಳಲ್ಲಿ ಕೇಶವರಾಜನನ್ನು ಅರ್ಧಚಕ್ರಿಯೆಂದು ಹೇಳಿದ್ದರೆ, ಇಲ್ಲಿ ಕವಿ ಈ ಭಾಗದಲ್ಲಿಯೂ ಪಂಪನನ್ನೇ ಅನುಸರಿಸಿದ್ದಾನೆ. ಅಲ್ಲದೆ ಮನೋಹರಿಗೆ ಜಯವರ್ಮ ವಿಭೀಷಣರೆಂಬ ಇಬ್ಬರು ಮಕ್ಕಳು. ಪೂರ್ವಪುರಾಣ ಹಾಗೂ ಚಾವುಂಡರಾಯಪುರಾಣಗಳಲ್ಲಿ ಬರುವಂತೆ ಇವರು ಬಲಸಹೋದರರಲ್ಲ. ಶ್ರೀವರ್ಮ ಎಂಬ ಹೆಸರಿನ ಬದಲು ಜಯವರ್ಮನೆಂಬ ಹೆಸರನ್ನು ಇಲ್ಲಿ ಹೇಳಲಾಗಿದೆ, ಅಷ್ಟೆ.

ಕವಿ ಆದಿಪುರಾಣವನ್ನು ಅನುಕರಿಸಿದ್ದಾನೆಂಬುದಕ್ಕೆ ಕೆಲವು ಉದಾಹರಣೆಗಳು :

ಪುಷ್ಕಳಾರ್ಧ ದ್ವೀಪದ ಮಂದರದ ಪೂರ್ವವಿದೇಹದ ಮಂಗಳಾವತೀ ವಿಷಯದ ರತ್ನ ಸಂಚಯ ಪುರಾಧಿಪ ಶ್ರೀಧರನ ಸತಿ ಮನೋಹರಿಗೆ ಜಯವರ್ಮನುಂ ವಿಭೀಷಣನುಮೆಂಬ ಬಲವಾಸುದೇವರಾಗಿ ತಂದೆ ನಮ್ಮನಧಿರಾಜ ಯುವರಾಜ ಪದವಿಯೊಳ್ನಿಲಿಸಿ ಸುಧರ್ಮಮುನೀಶ್ವರರ ಸಮೀಪದೊಳ್ದೀಕ್ಷೆಗೊಂಡು ಕರ್ಮಮಂ ಕೆಡಿಸಿ, ತಾಯುಂ ನಮ್ಮ ಮೇಲಣ ಮೋಹದಿಂ ತಪಂಗೊಳ್ಳದೆ ಸಕಲಶ್ರಾವಕವ್ರತಂಗಳಂ ಕೈಕೊಂಡು ಪಲತೆರದ ನೋಂಪಿಗಳಂ ನೋಂತು ಜೀವಿತಾಂತ್ಯದೊಳೀಶಾನಕಲ್ಪದ ಶ್ರೀಪ್ರಭವಿಮಾನದೊಳ್ ಲಲಿತಾಂಗನೆಂಬ ದೇವನಾದಳ್ (ಹಪೂರ್ವ, ಪುಟ ೨೧-೨೨)

ಪುಷ್ಕರ ದ್ವೀಪದ ಮೂಡಣ ಮಂದರದ ಪೂರ್ವವಿದೇಹದ ಮಂಗಳಾವತೀ ವಿಷಯದ ರತ್ನಸಂಚಯಪುರಾಧಿಪ ಶ್ರೀಧರಂಗಮಾತನ ಮನೋಹರಿ ಮನೋಹರಿಗಂ ಶ್ರೀವರ್ಮ್ಮನುಂ ವಿಭೀಷಣನುಮೆಂಬ ಪೆಸರೊಳ್ ಬಲದೇವ ವಾಸುದೇವರೆನಿಸಿ ಬಳೆಯೆ, ಮದೀಯ ಜನಕ ನೆಮ್ಮಿರ್ವರುಮನಧಿರಾಜ-ಯುವರಾಜ ಪದವಿಯೊಳ್ ನಿಱಿಸಿ....

ಎಮ್ಮ ತಾಯ್ ಮನೋಹರಿಯುಂ ಎಮ್ಮೊಳಪ್ಪ ಮೋಹಂ ಕಾರಣಮಾಗೆ ತಪಮಂ ಕೈಕೊಳ್ಳದೆ ಸಕಳಶ್ರಾವಕವ್ರತಂಗಳನೆ ಕೈಕೊಂಡು ಪಲವುಂ ತೆಱದ ನೋಂಪಿಗಳಂ ನೋಂತು ಜೀವಿತಾಂತ್ಯದೊಳ್ ಈಶಾನಕಲ್ಪದೊಳ್ ಶ್ರೀಪ್ರಭವಿಮಾನದೊಳ್ ಲಲಿತಾಂಗ ದೇವನಾದಳ್ (ಆದಿಪು., ಅಧ್ಯಾಯ iii).

**ಪುಣ್ಯಾಸ್ರವದ ಆದೀಶ್ವರರ ಕಥೆ** : ಅರ್ಧಚಕ್ರಿಯ ವಿಚಾರ ಹಾಗೂ ಶ್ರೀಧರನ ಮನೋಹರಾ ಮತ್ತು ಶ್ರೀಮತಿ ಎಂಬ ಪತ್ನಿಯರಲ್ಲಿ ಶ್ರೀವರ್ಮ-ವಿಭೀಷಣರೆಂಬ ಮಕ್ಕಳಾದರೆಂಬ ವಿಷಯದಲ್ಲಿ ಪೂರ್ವಪುರಾಣ, ಚಾವುಂಡರಾಯಪುರಾಣಗಳಿಗೆ ಹೋಲುತ್ತದೆಯಾದರೂ ಅವುಗಳನ್ನು ನೇರ ಆಕರವೆಂದು ಸ್ಪಷ್ಟವಾಗಿ ಹೇಳಲು ಸಾಧ್ಯವಿಲ್ಲ. ಮನೋರಮಾ ಎಂಬ ಹೆಸರಿನ ಬದಲು ಇಲ್ಲಿ ಶ್ರೀಮತಿ ಎಂಬ ಹೆಸರು ಬಂದಿದೆ.

ಕವಿ ಈ ಸಂದರ್ಭವನ್ನು ನಿರೂಪಣಾಮಾತ್ರವಾಗಿ ಹೇಳಿದ್ದರೂ ಅಲ್ಲಲ್ಲಿಯೇ ಸ್ವಾರಸ್ಯಕರವಾದ ವರ್ಣನಾವಿಧಾನವನ್ನು ಅಳವಡಿಸುವುದರಲ್ಲಿ ಯಶಸ್ವಿಯಾಗಿದ್ದಾನೆ. ಉದಾಹರಣೆಗೆ : ವಿಭೀಷಣನ ಸಾವಿನಿಂದ ಶ್ರೀವರ್ಮನು 'ಪಾವಡರ್ದಂತಿರೆ ಮೋಹವಶದಿಂ ಮೂರ್ಛಿತನಾದಂ'.

ಶ್ರೀವರ್ಮನ ಮಾತೃಚರೆ ಮಹೀಧರನಾಗಿದ್ದಾಗ, ಅಚ್ಯುತ ಕಲ್ಪಜನು (ಶ್ರೀವರ್ಮನಾಗಿದ್ದವನು) ಬಂದು ಎಚ್ಚರಿಸುವ ಸಂದರ್ಭದಲ್ಲಿ ನಾಟಕೀಯತೆಯ ಮೆರುಗು ಚಿಕ್ಕ ಚಿಕ್ಕ ಸಂಭಾಷಣೆಗಳಿಂದ ಶೋಭಿಸುತ್ತದೆ. ಪ್ರತೀಂದ್ರನು ಮಹೀಧರನನ್ನು ಕಂಡು 'ನೀನೆನ್ನಂ ಬಲ್ಲಾ?' ಎಂದೊಡೆ ಆತನ್'ಅರಿದುದಿಲ್ಲ' ಎನೆ 'ನಿನ್ನ ಮಗಂ ಶ್ರೀವರ್ಮನುಮೀಶಾನ ಕಲ್ಪದೊಳ್ ದೇವನಾಗಿ ಜನಿಸಿದಲ್ಲಿ, ನೀ ಲಲಿತಾಂಗದೇವನಾಗಿ ಜನಿಸಿದಲ್ಲಿ....ಎನ್ನ ಕಲ್ಪಕ್ಕೆ ನಿನ್ನನೊಯ್ದು ಪೂಜಿಸಿದೆನ್'(ಪುಣ್ಯಾಸ್ರವ, ಅಧ್ಯಾಯ ix) ಎಂಬಲ್ಲಿ ನಾಟಕೀಯತೆಯನ್ನು ಗಮನಿಸಬಹುದಾಗಿದೆ. ಕಥಾಚೌಕಟ್ಟಿನಲ್ಲಿ ಯಾವ ವ್ಯತ್ಯಾಸವೂ ಕಂಡುಬರುವುದಿಲ್ಲ.

**ಪುರುದೇವ ಚರಿತ** : ಕಥೆಯು ಪೂರ್ವಪುರಾಣವನ್ನು ಅನುಸರಿಸುವ ಚಾವುಂಡರಾಯ ಪುರಾಣದ ಅನುವರ್ತಿಯಾಗಿದೆ. ಅಲ್ಲಿ ಬರುವ ಅಂಶಗಳನ್ನು ಕವಿ ಸಾಂಗತ್ಯದ ಧಾಟಿಯಲ್ಲಿ ಹೇಳಿದ್ದಾನೆ. ಇಲ್ಲಿ ಅರ್ಧಚಕ್ರಿಯ ವಿಚಾರ ಬಂದಿಲ್ಲ. ಆತನನ್ನು ವಾಸುದೇವನೆಂದೇ ಕರೆಯಲಾಗಿದೆ.

ಶ್ರೀವರ್ಮನ ತಾಯಿ ಮನೋಹರಿ ಶ್ರಾವಕವ್ರತವನ್ನು ಕೈಗೊಂಡು ಕರ್ಮಕ್ಷಪಣದ ವ್ರತವನ್ನು ಕೈಗೊಳ್ಳುವ ವಿಚಾರ ಪೂರ್ವಪುರಾಣ ಮತ್ತು ಚಾವುಂಡರಾಯಪುರಾಣಗಳಂತೆಯೇ ಬರುತ್ತದೆ. ಆದಿಪುರಾಣ ಮತ್ತು ಹಸ್ತಿಮಲ್ಲನ ಪೂರ್ವಪುರಾಣದಲ್ಲಿ ಸಕಲ ಶ್ರಾವಕ ವ್ರತಗಳನ್ನು ಕೈಕೊಂಡು ಹಲವು ರೀತಿಯ ನೋಂಪಿಗಳನ್ನು ಮಾಡಿದಳೆಂದು ಬರುತ್ತದೆ.

ವಿಭೀಷಣನ ಸಾವಿನಿಂದಾಗಿ, ಶ್ರೀವರ್ಮನು ಶೋಕತಪ್ತನಾಗಿರಲು, ಮಾತೃಚರೆಯಾದ ಲಲಿತಾಂಗನು ಅನುಜನ ರೂಪವನ್ನು ಕೈಗೊಂಡು ಬಂದು, ಕೊನೆಗೆ ತನ್ನ ದೇವರೂಪವನ್ನು ತೋರಿ ಪ್ರತಿಬೋಧಿಸಿದನು ಎಂಬ ವೃತ್ತಾಂತವು ಕೇವಲ ಚಾವುಂಡರಾಯಪುರಾಣದಲ್ಲಿ ಮಾತ್ರ ಕಂಡುಬರುವ ವಿಷಯ. ಅದನ್ನು ಪುರುದೇವ ಚರಿತೆಯಲ್ಲಿ ನಾವು ಕಾಣಬಹುದು. ಉಳಿದ ಕಡೆ ಲಲಿತಾಂಗನು ನೇರವಾಗಿ ಬಂದು ಬೋಧಿಸುವ ವಿಚಾರವು ಬರುತ್ತದೆ.

ಕಾವ್ಯಗುಣಾಂಶ ಕಂಡುಬಾರದಿದ್ದರೂ ಸರಳ, ಸಂಕ್ಷಿಪ್ತ ನಿರೂಪಣೆಯನ್ನು ಇಲ್ಲಿ ಕಾಣಬಹುದು.

**ಆದಿಪರಮೇಶ್ವರನ ಯಕ್ಷಗಾನ** : ಹಸ್ತಿಮಲ್ಲನ ಪೂರ್ವಪುರಾಣದ ಗದ್ಯಭಾಗವನ್ನು ಕವಿ ಕೆಲವೆಡೆ ಪದ್ಯರೂಪದಲ್ಲಿ ಮತ್ತೆ ಕೆಲವೆಡೆ ವಚನದಲ್ಲಿ ಅಳವಡಿಸಿದಂತೆ ತೋರುತ್ತದೆ. ಉದಾಹರಣೆಗೆ :

> ಇಂತುಮಿರ್ವರು ಶ್ರೀವರ್ಮ ವಿಭೀಷಣರೆಂಬ ಬಲವಾಸುದೇವರ್ಕಳಿಗೆ ಅಧಿರಾಜ ಯುವ ರಾಜ ಪದವಿಯೊಳಿರಿಸಿ ಸುಧರ್ಮ ಮುನೀಶ್ವರರ ಸನ್ನಿಧಿಯೊಳ್ದೀಕ್ಷೆಗೊಂಡು ಮತ್ಪಿತಂ ಕರ್ಮಕ್ಷಯಂ ಮಾಡಿದಂ, ತಾಯಿ ತಮ್ಮ ಮೇಲಣ ಮೋಹದಿಂದ ದೀಕ್ಷೆಗೊಳ್ಳದೆ ಸಕಲ ಶ್ರಾವಕ ವ್ರತಮಂ ಕೈಕೊಂಡು
>
> ಪಲತರದನೋಂಪಿಗಳನೊಂ<br>ತಳಿದುಮೀಶಾನಕಲ್ಪದೊಳ್ ಶ್ರೀಪ್ರಭಮೆಂ<br>ಬೊಳು ವಿಮಾನದಲಿ ಪುಟ್ಟಿಯು<br>ಲಲಿತಾಂಗನು ದೇವನಾದಳು ಪುಣ್ಯದಿ (ಆದಿಯ. ಪರಿಚ್ಛೇದ iii)
>
> ಜಯವರ್ಮನುಂ, ವಿಭೀಷಣನುಮೆಂಬ ಬಲವಾಸುದೇವರಾಗೆ ತಂದೆ ನಮ್ಮನಧಿರಾಜ ಯುವರಾಜ ಪದವಿಯೊಳ್ನಿಲಿಸಿ ಸುಧರ್ಮ ಮುನೀಶ್ವರರ ಸಮೀಪದೊಳ್ದೀಕ್ಷೆಗೊಂಡು ಕರ್ಮಮಂ ಕೆಡಿಸಿ, ತಾಯುಂ ತಮ್ಮ ಮೇಲಣ ಮೋಹದಿಂ ತಪಂಗೊಳ್ಳದೆ ಸಕಲ ಶ್ರಾವಕ ವ್ರತಂಗಳಂ ಕೈಕೊಂಡು ಪಲತೆರದ ನೋಂಪಿಗಳಂ ನೋಂತು ಜೀವಿತಾಂತ್ಯದೊಳೀಶಾನ ಕಲ್ಪದ ಶ್ರೀಪ್ರಭವಿಮಾನದೊಳ್ ಲಲಿತಾಂಗನೆಂಬ ದೇವನಾದಳ್ (ಹಪೂರ್ವ, ಪುಟ ೨೧-೨೨)

ಇಲ್ಲಿ ಕವಿಯ ಸ್ವೋಪಜ್ಞತೆ ಏನಿದ್ದರೂ ಕೆಲವು ಗದ್ಯಭಾಗವನ್ನು ಕಂದಪದ್ಯದಲ್ಲಿ ಅಳವಡಿಸಿರುವಲ್ಲಿ ಮಾತ್ರ ಕಂಡುಬರುತ್ತದೆಯೇ ಹೊರತು ವರ್ಣನಾವಿಧಾನದಲ್ಲಿ ಕಂಡುಬರುವುದಿಲ್ಲ.

## ಯುಗಂಧರಚರಿತೆ

**ಆದಿಪುರಾಣ-ಪೂರ್ವಪುರಾಣ** : ಈ ಭಾಗವು ಮುಖ್ಯ ಕಥಾಭಾಗದ ಓಟಕ್ಕೆ ಧಕ್ಕೆ ತರುವಂತೆ ಕಂಡುಬಂದರೂ ಪೂರ್ವಪುರಾಣದ ಈ ಕಥೆಯನ್ನು ಪಂಪನು ನಿಷ್ಠೆಯಿಂದ ಅನುಸರಿಸಿದ್ದಾನೆ. ಉಳಿದ ಕವಿಗಳ ವಿಚಾರದಲ್ಲಿಯೂ ಹಾಗೆಯೇ.

ಲಲಿತಾಂಗ ಸ್ವಯಂಪ್ರಭೆಯರು ಹಾಗೂ ಬ್ರಹ್ಮೇಂದ್ರ ಲಾಂತವೇಂದ್ರರು ಯುಗಂಧರನ ಜಿನೋಪಾಖ್ಯಾನವನ್ನು ವರ್ಣಿಸೆಂದು ಅಚ್ಯುತೇಂದ್ರನನ್ನು (ವಜ್ರದಂತ) ಕೇಳಿಕೊಂಡಾಗ, ಅವನು ನಿರೂಪಿಸಿದುದನ್ನು ವಜ್ರದಂತನು ಮಗಳಿಗೆ ಈಗ ಹೇಳಿದನು.

ವತ್ಸಕಾದೇಶದ ರಾಜನ ಮಂತ್ರಿಯ ಮಗ ಪ್ರಹಸಿತ. ಆತನ ಸ್ನೇಹಿತ ವಿಕಸಿತ. ಅವರು ನ್ಯಾಯಶಾಸ್ತ್ರ ಪರಿಣತರಾಗಿದ್ದರು. ಅವರು ಪರಿಣತಿಯನ್ನು ಪಡೆದ ನ್ಯಾಯಶಾಸ್ತ್ರದ ವಿವರಗಳ ಬಗೆಗೆ ಪೂರ್ವಪುರಾಣದಲ್ಲಿ ವಿಸ್ತೃತ ವಿವರಣೆಯಿದೆ. ಆದರೆ ಶುಷ್ಕವಾಗಿ ಕಾಣುವ ಈ ಭಾಗವನ್ನು ಪಂಪನು ಕೈಬಿಟ್ಟಿದ್ದಾನೆ. ಮಿಥ್ಯಾಜ್ಞಾನದ ಅಹಮ್ಮಿನಿಂದ ಕೂಡಿದ

ಇವರು ಮತಿಸಾಗರ ಮುನಿಗಳೊಡನೆ ವಾದಿಸಿ ಸೋತು, ದೀಕ್ಷೆ ಕೈಗೊಂಡು ಮಹಾಶುಕ್ರ ಸ್ವರ್ಗದಲ್ಲಿ ಇಂದ್ರ ಪ್ರತೀಂದ್ರರಾಗಿ ಹುಟ್ಟಿದರು. ಅಲ್ಲಿಂದ ಬಂದು ಮಹಾಬಲ-ಅತಿಬಲ ರೆಂಬ ಬಲದೇವ ವಾಸುದೇವರಾಗಿ ಹುಟ್ಟಿದರು. ತಂದೆಯ ಮರಣಾನಂತರ ರಾಜ್ಯಭಾರ ಮಾಡುತ್ತಿರುವಾಗ ಅತಿಬಲನು ಮೃತನಾದಾಗ ಮಹಾಬಲನು ಮುನಿಗಳಿಂದ ಉಪದೇಶಿತ ನಾಗಿ ಪ್ರಾಣತಸ್ವರ್ಗದಲ್ಲಿ ಹುಟ್ಟಿದನು. ಮಹಾಬಲನು ಸ್ವರ್ಗದಿಂದ ಚ್ಯುತನಾಗಿ ಮಹಾ ಸೇನ-ವಸುಂಧರಾ ರಾಜದಂಪತಿಗಳಿಗೆ ಜಯಸೇನನೆಂಬ ಪುತ್ರನಾದನು. ಚಕ್ರವರ್ತಿ ಪದ ವನ್ನು ತಿರಸ್ಕರಿಸಿ ದಿಗಂಬರತ್ವವನ್ನು ಧರಿಸಿ, ಸೌಮನಸ ವಿಮಾನದಲ್ಲಿ 'ನೂಕೆಪಾಸೆಂಬಂತೆ' ಹುಟ್ಟಿ ಅಲ್ಲಿಂದ ರತ್ನಸಂಚಯಪುರದ ಅಜಿತಂಜಯ-ವಸುಮತಿ ರಾಜದಂಪತಿಗಳಿಗೆ ಯುಗಂಧರನೆಂಬ ಪುಣ್ಯನಾಮಾಂಕಿತ ಪುತ್ರನಾದನು. ಕಲ್ಯಾಣದ್ವಯಗಳು ಜರುಗಿದುವು. ಪೂರ್ವಪುರಾಣದಲ್ಲಿ ಮೂರು ಕಲ್ಯಾಣಗಳನ್ನು ಸ್ಪಷ್ಟವಾಗಿ ಹೆಸರಿಸಲಾಗಿದೆ. ಪಂಪನು ಎರಡು ಕಲ್ಯಾಣಗಳನ್ನು (ದೀಕ್ಷಾಕಲ್ಯಾಣ, ಕೇವಲಜ್ಞಾನ ಕಲ್ಯಾಣ) ಹೇಳಿ, ಪರಿನಿಷ್ಕ್ರಮಣ ಕಲ್ಯಾಣವನ್ನು 'ಜಿನದೀಕ್ಷೆಯಂಪೂಣ್ಬು' ಎಂದಿಷ್ಟೇ ಹೇಳಿ ಸೂಚಿಸಿದ್ದಾನೆ.

ವಜ್ರದಂತನು ತಾವೆಲ್ಲರೂ ದೇವಗತಿಯಲ್ಲಿದ್ದಾಗ ಯುಗಂಧರರನ್ನು ಪೂಜಿಸಿದ ವಿಚಾರವನ್ನೂ ಒಟ್ಟಿಗೆಸೇರಿ ಹಲವಾರು ಎಡೆಗಳಲ್ಲಿ ವಿಹರಿಸಿದ ವಿಚಾರವನ್ನೂ ಹಾಗೂ ವಜ್ರಜಂಘನು ತನ್ನ ಸೋದರಳಿಯನಾಗಿ ಹುಟ್ಟಿರುವ ಸಂಗತಿಯನ್ನೂ ತಿಳಿಸಿ, ಶ್ರೀಮತಿಗೆ ಸಮಾಧಾನಮಾಡಿದನು. ಪಂಪನು ಮೂಲ ಕಥೆಯನ್ನು ವ್ಯತ್ಯಾಸಗೊಳಿಸದಂತೆ ಅಲ್ಲಿಯ ಅಭಿಪ್ರಾಯವನ್ನೇ ನಿರೂಪಿಸಿದ್ದಾನೆ.

## ಉತ್ತರಕಾಲೀನ ಕಾವ್ಯಗಳು

**ಚಾವುಂಡರಾಯಪುರಾಣ** : ಕಥೆಯ ಮುಖ್ಯಾಂಶಗಳನ್ನು ಮಾತ್ರ ಕವಿ ಸಂಗ್ರಹಿಸಿ ನಿರೂಪಿಸಿದ್ದಾನೆ. ಪೂರ್ವಪುರಾಣ, ಆದಿಪುರಾಣಗಳೆರಡನ್ನೂ ಆಕರವಾಗಿಟ್ಟುಕೊಂಡು ಸಂಗ್ರಹಿಸಿರುವನೆಂದು ಕಂಡುಬರುತ್ತದೆ.

ಆದಿಪುರಾಣದಲ್ಲಿ ಮತಿಸಾಗರರಿಗೆ ದೊರೆತ ಋದ್ಧಿಯ ವಿಷಯವು ಬಂದಿಲ್ಲ. ಪೂರ್ವ ಪುರಾಣದ ಈ ವಿಷಯವನ್ನು ಚಾಮುಂಡರಾಯನು ನಿರೂಪಿಸಿದ್ದಾನೆ.

ಆದಿಪುರಾಣದಲ್ಲಿ ಕೈಬಿಡಲಾಗಿರುವ ನ್ಯಾಯಶಾಸ್ತ್ರವಿಚಾರ, ವಾದಸರಣಿಯ ರೀತಿ ಇವುಗಳನ್ನು ಆದಿಪುರಾಣದಂತೆಯೇ ಚಾವುಂಡರಾಯಪುರಾಣದಲ್ಲಿಯೂ ಕೈಬಿಡಲಾಗಿದೆ. ಆದಿಪುರಾಣವನ್ನು ಶಾಬ್ದಿಕವಾಗಿಯೂ ಅಲ್ಲಲ್ಲಿ ಅನುಸರಿಸಿ ಸಂಕ್ಷಿಪ್ತ ರೀತಿಯಲ್ಲಿ ಕವಿ ಈ ಪ್ರಸಂಗವನ್ನು ಮುಗಿಸಿದ್ದಾನೆ. ಉದಾಹರಣೆಗೆ :

> ಇರ್ವರುಂ ಮಿಥ್ಯಾಜ್ಞಾನಿಗಳ್ ಶೂನ್ಯವಾದಿಗಳೊಂದು ದಿವಸಮಜಿತಂಜಯನೊಡನೆ ಪೋಗಿ ತತ್ಪುರೋಪವನದೊಳಿರ್ದ ರಸರ್ಧಿಯೊಳಮೃತಾಸ್ರವತ್ವಮೆಂಬಋದ್ಧಿಪ್ರಾಪ್ತರಪ್ಪ ಮತಿಸಾಗರ ಮುನಿಪತಿಯೊಳ್ ವಾದುಗೆಯ್ದು ಹತಪ್ರತಿಭರಾಗಿ ಶಿಷ್ಯತ್ವಮಂ ಪೂಣ್ಬು (ಚಾವುಂಪು., ಪುಟ ೨೭-೨೮)

> ಅಂತು ಮಿಥ್ಯಾಜ್ಞಾನಮದಾವಲಿಪ್ತರಿರ್ವರುಮೊಂದು ದಿವಸಮಜಿತಂಜಯನೊಡನೆ ಪೋಗಿ ತತ್ಪುರೋಪವನದೊಳಿರ್ದ್ದ ಮತಿಸಾಗರ ಮುನಿಪತಿಯೊಳ್ ಬಾದುಗೆಯ್ಯಾತ್ಮೀಯ

ವಿದ್ಯಾಗರ್ವ್ವಪರ್ವ್ವತಮವರ ವಚೋವಜ್ರ ಘಾತದಿಂದಂ ನುಚ್ಚುನುರಿಯಾಗಿ ಪೋದೊಡೆ ಹತಪ್ರತಿಭರುಂ ಗಲಿತಗರ್ವ್ವರುಮಾಗಿ ತಚ್ಛಿಷ್ಯತ್ವಮಂ ಪೂಣ್ದು (ಆದಿಪು., ಅಧ್ಯಾಯiii).

**ಹಸ್ತಿಮಲ್ಲನ ಪೂರ್ವಪುರಾಣ** : ಕವಿ ಚಾವುಂಡರಾಯಪುರಾಣದಲ್ಲಿ ಬರುವ ನಿರೂಪಣೆಗಿಂತಲೂ ಅತಿ ಸಂಕ್ಷಿಪ್ತ ರೀತಿಯಲ್ಲಿ ಈ ಭಾಗವನ್ನು ನಿರ್ವಹಿಸಿದ್ದಾನೆ. ಪ್ರಹಸಿತ-ವಿಕಸಿತರು ಮಿಥ್ಯಾಜ್ಞಾನಮದದಿಂದಿದ್ದರೆಂಬ ಅಂಶವು ಇಲ್ಲಿ ಕಂಡು ಬರುವುದಿಲ್ಲ. 'ಸಕಲಕಲಾಪ್ರವೀಣತೆ'ಯಿಂದ ಕೂಡಿ ವಿದ್ಯಾಶಾಸ್ತ್ರ ಮದದಿಂದ ಕೂಡಿದ್ದರೆಂದು ಇಲ್ಲಿ ಬರುತ್ತದೆ. ಜಯಸೇನನು ಚಕ್ರವರ್ತಿಯ ಪದವನ್ನು ಪಡೆದು ಅದನ್ನು 'ಕೊಳೆತ ಕಡ್ಡಿಗೆ ಸಮಾನಂ ಮಾಡಿ' ತ್ಯಜಿಸಿದನು ಎಂಬ ಈ ಅಭಿಪ್ರಾಯವನ್ನು ಕವಿ ಪಂಪನಲ್ಲಿ ಬರುವ ಜರತ್ತೃಣಾನುಗುಣಂ ವಲಮೆಂದೆ ಪೇಸಿದಂ' (ಆದಿಪು., iii-೭೮) ಎಂಬ ಹೋಲಿಕೆಗೂ ಪೂರ್ವಪುರಾಣದಲ್ಲಿ ವಜ್ರದಂತ ಚಕ್ರವರ್ತಿಯು ವೈರಾಗ್ಯಪರನಾದನೆಂದು ಹೇಳುವ ಸಂದರ್ಭದಲ್ಲಿ ಬರುವ 'ಜರತ್ತೃಣಮಿವಾಶೇಷಂ ಸಾಮ್ರಾಜ್ಯ ಮವಮತ್ಯಸಃ (x-೬೦) ಎಂಬ ಹೋಲಿಕೆಗೂ ಸಮಾನವಾಗಿರುವಂತೆ ತೋರುತ್ತದೆ.

ಚಾವುಂಡರಾಯಪುರಾಣದಲ್ಲಿ ಯುಗಂಧರರ ಕಲ್ಯಾಣಗಳ ಬಗೆಗೆ ಯಾವ ಉಲ್ಲೇಖವೂ ಬರುವುದಿಲ್ಲ. ಹಸ್ತಿಮಲ್ಲನು ಗರ್ಭಾವತರಣ, ಜನ್ಮಾಭಿಷೇಕ, ದೀಕ್ಷಾ ಕೇವಲಜ್ಞಾನ ಕಲ್ಯಾಣಗಳನ್ನು ಹೆಸರಿಸಿದ್ದಾನೆ.

**ಪುಣ್ಯಾಸ್ರವದ ಆದೀಶ್ವರರ ಕಥೆ** : ಚಾವುಂಡರಾಯಾದಿ ಪುರಾಣಗಳಲ್ಲಿನ ಸಂಕ್ಷಿಪ್ತತೆ ಇಲ್ಲಿಯೂ ಕಂಡುಬರುತ್ತದೆ. ಆದರೆ ಅವುಗಳ ಅನುವರ್ತಿಯಲ್ಲ. ಕಥಾಚೌಕಟ್ಟು ಉಳಿದ ಕಾವ್ಯಗಳಲ್ಲಿ ಕಂಡುಬರುವಂತೆಯೇ ಇದೆ. ಇಲ್ಲಿಯ ಒಂದು ಮುಖ್ಯ ವ್ಯತ್ಯಾಸವೆಂದರೆ : ಜಿನಸೇನರ ಪೂರ್ವಪುರಾಣದ ಆದಿಯಾಗಿ ಎಲ್ಲಾ ಆದಿತೀರ್ಥಂಕರ ಕಾವ್ಯಗಳಲ್ಲಿ ಅಚ್ಯುತೇಂದ್ರನಾಗಿದ್ದ ವಜ್ರದಂತನು ಯುಗಂಧರನ ಕಥೆಯನ್ನು ಲಲಿತಾಂಗ ಸ್ವಯಂಪ್ರಭೆಯರಿಗೆ ವಿವರಿಸಿದನೆಂದು ಬಂದರೆ, ಇಲ್ಲಿ ಇವರೆಲ್ಲರೂ ಯುಗಂಧರರ ಸಮವಸರಣದಲ್ಲಿ ಗಣಧರರಿಂದ ಈ ಕಥೆಯನ್ನು ಕೇಳಿದರೆಂದು ಬರುತ್ತದೆ. ಅಲ್ಲದೆ 'ಗರ್ಭಾವತರಣ ಪುರಸ್ಸರಂ ಯುಗಂಧರತೀರ್ಥಂಕರ ಪುಟ್ಟಿದ'ರೆಂದು ಹೇಳುವಲ್ಲಿ ತೀರ್ಥಂಕರರ ಎಲ್ಲ ಕಲ್ಯಾಣಗಳ ಸೂಚನೆಯನ್ನು ನೀಡಲಾಗಿದೆ. ಇತರ ಕಡೆ ಧನಂಜಯನ ಅರಸಿ ಯಶಸ್ವತಿಯಲ್ಲಿ ಮಹಾಬಲನಾದ ವಾಸುದೇವನು ಜನಿಸಿದನೆಂದಿದ್ದರೆ ಇಲ್ಲಿ ಯಶಸ್ವತಿಯ ಬದಲು ಜಯಾವತಿಯ ಹೆಸರು ಬರುತ್ತದೆ.

**ಪುರುದೇವ ಚರಿತ** : ಹಸ್ತಿಮಲ್ಲನ ಪೂರ್ವಪುರಾಣಕ್ಕೆ ಕವಿ ಹತ್ತಿರವಾಗಿ ಕಂಡುಬರುತ್ತಾನೆ. ಗರ್ಭಾವತರಣ, ಜನ್ಮಾಭಿಷೇಕ, ದೀಕ್ಷಾ, ಕೇವಲಜ್ಞಾನ ಕಲ್ಯಾಣಗಳ ಸೂಚನೆ ಹಸ್ತಿಮಲ್ಲನ ಪೂರ್ವಪುರಾಣದಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ. ಆ ಭಾಗವನ್ನೇ ಕವಿ ಸ್ವಲ್ಪ ವಿವರಣೆಯೊಂದಿಗೆ ಸಾಂಗತ್ಯಕ್ಕೆ ಅಳವಡಿಸಿಕೊಂಡಂತೆ ತೋರುತ್ತದೆ. ಉದಾ ಹರಣೆಗೆ :

> ಗರ್ಭಾವತರಣ ಕಲ್ಯಾಣಪೂರ್ವಕಂ ಪುಷ್ಕರಾರ್ಧದ ಪೂರ್ವ ವಿದೇಹದ ರತ್ನಸಂಚಯ ಪುರಮಳನಾಳ್ವಜಿತಂಜಯ ನೃಪನ ಸ್ತ್ರೀ ವಸುಮತಿಗೆ ಯುಗಂಧರನೆಂಬ ಕುಮಾರನಾಗಿ ಜನ್ಮಾಭಿಷೇಕ-ದೀಕ್ಷಾಕಲ್ಯಾಣ-ಕೇವಲಜ್ಞಾನ ಕಲ್ಯಾಣಮಂ ಪಡೆದು ದಿವ್ಯಧ್ವನಿಯಿಂದೀಗಳುಂ ಭವ್ಯರ್ಗಂ ಬೋಧಿಸುತಿರ್ದಪರ್' (ಹಪೂರ್ವ. ಪುಟ ೨೪)

ಪ್ರಥಮ ಕಲ್ಯಾಣಪೂರ್ವಕ ಯುಗಂಧರನೆಂಬ | ಸುತನಾಗಿ ಪುಟ್ಟಲಂತಾಗ
ಅತಿಮುದದಿಂದ ಜನ್ಮಾಭಿಷೇಕವ ನಾಕ | ಪತಿ ಮಾಡೆ ಕೆಲಕಾಲಮಿರ್ದಂ
ನಾಕಪತಿ ದೀಕ್ಷಾಕಲ್ಯಾಣಮೆಯ್ದಿಸೆ | ನಾಕು ಘಾತಿಗಳ ಧ್ಯಾನದೊಳು
ತಾ ಕೇಡನೆಯ್ದಿಸಿ ಜಿನನಾಗಿ ಮೂವತ್ತ | ನಾಕತಿಶಯದೊಳೊಂದಿರಲು
ಅರುವತ್ತಾರು ಸಮುದ್ರೋಪಮಕಾಲ | ವರವೇದಕದುದಯದೊಳು
ಸುರನರಸುಖವನು ಭೋಗಿಸಿ | ಕಡೆಯೊಳು ಪರಮಮೋಕ್ಷಕೆ ಸಂದರೆಂದು

(iii-೯೨, ೯೩, ೯೪)

**ಆದಿಪರಮೇಶ್ವರನ ಯಕ್ಷಗಾನ** : ಈ ಭಾಗವು ಹಸ್ತಿಮಲ್ಲನ ಪೂರ್ವಪುರಾಣಕ್ಕೆ ಹತ್ತಿರವಾಗಿ ಕಂಡುಬರುತ್ತದೆಯಲ್ಲದೆ, ಇತರತ್ರ ಕಂಡುಬಾರದ ಕೆಲವು ವಿವರಗಳು ಇಲ್ಲಿ ಸೇರ್ಪಡೆಯಾಗಿವೆ. ಉದಾಹರಣೆಗೆ : ಜಯಸೇನನು ದಿಗ್ವಿಜಯವನ್ನು ಸಾಧಿಸಿ ಚಕ್ರೇಶನಾದನೆಂಬ ಸಂಗತಿಯು ಇಲ್ಲಿ ಹೊಸದಾಗಿ ಕಂಡುಬರುತ್ತದೆ.

ಜನಕನು ಪರಲೋಕಮನೆಯ್ದೆ ಜಯಸೇನಾ
ಘನಪುಣ್ಯ ಕಾರಣ ಚಕ್ರೇಶನಾದಾ
ಎಸಗಿ ದಿಗ್ವಿಜಯವ ಕುಸುಮಬಾಣನ ರೂಪಾ
ಅಸಮ ಸೌಭಾಗ್ಯ ಸಂಪದದೊಳೋಲಾಡಿ
ಶಕ್ರಗೆ ಸಮನಪ್ಪ ಚಕ್ರಧರತ್ವವಾ
ವಿಕ್ರಮಿ ತೃಣಮೆಂದು ಬಗೆದುಮಂತ್ಯದಲಿ
ಶ್ರೀಮಂದರ ಜಿನಪನ ಸನ್ನಿಧಿಯೊಳು
ದ್ದಾಮ ದಿಗಂಬರ ಯೋಗಿ ತಾನಾಗಿ (ಪರಿಚ್ಛೇದ iii)

ಜಯಸೇನನು, ಊರ್ಧ್ವಗ್ರೈವೇಯಕದಲ್ಲಿ ಅಹಮಿಂದ್ರನಾಗಿ ಜನಿಸಿದ ನಂತರ ಕವಿಯು ನಿರೂಪಿಸುವ ವಾಗ್ಧಾರೆಯು ಬೇರೆಡೆಗಳಲ್ಲಿ ದೊರೆಯುವುದಿಲ್ಲ. ಉದಾಹರಣೆಗೆ:

ದಿವ್ಯರತ್ನೋಜ್ವಲ ದೇದೀಪ್ಯಮಾನಾ ನವ್ಯವಿಮಾನದೊಳ್ಸುವಕ್ತಿಜ್ಞಾನ
ಅವ್ಯಯಾ ಸುಖವರ್ತಿ ಆನಂದಮೂರ್ತಿಭವ್ಯಾತ್ಮಸಂಸೇವ್ಯ ಭಾಜನ ದೇವಾ
ವರತ್ರಿಂಶಸಾಗರ ವಿಭವವಿಹಾರ ಪರಮಪದ ಸಾಮ್ರಾಜ್ಯ ಸುರರಾಜ್ಯಪೂಜ್ಯಾ
ಸ್ಮರಕೋಟಿ ಸಂಕಾಶ ಕಾರುಣ್ಯಭಾಷಾ ಚಿರಕಾಲ ಸಂಪದ ಚಿತ್ಸುಖಾನಂದಾ
ಶಾಂತಾಬುನಿಧಿಚಂದ್ರ ಸದ್ಗುಣಸಾಂದ್ರ | ಸ್ವಾಂತೋತ್ಸಹಾನಂದ ಸೊಗಸೌಖ್ಯವೃಂದಾ
ಕಾಂತಮನೋಹರ ಕಮನೀಯಹಾರಾ | ಭ್ರಾಂತಾರಿಭವಹಾರಾಭವ್ಯಮಂದಾರಾ (ಪರಿಚ್ಛೇದ iii)

ಅಹಮಿಂದ್ರನು ದೇವಲೋಕದಿಂದ ಇಳಿದಾಗ ಅಜಿತಂಜಯ ಸುಮತಿವಸುಮತಿಯರಿಗೆ ಯುಗಂಧರನಾಗಿ ಜನಿಸುವ ಮುನ್ನ ಸುಮತಿವಸುಮತಿಯ ಗರ್ಭಶೋಧನೆಯನ್ನು ಮಾಡಿದ ವೃತ್ತಾಂತವನ್ನು ನಾಲ್ಕು ಪದ್ಯಗಳಲ್ಲಿ ವರ್ಣಿಸಿದ್ದಾನೆ. ರಾಜ್ಯಾಭಿಷೇಕ ಕಲ್ಯಾಣವೊಂದನ್ನು ಉಳಿದು, ಉಳಿದ ಕಲ್ಯಾಣಗಳ ವರ್ಣನೆ ಇಲ್ಲಿ ಸಂಕ್ಷಿಪ್ತವಾಗಿ ಬಂದಿದೆ.

ಕವಿ ಬೊಮ್ಮಣ್ಣನು, ಉಳಿದ ಕಾವ್ಯಗಳಲ್ಲಿ ಬರುವ ವರ್ಣನಾಸ್ಥಾನಗಳನ್ನು ಸಾಮಾನ್ಯವಾಗಿ ಕೈಬಿಟ್ಟು, ಬೇರೆ ಸಂದರ್ಭಗಳನ್ನು ಆಯ್ದುಕೊಂಡು ವರ್ಣಿಸುವುದನ್ನು ಗಮನಿಸಬಹುದಾಗಿದೆ.

## ಚಿತ್ರಪಟದ ವೃತ್ತಾಂತ-ವಜ್ರಜಂಘನ ಸಂದರ್ಶನ

**ಆದಿಪುರಾಣ-ಪೂರ್ವಪುರಾಣ :** ಶ್ರೀಮತಿಯು ತಂದೆಯ ಮಾತಿನಿಂದ ನಿರಾಕುಲೆಯಾಗಿದ್ದರೂ ಪಂಡಿತೆಯಿಂದ ಚಿತ್ರಪಟದ ವಿವರಗಳನ್ನು ಕೇಳಲು ಕಾತರೆಯಾಗಿದ್ದಳು. ಪಂಡಿತೆಯಾದರೋ 'ತನ್ನ ಪೂಣ್ದು ಪೋದ ಕಜ್ಜಮಂ ಸಾಧ್ಯಂ ಮಾಡಿ' ಬಂದವಳು. ಸಸಂಭ್ರಮದಿಂದ ಹಿಂದಿರುಗಿದ ಜಯಶೀಲೆ ಈ ಕಡೆ ಶ್ರೀಮತಿ ತನ್ನ ತಂದೆಯ ಮಾತಿನಂತೆ ತನ್ನ ಪ್ರಾಣಕಾಂತನ ಬರವನ್ನು ನಿರೀಕ್ಷಿಸುತ್ತಾ 'ವಿಭ್ರಮವಿಳಾಸವತಿ'ಯಾಗಿದ್ದಳು. ಪಂಪನು ಇಲ್ಲಿ ಪಂಡಿತೆಯ ಕಾರ್ಯಸಾಧನೆಯ ಪ್ರತೀಕವಾಗಿ'ಸಸಂಭ್ರಮ'ದಿಂದ ಪಂಡಿತೆಯು ಬಂದಳು—ಎಂಬ ಒಂದೇ ಮಾತಿನಿಂದಲೂ, ಶ್ರೀಮತಿಯ ನಿರಾಕುಲ ಭಾವವನ್ನು 'ವಿಭ್ರಮವಿಳಾಸವತಿ' ಎಂಬ ಪದದಿಂದಲೂ ಅವರವರ ಮನೋಗತಿಗೆ ತಕ್ಕ ಭಾವವನ್ನು ಪ್ರಭಾವಕಾರಿಯಾದ ಪದಪುಂಜಗಳಿಂದಲೇ ಚಿತ್ರಿಸಿದ್ದಾನೆ. ಶ್ರೀಮತಿಯು ಪಂಡಿತೆಯ 'ಬರವಿನೊಳಾದದೊಂದು ಮೊಗರಾಗದಿಂದಲೇ ತನ್ನ ಮನೋರಥವು ಈಡೇರಿದುದನ್ನು ಅರಿತಳು; ಆದರೂ 'ಅಂತದಂ ಸವಿಸ್ತರದಿ ಪೇಳಿದಂದೆವಗೆ ರಾಗದ ಭಾವಮಳುಂಬಮಾಗದೇ'? ಎಂದು ಅತ್ಯಂತ ಕುತೂಹಲಭರಿತೆಯಾಗಿ ಕಣ್ಣರಳಿಸಿ, ಮನವರಳಿಸಿ ಅಲ್ಲಿ ನಡೆದ ಸುದ್ದಿಗಳನ್ನು ಕೇಳಲು ಕುಳಿತಳು. ಪಂಪನಲ್ಲಿ ಬರುವ ಈ ಸಹಜ ಚಿತ್ರಣ ಪೂರ್ವಪುರಾಣದಲ್ಲಿ ಕಂಡುಬರುವುದಿಲ್ಲ. ಪ್ರಫುಲ್ಲವದನೆಯಾದ ಪಂಡಿತೆ ತನ್ನ ಮುಖ ಕಾಂತಿಯಿಂದಲೇ ಕಾರ್ಯವು ಸಿದ್ಧಿಯಾದುದನ್ನು ಸೂಚಿಸಿದವಳಾಗಿ ಬಂದು, ಬಂದ ತಕ್ಷಣವೇ ತಾನೇ ಅಲ್ಲಿ ನಡೆದುದನ್ನೆಲ್ಲಾ ಬಡಬಡನೆ ಉಸುರುವವಳಂತೆ ನಿರೂಪಿಸುತ್ತಾಳೆ. ಆದರೆ ಪಂಪನು ಪೂರ್ವಪುರಾಣದ ಈ ಸಣ್ಣ ಸನ್ನಿವೇಶದಲ್ಲಿಯೂ ಜೀವಕಳೆಯ ಸಹಜತೆಯ ಲೇಪನವನ್ನು ನೀಡಿದ್ದಾನೆ. ವಿರಹಿಯಾಗಿದ್ದ ಶ್ರೀಮತಿಯ ಕಾತರ ಮನೋಭಾವವನ್ನು, ತನ್ನಿನಿಯನ ಬಗೆಗೆ ಕೇಳುವ ಕುತೂಹಲದಿಂದ ಕೂಡಿದ ಭಾವವನ್ನು ಪಂಪನು ಮತ್ತೂ ಗುಡಿಗಟ್ಟಿ ವರ್ಣಿಸಿದ್ದಾನೆ ಎಂಬುದಕ್ಕೆ ಸಾಕ್ಷಿಯಾಗಿ ಮುಂದಿನ ಪದ್ಯವು ನಿಲ್ಲುತ್ತದೆ :

> ಬಿರಿಯಿಸೆ ಬೇಟದೊಳ್ ಬಿರಿವ ನಲ್ಲರಗಲ್ದು ಕನಲ್ದೊನಲ್ದು ನ
> ಲ್ಲರ ದೆಸೆಯಿಂದಮರ್ಥಿವರೆ ಕೋಗಿಲೆಯಕ್ಕೆಲರಕ್ಕೆ ತುಂಬಿಯ
> ಕ್ಕರಗಿಳಿಯಕ್ಕೆ ಬಂದೊಡಮೊಱಲ್ದೆರ್ದೆಯಾಱುವರೆಂದೂಡೋತದೂ
> ತರೆ ತರೆ ಬಂದ ಸಬ್ಬವದ ಮಾತುಗಳಂ ಗುಡಿಗಟ್ಟಿ ಕೇಳರೇ? (iii-೮೭)

ಪ್ರಣಯ ಲೀಲೆಯಿಂದ ಅಗಲಿ ಕೋಪಗೊಂಡು ನಲ್ಲರು ಅಗಲಿ ಹೋಗಿದ್ದರೂ ಕನಲಿ, ಕೋಪಿಸಿ ಕಳುಹಿಸಿದ ನಲ್ಲರ ಮಾತುಗಳನ್ನು ಕೋಗಿಲೆಯೇ ಬರಲಿ, ನಲ್ಲೆಯರು ಪ್ರೀತಿಯಿಂದ ಶಾಂತರಾಗಿ ಕೇಳುವರೆಂದಮೇಲೆ ತಾವಾಗಿಯೇ ಕಳುಹಿಸಿದ ದೂತನು ತಂದ ನಲ್ಲರ ಹಾಸ್ಯದ ಮಾತುಗಳನ್ನು ಸಂತೋಷದಿಂದ ಕೇಳದೇ ಇರುತ್ತಾರೆಯೇ?

ಚಿತ್ರಪಟವನ್ನು ಪಂಡಿತೆ ಮಹಾಪೂತ ಜಿನಾಲಯದ ಮುಂದೆ ನೇತುಹಾಕಿದಳು. ಆ ಚಿತ್ರಪಟವೆಂಬ ಆಸೆದೋರುವ ವಸ್ತುವಿಗೆ ಖೇಚರ ಭೂಚರರೆಂಬ 'ತರುಣಮೃಗಗಳು' ಬಂದು ಆ ಚಿತ್ರಪಟದಲ್ಲಿರುವ ಸೌಂದರ್ಯವನ್ನು ಹೊಗಳಿ ಭ್ರಾಂತಿಯಿಂದ ನೋಡಿದರು

ಎಂಬುದನ್ನು ಹೇಳುವಾಗ ಪಂಪನು ಬಳಸಿರುವ 'ತರುಣಮೃಗಗಳು' ಎಂಬ ಪದ ಕಟುವಾಗಿಯೇ ಕಂಡುಬಂದರೂ ವಾಸವ-ದುರ್ದಂತರು ಮೋಸದಿಂದ ಆಡುವ-ಹೂಡುವ ಆಟಕ್ಕೆ ಸಮಂಜಸವಾಗಿಯೇ ಕಂಡುಬರುತ್ತದೆ. ವಾಸವನು ಚಿತ್ರಪಟದಲ್ಲಿ ಕಂಡ ಹೆಣ್ಣನ್ನು ನೋಡಿ, ಈಕೆ ನನ್ನ ಮನದನ್ನೆ, ಇದು ನನ್ನ ವಿಮಾನ, ಈಗ ಎಲ್ಲಿ ಜನ್ಮತಳೆದಿರುವಳೋ ತಿಳಿಯದೆಂದು ಹೇಳಿ ಅನೇಕ ರೀತಿಯ ಶೈಲೂಷ ವೇಷವನ್ನು ತಾಳಿದವನಾದನು. ದುರ್ದಂತನು ವಾಸವನನ್ನು ಉಪಚರಿಸುವವನಂತೆ ನಟಿಸುತ್ತಿದ್ದನು. ಪಂಡಿತೆ, ಇಂತಹ ಪ್ರಸಂಗಗಳನ್ನು ಊಹಿಸಿಯೇ ಶ್ರೀಮತಿಯಿಂದ ಕೆಲವು ರಹಸ್ಯ ಸಂಗತಿಗಳನ್ನು ಕೇಳಿ ತಿಳಿದುಕೊಂಡು ಬಂದಿದ್ದಳೆನಿಸುತ್ತದೆ. ಪಂಡಿತೆಯು ಕೇಳಿದ ರಹಸ್ಯಗಳನ್ನು ತಿಳಿಸದವರಾಗಿ ವಾಸವದುರ್ದಂತರು ಓಡಿಹೋದರು. ಪೂರ್ವಪುರಾಣದಲ್ಲಿ ಈ ಸಂದರ್ಭದಲ್ಲಿ ವಾಸವ ದುರ್ದಂತರಿಬ್ಬರೂ ಆ ಚಿತ್ರಪಟದಲ್ಲಿರುವ ಹೆಣ್ಣನ್ನು ನೋಡಿ ಈಕೆಗೆ ತಾವು ಪೂರ್ವಜನ್ಮ ದಲ್ಲಿ ಪತಿಗಳಾಗಿದ್ದರೆಂದು ಹೇಳಿಕೊಳ್ಳುವ ಪ್ರಸಂಗವನ್ನು ಪಂಪನು ಔಚಿತ್ಯಪೂರ್ಣವಾಗಿ ವ್ಯತ್ಯಾಸಗೊಳಿಸಿಕೊಂಡಿರುವುದನ್ನು ಗಮನಿಸಬಹುದಾಗಿದೆ. ಇಬ್ಬರೂ ಒಟ್ಟಾರೆ ಹೀಗೆ ಹೇಳಿದರೆ ಪಂಡಿತೆಗೆ ಅನುಮಾನ ಬರುವುದಂತೂ ಸಾಧ್ಯ. ಆದ್ದರಿಂದ ಪಂಪನು ಇಲ್ಲಿ ವಾಸವನೊಬ್ಬನಿಂದ ಹಾಗೆ ಹೇಳಿಸಿ, ದುರ್ದಂತನಿಂದ ಶೈತ್ಯೋಪಚಾರ ಕ್ರಿಯೆ ನಡೆಯು ವಂತೆ ಮಾಡಿದ್ದಾನೆ. ಪಂಪನ ಸೂಕ್ಷ್ಮದೃಷ್ಟಿಗೆ ಇದು ಉದಾಹರಣೆಯಾಗಿದೆ. ಪಂಡಿತೆ ಇಂತಹ ಕಪಟಿಗಳನ್ನು ಕಂಡು ಮತ್ತೂ ರೊಚ್ಚಿಗೆದ್ದು "ಎಮ್ಮ ಪಾಸಿದ ಚಿತ್ರಪಟಮೆಂಬ ಬಲೆಯೊಳ್ ನಿಮ್ಮಂತಪ್ಪ ಬೆಳ್ಮಂಗಗಳಾಗಳೆ ತೊಡರ್ಗುಮುಸಿರದೆ ಬಿಜಯಂಗೆಯ್ಯಿಂ" ಎಂದು ಸಿಡುಕುತ್ತಾಳೆ. ಪೂರ್ವಪುರಾಣದಲ್ಲಿ ಇಂತಹ ವಿಷಯಗಳು ಬಂದಿಲ್ಲ. ಪಂಡಿತೆ ಇಂತಹ ಸಂದರ್ಭದಲ್ಲಿ ಆವೇಶಭರಿತೆಯಾಗುವ ಚಿತ್ರಣವನ್ನು ಪಂಪನು ಸಹಜರೀತಿ ಯಲ್ಲಿ ನೀಡಿದ್ದಾನೆ.

ಗಂಧಲಂಪಟತೆಯಿಂದ ದುಂಬಿವಿಂಡುಗಳು ಕಮಲದ ಮೇಲೆ ಎರಗುವಂತೆ ಚಿತ್ರ ಪಟಕ್ಕೆ ಜನರ 'ದಿಟ್ಟಿ ಮನಮೆಂಬಿವು ತೊಟ್ಟನೆ ನಟ್ಟಿತು'. ರೂಪಾಸಕ್ತರಾದ ರಸಿಕರ ಎದೆಯನ್ನು ಭ್ರಾಂತಿಗೆಡೆಮಾಡುತ್ತಿತ್ತು. ಇಂತಹ ಸಂದರ್ಭದಲ್ಲಿ ಪಂಡಿತೆ ಆತ್ಮವಿಶ್ವಾಸ ವನ್ನು ಹೊತ್ತು ಯಾರನ್ನು ಅರಸುವೆನೆಂದು ಬಂದಿದ್ದಳೋ ಆ ರಾಜಕುಮಾರನ ಆಗಮನ ವಾಯಿತು. ವಾಹನವನ್ನು ದೂರದಲ್ಲಿಯೇ ನಿಲ್ಲಿಸಿ ಪರಿಜನಸಮೇತನಾದ ಮನ್ಮಥರೂಪಿ ವಜ್ರಜಂಘನು ಬಂದನು. ಜಿನಸೇವೆಯ ನಂತರ ಜಿನಭವನದಿಂದ ಹಿಂದಿರುಗುವಾಗ ಜನಸಂದಣಿಯನ್ನು ನೋಡಿದನು. ಕುತೂಹಲಭರಿತನಾಗಿ ಏನಿದೆಂದು ನೋಡಿದಾಗ ಆತನ ಕಣ್ಣಿಗೆ ಚಿತ್ರಪಟವು ಕಾಣಿಸಿತು. ಚಿತ್ರಪಟದ ವಿನ್ಯಾಸ, ವರ್ಣಾಕ್ರಮ ಮೊದಲಾದುವುಗಳ ಬಗೆಗೆ ಆತನ ಮನವು ಮೊದಲು ಹರಿಯಿತು (ಇತರ ಸಾಮಾನ್ಯ ವ್ಯಕ್ತಿಗಳಂತೆ 'ಯುವ ಮೃಗ'ವಾಗಲಿಲ್ಲ ವಜ್ರಜಂಘ). ಆ ಚಿತ್ರಪಟವನ್ನು ನೋಡನೋಡುತ್ತಿದ್ದಂತೆ ಆತನಿಗೆ ಪೂರ್ವಜನ್ಮದ ಸುರಲೋಕವೈಭವದ ನೆನಪಿನ ಸುರುಳಿ ಬಿಚ್ಚುತ್ತಾ ಹೋಯಿತು. ಇದು ವರೆಗೆ ಚಿತ್ರದ ಕಲಾಪೂರ್ಣತೆಗೆ ಮಾರುಹೋಗಿದ್ದ ವಜ್ರಜಂಘ, ಅದು ತನಗೇ ಸಂಬಂಧಿ ಸಿದುದೆಂದು ತಿಳಿದ ನಂತರ ಮತ್ತಷ್ಟು ಮೈಮರೆತು ಅಲ್ಲಿಯ ಒಂದೊಂದು ಅಂಶವನ್ನೂ ವಿವರಿಸಿ ತಲ್ಲೀನನಾಗಿ, ತನ್ನ ಕಾಂತೆಯ ಸ್ಮರಣೆಯಲ್ಲಿ ಲೀನನಾದನು. ಈ ಭಾಗದಲ್ಲಿ

ಪಂಪನು ಲಲಿತಾಂಗಭವದ ಲಲಿತ ಮಾಧುರ್ಯದ ಪ್ರಣಯ ಪ್ರಸಂಗಗಳ ಹಲವಾರು ಘಟನಾವಳಿಗಳ ಹಿನ್ನೋಟವನ್ನು ರೋಚಕವಾಗಿ ಓದುಗರ ಮುಂದಿಟ್ಟಿದ್ದಾನೆ. ಕೆಲವು ಪ್ರಸಂಗಗಳ ವರ್ಣನೆ ಹಿತಮಿತವಾದ ಲಾಲಿತ್ಯವನ್ನೊಳಗೊಂಡು ಮನಮೋಹಕವಾಗಿ ಕಂಡುಬರುತ್ತದೆ. ಉದಾಹರಣೆಗೆ, ಅಂತರಂಗದಲ್ಲಿ ಪ್ರೇಮವನ್ನು ತುಂಬಿಕೊಂಡು ಬಾಹ್ಯದಲ್ಲಿ ಕಪಟದ ಈರ್ಷೆಯನ್ನು ತೋರುವ ರೀತಿ; ರತ್ನಮಯವಾದ ಕಾಲ್ಕಡಗದ ಝೇಂಕಾರ ನಾದದಿಂದ ಕೂಡಿ ಮನೋಹರವಾದ ಕಾಲಿನಿಂದ ಸ್ವಯಂಪ್ರಭೆಯು ಲಲಿತಾಂಗನನ್ನು ಕಾಲಿನಿಂದ ನೂಕುವ ಪ್ರಣಯಲೀಲೆಯ ವೈಖರಿ; ಕೋಪವನ್ನು ನಟಿಸಿದ ಲಲಿತಾಂಗನನ್ನು ಸಮಾಧಾನ ಪಡಿಸಲು ಸ್ವಯಂಪ್ರಭೆ ನಮ್ರಳಾಗಿ ತನ್ನ ಮಸ್ತಕವನ್ನು ಲಲಿತಾಂಗನ ಪಾದಗಳ ಮೇಲಿರಿಸಿದ ಲೀಲೆ; ಸ್ವಯಂಪ್ರಭೆಯು ಪ್ರಣಯಕೋಪದಲ್ಲಿದ್ದಾಗ ಲಲಿತಾಂಗನು ಆಕೆಯ ಕಾಲುಗಳಿಗೆ ಬಿದ್ದಾಗ ಅವಳು ನೈದಿಲೆಯ ಪುಷ್ಪದಿಂದ ಮೃದುವಾಗಿ ಹೊಡೆದ ರೋಚಕ ಪ್ರಸಂಗ; ಕೋಪಗೊಂಡ ನಲ್ಲೆಯ ಪಾದಕಮಲಗಳನ್ನು ತಲೆಯ ಮೇಲೆ ಹೊತ್ತ ಲಲಿತಾಂಗನು 'ನಲ್ಲಳೇ ತಿಳಿಯೆನ್ನಲು' ಸ್ವಯಂಪ್ರಭೆಯು 'ನಲ್ಲಳೆನ್ನ ಪೆಸರಲ್ತು, ಆ ಪೆಸರಾಕೆಯುಳ್ಳೊಡೆ ತಿಳಿಪು ಎಮಗೆ' ಎಂದು ನಸುಮುನಿದು ನುಡಿದಾಗ 'ಆ ಪೆಸರ್ಗೆ ನೀನಿರೆ ನೋಂತವಳಾವಳು?' ಎಂದು ಅಮರ್ದಪ್ಪಿದ ಲಲಿತಾಂಗನ ರೀತಿ, ಅಲ್ಲಿಯ ನಾಟಕೀಯ ಸನ್ನಿವೇಶ–ಇವುಗಳು ಪಂಪನ ಪ್ರತಿಭೆಯ ಪ್ರಜ್ವಲತೆಗೆ ಸಾಕ್ಷಿಯಾಗಿ ನಿಲ್ಲುತ್ತವೆ. ವಜ್ರಜಂಘನು ವರ್ಣಿಸುವ ಚಿತ್ರಪಟದ ರಹಸ್ಯಮಯ ಸನ್ನಿವೇಶಗಳು ಅಸಾಧಾರಣ ಆಕರ್ಷಣೆಯಿಂದೊಡಗೂಡಿ ಪ್ರಣಯಗೀತೆಯ ಮಾರ್ದವತೆಯನ್ನು ಧ್ವನಿಸುತ್ತವೆ. ಪ್ರಣಯ ಪ್ರಸಂಗಗಳ ಸೊಬಗಿನ ಸೋನೆ ಇಲ್ಲಿ ಸೊಗಯಿಸಿದೆ. ಚಿತ್ರಪಟವನ್ನು ನೋಡುತ್ತಾ ನೆನಪು ಅಪ್ಪಿಕೊಳ್ಳುತ್ತಿದ್ದಂತೆ ಮನ್ಮಥನ ಹಿಡಿತಕ್ಕೆ ಸಿಲುಕಿದ ವಜ್ರಜಂಘ ಮೂರ್ಛಿತನಾದನು. ಶೈತ್ಯೋಪಚಾರಗಳಿಂದ ಎಚ್ಚರಗೊಂಡ ವಜ್ರಜಂಘನಿಗೆ ಪಂಡಿತೆಯಿಂದ ನಿಜಸ್ಥಿತಿಯು ಅರಿವಾದಾಗ ಶಾಂತವಾಗಿ, ಪಂಡಿತೆಗೆ ತಾನೊಂದು ಚಿತ್ರಪಟವನ್ನು ಬರೆದುಕೊಟ್ಟನು. ಈ ವೃತ್ತಾಂತಗಳೆಲ್ಲವನ್ನೂ ಕೇಳಿದ ಶ್ರೀಮತಿ, ಆತನು ಬರೆದುಕೊಟ್ಟ ಚಿತ್ರಪಟವನ್ನು ಬಿಚ್ಚಿ ನೋಡಿ,

> ಅವಿನಾಣಮನಿತುಮೆರ್ದೆವುಗೆ | ಕಿವಿವುಗೆ ಪಂಡಿತೆಗೆ ನುಡಿದ ನಲ್ಲನ ನುಡಿ ತ
> ಳ್ತವಿರಳರೋಮಾಂಚದೆ ಮಾ | ಧವಸಮಯದೊಳಲರ್ದ ಚೂತಲತೆಯನೆ ಪೋಲ್ತಳ್
> (iv-೨೩)

ಎಂದು ಆಕೆಗಾದ ಪ್ರತಿಕ್ರಿಯೆಯನ್ನು ಸೂಕ್ಷ್ಮವಾಗಿ ವಿವರಿಸಿದ್ದಾನೆ.

ಪೂರ್ವಪುರಾಣದಲ್ಲಿ ಬರುವ ವರ್ಣನಾವಿಧಾನವನ್ನೇ ಪಂಪನು ಅನುಸರಿಸಿದ್ದರೂ, ಆತನ ಕಲಾನೈಪುಣ್ಯತೆಯ ಕುಸುರಿ ಕೆಲಸದಲ್ಲಿ ವರ್ಣನೆ ಹೆಚ್ಚು ಆಕರ್ಷಣೀಯವಾಗಿ ಕಂಡುಬರುತ್ತದೆ. ಪೂರ್ವಪುರಾಣದಲ್ಲಿ ವಜ್ರಜಂಘನು ಜಿನಮಂದಿರವನ್ನು ಪ್ರದಕ್ಷಿಣೆ ಹಾಕಿದವನೇ ಪಟ್ಟಶಾಲೆಯನ್ನು ನೇರವಾಗಿ ಪ್ರವೇಶಿಸಿ ಚಿತ್ರಪಟವನ್ನು ನೋಡುತ್ತಾನೆ (vii ೧೧೭-೧೧೮). ಇಲ್ಲಿಯ ಒಂದು ರೀತಿಯ ಅವಾಸ್ತವಿಕೆಯನ್ನು ಪರಿಹರಿಸಲೆಂಬಂತೆ ಪಂಪನು ಅಲ್ಲಿ ಜನ ನೆರೆದುದರಿಂದ ವಿಸ್ಮಯಗೊಂಡು ಅದೇನೆಂದು ನೋಡಲು

ವಜ್ರಜಂಘನು ಅಲ್ಲಿಗೆ ಹೋಗಿ ಚಿತ್ರಪಟವನ್ನು ನೋಡಿದ ಸಂದರ್ಭವನ್ನು ಕಲ್ಪಿಸಿದ್ದಾನೆ (ಅಧ್ಯಾಯ iv). ಪೂರ್ವಪುರಾಣದಲ್ಲಿ ವಜ್ರಜಂಘನ ಮೂರ್ಛಾವಸ್ಥೆಯ ವೃತ್ತಾಂತ, ಆತುರಗೊಂಡಂತೆ ಚಿತ್ರಪಟವನ್ನು ನೋಡಿದ ಕೆಲವೇ ಗಳಿಗೆಯಲ್ಲುಂಟಾದರೆ (vii-೧೧೮), ಪಂಪನಲ್ಲಿ ವಜ್ರಜಂಘನ ಹೃದಯ ಹಂತಹಂತವಾಗಿ ತನ್ನ ಪೂರ್ವಭವದ ಲೀಲಾವಿನೋದವನ್ನು ನೆನೆದು, ಕೊನೆಗೆ ಆತನು ಬಸವಳಿದು ಮೂರ್ಛಿತನಾಗುವ ಪ್ರಸಂಗ ಅಲ್ಲಿಗಿಂತ ಇಲ್ಲಿ ಹೆಚ್ಚು ಸಮಂಜಸವಾಗಿ ಕಾಣುತ್ತದೆ (iv- ೧೫). ಶ್ರೀಮತಿ ಬರೆದ ಚಿತ್ರಪಟದ ವೈಖರಿಯನ್ನು ವರ್ಣಿಸುವಾಗಲೂ ಪಂಪನು ಪೂರ್ವಪುರಾಣಕ್ಕೆ ಹೆಚ್ಚು ಋಣಿಯಾಗಿದ್ದಾನೆ. ವಜ್ರಜಂಘನ ದುಃಖವನ್ನು ನೋಡಿ ಚಿತ್ರಪಟವೂ ಶೋಕಗೊಂಡಂ ತಾಯಿತೆಂದು ಪೂರ್ವಪುರಾಣಕಾರರು ಬಣ್ಣಿಸಿದ್ದರೆ, ಪಂಪನು ಅದೇ ಭಾವವನ್ನು ಈ ರೀತಿಯಾಗಿ ಮಾರ್ದನಿಸಿದ್ದಾನೆ : 'ಇದು ನೋಡುವಂತುಸಿರ್ವಂತಿರ್ದುದು' ಎಂದು ಹೇಳುವಲ್ಲಿ ಅಲ್ಲಿಯ ರಸಭಾವ ಸೌಂದರ್ಯದ ವೈಖರಿಯನ್ನು ವರ್ಣಿಸುವ ವಿಧಾನಗಳಲ್ಲಿ ಪೂರ್ವ ಪುರಾಣವನ್ನು ಪಂಪನು ಶ್ರದ್ಧಾಪೂರ್ಣವಾಗಿ ಭಾವಸ್ನಿಗ್ಧಗೊಳಿಸಿದ್ದಾನೆ.

ಪೂರ್ವಪುರಾಣದಲ್ಲಿ ಚೈತ್ಯಾಲಯದ ವರ್ಣನೆ ಸವಿಸ್ತಾರವಾಗಿ ಚಿತ್ರಗತ ಶೈಲಿಯಲ್ಲಿ ಬಂದಿದೆ. ಪಂಪನು ಕಥೆಯ ಓಟಕ್ಕೆ ಅದು ತಡೆಯಾಗಬಾರದೆಂಬ ದೃಷ್ಟಿಯಿಂದ ಕೈಬಿಟ್ಟಿರು ವಂತೆ ತೋರುತ್ತದೆ.

## ಉತ್ತರಕಾಲೀನ ಕಾವ್ಯಗಳು

**ಚಾವುಂಡರಾಯಪುರಾಣ :** ಪೂರ್ವಪುರಾಣದ ಅನುಕರಣೆಯು ಇಲ್ಲಿ ಸಂಕ್ಷಿಪ್ತವಾಗಿ ಮೂಡಿ ಬಂದಿದೆ. ವಾಸವ ದುರ್ದಂತರಿಬ್ಬರೂ ಚಿತ್ರಪಟವನ್ನು ನೋಡಿ ಮೂರ್ಛೆ ಹೋಗುವ ಪ್ರಸಂಗ ಹಾಗೂ ವಜ್ರಜಂಘನು ಚಿತ್ರಪಟವನ್ನು ನೋಡುತ್ತಿದ್ದಂತೆ ಮೂರ್ಛೆ ಹೋಗುವ ಪ್ರಸಂಗಗಳು ಇದಕ್ಕೆ ಉದಾಹರಣೆಗಳಾಗಿವೆ. ಅಲ್ಲಿಯ ವರ್ಣನಾ ವಿವರಗಳಿಗೆ ಇಲ್ಲಿ ಸ್ಥಾನವಿಲ್ಲ.

**ಹಸ್ತಿಮಲ್ಲನ ಪೂರ್ವಪುರಾಣ :** ಹಸ್ತಿಮಲ್ಲನು ಈ ಪ್ರಸಂಗದಲ್ಲಿ ಆದಿಪುರಾಣವನ್ನು ನೇರವಾಗಿ ಅನುಸರಿಸಿದಂತಿದೆ. ಅಲ್ಲಿಯ ವೃತ್ತಾಂತಗಳು ಸುಂದರ ಗದ್ಯರೂಪದಲ್ಲಿ ಮೈದಳೆದು ಬಂದಿವೆ. ಉದಾಹರಣೆಗೆ ವಾಸವ ದುರ್ದಂತರನ್ನು ಕುರಿತು ಪಂಡಿತೆ ಆಡುವ ಮಾತುಗಳನ್ನು ಪರಿಶೀಲಿಸಬಹುದಾಗಿವೆ.

> ಎಮ್ಮ ಪಾಸಿದಚಿತ್ರಪಟಮೆಂಬ ಬಲೆಯೊಳ್ ನಿಮ್ಮಂತಪ್ಪ ಬೆಳ್ಮಿಗಂಗಳಾಗಳೆ ತೊಡರ್ಗು ಮುಸಿರದೆ ಬಿಜಯಗೆಯ್ಯಿಂ ಎಂದವರಂ ನಕ್ಕು ಕಳೆಯೆ, (ಆದಿಪು., ಅಧ್ಯಾಯ iv)

> ನಮ್ಮ ಪಟಮೆಂಬ ಬಲೆಯೊಳ್ ನಿಮ್ಮಂತಪ್ಪ ಮೃಗಂಗಳ್ಸಿಕ್ಕುವದೇನರಿದೆಂದು ಸುಮ್ಮನೆ ನುಡಿಯದೆ ಬಿಜಯಂ ಮಾಡಿಂ ಎಂದವರಂ ಹಾಸ್ಯಂಗೆಯ್ಯೆ (ಹಪೂರ್ವ. ಪುಟ ೨೬)

ಚಿತ್ರಪಟವನ್ನು ನೋಡಿದಾಗ ವಜ್ರಜಂಘನ ಸ್ಥಿತಿಯನ್ನು ವರ್ಣಿಸುತ್ತಾ ಪಂಪನು 'ಇರುಳ್ಕಂಡ ಕನಸಂ ಮಱುದಿವಸಂ ನೆನೆವಂತೆ' ಆಯಿತು ಎಂದಿದ್ದಾನೆ. (ಆದಿಪು., ಅಧ್ಯಾಯ iv) 'ಇರುಳ್ಕಂಡ ಕನಸಂ ಪಗಲೆಳ್ಚರುವಂತೆಚ್ಚಿತ್ತು'(ಹಪೂರ್ವ. ಪುಟ ೨೬) ಎಂದು ಹಸ್ತಿಮಲ್ಲನು ಹೇಳಿದ್ದಾನೆ. ಹೀಗೆ ಹಲವೆಡೆಗಳಲ್ಲಿ ಕವಿಯ ಆದಿಪುರಾಣದ

ಅನುಕರಣೆಯನ್ನು ಗುರುತಿಸಬಹುದಾಗಿದೆ.

**ಪುಣ್ಯಾಸ್ರವದ ಆದೀಶ್ವರರ ಕಥೆ** : ಗಗನ ವೀಧಿಯಲ್ಲಿ ಹೋಗುತ್ತಿದ್ದ ವಾಸವ ದುರ್ದಂತರು ಜಿನಾಲಯಕ್ಕೆ ಬಂದು, ಚಿತ್ರಪಟವನ್ನು ನೋಡಿದರು. ವಾಸವನು ಮಾಯಾ ಮೂರ್ಛಿತನಾಗಿ, ಸ್ವಲ್ಪ ಹೊತ್ತಿನ ನಂತರ ಎಚ್ಚರಗೊಂಡು, ಈಕೆ ತನ್ನ ಪೂರ್ವಜನ್ಮದ ವಲ್ಲಭೆಯೆಂದು ನುಡಿದನು. ದುರ್ದಂತನು ಶೈತ್ಯೋಪಚಾರ ಮಾಡಿ ಎಚ್ಚರಿಸುವ ವಿಷಯ ಇಲ್ಲಿ ಬಂದಿಲ್ಲ.

ವಜ್ರಜಂಘನು ಜಾತಿಸ್ಮರನಾಗಿ ಮೂರ್ಛೆಗೊಂಡು ಎಚ್ಚೆತ್ತು ಪಂಡಿತೆಗೆ ಅಲ್ಲಿಯ ಗುಪ್ತ ವಿಷಯಗಳನ್ನು ಕಿವಿಯಲ್ಲಿ ಹೇಳಿದನು. ಗುಟ್ಟಿನಲ್ಲಿ ಅರಿಕೆ ಮಾಡುವ ವಿಧಾನ ಉಳಿದ ಕಾವ್ಯಗಳಲ್ಲಿ ಕಂಡುಬರುವುದಿಲ್ಲ.

ಪಂಡಿತೆಯ ಹೃದಯ ರತ್ನ ಕ | ರಂಡಕದೊಳ್ ಕನ್ನೆ ಬಯ್ತ ಕುಱುಪಿನ ತೊಡವಂ
ಪಂಡಿತೆಯ ಕಿವಿಗೆ ನವಮಣಿ | ಮಂಡನಮಂ ಮಾಡಿದಂ ಕುಮಾರಕನಾಗಳ್ (ix- ೪೮)

ಎಂದು ಚಾತುರ್ಯದಿಂದ ಗುಟ್ಟನ್ನು ಗುಟ್ಟಾಗಿಯೇ ಇರಿಸಿದ್ದಾನೆ.

**ಪುರುದೇವ ಚರಿತ** : ಇಲ್ಲಿ ಬರುವ ಈ ಪ್ರಸಂಗವು ಹೆಚ್ಚು ಚಾವುಂಡರಾಯಪುರಾಣಕ್ಕೆ ಹೋಲುತ್ತದೆ. ಅಲ್ಲದೆ ಕೆಲವು ವ್ಯತ್ಯಾಸಗಳಿಂದಲೂ ಕೂಡಿದೆ. ಕವಿ ವಾಸವದುರ್ದಂತ ರನ್ನು ಮುಗ್ಧರೆಂದು ಕರೆದಿದ್ದಾನೆ. ಚಾವುಂಡರಾಯಪುರಾಣದಲ್ಲಿ ದುರ್ವಿದಗ್ಧರೆನ್ನಲಾಗಿದೆ. ಇಲ್ಲಿ ಅವರ ಕಪಟತೆಯ ವೃತ್ತಾಂತವಿಲ್ಲ. ಚಿತ್ರಪಟವನ್ನು ನೋಡಿ ಅದರ ಬಗೆಗೆ ಕೇಳಿ ಆಸಕ್ತರಾಗಿ ಮೂರ್ಛೆ ಹೋದರು ಎಂಬ ವಿಷಯವನ್ನು ಬಿಟ್ಟರೆ ಉಳಿದಂತೆ ಚಾವುಂಡ ರಾಯಪುರಾಣವನ್ನು ಅನುಕರಿಸುತ್ತದೆ. ಅಲ್ಲಲ್ಲಿ ಚಾವುಂಡರಾಯಪುರಾಣದಲ್ಲಿ ಬರುವ ಗದ್ಯಭಾಗವನ್ನು ಕವಿ ಸಾಂಗತ್ಯಕ್ಕೆ ಅಳವಡಿಸಿರುವಂತೆ ತೋರುತ್ತದೆ. ಉದಾಹರಣೆಗೆ :

ಕೇಶವ ದುರ್ಮುಖರೆಂಬರ ಮಕ್ಕಳು | ವಾಸವದುರ್ದಂತರವರು
ಆಸಕ್ತರಾಗಿಮೆಲ್ಲಿಯವೆಂದು ಬೆಸಗೊಂಡು | ವ್ಯಾಸದಿಂಮೂರ್ಛಿತರಾಗಿ
ಮರವಿಂದೆಚ್ಚರಿಸಿದ ಮೇಲೆ ಬೆಸಗೊಂಡೆ | ಬರೆಯದೆಯಿರ್ದ ಬಿನ್ನಣವ
ಅರಿಯದಿರಲು ಬಂದ ಬಟ್ಟೆಯೊಳ್ ಪೋಗೆಂದು | ಪರಿಭವಿಸಿದೆನಾನವರ
ಬಂದೊರ್ವ ರಾಜಕುವರ ಸರ್ವಜ್ಞಗೆ | ವಂದನೆ ಭಕ್ತಿಯ ಮಾಡಿ
ನಿಂದು ಪಟವಕಂಡು ಮೂರ್ಛೆಯೊಳಿರಲಾನು | ಬಂದು ಶೀತಳದಿನೆಚ್ಚರಿಸಿ

ಬರೆತಂದರಾರೆನಲಾನೆನಲದರೊಳು | ಬರೆಯಿರ್ದಾ ಬಿನ್ನಣವ
ಅರಿಪಲಾತನೆ ನಿನ್ನ ಪುರುಷನೆಂದವನೊ | ಳರಿಸಿದೆ ನಿನ್ನ ವಿಸ್ತರವ

(ಪುರುಚ. ii–೧೧೧-೧೧೪)

ಕೇಶವ ದುರ್ಮುಖರ ಮಕ್ಕಳ ವಾಸವ ದುರ್ದಂತರೆಂಬಿರ್ವರ್ ದುರ್ವಿದಗ್ಧರವಂ ಕಂಡಿದೆಲ್ಲಮೆಮ್ಮ ಪ್ರಪಂಚಮೆಂದು ಪುಸಿಯೆನೆ ಮೂರ್ಛೆವೋದನೆಲ್ಟಿಱಿಸಿಯಲ್ಲಿಯ ವಿನ್ನಾಣಂಗಳ ಬೆಸೆಗೊಂಡೊಡವರಱಿಯದಿರ್ದೊಡೆ ಉಸಿರದೆ ಬಂದ ಬಟ್ಟೆಯಿಂ ಬಿಜ ಯಂಗೈಯಿಮೆಂದು ನಿರಾಕರಿಸಿ ಕಳೆದನ್ನೆಗಮೊರ್ವ ರಾಜಕುಮಾರಂ ಬಂದು ದೇವರಂ ವಂದಿಸಿ ಸಿದ್ಧಶೇಷಮಂಕೊಂಡು ಪೊಱಮಟ್ಟು ಪಟಮಾ ನಿಂದು ನೋಡಿ ಸಿದ್ಧಶೇಷೆಯಂ

ಕೊಂಡು ಪೊಱಮಟ್ಟು ಪಟಮಂ ನಿಂದು ನೋಡಿ ಪೂರ್ವಭವಾನುಸ್ಮರಣಮಾಗೆ ಮೂರ್ಛಾನುಗತನಾಗಿ ಶೀತಲ ಕ್ರಿಯೆಗಳಿನೆಚ್ಚತ್ತಿದ ನಿಲ್ಲಿಗಾರ್ತಂದರೆಂಬುದುಮಾಂ ತಂದೆ ನೆಂದೊಡೆನಗೆ ನಿನ್ನ ಬರೆಯದೆ ಬಂಚಿಸಿದ ವಿನ್ನಾಣಂಗಳನಾತನಱಿಪಿದೊಡಾಂ ನಿನ್ನ ವಲ್ಲಭಂ ಲಲಿತಾಂಗನಪ್ಪುದುಂ ತಪ್ಪಿಲ್ಲದುದಱಿಂದಾತನನೆಂದೆಂ.

**ಆದಿಪರಮೇಶ್ವರನ ಯಕ್ಷಗಾನ** : ಚಿತ್ರಪಟದ ಪ್ರಸಂಗದಲ್ಲಿ ಕವಿ, ಆದಿಪುರಾಣವನ್ನು ಅನುಸರಿಸುವ ಹಸ್ತಿಮಲ್ಲನ ಅನುವರ್ತಿಯಾಗಿದ್ದಾನೆ. ಅಲ್ಲಿಯ ಸಂಗ್ರಾಹಕತೆ, ಪದದ ಧಾಟಿ ನಿಚ್ಚಳವಾಗಿ ಇಲ್ಲಿಯೂ ಕಂಡುಬರುತ್ತದೆ. ಅಲ್ಲಿಯ ವಚನಭಾಗವನ್ನು ಇಲ್ಲಿ ಕೆಲವೆಡೆ ಪದ್ಯಭಾಗಕ್ಕೆ ಇಳಿಸಿದ್ದಾನೆ. ಮೂಲಕ್ಕೆ ಧಕ್ಕೆಯಾಗದಂತೆ ಭಾವವನ್ನು ಸುಂದರ ಗೊಳಿಸಿದ್ದಾನೆ.

> 'ಆವೇಳೆಯೊಳೊರ್ವಂ ಕಾಮಸನ್ನಿಭಾಕಾರಂ ರಾಜಕುಮಾರಂ ಜಿನಾಲಯಮಮಂ ಕಂಡು ದೂರದೊಳ್ ವಾಹನದಿಂದಿಳಿದು ಬಂದು ಬಸದಿಯಂ ಮೂಮೆ ಬಲಗೊಂಡು ದೇವೇಂದ್ರ ಮುನೀಂದ್ರವೃಂದವಂದಿತಪಾದಾರವಿಂದನಂ ಜಿನೇಂದ್ರನಂ ಸ್ತುತಿಶತಸಹಸ್ರಂಗಳಿಂ ಸ್ತುತಿಯಿಸಿ ಜಿನಪದವಿಯ ವ್ಯಕ್ತಿಗೆ ಸಂಚಕಾರಂಗೊಂಬಂತೆ ಸಿದ್ಧ ಸೇಷೆಯಂ ಕೊಂಡು ಜಿನಾಲಯದಿಂ ಪೊರಮಡುವಾಗಳ್, ಭೂಚರ ಖೇಚರ ತಂಡಂ ಕಂಡಿವರೇನಂ ಮುತ್ತಿ ನೋಡುತ್ತಿರ್ದಪರೇನಾನುಂ ಚೋದ್ಯಮುಂಟಕ್ಕುಮೆಂದಲ್ಲಿಗೆ ವಂದು ಪಟದ ಚಿತ್ರಮನೆ ಮೊದಲೊರ್ಮೆ ಭಾವಿಸಿ ನೋಡಿಯಿಂತು ಬರೆಯಲ್ ಬ್ರಹ್ಮಂಗಂ ತೀರದೆಂದು ಮತ್ತೀ ವೃತ್ತಾಂತಮೆಲ್ಲಿಯಾನುಂ ಕಂಡಂತಿರ್ದುದೆಂದು ಇರುಳ್ಕಂಡ ಕನಸಂ ಪಗಲೆಳ್ಚರುವಂತೆ ಳ್ಚತ್ತು' (ಹಪೂರ್ವ. ಪರ್ವ v).

ಬೊಮ್ಮಣ್ಣನ ಆದಿಪರಮೇಶ್ವರನ ಯಕ್ಷಗಾನದಲ್ಲಿ ಮೇಲಿನ ಭಾಗವು ಅಲ್ಲಲ್ಲಿ ಅಲ್ಪಸ್ವಲ್ಪ ವ್ಯತ್ಯಾಸಗಳನ್ನು ಪಡೆದು ಪದ್ಯದ ಧಾಟಿಯಲ್ಲಿ ಹೀಗೆ ಬಂದಿದೆ.

> ಮಾರಸನ್ನಿಭನೊರ್ವಕಾರಣಪುರುಷನು
> ದೂರದಿಂ ವಾಹನಮಿಳಿದಲ್ಲಿಗೈದಿ
> ಅರಹನಾಲಯವನು ಬಲಗೊಂಡು ಲಘು ಭಕ್ತಿ
> ಭರದೊಳೆರಗಿ ಸ್ತುತಿಗೈದು ಕೈಮುಗಿದು
> ದೇವೇಂದ್ರವೃಂದ ವಂದಿತ ಭವ್ಯಬಾಂಧವ
> ದೇವರದೇವ ರಕ್ಷಿಪುದೆಂದು ಸ್ತುತಿಸಿ
> ಆ ಚತುರನು ಪರಮಡುವಾಗ ಪಟವನು
> ಭೂಚರ ಖೇಚರರೆಲ್ಲರವಧರಿಸಿ
> ಆವ ಚೋದ್ಯಮ ಕಂಡು ಮೂವಳಸಿಹರೆಂದು
> ಭಾವಜರೂಪನಲ್ಲಿಗೆ ತೆರಳ್ಳೆದಿ
> ಪಟಮನೀಕ್ಷಿಸಿ ತಲೆದೂಗಿ ವಿಚಿತ್ರಮಾ
> ರಚಿಸಲು ಬ್ರಹ್ಮೇಂದ್ರಗಸದಳಮೆಂದು
> ಆಶ್ಚರ್ಯವಡುತಮಿರುಳು ಕಂಡಸ್ವಪ್ನವಾ
> ಎಚ್ಚತ್ತುಮರಿವಂತೆ ತಿಳಿದನಾ ಕುವರ (ಪರಿಚ್ಛೇದ iii)

ಹೀಗೆ ಈ ಸಂದರ್ಭದ ಉದ್ದಕ್ಕೂ ಬೊಮ್ಮಣ್ಣನು ಹಸ್ತಿಮಲ್ಲನಿಗೆ ಋಣಿಯಾಗಿರು

ವುದು ಸುಸ್ಪಷ್ಟವಾಗಿದೆ. ಆದಿಪುರಾಣ, ಹಸ್ತಿಮಲ್ಲನ ಪೂರ್ವಪುರಾಣಗಳಲ್ಲಿ ಬರುವ ಅಲಂಕಾರಾಭಿವ್ಯಕ್ತಿಯು ಇಲ್ಲಿಯೂ ತಲೆದೋರಿದೆ.

## ವಜ್ರಜಂಘ-ಶ್ರೀಮತಿಯರ ವಿವಾಹ

**ಆದಿಪುರಾಣ-ಪೂರ್ವಪುರಾಣ :** ವಜ್ರಬಾಹು ರಾಜ. ಆತನರಸಿ ವಸುಮತಿ. ಅವರ ಸುಪುತ್ರ ವಜ್ರಜಂಘ. ಇವರೆಲ್ಲರೂ ವಜ್ರದಂತನ ಅರಮನೆಗೆ ಆಗಮಿಸಿದರು. ಆದರೋಪಚಾರಗಳಾದವು. ನಿನ್ನ ಮನೋರಥವೇನು ಬೇಡಿಕೊ ಎಂದು ವಜ್ರದಂತನು ಕೇಳಿದಾಗ, 'ನಿನ್ನ ದಯೆಯಿಂದ ನನಗೆ ಅಸಾಧ್ಯವಾದುದೇನೂ ಇಲ್ಲ, ನಿನ್ನ ಮಗಳಾದ ಶ್ರೀಮತಿಯನ್ನು ವಜ್ರಜಂಘನೊಡನೆ ವಿವಾಹಮಾಡಿಕೊಡು' ಎಂದು ಕೇಳಿಕೊಂಡನು. ಪೂರ್ವಪುರಾಣದಲ್ಲಿ ಹದಿನಾರು ಶ್ಲೋಕಗಳಲ್ಲಿ (vii-೧೮೩-೧೯೮) ವಿಸ್ತಾರವಾಗಿ ಹೇಳಿರುವ ಈ ವಿವರವಾದ ಭಾಗವನ್ನು ಪಂಪನು ಒಂದೇ ಒಂದು ವೃತ್ತದಲ್ಲಿ ಅಲ್ಲಿಯ ಅಭಿಪ್ರಾಯಕ್ಕೆ ಧಕ್ಕೆ ಒದಗದಂತೆ ಅಡಕಗೊಳಿಸಿ ಹೇಳಿದ್ದಾನೆ.

ಕುಲ, ಛಲ, ಚೆಲ್ವು, ಒಳ್ನುಡಿ, ವಿದ್ಯೆ, ಜನ್ಮಾಂತರ ಸ್ನೇಹ—ಇವೆಲ್ಲದರಲ್ಲಿಯೂ ಸಮರಸತೆಯುಳ್ಳ ವಜ್ರಜಂಘ-ಶ್ರೀಮತಿಯರ ಮದುವೆ ನಿಶ್ಚಯವಾಯಿತು. ಈ ಎಲ್ಲಾ ಯೋಗ ಇರುವವರಿಗೆ ಯೋಗ್ಯವಾದ ಮುಹೂರ್ತ ಯಾವಾಗಲೂ ಸಿದ್ಧವೇ. ಜೋಯಿಸರನ್ನು ಕರೆಯಿಸಲಾಯಿತು. ಅಂದಿನ ವಾಸರವೇ ಶುಭವಾಸರವಾಯಿತು. ಅಂದಿನ ನಕ್ಷತ್ರ ಯೋಗ, ಕರಣವೆಲ್ಲವೂ ಶುಭಪ್ರದವಾಗಿದ್ದುವು. ವಜ್ರದಂತನು 'ಮಹಾಮಹಿಮ'ವ್ರತವನ್ನು ಜಿನಾಲಯದಲ್ಲಿ ಜರುಗಿಸಿದನು. ಪೂರ್ವಪುರಾಣದಲ್ಲಿ ವಿವಾಹದ ಸಿದ್ಧತೆಯ ಅನಂತರ ಹಿರಿಯರು ಸೂಚಿಸಿದ ಶುಭದಿನದಲ್ಲಿ ಮದುವೆ ನೆರವೇರಿತು ಎಂದು ಹೇಳಲಾಗಿದೆ (vii-೨೨೧).

ಶ್ರೇಷ್ಠ ಶಿಲ್ಪಿಯಿಂದ ಮದುವೆಯ ಮಂಟಪ ಸಿದ್ಧವಾಯಿತು (ಪೂರ್ವಪುರಾಣದಲ್ಲಿ ವಿಶ್ವಕರ್ಮನೇ ಈ ಮಂಟಪವನ್ನು ನಿರ್ಮಿಸಿದನೆಂದು ಹೇಳಲಾಗಿದೆ). ನೀಲಮಣಿಯಿಂದ ಖಚಿತವಾದ ಆ ಮಂಟಪ 'ಚೆಲ್ವಿಂಗದು ನೆಟ್ಟನೆ ಜನ್ಮಭೂಮಿ' ಎನಿಸಿತು. ಸ್ಫಟಿಕನಿರ್ಮಿತ ಕಂಬಗಳು, ಜೋತುಬಿದ್ದ ಮುತ್ತಿನಹಾರದ ಶೋಭೆ ಇವೆಲ್ಲವೂ ಆ ಮಂಟಪವನ್ನು 'ರತಿಯ ವಿವಾಹಾಗಾರ' ಎನಿಸಿದುವು. 'ಮದನನ ಸಾರಸರ್ವಸ್ವ' ಎನಿಸಿದುವು. ಇಲ್ಲಿ ಕವಿ ಮದುವೆಯ ಸಂಭ್ರಮಕ್ಕೆ ತಕ್ಕಂತೆ ಮಂದಾನಿಲ ರಗಳೆಯ ಉತ್ಸಾಹ ನಡೆಯಲ್ಲಿ ಅದನ್ನು ಪುಂಖಾನುಪುಂಖವಾಗಿ ವರ್ಣಿಸಿದ್ದಾನೆ. ಕೊನೆಗೆ

> ವಿಭವದ ಮೂಲಸ್ಥಾನಮೆನಿಸಲಿದು
> ಕಾಮದೇವನಾಸ್ಥಾನಮೆನಿಸಲಿದು
> ಓರಂತೆ ನೆರೆದುದೆನೆ ಜನಸಮೂಹ
> ಮಾಗಳೆ ಸಮೆದತ್ತು ವಿವಾಹಗೇಹಂ (ಅಧ್ಯಾಯ iv)

ಎಂದು ನುಡಿದ್ದಾನೆ. ಮದುವೆಯ ಸಿದ್ಧತೆ, ಸಡಗರ, ಮದುವೆಯ ಸಂಭ್ರಮ, ಇವೆಲ್ಲವನ್ನೂ ಆದಿಪುರಾಣ ಮತ್ತು ಪೂರ್ವಪುರಾಣಗಳೆರಡರಲ್ಲಿಯೂ ವಿಸ್ತಾರವಾಗಿ, ಎಳೆಯೆಳೆಯಾಗಿ ವರ್ಣಿಸಲಾಗಿದೆ. ಒಂದೊಂದು ಸಡಗರದ ಸನ್ನಿವೇಶವೂ ವೈಭವೋತ್ಸವವೂ

ಕಣ್ಣಿಗೆ ಕಟ್ಟುವ ಧಾಟಿಯಲ್ಲಿ ಎರಡೂ ಪುರಾಣಕಾವ್ಯಗಳಲ್ಲಿ ಚಿತ್ರಿತವಾಗಿವೆ. ಆದರೂ ಪಂಪನು ಪೂರ್ವಪುರಾಣದಲ್ಲಿ ಬರುವ ಕೆಲವು ಪ್ರಸಂಗದ ವರ್ಣನೆಗೆ ಮತ್ತಷ್ಟು ಅಂತರಾಳದ ನಿಗೂಢತೆಯನ್ನು ಸೇರಿಸಿ ವರ್ಣಿಸಿರುವುದನ್ನು ನಿರ್ಲಕ್ಷಿಸುವಂತಿಲ್ಲ. ಮದುವೆಯ ಮಂಟಪದಲ್ಲಿ ನಿಂತ ವಜ್ರಜಂಘನು ಶ್ರೀಮತಿಯ ಕೈಹಿಡಿದನು. 'ಹಸ್ತ ಸ್ಪರ್ಶದಿಂದ ಶ್ರೀಮತಿಯ ಶರೀರ ಬೆವರಿತು. ಆಕೆಯ ಬಹುಕಾಲದ ಸಂತಾಪವು ಜಲ ವರ್ಷದಿಂದ ಭೂಮಿಯ ಸಂತಾಪವು ದೂರವಾಗುವಂತೆ ದೂರವಾಯಿತು' (ಮಹಾ ಪುರಾಣ vii-೨೫೧). ಈ ಭಾಗವು ಆದಿಪುರಾಣದಲ್ಲಿ ಸೂಕ್ಷ್ಮಭಾವನೆಯ ತಂತುಗಳನ್ನು ಹಿಡಿದು ಚಿತ್ರಿತವಾಗಿದೆ.

ಇನಿಯನ ಕೆಂದಳಂ ತಳಮನೊಯ್ಯನೆ ಸೋಂಕೆ ಪೊದಲ್ದ ನಾಣ ಪೆಂ
ಪಿನೊಳೊಗೆತರ್ಪ ಘರ್ಮಜಲಬಿಂದುಗಳಿಂ ನಮಿತಾನನಾಬ್ಜೆ ಬೆ
ಚ್ಚನೆ ಬಸಿದಿಂದುಕಾಂತಕರ ಸಂಕುಳಮೊಯ್ಯನವುಂಕಿ ಸೋಂಕೆ ಸೋಂ
ಕಿನೊಳೊಱೆವಿಂದು ಕಾಂತ ಮಣಿಪುತ್ರಿಕೆಯಂದದಿನೊಪ್ಪಿ ತೋಱಿದಳ್ (iv-೪೯)

ನಲ್ಲನ ಕರತಳವು ನಲ್ಲೆಯ ಕರತಳವನ್ನು ಸೋಂಕಿತು. ಆಗ ಲಜ್ಜಾಧಿಕ್ಯವೊದಗಿ ಬೆವರುಹನಿಗಳುಂಟಾಗಿ ತಲೆ ತಗ್ಗಿಸಿದಳು. ಬೆಚ್ಚಗೆ ದ್ರವಿಸುವ ಚಂದ್ರಸದೃಶನಾದ ಕಾಂತನ ಕೈಗಳು ಶ್ರೀಮತಿಯ ಕೈಗಳನ್ನದುಮಲು ಆ ಸ್ಪರ್ಶದಿಂದ ಬೆವರಿದ ಶ್ರೀಮತಿಯು ಚಂದ್ರಕಾಂತ ಕರಸ್ಪರ್ಶದಿಂದೊಸರುವ ಚಂದ್ರಕಾಂತಮಣಿಯ ಬೊಂಬೆಯಂತೆ ತೋರಿ ದಳು. ಇಲ್ಲಿಯ ಪಾಣಿಗ್ರಹಣ ಪ್ರಸಂಗವು ಪಂಪಭಾರತದಲ್ಲಿ ಬರುವ ಅರ್ಜುನ-ದ್ರೌಪದಿ ಯರ ಸ್ವಯಂವರ ಸನ್ನಿವೇಶವನ್ನು ನೆನಪಿಗೆ ತರುತ್ತದೆ.

ಆದಿಪುರಾಣದ ಈ ಪದ್ಯವು 'ಸ್ವಭಾವೋಕ್ತಿಪೂರ್ಣವಾದುದೂ ನಾಯಕನಾಯಿಕೆಯ ರಿಬ್ಬರ ಜಾಗ್ರದವಸ್ಥೆಯನ್ನು ಸೂಚಿಸುವುದೂ ರಸವು ಹೆಚ್ಚು ಕಳೆಗೂಡಿರುವುದೂ ಆಗಿದೆ.[೧೯] ಇದು ಭಾವರಸದ ಸೂಕ್ಷ್ಮತಂತುಗಳನ್ನು ಮಿಡಿಯುವ ಭಾಗವಾಗಿದೆ.

ಪಂಪನು ಪೂರ್ವಪುರಾಣವನ್ನು ಅನುಸರಿಸಿದ್ದರೂ ಅದರ ಪಡಿಯಚ್ಚಾಗಿ ಆ ನಿರೂ ಪಣೆ ಬಂದಿಲ್ಲ. ಈತನ ವರ್ಣನಾ ವೈಖರಿಯಲ್ಲಿ ತನ್ನದೇ ಆದ ಸಹಜ ಸೌಂದರ್ಯದ ಸೊಗಸಿದೆ. ಪಂಪನ ಪ್ರತಿಭೆ ಸ್ವೋಪಜ್ಞತೆಯ ಮೆರುಗಿನಿಂದ ರಾರಾಜಿಸುವ ಕಲಾಪ್ರತಿಮೆ ಎಂಬುದಕ್ಕೆ ಸಾಕ್ಷಿಯಾಗಿ ಇನ್ನೂ ಕೆಲವು ಉದಾಹರಣೆಗಳನ್ನು ನೀಡಬಹುದು.

ಶ್ರೀಮತಿಯನ್ನು ಅಲಂಕರಿಸುತ್ತಿದ್ದ ಸ್ತ್ರೀಯರು ಆಕೆಯನ್ನು ಹೊಗಳಿ ಹಾಡುವ ರೀತಿ ಸುಂದರವಾದುದು.'ಸ್ವಲ್ಪವೂ ಎವೆಯಿಕ್ಕದ ದೇವಸ್ತ್ರೀಯರ ವಿಲಾಸವೇನು ಸೊಗಸು' ಎಂದು ಹೇಳುವಲ್ಲಿ ಸಖಿಯರ ಭಾವ ಸಹಜವಾದುದು. 'ದೇವಸೌಂದರೀಗಣ'ಕ್ಕೆ ಎಷ್ಟು ವಿಳಾಸವಿದ್ದರೇನು? 'ಅಣಮೆಮೆಯಿಕ್ಕದ' ಆ 'ಕಣ್ಮಲರಿ'ನಿಂದ ಸೂಸುವ ವಿಳಾಸ ಅವರ ಮಟ್ಟಿಗೆ ಸ್ವಾಭಾವಿಕವೇ ಆಗಿರಬಹುದು. ಆದರೆ ಈ ಮಣ್ಣಿನ ನೆಲಕ್ಕೆ ಒಗ್ಗಿರುವ ರಸಿಕರಿಗೆ ಅದು ಒಗ್ಗುವುದೆಂತು? ಹಾಗೆಯೇ 'ಪೆಡೆಯಂ ಮುಡಿಯಲ್ಲಿ ತೋರ್ಪ' ನಾಗಿಣಿಯರ ಬೆಡಂಗು ಶ್ರೀಮತಿಯ ಬೆಡಗಿನ ಮುಂದೆ ನಿಲ್ಲದು. 'ಅದು ಅಂಜಿಸುವವೋಲ್' ತೋರುವುದಲ್ಲದೆ ಬೆಡಗಾಗಿ ಕಾಣದು. ಆದುದರಿಂದ 'ಪಾಱುವ ಪಾಱುವಳಂದಮಂ ಕಳೆ' ಎಂದು ಶ್ರೀಮತಿಯ ರೂಪಾತಿಶಯವನ್ನು ಗೆಳತಿಯರು ಮೆಚ್ಚಿದರು. ಕವಿಯ ವರ್ಣನೆ

ಯಲ್ಲಡಗಿರುವ ಜಾಣ್ಮೆ ಗಮನಾರ್ಹವಾದುದು.

ಪೂರ್ವಪುರಾಣದಲ್ಲಿ ತಾಯಿ ಮಗಳಿಗೆ ಅಲಂಕಾರವನ್ನು ಮಾಡಿ ವಿವಾಹಮಂಟಪ ದಲ್ಲಿ ಕುಳ್ಳಿರಿಸಿದಳೆಂದು ಬರುವ ಹೇಳಿಕೆಗೂ ಮೇಲಿನ ಸಖೀಜನರ ಸಹಜವೆಂಬಂತಹ ಅಭಿಮಾನದ ನುಡಿಗಳಿಗೂ ಬಹಳ ಅಂತರ ಕಂಡುಬರುತ್ತದೆ. ಸಖಿಯರಿಗೆ ಶ್ರೀಮತಿ ಯಲ್ಲಿರುವ ಅಗಾಧವಾದ ಪ್ರೀತಿ ಆದರಗಳು ಮಿಳಿತವಾಗಿರುವುದನ್ನು ಈ ಮೇಲಿನ ಮಾತುಗಳು ವ್ಯಕ್ತಪಡಿಸುತ್ತವೆ.

ಭವಾಂತರದ ಅಂಟಿನ ನಂಟು ಪುಣ್ಯವಶದಿಂದ ಜೊತೆಗೂಡಿತು. ಪ್ರಕೃತಿಯ ಮಡಿಲಿ ನಲ್ಲಿ ಎಲ್ಲೆಂದರಲ್ಲಿ ಅವರು ಒಡನಾಡಿಗಳಾಗಿ ನಲಿದರು. ಕೇವಲ ಭೋಗಲಾಲಸೆಯಷ್ಟೇ ಅವರ ಆನಂದದ ನೆಲೆಯಾಗಲಿಲ್ಲ, ಕಾಮಕೇಳಿಯಷ್ಟೇ ದಾಂಪತ್ಯದ ಉಸಿರಾಗಲಿಲ್ಲ. ಪೂಜಾ ವೈಭವದಿಂದಲೂ ಸತ್ಪಾತ್ರವಾದ ವಿನೋದದಿಂದಲೂ ಆ ದಂಪತಿಗಳು ಧರ್ಮಾ ರ್ಥಕಾಮಗಳನ್ನು ಹದವರಿತು ಬೆಸೆದುಕೊಂಡಿದ್ದರು. ಪೂರ್ವಪುರಾಣದಲ್ಲಿ ವಿವಾಹದ ನಂತರ ವಜ್ರಜಂಘ ಶ್ರೀಮತಿಯರು ಜಿನಾಲಯಕ್ಕೆ ಹೋದ ಸಂದರ್ಭ, ವಜ್ರಜಂಘನು ಜಿನೇಶ್ವರನ ಮಹಿಮೆಯನ್ನು ಕುರಿತು ಸ್ತುತಿಸುವ ಭಕ್ತಿರಸ ಸನ್ನಿವೇಶವು ನಲವತ್ತೈದು ಶ್ಲೋಕಗಳಲ್ಲಿ ಬರುತ್ತದೆ. ಪಂಪನು ಅಷ್ಟೊಂದು ದೀರ್ಘ ವಿವರಣೆಗೆ ಹೋಗದೆ ಆ ವಿಷಯವನ್ನು ಸಂಗ್ರಹವಾಗಿ ತಿಳಿಸಿ ಕಥೆಯ ಓಟವನ್ನು ಮುಂದುವರಿಸಿದ್ದಾನೆ.

ಪೂರ್ವಪುರಾಣದಲ್ಲಿ ಶ್ರೀಮತಿ ವಜ್ರಜಂಘರ ರತಿಕ್ರೀಡೆಯ ವರ್ಣನೆಯ ಭಾಗ ಕೆಲವೆಡೆ ಅತಿಯಾದ ವಿವರಣೆಯೊಂದಿಗೆ ಬರುತ್ತದೆ. ಮಾರ್ದವತೆಯ ಸೋಂಕಿಲ್ಲದೆ, ಭಾವಸ್ಪಂದನದ ಲೇಪವಿಲ್ಲದೆ ಹಲವಾರು ಶುಷ್ಕ ಸಾದೃಶ್ಯಗಳಿಂದ ಕೇವಲ ಪಟ್ಟಿಯನ್ನು ಕೊಡುವಂತೆ ವರ್ಣನೆಯು ಬರುತ್ತದೆ (viii-೬-೧೫). ಆದರೆ ಪಂಪನು ಅವರು ಅನು ಭವಿಸಿದ ಸುಖವನ್ನು ಸೂಚ್ಯವಾಗಿ ತಿಳಿಸುವುದರಲ್ಲಿ ಜಾಣತನವನ್ನು ತೋರಿದ್ದಾನೆ. 'ಅವರಿಗೆ ಕಾಮದೇವನೇ ವಿವಿಧ ವಿಲಾಸ ವಿಭ್ರಮಗಳನ್ನು ಉಪದೇಶಿಸುವ ಉಪಾಧ್ಯಾಯ ನಾದನು' ಎಂಬ ಮಾತೊಂದರಿಂದಲೇ ಅವರ ರತಿವಿಲಾಸದ ವೈಭವವನ್ನು ಓದುಗರ ಕಲ್ಪನೆಗೆ ಬಿಟ್ಟಿರುವ ಔಚಿತ್ಯವನ್ನು ತೋರಿದ್ದಾನೆ.

ಪೂರ್ವಪುರಾಣದಲ್ಲಿ ಬಹು ಕಾಲದವರೆಗೆ ಪುತ್ರೋತ್ಪತ್ತಿ ಮೊದಲಾದ ಲಾಭಗಳಾ ಗುವವರೆಗೆ ವಜ್ರಜಂಘನು ಮಾವನ ಮನೆಯಲ್ಲಿಯೇ ಇದ್ದನೆಂಬ ಸೂಚನೆ ಬರುತ್ತದೆ (viii-೫). ಆದರೆ ಈ ವಿಚಾರವು ಆದಿಪುರಾಣದಲ್ಲಿ ಬರುವುದಿಲ್ಲ. ವಜ್ರಜಂಘ ಶ್ರೀಮತಿ ಯರು ಪುಂಡರೀಕಿಣಿಯಲ್ಲಿರುವಾಗಲೇ ವಜ್ರಜಂಘನ ತಂಗಿಯಾದ ಅನುಂದರಿಯನ್ನು ಶ್ರೀಮತಿಯ ಅಣ್ಣನಾದ ಅಮಿತತೇಜನಿಗೆ ಕೊಟ್ಟು ವಿವಾಹ ಮಾಡಲಾಯಿತು.

ವಜ್ರದಂತನು ಶ್ರೀಮತಿಯನ್ನು ಗಂಡನ ಮನೆಗೆ ಕಳುಹಿಸಿಕೊಡುವ ಸಂದರ್ಭವು ಪೂರ್ವಪುರಾಣದಲ್ಲಿ ಔಪಚಾರಿಕತೆಯಿಂದ ಮಾತ್ರ ಕೂಡಿದ್ದರೆ, ಆದಿಪುರಾಣದಲ್ಲಿ ಆ ಸಂದರ್ಭವು ಸಹಜಭಾವ ಸಮೃದ್ಧಿಯಿಂದ ಹೃದಯಸ್ಪರ್ಶಿಯಾಗಿ ಬಂದಿದೆ. ತಂದೆ ತಾಯಿಗಳು ಮಗಳಿಗೆ ನಾನಾ ವಿಧವಾದ ಭೋಗೋಪಭೋಗ ಸಾಮಗ್ರಿಗಳನ್ನು ಬಳುವಳಿ ಯಾಗಿತ್ತರು. ಜೊತೆಯಲ್ಲಿ ಪಂಡಿತೆ ಇದ್ದಳು. ಮಗಳನ್ನು ಗಂಡನ ಮನೆಗೆ ಕಳುಹುವಾಗಿನ ಭಾವನೆ, ಮನಸ್ಸಿನ ತಳಮಳ ಇವೆಲ್ಲವೂ ಆಳರಸರೆಲ್ಲರಿಗೂ ಒಂದೇ ಅಲ್ಲವೇ? ಚಕ್ರವರ್ತಿ

ಅಳಿಯನನ್ನು ನೋಡಿ, ಆತನಲ್ಲಿ ಕೇಳಿಕೊಳ್ಳುವ ಪರಿ ಹೀಗಿದೆ : 'ವಜ್ರಜಂಘಾ, ನಿನ್ನ ವಂಶದ ಉನ್ನತಿಯನ್ನು ಅರಿತು, ಇವಳಲ್ಲಿ ಉಂಟಾಗಿರುವ ಅತಿಯಾದ ಸ್ನೇಹಸಂಬಂಧ ವನ್ನು ತಿಳಿದು, ನಮ್ಮಲ್ಲುಂಟಾಗಿರುವ ಬಾಂಧವ್ಯವನ್ನು ಅರಿತು ಈಕೆಯನ್ನು ನಡೆಸಿಕೊ' ಈಕೆ 'ಅಱಿಯದೇನಾನುಮೆಂದಾಗಳುಂ ಮೆಲ್ಲನೆ ನೀ ಕಲ್ಪಿಪ್ಪುದು', 'ಎಮ್ಮಂ ನನೆದೆ ರ್ದಗಿಡದಂತಾಗೆ ಪಾಲಿಪ್ಪುದು', 'ಈ ಮುಗ್ಧೆಯನ್ನು ಮನ್ನಿಸುವುದು' ಎಂದು ಬೇಡಿ ಕೊಂಡನು (iv-೫೫). ಅನಂತರ ವಜ್ರದಂತ ಲಕ್ಷ್ಮೀಮತಿಯರು ಹೊಸಬಾಳಿಗೆ ಕಾಲಿರಿಸು ತ್ತಿರುವ ತಮ್ಮ ಮಗಳನ್ನು ಕುರಿತು ಬುದ್ಧಿವಾದವನ್ನು ಹೇಳುವ ರೀತಿಯೂ ಅಷ್ಟೇ ಅಂದಗೂಡಿ ಮೈದುಂಬಿದೆ—'ಮನಮಱಿದು ಅಂಜಿ ಬೆರ್ಚೆ ನಿಜವಲ್ಲಭನನ್ ಬೆಸ ಕೆಯ್', 'ಏನೆಂದೊಡಂ ಕಿನಿಸದಿರ್', 'ಅಗ್ರಮಹಿಷೀಪದಸ್ಥೆಯಾಗು', 'ನಂದನರನ್ ಅಗಣ್ಯ ಪುಣ್ಯಧರರನ್ ಪಡೆ. ಇನ್ನೆಷ್ಟು ಹೇಳಿದರೇನು? ಅಗಲಿಕೆಯ ನೋವಿನ ಅನು ಭವ ಬರಲೇ ಬೇಕು. ದುಃಖವು ಸಹಜವಾಗಿ ಉಮ್ಮಳಿಸಲೇಬೇಕು. ಹೇಳಿದಷ್ಟು ಹೇಳಿ ಕೊನೆಗೆ ಮಗಳನ್ನು ಅಮರ್ದಪ್ಪಿಕೊಂಡು 'ಬಸಮಲ್ಲದ ಬಾಷ್ಪವಾರಿಯಂ ನೆಗಪಿದರ್' (ಈ ಭಾಗವು ಕಾಳಿದಾಸನ ಅಭಿಜ್ಞಾನ ಶಾಕುಂತಲದ ನಾಲ್ಕನೆಯ ಅಂಕದಲ್ಲಿ ಬರುವ ಕಣ್ವ ಮುನಿಗಳು ಶಕುಂತಲೆಗೆ ಹೇಳುವ ಮಾತುಗಳನ್ನು ನೆನಪಿಗೆ ತರುತ್ತದೆ).

ಈ ಸಂದರ್ಭದಲ್ಲಿ ಭಾವಾವೇಗ ಎಷ್ಟು ತೀವ್ರವಾಗಿದೆಯೆಂದರೆ, ಅವುಗಳ ಅಳವಡಿಕೆ ಯಿಂದ ಮಾತ್ರವೇ ಸಂತೃಪ್ತನಾಗದೆ ಕವಿ ಸುಕುಮಾರಭಾವನೆಗಳ ವಿನೂತನ ರಚನೆಯ ನ್ನೊಂದನ್ನು ಮುಂದಿರಿಸುತ್ತಾನೆ. ಈ ಭಾವಸಂಗಮದಿಂದ ಕರುಣರಸಪೂರ್ಣವಾದ ಆ ಸನ್ನಿವೇಶ ಮತ್ತಷ್ಟು ಕರುಣಾರ್ದ್ರವಾಗಿ ಪರಿಣಮಿಸುತ್ತದೆ. ಆ ಮನೋಹರ ಚಿತ್ರ "ಪೊಡಮಡುವಪ್ಪಿಕೊಳ್ಪ......." ಎಂಬ ಪದ್ಯದಲ್ಲಿ (iv-೫೭) ಹೃದಯಸ್ಪರ್ಶಿಯಾಗಿ ಮೂಡಿದೆ. ಪೂರ್ವಪುರಾಣದಲ್ಲಿ ಈ ಪ್ರಸಂಗವೇ ಇಲ್ಲ.[೨೦] ತಂದೆತಾಯಿಗಳ ಅಗಲಿಕೆಯ, ಹಿತನುಡಿಗಳ ಪ್ರಕ್ರಿಯೆಯಷ್ಟರಿಂದಲೇ ಸಂದರ್ಭ ಮುಗಿದುಹೋಗದು. ಪರಿಜನರು ನೂತನ ದಂಪತಿಗಳನ್ನು ಬೀಳ್ಕೊಡುವ ಸಂದರ್ಭದಲ್ಲಿ ತೋರುವ ಪ್ರಕ್ರಿಯೆಯೂ ಸಹಜಸುಂದರವಾಗಿ ಚಿತ್ರಿತವಾಗಿದೆ. ನೂತನ ದಂಪತಿಗಳಿಗೆ ಪೊಡಮಡುವವರು ಕೆಲವ ರಾದರೆ, ಅಪ್ಪಿಕೊಳ್ಳುವವರು ಕೆಲವರು; ನಮ್ಮನ್ನು ಮರೆಯದಿರಿ ಎನ್ನುವವರು ಕೆಲವರಾ ದರೆ, ಸಮಸ್ತ ವಸ್ತುಗಳನ್ನು ಕಾಣಿಕೆಯಾಗಿ ಕೊಡುವವರು ಕೆಲವರು; ಹರಸಿ ಸೇಸೆಯನ್ನಿಕ್ಕು ವವರು ಕೆಲವರಾದರೆ, ತಮಗೆ ಪ್ರೀತಿಪಾತ್ರರಾದ ಇವರ ಅಗಲಿಕೆಗೆ ಕಣ್ಣೀರನ್ನು ಮಿಡಿಯು ವವರು ಕೆಲವರು. ಹೀಗೆ ಬಹುಪ್ರಕಾರವಾಗಿ ಪ್ರೀತಿ, ಆದರ, ಗೌರವಗಳೊಂದಿಗೆ ಜನರು ಆ ದಂಪತಿಗಳನ್ನು ಬೀಳ್ಕೊಟ್ಟರು ಎಂಬ ಭಾಗದಲ್ಲಿ ಬಂದಿರುವ ನಾಟಕೀಯತೆಯ ಧಾಟಿ ಬಹು ಸುಂದರವಾಗಿ ಚಿತ್ರಿತವಾಗಿದೆ. "ಲೌಕಿಕ ವ್ಯವಹಾರದ ಈ ಕ್ರಿಯೆಗಳನ್ನು ಪಂಪ ಸಹಜೋಕ್ತಿಗಳಲ್ಲಿ ಚಿತ್ರಿಸಿರುವ ರೀತಿ ಮನೋಜ್ಞವಾಗಿದೆ. ಪಂಪನಿಗೆ ಕಾಳಿದಾಸನ ವರವಿದೆ. ಲೋಕಜೀವನದ ಸೂಕ್ಷ್ಮ ಪರಿಚಯವಿದೆ. ಮಾನವೀಯ ಮೌಲ್ಯಗಳ ಬಗ್ಗೆ ಪರಿಣತ ಪ್ರಜ್ಞೆ ಇದೆ"[೨೧] ಎಂಬುದಕ್ಕೆ ಮೇಲಿನ ವರ್ಣನೆಗಳು ಸಾಕ್ಷಿಯಾಗಿವೆ.

ನೂತನ ದಂಪತಿಗಳು ನಗರವನ್ನು ಪ್ರವೇಶ ಮಾಡಿದರು. ಪೂರ್ವಪುರಾಣದಲ್ಲಿ ಈ ಭಾಗದಲ್ಲಿ ಔಪಚಾರಿಕವಾದ ವರ್ಣನೆ ಕಂಡುಬಂದರೆ ಆದಿಪುರಾಣದಲ್ಲಿ ಸಹಜ

ಸೌಂದರ್ಯದ ಮೆರುಗಿದೆ. ವಜ್ರಜಂಘನು ರಾಜಬೀದಿಯನ್ನು ಪ್ರವೇಶಮಾಡುತ್ತಿರುವಾಗ ಮಹಡಿಯ ಮೇಲಿದ್ದ ಪುರಸ್ತ್ರೀಯರು ಪ್ರೀತಿಯಿಂದ ಪುಷ್ಪಾಂಜಲಿಯನ್ನು ಎರಚಿದರು. ಪ್ರಜೆಗಳು ಶೇಷೆಯನ್ನಿಟ್ಟು ಆಶೀರ್ವದಿಸಿದರೆಂದು ಪೂರ್ವಪುರಾಣದಲ್ಲಿ ವರ್ಣಿಸಲಾಗಿದೆ (viii-೪೩-೪೪). ಆದಿಪುರಾಣದಲ್ಲಿ ಬರುವ ವರ್ಣನಾ ವೈಖರಿಯೇ ಬೇರೆ. ವಜ್ರಜಂಘ-ಶ್ರೀಮತಿಯರನ್ನು ಕಾಣಲು ಪುರಸ್ತ್ರೀಯರು ತಮ್ಮ ತಮ್ಮ ಮನೆಗಳಲ್ಲಿನ ಕಾರ್ಯಕಲಾಪಗಳನ್ನೆಲ್ಲ ಮರೆತರು. ಆತುರದಿಂದ ನರಿಗೆಯ ಗಂಟನ್ನು ಹಾಕಿಕೊಳ್ಳದ್ದರಿಂದ ನಡಿಗೆಯು ಸ್ಖಲಿಸಿತು. ರೆಪ್ಪೆಯ ಬಡಿತವು ಮರೆತುಹೋಯಿತು. ಅಪೂರ್ವದೃಶ್ಯವನ್ನು ನೋಡುವ ತವಕದಿಂದ ಮನಸ್ಸು ಸಂಭ್ರಮಗೊಂಡಿತು (iv-೬೦).

ಪಂಡಿತೆ ಶ್ರೀಮತಿಯನ್ನು ಹರ್ಷಚಿತ್ತದಿಂದ ಇರುವಂತೆ ನೋಡಿಕೊಂಡು ಕೆಲಕಾಲ ಅಲ್ಲಿದ್ದಳು. ಅನಂತರ ಆಕೆಯನ್ನು ದಾನ ಸನ್ಮಾನಗಳಿಂದ ಪುಂಡರೀಕಿಣಿಗೆ ಕಳಿಸಲಾಯಿತು ಎಂಬ ಲೋಕರೂಢಿಯ ಮಾತುಗಳನ್ನು ಪಂಪನು ಅನುಸರಿಸಿದ್ದಾನೆ. ಪೂರ್ವಪುರಾಣದಲ್ಲಿ ಪಂಡಿತೆಯನ್ನು ಹಿಂದಕ್ಕೆ ಕಳುಹಿಸಿಕೊಟ್ಟರೆಂಬ ವೃತ್ತಾಂತವು ಬರುವುದಿಲ್ಲ. ಪೂರ್ವಪುರಾಣದಲ್ಲಿ ವಜ್ರಜಂಘನು ಶ್ರೀಮತಿಯೊಡನೆ ಆನಂದದಿಂದಿದ್ದು ಆಕೆಗೆ ರಮಣೀಯವಾದ ರಾಜಭವನವನ್ನು ತೋರಿಸುತ್ತ ಆಕೆಯ ಜೊತೆಜೊತೆಯಲ್ಲಿಯೇ ಇದ್ದು ಆಕೆಯ ಖಿನ್ನತೆಯನ್ನು ಕಳೆದನು ಎಂಬ ವಿಚಾರವು ಬಂದಿದೆ. ಆದಿಪುರಾಣದಲ್ಲಿ ಈ ಅಂಶವನ್ನು ಕೈಬಿಡಲಾಗಿದೆ. ಪಂಪನು ವಜ್ರಜಂಘನೇ ನೇರವಾಗಿ ಶ್ರೀಮತಿಯಲ್ಲಿ ತೋರುವ ಕಾಳಜಿಯನ್ನು ಈ ಸಂದರ್ಭದಲ್ಲಿ ಕೈಬಿಟ್ಟಿರುವುದು ಅಷ್ಟೊಂದು ಸಮಂಜಸವಾಗಿ ಕಾಣದು.

ಶ್ರೀಮತಿ-ವಜ್ರಜಂಘರ ದಾಂಪತ್ಯದ ಫಲವಾಗಿ ಅವರಿಗೆ ೪೯ ಅವಳಿಮಕ್ಕಳಾದರು.

## ಉತ್ತರಕಾಲೀನ ಕಾವ್ಯಗಳು

**ಚಾವುಂಡರಾಯಪುರಾಣ :** ಶ್ರೀಮತಿ ವಜ್ರಜಂಘರ ವಿವಾಹದ ಪೂರ್ವಪೀಠಿಕಾ ಪ್ರಸಂಗವು ಪೂರ್ವಪುರಾಣ ಮತ್ತು ಆದಿಪುರಾಣಗಳಲ್ಲಿರುವಂತೆಯೆ ವರ್ಣಿತವಾಗಿದೆ. ವಜ್ರಬಾಹುವು ಶ್ರೀಮತಿಯನ್ನು ವಜ್ರಜಂಘನಿಗೆ ನೀಡೆಂದು ಬೇಡಿಕೊಂಡನು. ಇಲ್ಲಿ ಶ್ರೀಮತಿ ವಜ್ರಜಂಘರ ವಿವಾಹದ ವೈಭವದ ಚಿತ್ರಣ ಬರುವುದಿಲ್ಲ. 'ಪಿರಿದುತ್ಸವದಿಂ ಶ್ರೀಮತಿಗಂ ವಜ್ರಜಂಘಂ ಮದುವೆಯಂ ಮಾಡಿ' ಎಂಬಷ್ಟರಿಂದಲೇ ಈ ಭಾಗವನ್ನು ಮುಗಿಸಲಾಗಿದೆ. ಪೂರ್ವಪುರಾಣದಲ್ಲಿ ಬರುವಂತೆ 'ಮೂವತ್ತಿರ್ಛಾಸಿರ್ವರ್ಮಕುಟಬದ್ಧರಿಂ ಮೂವತ್ತಿರ್ಛಾಸಿರ ಕಲ್ಯಾಣಾಭಿಷೇಕಂಗೆಯ್ಸಿ' ಎಂಬ ಉಲ್ಲೇಖವು ಚಾವುಂಡರಾಯಪುರಾಣದಲ್ಲಿಯೂ ಕಂಡುಬರುತ್ತದೆ. ಆದಿಪುರಾಣದಲ್ಲಿ ಈ ಅಂಶವು ಕಂಡುಬಂದಿಲ್ಲ. ಶ್ರೀಮತಿ ವಜ್ರಜಂಘರನ್ನು ವೀರಬಾಹು ಸುಬಾಹು ಎಂಬ ಮಕ್ಕಳ ಜೊತೆಯಲ್ಲಿ ಉತ್ಪಲಖೇಟಕ್ಕೆ ಕಳುಹಿಸಲಾಯಿತೆಂಬ ಚಾವುಂಡರಾಯಪುರಾಣದಲ್ಲಿ ಬರುವ ಈ ಅಂಶ ಉಳಿದೆಡೆ ಕಂಡುಬರುವುದಿಲ್ಲ. ಪಂಡಿತೆಯನ್ನು ಅವರೊಡನೆ ಕಳಿಸಲಾಯಿತೆಂಬ ವೃತ್ತಾಂತ ಅನುಂದರಿ, ಅಮಿತತೇಜರ ವಿವಾಹದ ಉಲ್ಲೇಖಗಳು ಬರುತ್ತವೆ. ಆರು ಸಾಲುಗಳಲ್ಲಿ ಅತ್ಯಂತ ವೇಗವಾಗಿ ಕಥಾನಿರ್ವಹಣೆ ಸಾಗಿದೆ.

**ಹಸ್ತಿಮಲ್ಲನ ಪೂರ್ವಪುರಾಣ :** ಚಾವುಂಡರಾಯಪುರಾಣದಲ್ಲಿ ಈ ಭಾಗವು ಪೂರ್ವ

ಪುರಾಣದ ಕೆಲವು ಮಾತುಗಳನ್ನು ಅನುಸರಿಸಿಕೊಂಡು ಅತ್ಯಂತ ಸಂಗ್ರಹರೂಪದಲ್ಲಿ ಬಂದಿದ್ದರೆ; ಹಸ್ತಿಮಲ್ಲನ ಪೂರ್ವಪುರಾಣದಲ್ಲಿ ಆದಿಪುರಾಣದ ಕೆಲವು ಮಾತುಗಳನ್ನು ಅನುಸರಿಸಿ ಅಷ್ಟೇ ಸಂಗ್ರಹಕ ಶೈಲಿಯಲ್ಲಿ ಬಂದಿದೆ. ವಜ್ರಬಾಹುವನ್ನು ವಜ್ರದಂತನು ಬೇಕಾದುದನ್ನು ಬೇಡಿಕೊ ಎಂದಾಗ ಆತನು ವಜ್ರಜಂಘನಿಗೆ ಶ್ರೀಮತಿಯನ್ನು ಕೊಟ್ಟು ಮದುವೆಮಾಡಿಕೊಡಲು ಕೇಳಿಕೊಳ್ಳುತ್ತಾನೆ. ಇದು ಪೂರ್ವವರ್ತಿ ಆದಿತೀರ್ಥಂಕರ ಕಾವ್ಯಗಳಲ್ಲಿ ಕಂಡುಬರುವ ಅಂಶವೇ. ಅನಂತರ ಮುಹೂರ್ತಕರನ್ನು ಕರೆಸಿಕೊಳ್ಳಲು 'ದೇವಾ, ಇಂದಿನ ತಿಥಿ ವಾರ ನಕ್ಷತ್ರ ಯೋಗ ಕರಣಂಗಳತಿ ಮಂಗಳಂಗಳೆನೆ, ಲೇಸಾದುದೆಂದು ಜಗಜ್ಜಂಗಮ ಕಲ್ಪವೃಕ್ಷಮೆಂಬ ಮಹಾಪೂಜೆಯಂ ಮಾಡಿ, ಸಪ್ತತಿರತ್ನ ವಿರಚಿತಮಪ್ಪ ಮಂಟಪದೊಳ್ಸರ್ವ ಸಂಭ್ರಮದಿಂ ವಿವಾಹಮಂ ಮಾಡಿದಂ' ಎಂದು ಅತ್ಯಂತ ಕಿರಿದಾದ ಮಾತುಗಳಲ್ಲಿ ಆದಿಪುರಾಣದ ಜಾಡನ್ನು ಅನುಸರಿಸಿ ಮುಗಿಸಿದ್ದಾನೆ. ಚಾವುಂಡರಾಯ ಪುರಾಣದಂತೆ ವಿವಾಹದ ವೈಭವದ ರೂಪದ ಚಿತ್ರಣ ಇಲ್ಲಿಯೂ ಬರುವುದಿಲ್ಲ. ಮದುವೆಯಾದ ಕೆಲವು ದಿನಗಳ ನಂತರ, ವಜ್ರಜಂಘನು ತನ್ನ ಪಟ್ಟಣಕ್ಕೆ ಹೋಗುವೆನೆಂದು ಸಿದ್ಧನಾಗಿ ನಿಂತಾಗ 'ದಿವ್ಯವಾಹನ ವಸ್ತ್ರಾಭರಣಂಗಳಂ ಕೊಟ್ಟು ಶ್ರೀಮತಿಯಂ ರಕ್ಷಿಸಿಕೊಳ್ಳೆಂದಳಿಯಂಗೆ ಪೇಳಿ ಮಗಳ್ಗೆ ಬುದ್ಧಿಯಂವೇಳ್ದು' ಕಳುಹಿಸಿ ಕೊಟ್ಟನು. ಪೂರ್ವಪುರಾಣ, ಚಾವುಂಡರಾಯಪುರಾಣಗಳಲ್ಲಿಲ್ಲದ ಈ ಅಂಶವನ್ನು ಹಸ್ತಿಮಲ್ಲನು ಆದಿಪುರಾಣದಿಂದ ಸಂಗ್ರಹಿಸಿದ್ದಾನೆ. ಅಲ್ಲಿಯ ರಸಪ್ರಸಂಗವನ್ನು ನಾಮಮಾತ್ರವಾಗಿಯಾದರೂ ಸೂಚಿಸುವ ಉತ್ಸಾಹವನ್ನು ತೋರಿದ್ದಾನೆ.

**ಪುಣ್ಯಾಸ್ರವದ ಆದೀಶ್ವರರ ಕಥೆ :** ವಜ್ರಬಾಹುರಾಜನು ವಜ್ರದಂತನಲ್ಲಿ ಶ್ರೀಮತಿಯನ್ನು ತನ್ನ ಮಗಳಿಗೆ ಮದುವೆಮಾಡಿಕೊಡು ಎಂದು ಕೇಳಿಕೊಳ್ಳುವ ಪ್ರಸಂಗ ಇಲ್ಲಿ ಬರುವುದಿಲ್ಲ. ವಜ್ರದಂತನು ವಜ್ರಬಾಹು ಮೊದಲಾದವರಿಗೆ ಅಭ್ಯಾಗತ ಪ್ರತಿಪತ್ತಿಯನ್ನು ಮಾಡಿ, ವಜ್ರಜಂಘನಿಗೂ ಶ್ರೀಮತಿಗೂ ವಿಲಾಸದಿಂದ ವಿವಾಹವನ್ನು ಮಾಡಿ ಕೊಟ್ಟರು ಎಂದು ಹೇಳಿ ಮದುವೆಯ ವೈಭವದ ವಿವರಣೆ ಕೊಡದೆ ಸೂಚ್ಯವಾಗಿ ಹೇಳಿ ಮುಗಿಸಿದ್ದಾನೆ. ವಧೂವರರ ಜೊತೆ ಹೋಗಿದ್ದ ಪಂಡಿತೆಯನ್ನು ಪಂಡರೀಕಿಣಿಗೆ ಕಳುಹಿಸಿ ಕೊಡುವ ಆದಿಪುರಾಣದ ವೃತ್ತಾಂತವು ಇಲ್ಲಿ ಕಂಡುಬರುತ್ತದೆ. ಅನಂತರ, ವೀರಬಾಹು ಮೊದಲಾದ ೪೮ ಅಮಳ್ಗಳಾದರು ಎಂಬಲ್ಲಿ ಅಮಳ್ಗಳಲ್ಲಿ ವೀರಬಾಹುವನ್ನು ಹೆಸರಿಸಿರುವುದು ಈ ಕಾವ್ಯಭಾಗದಲ್ಲಿ ಮಾತ್ರ. ಅವರಿಗೆಲ್ಲಾ ವಿವಾಹೋತ್ಸವವನ್ನು ಮಾಡಲಾಯಿತು ಎಂಬ ಮತ್ತೊಂದು ಹೊಸ ಅಂಶವೂ ಸಹ ಇಲ್ಲಿ ಸೇರಿಕೊಂಡಿದೆ.

**ಪುರುದೇವ ಚರಿತೆ :** ವಿವಾಹದ ಪೂರ್ವಪೀಠಿಕೆ ಪುಣ್ಯಾಸ್ರವವನ್ನು ಬಿಟ್ಟು ಉಳಿದ ಕಾವ್ಯಗಳಲ್ಲಿ ಬರುವಂತೆಯೇ ಇದೆ. ಕವಿ ಈ ಕಥಾಂಶದಲ್ಲಿ ಚಾವುಂಡರಾಯಪುರಾಣದ ಅನುವರ್ತಿಯಾಗಿದ್ದಾನೆ.

> ಮೂವತ್ತಿಚ್ಛಾಸಿರ ಮಕುಟಬದ್ಧರ ಕೂಡಿ ಪಾವನ ಜಲವ ಪೊಂಘಟದಿಂ
> ಮೂವತ್ತಿಚ್ಛಾಸಿರ ಮಂಗಲಸ್ನಾನವನಾವಧೂವರರ್ಗೆ ಮಾಡಿಸಿ (ii-೧೧೯)

ಎಂಬ ಅಂಶದಿಂದಲೂ, ಶ್ರೀಮತಿ ವಜ್ರಜಂಘರನ್ನು ಬಾಹುಪ್ರಭೃತಿಸುತರ ಸಹಿತ ಕಳುಹಿಸಿ ಕೊಡಲಾಯಿತು ಎಂಬ ಅಂಶದಿಂದಲೂ ಇದು ಸ್ಪಷ್ಟವಾಗುತ್ತದೆ. ಚಾಮುಂಡ

ರಾಯನು ಕೈಬಿಟ್ಟಿರುವ ಅಂಶಗಳನ್ನು ಇಲ್ಲಿಯೂ ಕೈಬಿಡಲಾಗಿದೆ.

**ಆದಿಪರಮೇಶ್ವರನ ಯಕ್ಷಗಾನ :** ಇದರಲ್ಲಿ ಕವಿ ಒಂದೆರಡು ಪದ್ಯಗಳಲ್ಲಿ ವಿವಾಹದ ಪ್ರಸಂಗವನ್ನು ವರ್ಣಿಸಿ, ಚಾವುಂಡರಾಯಾದಿ ಪುರಾಣಗಳಲ್ಲಿ ಬರುವ ಅತಿ ಸಂಕ್ಷಿಪ್ತತೆಯ ಧಾಟಿಗೆ ಒಲಿಯದೆ, ಸ್ವಲ್ಪ ಮಾತ್ರವಾಗಿಯಾದರೂ ವರ್ಣನೆಯ ತಿರುವನ್ನು ನೀಡಿದ್ದಾನೆ:

ಪಟ್ಟಣ ದಿನಮಣಿಯು ಪಟ್ಟೆ ಚೀನಾಂಬರದಿ
ಕಟ್ಟಿ ಗುಡಿ ತೋರಣದಾ ಪಟ್ಟೆಗಳನಾಗಾ
ಪರಲ್ಮಯದ ಮಂಟಪವಾ ವಿರಚಿಸಿಯು ದಂಪತಿಗ
ಳುರುತರಾಭರಣದಲಿ ಒರಿದಲಂಕರಿಸಿ
ಹವನ ಶಾಂತಿಕವಾದವಳಾಗಮನ ತೊಡಗಿ
ದಿವಿಜ ಸಂಪತ್ತಿನೊಳ್ ಯುವತಿ ರನ್ನಳನೂ
ಮಂಗಳಾಷ್ಟಕ ಪೂರ್ವಕಂಗನಾಮಣಿ ವಜ್ರ
ಜಂಘನಿಗೆ ಕೈಧಾರೆಯೆರೆದನುತ್ಸಹದಿ (ಪರಿಚ್ಛೇದ iii)

ಕೆಲಕಾಲ ದಂಪತಿಗಳು ಅಲ್ಲಿಯೇ ಸುಖವಾಗಿ ಕಾಲವನ್ನು ಕಳೆದನಂತರ ಅವರು ತಮ್ಮ ನಗರಕ್ಕೆ ಹೋಗಲು ಉದ್ಯುಕ್ತರಾದಾಗ ಅವರಿಗೆ ಅನೇಕ ವಾಹನ, ಭೂಷಣಾದಿಗಳನ್ನು ಕೊಡಲಾಯಿತು. 'ಕುವರಿಗುತ್ತಮ ಬುದ್ಧಿ ಹೇಳಲಾಯಿತು'. ಈ ಅಂಶ ಹಸ್ತಿಮಲ್ಲನ ಪೂರ್ವಪುರಾಣಕ್ಕೆ ಅನುವರ್ತಿಯಾಗಿದೆ. "ಭಾವ ಮೈದುನ ವಜ್ರಬಾಹುವ ಭಾವ ಶುದ್ಧಿ ಯೊಳಪ್ಪಿ ಸೊಸೆಯನು ತೀವಿದಾನಂದದಲಿ ಸಲಹೆನುತಿತ್ತ ಕರದಿ" (ಪರಿಚ್ಛೇದ iii) ಎಂಬ ಅಂಶವು ಹೊಸದಾಗಿ ಇಲ್ಲಿ ಕಂಡು ಬರುತ್ತದೆ. ಹಿರಿಯವನಾದ ವಜ್ರಬಾಹುವನ್ನು ಕುರಿತು ಸೊಸೆಯನ್ನು ಕಡೆಗಣಿಸದೆ ಸಲಹು ಎಂದು ಕೇಳಿಕೊಳ್ಳುವ ಮಾತು ಲೋಕರೂಢಿಗೆ ತಕ್ಕಂತೆನಿಸುತ್ತದೆ.

ಈ ಪ್ರಸಂಗದಲ್ಲಿ ಪೂರ್ವಪುರಾಣ, ಆದಿಪುರಾಣಗಳಲ್ಲಿ ಬರುವ ವಿಸ್ತಾರ ವರ್ಣನೆ ಉಳಿದ ಆದಿತೀರ್ಥಂಕರ ಚರಿತ್ರೆಗಳಲ್ಲಿ ಕಂಡುಬರುವುದಿಲ್ಲ. ಶ್ರೀಮತಿ ವಜ್ರಜಂಘರ ವಿವಾಹ ವೈಭವ, ವಿಲಾಸ-ವಿಭ್ರಮದ ವೈಭವ, ಬೀಳ್ಕೊಡುಗೆ, ಸ್ವಾಗತದ ವೈಭವ ಇತ್ಯಾದಿ ಭಾವುಕ ಕ್ರಿಯೆಗಳ ಸ್ವಾರಸ್ಯಪೂರ್ಣ ಅಂಶಗಳನ್ನು ಕೈಬಿಡಲಾಗಿದೆ. ಕೇವಲ ಕಥಾಂಶಕ್ಕಷ್ಟೇ ಹೆಚ್ಚಿನ ಪ್ರಾಧಾನ್ಯ. ವರ್ಣನಾಂಶ ಬಂದರೂ ಅಲ್ಲೊಂದು-ಇಲ್ಲೊಂದು ಕಡೆ ಮಾತ್ರ ಕಂಡುಬರುತ್ತದೆ.

## ವಜ್ರಬಾಹು-ವಜ್ರದಂತರ ವೈರಾಗ್ಯ ಸನ್ನಿವೇಶ

**ಆದಿಪುರಾಣ-ಪೂರ್ವಪುರಾಣ :** ಉನ್ನತ ಶಿಖರದಂತಿದ್ದ ಶರತ್ಕಾಲದ ಮೋಡವನ್ನು ನೋಡಿ ವಜ್ರಬಾಹುವು "ಜಿನೇಂದ್ರ ರುಂದ್ರ ಮಂದಿರಮನದೊಂದನೀದೊರೆತೆ ಮಾಡಿ ಪೆನ್" ಎಂದು ಬಟ್ಟಿಗೆ ವಲಗೆಯನ್ನು ತರಿಸಿಕೊಂಡು ಬರೆಯುವಾಗ—'ಸಿರಿಯ ಶರೀರದ ರೂಪಿನ ನರರೈಶ್ವರ್ಯದ ಪೊದಟ್ಕೆಗಳ್ ಕರಗುವವೋಲ್, ಶರದಂಬುಧರಂ ಭೋಂಕನೆ ಕರಗಿದೊಡೆ' ಧರಣೇಶನು ಎದೆಕರಗಿ ಕೊರಗಿದನು (iv-೬೪). ಜಿನಮಂದಿರವನ್ನು ಕಟ್ಟಿಸ ಬೇಕೆಂಬ ಉತ್ಕೃಷ್ಟಭಾವದಲ್ಲಿ ಮನಸ್ಸು ಇದ್ದಾಗ ಅದರ ಆಕಾರವನ್ನು ಸುಂದರವಾದ

ಮೋಡದ ವಿನ್ಯಾಸದಲ್ಲಿ ಕಂಡು ಬರೆದುಕೊಳ್ಳುತ್ತಿದ್ದಾಗ ಅದು ಕರಗಿ ಚದುರಿತು. ಇದೇ ಆತನ ವೈರಾಗ್ಯಕ್ಕೆ ಕಾರಣವಾಯಿತು.

ಆತ್ಮೋನ್ನತಿಯ ಸಂಸ್ಕಾರವನ್ನು ಹೊಂದಿದ ಜೀವಿಗೆ ಸಂಸಾರದ ಕ್ಷಣಭಂಗುರತೆಯ ಅರಿವನ್ನುಂಟುಮಾಡುವ ಎಷ್ಟೋ ಪ್ರಸಂಗಗಳು ಜೀವಿತದುದ್ದಕ್ಕೂ ಹಾಸಿ ಹರಡಿದ್ದರೂ ಯಾವುದೋ ಒಂದು ಕಾಲದಲ್ಲಿ ಮೂಡಿ ಬರುವ ಪ್ರಸಂಗವು ಹೃದಯದಲ್ಲಿ ಗಟ್ಟಿಯಾಗಿ ನೆಲೆಯಾಗಿ ನಿಂತು ಇಡೀ ಸಂಸಾರದ ಅಸಾರತೆಯು ಮನದಲ್ಲಿ ದೃಢವಾಗಿ ನಿಲ್ಲುತ್ತದೆ. ಮೋಡದಲ್ಲಿ ಕಂಡುಕೊಂಡ ಅಸ್ಥಿರತೆಯನ್ನೇ ಸಂಸೃತಿಯಲ್ಲಿಯೂ ಕಂಡುಕೊಂಡ ವಜ್ರಬಾಹುವಿನ ಕಣ್ದೆರೆಯಿತು. ರಾಜ್ಯವನ್ನು ಮಗನಿಗೆ ಒಪ್ಪಿಸಿ ವಸುಂಧರಾದಿ ರಾಣಿಯರೊಡನೆ ಶ್ರೀಮತಿಯ ಮಕ್ಕಳಾದ ವೀರಬಾಹು ಮೊದಲಾದ ನಲವತ್ತೊಂಬತ್ತು ಅವಳಿಗಳೊಡನೆ ಐನೂರು ರಾಜರೊಡನೆ ದೀಕ್ಷಿತನಾದನು. ತಪವನ್ನು ಎಸಗಿ ಮೋಕ್ಷವನ್ನು ಪಡೆದನು. ದೀಕ್ಷಿತರಾದ ಮಕ್ಕಳನ್ನು ಕಂಡು ವಜ್ರಜಂಘ ಶ್ರೀಮತಿಯರ ಮನಸ್ಸು ತಡೆಯದಾಯಿತು. 'ನಿಮ್ಮನೆ ನೋಡಿ ಮದ್ಗುರುವಿಯೋಗಮನಾಱಿಪೆವು; ಈಗಳೀ ತಪಕ್ಕಮ್ಮ ಮನಂದರಲ್ ನಿಮಗೆ ಸಲ್ಲದು' ಎಂದು ಬೇಡಿ, ಅವರ ಕಾಲ್ಗಳನ್ನು ತಮ್ಮ ನೆತ್ತಿಯ ಮೇಲಿರಿಸಿಕೊಂಡು ಪ್ರಾರ್ಥಿಸಿದರು. ಆದರೆ ಮಕ್ಕಳ ದೃಢತೆ ಸ್ಥಿರವಾಗಿ ಬೇರೂರಿತ್ತು. ಅವರು ಹಿಂದಿರುಗಲಿಲ್ಲ (iv-೬೮).

ಪೂರ್ವಪುರಾಣದಲ್ಲಿ ಈ ಪ್ರಸಂಗವು ಸ್ವಲ್ಪ ಬೇರೆಯ ರೀತಿಯಲ್ಲಿ ಕಿರಿದರಲ್ಲಿ ಮುಗಿದು ಹೋಗುತ್ತದೆ. ವಜ್ರಬಾಹು ಚದುರಿಹೋದ ಮೋಡವನ್ನು ನೋಡಿ ವೈರಾಗ್ಯಪರನಾದನೆಂದಷ್ಟೇ ಬರುತ್ತದೆ. ಪಂಪನು ಅಷ್ಟು ರೇಖೆಯನ್ನು ಮಾತ್ರ ಹಿಡಿದು ಅದನ್ನು ವಿಸ್ತರಿಸಿ ಬಣ್ಣಕೊಟ್ಟು ಹೆಚ್ಚು ಆಕರ್ಷಕಗೊಳಿಸಿದ್ದಾನೆ. ಚೈತ್ಯಾಲಯವನ್ನು ಕಟ್ಟಿಸುವ ಯೋಜನೆ ಮನದಲ್ಲಿ ಮೂಡಿ ಅದರ ಗೋಪುರಾಕಾರವನ್ನು ಬರೆದುಕೊಳ್ಳುತ್ತಿದ್ದಂತೆಯೇ ಮೋಡ ಚದುರಿಹೋದ ಪ್ರಸಂಗ, ಶ್ರೀಮತಿ ವಜ್ರಜಂಘರು ಮಕ್ಕಳನ್ನು ಹಿಂದಿರುಗಿ ಬರುವಂತೆ ಕೇಳಿಕೊಂಡ ಪ್ರಸಂಗ ಇವುಗಳು ಪಂಪನ ಪ್ರತಿಭೆಯ ನೂತನ ಸೃಷ್ಟಿ, ಶ್ರೀಮತಿ ವಜ್ರಜಂಘರಂತಹ ಸಂಸ್ಕಾರಯುತ ಜೀವಗಳು ಈ ರೀತಿ ದೀಕ್ಷೆಗೊಂಡ ಮಕ್ಕಳಿಗಾಗಿ ವ್ಯಾಕುಲತೆ ತೋರುವ ಅಂಶವು ಮೇಲುನೋಟಕ್ಕೆ ಅಷ್ಟೊಂದು ಸಮಂಜಸವೆನಿಸದಿದ್ದರೂ, ಅವರೂ ಕೂಡ ಸಾಧನೆಯ ಹಂತದಲ್ಲಿರುವ ಸಾಮಾನ್ಯ ಮಾನವ ಮಿಡಿತಗಳನ್ನುಳ್ಳವರೇ ಎಂಬುದನ್ನು ಗುರುತಿಸಿಕೊಂಡಾಗ ಈ ಭಾಗ ಸಹಜವಾಗಿ ಕಂಡುಬರುತ್ತದೆ.

ಒಡ್ಡೋಲಗದಲ್ಲಿ ವಿರಾಜಿಸುತ್ತಿದ್ದ ವಜ್ರದಂತನಿಗೆ ಓರ್ವ ವನಪಾಲಕನು ಅರಳಿದ ಸುವರ್ಣವರ್ಣದ ತಾವರೆಯನ್ನು ತಂದುಕೊಟ್ಟನು. ಅದನ್ನು ತಿರುಗಿಸುತ್ತ ಅದರಂದವನ್ನು ನೋಡುತ್ತಿರುವಾಗ ಸೂರ್ಯಾಸ್ತಸಮಯದಲ್ಲಿ ಅದರೊಳಗೆ ಸಿಕ್ಕಿಬಿದ್ದ ಸತ್ತ ದುಂಬಿಯೊಂದು ಆ ತಾವರೆಯಿಂದ ಆಚೆ ಬಿದ್ದಿತು (iv-೭೧). ರಾಜನಿಗೆ ವೈರಾಗ್ಯ ಚಿಂತನೆ ಅಂಕುರಿಸಿತು. 'ಈ ಮಧುಪಂ ದಳಿತಾಂಭೋಜಾಮೋದಾಸಕ್ತನ್ ಅಕ್ಕಟಾ ಮಡಿದುದು' (iv-೭೨) ಎಂದು ಉದ್ಗಾರ ತೆಗೆದ ಮನಸ್ಸು ಮಾನವನ ಸ್ಥಿತಿಯತ್ತ ತಿರುಗಿತು. 'ಒಂದೊಂದೆ ರಸದ ಸೋಲಮದು ಒಂದೊಂದನೆ ಕೊಲ್ಗುಂಮೋವೊ ಬಗೆವಂದದೆ ಸಕಳವಿಷಯವಿಷಮವಿಷಂಗಳ್ ಲಂಪಟರಪ್ಪ ಎಮ್ಮಂದಿಗರಂ ಕೊಂದಿಕ್ಕವೆ' (iv-೭೩)

ಎಂದು ಯೋಚಿಸುತ್ತಿದ್ದಂತೆ ವೈರಾಗ್ಯವು ಭುಗಿಲೆದ್ದು ಆವರಿಸಿತು. ಪಂಪನು ಇಲ್ಲಿ ಹೇಳುವ ಎಷ್ಟೋ ಮಾತುಗಳು ಪೂರ್ವಪುರಾಣದಲ್ಲಿ ಬರುವ ಮಾತುಗಳೇ ಆಗಿವೆ. ಅಲ್ಲಿಯ ಹಲವಾರು ಬೋಧಪ್ರದವಾದ ಮಾತುಗಳನ್ನು ಪಂಪನು ಹಾಗೆಯೇ ಹಿಡಿದಿಟ್ಟಿರುವುದನ್ನು ಗಮನಿಸಬಹುದಾಗಿದೆ.

ತೃಣಶಿಖರಾಧ್ಯುಷಿತಾಂಭಃ | ಕಣಸಂಚಲಮಮರಚಾಪಚಪಲಂ ವಿದ್ಯುತ್
ಕ್ಷಣಿಕಂ ನಿಟ್ಟಿಯೆ ತನುಭೃ | ದ್ಗಣಯೌವನರೂಪವಿಭವಭೋಗಾಭೋಗಂ
(ಆದಿಪು. iv-೭೫)

ಶರೀರದ ಗುಣ, ಯೌವನ ರೂಪ ಐಶ್ವರ್ಯ ಮತ್ತು ಭೋಗ ವಿಸ್ತಾರಗಳು ಹುಲ್ಲಿನ ತುದಿಯಲ್ಲಿರುವ ನೀರಿನ ಹನಿಗಳಂತೆ ಚಂಚಲವಾದುವು, ಕಾಮನ ಬಿಲ್ಲಿನಂತೆ ಚಪಲವಾದವು. ಮಿಂಚಿನಂತೆ ಕ್ಷಣಿಕವಾದುವು, (ಇದೇ ಭಾವವನ್ನು ಕವಿ ಮುಂದೆ ೯ನೇ ಆಶ್ವಾಸದ ೪೬ನೆಯ ಪದ್ಯದಲ್ಲಿ ಇದಕ್ಕಿಂತಲೂ ಪ್ರಭಾವಕಾರಿಯಾಗಿ ನಿರೂಪಿಸಿರುವುದನ್ನು ಗಮನಿಸಬಹುದಾಗಿದೆ). ಪೂರ್ವಪುರಾಣದಲ್ಲಿ ಈ ಭಾವವು ಎರಡು ಶ್ಲೋಕಗಳಲ್ಲಿ ಬರುತ್ತದೆ.

ವಪುರಾರೋಗ್ಯಮೈಶ್ವರ್ಯಂ ಯೌವನಂ ಸುಖಸಂಪದಂ |
ವಸ್ತುವಾಹನಮನ್ಯಚ್ಚ ಸುರಚಾಪವದಸ್ಥಿರಂ ||
ತೃಣಾಗ್ರಲಗ್ನವಾರ್ಬಿಂದುರ್ವಿನಿಪಾತೋನ್ಮುಖೋ ಯಥಾ |
ತಥಾ ಪ್ರಾಣಭೃತಾಮಾಯುರ್ವಿಲಾಸೋ ವಿನಿಪಾತುಕಃ || (viii-೨೦-೨೧)

ಶರೀರ ಆರೋಗ್ಯ ಐಶ್ವರ್ಯ ಯೌವನ ಸುಖಸಂಪತ್ತು ವಸ್ತುವಾಹನ ಮೊದಲಾದುವೆಲ್ಲವೂ ಇಂದ್ರಧನುಸ್ಸಿನಂತೆ ಅಸ್ಥಿರವಾದುವು. ಹುಲ್ಲಿನ ತುದಿಯಲ್ಲಿರುವ ನೀರಿನ ಬಿಂದುವು ಬಿದ್ದುಹೋಗುವುದಕ್ಕೆ ಸಿದ್ಧವಾಗಿರುವಂತೆ ಪ್ರಾಣಿಗಳ ಆಯುಷ್ಯದ ಲೀಲೆಯೂ ಪತನವಾಗುವುದಾಗಿದೆ. ಈ ಮುಂತಾಗಿ ವೈರಾಗ್ಯಭಾವವನ್ನು ತಳೆದು ಈ ವೈಭೋಗಗಳನ್ನೆಲ್ಲಾ 'ಮುಂಬಿಸುಡುವುದೆ ಚದುರ್‌ನೆಟ್ಟನೆ' ಎಂದು ಬಗೆದು ತಪೋಮಾರ್ಗದಲ್ಲಿ ನಡೆಯಲು ನಿಶ್ಚಯಿಸಿದನು. ಆದರೆ ಹಿರಿಯಮಗ ಅಮಿತತೇಜನಿಗೆ ರಾಜ್ಯವನ್ನು ಕೊಡಲು ಅಪೇಕ್ಷಿಸಿದಾಗ 'ನಿಮಗೆ ಒಳಿತು ಮಾಡದ ಭೋಗವು ನನಗೆ ಒಳಿತು ಮಾಡೀತೇ? ನಿಮ್ಮ ಮಾರ್ಗವೇ ನಮ್ಮ ಮಾರ್ಗ'ವೆಂದು ಹೇಳಿದನು. ಇಲ್ಲೆಲ್ಲಾ ಪಂಪನು ಪೂರ್ವಪುರಾಣಕ್ಕೆ ಋಣಿಯಾಗಿದ್ದರೂ ಕೆಲವು ಮಾತುಗಳು ಆತನ ಪ್ರತಿಭೆಯ ಹೊಸ ಹೊಳಪುಗಳಾಗಿ ಕಾಣಿಸಿಕೊಳ್ಳುತ್ತವೆ. ಉದಾಹರಣೆ : ವಜ್ರದಂತನು ಅಮಿತತೇಜನಿಗೆ ರಾಜ್ಯವನ್ನು ಸ್ವೀಕರಿಸೆಂದು ಮತ್ತೆ ಮತ್ತೆ ಕೇಳಿಕೊಂಡಾಗ ವಿನೀತನಾಗಿಯೇ ಅದನ್ನು ನಿರಾಕರಿಸಿ "ಈಗ ನೀಡಿದ ರಾಜ್ಯಭಾರವನ್ನು ಸ್ವೀಕರಿಸಿ ಅನಂತರ, ಈ ಧರಣೀಭಾರವನ್ನು ಬಿಸುಟ್ಪೊಡದು ಚಿಃ ಲೋಕಕ್ಕೆ 'ಖಾತ್ವಾಸಮೀಕರಣಂ' (ಅಗೆದು ಮುಚ್ಚುವುದೆಂಬ ಗಾದೆಗೆಣೆ) ಎಂಬಂತಾಗದೇ" ಎಂದು ನಿಶ್ಚಿತ ರೀತಿಯಲ್ಲಿ ಹೇಳುವ ಮಾತುಗಳನ್ನು ಗಮನಿಸಬಹುದು. ಕೊನೆಗೆ, ಹಾಲುಗಲ್ಲದ ಮುಗ್ಧ ಹಸುಳೆಗೆ ಅಮಿತತೇಜನ ಮಗ ಪುಂಡರೀಕನಿಗೆ ರಾಜ್ಯವನ್ನು ನಿಯಮಿಸಿ, ವಜ್ರದಂತನು ಅನೇಕ ರಾಜ-ರಾಣಿ-ಮಕ್ಕಳೊಂದಿಗೆ ಹಾಗೂ ಪಂಡಿತೆಯೊಂದಿಗೆ ದೀಕ್ಷಿತನಾಗಿ ಮೋಕ್ಷವನ್ನು ಪಡೆದನು.

## ಉತ್ತರಕಾಲೀನ ಕಾವ್ಯಗಳು

**ಚಾವುಂಡರಾಯಪುರಾಣ :** ಪಂಪನನ್ನು ಅನುಸರಿಸಿ ಅತ್ಯಂತ ಕಿರಿದಾದ ವಿವರದೊಂದಿಗೆ ಚಾಮುಂಡರಾಯನು ಈ ಪ್ರಸಂಗವನ್ನು ವಿವರಿಸಿದ್ದಾನೆ : "ಒಂದು ದಿವಸಂ ವಜ್ರಬಾಹು ಮಾಡದ ಮೇಗಣ ನೆಲೆಯೊಳಿರ್ದು ಶರತ್ಕಾಲದ ಜಲಧರಮಂ ಕಂಡಿದಱಿದೊರೆಯ ಚೈತ್ಯಾಲಯಮಂ ಮಾಡಿಸುವೆನೆಂದು ಬಟ್ಟಿಗೆ ವಲಗೆಯಂ ತರಿಸಿ ತದಾಕಾರಮಂ ಬರೆಯೆ ಮುಗಿಲ್ ಕರಗಿದುದಂ ಕಂಡು ಅದುವೆ ನಿರ್ವೇಗಮಾಗಿ ವಜ್ರಜಂಘಂಗೆ ಪಟ್ಟಮಂ ಕಟ್ಟಿ" ತಪವನ್ನು ಕೈಗೊಂಡನು. ಕಿರಿದಾದರೂ ಕವಿ ಪ್ರಭಾವಕಾರಿಯಾಗಿ ಅಲ್ಲಿಯ ಪ್ರಸಂಗದ ಭಾವವನ್ನು ಹಿಡಿದಿಡುವುದರಲ್ಲಿ ಸಮರ್ಥನಾಗಿದ್ದಾನೆ.

ವಜ್ರದಂತನ ವೈರಾಗ್ಯ ಸನ್ನಿವೇಶವಾದಲ್ಲಿಯೂ ಪಂಪನ ಜಾಡು ಕಂಡುಬರುತ್ತದೆ. "ಮುಕುಳಿತ ನೀಳಾರವಿಂದಮಂ ಪಿಡಿದು ನೋಡುತ್ತಿರ್ದನದಱೊಳಗೆ ಸತ್ತಿರ್ದ ತುಂಬಿಯಂ ಕಂಡೊಂದಿಂದ್ರಿಯದ ಬೆಸನದೊಳೆಸಗಿದುದಕ್ಕಿಂತಾದುದು, ಐದುಮಿಂದ್ರಿಯದ ಬೆಸನದೊಳೆಸಗುವೆಮಗೆಂತಕ್ಕುಂ" (ಪು. ೩೦) ಎಂದು ಪಂಪನ ಕೆಲವು ಮಾತುಗಳನ್ನು ಸಂಗ್ರಹಿಸಿ ಹೇಳಿರುವುದನ್ನು ಕಾಣಬಹುದಾಗಿದೆ. ವ್ಯತ್ಯಾಸವೆಂದರೆ ಇಲ್ಲಿ ರಾಜನು ಮುಕುಳಿತ ನೀಳಾರವಿಂದವನ್ನು ಕೈಯಲ್ಲಿ ಹಿಡಿದಿದ್ದನೆಂದು ಬರುತ್ತದೆ. ವನಮಾಲಿಯು ತಂದು ಅದನ್ನು ನೀಡಿದ ವೃತ್ತಾಂತವು ಇಲ್ಲಿ ಕಂಡುಬರುವುದಿಲ್ಲ. ಪೂರ್ವಪುರಾಣ, ಆದಿಪುರಾಣಗಳಲ್ಲಿರುವ ಈ ಅಂಶವನ್ನು ಚಾಮುಂಡರಾಯನು ಸಂಗ್ರಾಹಕತೆಯ ದೃಷ್ಟಿಯಿಂದ ಕೈಬಿಟ್ಟಂತೆ ತೋರುತ್ತದೆ. ಉಳಿದ ಕಥಾಂಶಗಳು ಪೂರ್ವವರ್ತಿ ಪುರಾಣ-ಕಾವ್ಯಗಳಲ್ಲಿರುವಂತೆಯೇ ಬರುತ್ತವೆ.

**ಹಸ್ತಿಮಲ್ಲನ ಪೂರ್ವಪುರಾಣ :** ವಜ್ರಬಾಹುವಿನ ವೈರಾಗ್ಯ ಸನ್ನಿವೇಶವು ಸಂಗ್ರಾಹಕತೆಯ ದೃಷ್ಟಿಯಿಂದ ಚಾವುಂಡರಾಯಪುರಾಣವನ್ನು ಹೋಲುತ್ತದೆ. ಅಲ್ಲಿಯ ಗದ್ಯರೂಪ ಇಲ್ಲಿ ಸರಳಗೊಂಡು ಬಂದಿರುವಂತೆ ತೋರುತ್ತದೆ. ವಜ್ರದಂತನ ವೈರಾಗ್ಯ ಸನ್ನಿವೇಶದಲ್ಲಿ ಕವಿ ನೇರವಾಗಿ ಆದಿಪುರಾಣಕ್ಕೆ ಋಣಿಯಾಗಿದ್ದಾನೆ. ಚಾಮುಂಡರಾಯನು ಕೈಬಿಟ್ಟಿರುವ ವನಪಾಲಕನ ವಿಚಾರವನ್ನು ಹೇಳಿದ್ದಾನೆ. ಅಲ್ಲದೆ ಅಲ್ಲಿಯ ಪದಪುಂಜಗಳನ್ನು ಸಹ ತನ್ನದಾಗಿಸಿಕೊಂಡಿದ್ದಾನೆ. ಉದಾಹರಣೆಗೆ :

> ವಜ್ರದಂತ ಚಕ್ರಿ ಸಕಲ ಮಕುಟ ಬದ್ಧ ಪರಿವೃತನಾಗಿ ಸಿಂಹಾಸನದೊಳೋಲಗಂಗೊಟ್ಟಿರೆ, ವನಪಾಲಕಂ ಕೆಂದಾವರೆಯಂ ಕಾಣಿಕೆಗೊಡಲದಂ ವಾಸಿಸಿ ಸಂತಸಂಬಟ್ಟು ನಾಳಮಂ ಪಿಡಿದು ತಿರುಗಿಸೆ, ಅದರೊಳ್ ಘ್ರಾಣೇಂದ್ರಿಯಾಸಕ್ತನಾಗಿ ಮುನ್ನಿನದಿನದ ಸೂರ್ಯಾಸ್ತಸಮಯದೊಳ್ ಸಿಕ್ಕಿಸತ್ತಿರ್ದ ತುಂಬಿಯುಂ ಬೀಳೆ, ಆಶ್ಚರ್ಯದಿಂದದಂ ಮುಗುಳ್ನಗೆವೆರಸು ನೋಡಿ ಘ್ರಾಣೇಂದ್ರಿಯದೊಂದಕ್ಕೆ ಸಿಕ್ಕಿ ಇಂತು ತುಂಬಿ ಸತ್ತುದಕ್ಕಟ ಪಂಚೇಂದ್ರಿಯ ಲಂಪಟರಪ್ಪ ನಮ್ಮ ವಿಷಯ-ವಿಷಂಗಳ್ಕೊಲುವುದಚ್ಚರಿಯಲ್ಲೆಂದತ್ಯಂತ ವೈರಾಗ್ಯ ಪರಾಯಣನಾಗಿ (ಹಪೂರ್ವ.)

ಆದಿಪುರಾಣಗಳಲ್ಲಿ ಬರುವ ಚತುರ್ಥಾಶ್ವಾಸದ ಮೂರು ಕಂದಪದ್ಯಗಳಿಗೆ (೭೧, ೭೨, ೭೩) ಹಾಗೂ ಚಾವುಂಡರಾಯಪುರಾಣದ ಗದ್ಯಭಾಗಕ್ಕೆ (ಪುಟ ೩೦) ಹಸ್ತಿಮಲ್ಲನು

ಋಣಿಯಾಗಿರುವಂತೆ ತೋರುತ್ತದೆ. ಉಳಿದ ವಿಚಾರಗಳು ಅತ್ಯಂತ ಸಂಗ್ರಹವಾಗಿ ಅಡಕಗೊಂಡು ಬಂದಿವೆ.

**ಪುಣ್ಯಾಸ್ರವದ ಆದೀಶ್ವರರ ಕಥೆ :** ಪೂರ್ವಪುರಾಣಕ್ಕೆ ಅನುಸಾರವಾಗಿ ವಜ್ರಬಾಹುವಿನ ವೈರಾಗ್ಯವು ಚಿತ್ರಿತವಾಗಿದೆ. ಒಂದು ದಿನ 'ವಜ್ರಬಾಹುವೊಡ್ಡಿರ್ದ ಮುಗಿಲ್ಕರಗಿದುದಂ ಕಂಡು, ಮನುಷ್ಯರ ಬಾಳುವೆಯಿಂತುಟೇಯೆಂದು' ಬಗೆದು ವೈರಾಗ್ಯವ ತಳೆದನು. ಬಟ್ಟವಲಗೆಯಲ್ಲಿ ಮುಗಿಲಿನ ಚಿತ್ರವನ್ನು ಬರೆದುಕೊಳ್ಳಲು ತೊಡಗಿದನೆಂಬ ವೃತ್ತಾಂತವು ಪೂರ್ವಪುರಾಣದಂತೆ ಇಲ್ಲಿಯೂ ಕಂಡುಬರುವುದಿಲ್ಲ.

ವಜ್ರದಂತನ ವೈರಾಗ್ಯ ಸನ್ನಿವೇಶವೂ ಅದೇ ಕಥಾಚೌಕಟ್ಟಿನಲ್ಲಿ ಬರುತ್ತದೆ.

ವನಪರಿಪಾಲಕನೊರ್ವಂ | ವನಪ್ರಸೂನಂಗಳೊಡನೆ ನರಪತಿಗಿತ್ತಂ
ವನಜದ ಮೊಗ್ಗೆಯನೊಂದಂ | ಕನಕರುಚಿ ಪ್ರಚುರಮಂ ಮನೋಹರಯುತಮಂ (ix-೫೦)

ಈ ಪದ್ಯದಲ್ಲಿ ಗಮನಿಸಬಹುದಾದ ಅಂಶವೆಂದರೆ ವನಪಾಲಕನು ಕೇವಲ ವನಜದ ಮೊಗ್ಗನ್ನು ಮಾತ್ರ ತಂದೀಯಲಿಲ್ಲ. ಅದರೊಳಗೆ ವನಪ್ರಸೂನಗಳೂ ಇದ್ದುವು. ತಾವರೆಯ ಮೊಗ್ಗನ್ನು ಹಿಡಿದು ವಿನೋದದಿಂದ ತಿರುಗಿಸುತ್ತಿರುವಾಗ ಮೃತ್ಯುವಿಲಾಸ ವನ್ನೆದಿದ ತುಂಬಿಯನ್ನು ಕಂಡು ವಿಷಯಗಳ ವಿಷಮತೆಗೆ ವಿಸ್ಮಯಪಟ್ಟು ವೈರಾಗ್ಯ ಹೊಂದುತ್ತಾನೆ. ಉಳಿದ ವಿಷಯಗಳು ಸಂಗ್ರಹವಾಗಿ ಮಿಕ್ಕ ಕಾವ್ಯಗಳಂತೆಯೇ ಬರುತ್ತವೆ.

**ಪುರುದೇವಚರಿತ :** ಚಾವುಂಡರಾಯಪುರಾಣವನ್ನು ಕವಿ ಸಂಗ್ರಾಹಕತೆಯ ದೃಷ್ಟಿ ಯಿಂದಲೂ ಕೆಲವೆಡೆ ಪದಪುಂಜಗಳನ್ನು ಪ್ರಯೋಗಮಾಡುವಾಗಲೂ ಅನುಸರಿಸಿರುವುದು ಕಂಡುಬರುತ್ತದೆ. ವಜ್ರಬಾಹುವಿನ ವೈರಾಗ್ಯಸನ್ನಿವೇಶವು ಮೂರು ಸಾಂಗತ್ಯಗಳಲ್ಲಿ ಮುಗಿದುಹೋಗುತ್ತದೆ.

ತೊಟ್ಟನೆ ಕಂಡದರಂತೆ ಚೈತ್ಯಾಲಯವ | ಕಟ್ಟಿಸವೇಳ್ಕೆಂದದನು
ಬಟ್ಟವಲಗೆಯೊಳು ಬರೆದ ಸಮಯಕದು | ಕೆಟ್ಟುದಕಾಶ್ಚರ್ಯವಟ್ಟು (ii-೧೧೩)

ನಿರ್ವೇಗದಿಂದ ಅನೇಕ ರಾಜಾದಿಗಳ ಸಮೇತನಾಗಿ ವಜ್ರಬಾಹುವು ದೀಕ್ಷಿತನಾಗಿ ಮುಕ್ತಿಯನ್ನು ಪಡೆದನು.

ವಜ್ರದಂತನ ವೈರಾಗ್ಯ ಸನ್ನಿವೇಶವಂತೂ ಚಾವುಂಡರಾಯಪುರಾಣದ ಅನುವರ್ತಿ ಯಾಗಿಯೇ ಬಂದಿದೆ. ಅಲ್ಲಿಯ ಗದ್ಯಭಾಗವನ್ನು ಕವಿ ಇಲ್ಲಿ ಸಾಂಗತ್ಯರೂಪಕ್ಕೆ ಅಳವಡಿಸಿ ದ್ದಾನೆ. ಉದಾಹರಣೆಗೆ :

ಇತ್ತ ಚಕ್ರೇಶ್ವರನೊಂದರವಿಂದವ | ಬಿತ್ತರದಿ ನೋಡುವಾಗ
ಸತ್ತ ತುಂಬಿಯನೊಂದನದರೊಳಿರ್ದುದ ಕಂಡು | ಚಿತ್ತದಿಂ ನಿರ್ವೇಗಮೊದವೆ
ಒಂದಿಂದ್ರಿಯವ್ಯಸನದಿನಿಂತಾದುದೈ | ದಿಂದ್ರಿಯಾಸಕ್ತರಾದವರು
ಮುಂದೇನೇನಾಗರಕಟ ಹಾಹಾದಿಟ | ವೆಂದು ಜನರೆಲ್ಲ ಬರಸಿ (ii-೧೧೭-೧೧೭)

ಚಾವುಂಡರಾಯಪುರಾಣದಲ್ಲಿ ಬರುವ ಗದ್ಯಭಾಗಕ್ಕೆ (ಪುಟ ೩೦) ಈ ಸಾಂಗತ್ಯಗಳು ಬಹಳ ಹತ್ತಿರವಾಗಿ ಕಾಣುತ್ತವೆ.

**ಆದಿಪರಮೇಶ್ವರನ ಯಕ್ಷಗಾನ :** ಉತ್ತರಕಾಲೀನ ಕಾವ್ಯಗಳಲ್ಲಿ ಇದು ಹೆಚ್ಚಿನ ವಿವರಗಳನ್ನು ನೀಡುತ್ತದೆ. ವೈರಾಗ್ಯಭಾವನೆಯ ವಿವರಗಳನ್ನು ನೀಡುವಲ್ಲಿ ಪೂರ್ವ

ಪುರಾಣ, ಆದಿಪುರಾಣದ ವರ್ಣನಾ ವೈಖರಿಗೆ ಇದು ಹೋಲುತ್ತದೆ. ಕಥೆಯ ಮುಖ್ಯ ಗುರಿ ಜೀವಿಯನ್ನು, ಸಂಸಾರದ ಅಸ್ಥಿರತೆಯ ಕಡೆಗೆ ತಿರುಗಿಸುವುದು. ಆದ್ದರಿಂದ ಅದನ್ನರಿತ ಕವಿ, ಈ ಪ್ರಸಂಗದಲ್ಲಿ ವೈರಾಗ್ಯಭಾವದ ಚಿತ್ರಣವನ್ನು ಕೊಡುತ್ತಾನೆ. ಮೇಘದ ಮಾಟ-ಕೂಟವನ್ನು ಚಿತ್ರಿಸುತ್ತಿರುವಾಗ ಮೇಘ ಕರಗುತ್ತದೆ. ವೈರಾಗ್ಯ ನೆಲೆಗೊಳ್ಳುತ್ತದೆ. ನರರ ಭೋಗವೂ ಇಷ್ಟೇಯೆ ಎಂದು ಮನದಲ್ಲಿ ನಾಟಿ—

ಪಿರಿದು ರಾಜ್ಯಸುರಧನುವಿನೊಲ್ಸಿರಿಯು ಸಂಜೆಗೆಂಪು ಬಂಧು
ಕರಿಯು ತುರಗರಥವು ಸೇನೆಯಿರವು ಬಯಲ ದೊರೆಯಭಾವವು
ಬಂಧು ಬಳಗ ಪುತ್ರಮಿತ್ರ ವೃಂದಮಯ ಕಳತ್ರಮೆಂಬ
ಗೊಂದಣೆಸೆವ ಮೇಘದೊಡ್ಡಿದೆಂದು ಮನದಿ ಭಾವಿಸುತ್ತಿಹ (ಪರಿಚ್ಛೇದ iii)

ಅರವಿಂದನು 'ಮರವೆಗೆ ಅರುಹುದೋರುವಂತೆ' ಮುಕ್ತಿಲಕ್ಷ್ಮಿಯು ತೋರಿದ ಅರಿವಿದೆಂದು ತಿಳಿದು ದೀಕ್ಷಿತನಾದನು.

ವಜ್ರದಂತನ ವೈರಾಗ್ಯ ಸನ್ನಿವೇಶವನ್ನು ಕವಿ ನಾಲ್ಕು ಕಂದಪದ್ಯಗಳಲ್ಲಿ ಸರಳವಾಗಿ ವರ್ಣಿಸಿದ್ದಾನೆ. ವನಪಾಲಕನು,

ಪೊಂದಾವರೆಯೊಂದು ಕಾಣಿಕೆ
ದಂದರಸಗೆ ಕೊಡಲು ನಾಳಮಂ ಪಿಡಿದದನು
ಅಂದದಿ ಚಕ್ರಿಯು ತಿರುಹಲು
ನೊಂದಸುವಳಿದೊಂದು ತುಂಬಿ ಕೆಡೆಯಲು ಕಂಡಂ

ಸಾಸಿರದಳದ ಸರಾಗಕೆ
ಆಸಕ್ತದಿ ಸಿಲ್ಕಿ ಸತ್ತಿತಿದುಘ್ರಾಣೇಂದ್ರಿಯ
ದಾಸೆಯಲಿಯೆಂದು ಮನದೊಳು
ಹೇಸಿದನಕಟಕಟವಿಷಯಲಂಪಟನಾದೆಂ (ಪರಿಚ್ಛೇದ iii)

ಈ ವರ್ಣನೆಯು ಪಂಪಾದಿಗಳ ವರ್ಣನೆಯನ್ನೇ ಅನುಸರಿಸುತ್ತದೆ. ಮುಂದೆ ಬರುವ ಕಂದಪದ್ಯದಲ್ಲಿ ಕವಿ ಸ್ವಲ್ಪ ಹೆಚ್ಚಿನ ವಿವರ ನೀಡುವುದನ್ನು ಕಾಣಬಹುದು.

ಒಂದೊಂದಿಂದ್ರಿಯ ದೆಶೆಯೊ
ಳೊಂದು ತುರಂಗಾನೆ ಮೀನು ತುಂಬಿ ಪತಂಗಗಳ್
ನೊಂದವು ಪಂಚೇಂದ್ರಿಯ ಲಂಪಟ
ದಿಂದ ಸುರ ನರರನೊಯ್ವುದೊಂದಾಶ್ಚರಿಯ (ಪರಿಚ್ಛೇದ iii)

ಶ್ರವಣೇಂದ್ರಿಯ, ಸ್ಪರ್ಶೇಂದ್ರಿಯ, ಘ್ರಾಣೇಂದ್ರಿಯ, ರಸನೇಂದ್ರಿಯ, ಚಕ್ಷುರಿಂದ್ರಿಯಗಳ ಪ್ರತ್ಯೇಕ ಆಕರ್ಷಣೆಗೆ ಒಳಗಾಗಿ ತುರಂಗಾದಿಗಳು ನಾಶವಾಗುತ್ತವೆ. ಇನ್ನು ಪಂಚೇಂದ್ರಿಯಗಳೂ ಒಟ್ಟಿಗೆ ಬಾಧಿಸುವ ವ್ಯಕ್ತಿಯ ಪಾಡೇನು?

ಮುಂದಿನ ಕಥಾಂಶವು ಸಂಕ್ಷಿಪ್ತವಾಗಿ ಮುಗಿದಿದೆ.

### ವಜ್ರದಂತನ ಪ್ರಯಾಣ, ಆಹಾರದಾನ ವೃತ್ತಾಂತಗಳು

**ಆದಿಪುರಾಣ-ಪೂರ್ವಪುರಾಣ :** ಮುಗ್ಧನಾದ ಬಾಲಕನು ಪುಂಡರೀಕಿಣಿಗೆ ರಾಜ

ನಾದಾಗ ಅಲ್ಲಿಯ ಕೆಲವು ಮಾಂಡಲಿಕರು ಕೊಬ್ಬಿದರು. ಕಪ್ಪವನ್ನು ಕೊಡದೆ ಚಪ್ಪರಿಸುವವರನ್ನು, ಗಡಿ ಪ್ರದೇಶವನ್ನು ಒತ್ತರಿಸಿ ಬರುತ್ತಿದ್ದ ಶತ್ರುಗಳನ್ನು ಗಮನಿಸಿದ ಲಕ್ಷ್ಮೀಮತಿ ಅಳಿಯ ವಜ್ರಜಂಘನ ಸಹಾಯವನ್ನು ಯಾಚಿಸಿ, ಚಿಂತಾಗತಿ-ಅಮಿತಗತಿಯರೊಂದಿಗೆ ಅಲ್ಲಿಯ ಸ್ಥಿತಿಗತಿಗಳನ್ನು ಪತ್ರದ ಮುಖೇನ ಬರೆದು ಕಳಿಸಿದಳು. ವಜ್ರಜಂಘನು ಪ್ರಧಾನಮಂತ್ರಿಯಾದ ಮತಿವರ, ಸೇನಾಪತಿಯಾದ ಅಕಂಪನ, ಪುರೋಹಿತನಾದ ಆನಂದ, ಪ್ರಧಾನ ಶ್ರೇಷ್ಠಿಯಾದ ಧನಮಿತ್ರರೊಡನೆ ಆಲೋಚಿಸಿ ಶ್ರೀಮತಿಯೊಡನೆ ಸಕಲಪರಿವಾರ ಸಮೇತನಾಗಿ ಪ್ರಯಾಣ ಬೆಳೆಸಿದನು. ವೈಭವದ ಗೂಳೆಯೆದ್ದಂತೆ ರಾಜನ ಪ್ರಯಾಣ ಸಕಲ ಪರಿಜನ ಬಂಧುಜನರೊಂದಿಗೆ ಹೊರಟಿತು. ಹಾಗೆ ಹೊರಟು ಶಷ್ಪ ಸರೋವರದಲ್ಲಿ ಕೆಲವು ಕಾಲ ತಂಗಿತು. ಆ ಸಂದರ್ಭದಲ್ಲಿ ಕಾಂತಾರ ಚರ್ಯೆಯಲ್ಲಿ ಅಲ್ಲಿಗೆ ಬಂದ ದಮಧರ-ಸಾಗರಸೇನರೆಂಬ ಗಗನಗಾಮಿಗಳನ್ನು ಕಂಡು ಶ್ರೀಮತಿ ವಜ್ರಜಂಘರು ಅವರಿಗೆ ನಮಸ್ಕರಿಸಿದರು, ಆಹಾರದಾನವಿತ್ತರು. ದೇವತೆಗಳಿಂದ ಪಂಚಾಶ್ಚರ್ಯಗಳಾದವು.

ಪ್ರಯಾಣದ ವರ್ಣನೆಯನ್ನು ಮಾಡುವಾಗ ಪಂಪನು ಪೂರ್ವಪುರಾಣದಲ್ಲಿ ಬರುವ ಎಲ್ಲ ಸಂಗತಿಗಳನ್ನು ವಿವರವಾಗಿ ಹೇಳದೆ, ಔಚಿತ್ಯಪ್ರಜ್ಞೆಯಿಂದ ಕಥಾಸ್ವಾರಸ್ಯಕ್ಕೆ ಧಕ್ಕೆ ಆಗದಂತೆ ಎಚ್ಚರಿಕೆ ವಹಿಸಿದ್ದಾನೆ. ಪೂರ್ವಪುರಾಣದಲ್ಲಿ ಈ ಭಾಗದಲ್ಲಿ ಪ್ರಯಾಣಕ್ಕೆ ಹೊರಟ ಚತುರಂಗ ಬಲದ, ಸೇವಕರ, ಮಹಿಳೆಯರ, ಪರಿಜನಾದಿಗಳ ವರ್ಣನೆಗಳು ಎಳೆಯೆಳೆಯಾಗಿ ಚಿತ್ರಿತವಾಗಿವೆ. ಶಷ್ಪಸರೋವರದ ಲೀಲಾವಿನೋದಗಳನ್ನು ಪಂಪನು ಕೈಬಿಟ್ಟಿದ್ದಾನೆ.

ದಮಧರ-ಸಾಗರಸೇನ ಚಾರಣರ ವರ್ಣನೆ ಪೂರ್ವಪುರಾಣಕ್ಕಿಂತ ಪಂಪನಲ್ಲಿ ಸುದೀರ್ಘವಾಗಿ ಬಂದಿದೆ. ಅವರ ವರ್ಣನೆಗಾಗಿಯೇ ಒಂದು ವಚನ ಭಾಗವನ್ನು ಮೀಸಲಾಗಿರಿಸಿದ್ದಾನೆ (ಅಧ್ಯಾಯ iv). ಈ ಚಾರಣರು ವಜ್ರಜಂಘ ಶ್ರೀಮತಿಯರ ಮುದ್ದು ಮಕ್ಕಳೇ ಎಂಬ ವಿಚಾರವು ಮುಂದೆ ತಿಳಿದುಬರುತ್ತದೆ. ಹೀಗಾಗಿ ಈ ಚಾರಣರ ಬಗೆಗೆ ಪಂಪ ವಿಶೇಷವಾಗಿ ಹೇಳಿರುವುದು ಉಚಿತವಾಗಿಯೇ ಇದೆ. ದಾನಾನುಮೋದದ ಪ್ರಸಂಗದಲ್ಲಿ ನವವಿಧ ಪುಣ್ಯ ಮತ್ತು ಏಳು ಗುಣಗಳನ್ನು ಕುರಿತು ಪಂಪನಲ್ಲಿ ಬರುವ ಮಾತುಗಳು (iv-೯೬-೯೭) ಪೂರ್ವಪುರಾಣದಲ್ಲಿಲ್ಲ. ಈ ದಾನವಿಶೇಷವು ವಜ್ರಜಂಘ-ಶ್ರೀಮತಿಯರ ಜೀವನದಲ್ಲಿ ತೀವ್ರ ಪರಿಣಾಮವನ್ನುಂಟು ಮಾಡುವುದಾದ್ದರಿಂದ ಅಂತಹ ದಾನದ ಮಹಿಮೆಯನ್ನು ಅದರ ವಿವರವನ್ನು ಭವ್ಯರಿಗೆ ತಿಳಿಸುವ ಉತ್ಸಾಹದಿಂದ ಪಂಪ ಇದನ್ನು ಹೊಸದಾಗಿ ಸೇರಿಸಿದ್ದಾನೆ.

ಆಹಾರದಾನವನ್ನು ನೀಡಿದಾಗ ಅಲ್ಲಿದ್ದ ಹುಲಿ, ಹಂದಿ, ಕೋತಿ, ಮುಂಗುಸಿಗಳು ದಾನಾನುಮೋದದಿಂದ ಕೂಡಿದ್ದುದನ್ನು ವಜ್ರಜಂಘನು ಗಮನಿಸಿ, ಅವುಗಳ ಹಾಗೂ ತನಗೆ ಪ್ರೀತಿಪಾತ್ರರಾದ ಮತಿವರಾದಿಗಳ ಭವಾವಳಿಗಳ ಬಗೆಗೆ ಚಾರಣಮುನಿಗಳನ್ನು ಪ್ರಶ್ನಿಸಿ ತಿಳಿದುಕೊಂಡನು.

ಈ ಜೀವಗಳು ಮುಂದೆ ಶ್ರೀಮತಿ ವಜ್ರಜಂಘರ ಜೀವಗಳಿಗೆ ಬೆಸುಗೆಯಾಗುವ ಜೀವಗಳೇ. ಇವುಗಳಂತೆಯೇ ಮಂತ್ರಿ, ಸೇನಾನಾಯಕ, ಪುರೋಹಿತ, ಶ್ರೇಷ್ಠಿ ಆಗಿದ್ದ

ಜೀವಗಳೂ ಆದಿನಾಥನಿಗೆ ಸಂಬಂಧಿಸಿ ಬರುವ ಜೀವಗಳೇ.

## ಉತ್ತರಕಾಲೀನ ಕಾವ್ಯಗಳು

ಚಾವುಂಡರಾಯಾದಿ ಪುರಾಣಗಳಲ್ಲಿ ವಜ್ರಜಂಘನು ಪ್ರಯಾಣ ಬೆಳೆಸಿ ಚಾರಣಮುನಿಗಳಿಗೆ ಆಹಾರದಾನವನ್ನಿತ್ತು ಭವಾಂತರದ ಕಥೆಗಳನ್ನು ಹೇಳುವ ಪ್ರಸಂಗವು ಅತ್ಯಂತ ಸಂಕ್ಷಿಪ್ತ ರೀತಿಯಲ್ಲಿ ಮೂಡಿಬಂದಿದೆ. ದಾನಾನುಮೋದದ ಪ್ರಸಂಗದಲ್ಲಿ ಉಳಿದ ಕಾವ್ಯಗಳಲ್ಲಿ ಮುನಿಗಳ ಪಾದವನ್ನು ತೊಳೆದ ನೀರಿನಲ್ಲಿ ವ್ಯಾಘ್ರಾದಿಗಳು ಹೊರಳಾಡಿದವು ಎಂಬ ಸೂಚನೆಯು ಇದ್ದರೆ, ಪುಣ್ಯಾಸ್ರವದಲ್ಲಿ ಅವುಗಳು ಬಂದು ಮುನಿಗಳಿಗೆ ನಮಸ್ಕರಿಸಿ ಅವರ ಸಮೀಪದಲ್ಲಿ ಕುಳಿತವೆಂಬ ಅಂಶವು ಬರುತ್ತದೆ.

## ಮತಿವರ-ಅಕಂಪನ-ಆನಂದ-ಧನಮಿತ್ರರ ಜನ್ಮಾಂತರದ ಕಥೆ

**ಆದಿಪುರಾಣ-ಪೂರ್ವಪುರಾಣ :** ಪ್ರಭಾಕರೀಪುರದರಸು ಅತಿಗೃದ್ಧನೆಂಬುವನು ಬಹ್ವಾರಂಭ ಪರಿಗ್ರಹಿ, ಲೋಭಿ. ಬೆಟ್ಟದ ತಪ್ಪಲಲ್ಲಿ ಐಶ್ವರ್ಯವನ್ನು ಹೂತಿಟ್ಟು ಸತ್ತು ಪಂಕಪ್ರಭೆಯ ದುಃಖಾಗ್ನಿಯಲ್ಲಿ ಬೆಂದು ಅಲ್ಲಿಂದ ಹೊರಬಂದು, ಮೊದಲು ತಾನು ಧನವನ್ನು ಬಚ್ಚಿಟ್ಟ ಅರಣ್ಯದಲ್ಲಿ ಹುಲಿಯಾಗಿ ಹುಟ್ಟಿದನು. ಹೀಗಿರಲು, ಆ ಮಂಡಲದ ಅಧಿಪತಿಯಾಗಿದ್ದ ಪ್ರೀತಿವರ್ಧನನು ಶತ್ರುಗಳನ್ನು ಸೋಲಿಸಿ ಬಂದು ಚತುರ್ಬಲಯುತನಾಗಿ ಆ ನಗರದ ಸುತ್ತ ಬೀಡುಬಿಟ್ಟನು. ಈ ಸಮಯದಲ್ಲಿ ಪುರೋಹಿತನು ಮುನಿಗೆ ನೀಡುವ ದಾನದಿಂದ ಆತನಿಗೆ ಕನಕದ ಪ್ರಾಪ್ತಿಯಾಗುವುದೆಂದು ನುಡಿಯಲು ರಾಜನು 'ಮುನಿವರರು ಈ ಗಿರಿಗೆ ಚರಿಗೆಗೆ ಬರುವುದು ಎಂತು? ಆ ಉಪಾಯವನ್ನು ತಿಳಿಸು' ಎಂದು ಕೇಳಿದಾಗ ಪುರೋಹಿತನು 'ಪೊಳಲಬೀದಿಬೀದಿಗಳನ್ನೆಲ್ಲ ತೊಳೆಸಿ ಗುಡಿಗಳನ್ನು ಕಟ್ಟಿಸಿ ಮೊಗ್ಗು, ಹೂವು, ಗೊಂಚಲುಗಳನ್ನು ಚೆನ್ನಾಗಿ ಹರಡಲು ಹೇಳು' ಎಂದನು. ಅದರಂತೆಯೇ ನಡೆಸಲಾಯಿತು. ಪಿಹಿತಾಸ್ರವ ಮುನಿಗಳು ಒಂದು ತಿಂಗಳ ವ್ರತಾಚರಣೆಯನ್ನು ಮುಗಿಸಿ ಆ ಪುರವನ್ನು ಪ್ರವೇಶಿಸಿ ಅಪ್ರಾಸುಕವಾಗಿರುವ ಆ ಪುರವು ಪ್ರವೇಶಾರ್ಹವಲ್ಲವೆಂದು ತಿಳಿದು, ಚರಿಗೆಗಾಗಿ ಅರಸನ ಬೀಡನ್ನು ಹೊಕ್ಕರು. ಆಹಾರದಾನವಾಗುತ್ತಿದ್ದಂತೆ ಪಂಚಾಶ್ಚರ್ಯಗಳ ಮಹಿಮೆ ನಡೆಯಿತು.

ಆಗ ಅಲ್ಲಿದ್ದ ಹುಲಿಯು ಜಾತಿಸ್ಮರನಾಗಿ ಆಹಾರವನ್ನು ತೊರೆದು ಶಾಂತಮನಸ್ಕವಾಯಿತು. ಅವಧಿಜ್ಞಾನಿಗಳಾದ ಮುನಿಗಳು ಅದನ್ನರಿತರು. ಪ್ರೀತಿವರ್ಧನನಿಗೆ ಪ್ರತಿಬೋಧಿಸಿ ಆ ಹುಲಿಯ ಪೂರ್ವಭವದ ವೃತ್ತಾಂತವನ್ನು ತಿಳಿಸಿ ಆ ಗಿರಿತಟದಲ್ಲಿ ಮೊದಲು ಹೂತಿಟ್ಟ ಸುವರ್ಣಪೂರ್ಣಗಡಿಗೆಗಳನ್ನು ತೋರಿದರು. ಮುನಿಯ ಪಾದಮೂಲದಲ್ಲಿ ಆ ಹುಲಿಯು ಹದಿನೆಂಟು ದಿನಗಳ ವ್ರತವನ್ನು ಆಚರಿಸಿತು. ನರಕದ ದುಃಖಾಗ್ನಿಯಲ್ಲಿ ಬೆಂದ ಆ ಹುಲಿ, ಸುಡುವ ಉದರಾಗ್ನಿಗಾಗಲಿ ದೇಹವನ್ನು ಅಲುಗಿಸಿದರೆ ಸಾಕು ಕಡಿಯುವ ಕಟ್ಟಿರುವೆಗಳ ಯಾತನೆಗಾಗಲಿ ಎದೆಗುಂದದೆ ಸಮಾಧಿಯನ್ನಪ್ಪಿ ಈಶಾನ್ಯ ಕಲ್ಪದಲ್ಲಿ ದಿವಾಕರಪ್ರಭನೆಂಬ ದೇವನಾಗಿ ಹುಟ್ಟಿತು. ಅಲ್ಲಿ ಲಲಿತಾಂಗನು ಪರಿವಾರ ದೇವರುಗಳಲ್ಲಿ ಒಬ್ಬನಾಗಿದ್ದನು. ಅಲ್ಲಿಂದ ಚ್ಯುತನಾಗಿ, ಮತಿಸಾಗರ-ಶ್ರೀಮತಿ ದಂಪತಿಗಳಿಗೆ ಮತಿವರ

ನಾಗಿ ಹುಟ್ಟಿದನು.

ಪ್ರೀತಿವರ್ಧನನು ದೀಕ್ಷಿತನಾಗಿ ಮುಕ್ತಿಯನ್ನು ಹೊಂದಿದನು. ನಿಜವಾದ ಅರ್ಥದಲ್ಲಿ ಆತನಿಗೆ ಶಾಶ್ವತವಾದ ಕನಕನಿಧಿಯೇ ದೊರೆಯಿತು. ದಾನಾನುಮೋದವನ್ನು ಮಾಡಿದ ಸೇನಾಧಿಪತಿ, ಮಂತ್ರಿ, ಪುರೋಹಿತರು ಉತ್ತರ ಕುರುವಿನಲ್ಲಿ ಆರ್ಯರಾಗಿ ಹುಟ್ಟಿದರು. ಅಲ್ಲಿಂದ ಈಶಾನ್ಯ ಕಲ್ಪದಲ್ಲಿ ಕ್ರಮವಾಗಿ ಪ್ರಭಾಕರದೇವ, ಕನಕಪ್ರಭ, ಪ್ರಭಂಜನರೆಂಬ ದೇವರಾದರು. ದಿವಾಕರಾದಿ ದೇವತೆಗಳು (ಮತಿವರನಾಗುವವನು) ವಜ್ರಜಂಘನು ಲಲಿತಾಂಗನಾಗಿದ್ದಾಗ ಆತನ ಪರಿವಾರ ದೇವರಾಗಿದ್ದರು. ಆ ದೇವಪರಿವಾರವೇ ಈಗ ಕ್ರಮವಾಗಿ ಮಂತ್ರಿ, ಸೇನಾನಾಯಕ, ಪುರೋಹಿತ, ಶ್ರೇಷ್ಠಿಗಳಾಗಿ ವಜ್ರಜಂಘನ ಸ್ನೇಹಕ್ಕೆ ಪಾತ್ರರಾದರು. ಈ ಭವಕ್ಕೆ ಎಂಟನೆಯ ಭವದಲ್ಲಿ ವಜ್ರಜಂಘನು ಆದಿತೀರ್ಥಂಕರನಾದಾಗ ಶ್ರೀಮತಿಯು ದಾನತೀರ್ಥ ಪ್ರವರ್ತಕನಾದ ಶ್ರೇಯಾಂಸನಾಗಿಯೂ ಮಂತ್ರಿಯಾದ ಮತಿವರನು ಭರತೇಶ್ವರನಾಗಿಯೂ ಸೇನಾನಾಯಕ ಆಕಂಪನನು ಬಾಹುಬಲಿಯಾಗಿಯೂ ಪುರೋಹಿತನಾದ ಆನಂದನು ವೃಷಭಸೇನನೆಂಬ ಮಗನಾಗಿಯೂ ಶೆಟ್ಟಿ ಧನಮಿತ್ರನು ಅನಂತವೀರ್ಯನೆಂಬ ಮಗನಾಗಿಯೂ ಜನಿಸುವ ವಿಷಯಗಳನ್ನು ಮುನಿಶ್ರೇಷ್ಠರು ತಿಳಿಸಿದರು.

ಅಲ್ಲಲ್ಲಿ ಕಂಡುಬರುವ ಕೆಲವು ಗೌಣವ್ಯತ್ಯಾಸಗಳನ್ನು ಬಿಟ್ಟರೆ, ಕಥಾಂಶವು ಪೂರ್ವಪುರಾಣ ಆದಿಪುರಾಣಗಳಲ್ಲಿ ಒಂದೇ ಆಗಿದೆ. ಪೂರ್ವಪುರಾಣದಲ್ಲಿ ಪ್ರೀತಿವರ್ಧನ ರಾಜನು ತನ್ನೊಡನೆ ವಿರೋಧವನ್ನು ಮಾಡಿಹೋದ ತನ್ನ ತಮ್ಮನನ್ನು ಜಯಿಸಿ ಆತನನ್ನು ಅನುಕೂಲವರ್ತಿಯನ್ನಾಗಿ ಮಾಡಿಕೊಂಡು ಆ ಪರ್ವತದಲ್ಲಿರುವಾಗ, ಆಹಾರದಾನದ ಮಹಿಮೆಯುಂಟಾಗುತ್ತದೆ. ಆದಿಪುರಾಣದಲ್ಲಿ ಶತ್ರುಗಳನ್ನು ಜಯಿಸಿ ಬಂದು ಅಲ್ಲಿ ತಂಗಿದ್ದನೆಂದು ವ್ಯತ್ಯಾಸಗೊಂಡು ಬಂದಿದೆ. ಪಟ್ಟಣವನ್ನು ಅಪ್ರಾಸುಕವನ್ನಾಗಿ ಮಾಡುವ ಸಲುವಾಗಿ ಪುರಜನರಿಗೆ ಯಾವ ಕಾರಣವನ್ನೂ ನೀಡದೆ ಪಟ್ಟಣದ ಬೀದಿಗಳನ್ನು ಸಿಂಚನಗೊಳಿಸಿ ಹೂವು ಹಸುರಿನಿಂದ ಅಲಂಕರಿಸಬೇಕೆಂಬ ಆಜ್ಞೆಯನ್ನು ನೀಡುವ ವಿಷಯ ಆದಿಪುರಾಣದಲ್ಲಿ ಬಂದರೆ, ಪೂರ್ವಪುರಾಣದಲ್ಲಿ ಆ ದಿನ ರಾಜನಿಗೆ ಬಹಳ ಸಂತೋಷವುಂಟಾಗಿರುವುದರಿಂದ ಪಟ್ಟಣವನ್ನು ಪುಷ್ಪಾದಿಗಳಿಂದ ಅಲಂಕರಿಸುವಂತೆ ಡಂಗುರ ಹೊಡೆಸುವ ವಿಷಯವು ಸ್ಪಷ್ಟವಾಗಿ ಬರುತ್ತದೆ. ಪ್ರೀತಿವರ್ಧನನಿಗಾದ ಸುವರ್ಣಲಾಭದ ಮಾತು ಪೂರ್ವಪುರಾಣದಲ್ಲಿ ಬಂದಿಲ್ಲ. ಅತಿಗೃದ್ಧನು ಬೆಟ್ಟದ ಬಳಿ ಹಣವನ್ನು ಹೂತಿದ್ದನೆಂಬ ವಿಷಯವು ಪೂರ್ವಪುರಾಣದಲ್ಲಿಲ್ಲ.

ಪೂರ್ವಪುರಾಣದಲ್ಲಿ ಬರುವ ಕೆಲವು ವಿಷಯಗಳನ್ನು ಆದಿಪುರಾಣದಲ್ಲಿ ಕೈಬಿಡಲಾಗಿದೆ. ಮುನಿಯು, 'ನೀನು ಸ್ವರ್ಗದಲ್ಲಿ ದೇವನಾಗು' ಎಂದು ಹೇಳಿ ಹುಲಿಯ ಕಿವಿಯ ಹತ್ತಿರ ಪಂಚನಮಸ್ಕಾರ ಮಂತ್ರವನ್ನು ಹೇಳಿದನೆಂಬ ವಿಷಯ ಆದಿಪುರಾಣದಲ್ಲಿ ಬರುವುದಿಲ್ಲ. ಉಳಿದಂತೆ ಕಥೆ ಪೂರ್ವಪುರಾಣದಲ್ಲಿರುವಂತೆಯೇ ಇದೆ. ಆದರೂ, ಮತಿವರಾದಿಗಳ ಭವವೃತ್ತಾಂತವು ವಜ್ರಜಂಘಭವದವರೆಗೆ ಜೊತೆಯಾಗಿ ಬರುವ ಮಂತ್ರಿ, ಸೇನಾಪತಿ, ಪುರೋಹಿತ, ಶ್ರೇಷ್ಠಿಗಳಾಗುವವರೆಗೆ ಮಾತ್ರ ಪೂರ್ವಪುರಾಣದಲ್ಲಿ ಬಂದರೆ, ವಜ್ರಜಂಘನು ಆದಿತೀರ್ಥಂಕರನಾಗುವವರೆಗೆ ಇವರೆಲ್ಲರೂ ಅವನೊಂದಿಗೆ ಜೊತೆ

ಜೊತೆಯಾಗಿ ಸುತ್ತಿಬರುವ ಭವಪರಂಪರೆಯ ಸಂಕ್ಷಿಪ್ತ ವಿವರಣೆಯನ್ನು ಆದಿಪುರಾಣದಲ್ಲಿ ಒಂದೆಡೆ ನೀಡಲಾಗಿದೆ. ಅವರೆಲ್ಲರ ಭವಪರಂಪರೆಯನ್ನು ಪಂಪ ಒಂದೆಡೆ ಕ್ರೋಡೀಕರಿಸಿ ನೀಡಿದ್ದಾನೆ.

## ಉತ್ತರಕಾಲೀನ ಕಾವ್ಯಗಳು

**ಚಾವುಂಡರಾಯಪುರಾಣ** : ಕವಿ ಆದಿಪುರಾಣದಲ್ಲಿ ಬರುವ ಕಥಾ ವಿವರಗಳನ್ನು ಚಾಮುಂಡರಾಯನು ಸಂಕ್ಷೇಪಿಸಿ ಹೇಳಿದ್ದಾನೆ. ವ್ಯತ್ಯಾಸವೆಂದರೆ ಪ್ರೀತಿವರ್ಧನರಾಜನು ಬೇರೆಯವರೊಂದಿಗೆ ಯುದ್ಧಕ್ಕೆ ಹೋಗಿದ್ದಾಗ ಆತನ ತಮ್ಮನು ವಿಜಿಗೀಷುವಾಗಿ ಹೋಗುತ್ತಾನೆ. ಆಗ ಆತನನ್ನು ಸಾಮಾದಿಗಳಿಂದ ಒಡಂಬಡಿಸಿ ಕರೆತಂದು ಆ ಪರ್ವತದಲ್ಲಿ ಬೀಡುಬಿಟ್ಟಿರುತ್ತಾನೆ. ಈ ವಿಷಯ ಇಲ್ಲಿ ಹೊಸದಾಗಿ ಕಂಡುಬರುತ್ತದೆ.

**ಹಸ್ತಿಮಲ್ಲನಪೂರ್ವಪುರಾಣ** : ಇಲ್ಲಿ ಆದಿಪುರಾಣದ ಜಾಡನ್ನು ಅನುಸರಿಸಿ ಸಂಕ್ಷಿಪ್ತ ರೀತಿಯಲ್ಲಿ ಈ ಪ್ರಸಂಗವು ನಿರೂಪಿತವಾಗಿದೆ.

**ಪುಣ್ಯಾಸ್ರವದ ಆದೀಶ್ವರರ ಕಥೆ** : ಆದಿಪುರಾಣದಲ್ಲಿ ಬರುವಂತೆ ಪ್ರೀತಿವರ್ಧನನು ಶತ್ರುಗಳನ್ನು ಗೆದ್ದು ಪರ್ವತದ ಬಳಿ ಬೀಡು ಬಿಟ್ಟ ವಿಚಾರ ಬರುತ್ತದೆ. ಪ್ರೀತಿವರ್ಧನನ ಪ್ರಯಾಣಭೇರಿಯನ್ನು ಕೇಳಿ ಹುಲಿಯು ಜಾತಿಸ್ಮರವಾದ ಸಂಗತಿ ಉಳಿದೆಡೆ ಕಂಡುಬರುವುದಿಲ್ಲ. ಆದಿಪುರಾಣದಲ್ಲಿ ಬರುವಂತೆ ಮತಿವರಾದಿಗಳ ಹಾಗೂ ವಜ್ರಜಂಘನ ಭವದ ಬೆಸುಗೆಯನ್ನು ವಜ್ರಜಂಘನು ಆದಿತೀರ್ಥಂಕರನಾಗುವವರೆಗೆ ಸಂಕ್ಷೇಪವಾಗಿ ಹೇಳಲಾಗಿದೆ.

**ಪುರುದೇವಚರಿತ** : ಉತ್ತರಕಾಲೀನ ಪುರಾಣಗಳ ಸಂಕ್ಷೇಪ ಕಥಾಚೌಕಟ್ಟು ಇಲ್ಲಿ ಇದೆ. ಪ್ರೀತಿವರ್ಧನನು ಪರ್ವತದ ಬಳಿ ಬೀಡು ಬಿಟ್ಟಿದ್ದನೆಂಬ ಅಂಶ ಮಾತ್ರ ಬರುತ್ತದೆಯೇ ಹೊರತು ಅವನು ಯಾವ ಕಾರ್ಯದ ನಿಮಿತ್ತ ಹೋಗಿದ್ದನೆಂಬ ಅಂಶವು ಬರುವುದಿಲ್ಲ.

**ಆದಿಪರಮೇಶ್ವರನ ಯಕ್ಷಗಾನ** : ಈ ಭಾಗವು ಹಸ್ತಿಮಲ್ಲನ ಪೂರ್ವಪುರಾಣದ ಸಂಪೂರ್ಣ ಅನುಕರಣೆಯಾಗಿದೆ. ಕವಿ ಇಲ್ಲಿಯ ಗದ್ಯಭಾಗವನ್ನು ಪದ್ಯಕ್ಕೆ ನೇರವಾಗಿ ಅಳವಡಿಸಿರುವ ಅಂಶವನ್ನು ಬಿಟ್ಟರೆ ಹೊಸ ಅಂಶವೆಂಬುದಿಲ್ಲ.

## ದಾನಾನುಮೋದವನ್ನು ಮಾಡಿದ ಹುಲಿ, ಹಂದಿ, ಕೋಡಗ, ಮುಂಗುಸಿಗಳ ಭವಾಂತರ ವಿವರ

**ಆದಿಪುರಾಣ-ಪೂರ್ವಪುರಾಣ** : ದಾನಾನುಮೋದದಿಂದ ಕೂಡಿದ್ದ ಹುಲಿ, ಹಂದಿ, ಕೋಡಗ, ಮುಂಗುಸಿಗಳನ್ನು ಕಂಡ ವಜ್ರಜಂಘನು ಅವುಗಳ ವೃತ್ತಾಂತವನ್ನು ಮುನಿಗಳಿಂದ ಕೇಳಲು ಉತ್ಸುಕನಾದನು.

**ಹುಲಿ** : ಹಸ್ತಿನಾಪುರದ ವರ್ತಕ ಸಾಗರದತ್ತ. ಆತನ ಪತ್ನಿ ಧನವತಿ. ಇವರ ಮಗ ಉಗ್ರಸೇನ. ಅಪ್ರತ್ಯಾಖ್ಯಾನ ಕ್ರೋಧದಿಂದ ತಿರ್ಯಗಾಯುವನ್ನು ಬಂಧಿಸಿಕೊಂಡನು. ಅರಸನ ಉಗ್ರಾಣದ ಸಾಮಗ್ರಿಗಳನ್ನು ಕದ್ದುದರಿಂದ ಅರಸನಿಂದ ಶಿಕ್ಷೆಗೆ ಗುರಿಯಾಗಿ ಸತ್ತು ಹುಲಿಯಾದನು.

ಹಂದಿ : ವಿಜಯಪುರದರಸ ಆನಂದ. ಆತನ ರಾಣಿ ವಸಂತಸೇನೆ. ಇವರಿಗೆ ಹರಿಕಾಂತನೆಂಬ ಮಗ. ಮಾನಕಷಾಯವುಳ್ಳ ಈತ ತಂದೆಗೆ ಅವಿನೀತನಾಗಿ ಹೇಳಿದ ಕೆಲಸವನ್ನು ಮಾಡದೆ ತಲೆಯನ್ನು ಕಲ್ಲಿಗೆ ಘಟ್ಟಿಸಿಕೊಂಡು ಸತ್ತು ವರಾಹನಾಗಿ ಹುಟ್ಟಿದನು.

ಕಪಿ : ಧ್ಯಾನಪುರವೆಂಬ ಪಟ್ಟಣ. ಕುಬೇರದತ್ತ ಶ್ರೇಷ್ಠಿಗೂ ಆತನ ಪತ್ನಿ ವಸುದತ್ತೆಗೂ ನಾಗದತ್ತನೆಂಬ ಮಗನಾಗಿ ಮಾಯಕಷಾಯದಿಂದ ತನ್ನ ತಂಗಿಯನ್ನು ವಂಚಿಸಿ ಹಣವನ್ನು ಅಪಹರಿಸಿದನು. ಸುಳ್ಳು ಹೇಳಿ ಕಳವಳಿಸಿ ಕಪಿಯಾಗಿ ಹುಟ್ಟಿದನು.

ಮುಂಗುಸಿ : ಅತ್ಯಂತ ಲೋಭಿಯಾದ ಲೋಲುಪನೆಂಬ ಕಲ್ಲುರಿಗನಿದ್ದನು. ರಾಜನು ಕಟ್ಟಿಸುತ್ತಿದ್ದ ಬಸದಿಗಾಗಿ ಬರುವ ಇಟ್ಟಿಗೆಗಳನ್ನು ನೋಡಿ ಕಲ್ಲುರಿಗನು ಆಳುಗಳಿಗೆ ಪೂರಿಗಳನ್ನು ಕೊಟ್ಟು ಐದಾರು ಇಟ್ಟಿಗೆಗಳನ್ನು ತರಿಸಿಕೊಂಡನು. ಅವುಗಳನ್ನು ಒರೆಸಿ ನೋಡಿದಾಗ ಒಂದು ಚಿನ್ನದ ಇಟ್ಟಿಗೆಯಾಗಿತ್ತು. ಅಲ್ಲಿಂದ ಮುಂದೆ ಲೋಭಿಯಾದ ಆತನು ಬಿಟ್ಟಿಯವರಿಂದ ಇಟ್ಟಿಗೆಗಳನ್ನು ಪಡೆದು ರಾಶಿಹಾಕುತ್ತಿದ್ದನು. ಒಂದು ದಿನ ಕಾರ್ಯನಿಮಿತ್ತ ಪಕ್ಕದೂರಿಗೆ ಹೋಗಬೇಕಾಗಿ ಬಂದಾಗ ತನ್ನ ಮಗನಿಗೆ ಇಟ್ಟಿಗೆಗಳನ್ನು ಕೊಳ್ಳಲು ನೇಮಿಸಿಹೋದನು. ಆದರೆ ಮಗನು ಹಾಗೆಮಾಡದಿದ್ದಾಗ ಕುಪಿತನಾಗಿ ಬಡಿಗೆಯಿಂದ ಮಗನ ತಲೆಯನ್ನು ಹೊಡೆದನು. ಅನಂತರ ರಾಜಸೈನಿಕರಿಗೆ ಹೆದರಿ ತನ್ನ ಕಾಲುಗಳನ್ನು ಕತ್ತರಿಸಿಕೊಂಡನು. ಇದನ್ನು ತಿಳಿದ ರಾಜನು ಕಲ್ಲುರಿಗನನ್ನು ಶಿಕ್ಷಿಸಿದನು. ಸತ್ತ ಅವನು ಮುಂಗುಸಿಯಾಗಿ ಹುಟ್ಟಿದನು.

ಈಗ ಈ ಪ್ರಾಣಿಗಳು ದಾನಾನುಮೋದದಿಂದ ಭೋಗಭೂಮಿಗೆ ಯೋಗ್ಯವಾದ ಆಯುಸ್ಸಿನ ಬಂಧನವನ್ನು ಪಡೆದಿರುವುವೆಂದೂ ಮುಂದೆ ದಿವ್ಯಮಾನುಷ ಸುಖಗಳನ್ನು ವಜ್ರಜಂಘನೊಡನೆ ಅನುಭವಿಸುತ್ತ ವಜ್ರಜಂಘನು ಆದಿತೀರ್ಥಂಕರನಾದಾಗ ಅನಂತವೀರ್ಯ, ಅಚ್ಯುತ, ವೀರ, ಸವೀರರೆಂಬ ಪುತ್ರರಾಗಿ ಜನಿಸುವುವೆಂದೂ ಮುನಿಗಳು ತಿಳಿಸಿದರು.

ಕೆಲವೆಡೆಗಳಲ್ಲಿ ವ್ಯತ್ಯಾಸ ಕಂಡು ಬಂದರೂ ಆದಿಪುರಾಣದಲ್ಲಿ ಬರುವ ಈ ವೃತ್ತಾಂತಗಳೆಲ್ಲವೂ ಪೂರ್ವಪುರಾಣದ ಅನುವರ್ತಿಯಾಗಿವೆ. ಪೂರ್ವಪುರಾಣದ ಪ್ರಕಾರ ಉಗ್ರಸೇನನು ಅರಸನ ಕೋಷ್ಠಾಗಾರದಿಂದ ತುಪ್ಪ ಅಕ್ಕಿಯನ್ನು ಕದ್ದು ತಂದು ವೇಶ್ಯೆಯರಿಗೆ ಕೊಡುತ್ತಾನೆ. ಆದಿಪುರಾಣದಲ್ಲಿ ಆತನು ಉಗ್ರಾಣದಿಂದ ದ್ರವ್ಯವನ್ನು ಕದ್ದನೆಂದು ಮಾತ್ರ ಬರುತ್ತದೆ. ಲೋಲುಪನನ್ನು ಪೂರ್ವಪುರಾಣದಲ್ಲಿ ಮಿಠಾಯಿ ಮಾಡುವವನೆಂದು ಹೇಳಿದ್ದರೆ ಆದಿಪುರಾಣದಲ್ಲಿ ಕಲ್ಲುರಿಗನೆಂದು ಹೇಳಲಾಗಿದೆ. ಪೂರ್ವಪುರಾಣದಲ್ಲಿ ಲೋಲುಪನು ತನ್ನ ಕಾಲುಗಳನ್ನು ಸೀಳಿಕೊಂಡದ್ದು ಪಶ್ಚಾತ್ತಾಪದ ಕಾರಣದಿಂದ ಎಂದಿದ್ದರೆ; ಆದಿಪುರಾಣದಲ್ಲಿ ಭಯದಿಂದ ಹಾಗೆ ಮಾಡಿದನೆಂಬ ಭಾವವ್ಯತ್ಯಾಸ ಬಂದಿದೆ. ತಂದೆಯ ಆಜ್ಞೆಯನ್ನು ಮೀರಿ ಹರಿಕಾಂತನು ಓಡಿಹೋಗುತ್ತಿರುವಾಗ, ಕಲ್ಲಿಗೆ ತಲೆಯು ತಾಕಿ ಆತನು ಸತ್ತನೆಂದು ಪೂರ್ವಪುರಾಣದಲ್ಲಿ ಬಂದಿದ್ದರೆ ಆದಿಪುರಾಣದಲ್ಲಿ ಆತನ ಕಷಾಯ ತೀವ್ರತೆಯನ್ನು ಪ್ರಕಟಿಸುವಂತೆ ಆತನೇ ತಲೆಯನ್ನು ಕಲ್ಲಿಗೆ ಕುಟ್ಟಿಕೊಂಡು ಸತ್ತನೆಂದು ಬರುತ್ತದೆ. ಕ್ರೋಧ-ಮಾನ-ಮಾಯ-ಲೋಭಕಷಾಯಗಳ ತೀವ್ರತೆಗಳು ಉಗ್ರ

ಸೇನಾದಿಗಳಲ್ಲಿ ಹೇಗಿದ್ದುವೆಂದು ತಿಳಿಸುವಲ್ಲಿ ಉಪಮೆಗಳನ್ನು ನೀಡಿ ಅವುಗಳ ಬೀಭತ್ಸತೆಯನ್ನು ಪೂರ್ವಪುರಾಣದಲ್ಲಿ ವಿವರಿಸಲಾಗಿದೆ.

ಉದಾಹರಣೆಗೆ : ಉಗ್ರಸೇನನು ಭೂಮಿಯ ಬಿರಿತಕ್ಕೆ ಸಮಾನವಾದ ಅಪ್ರತ್ಯಾಖ್ಯಾನ ಕ್ರೋಧದ ಉದಯದಿಂದ ಸ್ವಭಾವತಃ ಕೋಪಿಷ್ಠನಾಗಿದ್ದನು. ಹರಿವಾಹನನು ಅಪ್ರತ್ಯಾಖ್ಯಾನ ಮಾನ ಕಷಾಯದ ಉದಯದಿಂದ ಮೂಳೆಗೆ ಸಮಾನವಾದ ಅಹಂಕಾರವನ್ನುಳ್ಳವನಾಗಿದ್ದನು—ಈ ಮೊದಲಾದ ವಿವರಗಳನ್ನು ಪಂಪನು ಕೈಬಿಟ್ಟಿದ್ದಾನೆ. ಈ ಕೆಲವು ವ್ಯತ್ಯಾಸಗಳನ್ನು ಬಿಟ್ಟರೆ ಉಳಿದಂತೆ ಪಂಪನು ಪೂರ್ವಪುರಾಣವನ್ನು ಅನುಸರಿಸಿ ಬರೆದಿರುವುದನ್ನು ಗಮನಿಸಬಹುದಾಗಿದೆ. ಎರಡು ಕಡೆಗಳಲ್ಲಿಯೂ ಕಥೆಯು ಕಾವ್ಯಾಂಶ ಲೇಪನವಿಲ್ಲದೆ ನಿರೂಪಣಾಮಾತ್ರವಾಗಿ ಬಂದಿದೆ.

## ಉತ್ತರಕಾಲೀನ ಕಾವ್ಯಗಳು

**ಚಾವುಂಡರಾಯಪುರಾಣ :** ಕವಿ ಸಂಕ್ಷೇಪಿಸಿ ಕಥೆಯನ್ನು ಇಲ್ಲಿ ನಿರೂಪಿಸಿರುವನು. ಪೂರ್ವಪುರಾಣದಲ್ಲಿ ಬರುವಂತೆ ಉಗ್ರಸೇನನು ಉಗ್ರಾಣದ ಸಾಮಗ್ರಿಗಳನ್ನು, ದ್ರವ್ಯಗಳನ್ನು ಕದ್ದು ವೇಶ್ಯೆಗೆ ಕೊಟ್ಟನು ಎಂಬ ಅಂಶವು ಇಲ್ಲಿಯೂ ಕಂಡುಬರುತ್ತದೆ. ಹರಿವಾಹನನ ಕಥೆ ಆದಿಪುರಾಣದಂತೆಯೇ ಬಂದಿದೆ. ನಾಗದತ್ತನ ಕಥೆಯಲ್ಲಿ ಪೂರ್ವಪುರಾಣ, ಆದಿಪುರಾಣಗಳ ನಡುವೆ ಯಾವ ವ್ಯತ್ಯಾಸವೂ ಕಂಡುಬರುವುದಿಲ್ಲ. ಅವುಗಳ ಅನುವರ್ತಿಯಾಗಿ ಚಾವುಂಡರಾಯಪುರಾಣವು ಸಂಕ್ಷೇಪಗೊಂಡು ಬಂದಿದೆ. ಲೋಲುಪನನ್ನು ಆದಿಪುರಾಣದ ಪ್ರಕಾರದಂತೆ ಕಲ್ಲುರಿಗನೆಂದೇ ಹೇಳಲಾಗಿದೆ. ಕಥೆಯಲ್ಲಿ ಯಾವ ವ್ಯತ್ಯಾಸವೂ ಕಂಡುಬರುವುದಿಲ್ಲ.

**ಹಸ್ತಿಮಲ್ಲನ ಪೂರ್ವಪುರಾಣ :** ಹಸ್ತಿಮಲ್ಲನಲ್ಲಿಯೂ ಸಹ ಕಥೆ ಸಂಕ್ಷೇಪಗೊಂಡು ಹೆಚ್ಚು ವ್ಯತ್ಯಾಸವಿಲ್ಲದೆ ಸಾಗುತ್ತದೆ. ಆದಿಪುರಾಣದಲ್ಲಿ ಬರುವಂತೆ ಉಗ್ರಸೇನನು ಅರಸನ ಉಗ್ರಾಣದಲ್ಲಿ ದ್ರವ್ಯವನ್ನು ಕದ್ದ ವಿಚಾರ ಮಾತ್ರ ಬರುತ್ತದೆ. ಪೂರ್ವಪುರಾಣ ಮತ್ತು ಚಾವುಂಡರಾಯಪುರಾಣಗಳಲ್ಲಿ ಬರುವಂತೆ ಅವುಗಳನ್ನು ವೇಶ್ಯೆಗೆ ಕೊಟ್ಟ ವೃತ್ತಾಂತವು ಬರುವುದಿಲ್ಲ. ಹರಿಕಾಂತನ ಸಾವಿನ ರೀತಿಯು ಇಲ್ಲಿ ಬೇರೆ ರೀತಿಯಲ್ಲಿ ಚಿತ್ರಿತವಾಗಿದೆ. ಮಾನಕಷಾಯದಿಂದಿದ್ದ ಈತನನ್ನು ತಂದೆಯು ತನ್ನ ಮಾತನ್ನು ಮೀರಿದುದಕ್ಕಾಗಿ ಸಾಯಿಸಿದನೆಂಬ ಅಂಶವು ಬರುತ್ತದೆ. ನಾಗದತ್ತನ ಕಥೆ ಹಿಂದಿನ ಪುರಾಣಗಳಿಗೆ ಅನುವರ್ತಿಯಾಗಿ ಬಂದಿದೆ. ಲೋಲುಪನನ್ನು ಕಜ್ಜಾಯ ಮಾರುವವನೆಂದು ಹೇಳಲಾಗಿದೆ (ಪೂರ್ವಪುರಾಣದಲ್ಲಿ ಮಿಠಾಯಿ ಮಾರುವವನು). ಅಲ್ಲದೆ ಲೋಲುಪನು ತನ್ನ ಕಾಲುಗಳನ್ನು ಸೀಳಿಕೊಳ್ಳುವುದು ಪೂರ್ವಪುರಾಣದಂತೆ ಪಶ್ಚಾತ್ತಾಪದಿಂದ; ಆದಿಪುರಾಣದಲ್ಲಿ ಬರುವಂತೆ ಕ್ರೋಧದಿಂದಲ್ಲ.

**ಪುಣ್ಯಾಸ್ರವದ ಆದೀಶ್ವರರ ಕಥೆ :** ಈ ಭಾಗಗಳ ವಿವರಣೆಯಲ್ಲಿ ನಾಗರಾಜ ಕವಿಯಲ್ಲಿ ವಿಭಿನ್ನಗತಿಯು ಕಂಡುಬರುತ್ತದೆ. ವ್ಯಾಘ್ರಾದಿಗಳ ಕಥಾನಿರೂಪಣೆಯಲ್ಲಿ ಸ್ವಲ್ಪ ವ್ಯತ್ಯಾಸವು ಕಂಡುಬರುತ್ತದೆ. ಉಗ್ರಸೇನನು—'ಕಳ್ಳರೊಡನಾಡಿ ನಾಡೊಳಗುಳ್ಳೊಡವೆಯನೆಯ್ದೆ ಕಳ್ದು' ಮತ್ತೊಂದು ದಿನ ಹಳ್ಳಿಯಲ್ಲಿ ಕನ್ನಹಾಕುವಾಗ ಈ ಸುಳ್ಳನನ್ನು

ಚಂಡವರ್ಮನು ಅಡಹಡಿಸಿ ಹಿಡಿದನು. ಪಟ್ಟಣಕ್ಕೆ ಕರೆದುತಂದು 'ಸೆಟ್ಟಿಯ ಮಗನೆಂದಿರಿಯಲೊಲ್ಲದೆ' ಹಸ್ತಪಾದಗಳನ್ನು ಛೇದಿಸಿದನು. ಉಗ್ರಸೇನನು ಕ್ರೋಧಕಷಾಯದಿಂದ ಸತ್ತು ವ್ಯಾಘ್ರನಾದನು. ಇಲ್ಲಿ ಕಥೆ ಸಂಪೂರ್ಣವಾಗಿ ಬೇರೆಯದೇ ಆದ ತಿರುವನ್ನು ಅದೇ ಆಶಯದೊಳಗೆ ತೆಗೆದುಕೊಂಡಿರುವುದನ್ನು ಗಮನಿಸಬಹುದಾಗಿದೆ.

ಹರಿಕಾಂತನು ಸತ್ತರೀತಿಯು ಮಿಕ್ಕೆಡೆಗಳಿಗಿಂತ ಸ್ವಲ್ಪ ವ್ಯತ್ಯಾಸಗೊಂಡು ಬರುತ್ತದೆ. ಅತಿಮಾನಗರ್ವದಿಂದ ಮಾತಾಪಿತೃಗಳಿಗೆ ಹಿರಿಯರಿಗೆ ಎರಗದೆ ಇರುತ್ತಿರುವಾಗ ಅತಿಬಲಶಾಲಿಯಾದವನೊಬ್ಬನು ಆತನನ್ನು ಹಿಡಿದು ತಂದು ಬಲವಂತವಾಗಿ ತಾಯ್ತಂದೆಗಳಿಗೆ ನಮಸ್ಕರಿಸುವಂತೆ ಮಾಡಿದಾಗ, ಆತನು ಮಾನಕಷಾಯದ ತೀವ್ರವಾದ ಉದಯದಿಂದ ದೊಡ್ಡ ಶಿಲೆಗೆ ತನ್ನ ತಲೆಯನ್ನು ತಾಟಿಸಿಕೊಂಡು ಸತ್ತು ವರಾಹನಾದನೆಂದು ಬರುತ್ತದೆ. ಇಲ್ಲಿ ಕವಿಯು ಕಲ್ಪಿಸಿರುವ ಸನ್ನಿವೇಶವು ಮಿಕ್ಕೆಡೆಗಳಿಗಿಂತ ಸ್ವಾರಸ್ಯಪೂರ್ಣವಾಗಿದೆ.

ಕಪಿಯಾಗಿ ಹುಟ್ಟಿದ ನಾಗದತ್ತನ ಕಥೆಯು ಉಳಿದೆಡೆಗಳಲ್ಲಿ ಬರುವಂತೆಯೇ ಇದೆ.

ಮುಂಗುಸಿಯು ಹಿಂದಿನ ಭವದಲ್ಲಿ ಲೋಲುಪನಾಗಿ ಹುಟ್ಟಿತ್ತೆಂದು ಉಳಿದೆಡೆಗಳಲ್ಲಿ ಬಂದಿದ್ದರೆ; ಇಲ್ಲಿ ಲೋಲುಪನ ಹೆಸರನ್ನು ಹೇಳದೆ ಒಬ್ಬ ಪೂರಿಗಳನ್ನು ಮಾರುವ ನಿರ್ಧನನಾದ ವೈಶ್ಯನೆಂದು ಮಾತ್ರ ಹೇಳಲಾಗಿದೆ. ಆ ವೈಶ್ಯನು ಅರಸನು ಚೈತ್ಯಾಲಯವನ್ನು ಕಟ್ಟಿಸುವಾಗ, ಇಟ್ಟಿಗೆಗಳನ್ನು ಹೊತ್ತುಕೊಂಡು ತರುತ್ತಿದ್ದ ಒಬ್ಬನಿಗೆ ಪೂರಿಯನ್ನು ಕೊಟ್ಟು ಒಂದೆರಡು ಇಟ್ಟಿಗೆಗಳನ್ನು ತೆಗೆದುಕೊಂಡನು. ತನ್ನ ಕಾಲನ್ನು ತೊಳೆದುಕೊಳ್ಳುವ ಸಮಯದಲ್ಲಿ ಅದು ಚಿನ್ನದ ಇಟ್ಟಿಗೆಯೆಂದು ಅರಿತು ತೃಪ್ತಿಗೊಂಡು ಇದೇ ಕ್ರಮದಲ್ಲಿ ಆತನಿಂದ ಕೆಲವು ಇಟ್ಟಿಗೆಗಳನ್ನು ತರಿಸಿಕೊಳ್ಳುತ್ತಿದ್ದನು. ಒಮ್ಮೆ ನೆರೆಯೂರಿಗೆ ಹೋದಾಗ ಮಗನು ಅವುಗಳನ್ನು ಸಂಗ್ರಹಿಸದೆ ಇದ್ದುದರಿಂದ ಕೋಪಗೊಂಡು ಆತನನ್ನು ಬಡಿದು ಕಡೆಗೆ, "ಅನ್ಯಗ್ರಾಮಕ್ಕೆ ತನ್ನಂ ಕೊಂಡುಪೋದ ಸರ್ವಾಪರಾಧಿಗಳಿವೆಂದೆರಡು ಕಾಲ್ಗಳಂ ಪಿರಿದಪ್ಪ ಶಿಲೆಯಲ್ಲಿ ಪೊಯ್ದುಕೊಂಡು" ಆ ವೇದನೆಯಲ್ಲಿ ಸತ್ತನು. ಈ ಕಥೆಯ ಪೂರ್ವಾರ್ಧದಲ್ಲಿ ವ್ಯತ್ಯಾಸವನ್ನು ಗಮನಿಸಬಹುದಾಗಿದೆ. ಆತನು ಕಾಲನ್ನು ಕತ್ತರಿಸಿಕೊಂಡುದಕ್ಕೆ ಕವಿ ಇಲ್ಲಿ ಕಾರಣವನ್ನು ನೀಡಿದ್ದಾನೆ.

ಇಲ್ಲಿಯ ಕಥಾಪರಂಪರೆಯೇ ಬೇರೆಯೆಂದು ಸ್ಪಷ್ಟವಾಗಿ ಗುರುತಿಸಬಹುದಾಗಿದೆ.

**ಪುರುದೇವಚರಿತ** : ಹುಲಿಯ ಹಿಂದಿನ ಭವಾಂತರದ ಕಥೆ ಪೂರ್ವಪುರಾಣ ಮತ್ತು ಚಾವುಂಡರಾಯಪುರಾಣಗಳಲ್ಲಿರುವಂತೆ ಇದೆ. ಚಾವುಂಡರಾಯಪುರಾಣದ ಗದ್ಯಭಾಗವನ್ನು ಕವಿ ಸಾಂಗತ್ಯರೂಪಕ್ಕೆ ಅಳವಡಿಸಿರಬಹುದೆಂದು ಹೇಳುವಷ್ಟರ ಮಟ್ಟಿಗೆ ಎರಡರಲ್ಲಿಯೂ ಕಥಾವಿವರದ ಸಂಕ್ಷೇಪ ಶೈಲಿ ಮೂಡಿ ಬಂದಿದೆ. ಉದಾಹರಣೆಗೆ :

. . . . . . . . . . . . . . . . . .
ಹಸ್ತಿನಾಪುರದೊಳಾ | ನಂದದಿಂ ಸಾಗರದತ್ತ
ಆ ಪರದನ ಪೆಂಡತಿಧನದತ್ತೆಗೆ | ತಾಪುತ್ರನುಗ್ರಸೇನಾಖ್ಯ
ಕೋಪಮಪ್ರತ್ಯಾಖ್ಯಾನದಿ ತಿರ್ಯಂಚಾಯುವ| ಉಪಾರ್ಜಿಸಿ ಕಟ್ಟಕಡೆಗೆ
ಕದ್ದುತಂದೊಡವೆಯ ಸೂಳೆಗೆ ತಾ ಕುಡು | ತಿರ್ದುದ ಕಂಡೊರ್ಮೆ ನೃಪರು
ಮರ್ದಿಸಲಲ್ಲಿಯೆ ಸತ್ತು ಪುಟ್ಟಿದುದಿಂ | ಶಾರ್ದೂಲನಾಗಿ ಮತ್ತಿನ್ನು (ಪುರುಚ.iii ೩೬-೩೮)

ಹಸ್ತಿನಪುರದ ಪರದಂ ಸಾಗರದತ್ತಂಗಂ ಆತನ ಪರದಿತಿ ಧನದತ್ತೆಗಂ ಉಗ್ರಸೇನನೆಂಬ ಮಗನಪ್ರತ್ಯಾಖ್ಯಾನ ಕ್ರೋಧದಿಂ ತಿರ್ಯಗಾಯುಷ್ಯಮಂ ಕಟ್ಟಿಕೊಂಡು ಕೊಟ್ಟಾರದ ಕರಣಂಗಳಂ ಬಂಚಿಸಿ ಕಳ್ದು ದ್ರವ್ಯಮಂ ಸೂಳೆಗೆ ಕೊಟ್ಟೊಡರಸಂ ಪಿಡಿತರಿಸಿ ಹತಿಯಿಸಿ ಸತ್ತು ಪುಲಿಯಾದೊಂ (ಚಾವುಂಪು. ಪು. ೩೨-೩೩)

ಇಲ್ಲಿ ಕಂಡು ಬರುವ ವ್ಯತ್ಯಾಸವಿಷ್ಟೇ. ಚಾವುಂಡರಾಯಪುರಾಣದಲ್ಲಿ ಕೊಟ್ಟಾರದ ಕರಣಂಗಳನ್ನು ವಂಚಿಸಿ ಕದ್ದ ವಿಚಾರವು ಬಂದಿದೆ. ಉಗ್ರಸೇನನು ಒಡವೆಗಳನ್ನು ಎಲ್ಲಿಂದ ಕದ್ದು ತಂದನೆಂಬ ವಿಚಾರವು ಪುರುದೇವಚರಿತೆಯಲ್ಲಿ ಬಂದಿಲ್ಲ.

ಹರಿವಾಹನನು ಮಾನಕಷಾಯದಿಂದ 'ತನ್ನ ಪಿತಗೆ ಆನತನಾಗೆನೆ' ಶಿಲೆಗೆ ತಾಟಿಸಿಕೊಂಡು ತಾನೆ ಸತ್ತನೆಂಬ ವೃತ್ತಾಂತವು ಬರುತ್ತದೆ. ಪುಣ್ಯಾಸ್ರವದ ಆದೀಶ್ವರರ ಕಥೆಯಲ್ಲಿ ಬಲಾತ್ಕಾರವಾಗಿ ನಮಸ್ಕಾರವನ್ನು ಮಾಡಿಸಿದುದರಿಂದ ಆತನು ತಲೆಯನ್ನು ತಾಟಿಸಿಕೊಂಡು ಸತ್ತನೆಂಬ ವಿಚಾರವನ್ನು ಇಲ್ಲಿ ಹೋಲಿಸಿ ನೋಡಬಹುದಾಗಿದೆ.

ನಾಗದತ್ತನ ಕಥೆ ಇತರತ್ರ ಕಂಡುಬರುವಂತೆ ಯಾವ ವ್ಯತ್ಯಾಸವೂ ಇಲ್ಲದೆ ಬಂದಿದೆ. ಲೋಲುಪನ ಕಥೆಯ ಚೌಕಟ್ಟು ಪೂರ್ವಪುರಾಣ ಆದಿಪುರಾಣಗಳಂತೆಯೇ ಇದ್ದರೂ ಇಲ್ಲಿ ಲೋಲುಪನು ಯಾವ ಕೆಲಸದಲ್ಲಿ ನಿರತನಾಗಿದ್ದನೆಂಬುದು ಬರುವುದಿಲ್ಲ.

**ಆದಿಪರಮೇಶ್ವರನ ಯಕ್ಷಗಾನ :** ಉಗ್ರಸೇನನ ಕಥೆಯು ಹಸ್ತಿಮಲ್ಲನ ಪೂರ್ವಪುರಾಣಕ್ಕೆ ಅನುಗುಣವಾಗಿ ಬಂದಿದೆ. ಉದಾಹರಣೆಗೆ :

ಮಾನದಿಂದವನು ಅಪ್ರಾತ್ಯಾ | ಖ್ಯಾನಂ ಕ್ರೋಧದೊಳು ತಿರ್ಯಗಾಯುಂಪಡದುಂ
ಭೂನಾಥನ ಕೊಟ್ಟಾರದೊಳುಂ ತಾನುಂ | ಕಳೆಕೊಲಿಸೆ ಸತ್ತು ಪುಲಿತಾನಾದಂ
(ಆದಿಯ. ಪರಿಚ್ಛೇದ ೩)

ಉಗ್ರಸೇನನು—

ಅಪ್ರತ್ಯಾಖ್ಯಾನ ಕ್ರೋಧದಿಂ ತಿರ್ಯಗಾಯುಷ್ಯಮಂ ಕಟ್ಟಿಕೊಂಡು ಅರಸಿನ ಕೊಟ್ಟಾರದೊಳ್ಕಳ್ದಡೆ ಹಿಡಿತರಿಸಿ ಬಾಯಪೊಯ್ಸಿ ವಧೆಯಿಸಿ, ಕೊಲಿಸೆ ಸತ್ತು ಈ ಪುಲಿಯಾದಂ (ಹಪೂರ್ವ. ಪು. ೩೨)

ಹರಿಕಾಂತನ ವಿಚಾರವು ಹೆಚ್ಚು ವಿವರಣೆಯಿಲ್ಲದೆ 'ಮಾನಕಷಾಯದಿಂದ ಇದ್ದುದರಿಂದ ಅರಸನು ಆತನನ್ನು ತರಹರಿಸದೆ ಕೊಂದನು' ಎಂದು ಬರುತ್ತದೆ. ಆತನು ತಂದೆಗೆ ಅವಿನೀತನಾಗಿದ್ದನೆಂದಾಗಲಿ, ಬಲವಂತ ಮಾಡಲಾಗಿ ತಂದೆಗೆ ನಮಿಸಿದುದರಿಂದ ಮಾನಕಷಾಯದ ಉದಯದಿಂದ ಸತ್ತನೆಂಬ ವಿವರವಾಗಲಿ ಇಲ್ಲಿ ಕಂಡುಬರುವುದಿಲ್ಲ.

ಕಪಿಯ ಪೂರ್ವಜನ್ಮದ ಕಥೆಯಾದ ನಾಗದತ್ತನ ಕಥೆ ಉಳಿದೆಡೆಗಳಲ್ಲಿರುವಂತೆಯೇ ಬಂದಿದೆ.

## ಶ್ರೀಮತಿ-ವಜ್ರಜಂಘರ ಸಾವು

**ಆದಿಪುರಾಣ-ಪೂರ್ವಪುರಾಣ :** ಶಷ್ಪ ಸರೋವರದಿಂದ ಪುಂಡರೀಕಿಣಿಗೆ ಪ್ರಯಾಣ ಬೆಳೆಸಿ ಅಲ್ಲಿಯ ಅಡ್ಡಿ-ಅತಂಕಗಳನ್ನು ನಿವಾರಿಸಿ ವಜ್ರಜಂಘನು ಉತ್ಪಲಖೇಟಕ್ಕೆ ಹಿಂದಿರುಗಿದನು. ಸುಖದಿಂದ ವಜ್ರಜಂಘ ಶ್ರೀಮತಿಯರು ಅನೇಕ ಕಾಲ ಬಾಳಿದರು. ಆ

ಸೌಖ್ಯವು'ದಿವಿಜೇಂದ್ರಾವಾಸಸೌಖ್ಯಕ್ಕತಿಶಯಮೆನಿಸಿತ್ತು'. ದೇವಲೋಕದ ಸ್ತ್ರೀಯರಿಗಿಂತ ರೂಪ ವಿಳಾಸ ಶ್ರೀಗಳಲ್ಲಿ ಈ ದೇವಿಯೆ ಮಿಗಿಲೆನಿಸುವಂತಿದ್ದಳು ಶ್ರೀಮತಿ. 'ಅಮರಾಕಾರಮಂ ಗೆಲ್ದುದೀ ಮಾನವರ ದೇಹಾಕಾರ'ವೆಂಬಂತೆ ಇದ್ದ ಶ್ರೀಮತಿಯೊಂದಿಗೆ ವಜ್ರಜಂಘನು ಅಖಿಳ ಭೋಗಭಾಗ್ಯಗಳನ್ನು ಅನುಭವಿಸಿದನು. ಒಮ್ಮೆ ಮರಕತಮಣಿಶಿಲೆಗಳಿಂದ ರಚಿತವಾದ ವಿಲಾಸಭವನದಲ್ಲಿರುವ ಭಿತ್ತಿಗಳಲ್ಲಿ ಅಮರಾದಿದಂಪತಿಗಳ ಸುಂದರ ಚಿತ್ರಗಳು ಶೋಭಿಸಿ ರಾರಾಜಿಸುತ್ತಿದ್ದವು. ಕಾಲಾಗರು ಧೂಪದ ಪರಿಮಳದ ಸುಗಂಧದ ಆಹ್ಲಾದವು ಬೀರುತ್ತಿದ್ದ ಮಣಿದೀಪದ ಪ್ರಕಾಶವುಳ್ಳ ಶಯ್ಯಾಗೃಹದಲ್ಲಿ ಸಮುದ್ರದ ನೊರೆಯಂತೆ ಬೆಳ್ಳಗಿರುವ ರೇಷ್ಮೆದುಪ್ಪಟಗಳನ್ನು ಹಾಸಿದ್ದ ಶಯ್ಯಾತಲ್ಪದಲ್ಲಿ ಈ ದಂಪತಿಗಳು ಸುಖವನ್ನನುಭವಿಸುತ್ತಾ ನಿದ್ರಾಪರವಶರಾದರು. ಆದರೆ ಈ ಸುಖದ ಆವಾಸವೇ ಮರಣದ ನಿವಾಸವಾಯಿತು. ಮುಚ್ಚಿದ ಗವಾಕ್ಷವನ್ನು ತೆರೆಯಲು ಮರೆತರು. 'ಕೃಷ್ಣೋರಗಂ ಕೊಲ್ವವೋಲ್' ಕೃಷ್ಣಾಗರು ಧೂಪಧೂಮನಿವಹವು ಹರಡಿ ಸುತ್ತಿಕೊಂಡು ಆ ದಂಪತಿಗಳನ್ನು ಕೊಂದಿತು. ಬಿಡದೆ ಹೊಗೆಸುತ್ತಲು 'ತೋಳಂಸಡಿಲಿಸದಾ ಪ್ರಾಣವಲ್ಲಭರ ಪ್ರಾಣಮನಂದೊಡೆಗಳೆದರ್' ಓಪರೋಪರು ಜೊತೆ ಜೊತೆಯಾಗಿ ಸಾಯುವ ಸೈಪನ್ನು ಪಡೆದರು. ಈ ಭೋಗದ ರೀತಿಯೇ ಇಷ್ಟು. ಪಂಪನು ಈ ಸಂದರ್ಭದಲ್ಲಿ ಹೇಳುವ ಮಾತು ಅರ್ಥಪೂರ್ಣವಾಗಿದೆ. 'ಸಂಸೃತಿ ಭೋಗಂಗಳ್ ಭೋಗಿ ಭೋಗದಿಂ ವಿಷಮಂಗಳ್' : ಹೀಗಿರುವಾಗ ಈ ಸಂಸ್ಸೃತಿಯನ್ನು ನಂಬುವ ಜನರು ಜಡರಲ್ಲದೆ ಮತ್ತೇನು? ಆ ಧೂಪದ ಹೊಗೆಯಲ್ಲಿಯೇ ತಿರ್ಯಕ್ ಪ್ರಾಣಿಗಳು ಕೂಡ ಸತ್ತವು. ಶ್ರೀಮತಿ ವಜ್ರಜಂಘರ ಹಾಗೂ ತಿರ್ಯಕ್ ಪ್ರಾಣಿಗಳ ಅಂತ್ಯಕ್ರಿಯೆ ಜರುಗಿತು. ವಜ್ರಜಂಘನ ಮಗ ವಜ್ರಬಾಹುವಿಗೆ ಪಟ್ಟಗಟ್ಟಿ ಮತಿವರಾದಿಗಳು ದೀಕ್ಷಿತರಾದರು.

ಶ್ರೀಮತಿ ವಜ್ರಜಂಘರ ಭೋಗವಿಲಾಸವನ್ನು ಆದಿಪುರಾಣದಲ್ಲಿ ಸೂಚ್ಯವಾಗಿ ಹೇಳಿ ಮುಗಿಸಿದ್ದರೆ, ಪೂರ್ವಪುರಾಣದಲ್ಲಿ ಈ ಭಾಗವು ಹಲವಾರು ವಿವರಗಳೊಂದಿಗೆ ಬಂದಿದೆ. ಅವರ ಪ್ರಣಯಲೀಲೆಯ ಹಲವಾರು ಮನೋಹರ ಪ್ರಸಂಗಗಳ ದೃಶ್ಯಗಳು ಕಣ್ಣಿಗೆ ಬೀಳುತ್ತವೆ. ಉದಾಹರಣೆಗೆ, ವಜ್ರಜಂಘನು ಬಾಗೆ ಹೂಗಳಿಂದ ಪ್ರಾಣಕಾಂತೆಯನ್ನು ಅಲಂಕರಿಸಿ ಆಕೆಯನ್ನು ಆಕಾರಧರಿಸಿದ ಲಕ್ಷ್ಮಿಯೋಪಾದಿಯಲ್ಲಿ ಗೌರವಿಸಿದನು. ಮಿಂಚುಳ್ಳ ಮೇಘವು ಬಂದಾಗ ಭಯದಿಂದ ಪತಿಯನ್ನು ಬಿಡುವುದಕ್ಕೆ ಹೆದರಿದ ಶ್ರೀಮತಿಯು ವಜ್ರಜಂಘನನ್ನು ಗಾಢವಾಗಿ ಆಲಿಂಗಿಸಿದಳು (ix ೯, ೧೩) ಇತ್ಯಾದಿ. ವಜ್ರಜಂಘ ಶ್ರೀಮತಿಯರ ವರ್ಣಮಯ ದಾಂಪತ್ಯಜೀವನದ ವರ್ಣನೆಯ ಭೂಮಿಕೆಯು ಮುಂದಿನ ಅವರ ಸಾವಿನ ದುರಂತಕ್ಕೆ ಸಹಮರಣದ ರೀತಿಗೆ ಅಪಾರವಾದ ಧ್ವನಿಯನ್ನು ಒದಗಿಸುವಂತೆ ಕಂಡುಬರುತ್ತದೆ. ಈ ವಿವರಗಳನ್ನು ಪಂಪನು ಕೈಬಿಟ್ಟಿರುವುದು ಸಮಂಜಸವಾಗಿ ತೋರದು.

ಪೂರ್ವಪುರಾಣದಲ್ಲಿ ಶ್ರೀಮತಿ ವಜ್ರಜಂಘರ ಮರಣಪ್ರಸಂಗ ಹೀಗೆ ಬಂದಿದೆ :

ತತ್ರವಾತಾಯನದ್ವಾರಪಿಧಾನಾರುದ್ಧಧೂಮಕೇ |
ಕೇಶಸಂಸ್ಕಾರಧೂಪೋದ್ಯದ್ಧೂಮೇನ ಕ್ಷಣಮೂರ್ಚ್ಛಿತಾ ||
ನಿರುದ್ಧೋಚ್ಛ್ವಾಸದೌಸ್ಥಿತ್ಯಾದಂತಃ ಕಿಂಚಿದಿವಾಕುಲಾ |

ದಂಪತೀ ತೌ ನಿಶಾಮಧ್ಯೇ ದೀರ್ಘನಿದ್ರಾಮುಪೇಯತುಃ ||
ಜೀವಾಪಾಯೇ ತಯೋರ್ದೇಹೌ ಕ್ಷಣಾದ್ವಿಚ್ಛಾಯತಾಂ ಗತೌ |
ಪ್ರದೀಪಾಪಾಯಸಂರುದ್ಧತಮಸ್ಕಂಧೌ ಯಥಾ ಗೃಹೌ ||
ವಿಯುತಾಸುರಸೌ ಛಾಯಾಂ ನ ಲೇಭೇ ಸಹ ಕಾಂತಯಾ|
ಪರ್ಯಸ್ತ ಇವ ಕಾಲೇನ ಸಲತಃ ಕಲ್ಪಪಾದಪಃ || (ix ೨೭–೨೯)

ಕಿಟಕಿಗಳನ್ನು ಮುಚ್ಚಿದ್ದುದರಿಂದ ಹೊಗೆಯು ತುಂಬಿಕೊಂಡಿದ್ದ ಆ ಶಯನಗೃಹದಲ್ಲಿ ಕೂದಲುಗಳು ಸುವಾಸನೆಯಾಗುವುದಕ್ಕೋಸ್ಕರ ಮಾಡಿದ್ದ ಹೊಗೆಯಿಂದ ಸ್ವಲ್ಪ ತೊಂದರೆಪಡುತ್ತಿದ್ದ ಆ ಶ್ರೀಮತಿ ವಜ್ರಜಂಘರಿಗೆ ಶ್ವಾಸವು ಕಟ್ಟಿಕೊಂಡು ಅವರು ಸ್ವಲ್ಪ ಹೊತ್ತು ಮೂರ್ಛಿತರಾಗಿ ಮಧ್ಯರಾತ್ರಿಯಲ್ಲಿ ದೀರ್ಘನಿದ್ರೆ(ಮರಣ)ಯನ್ನು ಹೊಂದಿದರು. ದೀಪವು ನಂದಿ ಹೋದೊಡನೆ ಕತ್ತಲೆಯು ಕವಿದುಕೊಂಡ ಮನೆಗಳು ಮಬ್ಬಾಗುವಂತೆ ಜೀವವು ತೊಲಗಿಹೋದ ಕೂಡಲೇ ಆ ಶ್ರೀಮತೀ ವಜ್ರಜಂಘರ ಶರೀರಗಳು ಕಳೆಗುಂದಿದವು. ಧೂಪವು ಭೋಗಕ್ಕೆ ಕಾರಣವಾಗಿದ್ದರೂ ಅದರಿಂದ ಆ ಶ್ರೀಮತಿ ವಜ್ರಜಂಘರಿಗೆ ಮರಣವು ಸಂಭವಿಸಿತು. ಆದುದರಿಂದ ಸರ್ಪದ ಹೆಡೆಯಂತೆ ಪ್ರಾಣಾಪಹಾರಿಗಳಾದ ಈ ಭೋಗಗಳನ್ನು ಸುಡು. ಪಂಪನು ಪೂರ್ವಪುರಾಣಕ್ಕೆ ಈ ಸಂದರ್ಭದಲ್ಲಿ ಹೆಜ್ಜೆ ಹೆಜ್ಜೆಗೂ ಋಣಿಯಾಗಿ ಕಂಡುಬಂದರೂ ಭಾವಾನುಲೇಪನದ ಸ್ವೋಪಜ್ಞತೆಯನ್ನು ತೋರಿದ್ದಾನೆ.

ಬಿಡದೆ ಪೊಗೆಸುತ್ತೆ ತೋಳಂ | ಸಡಿಲಿಸದಾ ಪ್ರಾಣಬಲ್ಲಭರ ಪ್ರಾಣಮನಂ
ದೊಡೆಗಳೆದರೋಪರೋಪರೊ | ಳೊಡೆಸಾಯಲ್ಪಡೆದರಿನ್ನವೇಂ ಸೈಪೊಳವೇ (v-೨೪)

ಎಂಬ ಪದ್ಯವಂತೂ ಪಂಪನ ಸೂಕ್ಷ್ಮ ಸಂವೇದನೆಗೆ ಸಾಕ್ಷಿಯಾಗಿದೆ.

"ಕೃಷ್ಣೋರಗದ ಉಪಮಾನವಾಗಲಿ, ಧೂಪಧೂಮ ಕ್ರಮವಾಗಿ ಹಬ್ಬಿದ ವರ್ಣನೆಯಾಗಲಿ ಅದಕ್ಕೆ ತಕ್ಕ ಛಂದಸ್ಸಿನ ಸರ್ಪದೀರ್ಘ ವಿನ್ಯಾಸವಾಗಲಿ ಮೂಲದಲ್ಲಿಲ್ಲ. 'ಬಿಡದೆ ಪೊಗೆಸುತ್ತೆ' ಎಂಬ ಪದ್ಯವಂತೂ ಸಂಪೂರ್ಣವಾಗಿ ಪಂಪನದೇ ಆಗಿದ್ದು ಅವನ 'ದರ್ಶನ'ವನ್ನು ಪ್ರಕಟಿಸುತ್ತದೆ. ಆ ದಂಪತಿಯ ಮರಣದಲ್ಲೂ ಕವಿ ಒಂದು ಅಮೃತ ರೇಖೆಯನ್ನು ಗುರುತಿಸಿದ್ದಾನೆ. ಜಿನಸೇನಾಚಾರ್ಯರು 'ಭೋಗಿ ಭೋಗಾಭಾನ್' (ಭೋಗಗಳು ಹಾವಿನ ಹೆಡೆಯಂತೆ) ಎಂದಷ್ಟೇ ಹೇಳಿದರೆ, ಪಂಪ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ "ಭೋಗಂಗಳ್ ಭೋಗಿ ಭೋಗದಿಂ ವಿಷಮಂಗಳ್" ಎನ್ನುತ್ತಾನೆ. ಹಾವಿನ ವಿಷಕ್ಕೆ ಚಿಕಿತ್ಸೆಯಾದರೂ ಇದೆ. ಸಂಸಾರ ಸರ್ಪದ ವಿಷ ಅಪರಿಹಾರ್ಯವಾದುದು ಎಂಬುದು ಇದರಿಂದ ಸೂಚಿತವಾಗುತ್ತದೆ"[೨೨] ಎಂಬ ಮಾತುಗಳು ಪಂಪನು ಕಾವ್ಯಧರ್ಮದೊಳಗೆ ಅಳವಡಿಸಿ ಹೇಳುವ ಧರ್ಮದ ಒಳದನಿಯನ್ನು ಮಾರ್ದನಿಸುತ್ತವೆ. ಅಲ್ಲದೆ ಆತನ ಭಾವವಿಸ್ತಾರತೆಯ ಪ್ರತಿಭೆಯನ್ನು ಎತ್ತಿಹಿಡಿಯುತ್ತವೆ.

"ಪಂಪನು ಶ್ರೀಮತಿ ವಜ್ರಜಂಘರ ಪ್ರಸಂಗವನ್ನು ಚಿತ್ರಿಸುವಲ್ಲಿ ಚೆನ್ನಾಗಿ ಪೂರ್ವಪುರಾಣದ ಕೃತಿಯನ್ನು ಮನಸ್ಸಿಗೆ ತಂದುಕೊಂಡಂತೆ ತೋರುತ್ತದೆ. ಆದುದರಿಂದಲೇ ಅದೇ ರೀತಿಯಲ್ಲಿ ಅವರನ್ನು ವಿಧಿಯ ಕೈಗೂಸುಗಳನ್ನಾಗಿ ಮಾಡಿದ್ದಾನೆ. (ಧೂಪವು ಭೋಗಕ್ಕೆ ಕಾರಣವಾಗಿದ್ದರೂ ಅದರಿಂದ ಶ್ರೀಮತಿ ವಜ್ರಜಂಘರಿಗೆ ಮರಣವು ಸಂಭವಿ

ಸಿತು. ಆದುದರಿಂದ ಸರ್ಪದ ಹೆಡೆಯಂತೆ ಪ್ರಾಣಾಪಹಾರಿಗಳಾದ ಈ ಭೋಗಗಳನ್ನು ಸುಡು—(ix-೩೦) ಅಂದರೆ ಪೂರ್ವಪುರಾಣದಲ್ಲಿ ಬರುವ ಬೋಧನೆಗೆ ಪಂಪನು ಪಕ್ಕಾಗಿದ್ದಾ ನೆಂದು ತಿಳಿಯಬಹುದು. ಇಂತಹ ಧೋರಣೆಯಿಂದಂತೂ ತನ್ನ ಆದಿಪುರಾಣ ರಚಿಸಿದ್ದಾನೆ,"[೨೩]—ಎಂಬ ಮಾತುಗಳು ಸಂಪೂರ್ಣ ಸತ್ಯವಾಗಿ ಕಂಡುಬರುವುದಿಲ್ಲ. ಅಲ್ಲಲ್ಲಿ ಪಂಪನ ಜೀವನದೃಷ್ಟಿ ಹೇಳುವ ಧೋರಣೆಗಳಲ್ಲಿ ವ್ಯತ್ಯಾಸಗಳು ಸ್ಪಷ್ಟವಾಗಿ ಕಂಡುಬರುತ್ತವೆ. ಇದಕ್ಕೆ ಪುಷ್ಟಿಕೊಡುವಂತಿರುವ ಈ ಮಾತುಗಳನ್ನು ಗಮನಿಸಬಹುದಾಗಿದೆ : "ಧಿಗಿಮಾನ್ ಭೋಗಿಭೋಗಾಮಾನ್..." ಎನ್ನುವಲ್ಲಿ ಜಿನಸೇನರು ಭೋಗಗಳಿಗೆ ಧಿಕ್ಕಾರ ಹಾಕಿದ್ದಾರೆ; ಇನ್ನೂ ಅನೇಕ ಕಡೆ ಅವರು ಹೀಗೆ ಮಾಡಿರುವುದುಂಟು (viii-೬೭). ಈ ಬಗೆಯ ಧಿಕ್ಕಾರ, ಘೋಷಣೆ, ಪ್ರಚಾರಗಳು ಧರ್ಮಕ್ಕೆ ಉಚಿತವಾದರೂ ಕವಿಧರ್ಮಕ್ಕೆ, ಕಾವ್ಯದ ಸ್ವ ಧರ್ಮಕ್ಕೆ ಅಷ್ಟೇನೂ ಸಂಗತವಾಗಲಾರವು. ಎಂತಲೇ ಪಂಪನಲ್ಲಿ ಇಂಥವಕ್ಕೆ ಸ್ಥಾನವಿಲ್ಲ. ವಿಶೇಷತಃ ಪುರಾಣದೃಷ್ಟಿಯುಳ್ಳ ಜಿನಸೇನಾಚಾರ್ಯರು ನೇರವಾದ ಉಪದೇಶದಲ್ಲಿ, ಜಾಹೀರಾತಿನಲ್ಲಿ ತೊಡಗುವುದು ತಪ್ಪಲ್ಲ . . . ಪಂಪಕವಿ ಹಾಗೆ ಮಾಡುವುದಿಲ್ಲವೆಂಬುದು ಅವನ ಕಾವ್ಯಧರ್ಮಕ್ಕೆ ತಕ್ಕುದಾಗಿದೆ."[೨೪]

ಶಯನಗೃಹದಲ್ಲಿ ಕೂದಲುಗಳು ಸುವಾಸನೆಯಾಗಲೆಂದು ಮಾಡಿದ್ದ ಹೊಗೆಯಿಂದ ಶ್ರೀಮತಿ ವಜ್ರಜಂಘರಿಗೆ ಸ್ವಲ್ಪತೊಂದರೆಯಾಗಿ ಅವರು ಸ್ವಲ್ಪಹೊತ್ತು ಮೂರ್ಛಿತರಾಗಿ ಮಧ್ಯರಾತ್ರಿಯಲ್ಲಿ ದೀರ್ಘನಿದ್ರೆಯನ್ನು ಹೊಂದಿದರೆಂದು ಪೂರ್ವಪುರಾಣದಲ್ಲಿ ಬಂದಿದ್ದರೆ ಆದಿಪುರಾಣದಲ್ಲಿ ದಂಪತಿಗಳಿಗೆ ತೊಂದರೆಯಾದ ವಿಷಯವಾಗಲಿ, ಅವರು ಮೂರ್ಛೆಗೊಂಡ ವಿಷಯವಾಗಲಿ ಇಲ್ಲ. ಶಾರ್ದೂಲಾದಿಗಳು ಶಯನಗೃಹದಲ್ಲಿಯೇ ಇದ್ದುವೆಂಬ ವಿಚಾರ, ಶವಸಂಸ್ಕಾರದ ವರ್ಣನೆ ಪೂರ್ವಪುರಾಣದಲ್ಲಿಲ್ಲ.

ಶ್ರೀಮತಿ ವಜ್ರಜಂಘರ ಸಾವು ಒಂದು ಅಪೂರ್ವಪ್ರಸಂಗ. ಅವರು ಸಮಾನ ಭೋಗಿಗಳಾಗಿ ಬದುಕುವುದರ ಜೊತೆಗೆ ಸಾವಿನಲ್ಲಿಯೂ ಸಾಮೀಪ್ಯ ಪಡೆದರು.

ವಜ್ರಜಂಘ ಶ್ರೀಮತಿಯರ ಮರಣವನ್ನು ಚಿತ್ರಿಸಿದ ನಂತರ ಪೂರ್ವಪುರಾಣದಲ್ಲಿ ಆಚಾರ್ಯರು ಹೇಳಿಕೆಯ ರೀತಿಯಲ್ಲಿ ನೇರವಾಗಿ ಉಪದೇಶಾತ್ಮಕವಾದ ಮಾತುಗಳನ್ನು ಹೇಳಿದ್ದಾರೆ (ix-೩೭). ಇದೇ ಭಾವವನ್ನು ಪಂಪನು ಕಾವ್ಯಮಯವಾಗಿ ಚಿತ್ರಿಸಿದ್ದಾನೆ. ಉದಾಹರಣೆಗೆ :

ಭೋಗಾಂಗಮಾಗಿಯುಂ ಕೃ | ಷ್ಣಾಗರುಧೂಪಂ ಮುಸುಂಕಿ ಕೊಂದಿಕ್ಕಿದುದಾ
ಭೋಗಿಗಳನಿಂತು ಸಂಸೃತಿ | ಭೋಗಂಗಳ್ ಭೋಗಿಭೋಗದಿಂ ವಿಷಮಂಗಳ್
ಅನಿತು ಸುಖದನಿತು ಭೋಗದ | ಮನುಜಯುಗಂ ನೋಡೆನೋಡೆ ತತ್‌ಕ್ಷಣದೊಳ್ ತಾ
ನಿನಿತೊಂದು ದೆಸೆಯನೆಯ್ದಿದು | ದೆನೆ ಜಡರೇನೆಂದು ನಂಬುವರ್ ಸಂಸೃತಿಯಂ (v-೨೫, ೨೬)

ಪೂರ್ವಪುರಾಣ, ಆದಿಪುರಾಣಗಳೆರಡರಲ್ಲಿಯೂ ಕಥಾಂಶವು ಒಂದೇ ಆದರೂ ಪಂಪನ ಹಿತಮಿತವಾದ ವರ್ಣನಾವೈಖರಿ ಅತ್ಯಂತ ಪ್ರಭಾವಕಾರಿಯಾಗಿದೆ.

## ಉತ್ತರಕಾಲೀನ ಕಾವ್ಯಗಳು

**ಚಾವುಂಡರಾಯಪುರಾಣ :** ಪೂರ್ವಪುರಾಣ, ಆದಿಪುರಾಣಗಳಲ್ಲಿ ಬರುವ ಯಾವ

ವರ್ಣನಾಭಾಗಗಳೂ ಇಲ್ಲಿ ಕಂಡುಬರುವುದಿಲ್ಲ. ಅವರ ಭೋಗಭಾಗ್ಯದ ವಿಲಾಸ ವಿಭ್ರಮಗಳ ವಿವರವಿಲ್ಲ. ಅವರು ಸತ್ತ ರೀತಿಯನ್ನು ಕವಿ ಸಂಗ್ರಹಗೊಳಿಸಿ ಹೇಳಿದ್ದಾನೆ.

> ಒಂದು ದಿವಸಂ ಶಯ್ಯಾಗೃಹದೊಳ್ ನಿದ್ರಾವಶಗತರಾದರ್, ಅನ್ನೆಗಮಲ್ಲಿ ಮುಚ್ಚಿರ್ದ ಗವಾಕ್ಷಂಗಳಂ ತೆಱೆಯಲ್ ಮಱೆದು ಧೂಪಗುಂಡಿಯೊಳಳವಱಿಯದೆ ಸೆಜ್ಜೆ ವಳನಿಕ್ಕಿದ ಕೇಶಸಂಸ್ಕಾರದ ಧೂಪದ ಪೊಗೆ ಪುದಿದುಕೊಳೆ ವಜ್ರಜಂಘನುಂ ಶ್ರೀಮತಿಯುಂ ಪೊಗೆ ಸುತ್ತಿ ಸತ್ತುದಂ ನೇಸಱ್ ಮೂಡಿದಾಗಳಱಿದು ಮತಿವರಾದಿಗಳವರುಮನಲ್ಲಿ ಸತ್ತ ತಿರ್ಯಗ್ಜಾತಿಗಳುಮಂ ಸಂಸ್ಕರಿಸಿ (ಚಾವುಂಪು. ಪು. ೩೩-೩೪)

ಹೀಗೆ ಸಂಗ್ರಾಹಕ ವಿಧಾನದಲ್ಲಿ ನಿರೂಪಣೆ ಬಂದಿದೆ. ಆದಿಪುರಾಣದ ಕಥಾವಿವರಗಳಿಗೆ ಹೆಚ್ಚು ಹತ್ತಿರವಾಗಿರುವುದನ್ನು ಗಮನಿಸಬಹುದಾಗಿದೆ. ಪೂರ್ವಪುರಾಣದಲ್ಲಿ ಬರುವ ವಜ್ರಜಂಘ ಶ್ರೀಮತಿಯರು ಮೂರ್ಛೆಗೊಂಡ ವೃತ್ತಾಂತ, ಆದಿಪುರಾಣದಂತೆಯೇ ಇಲ್ಲಿಯೂ ಕಂಡುಬರುವುದಿಲ್ಲ. ತಿರ್ಯಂಚಗಳ ಸಾವು-ಸಂಸ್ಕಾರಗಳ ವೃತ್ತಾಂತ ಆದಿಪುರಾಣದಂತೆ ಇಲ್ಲಿಯೂ ಉಲ್ಲೇಖಿಗೊಂಡಿದೆ. ಎರಡೂ ಕಾವ್ಯಗಳಲ್ಲಿ ಬರುವ ಆಲಂಕಾರಿಕವಾದ ಅರ್ಥಪೂರ್ಣ ಅಭಿವ್ಯಕ್ತಿಯನ್ನು ಕೈಬಿಡಲಾಗಿದೆ.

**ಹಸ್ತಿಮಲ್ಲನ ಪೂರ್ವಪುರಾಣ** : ಆದಿಪುರಾಣ ಮತ್ತು ಚಾವುಂಡರಾಯಪುರಾಣಗಳಲ್ಲಿರುವಂತೆ ವಜ್ರಜಂಘ-ಶ್ರೀಮತಿಯರ ಅಂತ್ಯದ ವೃತ್ತಾಂತವು ಬರುತ್ತದೆ. ಚಾವುಂಡರಾಯಪುರಾಣದಲ್ಲಿ ಕಂಡುಬರುವ ಗದ್ಯಶೈಲಿ ಇಲ್ಲಿ ಸರಳಗೊಂಡು ಬರುತ್ತದೆ. ಉದಾಹರಣೆಗೆ :

> ಒಂದು ದಿನಂ ರಾತ್ರಿಯೊಳ್ ಸೆಜ್ಜೆಯೊಳ್ ಹಂಸತೂಲಿಕಾತಲ್ಪದೊಳಿರ್ವರುಂ ನಿದ್ರೆಯೊಳಿರೆ, ಸಜ್ಜೆವಳಂ ಧೂಪ ಘಟದೊಳ್ಕೇಶ ಸಂಸ್ಕಾರ ಧೂಪಮಂ ಬಹಳಮಂ ಹಾಕಿ ಗವಾಕ್ಷದ ಬಾಗಿಲಂ ತೆರೆವುದಂ ಮರೆದೊಡೆ, ಹೊಗೆಸುತ್ತಿ ದಂಪತಿಗಳುಂ ಸರ್ವ ಸರೋವರದಿಂ ಸಂಗಡಮೆ ಬಂದು ಸಾಕಿಕೊಳುತಿರ್ದ ಪುಲಿ ಮುಂತಪ್ಪ ನಾಲ್ಕು ಜೀವಂಗಳುಂ ಸತ್ತು ಉತ್ತರಕುರುವೆಂಬ ಭೋಗಭೂಮಿಯೊಳ್ ಪುಟ್ಟಿರ್ದರ್. ಬೆಳಗಾಗೆ ಮತಿವರಾದಿಗಳ್ ಅವರ ದಹನಕ್ರಿಯೆಯಂ ಮಾಡಿ...(ಹಪೂರ್ವ. ಪರ್ವ-vii)

ಇಲ್ಲಿ ಚಾವುಂಡರಾಯಪುರಾಣದ ಕಥೆಯು ಸಂಕ್ಷಿಪ್ತವಾಗಿ ಹರಿದಿರುವುದನ್ನು ಗಮನಿಸಬಹುದು. ಭೋಗದ ಅಸಾರತೆಯನ್ನು ವರ್ಣನಾದಿಗಳನ್ನು ಇಲ್ಲಿಯೂ ಕೈಬಿಡಲಾಗಿದೆ.

**ಪುಣ್ಯಾಸ್ರವದ ಆದೀಶ್ವರರ ಕಥೆ** : ಹೆಚ್ಚಿನ ವಿಶೇಷವರ್ಣನೆಗಳಿಲ್ಲದೆ ಕಥಾಂಶದಲ್ಲಿ ಹೆಚ್ಚು ಬದಲಾವಣೆಯಿಲ್ಲದೆ ಸಂಕ್ಷಿಪ್ತ ರೀತಿಯಲ್ಲಿ ವಜ್ರಜಂಘ-ಶ್ರೀಮತಿಯರ ಅಂತ್ಯವನ್ನು ವರ್ಣಿಸಲಾಗಿದೆ. ಇಲ್ಲಿ ಬರುವ ವ್ಯತ್ಯಾಸವೆಂದರೆ ಅವರು ನಿದ್ರೆ ಮಾಡುತ್ತಿರುವಾಗ ಸೆಜ್ಜೆವಳನು ಧೂಪಘಟವನ್ನು ಉದ್ದೀಪಿಸಿ ಗವಾಕ್ಷವನ್ನು ತೆರೆಯಲು ಮರೆತನು ಎಂದಿದೆ. ದಂಪತಿಗಳು ಮಲಗಿದ ನಂತರ ಸೆಜ್ಜೆವಳನು ಧೂಪಘಟವನ್ನು ಉದ್ದೀಪಿಸಿದನೆಂಬ ವಿಷಯ ಉಳಿದೆಡೆ ಬರುವುದಿಲ್ಲ.

**ಪುರುದೇವಚರಿತ** : ಆದಿಪುರಾಣವನ್ನು ಅನುಸರಿಸಿದ ಚಾವುಂಡರಾಯಪುರಾಣ ಮತ್ತು ಹಸ್ತಿಮಲ್ಲನ ಪೂರ್ವಪುರಾಣಗಳಲ್ಲಿನ ಕಥೆಯ ಸಂಕ್ಷಿಪ್ತಧಾಟಿಯು ಇಲ್ಲಿಯೂ ಕಂಡುಬರುತ್ತದೆ. ಸೆಜ್ಜೆವಳನು 'ಅಳವರಿಯದೆ' ಕೇಶಸಂಸ್ಕಾರದ ಧೂಪವನ್ನು ಹಾಕಿದ್ದನೆಂಬ

ಅಂಶವು ಬರುವುದಿಲ್ಲ. ಹಾಗೆ ಬಾಯ್ಬಿಟ್ಟು ಹೇಳದಿದ್ದರೂ ಪರಿಮಳದ ಸಂಸ್ಕಾರದ ಧೂಪದ ಹೊಗೆ ಸುತ್ತಿ ಮರಣವನ್ನು ಅಪ್ಪಿದರೆಂಬ ವಿಷಯವು ಬರುತ್ತದೆ.

**ಆದಿಪರಮೇಶ್ವರನ ಯಕ್ಷಗಾನ** : ಕಥೆ ಸಂಕ್ಷೇಪವಾಗಿ ಬಂದಿದೆ. ಶ್ರೀಮತಿ ವಜ್ರ ಜಂಘರ ಭೋಗಭಾಗ್ಯವನ್ನು ಕುರಿತು ಕವಿ ಒಂದು ಪದ್ಯದಲ್ಲಿ ಉಲ್ಲೇಖಿಸಿದ್ದಾನೆ. 'ಶ್ರೀಮತಿಯೊಳನುಕೂಲನಾಗಿಯು ಕಾಮಸುಖಭೋಗಾಂಬುಧಿ ನಿಧಿಯೊಳು ಪ್ರೇಮ ದೊಳಿರುತಿರಲುವೊಂದಾನೊಂದು ದಿನದಿ' (ಪರಿಚ್ಛೇದ-iii) ಎಂದು ಹೇಳಿ, ದುರಂತ ಘಟನೆಯನ್ನು ಚಾವುಂಡರಾಯಪುರಾಣ, ಹಸ್ತಿಮಲ್ಲನ ಪೂರ್ವಪುರಾಣಗಳಂತೆ ಸಂಕ್ಷೇಪಿಸಿ ಹೇಳಿದ್ದಾನೆ.

ಒಟ್ಟಾರೆ ಹೇಳಬೇಕೆಂದರೆ ಒಂದಾದ ಮೇಲೊಂದರಂತೆ ಘಟನಾವಳಿಗಳು ಈ ಭವ ದಲ್ಲಿ ಸುರುಳಿ ಬಿಚ್ಚುತ್ತಾ ಹೋಗುತ್ತವೆ. ಆದಿತೀರ್ಥಂಕರ ಭವಗಳಲ್ಲೆಲ್ಲಾ ಈ ಭವ ಅತ್ಯಂತ ವಿಸ್ತಾರವಾದ ವಿನ್ಯಾಸವನ್ನೊಳಗೊಂಡು ನಿರೂಪಿತವಾಗಿದೆ. ಒಂದೊಂದು ಘಟ್ಟವೂ ಒಂದೊಂದು ಸಂದೇಶವನ್ನು ಸಾರುವಂತಹ ಮಾದರಿಯದೂ ವಿವಿಧ ಭಾವ ಸಂಕೀರ್ಣತೆಗಳಿಂದ ಕೂಡಿದುದೂ ಆಗಿದೆ. ಶ್ರೀಮತಿ ವಜ್ರಜಂಘರು ತಮ್ಮ ಪುಣ್ಯವಿಶೇಷ ದಿಂದ ಹಾಗೂ ಮೋಹನೀಯ ಕರ್ಮದ ಪರಿಪಾಕದಿಂದ ದಂಪತಿಗಳಾದವರು. ಇಲ್ಲಿಯೂ ಅವರು ಧಾರ್ಮಿಕ-ಲೌಕಿಕ ಕ್ರಿಯೆಗಳೆರಡರಲ್ಲಿಯೂ ನಿರತರಾಗುತ್ತಾರೆ. ಅವರ ತಂದೆ ತಾಯಿಗಳೂ ಸಹ ಇಂತಹ ನೆಲೆಯಲ್ಲಿ ತಮ್ಮ ಕರ್ತವ್ಯಗಳನ್ನು ನಿಭಾಯಿಸಿ, ಕೊನೆಗೆ ಧರ್ಮಕ್ಕೇ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಟ್ಟು ವೈರಾಗ್ಯಪರರಾಗಿ ತಪವನ್ನು ಎಸಗಿದವರು. ಪ್ರಾಪಂಚಿಕ ಸುಖದ ನಶ್ವರತೆಯನ್ನರಿತು ಶಾಶ್ವತ ಸುಖದೆಡೆಗೆ ಮನಸ್ಸು ಕೊಟ್ಟವರು. ವಜ್ರದಂತ ಚಕ್ರವರ್ತಿ, ವಜ್ರಬಾಹುರಾಜರು ಸಾಮಾನ್ಯರಾದವರಲ್ಲ. ವೈರಾಗ್ಯ ಭಾವದ ಭಾವಗತಿಯನ್ನು ಮಿಡಿಯುವ ಪಾತ್ರಗಳಾಗಿ ಕಂಡುಬರುತ್ತಾರೆ. ವಜ್ರಜಂಘನು ಶ್ರೀಮತಿ ಯೊಂದಿಗೆ ಪುಂಡರೀಕಿಣಿಯ ಅರಾಜಕತೆಯನ್ನು ಹೋಗಲಾಡಿಸಲು ಬರುವಾಗಿನ ಪ್ರಯಾಣ ಸಂದರ್ಭದಲ್ಲಿ ಧಾರ್ಮಿಕ ಶ್ರುತಿ ಮಿಡಿದಿದೆ. ಚಾರಣ ಮುನಿಗಳಿಗೆ ನೀಡುವ ಆಹಾರದಾನದ ಚಿತ್ರಣ ಮಹತ್ತ್ವದ ಜೊತೆಯಲ್ಲಿಯೇ ಭವಾಂತರ ಕತೆಗಳ ಜಟಿಲ ಚಿತ್ರಣ ಮೂಡಿ ಬಂದಿದೆ. ಕ್ರೋಧ, ಮಾನ, ಮಾಯ, ಲೋಭ ಕಷಾಯಗಳಿಂದ ಜೀವಿಗೆ ಒದಗಿ ಬರುವ ಕುಗತಿ ವಿಶೇಷಗಳ ಚಿತ್ರಣವನ್ನು ತೋರುವ ಕತೆಗಳು ಇಲ್ಲಿ ಸಂಕ್ಷಿಪ್ತವಾಗಿ ಬಂದಿವೆ. ಆದಿತೀರ್ಥಂಕರನ ಮಕ್ಕಳಾಗುವ ಅನಂತವೀರ್ಯ, ಅಚ್ಯುತ, ವೀರ, ಸುವೀರರು ಈ ಕಷಾಯವಶರಾಗಿದ್ದ ಕಾರಣ ಶಾರ್ದೂಲ, ವರಾಹ, ವಾನರ, ನಕುಲರಾಗಿ ಹುಟ್ಟಿ ದವರು. ಆದರೆ ಈ ಕಷಾಯತೀವ್ರತೆ ಕಡಿಮೆಯಾಗಿ ಧರ್ಮದ ಕಡೆಗೆ ಮನವನ್ನು ಹರಿಸುವಾಗ ಆ ಕುಗತಿಯಿಂದ ಬಿಡುಗಡೆಯನ್ನೂ ಪಡೆದವರು. ದಾನಾನುಮೋದನೆಯ ಪುಣ್ಯಕಾರ್ಯವು ಅವರ ಮುಂದಿನ ಸದ್ಗತಿಗಳಿಗೆ ಕಾರಣವಾಯಿತು. ಈ ಜೀವಿಗಳ ಭವನಿರೂಪಣೆಯೊಂದಿಗೆ ಭರತ, ಬಾಹುಬಲಿ, ವೃಷಭಸೇನ, ಅನಂತವಿಜಯರ ಭವಾಂ ತರ ನಿರೂಪಣೆಯೂ ಬರುತ್ತದೆ. ಶ್ರೀಮತಿ-ವಜ್ರಜಂಘ ಭವದಲ್ಲಿ ನಿರೂಪಿತವಾಗಿರುವ ಭವಾಂತರ ಕತೆಗಳಲ್ಲಿ ಜೀವಿಯು ಕರ್ಮ ಪರಿಪಾಕದ ಶುಭಾಶುಭಪರಿಣಾಮಗಳಿಂದೊದ ಗುವ ಸುಖದುಃಖಗಳ ಪರಿಣಾಮ ವಿಶೇಷವನ್ನು ತಿಳಿಯಬಹುದಾಗಿದೆ. ಒಂದೊಂದು

ಭವಸಂಬಂಧದ ಹಿನ್ನೆಲೆಯಲ್ಲಿಯೂ ಒಂದಲ್ಲ ಒಂದು ನಿಮಿತ್ತವು ಅಡಗಿರುವಂತೆ ತೋರುತ್ತದೆ. ಶ್ರೀಮತಿ-ವಜ್ರಜಂಘರ ಸಹಮರಣವಂತೂ ಒಂದು ಉನ್ನತವಾದ ಸಂದೇಶವನ್ನೇ ಸಾರುತ್ತದೆ. ಭೋಗದ ಹಿನ್ನೆಲೆಯಲ್ಲಡಗಿರುವ ಭೀಕರತೆಗೆ ಯಾರೂ ತತ್ತರಿಸಿ ಹೋಗುವಂತಹ ಚಿತ್ರಣವದು. ಜಯವರ್ಮನು ವೈರಾಗ್ಯದ ನೆಲೆಯಲ್ಲಿಯೂ ಭೋಗಕ್ಕಾಗಿ ಬಾಯ್ಬಿಟ್ಟನಲ್ಲವೇ? ಅದರ ಪ್ರತಿಫಲವು ಈ ಭವದಲ್ಲಿ ಈ ರೀತಿಯಾಗಿ ಪ್ರತಿಸ್ಪಂದಿಸಿದಂತಿದೆ. ಒಂದು ಭವದ ಆಗುಹೋಗುಗಳು ಮತ್ತೊಂದು ಭವಕ್ಕೆ ಸುರುಳಿ ಸುತ್ತಿಕೊಂಡು ತೊಡರುವ ರೀತಿಯನ್ನಿಲ್ಲಿ ಕಾಣಬಹುದಾಗಿದೆ. ಜೀವಿಗಳ ಏಳು-ಬೀಳಿನ ಬದುಕು ಅವರವರ ಭವಾಂತರ ಮನೋಧರ್ಮವನ್ನು ಅವಲಂಬಿಸಿದುದಾಗಿದೆ ಎಂಬು ದಕ್ಕೆ ಇಲ್ಲಿ ಅನೇಕ ದೃಷ್ಟಾಂತಗಳು ಕಂಡುಬರುತ್ತವೆ.

## ವಜ್ರಜಂಘಾರ್ಯ ಭವ

**ಆದಿಪುರಾಣ-ಪೂರ್ವಪುರಾಣ :** ವಜ್ರಜಂಘ ಶ್ರೀಮತಿಯರು, ವಜ್ರಜಂಘಾರ್ಯ ಶ್ರೀಮತಿ ಆರ್ಯೆಯರಾಗಿ ಮತ್ತು ಶಾರ್ದೂಲಾದಿಗಳು ಶಾರ್ದೂಲಾರ್ಯಾದಿಗಳಾಗಿ ಉತ್ತರಕುರುವಿನಲ್ಲಿ (ಉತ್ತಮ ಭೋಗಭೂಮಿಯಲ್ಲಿ) ಜನಿಸಿದುದು, ಭೋಗಭೂಮಿಯ ವರ್ಣನೆ, ಕಲ್ಪವೃಕ್ಷಗಳ ವರ್ಣನೆ, ಭೋಗಭೂಮಿಜರ ಜೀವನದ ರೀತಿ, ವಜ್ರಜಂಘಾರ್ಯ ಶ್ರೀಮತಿ ಆರ್ಯೆಯ ಒಡನಾಟ, ಪೂರ್ವಜನ್ಮಸ್ಮರಣೆ, ಚಾರಣಮುನಿದ್ವಯರ ದರ್ಶನ, ಸ್ವಯಂಬುದ್ಧನ ಜನ್ಮಾಂತರದ ಕಥೆ, ಉಪದೇಶ, ಸಂಯಕ್ತ್ವರೂಢರಾದ ವಜ್ರಜಂಘಾ ರ್ಯಾದಿ ಜೀವಿಗಳು ಈಶಾನಕಲ್ಪಜರಾದುದು ಈ ವಿವರಗಳನ್ನೊಳಗೊಂಡ ಕಥಾಚೌಕಟ್ಟು ಪೂರ್ವಪುರಾಣಕ್ಕೆ ಅನುಗುಣವಾಗಿ ಬಂದಿದೆ. ಒಂದು ರೀತಿಯಲ್ಲಿ ನಿರೂಪಣಾತ್ಮಕ ಪುರಾಣ ಶೈಲಿಯಲ್ಲಿಯೇ ಕಥೆ ಸಾಗಿದೆ ಎನ್ನಬಹುದಾದರೂ ಅಲ್ಲಲ್ಲಿ ಕವಿ ಕಾವ್ಯತ್ವದ ಮೆರುಗನ್ನು ಮಿಂಚಿಸಿದ್ದಾನೆ. ಪೂರ್ವಪುರಾಣದಲ್ಲಿಯ ಸುದೀರ್ಘ ವಿವರಗಳನ್ನು ಆದಷ್ಟು ಅಡಕಗೊಳಿಸಿದ್ದಾನೆ.

ಮನ್ಮಥನ ಸುಖಕ್ಕೆ ಆವಾಸಸ್ಥಾನವಾದಂತೆ ಭೋಗಭೂಮಿ ಇದ್ದಿತು. ಬಿಸಿಲು-ಮಳೆ-ಹಿಮದ ಬಾಧೆ ಅಲ್ಲಿಲ್ಲ. ನೆಲವಾದರೋ ಪಂಚರತ್ನಮಯ. ನೀಲೋತ್ಪಲಗಳಿಂದ ತುಂಬಿದ ಸರೋವರಗಳು, ಮಂದಾನಿಲದ ತಣ್ಪು, ಸ್ವಚ್ಛಜಲ, ಉದ್ಯಾನವನಗಳ ಸೊಬಗು ಅಲ್ಲಿ ರಾರಾಜಿಸಿದುವು. ಪ್ರಕೃತಿಯ ಉಚ್ಛ್ರಾಯ ಭೋಗದ ನೆಲೆ ತಾನೇ ತಾನಾಗಿತ್ತು. ಮದ್ಯಾಂಗಾದಿ ಕಲ್ಪವೃಕ್ಷಗಳು ಭೋಗಭೂಮಿಜರ ಇಷ್ಟಾರ್ಥವನ್ನು ಈಡೇರಿಸುತ್ತಿದ್ದ ವೆಂದ ಮೇಲೆ ಕೊರತೆ ಏನು? ಹಗಲಿರುಳೆಂಬ ಭೇದವಿಲ್ಲ; ರೋಗರುಜಿನಗಳಿಲ್ಲ; ಕೊಲೆಸುಲಿಗೆಗಳಿಲ್ಲ. ಎಲ್ಲೆಲ್ಲಿಯೂ ಸುಖವೇ ಸುಖ. ಆ ಭೋಗಭೂಮಿಯಲ್ಲಿ ಸ್ತ್ರೀಪುರುಷ ಯುಗ್ಮಗಳಾಗಿ ಹುಟ್ಟಿ ಅವರೇ ಮುಂದೆ ದಂಪತಿಗಳಾಗಿ ಬಾಳುವರು. ಹುಟ್ಟಿದೊಡನೆ ತಾಯಿತಂದೆಗಳು ಸೀನಿ, ಆಕಳಿಸಿ ಸಾಯುವರು. ಅವರು ಮಂಜು ಕರಗಿದ ಹಾಗೆ ಕರಗುವರು; ಸ್ವರ್ಗವನ್ನು ಸೇರುವರು. ನವಜಾತ ಹೆಣ್ಣುಗಂಡು ಶಿಶುಗಳು ಪುಣ್ಯಫಲ ವೆಂಬಂತೆ ಕಾಮಧೇನುವಿನ ಸ್ತನಗಳಂತಿರುವ ತಮ್ಮ ಬೆರಳುಗಳಲ್ಲಿ ಹುಟ್ಟಿದ ರಸಾಯನ ವನ್ನು ಆಹ್ವಾನಿಸುತ್ತ ಮೇಲ್ಮುಖವಾಗಿ ಮಲಗಿ ಏಳುದಿನಗಳನ್ನು ಕಳೆಯುತ್ತವೆ. ಮುಂದಿನ

ಏಳು ದಿನಗಳಲ್ಲಿ ಎಡವದೆ ನಡೆಯುತ್ತವೆ. ಮತ್ತೆ ಮುಂದಿನ ಮೂರು ಏಳೇಳು ದಿನಗಳಲ್ಲಿ ಆ ಮಕ್ಕಳು ಸಕಲಪ್ರವೀಣರೂ ವಿಜ್ಞಾನವಿದರೂ ಸಂಪೂರ್ಣಯೌವನದಿಂದ ಕೂಡಿದವರೂ ಆಗುತ್ತಾರೆ. ಶರೀರದ ಎತ್ತರ ಆರುಸಾವಿರ ಬಿಲ್ಲು. ಮೂರು ದಿನಗಳಿಗೊಮ್ಮೆ ಯಲಚಿ ಹಣ್ಣಿನಗಾತ್ರದ ಆಹಾರವನ್ನು ಸೇವಿಸಿ ಆರೋಗ್ಯಸಂಪನ್ನರಾಗಿರುತ್ತಾರೆ. ಸದಾ ಯೌವನಸಂಪನ್ನರಾಗಿ ಪ್ರಣಯಿಗಳು ಅನುರಾಗದಿಂದ ಕೂಡಿರುತ್ತಾರೆ.

ಇಂತಹ ಭೋಗಭೂಮಿಯಲ್ಲಿ ಶ್ರೀಮತಿ ವಜ್ರಜಂಘರು ಭೋಗಭೂಮಿಜರಾದರು. ದಾನಾನುಮೋದವನ್ನು ಮಾಡಿದ ಶಾರ್ದೂಲಾದಿಗಳು ಭೋಗಭೂಮಿಯಲ್ಲಿ ಹುಟ್ಟಿದುವು.

ಪೂರ್ವಪುರಾಣದಲ್ಲಿ ಬರುವ ಭೋಗಭೂಮಿಯ ವರ್ಣನೆಯನ್ನು ಪಂಪನು ನಿರೂಪಣಾ ಮಾತ್ರವಾಗಿ ಸಂಗ್ರಹಿಸಿದ್ದಾನೆ.

'ಶ್ರೀಮತಿ ಆರ್ಯೆಯೊಡನೆ ವಜ್ರಜಂಘಾರ್ಯನು ಒಂದು ದಿನ ಕಲ್ಪವೃಕ್ಷದ ಶೋಭೆಯನ್ನು ನೋಡುತ್ತಿದ್ದನು'—ಇದು ಪೂರ್ವಪುರಾಣದಲ್ಲಿ ಬರುವ ಹೇಳಿಕೆ. ಈ ಹೇಳಿಕೆಗೆ ಪಂಪನು ಕಾವ್ಯಚಿತ್ತಾರದ ಕೆಲಸವನ್ನು ಮಾಡಿದ್ದಾನೆ. ಒಂದು ಕೊಂಬೆ ತಳಿರಿನಿಂದಲೂ ಮುಗುಳಿನಿಂದಲೂ ತುರುಗಿದೆ; ಮತ್ತೊಂದು ತಳ್ತ ಬಲ್ಮಿಡಿಯ ಕಾಯ್ಗುಳಗೊಂಚಲಿನಿಂದ ಸುತ್ತಿರಿದಿದೆ; ಮಗದೊಂದರಲ್ಲಿ ಮಾಮರದ ಕೊಂಬೆಯನ್ನು ಮತ್ತೊಂದು ಎಳೆಕೊಂಬೆಯೊಂದು ಪೊತ್ತೆರಗಿದೆ. ಈ ಸಂದರ್ಭದಲ್ಲಿ ಕವಿ 'ನೋಡನೋಡ! ಪಣ್ತೆಱಗಿದುದೇನಿದಂಗಜ ಮಹೀಭುಜನಿಕ್ಕೆಯೋ? ಚಿತ್ರಶಾಲೆಯೋ' (v-೪೫) ಎಂದು ಉದ್ಗಾರ ತೆಗೆದಿದ್ದಾನೆ. ಪ್ರಕೃತಿಯನ್ನು ಕವಿ ಉತ್ಸಾಹದಿಂದ ಗಮನಿಸುವ ರೀತಿ, ಅದನ್ನು ಚಿತ್ರಗತವಾಗಿಸುವ ರೀತಿ ಮನನೀಯ.

ವಜ್ರಜಂಘ-ಶ್ರೀಮತಿಯರು ಈ ಸಮಯದಲ್ಲಿ ಸೂರ್ಯಪ್ರಭದೇವನ ವಿಮಾನವನ್ನು ಕಂಡು ಜಾತಿಸ್ಮರಣೆಯುಳ್ಳವರಾಗಿ ಪೂರ್ವಜನ್ಮದ ವೃತ್ತಾಂತವನ್ನು ತಿಳಿದರು. ಅಷ್ಟರಲ್ಲಿ ಚಾರಣಮುನಿಗಳ ದರ್ಶನವಾಗಿ ಅವರಿಗೆ ಭಕ್ತ್ಯಾದರಗಳನ್ನು ತೋರಿ, ಪ್ರಶ್ನೆ ಮಾಡಿ ಅವರ ವಿಚಾರಗಳನ್ನು ವಜ್ರಜಂಘನು ತಿಳಿದುಕೊಂಡನು. 'ಮುನಿಶ್ರೇಷ್ಠರಾದ ನಿಮ್ಮ ಪಾದಕಮಲಗಳನ್ನು ಕಂಡು ನಮ್ಮ ಕಣ್ಣೀರು ಹನಿಗಳು ನಿಲ್ಲದೆ ಸುರಿಯುತ್ತಿವೆ. ಕಾರಣವೇನು? ನಮ್ಮ ಮನಸ್ಸಿನಲ್ಲಿ ಅತಿಯಾದ ಪ್ರೀತಿ ನಿಮ್ಮಲ್ಲಿ ಏಕೆ ಉಕ್ಕುತ್ತಿದೆ? ಪೂರ್ವಜನ್ಮದ ಸಂಬಂಧವಿರಲೇಬೇಕು!—ಈ ಮುಂತಾಗಿ ಪ್ರಶ್ನಿಸಿದಾಗ, ಜ್ಯೇಷ್ಠಚಾರಣ ಮುನಿಗಳು ತಮ್ಮ ವೃತ್ತಾಂತವನ್ನು ನಿರೂಪಿಸಿದರು. ಅದೇ ಸ್ವಯಂಬುದ್ಧನ ವೃತ್ತಾಂತ.

ವಜ್ರಜಂಘನು ಸಮಾಧಿಯನ್ನು ಪಡೆದ ಮೇಲೆ ಸ್ವಯಂಬುದ್ಧನು ಅಗಲಿಕೆಯ ದುಃಖದಿಂದ ಉಗ್ರೋಗ್ರ ತಪವನ್ನು ಕೈಕೊಂಡು ದೇಹತ್ಯಾಗಮಾಡಿ ಮೊದಲ ಸ್ವರ್ಗದಲ್ಲಿ ಮಣಿಚೂಲನೆಂಬ ಹೆಸರಿನಿಂದ ಅಮರೇಂದ್ರನಾದನು. ಅಲ್ಲಿಂದ ಪುಂಡರೀಕಿಣಿಯ ರಾಜ ಪ್ರಿಯಸೇನನಿಗೂ ರಾಣಿ ಸುಂದರಿಗೂ ಪ್ರೀತಿಂಕರನೆಂಬ ಮಗನಾದನು. ಪ್ರೀತಿದೇವ ಈತನ ಕಿರಿಯ ತಮ್ಮ. ಈ ಅಣ್ಣ-ತಮ್ಮಂದಿರು ತಪೋಮಹಿಮೆಯಿಂದ ಅವಧಿಜ್ಞಾನ ಸಂಪನ್ನರಾಗಿ ಚಾರಣಗುಣವನ್ನು ಪಡೆದರು.

ಅವಧಿಜ್ಞಾನವನ್ನು ಪಡೆದ ಪ್ರೀತಿಂಕರಚಾರಣಮುನಿಯು ಪ್ರೀತಿದೇವಚಾರಣಮುನಿಯೊಂದಿಗೆ ವಜ್ರಜಂಘಾರ್ಯನಿಗೆ ಬೋಧನೆಮಾಡಲೆಂದೇ ಅಲ್ಲಿಗೆ ಬಂದ ವೃತ್ತಾಂತ

ವನ್ನು ಕೂಡ ತಿಳಿಸಿದನು.

ಆದಿಪುರಾಣದ ಈ ಭಾಗವೂ ಕೂಡ ಪೂರ್ವಪುರಾಣದ ಅನುವರ್ತಿಯಾಗಿದೆ.

ಚಾರಣಮುನಿಗಳು ನೀಡುವ ಬೋಧನೆ, ರತ್ನತ್ರಯಗಳ ಬಗೆಗೆ ನೀಡುವ ವಿವರಣೆಗಳು, ಪೂರ್ವಪುರಾಣದಲ್ಲಿ ವಿಸ್ತೃತವಾಗಿ ಬಂದಿವೆ. ಪಂಪನು ಔಚಿತ್ಯವರಿತು ಸಂಕ್ಷಿಪ್ತಗೊಳಿಸಿ ಹೇಳಿದ್ದಾನೆ. ಧರ್ಮಬೋಧನೆಯ ನಿರೂಪಣೆಯಲ್ಲಿ ಸೊಗಸು ಮೈದುಂಬಿ ಬರುತ್ತದೆ.

ವಜ್ರಜಂಘಾರ್ಯನಿಗೆ ಚಾರಣಮುನಿಗಳು ಮಾಡುವ ಉಪದೇಶದ ಈ ಭಾಗವನ್ನು ಗಮನಿಸಬಹುದು :

'ಸಮ್ಯಗ್ದರ್ಶನವು ಮೂಡಿಬರುವುದು ಸುಲಭವಲ್ಲ. ಅದಕ್ಕೆ ಕಾಲಲಬ್ಧಿ ಕೂಡಿ ಬರಬೇಕು. ಗುರೂಪದೇಶವು ಮನದಲ್ಲಿ ನಾಟಿಬರಬೇಕು. ಜಿನಭಕ್ತಿ ಹೊರಹೊಮ್ಮಬೇಕು. ದಯಾರಸವು ಕೂಡಿರಬೇಕು. ಇಷ್ಟೆಲ್ಲಾ ಪರಿಕರಗಳು ದೊರೆತರಷ್ಟೇ ಸಾಲದು; ಮನಕ್ಕೆ ಅವು ಸಾರಬೇಕು. ಹಾಗೆ ಅರಿವಾದಾಗ ಸಂಸಾರದ ದಡವು ಹತ್ತಿರವಾಗಿ, ಪ್ರಾಪ್ತವಾದ ವಿಭವವು 'ಖಿಳಕರ್ಮ' ಬಂಧನವನ್ನು ಕಳಚುವುದು' (v-೫೩)

ಕವಿ ಇಲ್ಲಿ ಸರಳವಾಗಿ ಧಾರ್ಮಿಕ ವಿಚಾರಗಳನ್ನು ನಿರೂಪಿಸಿರುವ ವಿಧಾನ ಗಮನಾರ್ಹವಾದುದು. 'ಸಂಯಕ್ತ್ವ'ವೆಂದರೇನೆಂಬುದರ ಸರಳ ನಿರೂಪಣೆ ಹೀಗಿದೆ : 'ಪರಮೋಪಶಮಂ'; 'ಧರ್ಮಾನುರಾಗಂ'; 'ಅನುಕಂಪೆ'; 'ಪರಮಜಿನಗದಿತಗುಣಪರಿಕರದೊಳ್ ನಂಬುಗೆ'—ಇವು ನಿರುಪಮವಾದ ಸಮ್ಯಕ್ತ್ವವಾಗಿದೆ (v-೫೫). ಪ್ರೀತಿಂಕರರು ವಜ್ರಜಂಘಾರ್ಯನಿಗೆ ಆತನು ಮಾಡಬೇಕಾದ ಧರ್ಮಾನುನಯದ ಕಾರ್ಯಗಳೇನೆಂಬುದನ್ನು ಬಿಡಿಸಿ ಬಿಡಿಸಿ ಹೀಗೆ ಬೋಧಿಸುತ್ತಾರೆ : 'ಜೀವಾದಿ ನವಪದಾರ್ಥದೊಳಾವಗಮೞ್ತಿಯನೆ ಮಾಡು' ; 'ಮೂಢತ್ರಯದೊಳ್ ಭಾವಮನೆ ಬಿಸುಡು.'; 'ಈ ವಿಧದಿಂ ನೆಗೞ್ದೆ ನಿನ್ನ ದರ್ಶನರತ್ನಂ ಬೆಳಗುಗುಂ' (v-೫೬)—ಈ ಮುಂತಾಗಿ ನುಡಿದು ರತ್ನತ್ರಯಗಳನ್ನು ದೃಢವಾಗಿ ನೆಮ್ಮಿಕೊಂಡಿರಲು ಉಪದೇಶಿಸುತ್ತಾರೆ. 'ಈ ಸಂಸಾರಾಂಬೋಧಿಯನೀಸುವ ನಿನಗಿದುವೆ ನಾವೆ'; 'ತಡಿಗಾಣ್ಬೆಯನಾಯಾಸದೊಳೆ'; 'ನಿನಗೆ ಮುಕ್ತಿ ಪ್ರಾಸಾದಮನಡರಲಿವುವೆ ಸೋಪಾನಂಗಳ್' (v-೬೦) ಎಂದು ರತ್ನತ್ರಯಗಳ ಹಿರಿಮೆಯನ್ನು ತಿಳಿಯಪಡಿಸುತ್ತಾರೆ. ಮತ್ತೊಂದು ಜೀವವನ್ನು ಉದ್ಧರಿಸಬೇಕೆಂಬ ಕಳಕಳಿಯಿಂದ ಕೂಡಿದ ಚೇತನ ಪ್ರೀತಿಂಕರರ ಚೇತನ. ಇವರ ಬೋಧನೆಗಳಲ್ಲಿ ಆತ್ಮೀಯತೆಯ ಮಾಧುರ್ಯವಿದೆ. ಅದನ್ನು ಕೇಳುತ್ತಿರುವವರನ್ನು ಉದ್ದೀಪನಗೊಳಿಸುವ ಶಕ್ತಿ ಅವರ ಈ ಧಾರ್ಮಿಕ ಬೋಧನೆಗಳಲ್ಲಿ ಅಡಗಿದೆ.

ಹಾಗೆಯೇ ಅವರು ಶ್ರೀಮತಿಯನ್ನು ಕುರಿತು ಹೇಳುವ ಮಾತುಗಳನ್ನು ಗಮನಿಸಬಹುದಾಗಿದೆ—

ಅಬ್ಬ ನೀನುಂ | ಸಂದೆಯಮಣಮಿಲ್ಲದಿದನೆ ನಂಬಿನಿತಂ ನೀ
ನೊಂದಿದ ನಾರೀರೂಪದ ದಂದುಗದೊಳ್ ತೊಡೆರ್ದು ಬಿಡದೆ ನಮೆಯುತಿರ್ಪೆ (v-೬೨)

ಎಂದು ಎಚ್ಚರಿಸುವ ರೀತಿ ಪಂಪನ ಸ್ವಂತಿಕೆಯ ಮಾತಲ್ಲ. ಪೂರ್ವಪುರಾಣದಲ್ಲಿ ಬರುವ—'ಎಲೈ ತಾಯಿಯೇ! ನೀನೂ ಶೀಘ್ರವಾಗಿ ಸಮ್ಯಕ್ತ್ವವನ್ನು ಅವಲಂಬಿಸು; ಆ ಸಮ್ಯಕ್ತ್ವವು ಸಂಸಾರವೆಂಬ ಸಮುದ್ರವನ್ನು ದಾಟುವುದಕ್ಕೆ ತೆಪ್ಪವಾಗಿದೆ. ಈ ಸ್ತ್ರೀ

ಪರ್ಯಾಯದಿಂದ ಏತಕ್ಕೆ ದುಃಖಿಪಡುತ್ತೀಯೆ! ಕಷ್ಟ—ಎಂಬ ಮಾತು ಪಂಪನಲ್ಲಿ ಅರ್ಥ ಕೆಡದಂತೆ ಮೂಡಿ ಬಂದಿದೆ. ಪೂರ್ವಪುರಾಣದಲ್ಲಿ ಬರುವ ಸ್ತ್ರೀಪರ್ಯಾಯ ಮುಕ್ತಿಗೆ ಯೋಗ್ಯವಲ್ಲವೆಂಬುದನ್ನು ಪಂಪನು ಬೆಳಸಲು ಹೋಗಿಲ್ಲ.

ತಮ್ಮನ್ನು ಜಾಗೃತಗೊಳಿಸಿದ ಮುನಿಗಳ ಬಗೆಗೆ ಆದರ ಭಾವವನ್ನು ತಳೆದು ಸಮ್ಯಕ್ತ್ವವನ್ನು ಆರಾಧಿಸಿ ಆಯುಷ್ಯಾಂತದಲ್ಲಿ ಸತ್ತು 'ಮನೆಯಿಂದಂ ಮನೆಗೆಂದು ಪೋಪತೆಱದಿಂ ಮೇಣ್ ನೂಕೆ ಪಾಸೆಂಬ ಮಾತಿನ ಪಾಂಗಿಂದ' (v-೭೦) ಪುಣ್ಯಭಾಗಿಗಳಾದ ಆರ್ಯ-ಆರ್ಯೆಯರು ಈಶಾನಸ್ವರ್ಗದಲ್ಲಿ ಹುಟ್ಟಿದರು. ಪುಣ್ಯವಂತರ ಸಾವೂ ನಿರಾಕುಲವಾದುದು. ಅವರವರ ಪುಣ್ಯಕ್ಕೆ ತಕ್ಕಂತೆ ಅವರವರ ಬದುಕಿನ ಹಾಸು.

## ಉತ್ತರಕಾಲೀನ ಕಾವ್ಯಗಳು

**ಚಾವುಂಡರಾಯಪುರಾಣ :** ಎರಡು ಪುಟಗಳಲ್ಲಿ ಸಂಗ್ರಹವಾಗಿ ಇಲ್ಲಿಯ ಕಥಾಂಶವು ಕಾವ್ಯಾಂಶದ ಲೇಪನವಿಲ್ಲದೆ ಮುಕ್ತಾಯಗೊಳ್ಳುತ್ತದೆ. ಉತ್ತರಕುರುವಿನ ಪ್ರತ್ಯೇಕ ವರ್ಣನೆಯಿಲ್ಲ. ಉತ್ತರಕುರುವಿನಲ್ಲಿ ಶ್ರೀಮತಿ ವಜ್ರಜಂಘರು ದಂಪತಿಗಳಾಗಿ ಹುಟ್ಟಿದಾಗ ಅವರು ಬೆಳೆದ ರೀತಿಯನ್ನು ವಿವರಿಸುವಾಗ ಕವಿ ಅದನ್ನು ಅಡಕಗೊಳಿಸಿದ್ದಾನೆ. ಧರ್ಮೋಪದೇಶದ ಬಗೆಗೂ ನಿಶ್ಶಂಕಿತಾದಿ ಯುಕ್ತಮಪ್ಪ ಸಂಯುಕ್ತ್ವವನ್ನು ಕೈಗೊಳ್ಳಿಸಿದನೆಂದಷ್ಟೇ ಬರುತ್ತದೆ. ಶ್ರೀಮತಿಯನ್ನು ಕುರಿತು 'ನೀಂ ಸ್ತ್ರೀರೂಪದೊಳ್ ತೊಡರ್ದು ದೆಸೆಗಿಡಲ್ವೇಡ' ಎಂಬ ವೃತ್ತಾಂತವು ಆದಿಪುರಾಣದಂತೆ ರೇಖಾಮಾತ್ರವಾಗಿ ಬರುತ್ತದೆ. ಶಾರ್ದೂಲಾದಿಗಳನ್ನು ಸಮ್ಯಕ್ತ್ವದಲ್ಲಿ ನೆಲೆಗೊಳಿಸಿದನು. ಅವರೆಲ್ಲರೂ ಮುನಿಯ ಮಹಿಮೆಯನ್ನು ನೆನೆಯುತ್ತ ಆಯುಷ್ಯಾಂತದಲ್ಲಿ ಸತ್ತು ಈಶಾನಕಲ್ಪಜರಾದರು.

ಕವಿ ಪೂರ್ವಪುರಾಣ, ಆದಿಪುರಾಣಗಳಲ್ಲಿ ಬರುವ ವಿಷಯಗಳನ್ನು ಕ್ರೋಡೀಕರಿಸಿ ಹೇಳಿದ್ದಾನೆ. ಧರ್ಮೋಪದೇಶದ ವಿವರಣೆಯಾಗಲಿ ಭೋಗಭೂಮಿ, ಕಲ್ಪವೃಕ್ಷಗಳ ಸೊಬಗಿನ ವರ್ಣನೆಯಾಗಲಿ ಇಲ್ಲಿಲ್ಲ. ಮುಖ್ಯಾಂಶವನ್ನು ಹೇಳುವುದಷ್ಟೇ ಕವಿಯ ಗುರಿ.

**ಹಸ್ತಿಮಲ್ಲನ ಪೂರ್ವಪುರಾಣ :** ಇಲ್ಲಿ ಬರುವ ವಜ್ರಜಂಘಾರ್ಯ ವೃತ್ತಾಂತವು ಚಾವುಂಡರಾಯಪುರಾಣದಲ್ಲಿ ಬರುವ ನಿರೂಪಣೆಗಿಂತಲೂ ಕಿರಿದಾಗಿ ಬಂದಿದೆ. ಕವಿ ಕೆಲವೆಡೆ ಚಾವುಂಡರಾಯಪುರಾಣದ ಜಾಡನ್ನು ಹಿಡಿದಿರುವುದನ್ನು ಗುರುತಿಸಬಹುದಾಗಿದೆ. ಉದಾಹರಣೆಗೆ :

> ನೀಂ ಮಹಾಬಲನಾದಂದು ನಾಂ ಸ್ವಯಂಬುದ್ಧ ಮಂತ್ರಿಯಾಗಿ ನಿನಗೆ ಸಮಾಧಿಯಂ ಮಾಡೆ, ಮತ್ತೆ ನಾಂ ತಪಂಗೊಂಡು ಮುಡಿಪಿ ಪ್ರಥಮ ಸ್ವರ್ಗದೊಳ್ಮಣಿಚೂಡನೆಂಬ ದೇವನಾಗಿ ಸುಖಮನುಂಡು, ಅಲ್ಲಿಂ ಬಂದೀ ಜಂಬೂದ್ವೀಪದ ಪೂರ್ವ ವಿದೇಹದ ಪುಷ್ಕಳಾವತೀ ವಿಷಯದ ಪುಂಡರೀಕಿಣಿಯನಾಳ್ವ ಪ್ರಿಯಸೇನ ನೃಪತಿಯ ಸತಿ ಸೌಂದರಿಗೆ ಪ್ರೀತಿಂಕರನೆಂಬ ಮಗನಾಗಿ, ಎನ್ನ ತಮ್ಮನಪ್ಪೀ ಪ್ರೀತಿದೇವನೊಡಗೂಡಿ ತಪಂಗೊಂಡು ಗಗನ ಚಾರಣತ್ವಮುಮನವಧಿಜ್ಞಾನಮುಮಂ ಪಡೆದು, ನೀನಿರ್ದೆಡೆಯನಂದು ಬೋಧಿಸಲೆಂದು ಬಂದೆವು (ಹಪೂರ್ವ. ಪು. ೩೫).

> ಮಹಾಬಲವಿಯಚ್ಚರನಾದ ಭವದೊಳ್ ಆಂ ನಿನಗೆ ಸಚಿವ ಸ್ವಯಂಬುದ್ಧನೆಂಬೆನಾಗಿ

ನಿನ್ನ ಸಮಾಧಿವಿಧಿಯಂ ಮಾಡಿ ಬಱಿಯಂ ನಾಂ ಘೋರವೀರ ತಪಂಗೆಯ್ದು ಸೌಧರ್ಮ ಕಲ್ಪದ ಸ್ವಯಂಪ್ರಭವಿಮಾನದೊಳ್ ಆಂ ಮಣಿಚೂಡದೇವನಾಗಿ ಸಾಧಿಕ ಸಾಗರೋಪಮಾಯುಷ್ಯಾಂತದೊಳಲ್ಲಿಂ ಬಂದು ಜಂಬೂದ್ವೀಪದ ಪೂರ್ವವಿದೇಹದ ಪುಷ್ಕಳಾವತೀ ಏಷಯದ ಪುಂಡರೀಕಿಣಿಯನಾಳ್ವ ಪ್ರಿಯಸೇನಂಗಂ ಸುಂದರಿಗಂ ಪ್ರೀತಿಂಕರನೆಂಬೊಂ ಮಗನಾದೆನೆನ್ನಿಂ ಕಿಱಿಯಂ ಇವಂ ಪ್ರೀತಿದೇವನೆಂಬೊಂ ನಾಮಿರ್ವರುಂ ಸ್ವಯಂಪ್ರಭರಲ್ಲಿ ದೀಕ್ಷೆಗೊಂಡು ಚಾರಣಋದ್ಧಿಸಂಪನ್ನರವಿಧಿಯಿಂ ನೀನಿಲ್ಲಿ ಪುಟ್ಟುದುದನಱಿದು ಮೋಕ್ಷಕ್ಕೆ ಮುಖ್ಯಕಾರಣಮಪ್ಪ ಸಮ್ಯಕ್ತ್ವಮಂ ಕೈಕೊಳಿಸಲ್ ಬಂದೆವು. (ಚಾವುಂಪು. ಪುಟ ೩೪, ೩೫)

ಕವಿ ಚಾವುಂಡರಾಯಪುರಾಣದ ಗದ್ಯಭಾಗವನ್ನು ಸರಳ ವಿಧಾನದಲ್ಲಿ ರಚಿಸಿದ್ದಾನೆ. ಶ್ರೀಮತಿಯಾರ್ಯೆಗೆ ನೀಡುವ ಪ್ರತ್ಯೇಕವಾದ ಉಪದೇಶ ಇಲ್ಲಿ ಕಂಡುಬರುವುದಿಲ್ಲ. ಉಳಿದಂತೆ ಚಾವುಂಡರಾಯಪುರಾಣದ ಅನುವರ್ತಿಯಾದಂತೆ ಈ ಭಾಗ ಕಂಡುಬರುತ್ತದೆ.

**ಪುಣ್ಯಾಸ್ರವದ ಆದೀಶ್ವರರ ಕಥೆ** : ಉತ್ತಮ ಭೋಗಭೂಮಿಯಲ್ಲಿ ಆರ್ಯರಾಗಿ ಹುಟ್ಟಿದವರೆಂಬ ಅಂಶವನ್ನು ಬಿಟ್ಟರೆ ಭೋಗಭೂಮಿಯ ವರ್ಣನೆಯಾಗಲಿ ಅವರು ಬೆಳೆದ ರೀತಿಯಾಗಲಿ ಇಲ್ಲಿ ಬರುವುದಿಲ್ಲ. ಸೂರ್ಯಪ್ರಭ ಕಲ್ಪವಾಸಿದೇವನನ್ನು ಕಂಡು ಜಾತಿಸ್ಮರರಾದ ಸಮಯದಲ್ಲಿ ಚಾರಣಮುನಿಗಳನ್ನು ಕಂಡು ತೋರಿದ ಪ್ರತಿಕ್ರಿಯೆಯನ್ನು ಕವಿ ಹಂತಹಂತವಾಗಿ ಸರಳವಾಗಿ ನಿರೂಪಿಸಿದ್ದಾನೆ :

ಚಾರಣಯುಗಳಂ ನಭದಿಂ | ಭೋರೆಂದವತರಿಸೆ ಕಂಡು ದಂಪತಿಗಳು ಬಂ
ದೋರಂತಿರೆ ವಂದಿಸಿಯಾ | ಚಾರಣ ದಯಾಂಬುರಾಶಿಯೊಳ್ ಮುಳುಗಿದರ್ (ಪುಆಕ.x-೨)

ಉಳಿದಂತೆ ಕಥೆ ಅತ್ಯಂತ ಸಂಕ್ಷಿಪ್ತ ರೀತಿಯಲ್ಲಿ ನಿರೂಪಿತವಾಗಿದೆ. ಧರ್ಮೋಪದೇಶದ ವಿವರ, ಶ್ರೀಮತಿಗಾಗಿ ನುಡಿಯುವ ಪ್ರತ್ಯೇಕವಾದ ಉಪದೇಶ ಕಂಡುಬರುವುದಿಲ್ಲ.

**ಪುರುದೇವಚರಿತ** : ಸಂಕ್ಷಿಪ್ತ ಕಥಾ ಚೌಕಟ್ಟಿನ ದೃಷ್ಟಿಯಿಂದ ಚಾವುಂಡರಾಯಪುರಾಣ ಹಾಗೂ ಹಸ್ತಿಮಲ್ಲನ ಪೂರ್ವಪುರಾಣವನ್ನು ಇದು ಹೋಲುತ್ತದೆ. ಸಾಂಗತ್ಯದಲ್ಲಿ ಬರುವ ನಿರೂಪಣಾ ವಿಧಾನವು ಚಾವುಂಡರಾಯಪುರಾಣಕ್ಕೆ ಹೆಚ್ಚು ಹತ್ತಿರವಾಗಿರುವಂತೆ ಕಂಡು ಬರುತ್ತದೆ. ಉದಾಹರಣೆಗೆ :

ಈರ್ವರು ಸೂರ್ಯಪ್ರಭನ ವಿಮಾನವ ನೋಡಿ | ಪೂರ್ವಭವವ ನೆನೆವುತಿರೆ
ಈರ್ವರು ಚಾರಣಋಷಿಯರೆಯ್ತರೆ ಭಕ್ತಿ | ಪೂರ್ವಕಮೆರಗಿ ನಿಂತೆಂದಂ
ನಿಮ್ಮೊಳು ಯೆನಗತಿ ಸ್ನೇಹಮಾದಪುದೇನು | ಸಂಬಂಧ ಬೆಸಸೆನಲವರು
ನಮ್ಮೊಳು ನಗುತಗ್ರಮುನಿಗಳೆಂದರು ನಾನು | ನಿಮ್ಮ ಮಂತ್ರಿಯೆ ಸ್ವಯಂಬುದ್ಧ
ನಾನಿಮಗಂದು ಸಮಾಧಿಯ ಕೂಡಿಯ ನೂ |ತನ ತಪದೊಳಾಚರಿಸಿ
ಮಾನಿತ ಸೌಧರ್ಮದೊಳು ಸ್ವಯಂಪ್ರಭವಿ | ಮಾನದೊಳ್ ಮಣಿಚೂಳನಾಗಿ
(ಪುರುಚ.iii-೬೫, ೬೭)

ಆಯುಗಳಂ ವನಶ್ರೀಯಂ ನೋಡುತಿರ್ದಂದು ಗಗನದೊಳ್ ಪೋಪ ಸೂರ್ಯಪ್ರಭನೆಂಬ ದೇವನ ವಿಮಾನಮಂ ನೋಡಿ, ಪೋದ ಭವಂಗಳ ನೆನೆಯುತಿರ್ಪನ್ನೆಗಮಿರ್ವರ್ ಚಾರಣ ಋಷಿಗಳಲ್ಲಿಗೆ ಬರ್ಪುದುಮವರ್ಗೆಱಗಿ ಪೊಡವಟ್ಟು ನಿಮ್ಮೊಳೆಮಗತಿ ಸ್ನೇಹಮಾಯ್ತಾ ಪೋದ ಭವದೊಳ್ ಬಂಧುತ್ವಮುಂಟಕ್ಕುಮದನೆಮಗಱಿಯೆ ಬೆಸಸಿಮೆಂಬುದುಂ ಅವರೊಳಗ್ರಜಮುನಿ ಮುಗುಳ್ನಗೆ ನಕ್ಕು ಮಹಾಬಲವಿಯಚ್ಚರನಾದ ಭವದೊಳ್

ಆಂ ನಿನಗೆ ಸಚಿವನೆಂ ಸ್ವಯಂಬುದ್ಧನೆಂಬೆನಾಗಿ ನಿನ್ನ ಸಮಾಧಿವಿಧಿಯಂ ಮಾಡಿ ಬಟಿಯಂ ನಾಂ ಘೋರವೀರ ತಪಂಗೆಯ್ದು ಸೌಧರ್ಮಕಲ್ಪದ ಸ್ವಯಂಪ್ರಭ ವಿಮಾನದೊಳ್ ಆಂ ದೇವನಾಗಿ (ಚಾವುಂಪು. ಪುಟ ೩೪, ೩೫)

ಚಾವುಂಡರಾಯಪುರಾಣದ ಗದ್ಯಭಾಗವನ್ನು ಕವಿ ಸಾಂಗತ್ಯದಲ್ಲಿ ಸರಳವಿಧಾನದಲ್ಲಿ ರಚಿಸಿದಂತೆ ತೋರುತ್ತದೆ.

ಶ್ರೀಮತಿಆರ್ಯೆಗೆ ನೀಡುವ ಪ್ರತ್ಯೇಕವಾದ ಉಪದೇಶ ಇಲ್ಲಿ ಕಂಡುಬರುವುದಿಲ್ಲ. ಉಳಿದಂತೆ ಚಾವುಂಡರಾಯಪುರಾಣದ ಅನುವರ್ತಿಯಾದಂತೆ ಕಂಡುಬರುತ್ತದೆ. (ಏಳೇಳು ದಿನಗಳ ಲೆಕ್ಕವನ್ನು ನೀಡದೆ, ಮೂರು ಮೂರು ದಿನಗಳ ಲೆಕ್ಕವನ್ನು ನೀಡಿ ೨೧ ದಿನಗಳಲ್ಲಿಯೇ ಆ ಭೋಗಭೂಮಿಜರು ಸಕಲಪ್ರವೀಣ ಯೌವನಸ್ಥರಾದರೆಂಬ ವಿಚಾರ ಇಲ್ಲಿ ಮಾತ್ರ ಕಂಡುಬರುತ್ತದೆ.)

**ಆದಿಪರಮೇಶ್ವರನ ಯಕ್ಷಗಾನ** : ಕವಿ ತನ್ನ ಪೂರ್ವ ಕವಿಗಳ ವರ್ಣನಾ ವಿಧಾನವನ್ನು ಅಲ್ಲಲ್ಲಿ ಅಳವಡಿಸಿಕೊಂಡು ತನ್ನದೇ ಆದ ವೈಶಿಷ್ಟ್ಯವನ್ನು ಮೆರೆಯುವುದಕ್ಕೆ ಪ್ರಯತ್ನಿಸಿದ್ದಾನೆ :

ಭೋಗ ಭೂಮಿಜ ವಜ್ರಜಂಘನು ಶ್ರೀಗೆ ನಿಲಯನು ವಂದು ಮಂಡಲ
ಕ್ಕಾಗ ಯೌವನ ಘಟಿಸಿ ಪಲ್ಯತ್ರಿತೆಯದಾಯು
ಮೂರು ಸಾಸಿರ ಧನುವಿನುನ್ನತ ಶರೀರನು ಸುವರ್ಣಛಾಯನು
ಮೂರು ವಾಸರಕ್ಕೊಮ್ಮೆ ಬದರಿಯ ಫಲದ ತೋರಾ
ಅಶನ ದಿವ್ಯಾಮೃತವ ಕೊಳ್ಳುವ ದಶವಿಧಿ ವರ ಕಲ್ಪಕುಜಗಳು
ಅಸಮ ಭೋಗೋಪಭಾಗ್ಯದೊಳೆಸೆದನಾಗಾ
ಜರೆಯುರೋಗಪಮೃತ್ಯು ಚಿಂತೆಯು ಉರೆ ಭಯರಹಿತನಾಗಿಯು
ಅಹಹ ಪ್ರಾಣೇಶ್ವರಿಯು ಶ್ರೀಮತಿಯ ಸಹಿತಲಿರುವಾ (ಪರಿಚ್ಛೇದ-iv)

ಇಲ್ಲಿ ಬರುವ ಗದ್ಯಭಾಗವು ಹಸ್ತಿಮಲ್ಲನ ಪೂರ್ವಪುರಾಣದ ಅನುವರ್ತಿಯಾಗಿದೆ. ಉದಾಹರಣೆಗೆ :

ನೀ ಮಹಾಬಲನಾಗಿರ್ದಂದು ನಾನಾ ಸ್ವಯಂಬುದ್ಧನೆಂಬ ಮಂತ್ರಿಯಾಗಿ ನಿನಗೆ ಸಮಾಧಿಯಂ ಮಾಡಿ ನಾಂ ತಪಂಗೊಂಡು ಮುಡುಪಿ ಪ್ರಥಮ ಸ್ವರ್ಗದೊಳು ಮಣಿ ಚೂಳನೆಂಬ ದೇವನಾಗಿ ಸುಖಮನುಂಡಲ್ಲಿಂ ಬಂದು ಜಂಬೂದ್ವೀಪದ ಪೂರ್ವ ವಿದೇಹದ ಪುಷ್ಕಳಾವತಿ ವಿಷಯದೊಳು (ಆದಿಯ. ಪರಿಚ್ಛೇದ- iv)

ನೀಂ ಮಹಾಬಲನಾದಂದು ನಾಂ ಸ್ವಯಂಬುದ್ಧ ಮಂತ್ರಿಯಾಗಿ ನಿನಗೆ ಸಮಾಧಿಯಂ ಮಾಡೆ ಮತ್ತೆ ನಾಂ ತಪಂಗೊಂಡು ಮುಡುಪಿ ಪ್ರಥಮಸ್ವರ್ಗದೊಳ್ ಮಣಿಚೂಳನೆಂಬ ದೇವನಾಗಿ ಸುಖಮನುಂಡು, ಅಲ್ಲಿಂದ ಬಂದೀ ಜಂಬೂದ್ವೀಪದ ಪೂರ್ವ ವಿದೇಹದ ಪುಷ್ಕಳಾವತೀ ವಿಷಯದ (ಹಪೂರ್ವ. ಪು. ೩೫)

ಚಾರಣಮುನಿಗಳು ನವಪದಾರ್ಥ, ರತ್ನತ್ರಯ, ಸಮ್ಯಕ್ತ್ವಾದಿಗಳನ್ನು ಬೋಧಿಸಿದರೆಂದು ಮಾತ್ರ ಹೇಳಲಾಗಿದೆ; ವಿವರಣೆಯನ್ನು ನೀಡಿಲ್ಲ. ಶ್ರೀಮತಿಗೆ ಹೇಳುವ ಪ್ರತ್ಯೇಕ ಉಪದೇಶವೂ ಇಲ್ಲಿ ಕಂಡುಬರುವುದಿಲ್ಲ.

ವಜ್ರಜಂಘಾರ್ಯ ಭವದಲ್ಲಿ ಸ್ವಯಂಬುದ್ಧನು ಪ್ರೀತಿಂಕರನಾಗಿ ವಜ್ರಜಂಘಾರ್ಯ

ನಾಗಿರುವ ಮಹಾಬಲನ ಆತ್ಮಕ್ಕೆ ಮತ್ತೊಮ್ಮೆ ಧರ್ಮಜಾಗೃತಿಯ ತೀವ್ರತೆಯನ್ನುಂಟು ಮಾಡಿ, ಭೋಗತಾಪದ ಬೇಗೆಯನ್ನು ನೀಗಿಸಿ ತಂಪಿಸುವ ವಿಧಾನವನ್ನು ನೋಡಬಹುದು. ಮಹಾಬಲ ಭವದಲ್ಲಿ ಪ್ರಾರಂಭವಾದ ಈ ಕಾರ್ಯ ಇಲ್ಲಿ ಮುನ್ನಡೆದಿದೆ; ಫಲಕಾರಿಯಾಗಿದೆ. ಛಲಬಿಡದ ತ್ರಿವಿಕ್ರಮನ ಮಾದರಿ ಇಲ್ಲಿ ಸ್ವಯಂಬುದ್ಧನದು. ಕೊನೆಗೂ ಸಮ್ಯಕ್ತ್ವದ ಹಾದಿಯಲ್ಲಿ ದೃಢವಾಗಿ ಹೆಜ್ಜೆಯನ್ನಿಡಿಸಿದ ಪ್ರಯತ್ನ ಇಲ್ಲಿ ಸ್ಫುಟಗೊಳ್ಳುತ್ತದೆ. ಸಮ್ಯಕ್ತ್ವದಲ್ಲಿ ಸ್ಥಿರೀಕರಿಸಿ, ಅದರ ಅಷ್ಟಾಂಗಗಳನ್ನು ಮೈಗೂಡಿಸಿಕೊಳ್ಳುವಂತೆ ಸಹಾಯಹಸ್ತವನ್ನು ನೀಡುತ್ತಾನೆ. ಸ್ವಯಂಬುದ್ಧನಾಗಿದ್ದ ಪ್ರೀತಿಂಕರ ತನ್ನನ್ನು ಧರ್ಮದಲ್ಲಿ ನೆಲೆಯೂರಿಸು, ನೀನೆ ಅದಕ್ಕೆ ಹಸ್ತಾವಲಂಬನಾಗಬೇಕೆಂಬ ಮಹಾಬಲನ ವಿನಂತಿಯನ್ನು ಮನ್ನಿಸಿದವನಂತೆ ಇಲ್ಲಿಯೂ ಮಾರ್ಗದರ್ಶಿಯಾಗುತ್ತಾನೆ. ವಜ್ರಜಂಘಾರ್ಯ-ಶ್ರೀಮತಿ ಆರ್ಯೆಯರು ಸಮ್ಯಕ್ತ್ವದಲ್ಲಿ ನಿಶ್ಚಲತೆಯನ್ನು ಗಳಿಸಿಕೊಂಡುದು ಈ ಭವದ ಮುಖ್ಯ ವಿಷಯವಾಗಿದೆ.

## ಶ್ರೀಧರದೇವ ಭವ

**ಆದಿಪುರಾಣ-ಪೂರ್ವಪುರಾಣ :** ವಜ್ರಜಂಘಾರ್ಯನು ಈಶಾನಕಲ್ಪದಲ್ಲಿ ಶ್ರೀಧರನಾಗಿ ಹುಟ್ಟಿದುದು, ಅಲ್ಲಿಯ ವೈಭವದ ಮಾಟ, ಕೇವಲಿ ಪ್ರೀತಿಂಕರರ ದರ್ಶನ, ಕೇವಲಿಗಳ ಬೋಧನೆ, ನರಕವರ್ಣನೆ, ಕೇವಲಿಗಳಿಂದ ಶತಮತಿಯ ವಿಚಾರವನ್ನು ತಿಳಿದು ಎರಡನೆಯ ನಾರಕಿಯಾಗಿದ್ದ ಆತನನ್ನು ಎಚ್ಚರಿಸಿದ್ದು, ಮುಂದೆ ಆತ ಜಯಸೇನನಾಗಿ ಹುಟ್ಟಿದಾಗ ಮತ್ತೆ ಉಪದೇಶ ನೀಡಿ ತಪವೆಸಗುವಂತೆ ಮಾಡಿದುದು, ಅವನು ಬ್ರಹ್ಮೇಂದ್ರನಾಗಿ ಜನಿಸಿ ಶ್ರೀಧರದೇವನಿಗೆ ಪೂಜೆ ಸಲ್ಲಿಸಿದುದು, ಶ್ರೀಧರದೇವನ ಆಯುಷ್ಯಾಂತ ಇವಿಷ್ಟು ಶ್ರೀಧರದೇವ ಭವದ ಕಥಾಚೌಕಟ್ಟಿನಲ್ಲಿ ಬರುವ ವಿಷಯಗಳು.

ಉತ್ತಮ ಭೋಗಭೂಮಿಯಲ್ಲಿ ವಜ್ರಜಂಘ ಆರ್ಯ, ಶ್ರೀಮತಿ ಆರ್ಯೆ ಹಾಗೂ ಅವರೊಡನೆ ಆರ್ಯರಾಗಿ ಹುಟ್ಟಿದ್ದ ಶಾರ್ದೂಲಾದಿಗಳು ಈಶಾನಕಲ್ಪದ ವಿವಿಧ ವಿಮಾನಗಳಲ್ಲಿ ಹುಟ್ಟಿದರು.

ಶ್ರೀಪ್ರಭವಿಮಾನದಲ್ಲಿ ಶ್ರೀಧರದೇವನಾಗಿ ವಜ್ರಜಂಘಾರ್ಯನು ಜನಿಸಿದನು. ಶ್ರೀಮತಿ ಆರ್ಯೆಯು 'ಸ್ತ್ರೀರೂಪವನ್ನು ಪತ್ತುವಿಟ್ಟು' ಸ್ವಯಂಪ್ರಭವಿಮಾನದಲ್ಲಿ ಶ್ರೀಧರನಿಗೆ ಸ್ವಯಂಪ್ರಭನೆಂಬ ಸಾಮಾನಿಕ ದೇವನಾದನು. ಶಾರ್ದೂಲಾದಿಗಳು, ಚಿತ್ರಾಂಗದ, ಮಣಿಕುಂಡಲ, ಮನೋಹರ, ಮನೋರಥರೆಂಬ ದೇವರಾಗಿ, ಶ್ರೀಧರನಿಗೆ ಸಹಾಯಕ ದೇವರಾದರು.

ಮತ್ತೆ ಅದೇ ಭೋಗದ ವೈಭವ, ಕಣ್ಣಿನಲ್ಲಿ ಆನಂದದ ವಿಳಾಸವನ್ನು ತುಂಬಿಕೊಂಡಿರುವ ರೂಪು, ಅಮರಿಯರ ಮುಂಗುರುಳಿನಿಂದ ವ್ಯಾಪ್ತವಾದ ಪಾದಯುಗಳಗಳು. ಹೀಗೆ 'ಸ್ವರ್ಗಲಕ್ಷ್ಮಿಯ ಮೇಗಟ್ಟಿಕೊಳಂದಂದೇಂನಲಿದನೋ ಶ್ರೀಧರ ದೇವಂ' ಎಂದು ಕವಿ ಕೊನೆಗೆ ಆ ಲೀಲಾವಿನೋದವನ್ನು ಬಣ್ಣಿಸಲಾರದಂಥವನಾಗುತ್ತಾನೆ (v-೭೧).

ಒಂದು ದಿನ ಶ್ರೀಧರದೇವನಿಗೆ ಅವಧಿಬೋಧದಿಂದ, ಪ್ರೀತಿಂಕರಾರ್ಯರ ಕೇವಲ ಜ್ಞಾನೋತ್ಪತ್ತಿಯು ತಿಳಿದು ಬಂದಿತು. ದೇವನಿಕಾಯದೊಡನೆ ಶ್ರೀಪ್ರಭಾಚಲಕ್ಕೆ ಹೋಗಿ

ಆ ಭವಭಯಹರನನ್ನು ಪೂಜಿಸಿ 'ನಾನು ಅಂಬರಚರನಾದಂದು ನನ್ನ ಜೊತೆಯಲ್ಲಿದ್ದ ಉಳಿದ ಆ ಮಿಥ್ಯಾಜ್ಞಾನಾವೃತರಾದವರ ಚರಿತ್ರೆಯನ್ನು ಹೇಳಿ' ಎಂದು ಶ್ರೀಧರನು ಬೇಡಿಕೊಂಡಾಗ ಅವರ ಚರಿತ್ರೆಗಳನ್ನು ಪ್ರೀತಿಂಕರ ಕೇವಲಿಗಳು ಹೇಳಿದರು. ಯೋಗಾಚಾರ ಮತ್ತು ಚಾರ್ವಾಕವಾದಗಳನ್ನು ಸಾರಿದ ಸಂಭಿನ್ನಮತಿ, ಮಹಾಮತಿಗಳು ಗಂಭೀರವಾದ ನಿಗೋದದಲ್ಲಿ ತೊಳಲುತ್ತಿರುವುದನ್ನು, ಮಾಧ್ಯಮಿಕವಾದವನ್ನು ಸಾರುವ ಶತಮತಿಯು ದ್ವಿತೀಯನರಕದಲ್ಲಿರುವುದನ್ನು ತಿಳಿಸಿದರು. (ಮಾಧ್ಯಮಿಕಮಾರ್ಗಕ್ಕಿಂತ ಯೋಗಾಚಾರ ಮತ್ತು ಚಾರ್ವಾಕವಾದಗಳನ್ನು ಹೇಯವಾಗಿ ಪರಿಗಣಿಸುವ ದೃಷ್ಟಿ ಇಲ್ಲಿ ಕಂಡುಬರುತ್ತದೆ). ಅಲ್ಲದೆ "ಈ ಸಂಸೃತಿಯೊಳ್ ಧರ್ಮಾಧರ್ಮ ಸ್ಥಿತಿಯೆವಲಂ ಸ್ವರ್ಗ ನರಕ ಸುಖದುಃಖ ಕರಂ" ಎಂದು ಸೂತ್ರರೂಪದಲ್ಲಿ ಸರಳವಾಗಿ ತಿಳಿಸಿಕೊಟ್ಟು ಮುಂದುವರಿದು ಹೀಗೆ ನುಡಿದರು :

ಪುಸಿಯದುದು ಪರಾಂಗನೆಗಾ | ಟಿಸದುದು ಕೊಲ್ಲದುದು ಮೋಹಮಿಲ್ಲದುದಱಿವಂ
ಪೊಸಯಿಸುವುದು ವೈರಾಗ್ಯದ | ದೆಸೆಗೆಸಪುದು ಧರ್ಮಮದಱ ತಡೆವುದಧರ್ಮಂ (V-೭೯)

ಧರ್ಮಾಧರ್ಮಗಳ ನಿರೂಪಣೆ ಇಲ್ಲಿ ಅತ್ಯಂತ ಸರಳ ಹಾಗೂ ಸುಂದರವಾಗಿ ಮೈದೋರಿದೆ. ಧರ್ಮೋಪದೇಶವನ್ನು ಮಾಡಿ ಪ್ರೀತಿಂಕರರು ನರಕಗತಿಯ ದುಃಖದ ತೀವ್ರತೆಯನ್ನು ವಿವರಿಸಿದರು. ನರಕಗತಿಯಲ್ಲಿ ನೊಂದು ನುಚ್ಚುನುರಿಯಾಗುವ ಬೀಭತ್ಸತೆಯ ಸರಮಾಲೆಯು ಉಪಮೆಗಳ ಮೂಲಕ ಬಂದು, ಅಧರ್ಮದ ಕಡೆಗೆ, ಅದರಿಂದ ಒದಗಿ ಬರುವ ನರಕಗತಿಯ ಕಡೆಗೆ ಓದುಗರು ಮುಖತಿರುಗಿಸುವಂತೆ ಮಾಡುತ್ತದೆ. ಕವಿಯ ಉದ್ದೇಶ ಸಾಧಿತವಾಗುತ್ತದೆ (ಐದನೆಯ ಆಶ್ವಾಸದ ೮೨ರಿಂದ ೯೪ನೆಯ ಪದ್ಯ ಹಾಗೂ ವಚನ ಭಾಗಗಳಲ್ಲಿ ನರಕಗತಿಯ ಬೀಭತ್ಸ ವರ್ಣನೆಯಿದೆ).

ಶತಮತಿಯು ಎರಡನೆಯ ನರಕದಲ್ಲಿರುವನೆಂದು ತಿಳಿದ ಶ್ರೀಧರದೇವನು ಧರ್ಮ ಸಂವೇಗಪರಾಯಣನಾಗಿ, ಗುರೂಪದೇಶದಿಂದ ಆತನನ್ನು ಪ್ರತಿಬೋಧಿಸಲು ಧಾವಿಸಿದನು. ಧರ್ಮ ಜಾಗೃತಿವೆತ್ತ ಜೀವಿಗಳ ಪರಿಯೇ ಹಾಗೆ. ಶ್ರೀಧರದೇವನೂ ಸಹ ಹಿಂದೆ ಸ್ವಯಂಬುದ್ಧನಿಂದ, ಸಾಮಾನಿಕ ದೇವರಿಂದ, ಪ್ರೀತಿಂಕರ ಮುನಿಗಳಿಂದ ಬೋಧನೆಯನ್ನು ಪಡೆದು ಸಮ್ಯಕ್ತ್ವಧಾರಿಯಾದವನೇ. ಮುಂದೆ ಆದಿತೀರ್ಥಂಕರನಾಗುವ ಜೀವಕ್ಕೆ ಇಷ್ಟೆಲ್ಲಾ ಬೋಧನೆಯ ಸಂಸ್ಕಾರವು ಉಂಟಾಗಿ ಆತ್ಮ ಹದವಾಗುವ ದಾರಿಯತ್ತ ಸಾಗುತ್ತದೆ. ಸರ್ವಜೀವಿಗಳ ಉದ್ಧಾರಕ್ಕಾಗಿ ಬೋಧಿಸಿ ತೀರ್ಥಂಕರನಾಗುವ ಆತ್ಮ ತನ್ನ ಪರಿಸರದ ಜೀವಿಗಳ ಆತ್ಮೋದ್ಧಾರಕ್ಕಾಗಿ ಹಂಬಲಿಸುತ್ತದೆ. ಶತಮತಿಯ ಬಳಿಗೆ ಹೋಗಿ ನಾನಾರೀತಿಯಲ್ಲಿ ತಿಳಿಯಹೇಳುವ ರೀತಿ ಹೀಗಿದೆ :

ಅಱಿಯಮೆ ತಿಣ್ಣಂ ನಿನಗೇ | ನಱಿವೊ ಮಹಾಬಳನೆನ್ನನೆಲೆ ಶತಮತಿ ನಿ
ನ್ನಱಿಯಮೆಯೆ ನಿನ್ನನಿನಿತಂ | ಮಱಿಗಿಸಿದುದು ಪಾಪಕರ್ಮ್ಮನೀಂ ಕಂಡುಂಡೈ
ಇನ್ನುಂ ನಿಜಮಿಥ್ಯಾ ಜ್ಞಾನೋ | ನ್ನತಿಯಂ ಬಿಸುಟು ನಂಬು ಸಮ್ಯಕ್ತ್ವಮನಿಂ
ತೆನ್ನನೆ ಕಂಡಿಂ ತಿಳಿಯೆನೆ | ಸನ್ನುತ ಸಮ್ಯಕ್ತ್ವರತ್ನಮಂ ಕೈಕೊಂಡಂ (V-೯೫, ೯೬)

ಬೋಧನೆಯ ನೇರ ಉಪದೇಶ, ಮೂದಲಿಕೆಯು ಶತಮತಿಯ ಮನದಾಳವನ್ನು ಪ್ರವೇಶಿಸಿತು. ಸಮ್ಯಕ್ತ್ವವನ್ನು ಕೈಕೊಂಡು ಕಾಲಾಂತರದಲ್ಲಿ ಆ ನರಕಗತಿಯಿಂದ ಬಂದು,

ರತ್ನ ಸಂಚಯಪುರದ ಮಹೀಧರನಿಗೂ ಆತನ ರಾಣಿ ಸುಂದರಿಗೂ ಜಯಸೇನನೆಂಬ ಮಗನಾಗಿ ಹುಟ್ಟಿದನು. ವಿವಾಹ ಸಮಯದಲ್ಲಿ ಮತ್ತೆ ಶ್ರೀಧರದೇವನು ಬಂದು ಮೂದಲಿಸಿದಾಗ, ಯಮಧರ ಗುರುಗಳ ಪಾದಮೂಲದಲ್ಲಿ ದೀಕ್ಷಿತನಾಗಿ, ಜೀವಿತಾಂತ್ಯದಲ್ಲಿ ಸತ್ತು ಬ್ರಹ್ಮೇಂದ್ರನಾದನು. ಈ ಸಂದರ್ಭದಲ್ಲಿ ಪಂಪನು ಕರ್ಮದ ಶಕ್ತಿಯನ್ನೂ ಅದು ಜೀವನಕ್ಕೆ ನೀಡುವ ತಿರುವನ್ನೂ ಮನಮುಟ್ಟುವಂತೆ ವರ್ಣಿಸಿದ್ದಾನೆ.

ಪಡೆದಂ ಬ್ರಹ್ಮೇಂದ್ರತೆಯಂ | ಗಡಮಾತಂ ಬಗೆದು ನೋಡೆ ನಾರಕನೆತ್ತಲ್
ಗಡ ದೇವನೆತ್ತ ಕರ್ಮ್ಮಮೆ | ಕಡುಬಲ್ಲಿತ್ತದಱ ತಿರಿವದೇಂ ಬಹುವಿಧಮೋ...(V-೯೭)

ಇತ್ತ ತನ್ನನ್ನು ಎಚ್ಚರಿಸಿದ ಶ್ರೀಧರದೇವನಿಗೆ ಆ ಬ್ರಹ್ಮೇಂದ್ರನು ಪೂಜೆ ಸಲ್ಲಿಸಿದನು. ಕವಿಯೇ ಹೇಳುವಂತೆ 'ಉಪಕಾರಮನಱಿಯದಾತನುಂ ಮಾನಸನೇ?' (V-೯೮)

ಹೀಗಿರುವಲ್ಲಿ 'ದಿವಿಜವನಿತೆಯರ ವಿಭ್ರಮದ ಧವಳಯುಕ್ತ ದೃಷ್ಟಿಯೇ ಆತನ ಆಯುಸ್ಸೆಂಬ ಸಮುದ್ರವನ್ನು ಹೀರಿತೋ' ಎನ್ನುವಂತೆ ಸ್ವರ್ಗದಿಂದ ಶ್ರೀಧರನು ಪರಿಚ್ಯುತನಾದನು.

ಆದಿಪುರಾಣದ ಈ ಕಥಾಭಾಗ ಹಾಗೂ ವಿವರಣಾ ಭಾಗಗಳು ಪೂರ್ವಪುರಾಣದ ಆಶಯವನ್ನು ಹೆಜ್ಜೆ ಹೆಜ್ಜೆಗೂ ಉಳಿಸಿಕೊಂಡು ಬಂದಿವೆ. ಪೂರ್ವಪುರಾಣದಲ್ಲಿ ಬರುವ ಈ ಕೆಳಗಿನ ಶ್ಲೋಕವನ್ನು ಪಂಪನಲ್ಲಿ ಬರುವ ಪದ್ಯದೊಂದಿಗೆ ಹೋಲಿಸಿದರೆ ಈ ಅಂಶವು ಮನನವಾಗುತ್ತದೆ.

ಜೀವಿತಾಂತೇ ಸುಖಂ ಪ್ರಾಣಾನ್ ಹಿತ್ವಾ ತೌ ಪುಣ್ಯಶೇಷತಃ |
ಪ್ರಾಪತುಃ ಕಲ್ಪಮೈಶಾನಂ ಗೃಹಾದಿವ ಗೃಹಾಂತರಂ ||
ವಿಲೀಯಂತೇ ಯಥಾ ಮೇಘಾ ಯಥಾಕಾಲಂ ಕೃತೋದಯಾಃ |
ಭೋಗಭೂಮಿಭುವಾಂ ದೇಹಾಸ್ತಥಾಂತೇ ವಿಶರಾರವಃ || ( ix- ೧೮೨, ೧೮೩)

ಆಯುಷ್ಯವು ಪೂರ್ತಿಯಾದ ನಂತರ ಆ ದಂಪತಿಗಳಿಬ್ಬರೂ ಸುಖವಾಗಿ ಪ್ರಾಣವನ್ನು ಬಿಟ್ಟು ಒಂದು ಮನೆಯಿಂದ ಇನ್ನೊಂದು ಮನೆಗೆ ಹೋಗುವಂತೆ ಉಳಿದ ಪುಣ್ಯದಿಂದ ಎರಡನೆಯ ಈಶಾನ ಸ್ವರ್ಗದಲ್ಲಿ ಹುಟ್ಟಿದರು. ಯೋಗ್ಯಕಾಲದಲ್ಲಿ ಆವಿರ್ಭವಿಸಿದ ಮೇಘಗಳು ಅದೃಶ್ಯವಾಗಿ ಹೋಗುವಂತೆ ಭೋಗ ಭೂಮಿಜರ ಅಂತಕಾಲದಲ್ಲಿ ಅವರ ಶರೀರಗಳು ನಾಶವಾಗುತ್ತವೆ.

ಈ ಮೇಲಿನ ಮಾತುಗಳು ಪಂಪನಲ್ಲಿ ಒಂದು ವೃತ್ತದಲ್ಲಿ ಅಳವಟ್ಟು ಬಂದಿವೆ :

ಮನೆಯಿಂದ ಮನೆಗೆಂದು ಪೋಪ ತೆಱದಿಂ ಮೇಣ್ ನೂಕೆ ಪಾಸೆಂಬ ಮಾ
ತಿನ ಪಾಂಗಿಂದನಿತುಂ ಯುಗಂ ತಳರ್ದು ತದ್ಭೋಗಾವನೀಭಾಗದೊಳ್
ತನುಗಳ್ ವೈಕ್ರಿಯಕಂಗಳಂತೆ ಕರಗುತ್ತಿರ್ಪನ್ನೆಗಂ ಪುಣ್ಯಸಂ
ಜನಿತೈಶ್ವರ್ಯದಿನಂತೆ ಬಂದು ನೆಲಸಿತ್ತೀಶಾನಕಲ್ಪಾಗ್ರದೊಳ್ (೫-೭೦)

ಜಿನಸೇನರ ಶ್ಲೋಕವನ್ನು ಸ್ವೀಕರಿಸುವಾಗ, ಅದನ್ನು ಕನ್ನಡಕ್ಕೆ ತರುವಾಗ, ಕನ್ನಡಕ್ಕೆ ಒಗ್ಗುವ ನುಡಿಗಟ್ಟು, ಪದಪುಂಜಗಳನ್ನು ಪಂಪ ಬಳಸುವ ರೀತಿ ಪ್ರಭಾವಕಾರಿಯಾದುದು.

ಜಿನಸೇನರ ಶ್ಲೋಕಗಳು ಕೆಲವೆಡೆ ಪಂಪನಲ್ಲಿ ಸುಂದರವಾಗಿ ಒಡಮೂಡಿರುವುದಕ್ಕೆ ಹಲವಾರು ಉದಾಹರಣೆಗಳು ದೊರೆಯುತ್ತವೆ.

> ಧರ್ಮೇಣಾತ್ಮಾ ವ್ರಜತ್ಯೂರ್ಧ್ವಮಧರ್ಮೇಣ ಪತತ್ಯಧಃ |
> ಮಿಶ್ರಸ್ತು ಯಾತಿ ಮಾನುಷ್ಯಮಿತ್ಯಾಪೋಕ್ತಿಂ ವಿನಿಶ್ಚಿನು || (ಪೂರ್ವಪು. X-೧೧)
> ಧರ್ಮ್ಮಮಮರೇಂದ್ರಗತಿಯನ | ಧರ್ಮ್ಮಮಧೋಗತಿಯನೆಸಗುವೆಸಕದೊಳೀಗುಂ
> ಧರ್ಮಾಧರ್ಮಕ್ರಿಯೆಗಳೆ | ನೆರ್ಮ್ಮಂ ಜೀವಕ್ಕೆ ಮನುಜಗತಿಯೊಳೆ ಮಾಳ್ಕುಂ
> (ಆದಿಪು. V-೭೮)
>
> ಧರ್ಮಃ ಪ್ರಾಣಿದಯಾ ಸತ್ಯಂ ಕ್ಷಾಂತಿಃ ಶೌಚ ವಿತೃಷ್ಣತಾ |
> ಜ್ಞಾನವೈರಾಗ್ಯ ಸಂಪತ್ತಿರಧರ್ಮಸ್ತದ್ವಿಪರ್ಯಯಃ || (ಪೂರ್ವಪು. XV- ೧೦)

ಈ ಶ್ಲೋಕದ ಭಾವವನ್ನು ಪಂಪನು ದೇಸೀ ಶೈಲಿಯಲ್ಲಿ ಹಿಡಿದಿಟ್ಟಿದ್ದಾನೆ. (V-೭೯ ನೋಡಿ ಪು. ೨೧೦). ಪ್ರಭಾವಯುತವಾದ ಅನುವಾದ ಕಲೆಗೆ ಇದು ಮಾದರಿಯಾಗಿ ನಿಲ್ಲುತ್ತದೆ.

ಶತಮತಿಗೆ ಶ್ರೀಧರದೇವನು ಬೋಧನೆಯನ್ನು ನೀಡುವ ಭಾಗವು, ಪೂರ್ವಪುರಾಣಕ್ಕಿಂತ ಆದಿಪುರಾಣದಲ್ಲಿ ಹೆಚ್ಚು ಪ್ರಭಾವಕಾರಿಯಾಗಿ ಬಂದಿದೆ. ಪೂರ್ವಪುರಾಣದಲ್ಲಿ ಈ ಪ್ರಸಂಗದಲ್ಲಿ ಬರುವ ಭಾಗವಿಷ್ಟೇ—'ಶತಮತೀ, ನಾನು ಮಹಾಬಲನಾಗಿದ್ದವನು, ಮಿಥ್ಯಾತ್ವದಿಂದ ನೀನು ನರಕಕ್ಕೆ ಬಂದಿರುವೆ'(X-೧೧೨). ಇದೇ ಭಾಗವು ಪಂಪನಲ್ಲಿ ಹೆಚ್ಚು ತೀಕ್ಷ್ಣವಾಗಿ ಬಂದಿರುವುದನ್ನು ಗಮನಿಸಬಹುದು ( V-೯೫. ೯೭. ನೋಡಿ ಪು. ೨೧೦).

## ಉತ್ತರಕಾಲೀನ ಕಾವ್ಯಗಳು

**ಚಾವುಂಡರಾಯಪುರಾಣ** : ಶ್ರೀಧರನದೇವನ ಭವದ ವರ್ಣನೆ ಚಾವುಂಡರಾಯ ಪುರಾಣದಲ್ಲಿ ಅತ್ಯಂತ ಸಂಕ್ಷಿಪ್ತ ನಡೆಯಲ್ಲಿ ಕಥೆಯ ಮುಖ್ಯಾಂಶವನ್ನೊಳಗೊಂಡಂತೆ ಮಾತ್ರ ಬರುತ್ತದೆ. ಶ್ರೀಧರದೇವನ ಭೋಗವಿಲಾಸವನ್ನಾಗಲಿ ಪ್ರೀತಿಂಕರಾಚಾರ್ಯರ ಬೋಧನೆಯ ವಿವರಗಳನ್ನಾಗಲಿ ಇಲ್ಲಿ ವಿವರಿಸಿಲ್ಲ. ಕಥೆಯ ಮುಖ್ಯಾಂಶವನ್ನು ಹೇಳುವುದಷ್ಟೇ ಗುರಿಯಾಗಿರುವುದರಿಂದ ಕಥೆಯ ಓಟಕ್ಕೆ ಈ ಅಂಶವು ತಡೆಯನ್ನು ನೀಡಬಹುದೆಂಬ ದೃಷ್ಟಿಯಿಂದ ಚಾಮುಂಡರಾಯನು ಹಾಗೆ ಮಾಡಿರುವಂತೆ ತೋರುತ್ತದೆ.

ಪಂಪನಲ್ಲಿ ಬರುವ ಅನೇಕ ವಚನಭಾಗಗಳನ್ನು ಅಲ್ಲೊಂದು ಇಲ್ಲೊಂದು ವ್ಯತ್ಯಾಸಗಳೊಂದಿಗೆ ಅನುಕರಿಸಿ ಬರೆದಿದ್ದಾನೆ. ಉದಾಹರಣೆಗೆ :

> ಅಲ್ಲಿ ವಜ್ರಜಂಘಾರ್ಯಂ ಈಶಾನಕಲ್ಪದೊಳ್ ಶ್ರೀಪ್ರಭವಿಮಾನದೊಳ್ ಶ್ರೀಧರನೆಂಬೊಂ ದೇವನಾದೊಂ, ಶ್ರೀಮತ್ಯಾರ್ಯೆಯುಂ ಸಮ್ಯಕ್ತ್ವ ಮಹಾತ್ಮ್ಯದಿಂ ಸ್ತ್ರೀತ್ವಮಂ ಪತ್ತುವಿಟ್ಟಲ್ಲಿ ಯೇಸ್ವಯಂಪ್ರಭವಿಮಾನದೊಳ್ ಸ್ವಯಂಪ್ರಭನೆಂಬ ದೇವನಾದಳ್. ಶಾರ್ದೂಲಾರ್ಯನುಂ ಮನೋಹರ ವಿಮಾನದೊಳ್ ಚಿತ್ರಾಂಗದನೆಂಬೊಂ ದೇವನಾದೊಂ ವರಾಹಾರ್ಯಂ ನಂದನ ವಿಮಾನದೊಳ್ ಮಣಿಕುಂಡಲನೆಂಬ ದಿವಿಜನಾದೊಂ ವಾನರಾರ್ಯಂ ನಂದ್ಯಾ ವರ್ತವಿಮಾನದೊಳ್ ಮನೋಹರನೆಂಬೊಂ ದೇವನಾದೊಂ ನಕುಳಾರ್ಯನುಂ ಪ್ರಭಾಕರ ವಿಮಾನದೊಳ್ ಮನೋರಥನೆಂಬೊಂ ದೇವನಾದೊಂ ಅಂತನಿಬರುಂ ಸಹಾಯರೊಡನೆ (ಚಾವುಂಪು. ಪು. ೩೫-೩೭).
>
> ಅಲ್ಲಿ ವಜ್ರಜಂಘಾರ್ಯಂ ಸುರತಸುಖನಿವಾಸದೊಳ್ ಶ್ರೀಪ್ರಭವಿಮಾನದೊಳ್ ಶ್ರೀಧರನೆಂಬೊಂ ದೇವನಾದೊಂ ಶ್ರೀಮತ್ಯಾರ್ಯೆಯುಂ ಸಮ್ಯಕ್ತ್ವ ಮಾಹಾತ್ಮ್ಯದಿಂ ಸ್ತ್ರೀ

ರೂಪಮಂ ಪತ್ತುವಿಟ್ಟು ತತ್ಸ್ವಯಂ ಪ್ರಭ ವಿಮಾನದೊಳ್ ಶ್ರೀಧರಂಗೆ ಸಾಮಾನಿಕದೇವಂ ಸ್ವಯಂಪ್ರಭನೆಂಬೊಂ ದಿವಿಜನಾದೊಂ ಶಾರ್ದೂಲಾರ್ಯನುಂ ಚಿತ್ರಾಂಗ ವಿಮಾನದೊಳ್ ಚಿತ್ರಾಂಗದಾಮರನಾದೊಂ ವರಾಹಾರ್ಯನುಂ ನಂದನ ವಿಮಾನದೊಳ್ ಮಣಿಮಕುಟ ಕೇಯೂರ ಮಣಿಕುಂಡಲ ವಿಭೂಷಿತಂ ಮಣಿಕುಂಡಲನೆಂಬೊಂ ದಿವಿಜನಾದೊಂ, ವಾನರಾರ್ಯನುಂ ನಂದ್ಯಾವರ್ತ ವಿಮಾನದೊಳ್ ಸುರನಾರೀ ಮನೋಹರನೆಂಬನಿಮಿಷನಾದಂ; ನಕುಳಾರ್ಯ್ಯನುಂ ಪ್ರಭಾಕರ ವಿಮಾನದೊಳ್ ಮನೋರಥಾವಾಪ್ತ ದಿವ್ಯ ಭೋಗಂ ಮನೋರಥನೆಂಬ ಕಲ್ಪಜನಾದಂ ಇಂತಿನಿಬರುಂ ಸಹಾಯರೊಡನೆ'(ಆದಿಪು. ಆಶ್ವಾಸ V).

ಇಲ್ಲಿ ಆದಿಪುರಾಣದಲ್ಲಿ ಬರುವ ಕೆಲವು ಪದಗಳ ಜಾಗದಲ್ಲಿ ಬೇರೆ ಪದಗಳನ್ನು ಹಾಕಲಾಗಿದೆ. 'ತತ್ಸ್ವಯಂಪ್ರಭವಿಮಾನದೊಳ್'ಎಂಬೆಡೆ 'ಅಲ್ಲಿಯೇ ಸ್ವಯಂಪ್ರಭ ವಿಮಾನದೊಳ್' ಎಂದೂ 'ದಿವಿಜನಾದಂ' ಎಂಬೆಡೆಯಲ್ಲಿ 'ದೇವನಾದೊಂ' ಎಂದೂ ಪರ್ಯಾಯಪದವನ್ನು ಹಾಕಲಾಗಿದೆ. ಅಲ್ಲಿ ಬರುವ ಕೆಲವು ಪದಗಳನ್ನು ಚಾವುಂಡರಾಯ ಪುರಾಣದಲ್ಲಿ ಕೈಬಿಡಲಾಗಿದೆ. ಉದಾಹರಣೆಗೆ : 'ಮಣಿಮಕುಟ ಕೇಯೂರ ಮಣಿಕುಂಡಲ ವಿಭೂಷಣನಾಗಿ' ಇತ್ಯಾದಿ.

ಹೀಗೆ ಚಾಮುಂಡರಾಯನು ಆದಿಪುರಾಣದ ಅನೇಕ ವಚನಭಾಗಗಳನ್ನು ಬಳಸಿಕೊಂಡಿದ್ದಾನೆ.

ಆದಿಪುರಾಣದಲ್ಲಿ ಬರುವ ಪದ್ಯಭಾಗದ ಮಾತುಗಳ ಅಭಿಪ್ರಾಯಗಳೂ ಸಹ ಚಾವುಂಡರಾಯಪುರಾಣದ ಗದ್ಯದಲ್ಲಿ ಬಂದಿರುವುದನ್ನು ಗಮನಿಸಬಹುದಾಗಿದೆ :

ಪ್ರೀತಿಂಕರ ಶಂಕರ ವಿ | ದ್ಯಾತಿಶಯನಿಧಾನ ನಿನ್ನ ದಯೆವೆರಸಿದತಿ
ಪ್ರೀತಿಯೊಳಾನತ್ಯುತ್ತಮ | ಜಾತಿಗಳೊಳ್ ಪುಟ್ಟಿ ಸುಖಮನುಣುತಂ ಬಂದೆಂ (V-೭೩)

ಆದಿಪುರಾಣದ ಈ ಅಭಿಪ್ರಾಯವನ್ನು ಚಾಮುಂಡರಾಯನು 'ನಾನಿಂತೋರಂತೆ ನಿಮ್ಮ ದಯೆಯಿಂ ಸುಖಮನುಣುತಂ ಬಂದೆಂ' ಎಂದು ಸಂಕ್ಷೇಪಿಸಿ ಗದ್ಯದಲ್ಲಿ ಹೇಳಿದ್ದಾನೆ.

ಶ್ರೀಧರದೇವನು ಶತಮತಿಗೆ ಬೋಧನೆ ಮಾಡುವ ವಿಧಾನ ಪೂರ್ವಪುರಾಣವನ್ನು ಹೋಲುತ್ತದೆ. 'ನಿನ್ನ ಮಿಥ್ಯಾಜ್ಞಾನದಿಂ ಇನಿತು ದುಃಖಮನೈದಿದೈಯೆಂದು ಸಮ್ಯಕ್ತ್ವಮಂ ಕೈಕೊಳಿಸಿದನ್'—ಪೂರ್ವಪುರಾಣದ (X-೧೧೨) ಶ್ಲೋಕವನ್ನು ಇಲ್ಲಿ ಹೋಲಿಸಬಹುದು.

ಚಾವುಂಡರಾಯಪುರಾಣವು ಈ ಪ್ರಸಂಗದಲ್ಲಿ ಆದಿಪುರಾಣ ಮತ್ತು ಪೂರ್ವಪುರಾಣಗಳನ್ನು ಕೆಲವೆಡೆ ನೇರವಾಗಿ ಅನುಸರಿಸಿರುವುದನ್ನು ಕಾಣಬಹುದಾಗಿದೆ.

**ಹಸ್ತಿಮಲ್ಲನ ಪೂರ್ವಪುರಾಣ** : ಶ್ರೀಧರದೇವನ ಭವವನ್ನು ವಿವರಿಸುವುದರಲ್ಲಿ ಚಾವುಂಡರಾಯನಲ್ಲಿ ಕಂಡುಬರುವ ಸಂಕ್ಷೇಪ ನಿರೂಪಣೆಯು ಕಂಡುಬಂದರೂ ಕವಿ ಆ ಸಂಕ್ಷಿಪ್ತತೆಯಲ್ಲಿಯೂ ನೇರವಾಗಿ ಆದಿಪುರಾಣವನ್ನು ಅನುಸರಿಸಿದಂತೆ ತೋರುತ್ತದೆ. ಪೂರ್ವಪುರಾಣ, ಆದಿಪುರಾಣಗಳಲ್ಲಿ ಬರುವ ಶ್ರೀಧರದೇವನ ಭೋಗಾತಿಶಯದ ವರ್ಣನೆಯಾಗಲಿ ಧರ್ಮಬೋಧನೆಗಳಾಗಲಿ ಇಲ್ಲ. ಚಾವುಂಡರಾಯಪುರಾಣದಂತೆ ಇಲ್ಲಿಯ ಕಥಾಂಶ ಕೇವಲ ವರದಿಮಾತ್ರವಾಗಿ ಕಂಡುಬರುವುದಿಲ್ಲ. ಆದಿಪುರಾಣದಲ್ಲಿ ಬರುವ ಹಲವಾರು ಪ್ರಸಂಗಗಳನ್ನು ಸೇರಿಸಿಕೊಂಡು ಈ ಕಥಾಭಾಗಕ್ಕೆ ಜೀವಕಳೆಯನ್ನಿತ್ತಿ

ದ್ದಾನೆ. ಪ್ರೀತಿಂಕರದೇವನನ್ನು ಸ್ತುತಿಸಿದನಂತರ ಅವರನ್ನು ಬೆಸಗೊಳ್ಳುವ ರೀತಿಯಲ್ಲಿ ಆದಿಪುರಾಣದ ಛಾಯೆಯಿದೆ. "ಸ್ವಾಮಿ, ನಿನ್ನ ಕರುಣದಿಂ ನಾಂ ಮಹಾಬಲನಾದಂದಿಂದು ವರಮುತ್ತಮಜಾತಿಗಳೊಳ್ಪುಟ್ಟಿ ಸುಖಮನುಣುತ್ತುಂ ಬಂದೆಂ". ಶತಮತಿಗೆ ಶ್ರೀಧರ ದೇವನು ಉಪದೇಶವನ್ನು ಮಾಡುವ ರೀತಿಯೂ ಸಹ ಆದಿಪುರಾಣದ ಜಾಡನ್ನು ಅನು ಸರಿಸಿದೆ. "ಶತಮತೀ, ನೀಂ ಸ್ವಯಂಬುದ್ಧಂ ಧರ್ಮಮಂ ನಿರೂಪಿಸಿದೊಡೆ ನಂಬದೆ ಪಿರಿದಪ್ಪ ನರಕದುಃಖಮನುಣುತಿರ್ದಪ್ಪೆ ನಾಂಸುಖಿಯಾದೆಂ, ಎನ್ನಂ ಕಂಡಾದೊಡಂ ಸಮ್ಯಕ್ತ್ವಮಂ ಸ್ವೀಕರಿಸು". ಆದಿಪುರಾಣದ ಎರಡು ಕಂದಪದ್ಯಗಳ ಅಭಿಪ್ರಾಯವು ಸೊಗಸಾದ ಗದ್ಯಶೈಲಿಯಲ್ಲಿ ನಿರೂಪಿತವಾಗಿದೆ.

**ಪುಣ್ಯಾಸ್ರವದ ಆದೀಶ್ವರರ ಕಥೆ** : ನಾಗರಾಜ ಕವಿಯು ಶ್ರೀಧರದೇವ ಭವವನ್ನು ಹಿತಮಿತವಾಗಿ ಮೂಡಿಸಿದ್ದಾನೆ. ಕಥಾಂಶವು ಒಂದೇ ಆದರೂ ಹೇಳುವ ರೀತಿಯಲ್ಲಿ ಸ್ವೋಪಜ್ಞತೆಯನ್ನು ಅಲ್ಲಲ್ಲಿ ತೋರಿದ್ದಾನೆ. ಚಾವುಂಡರಾಯಪುರಾಣ ಮತ್ತು ಹಸ್ತಿಮಲ್ಲನ ಪೂರ್ವಪುರಾಣಗಳಲ್ಲಿರುವಂತೆ ಇಲ್ಲಿಯೂ ಶ್ರೀಧರದೇವನ ಸುರಸುಖದ ವರ್ಣನೆ ನರಕಾದಿ ವರ್ಣನೆಗಳಿಲ್ಲ.

ಅಲ್ಲಲ್ಲಿ ಪೂರ್ವಪುರಾಣ ಮತ್ತು ಆದಿಪುರಾಣಗಳಲ್ಲಿ ಬರುವ ಕೆಲವು ಕಾವ್ಯಮಯ ಸನ್ನಿವೇಶಗಳನ್ನು ತನ್ನದೇ ಆದ ಧಾಟಿಯಲ್ಲಿ ವರ್ಣಿಸಿರುವ ರೀತಿ ಈತನ ಕಾವ್ಯಪ್ರತಿಭೆಗೆ ಕನ್ನಡಿ ಹಿಡಿದಂತಿದೆ.

ಶ್ರೀಧರದೇವನು ಕೇವಲಿಗಳನ್ನು ಕುರಿತು, ತಾನು ಮಹಾಬಲನಾಗಿದ್ದಾಗ ಮಂತ್ರಿ ಗಳಾಗಿದ್ದವರು ಈಗ ಏನಾಗಿರುವರೆಂದು ಕೇಳಿದಾಗ ಅವರು ಹೇಳುವ ಮಾತು ಇದು :

ಏನಸ್ಥಿತಿಯ ವಿಚಿತ್ರಮ | ನೇನೆಂದೆನಬಹುದು ಸುಕೃತದುಃಕೃತಮೆರಡುಂ
ನಾನಾಯೋನಿಯ ಬಟ್ಟೆಗೆ | ತಾನವು ಮುಂದಾಗಿ ನಡೆವ ಮಾರ್ಗಿಗಳಲ್ತೇ (ಪುಆಕ.X-೩)

ಎನ್ನುವಲ್ಲಿ, ಕರ್ಮದ ಬಂಧನದಲ್ಲಿ ಸಿಲುಕಿದ ಜೀವಿಯು, ಕರ್ಮಬಲವೇ ಮುಂದಾಗು ವಂತೆ ಅಸಹಾಯಕನಾಗುವ ಸ್ಥಿತಿಯನ್ನು ಚುಟುಕಾಗಿ, ಪ್ರಭಾವಕಾರಿಯಾಗಿ ಹೇಳಿದ್ದಾನೆ. ಜೀವಿಗಳನ್ನೆಚ್ಚರಿಸುವ, ಮನಮುಟ್ಟುವ ಇಂತಹ ಮಾತುಗಳು ಇನ್ನೂ ಬಂದಿದ್ದರೆ ಚೆನ್ನಾ ಗಿತ್ತು ಎನ್ನುವಷ್ಟರಲ್ಲಿ ಮಾತು ಥಕ್ಕನೆ ನಿಂತುಬಿಡುತ್ತದೆ.

ಶತಮತಿಗೆ ಮೊದಲು ಬೋಧಿಸಿದ ವಿವರಗಳೇನೆಂಬುದನ್ನು ಇಲ್ಲಿ ಹೇಳಿಲ್ಲ. ಎರಡ ನೆಯ ಬಾರಿ ಆತನ ವಿವಾಹ ಸಂದರ್ಭದಲ್ಲಿ ಶ್ರೀಧರದೇವನು ಜಯಸೇನನನ್ನು ಕಂಡು—

ಪಿಂದಣ ಮುಂದಣ ಭವಸಂ | ಬಂಧಮುಮಂ ಜೀವತತ್ತ್ವಭೇದವನೊಲವಿಂ
ದಂದು ಜಯಸೇನ ನೃಪತಿಗೆ | ತಾಂ ದಯೆಯಿಂ ತಿಳಿಪಿದಂ ದಯಾಪರಚಿತ್ತಂ (ಪುಆಕ. X-೪)

ಶ್ರೀಧರನ ಬೋಧನೆ ವ್ಯರ್ಥವಾಗಲಿಲ್ಲ. 'ಕಲಿಯಂ ಮೂದಲಿಸಿದಂತಾಗಿ' ಜಯ ಸೇನನು ದೀಕ್ಷೆಯನ್ನು ಕೈಗೊಂಡನು. ಮಿಕ್ಕೆಡೆ ಕಂಡುಬಾರದ ಈ ಮಾತು ಅತ್ಯಂತ ಪ್ರಭಾವಕಾರಿಯಾಗಿದೆ. ಧರ್ಮವೀರನಾದ ಜಯಸೇನನ ಪ್ರತಿಕ್ರಿಯೆಯನ್ನು ಅತ್ಯಂತ ಪ್ರಭಾವಕಾರಿಯಾಗಿ ಈ ಒಂದು ಹೇಳಿಕೆಯಲ್ಲಿಯೇ ಕವಿ ಅಡಕಗೊಳಿಸಿದ್ದಾನೆ. ಧರ್ಮ ವೀರರಿಗೆ ಸಂಸಾರದ ಬಂಧನದ ಶತ್ರುಗಳನ್ನು ಸೋಲಿಸುವುದೇ ಧೀರತೆಯಲ್ಲವೇ? ಅಂತಹ ಕಲಿಗಳ ಮುಂದೆ ಮೂದಲಿಕೆಯು ಮನನಾಟಿ, ಮುನ್ನುಗ್ಗಿ ವಿಜಯ ಸಾಧಿಸುವಂತೆ

ಮಾಡದೆ ಇದ್ದೀತೆ? ಹೀಗೆ ಅಲ್ಲಲ್ಲಿ ಹೊಸಮೆರುಗಿನಿಂದ ಕವಿ ಕಾವ್ಯಭಾಗವನ್ನು ರೋಚಕ ಗೊಳಿಸಿದ್ದಾನೆ.

**ಪುರುದೇವ ಚರಿತ** : ಶ್ರೀಧರದೇವನ ಭವವು ಸಂಗ್ರಹ ದೃಷ್ಟಿಯಿಂದ ತನ್ನ ಪೂರ್ವ ವರ್ತಿ ಕಾವ್ಯಗಳನ್ನು ಹೋಲುತ್ತದೆ. ಕವಿ ಹೆಚ್ಚಾಗಿ ಹಸ್ತಿಮಲ್ಲನ ಪೂರ್ವಪುರಾಣಕ್ಕೆ ಋಣಿಯಾಗಿರುವಂತೆ ಕಂಡುಬರುತ್ತದೆ. ಅಲ್ಲಲ್ಲಿ ಬೇರೆ ರೀತಿಯ ಮಾತುಗಳು ಕಂಡು ಬಂದರೂ ಹಸ್ತಿಮಲ್ಲನ ಪೂರ್ವಪುರಾಣದ ಗದ್ಯಭಾಗದ ಕಥಾಸುರುಳಿಯು ಬಹುತೇಕ ವಾಗಿ ಯಥಾರೀತಿಯಲ್ಲಿ ಸಾಂಗತ್ಯರೂಪದಲ್ಲಿ ಬಂದಿದೆ.

**ಆದಿಪರಮೇಶ್ವರನ ಯಕ್ಷಗಾನ** : ನೇರವಾಗಿ ಜಿನಸೇನರ ಪೂರ್ವಪುರಾಣವನ್ನು ಮತ್ತು ಆದಿಪುರಾಣವನ್ನು ಆಕರಗಳನ್ನಾಗಿ ಒದಗಿಸಿಕೊಂಡಿರುವಂತೆ ಕಂಡುಬಂದರೂ ಸಾರಸಂಗ್ರಹತೆಯನ್ನು ನೀಡುವಲ್ಲಿ ಉತ್ತರಕಾಲೀನ ಕಾವ್ಯಗಳನ್ನು ಹೋಲುತ್ತದೆ.

ಶಾರ್ದೂಲಾದಿ ಆರ್ಯರು ಈಶಾನಕಲ್ಪದಲ್ಲಿ ಹುಟ್ಟಿದ ರೀತಿಯನ್ನು ವರ್ಣಿಸುವಾಗ ಪೂರ್ವಪುರಾಣದ ಧಾಟಿಯು ಕಂಡುಬರುತ್ತದೆ. ಉದಾಹರಣೆಗೆ :

ಚಿತ್ರಶಾರ್ದೂಲಮಾರ್ಯಂ | ಚಿತ್ರಾಂಗದ ವಿಮಾನದಮಳ ವಾಸಿನೊಳುದಿಸಿಯು |
ಚಿತ್ರಾಂಗದ ದೇವನಾದಂ | ಚಿತ್ರೋಜ್ವಲಗಾತ್ರನೆನಿಸಿ ಸೌಖ್ಯಮಂ ಪಡೆದಂ
( ಆದಿಯ. ಪರಿಚ್ಛೇದ iv)

ಶಾರ್ದೂಲಭೂತಪೂರ್ವೋ ಯಃ ಸ ವಿಮಾನೇ ಮನೋಹರೇ |
ಚಿತ್ರಾಂಗದೇ ಜ್ವಲನ್ಮೌಲಿರಭೂಚ್ಚಿತ್ರಾಂಗದೋಮರಃ || (ಪೂರ್ವಪು. ix-೧೮೯)

ಮೊದಲು ಹುಲಿಯಾಗಿದ್ದ ಆರ್ಯನು ಮನೋಹರವಾದ ಚಿತ್ರಾಂಗದವೆಂಬ ವಿಮಾನ ದಲ್ಲಿ ದೇದೀಪ್ಯಮಾನವಾದ ಕಿರೀಟವುಳ್ಳ ಚಿತ್ರಾಂಗದನೆಂಬ ದೇವನಾಗಿ ಹುಟ್ಟಿದನು. ಆದಿಪುರಾಣಾದಿ ಕಾವ್ಯಗಳಲ್ಲಿ ಈ ಭಾಗವು 'ಶಾರ್ದೂಲಾರ್ಯರು ಚಿತ್ರಾಂಗ ವಿಮಾನದಲ್ಲಿ ಚಿತ್ರಾಂಗದಾಮರನಾದನು' ಎಂದಷ್ಟೇ ಬರುತ್ತದೆ.

ಶ್ರೀಧರದೇವನು ಕೇವಲಿಗಳಲ್ಲಿ ನಿವೇದಿಸಿಕೊಳ್ಳುವ ಮಾತು ಪಂಪನ ಮಾತನ್ನೇ ಧ್ವನಿಸುತ್ತದೆ :

. . . . . . . . . .
ಇಂದು ಭಾಸ್ಕರಕಿರಣ ಸಾಸಿರಾನಂದ ಪ್ರೀತಿಂಕರ ಜಿನ ನಿನ್ನ ಕೃಪೆಯಿಂ
ಆದಿಮಹಾಬಲನಾದ ಜನ್ಮೋತ್ಸಾಧನೆಯೊಳುತ್ತಮೋತ್ತಮಾ
ಹಾದಿಲ್ಯೆದಿದೆ ದಿವ್ಯಸುಖದೊಳು ಬೋಧಕರ ಮಿಂಮೂವರಾಗತಿಯನರುಹೂ
(ಆದಿಯ. ಪರಿಚ್ಛೇದ -iv)

ಶ್ರೀಧರದೇವನು ಶತಮತಿಗೆ ಬೋಧನೆಯನ್ನು ಮಾಡುವಾಗ ಹೇಳುವ ಮಾತುಗಳು ಆದಿಪುರಾಣವನ್ನು ಅನುಸರಿಸಿ ಬರುವ ಹಸ್ತಿಮಲ್ಲನ ಪೂರ್ವಪುರಾಣದ ಮಾತುಗಳನ್ನೇ ಅನುಸರಿಸಿವೆ. ಉದಾರಹಣೆಗೆ :

ಎಲೆ ಶತಮತಿ, ಸ್ವಯಂಬುದ್ಧಂ ಸದ್ಧರ್ಮಮಂ ನಿರೂಪಿಸಿದೊಡೆ ನಂಬದೆ ಪಿರಿದಪ್ಪ ನರಕ ದುಃಖವನುಣುತಿರ್ದಪೆ ನಾಂ ಸುಖಿಯಾದೆಂ ಎನ್ನ ಕಂಡಾದಡಂ ಸಮ್ಯಕ್ತ್ವಮಂ

ಸ್ವೀಕರಿಸು (ಆದಿಪು. ಪರಿಚ್ಛೇದ-iv).

ಶತಮತಿ, ನೀಂ ಸ್ವಯಂಬುದ್ಧ ಧರ್ಮಮಂ ನಿರೂಪಿಸಿದೊಡೆ ನಂಬದೆ ಪಿರಿದಪ್ಪ ನರಕ ದುಃಖಮನುಣುತಿರ್ದಪ್ಪೆ, ನಾಂ ಸುಖಿಯಾದೆಂ ಎನ್ನಂ ಕಂಡಾದೊಡಂ ಸಮ್ಯಕ್ತ್ವಮಂ ಸ್ವೀಕರಿಸಿ . . . . (ಹಪೂರ್ವ, ಪು. ೩೬)

ಆದಿತೀರ್ಥಂಕರನ ಭವಗಳಲ್ಲಿ ಒಂದು ಹೊಸ ತಿರುವನ್ನು ಕಂಡುಕೊಂಡ ಭವ 'ಶ್ರೀಧರದೇವ' ಭವ. ಸಮ್ಯಕ್ತ್ವದಲ್ಲಿ ನೆಲೆಯೂರಿದ ಈ ಜೀವ, ತಾನೇ ಮತ್ತೊಂದು ಜೀವವನ್ನು ಹಿಡಿದೆತ್ತುವ, ಸಮ್ಯಕ್ತ್ವದತ್ತ ಕೊಂಡೊಯ್ಯುವ ಹಿರಿತನವನ್ನು ಕಾಣುತ್ತೇವೆ. ಭೋಗಸಾಗರದ ಮಧ್ಯೆ ಇದ್ದರೂ, ಅದಕ್ಕೆ ಅಂಟಿಕೊಳ್ಳದೆ, ಹಾತೊರೆಯದೆ, ಧರ್ಮದ ಉತ್ಕೃಷ್ಟತೆಯತ್ತಲೇ ಮನವನ್ನು ನೆಲೆಗೊಳಿಸುವ ಸ್ಥಿತಿ ಇದು. ಧರ್ಮೋಪದೇಶಗಳಿಗೆ ಕಿವಿಗೊಟ್ಟು ಅದರಂತೆ ನಡೆಯಬೇಕೆಂಬ, ನಡೆಸಬೇಕೆಂಬ ಧೋರಣೆ ಇಲ್ಲಿ ಪ್ರಮುಖವಾಗಿ ನಿಲ್ಲುತ್ತದೆ. ಮೊದಲ ಐದು ಭವಗಳಲ್ಲಿ ಭೋಗದ ತೀವ್ರತೆ ಕಂಡುಬಂದರೆ, ಇಲ್ಲಿಂದ ಮುಂದೆ ಧರ್ಮ ತೀವ್ರತೆಯ ಆರೋಹಣವು ಕಂಡುಬರುತ್ತದೆ. ಸ್ವಯಂಬುದ್ಧನು ತನಗೆ ತೋರಿಸಿದ ಮಾರ್ಗ, ಆದರ್ಶಗಳನ್ನು ಅನುಸರಿಸಿ, ಶ್ರೀಧರ ದೇವನು ತಾನೂ ಸಹ ಮತ್ತೊಂದು ಜೀವಿಗೆ ಬೆಳಕಾಗುವ ರೀತಿ ಇಲ್ಲಿ ಚಿತ್ರಿತವಾಗಿದೆ. ಪರರನ್ನು ಉದ್ಧಾರಮಾಡಬೇಕೆಂಬ ಈ ತುಡಿತ, ಪ್ರಯತ್ನಗಳು ಮುಂದೆ ಮಹಾನ್ ಉಪದೇಶಕನಾಗಿ, ತೀರ್ಥಂಕರನಾಗಿ ಮೆರೆಯುವ ಜೀವಿಯ ಮೊದಲ ಸ್ವರವಾಗಿ ಕಂಡುಬರುತ್ತವೆ. ಈ ಭವಸಂಸ್ಕಾರಗಳು ಮುಂದೆ ಹಂತ ಹಂತವಾಗಿ ಆತ್ಮವಿಕಸನಕ್ಕೆ ಅಡಿಪಾಯವನ್ನು ಹಾಕುವಂತೆ ಕಂಡುಬರುತ್ತವೆ.

## ಸುವಿಧಿ ಭವ

**ಆದಿಪುರಾಣ-ಪೂರ್ವಪುರಾಣ** : ಜಂಬೂದ್ವೀಪದ ಪೂರ್ವವಿದೇಹದ ವತ್ಸಕಾವತೀ ದೇಶ. ಅಲ್ಲಿಯ ಸುಸೀಮಾನಗರದ ರಾಜ ಸುದೃಷ್ಟಿ. ಪತ್ನಿ ಸುನಂದೆ (ಪೂರ್ವಪುರಾಣದಲ್ಲಿ ಸುಂದರನಂದೆ). ಇವರಿಬ್ಬರಿಗೆ ಶ್ರೀಧರನು ಸುವಿಧಿ ಎಂಬ ಮಗನಾದನು. ಈತನನ್ನು ನೋಡಿದಷ್ಟೂ ನೋಡಿ ಮೆಚ್ಚಿದಷ್ಟೂ ದೇವೇಂದ್ರನ ಮನಸ್ಸಿಗೆ ತೃಪ್ತಿಯಾಗದು. ವಿವಿಧ ವಿಶೇಷತೆಗಳಿಂದ ಸ್ತೋತ್ರಮಾಡುವುದಕ್ಕೆ ಅವನಿಗೂ ಅಶಕ್ಯ. (v-೧೦೦) ಅಂದಮೇಲೆ ಸುವಿಧಿಯ ಹಿರಿಮೆಯನ್ನು ಹೆಚ್ಚಿಗೆ ಹೇಳುವುದೇನು? 'ಪ್ರಿಯ ಪುಷ್ಪಸ್ತಬಕಂಗಳಿಂದ ತುಱುಗಿದ ಒಂದು ಇಮ್ಮಾವನ್ನೂ ಅತ್ಯಂತ ಕಾಂತಿಯಿಂದ ಆಶಾಂತರಮೆಲ್ಲವನ್ನೂ ಬೆಳಗಿಸುವ ಸಂಪೂರ್ಣೇಂದುವನ್ನೂ ತನ್ನೊಂದು ಶೋಭೆಯ ಉಜ್ವಲಕಾಂತಿಯ ವೈಭವದಿಂದ ಗೆಲ್ಲುವಂತೆ—'ಯೌವನೋದಯದೊಳ್ ನೋಡಿದರಂ ಮನಂಗೊಳಿಸಿದಂ ಸಂಸಾರಸಾರೋದಯಂ' (v-೧೦೧) ಹೀಗೆ ಪಂಪನ ವರ್ಣನೆ ಹಿತಮಿತವಾಗಿ ಸಾಗುತ್ತದೆ.

ಅಭಯಘೋಷ ಚಕ್ರಿಯ ಮಗಳಾದ ಮನೋರಮೆಯನ್ನು ಮದುವೆಯಾಗಿ, ರಾಜ್ಯಭಾರವನ್ನು ವಹಿಸಿಕೊಂಡ ಆ ಜಿತಾತ್ಮಪುರುಷನು 'ಗುರೂಪರೋಧಕ್ಕಗಿದು ಮನಂದಂದನೇ ಹೊರತು ಅದರಕ್ಕಾಗಿ ಹಾತೊರೆಯಲಿಲ್ಲ' (vi-೨). ಜೀವಾತ್ಮ ಇನ್ನೇನು ಪರಿಪಕ್ವಗೊಳ್ಳುವ ಕಾಲ ಸನ್ನಿಹಿತವಾಗುತ್ತಿದೆಯಲ್ಲವೇ? ಆದಿತೀರ್ಥಂಕರನ ಭವಗತಿಗಳಲ್ಲಿ ಇದು

ಏಳನೆಯ ಭವ. ಕಾಲಲಬ್ಧಿ ದೊರೆತ ಅನಂತರದ ಈ ಸುದೀರ್ಘ ಭವಯಾತ್ರೆಯಲ್ಲಿ ಈತನ ಮನಸ್ಸು ಇಷ್ಟಾದರೂ ಸಂಸ್ಕಾರಗೊಳ್ಳದಿದ್ದರೆ ಹೇಗೆ?

ಸುವಿಧಿ, ಮನೋರಮೆಯರಿಗೆ ಶ್ರೀಮತಿ ಚರನೆನಿಸಿದ ಸ್ವಯಂಪ್ರಭದೇವನು ಕೇಶವ ನೆಂಬ ಮಗನಾಗಿ ಜನಿಸಿದನು. ಮಮಕಾರದ ಎಳೆ ಭವಭವಗಳಲ್ಲಿ ನಾನಾ ರೀತಿಯಾಗಿ ನೆಯ್ದುಕೊಂಡು ಬರುವ ರೀತಿ ಆಶ್ಚರ್ಯವೇ. ಈ ಆಶ್ಚರ್ಯಕರ ಸಂಗತಿಯನ್ನು ಪಂಪನು ಮನಮುಟ್ಟುವಂತೆ ಹೇಳಿದ್ದಾನೆ.

ಪ್ರಿಯ ವನಿತಾಚರನೆ ಗಡಂ | ಪ್ರಿಯತನಯಂ ಕೇಶವಾಂಕನಾದನಿದೇಂ ವಿ
ಸ್ಮಯಕರಮೊ ಸಂಸೃತಿಸ್ಥಿತಿ | ಬಯಸುವುದೆಂತಯ್ಯ ಪೇೞಿಮಿಂತಪ್ಪುದುಮಂ (vi-೩)

ಪ್ರಿಯತಮೆಯ ರೂಪದಲ್ಲಿ ಹಿಂದೆ ಸುಳಿದು ಬಂದವನೇ ಇಂದು ಪ್ರಿಯತನಯನಾಗಿ ಕೇಶವನೆಂಬ ಹೆಸರಿನವನಾದನು. ಈ ಸಂಸೃತಿ ಸ್ಥಿತಿ ಏನು ವಿಸ್ಮಯಕರವಾದುದೋ ? ! ಹೀಗಿರುವ ಸಂಸೃತಿಯನ್ನು ಬಯಸುವುದಾದರೂ ಹೇಗೆ? ಎಂದು ಪಂಪನು ಆಶ್ಚರ್ಯದ ಜೊತೆಗೆ ಭೀತಿಯನ್ನೂ ವ್ಯಕ್ತಪಡಿಸಿದ್ದಾನೆ.

ಚಿತ್ರಾಂಗದೇವನು ವಿಭೀಷಣ ಮಾಂಡಲಿಕನಿಗೂ ಪತ್ನಿ ಪ್ರಿಯದತ್ತೆಗೂ ವರದತ್ತ ನೆಂಬ ಮಗನಾದನು. ಮಣಿಕುಂಡಲ ದಿವಿಜನು ನಂದಿಷೇಣ ಮತ್ತು ಆನಂದಮತಿಯರಿಗೆ ವರಸೇನನೆಂಬ ಮಗನಾದನು. ಮನೋರಥ ಕಲ್ಪಜನು ಪ್ರಭಂಜನ ಮತ್ತು ಚಿತ್ರಮಾಲೆ ಯರಿಗೆ ಶಾಂತಮದನನೆಂಬ ಪುತ್ರನಾದನು. ಪೂರ್ವಜನ್ಮದ ಸ್ನೇಹ ಇಲ್ಲಿಯೂ ಅವರನ್ನು ಮತ್ತೆ ಒಂದುಗೂಡಿಸಿ ಸ್ನೇಹದ ಬೆಸುಗೆಯನ್ನು ಹಾಕಿತು.

ಒಮ್ಮೆ ಅಭಯಘೋಷ ಚಕ್ರವರ್ತಿಯು ವಿಮಲವಾಹನನ ಚರಣಾಭಿವಂದನೆಗಾಗಿ ತೆರಳಿದಾಗ, ಸುವಿಧಿಯು ತನ್ನ ಪುತ್ರ-ಮಿತ್ರರೊಡನೆ ಹೋದನು. ಜಿನಧರ್ಮದ ಉಪ ದೇಶದ ಪ್ರಭಾವದಿಂದ ಅಭಯಘೋಷ ಚಕ್ರವರ್ತಿಯು ಅನೇಕ ಮಂದಿ ಮಡದಿ ಮಕ್ಕಳೊಂದಿಗೆ, ರಾಜರೊಂದಿಗೆ ದೀಕ್ಷಿತನಾದನು. ಆದರೆ ಸುವಿಧಿಯು 'ತನ್ನಾತ್ಮತನೂ ಭವನಲ್ಲಿದ್ದ ಭವವಿಪುಳ ಸ್ನೇಹ ನಿಗಳದಿಂದಮೆ ತೊಡರ್ದು'ಕೊಂಡಿದ್ದನು. ಆದ್ದರಿಂದ ದೀಕ್ಷೆಯನ್ನು ಕೈಗೊಳ್ಳದೆ ಉಪಾಸಕನಾದನು. ಶ್ರಾವಕಧರ್ಮದ ಹನ್ನೊಂದು ನೆಲೆಗಳನ್ನು ನಿಷ್ಠೆಯಿಂದ ಪಾಲಿಸುತ್ತ, ಸಮಾಧಿವಿಧಿಯಿಂದ ಮುಡಿಪಿ ಅಚ್ಯುತ ಕಲ್ಪದಲ್ಲಿ ದೇವ ನಾದನು. ಕೇಶವನು ತನ್ನ ತಂದೆಯ ವಿಷಯವನ್ನು ತಿಳಿದು ರಾಜ್ಯವನ್ನು ತೊರೆದು, ಸಂನ್ಯಾಸವಿಧಿಯಿಂದ ಸತ್ತು ಅಚ್ಯುತಕಲ್ಪದಲ್ಲಿ ಪ್ರತೀಂದ್ರನಾದನು. ವರದತ್ತಾದಿಗಳೂ ಸುರಲೋಕದಲ್ಲಿ ಸುವಿಧಿಯನ್ನು ಸೇರಿಕೊಂಡರು.

ಪೂರ್ವಪುರಾಣಕ್ಕೆ ಪಂಪನು ಋಣಿಯಾಗಿದ್ದರೂ ಈತನ ವರ್ಣನಾವೈಖರಿಯೇ ಬೇರೆ. ಕಾವ್ಯತ್ವದಿಂದ ಕೂಡಿದ ಸಂಕ್ಷಿಪ್ತ ವಿವರಣಾ ವಿಧಾನ ಆದಿಪುರಾಣದ ಲಕ್ಷಣ. ಪೂರ್ವ ಪುರಾಣದಲ್ಲಿ ಸುವಿಧಿಯ ರೂಪಲಾವಣ್ಯದ ವರ್ಣನೆಯು ೧೪ ಶ್ಲೋಕಗಳಲ್ಲಿ ಮುಡಿ ಯಿಂದ ಅಡಿಯವರೆಗೆ ಪುರಾಣಶೈಲಿಯಲ್ಲಿ ವರ್ಣಿತವಾಗಿದೆ (x- ೧೨೬, ೧೩೯).

ಸುವಿಧಿಯನ್ನು ಜಿತಾತ್ಮಪುರುಷನೆಂದು ಕರೆದು, ತಂದೆಯ ಅನುರೋಧದಿಂದ ಆತನು ವಿವಾಹವನ್ನು ಮಾಡಿಕೊಂಡು ರಾಜ್ಯಭಾರವನ್ನು ಹೊತ್ತನೆಂಬ ಪೂರ್ವಪುರಾಣದಲ್ಲಿ ಈ ಅಂಶವನ್ನು ಪಂಪನು ನೇರವಾಗಿ ಚ್ಯುತಿಬಾರದಂತೆ ತೆಗೆದುಕೊಂಡಿದ್ದಾನೆ. 'ಆ ಜಿತೇಂ

ದ್ರಿಯನಾದ ಸುವಿಧಿ ರಾಜನು, ಮನ್ಮಥೋದ್ರೇಕವನ್ನುಂಟುಮಾಡುವ ಯೌವನದ ಆರಂಭದಲ್ಲಿ ಅರಿಷಡ್ವರ್ಗಗಳನ್ನು ನಿಗ್ರಹಿಸಿ ವಯಸ್ಸಿನಿಂದ ಯುವಕನೂ ಗುಣದಿಂದ ವೃದ್ಧನೂ ಆಗಿದ್ದನು. ಆ ಸುವಿಧಿಯು ಯೋಗ್ಯ ಕಾಲದಲ್ಲಿ ತಂದೆಯ ನಿರ್ಬಂಧದಿಂದ ರಾಜಲಕ್ಷ್ಮಿಯ ಪರಿವಾರವನ್ನು ಹೊಂದಿದವನಾಗಿ ಉತ್ತಮವಾದ ಸ್ತ್ರೀಯರನ್ನು ಪರಿಗ್ರಹಿಸುವುದಕ್ಕೆ ಸಮ್ಮತಿಸಿದನು (ಪೂರ್ವಪು. x-೧೪೦, ೧೪೧). ಹೀಗೆ ಹೆಚ್ಚಿನ ವಿವರಣಾ ಭಾಗಗಳು ಪೂರ್ವಪುರಾಣದಲ್ಲಿ ಕಂಡುಬರುತ್ತವೆ. ಪಂಪನು ಈ ಅಭಿಪ್ರಾಯಗಳನ್ನು ಒಂದೇ ಪದ್ಯದಲ್ಲಿ ಸೂಚ್ಯವಾಗಿ ತಿಳಿಸಿದ್ದಾನೆ (ಆದಿಪು. vi-೨).

'ಸ್ವಯಂಪ್ರಭದೇವನು ಸ್ವರ್ಗದಿಂದ ಚ್ಯುತನಾಗಿ ಈ ದಂಪತಿಗಳಿಗೆ ಮಗನಾಗಿ ಹುಟ್ಟಿದನು. ವಜ್ರಜಂಘ ಭವದಲ್ಲಿ ಯಾವ ಶ್ರೀಮತಿಯು, ವಜ್ರಜಂಘನಿಗೆ ಪ್ರಾಣಕಾಂತೆಯಾಗಿದ್ದಳೋ ಅವಳೇ ಸುವಿಧಿಗೆ ಪುತ್ರನಾಗಿ ಜನಿಸಿದಳು. ಸಂಸಾರದ ಸ್ಥಿತಿಯು ಈ ಪ್ರಕಾರವಾಗಿದೆ.' ಪೂರ್ವಪುರಾಣದಲ್ಲಿ ಬರುವ ಈ ಭಾಗವನ್ನು ಪಂಪನು ಹೃದಯಸ್ಪರ್ಶಿ ವಿವರಣೆಯೊಂದಿಗೆ ಪ್ರಭಾವಕಾರಿಯಾಗಿ ಚಿತ್ರಿಸಿರುವುದನ್ನು ಈ ಹಿಂದೆ ಗಮನಿಸಿದೆ (vi-೩).

ಅಭಯಘೋಷ ಚಕ್ರವರ್ತಿಯ ದೀಕ್ಷೆ, ಮಗನ ಮೇಲಿನ ವ್ಯಾಮೋಹದಿಂದ ಸುವಿಧಿ ದೀಕ್ಷಿತನಾಗದೆ ಶ್ರಾವಕನಾಗಿ ಉಳಿದು ಮುಡಿಪಿ ಅಚ್ಯುತೇಂದ್ರನಾದ ವೃತ್ತಾಂತ, ಶ್ರಾವಕರ ನೆಲೆಗಳ ವರ್ಣನೆ ಮೊದಲಾದುವುಗಳನ್ನು ಪಂಪನು ಪೂರ್ವಪುರಾಣವನ್ನನುಸರಿಸಿ ವರ್ಣಿಸಿದ್ದಾನೆ. ಈ ಭಾಗದಲ್ಲಿ ಪೂರ್ವಪುರಾಣ ಆದಿಪುರಾಣಗಳೆರಡರಲ್ಲಿಯೂ ವರ್ಣನೆಯು ಕೇವಲ ನಿರೂಪಣಾಮಾತ್ರವಾಗಿ ಬಂದಿರುವುದನ್ನು ಗಮನಿಸಬಹುದು.

## ಉತ್ತರಕಾಲೀನ ಕಾವ್ಯಗಳು

**ಚಾವುಂಡರಾಯಪುರಾಣ** : ಸುವಿಧಿ ಮನೋರಮೆಯರ ವಿವಾಹ, ಅವರಿಗೆ ಸ್ವಯಂಪ್ರಭದೇವನು ಬಂದು ಕೇಶವನೆಂಬ ಮಗನಾದುದು, ಉಳಿದ ಸಾಮಾನಿಕ ದೇವತೆಗಳು ವರದತ್ತಾದಿಗಳಾಗಿ ಜನಿಸಿದುದು, ವಿಮಲವಾಹನರ ಉಪದೇಶದಿಂದ ಅಭಯಚಕ್ರವರ್ತಿ ದೀಕ್ಷೆ ಕೈಗೊಂಡುದು, ಸುವಿಧಿಯು ಕೇಶವನ ಮೋಹದಿಂದ ಹಾಗೆ ಮಾಡದೆ ಉಪಾಸಕನಾದುದು, ಶ್ರಾವಕರ ನೆಲೆ (ಪ್ರಾಕೃತ ಗಾಹೆಯ ಮೂಲಕ)ಯ ವಿವರ, ಸುವಿಧಿ ಹನ್ನೆರಡನೆಯ ಗುಣಸ್ಥಾನವನ್ನೇರಿ ಸಂಯಮವನ್ನು ಕೈಕೊಂಡು ಸಮಾಧಿಯಿಂದ ಅಚ್ಯುತೇಂದ್ರನಾದುದು—ಈ ಅಂಶಗಳಷ್ಟೇ ಚಾವುಂಡರಾಯಪುರಾಣದಲ್ಲಿ ಬರುವ ಕಥಾಂಶ. ಪೂರ್ವಪುರಾಣ, ಆದಿಪುರಾಣಗಳೆರಡರಲ್ಲಿಯೂ ಕಂಡುಬರುವ ಹೆಚ್ಚಿನ ವಿವರಗಳನ್ನು, ಕಾವ್ಯಾಂಶಗಳನ್ನು ಕವಿ ತಂದಿಲ್ಲ. ಸುವಿಧಿಯ ಸೌಂದರ್ಯಾತಿಶಯಾದಿಗಳ ವರ್ಣನೆಯೂ ಕಂಡುಬರುವುದಿಲ್ಲ. ಸುವಿಧಿಯು ವಿವಾಹವನ್ನು ಮಾಡಿಕೊಂಡುದಾಗಲಿ, ರಾಜ್ಯಭಾರವನ್ನು ವಹಿಸಿಕೊಂಡಿದ್ದಾಗಲಿ ತಂದೆಯ ಬಲವಂತದಿಂದ ಎಂಬ ವಿಚಾರವನ್ನು ಚಾಮುಂಡರಾಯನು ಕೈಬಿಟ್ಟಿದ್ದಾನೆ. ಶ್ರಾವಕವಿಧಿಯ ವಿವರಗಳು ಇಲ್ಲಿ ಬರುವುದಿಲ್ಲ.

**ಹಸ್ತಿಮಲ್ಲನ ಪೂರ್ವಪುರಾಣ** : ಚಾವುಂಡರಾಯಪುರಾಣದಲ್ಲಿ ಕಂಡುಬರುವ ಕಥಾ ಚೌಕಟ್ಟು ಸುವಿಧಿಯ ಭವದಲ್ಲಿದೆ. ಚಾವುಂಡರಾಯಪುರಾಣದಂತೆಯೇ ಪೂರ್ವಪುರಾಣ,

ಆದಿಪುರಾಣಗಳಲ್ಲಿರುವ ಕೆಲವು ಅಂಶಗಳನ್ನು ಕೈಬಿಡಲಾಗಿದೆ. ಹಸ್ತಿಮಲ್ಲನ ಪೂರ್ವವರ್ತಿ ಕಾವ್ಯಗಳಲ್ಲಿ, ಸುದೃಷ್ಟಿಯನ್ನು ಅಭಯ ಘೋಷಚಕ್ರಿಯ ಮೈದುನನೆಂದು ಹೇಳಲಾಗಿದೆ. ಹಸ್ತಿಮಲ್ಲನಲ್ಲಿ ಆ ಪ್ರಸ್ತಾಪವಿಲ್ಲ. ಪೌರ್ಣಮಿಯ ಚಂದ್ರನಂತೆ ಸಕಲಕಲಾಪರಿಪೂರ್ಣನಾಗಿ ಬೆಳೆದನೆಂದು ಸುವಿಧಿಯ ಬೆಳೆವಣಿಗೆಯ ರೀತಿಯನ್ನು ಹೇಳಿರುವ ಹೊಸ ಅಂಶವನ್ನು ಬಿಟ್ಟರೆ, ಉಳಿದಂತೆ ಚಾವುಂಡರಾಯಪುರಾಣದ ಕಥಾಚೌಕಟ್ಟು ಕಂಡುಬರುತ್ತದೆ.

**ಪುಣ್ಯಾಸ್ರವದ ಆದೀಶ್ವರರ ಕಥೆ** : ಚಾವುಂಡರಾಯಪುರಾಣ, ಹಸ್ತಿಮಲ್ಲನ ಪೂರ್ವಪುರಾಣಗಳಲ್ಲಿ ಬರುವಂತೆ ಸಂಕ್ಷಿಪ್ತ ಶೈಲಿಯ ವರದಿಮಾತ್ರದ ನಿರೂಪಣೆ ಇಲ್ಲಿದೆ. ಕಾವ್ಯಾಂಶದ ಸೊಗಸಿಲ್ಲದೆ ಕವಿ ಶೀಘ್ರ ಗತಿಯಲ್ಲಿ ಕತೆಯನ್ನು ಹೇಳಿ ಮುಗಿಸಿದ್ದಾನೆ.

**ಪುರುದೇವಚರಿತೆ** : ಇಲ್ಲಿ ಕವಿ ಚಾವುಂಡರಾಯಪುರಾಣವನ್ನು ಹೆಚ್ಚು ಅನುಕರಿಸಿದ್ದಾನೆ ಎಂಬುದಕ್ಕೆ ಅಲ್ಲಲ್ಲಿಯೇ ಉದಾಹರಣೆಗಳು ದೊರೆಯುತ್ತವೆ. ಉದಾಹರಣೆಗೆ :

ಕೇಶವನೊಳಗತಿ ಮೋಹದಿಂ ಸುವಿಧಿಯು | ಪಾಸಕನಾಗಿ ರಾಜ್ಯವನು
ಲೇಸಾಗಿ ಬಿಟ್ಟು ಪನ್ನೊಂದನೆ ನೆಲೆಯೊಳು | ದೇಶವ್ರತದೊಳಿರ್ದು ಕಡೆಗೆ
. . . . . . . . . . .
ವರಸಮಾಧಿಯೊಳು ಮುಡುಪಿ ಅಚ್ಯುತೇಂದ್ರನಾಗಿರಲಿತ್ತ(ಪುರುಚ. iii- ೯೫, ೯೭)

ಸುವಿಧಿಯುಂ ಕೇಶವನೊಳಪ್ಪ ಮೋಹದೊಳ್ ತೊಡರ್ದು ರಾಜ್ಯವನ್ನುಳಿದು ಉಪಾಸಕನಾಗಿ . . . ಪನ್ನೊಂದ ನೆಲೆಯೊಳುತ್ಕೃಷ್ಟಂನೆಗಳ್ದು ಸಂಯಮಮಂ ಕೈಕೊಂಡು ಸಮಾಧಿಯಿನಚ್ಯುತೇಂದ್ರನಾದಂ (ಚಾವುಂಪು.)

**ಆದಿಪರಮೇಶ್ವರನ ಯಕ್ಷಗಾನ** : ಶ್ರೀಧರನು ದೇವಲೋಕದಿಂದ ಬಂದು (ಸು)ನಂದ ದೇವಿಯ ಗರ್ಭಕ್ಕೆ ಇಳಿದನು. ದಾನಪೂಜಾದಿಗಳಿಂದ ಗರ್ಭವತಿಯು ನವಮಾಸಗಳನ್ನು ಕಳೆದಳು. ಶುಭಲಗ್ನದಲ್ಲಿ ಜನಿಸಿದ ಈತನಿಗೆ ಹತ್ತುದಿನಗಳಲ್ಲಿ ಜಾತಕರ್ಮವನ್ನು ಅರ್ತಿಯಿಂದ ಎಸಗಿ ಸುವಿಧಿ ಎಂಬ ನಾಮವನ್ನಿತ್ತರು. ಬಾಲಶಶಿ ಬೆಳೆದಂತೆ ಬೆಳೆದ ಈತನಿಗೆ ಯೌವನ ಪ್ರಾಪ್ತವಾಗಲು ಯುವರಾಜ ಪದವಿಯನ್ನಿತ್ತರು. ಮನೋರಮೆಯೊಂದಿಗೆ ವಿವಾಹವಾಯಿತು. 'ಆ ಮನೋರಮೆಯೊಡನೆ ಸುವಿಧಿಯು ಕಾಮಗಿಮ್ಮಡಿ ಸೌಖ್ಯ ಭೋಗದಿ ಪ್ರೇಮದಿಂದಿದ್ದನು.' ಈ ಮೇಲಿನ ಕೆಲವು ವಿವರಗಳು ಇತರ ಆದೀಶ್ವರ ಚರಿತೆಗಳಲ್ಲಿ ದೊರೆಯದ ವಿವರಗಳಾಗಿವೆ. ತನ್ನ ಕಾಲದ ಪ್ರಚಲಿತ ವಿಧಿ ವಿಧಾನಗಳನ್ನು ಕವಿ ಇಲ್ಲಿ ಅಳವಡಿಸಿರುವುದು ಕಂಡುಬರುತ್ತದೆ.

ಮುಂದಿನ ಕಥಾಂಶವು ಹಸ್ತಿಮಲ್ಲನ ಪೂರ್ವಪುರಾಣಕ್ಕೆ ಅನುವರ್ತಿಯಾಗಿ ಬಂದಿದೆ.

ಆದಿತೀರ್ಥಂಕರ ಆತ್ಮವು ಧರ್ಮದ ಗಾಂಭೀರ್ಯದ ನೆಲೆಗೆ ಏರುವ ಹಂತ ಇದು; ಜೊತೆಜೊತೆಗೆ ಮೋಹನೀಯ ಕರ್ಮದ ನವಿರಾದ ಎಳೆಯ ಬಂಧನದ ರೀತಿಯನ್ನು ಸೂಚಿಸುವ ಭವವಿದು. ಮೋಹತೀವ್ರತೆ ಹೆಚ್ಚಾಗಿದ್ದ ಸಂದರ್ಭಗಳಲ್ಲಿ ಆದಿತೀರ್ಥಂಕರನ ಹಿಂದಿನ ಮೂರು ಭವಗಳಲ್ಲಿ ಆತನ ಪತ್ನಿಯಾಗಿ ಹುಟ್ಟಿದ ಜೀವ ಅನಂತರ ಸಹದೇವಚರನಾಗಿ, ಈ ಭವದಲ್ಲಿ ಕೇಶವನೆಂಬ ಮಗನಾಗಿ ಜನಿಸುತ್ತದೆ. ಈ ಮೋಹಪಾಶ ಸುವಿಧಿಯನ್ನು ಮಹಾವ್ರತಧಾರಿಯನ್ನಾಗಿಸಲು ಕೆಲವು ಕಾಲ ತಡೆಗಟ್ಟುತ್ತದೆ. ಸುವಿಧಿಯು ಶ್ರಾವಕರ ಪ್ರತಿಮೆಗಳನ್ನು ನೆಮ್ಮಿ ಸ್ವರ್ಗಪ್ರಾಪ್ತಿಯನ್ನು ಮಾಡಿಕೊಂಡ ರೀತಿ ಈ ಭವದ

ವರ್ಣನೆಯಲ್ಲಿ ಪ್ರಮುಖವಾಗಿ ನಿಲ್ಲುತ್ತದೆ. ಸಮ್ಯಕ್ತ್ವದಲ್ಲಿ ಗಟ್ಟಿಯಾಗಿ ಬೇರೂರಿ ನಿಂತ ಗೃಹಸ್ಥನು, ಶ್ರಾವಕ ನೆಲೆಯನ್ನು ಅನೂಚಾನವಾಗಿ ಪಾಲಿಸುವ ವಿಧಾನವನ್ನು ನಾವಿಲ್ಲಿ ಕಾಣುತ್ತೇವೆ. ಹಿಂದಿನ ಭವಗಳಲ್ಲಿ ಸಮ್ಯಕ್ತ್ವದ ವಿಚಾರಗಳು ಪ್ರಧಾನವಾಗಿದ್ದರೆ, ಈ ಭವದಲ್ಲಿ ಅದರ ಹಿನ್ನೆಲೆಯಲ್ಲಿ ಬರುವ ಸಮ್ಯಕ್ ಚಾರಿತ್ರ ಸ್ವರೂಪವಾದ ಶ್ರಾವಕನ ಪ್ರತಿಮೆಗಳು ಪ್ರಧಾನವಾಗಿ ನಿಲ್ಲುತ್ತವೆ.[೨೫]

## ಅಚ್ಯುತೇಂದ್ರಭವ

**ಆದಿಪುರಾಣ-ಪೂರ್ವಪುರಾಣ** : ಸುವಿಧಿಯು ಸತ್ತು ಅಚ್ಯುತೇಂದ್ರನಾಗಿ ತನ್ನ ಮಿತ್ರಚರ-ಪುತ್ರಚರ ದೇವತೆಗಳೊಂದಿಗೆ ದೇವಸುಖವನ್ನುಂಡು, ಆಯುಷ್ಯಾಂತದಲ್ಲಿ ತನ್ನ ಸಾವಿನ ಚಿಹ್ನೆಗಳನ್ನು ಅರಿತು ನೆಮ್ಮದಿಯಿಂದ ಭಗವಂತನ ಸ್ಮರಣೆಯನ್ನು ಮಾಡುತ್ತಾ ಅಲ್ಲಿಂದ ಚ್ಯುತನಾದನು. ಇದು ಈ ಭವದಲ್ಲಿ ಬರುವ ಅಂಶ.

ಈ ಭಾಗವನ್ನು ಪಂಪನು ಪೂರ್ವಪುರಾಣಕ್ಕೆ ಚ್ಯುತಿಬಾರದಂತೆ ವರ್ಣಿಸಿದ್ದಾನೆ. ಕೆಲವೆಡೆ ಪಂಪನು ಪೂರ್ವಪುರಾಣದಲ್ಲಿ ಬರುವ ದೀರ್ಘವಾದ ವರ್ಣನೆಗಳನ್ನು ಬಿಟ್ಟು ಮಿತವಾದ ವರ್ಣನಾವಿಧಾನಕ್ಕೆ ಒಲಿದಿರುವುದು ಕಂಡುಬರುತ್ತದೆ. ಪೂರ್ವಪುರಾಣದಲ್ಲಿ ಮೂವತ್ತಾರು ಶ್ಲೋಕದ ಹರವಿನಲ್ಲಿ ಸ್ವರ್ಗಸುಖದ ಅನುಭವವನ್ನೂ ಸೌಂದರ್ಯಾತಿಶಯವನ್ನೂ ಜಿನಸೇನರು ವಿವರವಾಗಿ ವರ್ಣಿಸಿದ್ದಾರೆ (x-೧೭೩ ರಿಂದ ೨೦೮). ಉದಾಹರಣೆಗೆ, ಅಚ್ಯುತೇಂದ್ರನು ಅತ್ಯಧಿಕವಾದ ತಪಸ್ಸಿನ ಫಲವನ್ನು ತನ್ನ ಮಸ್ತಕದಲ್ಲಿ ಧರಿಸಿ ತೋರಿಸುವವನಂತೆ, ತನ್ನ ಕಿರೀಟದಲ್ಲಿ ಕಲ್ಪವೃಕ್ಷದ ಪುಷ್ಪಾಲಂಕಾರವನ್ನು ಧರಿಸಿದನು. ಆತನು ತೊಟ್ಟ ಆಭರಣ ದಯಾಲತೆಯ ಶ್ರೇಷ್ಠವಾದ ಫಲಗಳಂತೆ ಶೋಭಿಸುತ್ತಿದ್ದವು (x-೧೭೫-೧೭೬) ಇತ್ಯಾದಿ.

ಪಂಪನು ಜಿನಸೇನರ ವೈಭವಪೂರ್ಣ ವರ್ಣನೆಯ ವಿಸ್ತಾರವನ್ನು ಎಂಟು ಪದ್ಯಗಳು ಹಾಗೂ ಒಂದು ವಚನದಲ್ಲಿ ಅಡಕಗೊಳಿಸಿ ಮೂಲದ ಅಭಿಪ್ರಾಯವನ್ನು ಸ್ಪಷ್ಟಪಡಿಸಿದ್ದಾನೆ (vi-೧೩ರಿಂದ ೨೦). ಇಲ್ಲಿ ಪಂಪನು ನಿರೂಪಣಾಮಾತ್ರವಾಗಿ ವಿಷಯಗಳನ್ನು ಸಂಗ್ರಹಿಸಿ ಹೇಳಿದ್ದಾನೆ.

ಸ್ವರ್ಗಸುಖವನ್ನನುಭವಿಸುತ್ತಿದ್ದ ಅಚ್ಯುತೇಂದ್ರನ ಸುಮುಖ ಮಸುಳಿತು (ಈ ಅಂಶ ಪೂರ್ವಪುರಾಣದಲ್ಲಿಲ್ಲ), ಹೂಮಾಲೆ ಬಾಡಿತು. ತನ್ನ ಅವಸಾನವನ್ನರಿತು—"ಜಿನಪತಿ ಪದಪಂಕಜಮನೆ ಮನದೊಳ್ ಬಗೆದು ಮುಗಿದ ಕೈವೆರಸು . . . . ಅಚ್ಯುತಂ ಪರಿಚ್ಯುತನಾದಂ" (x-೨೦).

ಲಲಿತಾಂಗದೇವನಾಗಿದ್ದಾಗ ಆ ದೇವನು ತನ್ನ ಸಾವನ್ನು ಅರಿತು ಅನುಭವಿಸಿದ ಸಂಕಟವನ್ನು ನೆನಪಿಗೆ ತಂದುಕೊಡುವಂತೆ—'ಸಾವಿನ ಚಿಹ್ನೆ ತಿಳಿದು ಬಂದರೂ ದುಃಖ ಪಡಲಿಲ್ಲ. ಅದಲ್ಲವೇ ಮಹಾತ್ಮರ ಧೈರ್ಯವೆಂಬುದು? (x-೪) ಎಂದು ಜಿನಸೇನಾಚಾರ್ಯರು ಹೇಳಿದ್ದಾರೆ. ಪಂಪನು ಈ ವಿಷಯವನ್ನು ಕೈಬಿಟ್ಟಿದ್ದಾನೆ. ಲಲಿತಾಂಗನ ಆತ್ಮ ಅಲ್ಲಿ ಇನ್ನೂ ಭೋಗಾಕಾಂಕ್ಷೆಯಲ್ಲಿಯೇ ಸುತ್ತಿಸುಳಿಯುತ್ತಿತ್ತು. ಆದರೆ ಇಲ್ಲಿ ಅಚ್ಯುತೇಂದ್ರನ ಆತ್ಮ ಅಂತಹ ವ್ಯಾಮೋಹವನ್ನು ನೀಗಿ ತ್ಯಾಗದ ಹಾದಿಯನ್ನು, ವೀತರಾಗತ್ವದ

ನೆಲೆಯನ್ನು ಏರಲು ಸಿದ್ಧಗೊಳ್ಳುತ್ತಿದೆ. ಎಲ್ಲಿಯ ಆ ಆರ್ತನಾದ! ಎಲ್ಲಿಯ ಈ ನೆಮ್ಮದಿ! "ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ" ಅಲ್ಲವೇ?

## ಉತ್ತರಕಾಲೀನ ಕಾವ್ಯಗಳು

**ಚಾವುಂಡರಾಯಪುರಾಣ** : ಸುವಿಧಿಯು ಸಮಾಧಿಯಿಂದ ಅಚ್ಯುತೇಂದ್ರನಾದನು. ಕೇಶವನೂ ಸಹ ಗುರುವಿಯೋಗದಿಂದ ದೀಕ್ಷೆಯನ್ನು ಕೈಕೊಂಡು ಪ್ರತೀಂದ್ರನಾದನು. ಉಳಿದ ನಾಲ್ಕು ಮಕ್ಕಳು ಅಲ್ಲಿಯೆ ಸಾಮಾನಿಕ ದೇವರಾದರು. ಇವರೆಲ್ಲರೂ ದ್ವಾವಿಂಶತಿ ಸಾಗರೋಪಮ ಕಾಲ ಸುಖವನ್ನನುಭವಿಸಿದರು—ಎಂಬ ಇಷ್ಟು ವಿವರಗಳನ್ನು ಮಾತ್ರ ಆತುರಗೊಂಡವನಂತೆ ವರದಿಯನ್ನು ಒಪ್ಪಿಸಿ ಮೂಲರೇಖೆಯನ್ನು ಮಾತ್ರ ನಾಲ್ಕು ಸಾಲುಗಳಲ್ಲಿ ಹೇಳಿದ್ದಾನೆ. ಆದಿಪುರಾಣ, ಪೂರ್ವಪುರಾಣಗಳಲ್ಲಿ ಬರುವ ಯಾವ ವಿವರಣಾಂಶಗಳೂ ಇಲ್ಲಿಲ್ಲ.

**ಹಸ್ತಿಮಲ್ಲನ ಪೂರ್ವಪುರಾಣ** : ಇದರಲ್ಲಿಯೂ ಚಾಮುಂಡರಾಯನ ಅನುಸರಣೆ ಯಿದೆ. ಅಲ್ಲಿಯದೇ ಅಂಶಗಳನ್ನು ಕವಿ ತನ್ನ ಶೈಲಿಯಲ್ಲಿ ಹೇಳಿದ್ದಾನೆ, ಅಷ್ಟೆ.

**ಪುಣ್ಯಾಸ್ರವದ ಆದೀಶ್ವರರ ಕಥೆ** : ಇಲ್ಲಿ ಒಂದು ಕಂದಪದ್ಯ ಹಾಗೂ ಒಂದು ವಾಕ್ಯಪ್ರಮಾಣದ ವಚನದಲ್ಲಿ ಈ ಘಟ್ಟವು ಮುಗಿದುಹೋಗುತ್ತದೆ. ಸುವಿಧಿ ಅಚ್ಯುತೇಂದ್ರನಾದನು. ಉಳಿದ ಐವರು

ಕೇಶವನಚ್ಯುತ ಕಲ್ಪಾ | ವಾಸದೊಳಿತರೇಂದ್ರನಾದನುಳಿದಾನಾಲ್ವರ್
ಬೀಸರವೋಗದೆಯಲ್ಲಿಯೆ | ಭಾಸುರ ಸಾಮಾನಿಕಾಮರರ್ ತಾವಾದರ್ (ಪುಆಕ. X-೫)

ತದನಂತರಮಾ ಸುವಿಧಿಯಚ್ಯುತೇಂದ್ರನಲ್ಲಿಗೆ ಬಂದು ವಜ್ರನಾಭಿಯೆಂಬ ನಂದನ ನಾದಂ (ಪುಆಕ. ಅಧ್ಯಾಯ X)

ಎಂದು ಹೇಳಿದ್ದಾನೆ. ಅಚ್ಯುತಕಲ್ಪದ ದೇವತೆಗಳ ಆಯುಷ್ಯದ ವಿವರವನ್ನು ಇಲ್ಲಿ ಕೈಬಿಟ್ಟಿದ್ದಾನೆ.

**ಪುರುದೇವಚರಿತ** : ಅಚ್ಯುತೇಂದ್ರ ಭವವನ್ನು ವರ್ಣಿಸುವಾಗ ಶಾಂತಿಕೀರ್ತಿಯು ಸಾಕಷ್ಟು ವಿಸ್ತಾರವಾದ ವರ್ಣನೆಯನ್ನು ನೀಡಿದ್ದಾನೆ. ಚಾವುಂಡರಾಯಪುರಾಣ, ಹಸ್ತಿಮಲ್ಲನ ಪೂರ್ವಪುರಾಣಗಳ ಸಂಕ್ಷಿಪ್ತ ವಿವರಣೆಯನ್ನು ಕೈಬಿಟ್ಟು ಪೂರ್ವಪುರಾಣ ಆದಿಪುರಾಣಗಳನ್ನು ನೆನಪಿಗೆ ತರುತ್ತಾ ೨೩ ಸಾಂಗತ್ಯಗಳಲ್ಲಿ ಈ ಭವದ ವರ್ಣನೆಯನ್ನು ಮಾಡಿದ್ದಾನೆ.

ವರಸಮಾಧಿಯಲ್ಲಿ ಸುವಿಧಿಯು ಸತ್ತು ಅಚ್ಯುತೇಂದ್ರನಾದನು. ಉಳಿದ ಅವನ ಮಿತ್ರರು, ಮಗ ಕೇಶವ—ಇವರು ಸಾಮಾನಿಕ ದೇವ ಹಾಗೂ ಪ್ರತೀಂದ್ರರಾದರು. ಅವರು

ದ್ವಾವಿಂಶತಿ ಸಹಸ್ರವರುಷಕ್ಕೆ ಮನದೊಳು | ಭಾವಿಸುವರು ಆಹಾರವನು
ದ್ವಾವಿಂಶತಿ ಪಕ್ಷಕ್ಕೊಮ್ಮೆ ಉಚ್ಛ್ವಾಸವ | ತಾವು ಸುಯ್ವುರು ಮುದದಿಂದ
(ಪುರುಚ. iii-೧೦೧)

ಈ ಪದ್ಯವು ಪಂಪನ ಕೆಳಗಿನ ಪದ್ಯದಲ್ಲಿ ಬರುವ ವಿಚಾರವನ್ನುಳ್ಳದ್ದಾಗಿದೆ :

ಸ್ಮರಿಯಿಪನಿರ್ವೃತ್ತಿಬ್ಬ್ರ್ ಸಿರವರ್ಷಕ್ಕೊಮ್ಮೆ ಮನದೊಳುಣಿಸಂ ಸುಯ್ವಂ
ಸುರಯಿಯ ಕಂಪನೆ ಗೆಲೆ ತ | ತ್ಸುರಪತಿ ಪನ್ನೊಂದು ತಿಂಗಳಿಗೊರ್ಮೆಗಡಂ

(ಆದಿಪು.vi-೧೬)

ವೈಭವದಿಂದ ಕೂಡಿದ ದೇವನು

ಇಂತಿದು ಮೊದಲಾದ ವೈಭವದ್ದೊಡಗೂಡಿ | ಕಂತುವಿಜಯ ಜಿನಕೃತಿಯ
ಸಂತೋಷದಿಂದ ಪೂಜಿಸಿ ಇಂದ್ರಪದದೊ | ಳು ತಾಂ ತಡೆಯದೆ ನಿಂದಾಗ

(ಪುರುಚ. iii-೧೦೪)

ಅಚ್ಯುತೇಂದ್ರನು ವಿಜಯಾರ್ಧ, ನಂದೀಶ್ವರ ಮೊದಲಾದ ಎಡೆಗಳಲ್ಲಿರುವ ಜಿನಕೃತಿಗಳನ್ನು ಪೂಜಿಸಿ ಬಂದನೆಂಬ ಈ ವಿವರವು ಮಿಕ್ಕೆಡೆಗಳಲ್ಲಿ ಕಂಡು ಬರುವುದಿಲ್ಲ.

ಆಯುಷ್ಯಚಿಹ್ನೆಯು ತೋರಿದಾಗ ಪೂರ್ವಪುರಾಣದಲ್ಲಿ ಬರುವ ಮಾತಿನ ಅಭಿಪ್ರಾಯದಲ್ಲಿ ಬರುವ 'ಸ್ವರ್ಗಚ್ಯುತಿಯನ್ನರಿತ ಅಚ್ಯುತೇಂದ್ರನು ಹಾಗಿದ್ದರೂ ದುಃಖಿಪಡಲಿಲ್ಲ' ಎಂಬ ಭಾವವನ್ನು ಶಾಂತಿಕೀರ್ತಿಯು ಮನೋಜ್ಞವಾಗಿ ಚಿತ್ರಿಸಿದ್ದಾನೆ. ಉದಾಹರಣೆಗೆ :

ಸುರಲೋಕ ಸುಖವ ಕೊಳತವುಲ್ಲ | ತೊರೆವಂತಿರೆ ಸುರರಾಜನಾಕ್ಷಣದಿ
ತೊರೆದನೆಂದೊಡೆ ಸಂಸ್ಕೃತಿಯ ದುಃಖದ ಬಾಳ | ನರರು ಬಿಸುರ್ಪುದೇನರಿದು

(ಪುರುಚ. iv-೬)

ಪಂಪನಲ್ಲಿ ಹಲವೆಡೆಗಳಲ್ಲಿ ಕಂಡು ಬರುವ ಮಾತುಗಳನ್ನು ಕವಿ ಬಳಸಿಕೊಂಡು ತನ್ನದನ್ನಾಗಿಸಿಕೊಂಡಿರುವ ಜಾಣ್ಮೆಯು ಮೆಚ್ಚುವಂತಹದ್ದಾಗಿದೆ. ನಿರೂಪಣೆಯನ್ನು ಶುಷ್ಕಗೊಳಿಸದೆ ಸ್ವಾರಸ್ಯಪೂರ್ಣವಾಗಿ ಹೇಳುವಲ್ಲಿ ಕವಿ ಯಶಸ್ವಿಯಾಗಿದ್ದಾನೆ. ಉದಾಹರಣೆಗೆ:

ಎನಗೊರ್ವಂಗಲ್ಲವಸ್ಥಾಂತರಮನಿಮಿಷ | ಜನಕೆಲ್ಲಮೀ ಪಾಂಗೆಯಿಲ್ಲಿ
ಅನಿಮಿಷಾನೀಕ ವಜ್ರಾಯುಧ ದೇವಾಂ | ಗನೆಯರು ತನಕ ಬಾರಿಪರೆ
ಜರಮೃತ್ಯುಜನ್ಮಶೋಕಾಶಂಕಾರಣ್ಯದ | ಉರಿಯೊಳಗನವರತದೊಳು
ಸುರನರಾದಿಗಳೊಳು ಬೇಯದರಿರ್ಪರೆ | ಶರಣ್ ಧರ್ಮದಿಂದನ್ಯಮುಂಟೆ

(ಪುರುಚ. iv-೭, ೮ )

**ಆದಿಪರಮೇಶ್ವರನ ಯಕ್ಷಗಾನ** : ಕವಿ ಇಲ್ಲಿ ತನ್ನ ಪೂರ್ವಕವಿಗಳ ಆಶಯವನ್ನು ಉಳಿಸಿಕೊಂಡು ಸಂಕ್ಷೇಪವಾಗಿ ಈ ಭವದ ವೃತ್ತಾಂತವನ್ನು ಹೇಳಿದ್ದಾನೆ. ಗುಣನಿಧಿಯಾದ ಸುವಿಧಿ ಅಚ್ಯುತೇಂದ್ರನಾದಾಗ, ಆತನ ಪುತ್ರ ಮಿತ್ರರು ಅಲ್ಲಿ ಸಾಮಾನಿಕ ದೇವರಾದರು. ಎಲ್ಲರೊಡನೆ ಇಂದ್ರನು ಸೌಖ್ಯದಾಳಿ ಅಮಿತಗುಣ ಸಾಂದ್ರಲೀಲೆಯಲ್ಲಿದ್ದನು. 'ದಿವ್ಯ ತೇಜೋಪಮಯನುಮಾಗಿ ದಿವಿಜರ್ನವ್ಯ ಭೋಗೋಪಭೋಗಿ ತಾನಾಗಿ ಸಮ್ಯಕ್ತ್ವ ಸುಖಭಾಗಿಯಾಗಿ ಅಮಿತ ದಿವ್ಯ ಸೌಖ್ಯಾನಂದನಾಗಿ' ಜೀವಿತಾಂತ್ಯದಲ್ಲಿ ಅಚ್ಯುತೇಂದ್ರ ಪದವನ್ನು ತೃಣವೆಂದು ಬಗೆದು ಪರಮಾತ್ಮ ಧ್ಯಾನಾರೂಢನಾಗಿ ಸ್ವರ್ಗದಿಂದ ಚ್ಯುತನಾದನು.

ಹಿತಮಿತವಾದ ವರ್ಣನೆಯ ಹಿನ್ನೆಲೆಯಲ್ಲಿ ಕವಿ ಈ ಭವದ ವರ್ಣನೆಯನ್ನು ಮಾಡಿದ್ದಾನೆ. ಅಚ್ಯುತೇಂದ್ರ ಪದವನ್ನು ತೃಣಕ್ಕೆ ಹೋಲಿಸಿರುವ ಭಾವವು ಪೂರ್ವಪುರಾಣ,

ಆದಿಪುರಾಣ, ಹಸ್ತಿಮಲ್ಲನ ಪೂರ್ವಪುರಾಣ ಮತ್ತು ಪುರುದೇವಚರಿತೆಯಲ್ಲಿಯೂ ಕಂಡು ಬರುತ್ತದೆ.

ಶ್ರಾವಕನ ಪ್ರತಿಮೆಗಳನ್ನೇರಿ ಪಡೆದುಕೊಂಡ ಸದ್ಗತಿಯೆಂದರೆ ಅಚ್ಯುತೇಂದ್ರ ಗತಿ. ಕರ್ಮವಿಪಾಕವಿರುವವರೆಗೆ ಜೀವಿ ಹತ್ತು ಹಲವು ಗತಿಗಳಲ್ಲಿ ಸುಳಿಯಬೇಕಾಗುತ್ತದೆ. ಶ್ರಾವಕನ ಪ್ರತಿಮೆಯಾದರೂ ಒಮ್ಮೆಗೇ ಮುಕ್ತಿಯನ್ನು ಗಳಿಸಿಕೊಡುವ ಸಾಧನವಲ್ಲದಿದ್ದರೂ ಅದು ಜೀವಿಗೆ ಮುಂದಿನ ಮುಕ್ತಿಮಾರ್ಗಕ್ಕೆ ಒಂದು ಶಿಸ್ತಿನ ಸಂಸ್ಕಾರವನ್ನು ಕೊಡುವ ಚಾರಿತ್ರ್ಯವಾಗಿದೆ. ಶ್ರಾವಕನ ಪ್ರತಿಮೆಗಳನ್ನೇರಿ ಗಳಿಸಿಕೊಂಡ ಅಚ್ಯುತೇಂದ್ರ ಗತಿಯ ಗಭೀರ ಸುಖಸಾಗರದ ರೀತಿ ಅತ್ಯಪೂರ್ವವಾದುದು. ಇಲ್ಲಿಯಾದರೂ ಆ ಮೋಹನೀಯ ಕರ್ಮದ ಬಂಧನದ ಎಳೆ ಮುಂದುವರಿದಿರುವ ಕಾರಣ ಹಿಂದಿನ ಜನ್ಮದಲ್ಲಿ ಸಂಬಂಧಿಗಳಾಗಿದ್ದ ಕೇಶವಾದಿಗಳು ಸಹದೇವಚರರಾಗಿ ಹುಟ್ಟುತ್ತಾರೆ. ಕರ್ಮವಿಪಾಕದ ಸೂಕ್ಷ್ಮತೆಯನ್ನು ಈ ರೀತಿಯಲ್ಲಿ ಪ್ರತಿ ಭವದಲ್ಲಿಯೂ ಗುರುತಿಸಿಕೊಳ್ಳಬಹುದಾಗಿದೆ. ಈ ಭವದಲ್ಲಿ ಆದಿತೀರ್ಥಂಕರರ ಆತ್ಮ ಸಾಕಷ್ಟು ಪರಿಪಕ್ವವಾಗುತ್ತದೆ. ಆ ಆತ್ಮನಲ್ಲಿ ಸಾವನ್ನು ಸಹಜವಾಗಿ ಎದುರಿಸುವ ಧೀಶಕ್ತಿಯ ಗಂಭೀರ ಪ್ರವೃತ್ತಿಯನ್ನು ಕಾಣಬಹುದಾಗಿದೆ.

## ವಜ್ರನಾಭಿ ಭವ

**ಆದಿಪುರಾಣ-ಪೂರ್ವಪುರಾಣ** : ತೀರ್ಥಂಕರನಾಮಕರ್ಮವು ಬಂಧಗೊಂಡ ಮಹತ್ತ್ವಪೂರ್ಣ ಭವ ವಜ್ರನಾಭಿ ಭವ. 'ಇಂದ್ರಗಿರಿಯಲ್ಲಿ ಜನ್ಮಾಭಿಷೇಕಕ್ಕೆ ನೋಂತು ಮಹೀವಲ್ಲಭನಪ್ಪುದೊಂದು ರೀತಿಯಲ್ಲಿ' ವಜ್ರಸೇನ ರಾಜನಿಗೂ ಆತನ ಪತ್ನಿ ಶ್ರೀಕಾಂತೆಗೂ ಅಚ್ಯುತೇಂದ್ರನು ವಜ್ರನಾಭಿ ಎಂಬ ಮಗನಾಗಿ ಜನಿಸಿದನು. ವರದತ್ತಾದಿ ಸಾಮಾನಿಕರು (ಶಾರ್ದೂಲಾದಿಗಳು) ವಿಜಯ, ವೈಜಯಂತ, ಜಯಂತ, ಅಪರಾಜಿತ ಎಂಬ ಹೆಸರಿನಿಂದ ವಜ್ರನಾಭಿಯ ಸೋದರರಾದರು. ಅಹಮಿಂದ್ರರಾಗಿ ಹುಟ್ಟಿದ ಮತಿವರಾದಿಗಳು ಸುಬಾಹು, ಮಹಾಬಾಹು, ಪೀಠ, ಮಹಾಪೀಠರೆಂಬ ಹೆಸರಿನಿಂದ ಸಹೋದರರಾದರು. ಕೇಶವಚರ ಪ್ರತೀಂದ್ರನು ಕುಬೇರದತ್ತನಿಗೂ ಅನಂತಮತಿಗೂ ಧನದೇವನೆಂಬ ಪ್ರಿಯತನೂಭವನಾದನು. ಜನ್ಮಾಂತರ ಸಂಬಂಧವೆಂದರೆ ಸಾಮಾನ್ಯವಾದುದೇ? ಆ ಸಂಬಂಧದ ರೀತಿಯನ್ನು ಪಂಪನ ವರ್ಣನೆಯಲ್ಲಿಯೇ ನೋಡಬೇಕು :

ನಿಗಳಂಬೊಲ್ತೊಡರ್ದೊಂದು ಮೋಹನಿಗಳಂ ತಜ್ಜನ್ಮದೊಳ್ ನೋಡೆ ತೊ
ಟ್ಟನೆ ಮತ್ತಂ ಪೊಸತಾಗೆ ತಮ್ಮ ಮನದೊಳ್ ತಳ್ಪೊಯ್ದು ತಳ್ತಾತಗು
ಳ್ಪುಗಳೊಳ್ ಪೊಕ್ಕುವು ವಜ್ರಲೇಪದ ತಗುಳ್ಪಂ ಪೋಲ್ವಿನಂ ವಜ್ರನಾ
ಭಿಗತಿಪ್ರೀತಿಯನುಂಟುಮಾಡಿದರವರ್ ಜನ್ಮಾಂತರಸ್ನೇಹದಿಂ (ಆದಿಪು. vi-೨೨)

ಸಂಕೋಲೆಯಂತೆ ತಗುಲಿದ ಮೋಹವೆಂಬ ಬೇಡಿಯು ಆ ಜನ್ಮದಲ್ಲಿಯೂ ನೋಡುತ್ತಿದ್ದಂತೆಯೇ ತಕ್ಷಣ ಮತ್ತೆ ಹೊಸರೀತಿಯಲ್ಲಿ ಮನಸ್ಸಿನಲ್ಲಿ ಗಾಢವಾಗಿ ಬೆಸುಗೆ ಹಾಕಿ ಬಂಧಿಸಿತು.

ವಜ್ರಲೇಪದ ಗಟ್ಟಿತನವನ್ನು ಹೋಲುವಂತೆ ವಜ್ರನಾಭಿಗೆ ಪ್ರೀತಿಯನ್ನು ಜನ್ಮಾಂತರ

ಸ್ನೇಹ ಸಂಬಂಧದಿಂದ ಅವರು ಉಂಟುಮಾಡಿದರು.

ವಜ್ರನಾಭಿಯು ಸೌಂದರ್ಯ-ವಿಲಾಸ-ಸಾಮರ್ಥ್ಯ-ಜ್ಞಾನ-ಸ್ನೇಹ ಪ್ರತಾಪಗಳಿಗೆ ಆವಾಸ ಸ್ಥಾನವಾಗಿ ಬೆಳೆದನು. ಇಂತಹ ಮಗನನ್ನು ಕಂಡು ಯಾವ ತಂದೆಗೆ ತಾನೆ ಹೆಮ್ಮೆ ಎನಿಸದು? ಈ ನನ್ನ ಮಗನು ರಾಜ್ಯಭಾರವನ್ನು ತಾಳಲು ಯೋಗ್ಯನು, ಸಮರ್ಥನು ಎಂದು ಬಗೆದು ರಾಜ್ಯಾಭಿಷೇಕವನ್ನು ಮಾಡಿದನು. ಆತನು ಮಾಡಿದ ಕಾರ್ಯ ನಿಷ್ಫಲವಾಗಲಿಲ್ಲ. ಧರಣೀಶನ ನಿರ್ಧಾರ ಒರೆಯಿಂದ ಹೊರಬಿದ್ದ ಕತ್ತಿಯಂತೆ ಸಾರ್ಥಕವಾಯಿತು. ಒಂದು ಕಡೆ ತಂದೆ ವಜ್ರಸೇನನ ಆಧ್ಯಾತ್ಮಿಕ ನಿಷ್ಠೆಯ ಮುನ್ನಡೆ, ಮತ್ತೊಂದು ಕಡೆ ಮಗ ವಜ್ರನಾಭಿಯ ರಾಜ್ಯನಿಷ್ಠೆ ಸಾರ್ಥಕಗೊಳ್ಳುತ್ತಾ ಹೋಯಿತು. ವಜ್ರನಾಭಿಗೆ ಬಹಳ ಕಾಲದವರೆಗೆ ಭೋಗ ಭಾಗ್ಯಗಳ ಕಡೆಗೆ ಮನಸ್ಸು ನೆಲೆಯೂರಲಿಲ್ಲ. ತಂದೆಯು ಕರ್ಮವನ್ನು ನಾಶಮಾಡುತ್ತಿದ್ದಂತೆ ಸಹಜ ಸುಖದತ್ತ ವಜ್ರನಾಭಿಚಕ್ರಿಯ ಮನವು ಹರಿಯಿತು.

ನೆಗೞ್ದೀಷಟ್‌ಖಂಡಮಮಂ ಸಾಧಿಸಿದೊಡೆ ಫಲಮೇಂ ಭೋಗದಿಂ ಸಾಧ್ಯಮೇಂ ಬಂ
ಧುಗಳಿಂದಂ ಬಪ್ಪುದೇಂ ಸುತ್ತಿದ ಪರಿಜನದಿಂದಪ್ಪುದೇನೊಂದುಮಿಲ್ಲ
ಚ್ಚಿಗಮೊಂದುಂಟಿಲ್ಲ ಗಾಂಪಿಂ ತೊಡೆರ್ವೆನೆ ಪಡೆವೆಂ ಶಾಶ್ವತಶ್ರೀಯನೆಂಬು
ಜ್ಜುಗದೊಳ್ ಚಿತ್ತಂ ಕರಂ ತಣ್ಮಲೆಯೆ ನೆಱೆಯೆ ನಿಶ್ಚೈಸಿದಂ ಸಾರ್ವಭೌಮಂ

(ಆದಿಪು.vi-೨೬)

'ಈ ಷಟ್ಖಂಡಮಂಡಿತವಾದ ಭೂಮಂಡಲವನ್ನು ಗೆದ್ದದ್ದರಿಂದ ಸಾಧಿಸುವುದು ಏನನ್ನು? ಭೋಗಾನುಭವದಿಂದ ಸಾಧಿಸತಕ್ಕದ್ದು ಏನು? ಬಂಧು ಬಳಗದವರಿಂದ ಆಗ ತಕ್ಕುದೇನು? ನನ್ನನ್ನು ಸುತ್ತುಗಟ್ಟಿರುವ ಪರಿಜನರಿಂದ ಆಗುವುದೇನು? ಇವೆಲ್ಲವುಗಳಿಂದ ಆಗುವುದು ಮನಸ್ಸಿಗೆ ಕಳವಳವೊಂದು ಮಾತ್ರ. ನಾನು ಮೂಢತೆಗೊಳಗಾಗಿ ಕಷ್ಟಕ್ಕೆ ಸಿಲುಕಿಬೀಳೆನು' ಎಂಬುದಾಗಿ ಶಾಶ್ವತ ಶ್ರೀಯನ್ನು ಪಡೆಯಬೇಕೆಂಬುಜ್ಜುಗದಲ್ಲಿ ಅವನ ಮನಸ್ಸು ಅತ್ಯಾಸಕ್ತವಾಯಿತು.

ಈ ಅನ್ನಿಸಿಕೆ ಆಗಾಗ್ಗೆ ಜೀವಿಗಳಿಗೆ ಬಂದುಹೋಗುವ ಭಾವವಾದರೂ ಗಟ್ಟಿಯಾಗಿ ವೈರಾಗ್ಯವು ನೆಲೆ ನಿಲ್ಲುವುದು ಪುಣ್ಯಪುರುಷರಿಗೆ ಮಾತ್ರ. ವಜ್ರನಾಭಿಯ ಜೀವ ಅದಕ್ಕಾಗಿ ಪರಿಶ್ರಮಿಸಿ ನೊಂದ ಜೀವ. ಆದ್ದರಿಂದಲೇ ವೈರಾಗ್ಯ ಮನದುಂಬಿತು. ಹಲವಾರು ರಾಜರೊಂದಿಗೆ, ಪತ್ನೀಪುತ್ರರೊಂದಿಗೆ, ಗೃಹಪತಿರತ್ನ ಧನದೇವನೊಂದಿಗೆ ವಜ್ರನಾಭಿಯು ದೀಕ್ಷಿತನಾದನು. ತಪಾಚರಣೆಯಲ್ಲಿ ಕ್ರಮಕ್ರಮವಾಗಿ ವೃದ್ಧಿಭಾವವನ್ನು ಹೊಂದುತ್ತ ಘೋರ ಪರೀಷಹಗಳನ್ನು ಜಯಿಸಬಲ್ಲ ಮಹಾಮುನಿಯಾದನು.

'ಪ್ರಖರವಾದ ಸೂರ್ಯನ ಕಿರಣಗಳು ಪ್ರಜ್ವಲಿಸುತ್ತಿದ್ದರೂ ಬಿಳಿಕೊಡೆಯ ನೆರಳಿನಲ್ಲಿ ನಿಂತಿರುವವನಂತೆ ಕಲ್ಲಿನಂತೆ ಆ ಮುನೀಂದ್ರೋತ್ತಮನು ನಿಂತಿದ್ದನು.'

'ಅಬ್ಬರಿಸಿ ಸುರಿವ ಮಳೆ, ಭೋರೆಂದು ಬೀಸುವ ಗಾಳಿ, ಎರಗಿ ಸಿಡಿಯುವ ಸಿಡಿಲು ಇವು ಕತ್ತಲೆಯಲ್ಲಿ ಭಯಂಕರವಾಗಿದ್ದರೂ ಆ ತಪಸ್ವಿ ಮರದಡಿಯಲ್ಲಿ ಮರವಾನಿಸನಂತೆ ನಿಂತಿದ್ದನು.' ಈ ಕೆಲವು ಭಾಗಗಳಲ್ಲಿ ಕವಿ ವಜ್ರನಾಭಿಯ ತಪದ ವೈಖರಿಯನ್ನು ಚಿತ್ರಗತ ಶೈಲಿಯಲ್ಲಿ ಬಿಡಿಸಿದ್ದಾನೆ. ತಾತ್ತ್ವಿಕಾಂಶಗಳೊಂದಿಗೆ ಕಾವ್ಯಾಂಶವನ್ನು ಸಮ್ಮಿಲನಗೊಳಿಸಿ ಚಿತ್ರಿಸಿರುವ ವೈಖರಿ ಇಲ್ಲಿ ಗಮನಾರ್ಹವಾಗಿದೆ. ವಜ್ರನಾಭಿಯು ಕೊನೆಗೆ ಉಪಶಾಂತ

ಗುಣಸ್ಥಾನದಲ್ಲಿ ಪ್ರಾಣಪರಿತ್ಯಾಗವನ್ನು ಮಾಡಿ ಸರ್ವಾರ್ಥಸಿದ್ಧಿಯಲ್ಲಿ ಅಹಮಿಂದ್ರನಾದನು.

ಪೂರ್ವಪುರಾಣದಲ್ಲಿ ಬರುವ ಕಥಾವಿವರಗಳನ್ನೇ ಪಂಪನು ಹೆಣೆದಿರುವನಾದರೂ ಪಂಪನ ನಿರೂಪಣಾ ವಿಧಾನದ ಕುಶಲತೆ ಓದುಗರ ಮನವನ್ನು ಸೆಳೆಯುತ್ತದೆ. ವಜ್ರನಾಭಿಯು ಹುಟ್ಟಿದಾಗ ಆತನೊಂದಿಗೆ ಕೇಶವವಾದಿಗಳು ಒಂದೆಡೆ ಸೇರಿಕೊಂಡಾಗ 'ಪುಣ್ಯದಿಂದ ಏನು ತಾನೆ ಸಾಧ್ಯವಾಗುವುದಿಲ್ಲ?' ಎಂಬುದನ್ನು ಮಾತ್ರ ಪೂರ್ವಪುರಾಣದಲ್ಲಿ ಹೇಳಿದ್ದರೆ, ಪಂಪನು ಬಂಧನದ ತೀವ್ರತೆಯನ್ನು ಮನೋಜ್ಞವಾಗಿ ಚಿತ್ರಿಸಿದ್ದಾನೆ (vi-೨೨).

ಜಿನಸೇನರು ವಜ್ರನಾಭಿಯ ರೂಪವನ್ನು ಅಡಿಯಿಂದ ಮುಡಿಯವರೆಗೆ ಮಾಡಿರುವ ವರ್ಣನೆ ಪುರಾಣದ ಸಂಪ್ರದಾಯದ ಶೈಲಿಯಲ್ಲಿದೆಯೇ ಹೊರತು ಅದರಲ್ಲಿ ಕಾವ್ಯಾಂಶವಿಲ್ಲ. (ಸಾಮಾನ್ಯವಾಗಿ ಜಿನಸೇನರು ರೂಪಾತಿಶಯ ವರ್ಣನೆಯಲ್ಲಿ ಇದೇ ಮಾರ್ಗವನ್ನು ಅನುಸರಿಸಿದ್ದಾರೆ). ಪಂಪನು ಆ ಮಾದರಿಯನ್ನು ಕೈಬಿಟ್ಟು "ವಜ್ರನಾಭಿ ಚೆಲ್ವಿಂಗೆ ನಾಭಿಯುಂ, ವಿಳಾಸಕ್ಕೆ ಆವಾಸಮುಂ" ಆಗಿದ್ದನೆಂದು ಹೇಳಿ ಅದನ್ನು ಸೂಚ್ಯವಾಗಿ ತಿಳಿಸಿದ್ದಾನೆ. ವಜ್ರನಾಭಿಯ ರಾಜ್ಯಾಭಿಷೇಕ ವರ್ಣನೆಯನ್ನು ಪಂಪನು ಕೈಬಿಟ್ಟಿದ್ದಾನೆ. ವಜ್ರಸೇನ ಮಹಾರಾಜನು ಪರಿನಿಷ್ಕ್ರಮಣಕ್ಕೆ ಮನಸ್ಸನ್ನು ಮಾಡಿದುದು ಲೋಕಾಂತಿಕ ದೇವತೆಗಳ ಬೋಧನೆಯಿಂದ ಎಂಬ ಪೂರ್ವಪುರಾಣದ ಅಂಶವನ್ನು ಪಂಪನು ಹೇಳಿಲ್ಲ. ಮುಂದೆ ವಜ್ರನಾಭಿಯ ಹಾಗೂ ವಜ್ರಸೇನರ ರಾಜ್ಯ ಹಾಗೂ ತಪಸ್ಸಾಧನೆಯು ಯಾವ ರೀತಿ ಸಾಗಿತ್ತೆಂಬುದನ್ನು ಎದುರುಬದುರಾಗಿ ವರ್ಣಿಸಿರುವ ಪೂರ್ವಪುರಾಣದ ರೀತಿಯನ್ನು ಪಂಪನೂ ಅನುಸರಿಸಿದ್ದಾನೆ. ಉದಾಹರಣೆಗೆ, ಆ ವಜ್ರನಾಭಿಯು ರಾಜ್ಯಲಕ್ಷ್ಮಿಯ ಆಲಿಂಗನದಿಂದ ಸಂತೋಷಪಟ್ಟನು; ಈ ವಜ್ರನಾಭಿಯ ಗುರುವು ತಪೋಲಕ್ಷ್ಮಿಯ ಸಂಯೋಗದಿಂದ ಬಹಳ ಸಂತೋಷಪಟ್ಟನು—ಇತ್ಯಾದಿ ವಿವರಗಳು (ಪೂರ್ವಪು. x ೪೮ ರಿಂದ ೫೫) ಪಂಪನಲ್ಲಿಯೂ ಈ ಅಂಶಗಳು ಆರನೇ ಆಶ್ವಾಸದ ವಚನ ಭಾಗದಲ್ಲಿ ಕಾಣಿಸಿಕೊಳ್ಳುತ್ತವೆ.

ವಜ್ರನಾಭಿಯು ತಂದೆಯಾದ ತೀರ್ಥಂಕರರಿಂದ ರತ್ನತ್ರಯಬೋಧೆಯನ್ನು ಪಡೆದು ತನ್ನ ಸಾಮ್ರಾಜ್ಯವನ್ನು ಹಳೆಯದಾದ ಹುಲ್ಲಿನೋಪಾದಿಯಲ್ಲಿ ತಿರಸ್ಕರಿಸಿ ರಾಜ್ಯವನ್ನು ಮಗ ವಜ್ರದಂತನಿಗೆ ಒಪ್ಪಿಸಿ ತಪಸ್ಸಿಗೆ ಇಚ್ಛೆಯನ್ನು ಮಾಡಿದನು. ಪೂರ್ವಪುರಾಣದ ಪ್ರಕಾರ ವಜ್ರನಾಭಿಗೆ ವೈರಾಗ್ಯವುಂಟಾಗುವುದು ತಂದೆಯ ತತ್ತ್ವೋಪದೇಶದಿಂದ. ಆದಿಪುರಾಣದಲ್ಲಿ ಸ್ವತಃ ಚಿಂತನೆಯಿಂದ ಆತನಿಗೆ ವೈರಾಗ್ಯವುಂಟಾಗುತ್ತದೆ. ಈ ಸನ್ನಿವೇಶವು ಪಂಪನಲ್ಲಿ ಸುಂದರ ವಾಗಿ ಚಿತ್ರಿತವಾಗಿದೆ (vi-೨೬).

ವಜ್ರನಾಭಿಯ ತಪೋವಿಧಾನದ ವರ್ಣನೆ ಪೂರ್ವಪುರಾಣದಲ್ಲಿ ಆಗಮಿಕ ಶೈಲಿಯಲ್ಲಿ ಸುದೀರ್ಘವಾಗಿ ವರ್ಣಿತವಾಗಿದ್ದರೆ, ಪಂಪನಲ್ಲಿ ಕಾವ್ಯಾಂಶವೂ ಒಡಗೂಡಿ ಸ್ವಾರಸ್ಯಪೂರ್ಣವಾಗಿ ಕಂಡುಬರುತ್ತದೆ.

ಪೂರ್ವಪುರಾಣದ ಅಭಿಪ್ರಾಯಗಳಿಗೆ ಚ್ಯುತಿಯಾಗದಂತೆ ಅದಕ್ಕೆ ಮತ್ತೂ ಮೆರುಗನ್ನು ನೀಡಿರುವುದರಿಂದ ಪಂಪನ ವರ್ಣನೆಯು ರೋಚಕವಾಗಿ ಕಂಡುಬರುತ್ತದೆ.

## ಉತ್ತರಕಾಲೀನ ಕಾವ್ಯಗಳು

**ಚಾವುಂಡರಾಯಪುರಾಣ** : ಪೂರ್ವಪುರಾಣ, ಆದಿಪುರಾಣಗಳ ಮುಖ್ಯ ಕಥಾಚೌಕಟ್ಟು ಮಾತ್ರ ಇಲ್ಲಿ ಕಂಡುಬರುತ್ತದೆ. ಪೂರ್ವಪುರಾಣದಲ್ಲಿ ಬರುವ ವಜ್ರನಾಭಿಯ ರೂಪ-ಲಾವಣ್ಯ-ಗುಣವಿಶೇಷಗಳ ಬಗೆಗಾಗಲಿ, ಪೂರ್ವಪುರಾಣ, ಆದಿಪುರಾಣಗಳಲ್ಲಿ ಬರುವ ತಪೋನುಷ್ಠಾನದ ವಿಧಿ ವಿಧಾನಗಳ ಬಗೆಗಾಗಲಿ ವಿವರವಿಲ್ಲ. ಆದಿಪುರಾಣದಲ್ಲಿ ಬರುವ ವೈರಾಗ್ಯ ಭಾವನೆಯ ವ್ಯಾವರ್ಣನೆಯ ಸೊಗಸಿನ ಗಂಧವಿಲ್ಲ. ಒಟ್ಟಿನಲ್ಲಿ ಕವಿ ಕೇವಲ ವಜ್ರನಾಭಿಯ ಜನನ, ಆತನ ದೇವಚರರು ಮತ್ತೆ ಬಂದು ಅಲ್ಲಿ ಸೇರಿದುದು, ವಜ್ರನಾಭಿಯ ರಾಜ್ಯಾಭಿಷೇಕ (ಇದು ಪಂಪನಲ್ಲಿಲ್ಲ), ವಜ್ರಸೇನನ ಪರಿನಿಷ್ಕ್ರಮಣ, ವಜ್ರನಾಭಿಗೆ ಚಕ್ರರತ್ನೋದಯ, ಕೇವಲಿ ಪೂಜೆ, ಧನದೇವನು ಗೃಹಪತಿರತ್ನವಾದುದು, ದಿಗ್ವಿಜಯ, ವಿಷಯವಿರಕ್ತನಾಗಿ ಮಗನಿಗೆ ರಾಜ್ಯವನ್ನು ನೀಡಿ ದ್ವಾದಶವಿಧಿಯಿಂದ ತಪವನ್ನು ಆಚರಿಸಿ ಸರ್ವಾರ್ಥಸಿದ್ಧಿಯಲ್ಲಿ ಅಹಮಿಂದ್ರನಾದುದು—ಈ ವಿಚಾರಗಳನ್ನಷ್ಟೆ ಕವಿ ರೇಖಾಮಾತ್ರವಾಗಿ ಇಲ್ಲಿ ಹೇಳಿದ್ದಾನೆ.

**ಹಸ್ತಿಮಲ್ಲನ ಪೂರ್ವಪುರಾಣ** : ಚಾವುಂಡರಾಯಪುರಾಣದಂತೆ ಸಂಕ್ಷಿಪ್ತ ಚೌಕಟ್ಟಿನಲ್ಲಿ ಈ ಭವದ ವರ್ಣನೆ ಅಳವಟ್ಟಿದೆ. ಉಳಿದೆಡೆಗಳಲ್ಲಿ ಕಂಡುಬಾರದ ಕೆಲವು ಅಂಶಗಳನ್ನು ಇಲ್ಲಿ ಹೇಳಲಾಗಿದೆ. ಪುಂಡರೀಕಿಣೀ ಪುರದೊಡೆಯ ತೀರ್ಥಂಕರನಾಗುವವನಾದುದ ರಿಂದ ಜನ್ಮಾಭಿಷೇಕ, ರಾಜ್ಯಾಭಿಷೇಕವನ್ನು ಪಡೆದು ವಿರಾಜಿಸಿದನೆಂಬ ಅಂಶವು ಇಲ್ಲಿ ಕಂಡುಬರುತ್ತದೆ. ಪೂರ್ವವರ್ತಿ ಕಾವ್ಯಗಳಲ್ಲಿ ಕಂಡುಬರುವ ಚಕ್ರರತ್ನೋದಯದ ವರ್ಣನೆ, ದಿಗ್ವಿಜಯದ ವಿಷಯ, ಮಗನಿಗೆ ರಾಜ್ಯಕಟ್ಟುವ ವಿಚಾರಗಳು ಇಲ್ಲಿ ಕಂಡುಬರುವುದಿಲ್ಲ. ವಜ್ರಸೇನನು ಪರಿನಿಷ್ಕ್ರಮಣಕ್ಕೈದಿದಾಗ ಪೂರ್ವಪುರಾಣದಲ್ಲಿ ಬರುವಂತೆ ಲೋಕಾಂತಿಕ ದೇವತೆಗಳು ಬಂದು 'ಎಲೆ ದೇವಾ, ಸಕಲ ಜೀವಂಗಳನುದ್ಧರಿಸುವ ಮನಮಂ ತಂದು ಲೇಸಂ ಮಾಡಿದೆ'ಯೆಂದು ಬಿನ್ನವಿಸಿ ಹೋಗುವ ವಿಚಾರ ಬಂದಿದೆ. ಅಲ್ಲಿಯ ಬೋಧನೆ ಇಲ್ಲಿಸಂಗ್ರಹಗೊಂಡು ಬಂದಿದೆ. ಮುಂದಿನ ಕಥಾಂಶವು ಉಳಿದ ಕಥಾಚೌಕಟ್ಟಿನಂತೆ ಅಳವಟ್ಟಿದೆ.

**ಪುಣ್ಯಾಸ್ರವದ ಆದೀಶ್ವರರ ಕಥೆ** : ಪೂರ್ವಪುರಾಣದಲ್ಲಿ ಬರುವ ವಜ್ರನಾಭಿಯ ರೂಪಾದಿ ವೈಭವಗಳ ಅತಿಶಯತೆ, ವೈರಾಗ್ಯವನ್ನು ಹೊಂದಲು ಕಾರಣ, ಮೊದಲಾದ ವಿವರಗಳು ಇಲ್ಲಿ ಇಲ್ಲ. ಇಲ್ಲಿಯ ಕಥಾಂಶವು ಸಂಕ್ಷಿಪ್ತವಾಗಿದ್ದರೂ ನಾಟಕೀಯತೆ ಇಲ್ಲಿನ ವೈಶಿಷ್ಟ್ಯವಾಗಿದೆ.

ಒಂದು ದಿನ ವಜ್ರನಾಭಿಯು ಶಕ್ರನ ವಿಲಾಸಕ್ಕೆ ಹೋಲುವಂತೆ ಓಲಗದಲ್ಲಿರಬೇಕಾದರೆ ಲೀಲೆಯಿಂದ ಕೆಲವು ಪರಿಜನರು ಬಂದು ಪೊಡಮಟ್ಟು, ಮನೋಮುದದಿಂದ ಕೂಡಿದವರಾಗಿ ಉತ್ಸವಕಾರಣವಾದ ವಿಷಯವನ್ನು ರಾಜನಿಗೆ 'ದೇವಾ, ನಿಮ್ಮ ತಂದೆ ವಜ್ರಸೇನ ಮುನಿಗಳ್ಗೆ ಕೇವಲಜ್ಞಾನಮುಂ ಶಸ್ತ್ರಾಗಾರದೊಳ್ ಚಕ್ರರತ್ನಂ ಪುಟ್ಟಿದುದು'—ಎಂದು ಅರಿಕೆಮಾಡಿದರು. ಅನಂತರ ಆನಂದಭೇರಿ ಮೊಳಗಿತು. ಕೇವಲಿಗಳ ಪೂಜೆಗೆ ಪ್ರಥಮ ಸ್ಥಾನವಾದುದರಿಂದ ವಜ್ರನಾಭಿಯು ಕೇವಲಿಗಳ ಪೂಜೆಗೆ ನಡೆದನು. ಚಕ್ರರತ್ನ ಪೂಜೆ,

ದಿಗ್ವಿಜಯ ಸಾಧನೆ, ಇವುಗಳ ನಿರೂಪಣೆ ನಾಮಮಾತ್ರವಾಗಿ ಬಂದಿದೆ. ಕೇವಲಿಗಳ ಪೂಜೆ, ದಿಗ್ವಿಜಯಾದಿಗಳ ನಿರೂಪಣೆಯಲ್ಲಿ ಕವಿ ಚಾವುಂಡರಾಯಪುರಾಣಕ್ಕೆ ಹೆಚ್ಚು ಹತ್ತಿರವಾಗಿ ಕಾಣುತ್ತಾನೆ.

ವಜ್ರದಂತನು ವಿಜಯಾದಿ ಕುಮಾರರಿಗೆ ಯುವರಾಜ ಪಟ್ಟವನ್ನು ನೀಡಿದನೆಂಬ ಅಂಶ ಇಲ್ಲಿ ಹೊಸದಾಗಿ ಬಂದಿದೆ. ಅನ್ಯತ್ರ ಈ ಅಂಶ ದೊರೆಯುವುದಿಲ್ಲ.

**ಪುರುದೇವಚರಿತ** : ವಜ್ರನಾಭಿ ಹಾಗೂ ಆತನ ಎಂಟು ಮಂದಿ ಸಹೋದರರ ಹಾಗೂ ಧನದೇವನ ವೃತ್ತಾಂತವು ಯಾವ ವಿಶೇಷ ನಿರೂಪಣೆಯಿಲ್ಲದೆ ಚಾಮುಂಡರಾಯಾದಿ ಕಾವ್ಯಗಳ ಮಾದರಿಯಲ್ಲಿಯೇ ನಿರೂಪಿತವಾಗಿದೆ.

ವಜ್ರಸೇನನಿಗೆ ವೈರಾಗ್ಯ ಉಂಟಾಯಿತು. ಲೋಕಾಂತಿಕ ದೇವತೆಗಳು ಬಂದು ಉಪದೇಶಿಸಿದರು (ಪೂರ್ವಪುರಾಣ, ಹಸ್ತಿಮಲ್ಲನ ಪೂರ್ವಪುರಾಣಗಳಲ್ಲಿಯೂ ಈ ಅಂಶ ವಿದೆ). ದಿವಿಜೇಂದ್ರನು ಬಂದು ಸ್ನಾನವನ್ನು ಮಾಡಿಸಿ ವರರತ್ನಸಿವಿಗೆಯಲ್ಲಿ ಗ್ರಾಮವನವನ್ನು ತಲುಪಿಸಿದನು. ಇದು ಇಲ್ಲಿ ಬರುವ ಪರಿನಿಷ್ಕ್ರಮಣದ ವರ್ಣನೆ. ವಜ್ರನಾಭಿಯು ಎರಡೊಸಗೆಯನ್ನು ಮಾಡಿ ದಿಗ್ವಿಜಯಕ್ಕೆ ಹೋಗುವ ವೈಭವವನ್ನು ಆರು ಸಾಂಗತ್ಯಗಳಲ್ಲಿ ವರ್ಣಿಸಲಾಗಿದೆ. ಹದಿನಾಲ್ಕು ರತ್ನ, ದಶಾಂಗ ಭೋಗ, ನವನಿಧಿ, ಸಪ್ತಾಂಗ, ಷಡಂಗ ಮೊದಲಾದುವುಗಳನ್ನು ಮುದದಿಂದ ಪಡೆದು; ಗ್ರಾಮ, ನಗರ, ಖೇಡ ಮೊದಲಾದ ದುರ್ಗ ದೇಶ ಭಾಗಗಳನ್ನು ದಾಟಿ ದೇವ, ವಿದ್ಯಾಧರ, ಹಸ್ತಿ, ಅಶ್ವ, ರಥ, ಕಾಲಾಳು ಎಂಬ ಷಡಂಗ ಬಲಗಳು, ದೇವಿಯರು, ಖಚರಿ, ಭೂಚರಿ, ಮ್ಲೇಚ್ಛಾದಿ ೯೬ ಮಂದಿಗಳು, ಮೂವತ್ತೆರಡು ಸಹಸ್ರಮಕುಟಬದ್ಧರು, ನಾಟ್ಯ, ಸಂಗೀತ ನಿಪುಣದೇವರು, ಹದಿನಾರು ಸಹಸ್ರ ದೇವರು ಇವರೊಂದಿಗೆ ಆರು ಖಂಡಗಳನ್ನು ಬಾಯ್ಕೇಳಿಸಿ ಚಕ್ರವರ್ತಿ ಪದವಿಯನ್ನು ಪಡೆದನು. ಈ ವಿವರಣೆಗಳು ಕವಿಯ ಹೊಸ ಸೇರ್ಪಡೆಗಳಾಗಿವೆ. ದಿಗ್ವಿಜಯಕ್ಕೆ ಹೊರಟ ವೈಭವ ಪೂರ್ಣ ಚಿತ್ರವನ್ನು ಮನಗಾಣಿಸಬೇಕೆಂಬ ಪ್ರಯತ್ನ ಇಲ್ಲಿ ಕಾಣುತ್ತದೆ.

ವಜ್ರನಾಭಿಯ ವೈರಾಗ್ಯಸನ್ನಿವೇಶವು ಆದಿಪುರಾಣಾದಿ ಕಾವ್ಯಗಳಲ್ಲಿ ಕಂಡುಬರುವಂತೆಯೇ ಇದೆ.

ವಜ್ರನಾಭಿಯ ತಪಸ್ಸಿನ ವಿವರವು ಸಂಕ್ಷಿಪ್ತವಾಗಿ, ಸರಳವಾಗಿ ಮೂಡಿ ಬಂದಿದೆ. ಷೋಡಶ ಭಾವನೆಗಳಲ್ಲಿ ವಜ್ರನಾಭಿಯು ನೆಲೆನಿಂತ ರೀತಿಯನ್ನು ಕವಿ ಸರಳ ನಿರೂಪಣೆಯಲ್ಲಿ ಮನೋಹರವಾಗಿ ವರ್ಣಿಸಿದ್ದಾನೆ. ಈ ಭಾಗದಲ್ಲಿ ಬರುವ ಕೆಲವು ಮಾತುಗಳು ಸೂಕ್ತಿ ರೂಪದವುಗಳಾಗಿವೆ. ಉದಾಹರಣೆಗೆ :

ತನ್ನಾತ್ಮ ಗುಣವ ರಕ್ಷಿಸುವುದೆ ಶೀಲ
ಭೋಗ ಶರೀರ ಸಂಸೃತಿಗೆ ಬೆಚ್ಚುವುದೆ ನಿರ್ವೇಗ
ತನ್ನಂತರಂಗದೊಳು ರಾಗದ್ವೇಷಾದಿ ಬಿಡುವುದೆ ಶಕ್ತಿ-ತ್ಯಾಗ

ಈ ಮಾತುಗಳು ಕವಿಯ ಪ್ರತಿಭೆಗೆ ಸಾಕ್ಷಿಯಾಗಿ ನಿಲ್ಲುತ್ತವೆ.

**ಆದಿಪರಮೇಶ್ವರನ ಯಕ್ಷಗಾನ** : ತನ್ನ ಪೂರ್ವಕಾಲೀನ ಕೃತಿಗಳ ಅಂಶಗಳನ್ನು ಅನುಸರಿಸಿದ್ದರೂ ಆದಷ್ಟು ಹೊಸತನವನ್ನು ತರಲು ಪ್ರಯತ್ನಿಸಿರುವ ಕವಿಯ ಅಭಿಲಾಷೆ ಮೆಚ್ಚುವಂತಹುದಾಗಿದೆ.

'ಶ್ರೀಮದಮರೇಂದ್ರ ಸುಧಾಸುರೇಂದ್ರ ಸ್ತೋಮ ಪೂಜಿತ ಪಾದಪದ್ಮ ಕಾಮಸನ್ನಿಭ' ವಜ್ರಸೇನನು ಶೋಭಿಸುತ್ತಿದ್ದನು. ಈ ಪಾವನ ಚರಿತನಾಥನರಸಿ ಶ್ರೀಕಾಂತೆ. ಇವರಿಗೆ ವಜ್ರನಾಭಿ ಜನಿಸಿದನು. ಉಳಿದ ಈತನ ದೇವಚರರು ಸೋದರರಾಗಿ ಜನಿಸಿದರು. ಕೇಶವಚರನು ಧನದೇವನಾಗಿ ಜನಿಸಿದನು. ಈ ಕಲಿಗಳು ಒಟ್ಟಾಗಿ ಶಸ್ತ್ರ-ಶಾಸ್ತ್ರಾದಿ ವಿದ್ಯೆಗಳನ್ನು ಕಲಿತು ಜಗದಲ್ಲಿ ಅಪ್ರತಿಮರೆನಿಸಿದರು. ಮಗನ ವಿದ್ಯೆ ಏಳ್ಗೆಯನ್ನು ನೋಡಿ ಅಧಿರಾಜ ಪದವಿಯನ್ನು ರಾಜನು ಮಗನಿಗೆ ಕೊಟ್ಟನು. (ಈ ವಿಷಯದ ಉಲ್ಲೇಖ ಪೂರ್ವಪುರಾಣ, ಆದಿಪುರಾಣ ಮತ್ತು ಹಸ್ತಿಮಲ್ಲನ ಪುರಾಣಗಳಲ್ಲಿ ಕಂಡುಬರುತ್ತದೆ.) ಲೋಕಾಂತಿಕ ದೇವತೆಗಳು ಬಂದು ಪರಿನಿಷ್ಕ್ರಮಣ ಕಲ್ಯಾಣವನ್ನು ಮಾಡಿದರು. ಮುಂದೆ ಬರುವ ವರ್ಣನೆ ಹಸ್ತಿಮಲ್ಲನ ಪೂರ್ವಪುರಾಣದ ಅನುವರ್ತಿಯಾಗಿ ಕಂಡುಬರುತ್ತದೆ.

> ಅಮರ (ಅಮ್ರ) ವನೋದ್ಯಾನಕೆ ಸಾಸಿರ್ವರರಸುಗಳ್ವೆರಸು ಬಿಜಯಂಗೈಸಿ ಉತ್ತರ ಮುಖವಾಗಿ ಕುಳಿತು, ಮೋಹಪಾಶಮಂ ಪರಿದಿಡುವಂತೆ ಕೇಶಮಂ ಕಿಳ್ತು, ತಪಂಗೊಳ್ಳೆ ಪಂಚಾಶ್ಚರ್ಯಮಂ ಮಾಡಿ ದೇವೇಂದ್ರ ಸುರಸಮಿತಿ ಸಹ ತಮ್ಮ ಲೋಕಕ್ಕೆ ಪೋದರು (ಆದಿಯ. ಪರಿಚ್ಛೇದ-iv)
>
> ಆ ನೃಪನಂ ದೇವೇಂದ್ರಾದಿಗಳ್ ಪರಿನಿಷ್ಕ್ರಮಣ ಕಲ್ಯಾಣ ನಿಮಿತ್ತಮಾಮ್ರ ವನೋದ್ಯಾನಕ್ಕೆ ಬಿಜಯಂಗೆಯ್ಸೆ; ಸಹಸ್ರಸಂಖ್ಯಾವನೀಶ್ವರರ್ವೆರಸು ಬಡಗಮೊಗವಾಗಿ ಕುಳ್ಳಿರ್ದು ಕೇಶವಂ ಮೋಹಪಾಶಮಂ ಪರಿದಂತೆ ಪರಿದು ತಪಂಗೊಂಡು, ಕೇವಲಜ್ಞಾನಮಂ ಪಡೆದು ಸಮವಸರಣ ಲಕ್ಷ್ಮೀ ವಿರಾಜಮಾನನಾದಂ ( ಹಪೂರ್ವ. ಪು. ೩೮)

ಕೇವಲಜ್ಞಾನೋತ್ಪತ್ತಿಯಾಗಲು ಸಮವಸರಣದಲ್ಲಿ ವಜ್ರಸೇನ ಮುನಿಯು ವಿರಾಜಮಾನನಾದನು. ವಜ್ರನಾಭಿಯು ಪುರಜನ-ಪರಿಜನ ಸಹಿತ ಅಲ್ಲಿಗೆ ಹೋಗಿ ವಂದಿಸಿ, ಪೂಜಿಸಿ, ಗಣಧರರಿಂದ ಸದ್ಧರ್ಮವನ್ನು ತಿಳಿದು ಸ್ತುತಿಸಿ ಬಂದನು. ಈ ವಿವರವು ಅನ್ಯತ್ರ ಇಲ್ಲ.

ದಿಗ್ವಿಜಯವನ್ನು ಸಾಧಿಸಿ ಸಪ್ತ ತತ್ತ್ವ ಸಾರಾಮೃತದ ಬೋಧ ಗುಣಾಂಬುಧಿಯೆನಿಸಿ ಧರ್ಮಾರ್ಥಕಾಮಗಳನ್ನನುಭವಿಸುತ್ತ ವಜ್ರನಾಭಿ ಸುಖದಿಂದಿದ್ದನು. ಪೂರ್ವಪುರಾಣ ಮತ್ತು ಆದಿಪುರಾಣಗಳಲ್ಲಿ ಕಂಡುಬರುವ ಈ ಅಭಿಪ್ರಾಯವನ್ನು ಕವಿ ಇಲ್ಲಿ ಸಂಗ್ರಹಿಸಿದ್ದಾನೆ.

ವಜ್ರನಾಭಿಗೆ ವೈರಾಗ್ಯ ಮೂಡಿಬಂದ ಸಂದರ್ಭವನ್ನು ಕವಿ ಇಲ್ಲಿ ವಿಭಿನ್ನವಾದ ಸನ್ನಿವೇಶವನ್ನು ತಂದು ವಿವರಿಸಿದ್ದಾನೆ. ದಿವ್ಯಧ್ವನಿಯನ್ನು ಕೇಳಿದ ಆತ ವೈರಾಗ್ಯಪರನಾದ ವಿಷಯವನ್ನು ಇಲ್ಲಿ ಸೇರಿಸಿದ್ದಾನೆ. ಭೋಗಸಾಗರದ ಮಧ್ಯೆ ತ್ಯಾಗದ ಸಂದೇಶವನ್ನು ಕವಿ ಈ ಸನ್ನಿವೇಶದಲ್ಲಿ ಮೂಡಿಸಿದ್ದಾನೆ :

> ಸರಸ ಸವಿನುಡಿ ಲಲ್ಲೆವಾತಿನ ತರುಣಿಮಣಿಯರೊಳೆಲ್ಲ ಸಮರತಿ
> ಸುರತಸುಖ ಸಾಮ್ರಾಜ್ಯ ಪದವಿಯೊಳಿರುತಲೊಮ್ಮೆ
> ಮೊಳಗೆ ಸಮವಶ್ರುತಿಯ ಘೋಷಣೆ ನೆಲೆಗೊಳಲು ಹೃತ್ಕ
> ಮಲ ಮಧ್ಯದಿ ನೆಲೆಸಿಯಾತ್ಮ ಧ್ಯಾನವನು ಚಿತ್ಕಳೆಯದೋರಿ (ಆದಿಯ. ಪರಿಚ್ಛೇದ v)

ವೈರಾಗ್ಯ ಮನದಲ್ಲಿ ಉದಿಸಿತು, ಲೌಕಿಕ ಭೋಗ ಭಾಗ್ಯಗಳಲ್ಲಿ ಅಸಾರತೆ ಹುಟ್ಟಿತು.

ಅದನ್ನು ಕವಿ ಈ ರೀತಿ ವರ್ಣಿಸಿದ್ದಾನೆ :

ಜಲಜಮುಖಿಯರ ಸೌಖ್ಯತಾನಿದು ಜಲದ ರೇಖೆಯ ಕಾಯಮೋಹನ
ನಿಲದು ಕದಳಿಯ ಸಾರದಂದದಿ ತೊಲಗುತಿಹವು
ಸತಿಸುತರ ಸೌಭಾಗ್ಯ ಸಂಪದಕ್ಷಿತಿಯು ಕಾಯ್ದ ಷಡಂಗ ಬಲತಾ
ಸತತ ಘನದೊಡ್ಡಿನೊಳು ತೋರಿಯು ಗತವುಮೈಸೆ
ಇಳೆಯ ಸಂಪದ ಸುರರ ನೆರವಿಯು ಜಲಜಮುಖಿಯರ ಭೋಗ
ದೇಳ್ಗೆಯು ಫಲಿತ ಪುಣ್ಯಮಿದ್ಯೆಸೆಮಾಯುಷ್ಯ ತೊಲಗಿದಲ್ಲಿ
ನಿಲವುವೊಂದಿನಿತಿಲ್ಲ ಅಂತಕ ಕೊಲಲು ತನ್ನಯ ಸುಕೃತ ದುಃಕೃತ
ನಿಲುವುದಲ್ಲದೆ ಮಿಕ್ಕವೆಲ್ಲವು ತೊಲಗುತಿಹವು (ಆದಿಯ. ಪರಿಚ್ಛೇದ-v)

ಈ ಪದ್ಯಗಳಲ್ಲಿ ಭೋಗ ಭಾಗ್ಯದ ನಶ್ವರತೆಯನ್ನು ಸರಳಶೈಲಿಯಲ್ಲಿ ಅಲ್ಲಲ್ಲಿಯೇ ದೃಷ್ಟಾಂತಗಳನ್ನು ನೀಡಿ, ವೈರಾಗ್ಯದ ಭಾವನೆಯನ್ನು ಪುಷ್ಟಿಗೊಳಿಸಲು ಪ್ರಯತ್ನಿಸಿದ್ದಾನೆ.

ವಜ್ರನಾಭಿಯು ಮಗನಿಗೆ ಪಟ್ಟವನ್ನು ಕಟ್ಟಿ ಸಮವಸರಣಕ್ಕೆ ಬಂದು ಭಕ್ತಿಭರದಿಂದ ಸ್ತುತಿಸಿದನು. ಕವಿ ಅವಕಾಶ ದೊರೆತಲ್ಲೆಲ್ಲಾ ಸ್ತುತಿ ಭಾಗವನ್ನು ಆದಷ್ಟೂ ಬಳಸಿಕೊಂಡಿದ್ದಾನೆ. ಇಲ್ಲಿಯೂ ಹಾಗೆಯೇ. ಕವಿಯು ಭಕ್ತಿಪರವಶತೆಯ ತನ್ಮಯತೆಯನ್ನು ತನ್ಮೂಲಕ ಪ್ರದರ್ಶಿಸಿದ್ದಾನೆ.

ವಜ್ರನಾಭಿ ಅನೇಕ ಪತ್ನಿ-ಪುತ್ರ-ರಾಜರೊಂದಿಗೆ ದೀಕ್ಷಿತನಾದನು. ವಜ್ರನಾಭಿಯ ತಪದ ವರ್ಣನೆಯೂ ಸಹ ಸಂಕ್ಷಿಪ್ತವಾಗಿ ಇಲ್ಲಿ ವರ್ಣಿತವಾಗಿದೆ. ಕವಿಯ ವರ್ಣನಾಚಮತ್ಕಾರವನ್ನು ನೋಡಿ :

ಮೂರು ಗುಪ್ತಿಯಿಂದ ಮೂರು ರತ್ನವನು ಧರಿಸಿ
ನಾಲ್ಕು ಯೋಗಗಳಿಂದ ನಾಲ್ಕು ಕಷಾಯಗಳನ್ನು ಹೂಳಿ
ಐದಸ್ತಿಕಾಯವನ್ನರಿದು ಐದಿಂದ್ರಿಯಂಗಳ ಬಲಿದು . . . ( ಆದಿಯ. ಪರಿಚ್ಛೇದ v)

ವಜ್ರನಾಭಿ ಭವವು ಇಲ್ಲಿ ಹಿತಮಿತವಾಗಿ ಸ್ವೋಪಜ್ಞತೆಯಿಂದೊಡಗೂಡಿ ಬಂದಿದೆ.

ಹಲವಾರು ವಿಷಯಗಳಲ್ಲಿ 'ವಜ್ರನಾಭಿ'ಭವ ಪ್ರಮುಖವಾದ ಭವವಾಗಿ ನಿಲ್ಲುತ್ತದೆ. ಮುಂದೆ ಭಗವಾನನಾಗಲಿರುವ ಈ ಜೀವಕ್ಕೆ ತೀರ್ಥಂಕರ ನಾಮಕರ್ಮವು ಬಂಧಗೊಂಡುದು ಇಲ್ಲಿಯೇ. ಹಿಂದಿನ ಭವಗಳಲ್ಲಿ ಹಂತಹಂತವಾಗಿ ಮಿಥ್ಯಾತ್ವದಿಂದ ಸಮ್ಯಕ್ತ್ವದೆಡೆಗೆ ತಿರುಗುವ ಹಾಗೂ ಆ ಸಮ್ಯಕ್ತ್ವವನ್ನು ರೂಢಿಸಿಕೊಂಡಂತೆ ಶ್ರಾವಕ ವ್ರತಧಾರಿಯಾಗುವ ಸ್ವರೂಪವನ್ನು ಕಂಡೆವು. ಇಲ್ಲಿ ವಜ್ರನಾಭಿಯು 'ಮಹಾವ್ರತ' ಧಾರಿಯಾಗಿ ನಿಲ್ಲುವ ಚಿತ್ರಣವನ್ನು ಕಾಣುತ್ತೇವೆ. ಚಕ್ರವರ್ತಿಯಾಗಿ ಭೋಗ ಭಾಗ್ಯಗಳನ್ನನುಭವಿಸಿದರೂ ಅದನ್ನೇ ಸರ್ವಸ್ವವೆಂದು ಅಂಟಿ ಕುಳಿತುಕೊಳ್ಳದೆ, ಆತ್ಮಸಾಕ್ಷಾತ್ಕಾರವನ್ನು ಗುರಿಯಾಗಿಟ್ಟುಕೊಂಡು ಕಠೋರ ತಪವನ್ನು ಕೈಗೊಂಡು ನಿಂತ ಈ ಚೇತನ ಮುಂದೆ ಆದಿತೀರ್ಥಂಕರನಾಗುವ ಮಹಾನ್ ಚೇತನಕ್ಕೆ ಪೂರ್ವಪೀಠಿಕೆಯಂತಿದೆ. ಹಿಂದಿನ ಭವದಲ್ಲಿ ಮೋಹನೀಯ ಕರ್ಮದ ತೀವ್ರತೆ ಮಹಾವ್ರತಧಾರಿಯನ್ನಾಗಿಸಲು ಅಡ್ಡಿಯೊಡ್ಡಿತ್ತು. ಆದರೆ ಈ ಭವದಲ್ಲಿ ಹಾಗಲ್ಲ. ಆ ಮೋಹಪಾಶ ಸಡಿಲಿದೆ. ಕರ್ಮ ಬಂಧ

ಕಳಚಿದಂತೆ, ಆತ್ಮವಿಕಾಸದ ಹಂತ ಬೆಳೆಯುತ್ತಾ ಹೋಗುವುದನ್ನು ಆದಿತೀರ್ಥಂಕರನ ಭವಗಳ ಉದ್ದಕ್ಕೂ ಕಾಣುತ್ತೇವೆ. ಪಂಪನಲ್ಲಿ ಮಹಾವ್ರತಿಯಾದ ವಜ್ರನಾಭಿಯ ತಪದ ವರ್ಣನೆ ಜೈನ ಪರಿಭಾಷೆಗಳ ಹಿನ್ನೆಲೆಯಲ್ಲಿ ಸಾಕಷ್ಟು ವಿಸ್ತಾರವಾಗಿದೆ. ಉಳಿದೆಡೆ ಈ ವರ್ಣನೆ ಸಂಕ್ಷಿಪ್ತಗತಿಯಲ್ಲಿ ಸಾಗಿದೆ.

## ಅಹಮಿಂದ್ರದೇವ ಭವ

**ಆದಿಪುರಾಣ-ಪೂರ್ವಪುರಾಣ :** ಸ್ವರ್ಗದ ಉತ್ಕೃಷ್ಟ ನೆಲೆಯಾದ ಸರ್ವಾರ್ಥಸಿದ್ಧಿ ವಿಮಾನದಲ್ಲಿ ಹುಟ್ಟಿದ ಅಹಮಿಂದ್ರನ ವೈಭವ, ರೂಪಾತಿಶಯಗಳು ಮತ್ತು ಸರ್ವಾರ್ಥ ಸಿದ್ಧಿ ವಿಮಾನದ ಹಿರಿಮೆಗರಿಮೆಗಳು ಈ ಭವದಲ್ಲಿ ವರ್ಣಿತವಾಗಿರುವ ಮುಖ್ಯಾಂಶ ಗಳಾಗಿವೆ.

ಲೋಕೋನ್ನತಿಯ ಹನ್ನೆರಡು ಯೋಜನವನ್ನು ಬಿಟ್ಟು ಸ್ಥಿತವಾಗಿರುವ ಸರ್ವಾರ್ಥ ಸಿದ್ಧಿಯು ಸುಖ ಸುಧಾಕರವಾಗಿ ಮಂಗಳಕರವಾಗಿದೆ. 'ಅದು ಅಭ್ಯುದಯದ ಸುಖ ನಿಳಯ', 'ಅದು ಮೋಕ್ಷದ ನೆರೆಮನೆ'ಯಾಗಿದೆ ಅಂದಮೇಲೆ ಹೇಳುವುದಾದರೂ ಏನು? (vi-೩೬)

ಸರ್ವಾರ್ಥಸಿದ್ಧಿಯಲ್ಲಿ ವಜ್ರನಾಭಿಯು ಜನ್ಮವನ್ನು ತಾಳಿದನೆಂದಮೇಲೆ ಆತನು ಪುಣ್ಯೋದಯದ ತುತ್ತತುದಿಯನ್ನೇರಿದಂತೆಯೇ. ಅದಕ್ಕೆ ನೆರೆಮನೆ ಮುಕ್ತಿಲೋಕ. ಕರ್ಮ ಬಂಧನವನ್ನು ಕಳಚಿದರೆ ಮುಂದೆ ಆತನ ನೆಲೆ ಅಲ್ಲಿಯೇ. ಆತನ ರೂಪಾತಿಶಯದ ಹಿರಿಮೆಯನ್ನು ಕೇಳಬೇಕೆ? ಪೂರ್ಣಯೌವನದಿಂದ ಕೂಡಿದ ಶುಭಲಕ್ಷಣದಿಂದ, ಮನೋ ಹರರೂಪದಿಂದ ಆತನು ಕೂಡಿದ್ದನು. ಸ್ಫಟಿಕದ ಬೊಂಬೆಯನ್ನು ಅಮೃತದಲ್ಲಿ ತೊಳೆದಂ ತಿರುವ ರೂಪವಿಲಾಸ ಆತನದು. ಅಲ್ಲಿಯ ಪರಿಸರವೂ ಮಂಗಳಮಯವಾದುದು. ಶುಕ್ಲಲೇಶ್ಯೆಯ ಭಾವ ಅಲ್ಲಿ ಉಂಟಾಗುವುದು. ಅಲ್ಲಿಯ ಜೀವಿಗಳು ಹದಿನಾರು ತಿಂಗಳು ಹದಿನೈದು ದಿನಗಳಿಗೊಮ್ಮೆ ಶ್ವಾಸಬಿಡುವರು. ಮೈಥುನೇಚ್ಛಾರಹಿತರಾದ ಸುಖಿಗಳು.

ಲಲಿತಾಂಗನ ಜನ್ಮದ ಆದಿಯಿಂದ ಹಿಡಿದು ಸ್ತ್ರೀ ಸುಖದ ಸಂಸರ್ಗವನ್ನು ದೈಹಿಕವಾಗಿ, ಮಾನಸಿಕವಾಗಿ ಅನುಭವಿಸುತ್ತಿದ್ದ ಆ ಹೆಡ್ಡತನ, ಅಹಮಿಂದ್ರನಿಗೆ ಪುಣ್ಯೋದಯದಿಂದ ನೀಗಿತು. ಮುಕ್ತಿಪಥದತ್ತ ಸಾಗುತ್ತಿರುವ ಜೀವ ಕಾಳಿಮೆಯನ್ನು ಕಳೆದುಕೊಂಡು ಬರುವ ಭವವಿಧಾನವನ್ನಿಲ್ಲಿ ಕಾಣುತ್ತೇವೆ.

ಆತ್ಮಗತ ಚಿಂತನೆಯಿಂದ ಹುಟ್ಟಿದ ಸಂತೋಷ ಸಂತೋಷವೇ ಹೊರತು ಹೊರ ವಸ್ತುವಿನಿಂದ ಸಂತೋಷವನ್ನು ತಂದುಕೊಳ್ಳಲು ಸಾಧ್ಯವೇ?

> ಅದಱಿಂದಂ ತನ್ನೊಳ್ ಪು | ಟ್ಟಿದ ಸಂತಸದಿಂದಮಾದ ಸುಖಮದು ಸುಖಮ
> ಲ್ಲದುದದಲ್ತು ವಸ್ತುವಿಂದಾ | ದುದು ವಸ್ತುವೆ ಕುಂದೆ ಕುಂದುಗುಂ ನಿಮಿರ್ದಪುದೇ ?
> (ಆದಿಪು. vi-೪೫)

ಈ ಸರ್ವಾರ್ಥಸಿದ್ಧಿಯಲ್ಲಿ ದೊರೆಯುವ ಸುಖ ನಾಕನಿಕಾಯದ ಸುಖಕ್ಕೆ ಸರಿಸಾಟಿ ಯಲ್ಲ. ಮುಕ್ತಿಸುಖದಿಂದ ಸ್ವಲ್ಪಮಾತ್ರ ನ್ಯೂನತೆಯನ್ನು ಪಡೆದಿದೆ ಅಷ್ಟೇ ಎಂದ ಮೇಲೆ

'ಬಣ್ಣಿಸುವನಾವನಲ್ಲಿ ಸುಖಮಂ?' ಎಂದು ಪಂಪನು ಆ ವೈಭವದ ವಿಜೃಂಭಣೆಯ ವಿಲಾಸವನ್ನು ಸುಂದರ ಶೈಲಿಯಲ್ಲಿ ಮನಮುಟ್ಟುವಂತೆ ವರ್ಣಿಸಿದ್ದಾನೆ.

ಧನದೇವಾದಿಗಳು ಮತ್ತು ವಜ್ರನಾಭಿಯ ಎಂಟು ಮಂದಿ ಸಹೋದರರು ಅಹಮಿಂದ್ರರಾಗಲು ಅವರೊಂದಿಗೆ ವಜ್ರನಾಭಿ ಅಹಮಿಂದ್ರನು 'ಪುಣ್ಯಕಲ್ಪಾವನಿಜ ತನಿವಣ್ಣರಸದೆ ತಣ್ಣನೆ ತಣಿವಂತೆ' ತಣಿದನು. ಹದಿನೈದು ಕಂದ ಪದ್ಯಗಳಲ್ಲಿ ಅಲ್ಲಿಯ ಸುಖವೈಭವದ ಚಿತ್ರಣವನ್ನು ಹಿತಮಿತವಾಗಿ ನೀಡಿದ್ದಾನೆ.

ಪೂರ್ವಪುರಾಣದಲ್ಲಿ ಈ ಭಾಗವು ೧೧೦ ಶ್ಲೋಕಗಳಲ್ಲಿ ವರ್ಣಿತವಾಗಿದೆ. ಅಲ್ಲಿ ಬರುವ ವಿವರಗಳನ್ನು ಪಂಪನು ಭಾವಗೆಡದಂತೆ ಸಂಗ್ರಹಿಸಿದ್ದಾನೆ. ಲೌಕಿಕ ಸುಖದ ಅಸಾರತೆಯನ್ನು ಪೂರ್ವಪುರಾಣದಲ್ಲಿ ಹೆಚ್ಚು ವಿವರವಾಗಿ ಹೇಳಲಾಗಿದೆ. ಆದರೆ ಕಾವ್ಯದ ಔಚಿತ್ಯವರಿತ ಪಂಪನು ಉತ್ತಮ ಸಂಗ್ರಹಕಾರನ ಕೆಲಸವನ್ನು ಮಾಡಿದ್ದಾನೆ. ಕೆಲವೆಡೆ ಅಲ್ಲಿಯ ವಿಚಾರಗಳನ್ನು ತನ್ನದೇ ಆದ ಧಾಟಿಯಲ್ಲಿ ಹೆಚ್ಚು ಸುಂದರಗೊಳಿಸಿ ಹೇಳಿದ್ದಾನೆ. ಈ ಭಾಗದಲ್ಲಿ ಬಂದಿರುವ ಕೆಲವು ಮಾತುಗಳು ಪಂಪನು ಎಷ್ಟರಮಟ್ಟಿಗೆ ಪೂರ್ವ ಪುರಾಣಕ್ಕೆ ಋಣಿಯಾಗಿದ್ದಾನೆ ಎಂಬುದನ್ನು ತಿಳಿಸುತ್ತವೆ. ಉದಾಹರಣೆಗೆ :

ದ್ಯುಸದಾಂ ಪ್ರತಿಬಿಂಬಾನಿ ಧಾರಯಂತ್ಯಕ್ಷ್ಯಕಾಸತಿ |
ಸಿಸೃಕ್ಷವ ಇವಾಪೂರ್ವಂ ಸ್ವರ್ಗಂ ಯನ್ಮಣಿಭಿತ್ತಯಃ || (ಪೂರ್ವಪು. xi-೧೧೭)

ದೇವತೆಗಳ ಪ್ರತಿಬಿಂಬವನ್ನು ಧರಿಸಿರುವ ಆ ವಿಮಾನದ ರತ್ನಖಚಿತವಾದ ಗೋಡೆಗಳು ಅಪೂರ್ವವಾದ ಸ್ವರ್ಗವನ್ನು ಸೃಷ್ಟಿಸಬೇಕೆಂಬ ಇಚ್ಛೆಯುಳ್ಳವುಗಳಂತೆ ಪ್ರಕಾಶಿಸುತ್ತವೆ.

ನೆರೆದಹಮಿಂದ್ರರ ತನುಪರಿ | ಕರದ ನೆಬಿಲ್ಗಳ್ ಪಳಚ್ಚನೆಸೆದಿರೆ ನೋಟ
ಕ್ಕೆರಡನೆಯ ನಾಕಲೋಕದ | ವಿರಚನೆಯಂ ಪಡೆದುವದಱ ರನ್ನದ ಕೇರ್ಗಳ್
(ಆದಿಪು.vi-೩೭)

ಅಲ್ಲಿ ನೆರೆದ ಅಹಮಿಂದ್ರ ದೇಹಚ್ಛಾಯೆಗಳು ರತ್ನದ ಗೋಡೆಗಳ ಮೇಲೆ ಪ್ರತಿಫಲಿಸಿ ಎರಡನೆಯ ನಾಕಲೋಕದ ಸೃಷ್ಟಿಯಾದಂತೆ ಕಂಡುಬರುತ್ತದೆ.

ಸಂಸಾರೇ ಸ್ತ್ರೀಸಮಾಸಂಗಾದಂಗಿನಾಂ ಸುಖಸಂಗಮಃ |
ತದಭಾವೇ ಕುತಸ್ತೇಷಾಂ ಸುಖಮಿತ್ಯತ್ರ ಚರ್ಚ್ಯತೇ || (ಪೂರ್ವಪು. xi-೧೬೩)

ಸಂಸಾರದಲ್ಲಿ ಪ್ರಾಣಿಗಳಿಗೆ ಸ್ತ್ರೀಸಂಸರ್ಗದಿಂದ ಸುಖವುಂಟಾಗುತ್ತದೆ. ಸ್ತ್ರೀಸಂಸರ್ಗ ದಿಂದುಂಟಾಗುವ ಸುಖವು ಸರ್ವಾರ್ಥಸಿದ್ಧಿಯಲ್ಲಿಲ್ಲದಿರುವುದರಿಂದ ಆ ಅಹಮಿಂದ್ರರಿಗೆ ಸುಖವೆಲ್ಲಿ ಬಂದೀತು ಎಂಬೀ ವಿಷಯದಲ್ಲಿ ವಿಚಾರಮಾಡುತ್ತೇವೆ. ಈ ಭಾಗದಲ್ಲಿ ಕಾಮ ಸುಖದ ಹೇಯತೆಯನ್ನು ಸಾರುತ್ತ, ಇಪ್ಪತ್ತೈದು ಶ್ಲೋಕ ವಿಸ್ತಾರದಲ್ಲಿ ಅದನ್ನು ಕಟುವಾಗಿ ಟೀಕಿಸಿದ್ದಾರೆ. ಪಂಪನು ಅಲ್ಲಿ ಬರುವ ಮುಖ್ಯ ಅಭಿಪ್ರಾಯವನ್ನು ಒಂದು ಕಂದ ಪದ್ಯದಲ್ಲಿ ವಿವರಿಸಿದ್ದಾನೆ. ಉದಾಹರಣೆಗೆ :

ಸ್ತ್ರೀ ಸಂಸರ್ಗ್ಗಂ ಸುಖಮೆಂ | ಬೀ ಸಂಸಾರಿಗಳೆ ಜಡರದಪ್ಪೊಡೆ ತನುಗಾ
ಯಾಸಕರಂ ಶುಕ್ಲಾರ್ತ್ತವ | ವಾಸಿತಮಾಪಾತಮಾತ್ರರಮಣೀಯತರಂ (ಆದಿಪು. vi-೪೪)

ಸ್ತ್ರೀಸಂಗಸುಖವೇ ಸುಖವೆಂದು ತಿಳಿಯುವ ಈ ಸಂಸಾರಿಗಳು ಜಡರು. ಅದು ತನುವಿಗೆ ಆಯಾಸಕರವಾದುದು. ಶುಕ್ಲಶೋಣಿತಗಳಿಂದ ಕೂಡಿದುದು. ಅದು ಮೇಲ್ನೋಟಕ್ಕೆ

ಮಾತ್ರ ರಮಣೀಯವಾದುದು.

ಈ ಭಾಗದಲ್ಲಿ ಪಂಪನು ಜಾಣ್ಮೆಯಿಂದ ಪೂರ್ವಪುರಾಣದಲ್ಲಿ ಬರುವ ಕೆಲವು ಭಾವಗಳನ್ನು ತನ್ನದಾಗಿಸಿಕೊಂಡು ವರ್ಣಿಸಿರುವ ರೀತಿ ಮನನೀಯವಾಗಿದೆ. ಪಂಪನು ಇಲ್ಲಿ ಕೇವಲ ಅನುವಾದಕಾರನಾಗಿ ಮಾತ್ರ ಕಂಡುಬರುವುದಿಲ್ಲ. ಅಲ್ಲಿಯ ಎಷ್ಟೋ ಭಾವನೆಗಳನ್ನು ಇಲ್ಲಿ ಮತ್ತಷ್ಟು ಹಸಿರುಗೊಳಿಸಿದ್ದಾನೆ.

ಅಹಮಿಂದ್ರದೇವನು ಜಿನಪೂಜೆ, ಧರ್ಮಸಭೆಗಳಲ್ಲಿ ತೊಡಗಿದ್ದನೆಂಬುದನ್ನು ಪೂರ್ವ ಪುರಾಣದಲ್ಲಿ ವಿಶೇಷವಾಗಿ ಹೇಳಲಾಗಿದೆ (xi-೧೩೭- ೧೩೮). ಆದರೆ ಪಂಪನಲ್ಲಿ ಈ ವಿಷಯವು ಬರುವುದಿಲ್ಲ.

## ಉತ್ತರಕಾಲೀನ ಕಾವ್ಯಗಳು

**ಚಾವುಂಡರಾಯಪುರಾಣ** : ಸರ್ವಾರ್ಥಸಿದ್ಧಿಯಲ್ಲಿ ಅಹಮಿಂದ್ರನಾಗಿ ಹುಟ್ಟಿದ ವಜ್ರನಾಭಿಯ ಮತ್ತು ಉಳಿದ ಒಂಬತ್ತು ಮಂದಿಯ ವಿಚಾರ, ಅಲ್ಲಿಯ ಆಯುಸ್ಸು, ಶರೀರಸ್ಥಿತಿ, ಶುಭಲಕ್ಷಣ, ಸೌಂದರ್ಯಕಾಂತಿ, ಶುಕ್ಲಲೇಶ್ಯೆಯ ಪರಿಣಾಮ ಇತ್ಯಾದಿ ವಿವರಗಳು ಹನ್ನೊಂದು ಸಾಲುಗಳಲ್ಲಿ ನಾಮಮಾತ್ರವಾಗಿ ಬಂದು ಮುಗಿದುಹೋಗುತ್ತವೆ. ಆದಿಪುರಾಣ, ಪೂರ್ವಪುರಾಣಗಳಲ್ಲಿ ಬರುವ ಯಾವ ವಿವರಗಳೂ ಇಲ್ಲಿಲ್ಲ. ತೀರ ಸಪ್ಪೆ ಎನಿಸುವಂತೆ ಈ ಭಾಗವು ಕಂಡುಬರುತ್ತದೆ.

**ಹಸ್ತಿಮಲ್ಲನ ಪೂರ್ವಪುರಾಣ** : ಇಲ್ಲಿ ನಾಲ್ಕು ಸಾಲುಗಳಲ್ಲಿ ಇದರ ವೃತ್ತಾಂತವು ಔಪಚಾರಿಕವಾಗಿ ಮುಗಿದುಹೋಗುತ್ತದೆ. ಚಾವುಂಡರಾಯಪುರಾಣದಲ್ಲಿ ಬರುವ ವಿಷಯಗಳೇ ಇನ್ನೂ ಸಂಗ್ರಹಗೊಂಡು ಬಂದಿವೆ.

**ಪುಣ್ಯಾಸ್ರವದ ಆದೀಶ್ವರರ ಕಥೆ** : ವಜ್ರನಾಭಿ ಹಾಗೂ ಆತನ ಅನುಚರರು ಸರ್ವಾರ್ಥ ಸಿದ್ಧಿಯಲ್ಲಿ ಜನಿಸಿದರೆಂಬ ಉಲ್ಲೇಖವನ್ನು ಬಿಟ್ಟರೆ ಉಳಿದ ಯಾವ ಅಂಶವೂ ಇಲ್ಲಿ ಬಂದಿಲ್ಲ.

**ಪುರುದೇವಚರಿತ** : ಈ ಭಾಗದಲ್ಲಿ ಚಾವುಂಡರಾಯಪುರಾಣವನ್ನು ಅನುಸರಿಸಿದೆ. ಕವಿ ಅಲ್ಲಿಯ ವಿಷಯಗಳನ್ನು ಆರು ಸಾಂಗತ್ಯಗಳಲ್ಲಿ ಮೂಡಿಸಿದ್ದಾನೆ (iv-೩೯-೪೪).

**ಆದಿಪರಮೇಶ್ವರನ ಯಕ್ಷಗಾನ** : ಕವಿ ಉತ್ಸುಕತೆಯಿಂದ ಅಹಮಿಂದ್ರನ ವೈಭವ, ಧರ್ಮಶ್ರದ್ಧೆಗಳನ್ನು ಸಂಕ್ಷಿಪ್ತವಾಗಿ ಇಲ್ಲಿ ವಿವರಿಸಿದ್ದಾನೆ. ಪೂರ್ವಪುರಾಣ, ಆದಿಪುರಾಣಗಳ ಸಂಪೂರ್ಣ ಅನುಕರಣೆಯಿಲ್ಲದಿದ್ದರೂ ಅಲ್ಲಿಯ ಅಭಿಪ್ರಾಯಗಳನ್ನು ಶಕ್ತ್ಯನುಸಾರ ಹಿಡಿದಿಟ್ಟಿದ್ದಾನೆ. ಚಾವುಂಡರಾಯಪುರಾಣ ಮೊದಲಾದ ಕಾವ್ಯಗಳಲ್ಲಿ ಕಂಡುಬರುವ ಯಾಂತ್ರಿಕ ನಡೆಯನ್ನು ಅನುಸರಿಸದೆ, ಜೀವಕಳೆಯನ್ನು ತುಂಬಿದ್ದಾನೆ.

'ವಿಮಲಜ್ಯೋತಿಯ ಪುತ್ತಳಿಯೋ' 'ವಿದ್ಯುನ್ಮಣಿ ಕಿರಣ ಬಿಂಬವೊ' ಎನ್ನುವಂತೆ ಕಮನೀಯಾಂಗನಾದ ಅಹಮಿಂದ್ರನು ಶೋಭಿಸಿದನು. ಅಹಮಿಂದ್ರನು ತನ್ನ ಉಳಿದ ಒಂಬತ್ತು ಸಹಚರರೊಂದಿಗೆ ಸೇರಿ ದಶಲಕ್ಷಣದಲ್ಲಿಯ ದಶಧರ್ಮದಂತೆ ಶೋಭಿಸುತ್ತಿದ್ದನು.

ಭೋಗಭಾಗ್ಯಗಳನ್ನು ತೃಣಗಳೆದು ಯಾವಾಗಲೂ ಮುಕ್ತಿಸುಖಕ್ಕೆ ಹಾತೊರೆಯು

ವವರಂತೆ ಆ ಭೋಗನಿಧಿಗಳಿದ್ದರು; ಆಯುಷ್ಯ ಸನಿಹಕಾಲದಲ್ಲಿ ನಿತ್ಯಾತ್ಮ ಭಾವನೆಯಲ್ಲಿ ಮುಳುಗಿದರು—ಈ ಮುಂತಾದ ವರ್ಣನೆಗಳನ್ನು ಅಳವಡಿಸಿದ್ದಾನೆ. ವರದಿ ಮಾತ್ರದ ನಿರೂಪಣಾ ವಿಧಾನವನ್ನು ನೀಗಿ, ನಿರೂಪಣೆಯಲ್ಲಿ ಒಂದು ರೀತಿಯ ಲವಲವಿಕೆಯನ್ನು ತಂದಿದ್ದಾನೆ.

ಲೌಕಿಕ ಸುಖದ ಹಂತದಲ್ಲಿ ಇದಕ್ಕಿಂತಲೂ ಸುಖದ ನೆಲೆ ಮತ್ತೊಂದಿಲ್ಲ ಎನ್ನುವ ಸ್ವರ್ಗದ ಉನ್ನತ ನೆಲೆಯಾದ ಸರ್ವಾರ್ಥಸಿದ್ಧಿಯು ಮುಂದೆ ಜೀವಿಗೆ ಮುಕ್ತಿ ಸ್ಥಾನವನ್ನು ನೆಲೆಗೂಡಿಸುವ ಶ್ರೇಷ್ಠನೆಲೆಯಾಗಿದೆ. ಅದು ದೈಹಿಕ ಸುಖಕ್ಕಿಂತ ಮಾನಸಿಕ ಸುಖವನ್ನು ನೀಡುವ ಉನ್ನತ ನೆಲೆ; ಶುಕ್ಲ ಲೇಶ್ಯೆಯ ಕೆಲವು ಶುಭಪರಿಣಾಮಗಳಿಂದೊಡಗೂಡಿದ ನೆಲೆ. ಹಿಂದಿನ ಜನ್ಮಗಳಲ್ಲಿಯ ಮೋಹಪಾಶ ಇತರ ಸಹಜೀವಿಗಳನ್ನು ಇಲ್ಲಿ ಮತ್ತೆ ಸಹದೇವ ಚರರನ್ನಾಗಿಸಿದೆ. ಆದಿತೀರ್ಥಂಕರನ ಭವಭ್ರಮಣೆಗಳಲ್ಲಿ ಇದು ಕೊನೆಯ ಭವ.

ಆದಿತೀರ್ಥಂಕರ ಚರಿತೆಗಳಲ್ಲಿ ಆದಿನಾಥನಾಗುವ ಜೀವಕ್ಕೆ ಹತ್ತು ಜನ್ಮಗಳ ಸಂಸ್ಕಾರ ಚಿತ್ರಿತವಾಗಿದೆ. ಒಂದಕ್ಕೊಂದು ಸಂಬಂಧವಿಲ್ಲದಂತೆ ಕಾಣುವ ತೀರ್ಥಂಕರನ ಹಿಂದಿನ ಹತ್ತು ಭವಗಳ ಕಥನದಲ್ಲಿ ಪಂಪ ಅವೆಲ್ಲವನ್ನೂ ಒಂದುಗೂಡಿಸುವ ಒಂದು ತತ್ವವನ್ನು ಕಂಡಿದ್ದಾನೆ. ಮೊದಲ ಐದು ಭವಗಳಲ್ಲಿ ಭೋಗದ ಆಕಾಂಕ್ಷೆ ತೀವ್ರವೂ ಪ್ರಧಾನವೂ ಆಗಿದ್ದರೆ ಉಳಿದ ಭವಗಳಲ್ಲಿ ಅದೇ ಭೋಗಾಕಾಂಕ್ಷೆ ತ್ಯಾಗಕ್ಕೆ ತೆರವು ಮಾಡಿಕೊಟ್ಟು ಕೊನೆಗೆ ಆತ್ಮದ ಸಹಜಗುಣವಾದ ಸಾಕ್ಷಾತ್ಕಾರಕ್ಕೆ ಸಾಧನವೂ ಅನಂತ ಸುಖಕ್ಕೆ ದಾರಿಯೂ ಆಗಿ ಪರಿಣಮಿಸುತ್ತದೆ. ಈ 'ಕಾಣ್ಕೆ'ಯೇ ಆದಿಪುರಾಣವನ್ನು ಒಂದು ಕಲಾಕೃತಿಯನ್ನಾಗಿ ಮಾಡಿರುವುದು.[೩೩]

ಆದಿತೀರ್ಥಂಕರನ ಕತೆಯಲ್ಲಿ ಭವಾವಳಿಗಳು ಒಂದಕ್ಕೊಂದು ಹೆಣೆದುಕೊಂಡಿರುವ ರೀತಿ ಅತ್ಯಂತ ರೋಚಕವಾದುದು. ಪ್ರತಿಯೊಂದು ಜೀವಿಯ ಗುರಿಯೂ ಭೋಗದಿಂದ ತ್ಯಾಗಕ್ಕೆ ತಿರುಗಿರುವುದರ ಸುಂದರ ಸಮ್ಮಿಲನದ ಚಿತ್ರ ಇಲ್ಲಿ ದೊರೆಯುತ್ತದೆ. ಸಂಸಾರ ಸಾಗರದಲ್ಲಿ ಗುರಿಯಿಲ್ಲದೆ ಅಲೆದಾಡುವ ಜೀವ, ಗುರಿಯನ್ನು ಅರಿತುಕೊಂಡು ಒಂದು ನಿಲುಗಡೆಗೆ ಬರುವ ಒಂದು ಸಾಹಸಮಯ ಯಾತ್ರೆಯಂತೆ ಈ ಭವಾವಳಿಗಳ ಚಿತ್ರಣ ಕಂಡು ಬರುತ್ತದೆ. ಪುರಾಣಕಥೆಗೆ ವೈವಿಧ್ಯದ ವಿನ್ಯಾಸವನ್ನು ಹೆಣೆದು, ಓದುಗರನ್ನು ಆಕರ್ಷಿಸುವ ಭಾಗ ಇದಾಗಿದೆ. ಈ ಆಕರ್ಷಣೆಯ ಹಿನ್ನೆಲೆಯಲ್ಲಿ ಜೀವಿಯ ಉತ್ಕರ್ಷದ ಆವಶ್ಯಕತೆಯ ಅನಿವಾರ್ಯತೆಯನ್ನೂ ಅದಕ್ಕಾಗಿ ಜೀವ ನಡೆಸಬೇಕಾದ ಸಂಘರ್ಷವನ್ನೂ ಪರೋಕ್ಷವಾಗಿ ಸಾರುತ್ತದೆ.

ಆದಿತೀರ್ಥಂಕರನ ಕಥೆಯಲ್ಲಿ ಕಂಡುಬರುವ ಭವಾವಳಿಗಳ ಸಿಂಹಾವಲೋಕನವನ್ನು ಮುಂದಿನ ಪುಟದಲ್ಲಿ ಗಮನಿಸಬಹುದಾಗಿದೆ.

# ಆದಿಪುರಾಣದಲ್ಲಿ ನಿರೂಪಿತವಾಗಿರುವ ಭವಾವಳಿಗಳು

| | | | | | | | | | | | | |
|---|---|---|---|---|---|---|---|---|---|---|---|---|
| 1. | (ಜಯವರ್ಮ)<br>(ಮಹಾಬಳ) | (ಧನಶ್ರೀ)<br>(ನಿರ್ನಾಮಿಕೆ) | | (ಅತಿಗೃದ್ಧ)<br>(ನಾರಕಿ)<br>(ವ್ಯಾಘ್ರ)<br>(ದಿವಾಕರ ಪ್ರಭ) | (ಸೇನಾಪತಿ)<br>(ಆರ್ಯ)<br>(ಪ್ರಭಾಕರ) | (ಮಂತ್ರಿ)<br>(ಆರ್ಯ)<br>(ಕನಕಪ್ರಭ) | (ಪುರೋಹಿತ)<br>(ಆರ್ಯ)<br>(ಪ್ರಭಂಜನ) | (ಉಗ್ರಸೇನ) | (ವರಿವರ) | (ನಾಗದತ್ತ) | (ಲೋಲುಪ) |
| 2. | ಲಲಿತಾಂಗ | ಸ್ವಯಂಪ್ರಭೆ | | (ಸಾಮಾನಿಕ ದೇವತೆಗಳು—ಸಾಮಾನಿಕ ದೇವತೆಗಳು) | | | | | | | |
| 3. | ವಜ್ರಜಂಘ | ಶ್ರೀಮತಿ | ಅನುಂದರಿ | ಮತಿವರ | ಅಕಂಪ | ಆನಂದ | ಧನಮಿತ್ರ | ಶಾರ್ದೂಲ | ವರಾಹ | ವಾನರ | ನಕುಲ |
| 4. | ಆರ್ಯ | ಆರ್ಯೆ | ↓ | ↓ | ↓ | ↓ | ↓ | ಶಾರ್ದೂಲಾರ್ಯ | ವರಾಹಾರ್ಯ | ವಾನರಾರ್ಯ | ನಕುಲಾರ್ಯ |
| 5. | ಶ್ರೀಧರದೇವ | ಸ್ವಯಂಪ್ರಭ | ↓ | (ಅಧೋಗ್ರೈವೇಯಕದಲ್ಲಿ ಅಹಮಿಂದ್ರರು) | | | | ಚಿತ್ರಾಂಗದ | ಮಣಿಕುಂಡಲ | ಮನೋಹರ | ಮನೋರಥ |
| 6. | ಸುವಿಧಿ | ಕೇಶವ | ↓ | ↓ | ↓ | ↓ | ↓ | ವರದತ್ತ | ವಾರಿಷೇಣ | ಚಿತ್ರಾಂಗದ | ಶಾಂತಮದನ |
| 7. | ಅಚ್ಯುತೇಂದ್ರ | ಪ್ರತೀಂದ್ರ | ↓ | ↓ | ↓ | ↓ | ↓ | ಪ್ರತೀಂದ್ರ | ಪ್ರತೀಂದ್ರ | ಪ್ರತೀಂದ್ರ | ಪ್ರತೀಂದ್ರ |
| 8. | ವಜ್ರನಾಭಿ | ಧನದೇವ | ↓ | ಸುಬಾಹು | ಮಹಾಬಾಹು | ಪೀಠ | ಮಹಾಪೀಠ | ವಿಜಯ | ವೈಜಯಂತ | ಜಯಂತ | ಅಪರಾಜಿತ |
| 9. | ಅಹಮಿಂದ್ರ | ಅಹಮಿಂದ್ರ | ↓ | ಅಹಮಿಂದ್ರ | ಅಹಮಿಂದ್ರ | ಅಹಮಿಂದ್ರ | ಅಹಮಿಂದ್ರ | ಅಹಮಿಂದ್ರ | ಅಹಮಿಂದ್ರ | ಅಹಮಿಂದ್ರ | ಅಹಮಿಂದ್ರ |
| 10. | ಆದಿನಾಥ | ಶ್ರೇಯಾಂಸ | ಸುಂದರಿ | ಭರತ | ಬಾಹುಬಲಿ | ವೃಷಭಸೇನ | ಅನಂತ ವಿಜಯ | ಅನಂತ ವೀರ್ಯ | ಅಚ್ಯುತ | ವೀರ | ಸುಧೀರ |
| | ಮೊದಲ ತೀರ್ಥಂಕರ | ದಾನತೀರ್ಥ ಪ್ರವರ್ತಕ | ಮಗಳು | ಮೊದಲ ಚಕ್ರವರ್ತಿ | ಮೊದಲ ಕಾಮದೇವ | ಮುಖ್ಯ ಗಣಧರ | ಆದಿನಾಥನ ಅನೇಕ ಮಕ್ಕಳಲ್ಲಿ ಕೆಲವರು | | | | |

## ಭಾಗ ೨ : ಆದಿತೀರ್ಥಂಕರನ ವರ್ತಮಾನಭವದ ಚರಿತ್ರೆ—ಪಂಚಕಲ್ಯಾಣಗಳು

### ಪೂರ್ವಪೀಠಿಕೆ -ಮನುಕುಲೋತ್ಪತ್ತಿ

ಮಾನವನ ಬದುಕು ಕಾಲದಿಂದ ಕಾಲಕ್ಕೆ ಯಾವ ರೀತಿ ವಿಕಾಸ ಹೊಂದಿತೆಂಬುದರ ನಿರೂಪಣೆ ಸಾಧಾರಣವಾಗಿ ಎಲ್ಲ ಮತಧರ್ಮಗಳ ಧರ್ಮಗ್ರಂಥಗಳಲ್ಲಿ ದೊರೆಯುತ್ತದೆ. ಜೈನಮತಾನುಸಾರ ನಾವಿರುವ ಭರತಕ್ಷೇತ್ರವನ್ನು ಕುರಿತು ಹೇಳುವುದಾದರೆ ಮನುಷ್ಯನ ಜೀವನದ ಸುಖ-ದುಃಖಗಳ ನಡುವೆ ಏರಿಳಿತವಾಗುತ್ತಿರುತ್ತದೆ. ಸಂದಿಗ್ಧ ಸಂದರ್ಭಗಳಲ್ಲಿ ಕಂಡುಬರುವ ಅಗತ್ಯ ಪೂರೈಕೆಯನ್ನು ನೋಡಿ, ಮಾನಸಿಕ ತುಮುಲಗಳನ್ನು ನಿವಾರಿಸಿ ಸಾಮಾಜಿಕ ಪರಿಸ್ಥಿತಿಯಲ್ಲಿ ಒಂದು ವ್ಯವಸ್ಥೆಯನ್ನು ರೂಪಿಸುವ ಪ್ರಯತ್ನ ಮನುಗಳಲ್ಲಿ ಕಂಡುಬರುತ್ತದೆ (ಎರಡನೆಯ ಅಧ್ಯಾಯದಲ್ಲಿ ವಿವರಗಳನ್ನು ನೀಡಲಾಗಿದೆ).

ಹದಿನಾಲ್ಕು ಮನುಗಳ ವರ್ಣನೆಯನ್ನು ಪೂರ್ವಪುರಾಣ, ಚಾವುಂಡರಾಯಪುರಾಣ ಮತ್ತು ಹಸ್ತಿಮಲ್ಲನ ಪೂರ್ವಪುರಾಣಗಳಲ್ಲಿ ಪುರಾಣ ಪೀಠಿಕಾಭಾಗದಲ್ಲಿಯೇ ನೀಡಲಾಗಿದೆ. ಆದಿಪುರಾಣ, ಪುಣ್ಯಾಸ್ರವದ ಆದೀಶ್ವರರ ಕಥೆ ಮತ್ತು ಪುರುದೇವಚರಿತಗಳಲ್ಲಿ ಈ ಭಾಗವು ವೃಷಭನ ಜನನದ ಪೂರ್ವಭಾವಿ ವೃತ್ತಾಂತವಾಗಿ ಬರುತ್ತದೆ. ಆದಿಪರಮೇಶ್ವರನ ಯಕ್ಷಗಾನದಲ್ಲಿ ಈ ಭಾಗವನ್ನು ಸಂಪೂರ್ಣವಾಗಿ ಕೈಬಿಡಲಾಗಿದೆ.

ಹಸ್ತಿಮಲ್ಲನ ಪೂರ್ವಪುರಾಣವು ಮನುಗಳನ್ನು ಕುರಿತ ನಿರೂಪಣೆಯಲ್ಲಿ ವಿಭಿನ್ನ ಪರಂಪರೆಯದಾಗಿ ಕಂಡುಬರುತ್ತದೆ. ಇದನ್ನು ಅನುಸರಿಸಿ ಅಥವಾ ಇನ್ನಾವುದೋ ಆಕರದ ಆಧಾರಕ್ಕನುಗುಣವಾಗಿ ಪುಣ್ಯಾಸ್ರವದ ಆದೀಶ್ವರರ ಕಥೆ ಹಾಗೂ ಪುರುದೇವ ಚರಿತಗಳು ನಿರೂಪಣೆಯನ್ನು ನೀಡಿದಂತಿವೆ. ಮನುಗಳ ಹೆಸರುಗಳು ಜಿನಸೇನರ ಪೂರ್ವಪುರಾಣದಲ್ಲಿ ಹೇಳಿರುವಂತೆಯೇ ಇರುವುದಲ್ಲದೆ ಅದೇ ಅನುಕ್ರಮದಲ್ಲಿಯೂ ಇವೆ. ಆದರೆ ಪೂರ್ವಪುರಾಣದಲ್ಲಿಲ್ಲದ ಮನುಗಳ ಪತ್ನಿಯರ ಹೆಸರುಗಳನ್ನು ಈ ಮೂರು ಗ್ರಂಥಗಳಲ್ಲಿಯೂ ಹೆಸರಿಸ ಲಾಗಿದೆ. ಈ ಮನುದಂಪತಿಗಳ ಹೆಸರು ಹೀಗೆ ಬರುತ್ತದೆ :

೧. ಪ್ರತಿಶ್ರುತಿ—ಸ್ವಯಂಪ್ರಭೆ
೨. ಸನ್ಮತಿ—ಯಶಸ್ವತಿ (ಪುಆಕ.ದಲ್ಲಿ ಯಶಸ್ವಿನಿ)
೩. ಕ್ಷೇಮಂಕರ—ಸುನಂದೆ (ಪುಹಿಕ.ದಲ್ಲಿ ನಂದೆ)
೪. ಕ್ಷೇಮಂಧರ—ವಿಮಳೆ
೫. ಸೀಮಂಕರ—ಮನೋಹರಿ
೬. ಸೀಮಂಧರ—ಪ್ರೀತಿ (ಪುಆಕ.ದಲ್ಲಿ-ಯಶೋಧಾರಿಣಿ;
ಪುರುಚ.ದಲ್ಲಿ-ಯಶೋಧರಿ)
೭. ವಿಮಲವಾಹನ—ಸುಮತಿ
೮. ಚಕ್ಷುಷ್ಮಾನ್—ಧಾರುಣಿ
೯. ಯಶಸ್ವಾನ್—ಕಾಂತಮಾಲೆ (ಪುಆಕ.ದಲ್ಲಿ-ಮಾಳೆ. ಪುರುಚ.ದಲ್ಲಿ-ಯಶಸ್ವಿ)

೧೦. ಅಭಿಚಂದ್ರ—ಸುನಂದೆ (ಪುಆಕ. ಮತ್ತು ಪುರುಚ. ಗಳಲ್ಲಿ ಶ್ರೀಮತಿ)

೧೧. ಚಂದ್ರಾಭ—ಪ್ರಭಾವತಿ

೧೨. ಮಹಾದೇವ (ಪುಆಕ.ದಲ್ಲಿ-ಮರುದೇವ; ಪುರುಚ.ದಲ್ಲಿ-ಪುರುದೇವ-ಅನುಪಮೆ)

೧೩. ಪ್ರಸನ್ನಜಿತ್—(?) (ಪುಆಕ.ದಲ್ಲಿ-ಅಮಿತಮತಿ)

೧೪. ನಾಭಿರಾಜ—ಮರುದೇವಿ.

ಹಸ್ತಿಮಲ್ಲನ ಪೂರ್ವಪುರಾಣ ಮತ್ತು ಪುಣ್ಯಾಸ್ರವದ ಆದೀಶ್ವರರ ಕಥೆಗಳಲ್ಲಿ ಹದಿಮೂರನೆಯ ಮನುವಿಗೆ ಆತನ ತಂದೆ ಅಮಿತಗತಿಯೆಂಬುವನು ವಿವಾಹವನ್ನು ಮಾಡಿದನೆಂಬ ಉಲ್ಲೇಖವಿದೆ. ಈ ಅಂಶ ಬೇರೆಡೆ ದೊರೆಯುವುದಿಲ್ಲ.

ಈ ಸಮಾಜೋದ್ಧಾರಕರಾದ ಮನುಗಳ ಪರಂಪರೆಯಿಂದ ಬಂದ ನಾಭಿರಾಜನ ಪುತ್ರನೇ ವೃಷಭ.

"ಈ ನಿರೂಪಣೆ (ಮನುಕುಲೋತ್ಪತ್ತಿ ಕಥೆ) ಕಾವ್ಯಾಂಶಗಳ ದೃಷ್ಟಿಯಿಂದ ಸಾಮಾನ್ಯ ವಾಚಕರಿಗೆ ಸುರಸವೂ ಉಪಯುಕ್ತವೂ ಆಗಿ ತೋರದಿರಬಹುದು. ಆದರೆ ಸಂಪ್ರದಾಯದ ಭಾಗವಾಗಿ ಅವರು ಅದನ್ನು ಸಹಿಸಬೇಕು. ಈ ವಿಷಯದಲ್ಲಿ ಜೈನಧರ್ಮದ ದೃಷ್ಟಿಯೇನೆಂಬುದನ್ನು ಪರಿಚಯ ಮಾಡಿಕೊಳ್ಳುವ ಲಾಭಕ್ಕಾಗಿ ಇದನ್ನು ಒಪ್ಪಬೇಕು. ಆದಿನಾಥನ ತಂದೆತಾಯಿಗಳು ಈ ಮನ್ವಂತರ ಕಥನದ ಕೊನೆಯ ಕುಡಿಗಳಾಗಿ ಕಾಣಿಸಿಕೊಂಡಿದ್ದಾರೆ. ಆ ಕುಡಿಗಳಾದ ನಾಭಿರಾಜ ಮರುದೇವಿಯರ ಕಾಲ ನಮಗೆ ಪರಿಚಿತವಾದ ನಾಗರಿಕ ಜೀವನದ ವಿಧಾನದ ಆರಂಭಕಾಲವೆಂಬ ಚಿತ್ರ ಇಲ್ಲಿ ದೊರೆಯುತ್ತದೆ."[೨೬]

ಈ ಭರತಕ್ಷೇತ್ರವು ಭೋಗಭೂಮಿಯಿಂದ ಕರ್ಮಭೂಮಿಗೆ ಮಾರ್ಕೊಳ್ಳುವ ಕೆಲವು ವಿವರಗಳು ಪೌರಾಣಿಕ ಮಾದರಿಯಲ್ಲಿ ಅತ್ಯುಕ್ತಿಯಾಗಿ ಕಂಡುಬಂದರೂ ಅವುಗಳಲ್ಲಿ ಮಾನವನ ನಾಗರಿಕತೆಯ ವಿಕಸನದ ಹೆಜ್ಜೆಗಳನ್ನು ಗುರುತಿಸಿಕೊಳ್ಳಬಹುದಾಗಿದೆ. ಅಗತ್ಯ ಬಿದ್ದಂತೆ ಮನುಗಳು ತಮ್ಮ ಬುದ್ಧಿಶಕ್ತಿಯಿಂದ ಅನೇಕ ಹೊಸ ಆವಿಷ್ಕಾರಗಳನ್ನು ಕೈಗೊಂಡಿದ್ದಾರೆ. ಈ ನಿಟ್ಟಿನಲ್ಲಿ ಖಗೋಳಶಾಸ್ತ್ರ, ಪ್ರಸೂತಿಶಾಸ್ತ್ರ, ಸಮಾಜಶಾಸ್ತ್ರ ಮೊದಲಾದ ವಿಷಯಗಳತ್ತ ಅಗತ್ಯಗಳಿಗನುಗುಣವಾಗಿ ಇವರ ಗಮನ ಹೋಗಿರುವುದನ್ನು ಗಮನಿಸಬಹುದಾಗಿದೆ. ಮನುಗಳು ನಾಗರಿಕ ಜೀವನದ ಅಡಿಪಾಯಗಳನ್ನು ಹಾಕಿಕೊಟ್ಟಂತೆ ತೋರುತ್ತದೆ.

## ಗರ್ಭಾವತರಣ ಕಲ್ಯಾಣ

ಆದಿನಾಥನ ಜೀವನದ ಐದು ಘಟ್ಟಗಳಾಗಿ ಕಂಡು ಬರುವ ಪಂಚಕಲ್ಯಾಣಗಳು ಆತನು ಚರಮದೇಹ ಧಾರಣೆಯನ್ನು ಪಡೆಯುವ ವೃತ್ತಾಂತದಿಂದ ಹಿಡಿದು ಮುಕ್ತಾತ್ಮನಾಗುವವರೆಗಿನ ವರ್ಣನೆಯನ್ನು ಕೊಡುತ್ತವೆ. ಆದಿತೀರ್ಥಂಕರನ ಆಧ್ಯಾತ್ಮಿಕ ಸಾಧನೆಯ ಚಿತ್ರಣ ಇಲ್ಲಿ ಹಂತಹಂತವಾಗಿ ಮೂಡಿಬರುತ್ತದೆ. ಪಂಚಕಲ್ಯಾಣಗಳ ಮೊದಲ ಮಜಲು ಗರ್ಭಾವತರಣ ಕಲ್ಯಾಣ.

**ಆದಿಪುರಾಣ-ಪೂರ್ವಪುರಾಣ** : ಮಂಗಳದ ಮುನ್ಸೂಚನೆಯಾಗಿ ಇಂದ್ರನ ಆಜ್ಞೆಯಂತೆ ಕುಬೇರನು ಆಯೋಧ್ಯೆಯಲ್ಲಿ ಆರುತಿಂಗಳ ಕಾಲ ರತ್ನದ ಮಳೆಗರೆದುದು,

ದೇವಸ್ತ್ರೀಯರು ಜಿನಜನನಿಯ ಗರ್ಭಶೋಧನೆ ನಡೆಸಿ ಆಕೆಗೆ ಸೇವೆ ಸಲ್ಲಿಸಿದುದು, ಆಕೆ ಹದಿನಾರು ಶುಭಸ್ವಪ್ನಗಳನ್ನು ಕಂಡುದು, ಆಕೆಯ ಗರ್ಭದಲ್ಲಿ ತೀರ್ಥಂಕರ ಜೀವ ಸ್ವರ್ಗದಿಂದ ಬಂದು ನೆಲೆಸಿದುದು, ಆಗ ಇಂದ್ರಾದಿಗಳು ತಾಯಿತಂದೆಗಳಿಗೆ ಮಂಗಳಾಭಿಷೇಕ ಮಾಡಿದುದು—ಇವೆಲ್ಲ ಆದಿಪುರಾಣದಲ್ಲಿ ಪೂರ್ವಪುರಾಣದ ಅನುವರ್ತಿಯಾಗಿ ಸಾಂಪ್ರದಾಯಿಕವಾಗಿ ವರ್ಣಿತವಾಗಿವೆ. ಅನುಚಿತ ಭಾಗವನ್ನು ಕೈಬಿಟ್ಟು ಆದಷ್ಟೂ ಕವಿ ಚೆಲುವಿನ ತಾಣಗಳಿಗೆ ಹೆಚ್ಚು ಪ್ರಾಶಸ್ತ್ಯವನ್ನು ನೀಡಿ ವರ್ಣನೆಯನ್ನು ಬೆಳೆಸಿದ್ದಾನೆ.

ನಾಭಿರಾಜ–ಮರುದೇವಿಯರು ತೀರ್ಥಂಕರನಾಗಲಿರುವ ವೃಷಭನ ಮಾತಾ-ಪಿತರಾಗಲಿರುವವರು. ಈ ಪುಣ್ಯದಂಪತಿಗಳ ವರ್ಣನೆಯನ್ನು ಪಂಪನು ಜಿನಸೇನಾಚಾರ್ಯರಷ್ಟೇ ಉತ್ಸುಕತೆಯಿಂದ ಮಾಡಿದ್ದಾನೆ.

ಕುಲತಿಲಕನಾದ ನಾಭಿರಾಜನಿಗೆ ಲತಾಲಲಿತೆಯಾದ, ರತಿಯಂತೆ ವಿಲಾಸಲಾವಣ್ಯಕಾಂತೆಯಾದ ಮರುದೇವಿ ಸತಿಯಾಗಿದ್ದಳು. ಅಂಬರ ಚರ ಸ್ತ್ರೀಯರಲ್ಲಿಯೂ ಸುರ-ನರಯುವತಿಯರಲ್ಲಿಯೂ ಇರುವ ರೂಪಸರ್ವಸ್ವವನ್ನು ಬಿಡದೆ ವಿಧಿ ಒಂದೆಡೆ ಸೇರಿಸಿ ಆ ಸ್ತ್ರೀರೂಪದಿಂದ ಇರಿಸಿದನೋ ಎನ್ನುವಂತಿದ್ದಳೆಂದರೆ ಇನ್ನೇನು ಹೊಗಳುವುದು? (vi-೮೦) ಈಕೆಯ ಮುಖವನ್ನು ತಾವರೆಯೂ ಕಣ್ಣನ್ನು ಉತ್ಪಳದಳವೂ ಜಡೆಯನ್ನು ನವಿಲೂ ಸೆಳ್ಳುಗುರನ್ನು ಕೇದಗೆಯೂ ಹುಬ್ಬನ್ನು ಕಾಮನಬಿಲ್ಲೂ ದಂತಪಂಕ್ತಿಯನ್ನು ಮುತ್ತುಗಳೂ ಬಂದು ಆರಾಧಿಸಿ ನಿಂತವು—ಹಾಗಲ್ಲದೆ ಆಕೆಯ ರೂಪಿಗೆ ಸರೋಜಾತಾದಿನಿಸ್ಸಾರವಸ್ತುಗಳನ್ನು ಹೋಲಿಸುವಷ್ಟು ಕವಿ ಬೆಪ್ಪನೇ? (vi-೮೫) ಸುರನಾಯಕರೆಲ್ಲರೂ ಕಲೆತು ಅತಿ ವಿಜೃಂಭಣೆಯಿಂದ ವಿವಾಹವನ್ನು ಏರ್ಪಡಿಸಿದ್ದರು. ಅನ್ಯೋನ್ಯ ಪ್ರೇಮದಿಂದ ದಾಂಪತ್ಯವನ್ನು ನಡೆಸುತ್ತಿರಲು, ಮುಂದೆ ಉದಿಸಲಿರುವ ತೀರ್ಥಂಕರನನ್ನು ಗಮದಲ್ಲಿಟ್ಟುಕೊಂಡು ತೀರ್ಥಂಕರನ ಪುಣ್ಯವೆಂಬ ದೂತನಿಂದ ಆಹೂತನಾದ ಇಂದ್ರನು ಬಂದನು; ಅಯೋಧ್ಯೆಯನ್ನು ನಿರ್ಮಿಸಿದನು. ದುಂಬಿ, ಗಿಳಿ, ಕೋಗಿಲೆಗಳೊಡನೆ ಕಲ್ಪತರುಗಳು ಅಯೋಧ್ಯೆಯ ಉಪವನದಲ್ಲಿ ನೆಲಸಿದವು. ದುಂಬಿಗಳ ಮೊರೆತ, ಕೋಗಿಲೆಗಾನ, ಸಾಳ ಕಾನನಗಳು ಕಂಗೊಳಿಸುತ್ತಿದ್ದುವು. ಲಲಿತಲತಾಂಗ ರಮಣಿಯರ ವಿಲಾಸವು ಇಲ್ಲಿಯ ವನವಿಲಾಸದ ಮುಂದೆ ಏನೇನೂ ಇಲ್ಲ. ತಮ್ಮ ನಲ್ಲನನ್ನು ಬಯಸುತ್ತಿರುವ ಪುರುಳಿಗಳು, ಗಳಪುವ ಗಿಳಿಗಳು, ಹಾರಾಡುತ್ತಾ ಮೊರೆಯುವ ಪೆಣ್ದುಂಬಿಗಳು, ಕಲರವಗೈವ ಕೋಗಿಲೆಗಳು ಇವುಗಳ ಸಂಭ್ರಮದಲ್ಲಿ ದೇವದಂಪತಿಗಳ ಸರಸಸಲ್ಲಾಪವೂ ಕೇಳಿಸದಂತಾಯಿತು. ಮಾವಿನ ಮರಗಳಿಂದ ಮಕರಂದವು ಹರಿದು ಕೊಳವಾಯಿತು (vi-೯೨ ರಿಂದ ೯೫). ಆಸಕ್ತಿಯಿಂದ ಹೂವನ್ನು ಸಂಗ್ರಹಿಸುತ್ತಿರುವ ಸುರಯುವತಿಯರ ಪಾಣಿಪಲ್ಲವರಾಗವು ಮುಸುರಿತೋ ಎನ್ನುವಂತೆ ಚಿಗುರಿದ ಅಶೋಕ ವೃಕ್ಷಗಳಿಂದ ನಂದನವು ಶೋಭಿಸಿತು (vi-೧೦೨), ಇತ್ಯಾದಿ. ಈ ವರ್ಣನಾಭಾಗಗಳು ಪಂಪನ ಸ್ವಂತ ರಚನೆಯಾಗಿದ್ದು ಆತನ ಪ್ರಕೃತಿ ಪ್ರೇಮಕ್ಕೆ ಉತ್ತಮ ನಿದರ್ಶನಗಳಾಗಿವೆ.

ನಗರ-ನಂದನವನಗಳು ಸೃಷ್ಟಿಯಾದವು. ಕಾಂಚನ ಪ್ರಾಕಾರವು ಧ್ವಜಗೋಪುರಗಳಿಂದ ಶೋಭಿಸುತ್ತಿದ್ದವು. ಸೊಗಯಿಸುವ ಮನೆಗಳಲ್ಲಿ, ನಾನಾಮಣಿಗಳಿಂದ ಖಚಿತವಾದ ಪ್ರಾಸಾದಗಳಲ್ಲಿ ಬಹುವಿಧವಾದ ಚೌಬೀದಿ, ಪೇಟೆ ಮೊದಲಾದುವುಗಳಲ್ಲಿ ಸ್ತುತಿಪಾಠಕರು

ನೆರೆದಿದ್ದರು. ದೇವೇಂದ್ರನಿಂದ ವಿಶೇಷವಾಗಿ ನಿರ್ಮಿಸಲ್ಪಟ್ಟ ಈ ಪಟ್ಟಣ ಶತ್ರುಪಕ್ಷದವರಿಂದ ಜಯಿಸಲಶಕ್ಯವಾದುದರಿಂದ ಅಯೋಧ್ಯೆಯೆಂದು ಕರೆಸಿಕೊಂಡಿತು. ಅನೇಕ ಪತಾಕೆಗಳಿಂದ ಮೆರೆಯುತ್ತಿದ್ದ ಮನೆಯಿದ್ದುದರಿಂದ ಸಾಕೇತವೆನಿಸಿತು. ವಿನೀತರಾದ ಜನರಿಂದ ಕೂಡಿದ್ದರಿಂದ ವಿನೀತೆಯೆಂದಾಯಿತು. ನಾಭಿರಾಜನಿಗೆ ಮರುದೇವಿಯೊಡನೆ ಇಂದ್ರನಿಂದ ಸಾಮ್ರಾಜ್ಯಾಭಿಷೇಕವಾಯಿತು. ಸಮಸ್ತಜನರೂ ನಾಭಿರಾಜನ ಆಜ್ಞಾಧಾರಕರಾದರು.

ಹೀಗಿರುವಲ್ಲಿ, ಕರ್ಮನಿವಾರಣೆಗಾಗಿ ಸರ್ವಾರ್ಥಸಿದ್ಧಿಯಿಂದ ಆದಿನಾಥನು ಭೂಮಿಯಲ್ಲವತರಿಸಲು ಬಗೆದನು.

'ಯುಗವನ್ನು ನಿಪ್ಪೊ್ರಸತುಮಾಡಿ ಕೃತಯುಗವನ್ನಾಗಿ ಮಾಡಲು, ಧರ್ಮವನ್ನು ಜಲಕ್ಕನೆ ಮಾಡಲು' ಸರ್ವಾರ್ಥಸಿದ್ಧೇಶನ ಅವತರಣವಾಯಿತು. ಅಮರಪತಿಯು ಚರಮ ಗರ್ಭಾವತರಣವನ್ನು ತನ್ನ ಅವಧಿಯಿಂದ ಅರಿತು ಇನ್ನೂ ಆರು ತಿಂಗಳು ಇದೆ ಎನ್ನುವಾಗಲೆ ಸುರಪತಿಯ ಆಜ್ಞೆಯ ಮೇರೆಗೆ ಧನದನು ಆದರದಿಂದ, ಸಹಜಭಕ್ತಿಯ ಭರದಿಂದ ಚಿನ್ನದ ಮಳೆಯನ್ನು ಕರೆದನು. ಜಿನಜನನಿಯಾಗಲಿರುವ ಮರುದೇವಿಯ ಸೇವೆಗೆ ದೇವಕನ್ನಿಕೆಯರು ದೇವೇಂದ್ರನಿಂದ ನಿಯೋಜಿತರಾದರು. ಕುಲಶಿಖರಾದಿ ನಿವಾಸಿನಿಯರಾದ ಶ್ರೀ, ಹ್ರೀ, ಧೃತಿ, ಕೀರ್ತಿ, ಬುದ್ಧಿ, ಲಕ್ಷ್ಮಿ ಮೊದಲಾದವರನ್ನು ಅಲಂಕಾರಾದಿ ಸೇವಾ ಶುಶ್ರೂಷೆಗಳಿಗೆ ತೊಡಗಿಸಿದನು. ತಾವರೆಗೂ ಚಂದ್ರನಿಗೂ ತಾಮಸವನ್ನು ಕಳೆದು ಕಾಣಿಕೆಯನ್ನು ಸಲ್ಲಿಸುವವಳಂತೆ ಆ ಸರೋಜಮುಖಿಗೆ (ಚಂದ್ರನಂತಿರುವ) ಕನ್ನಡಿಯನ್ನು ಒಬ್ಬ ಸ್ತ್ರೀ ಹಿಡಿದಳು. ಕಲ್ಪಲತೆಯನ್ನು ಹೋಲುವ ಮತ್ತೋರ್ವ ಅಮರಿ ಉಡುಗೆ-ತೊಡುಗೆಗಳನ್ನು ನೀಢಿದಳು. ಹೀಗೆ ಸುರಸ್ತ್ರೀಯರು ಮರುದೇವಿಯನ್ನು ಸುತ್ತುವರಿದು ಆಕೆಯ ಸಕಲ ಆವಶ್ಯಕತೆಗಳನ್ನು ಪೂರೈಸುತ್ತಿದ್ದರು.

ಸುರಲೋಕದ ಆ ಅಮರಿಯರೆಲ್ಲಿ? ಭೂಲೋಕದ ಜನನಿ ಎಲ್ಲಿ? ಆದರೂ ಸಾಮಾನ್ಯ ಜನನಿಯಲ್ಲದ ಜಿನಜನನಿಗೆ ಆ ಅಮರಿಯರು ತಮ್ಮ ಅಹಮಿಕೆಯನ್ನು ಬಿಟ್ಟು ಊಳಿಗದವರಾಗಿ ನಿಂತರು. ಮೈಗಾವಲಿನವರಾಗಿ, ದ್ವಾರಪಾಲಿಕೆಯರಾಗಿ, ಪ್ರಹರಿಯರಾಗಿ, ಗಾಯಕಿಯರಾಗಿ, ಹೀಗೆ ನಾನಾರೂಪಗಳಲ್ಲಿ ಅವರು ಅಮಿತವಾದ ಸೇವೆಯನ್ನು ಸಲ್ಲಿಸಿದರು. ಅವರ ಗೇಯದ ಪರಿಯನ್ನು ಕವಿ ಹೀಗೆ ವರ್ಣಿಸಿದ್ದಾನೆ :

ಜೇನ ಮೞೆ ಕೊಂಡುದಮರ್ದಿನ | ಸೋನೆಯೆ ಸುರಿದತ್ತು ರಸದ ತೊಱೆ ಪರಿದತ್ತೆಂ
ಬೀ ನುಡಿಯನೆ ನುಡಿಯಿಸಿದ | ತ್ತಾ ನಾಕಸ್ತ್ರೀಯ ಗೇಯಮಾಸ್ಥಾಯಿಕೆಯೊಳ್

(ಆದಿಪು.vii-೧೭)

ಆ ಸ್ವರ್ಗದ ಸ್ತ್ರೀಯು ಆಸ್ಥಾನದಲ್ಲಿ ಹಾಡಿದ ಹಾಡನ್ನು ಸಭಾಸದರು ಕೇಳಿ 'ಜೇನಿನ ಮಳೆಯಾಯಿತು, ಅಮೃತದ ಸೋನೆಯು ಸುರಿಯಿತು, ರಸದ ತೊರೆಯು ಹರಿಯಿತು!' ಎಂದು ಹೊಗಳಿದರು.

ಜಿನಜನನಿಯ ಮುಂದೆ ಅಮರಿಯರ ಗಾಯನದ ಶೋಭೆ ಅಪೂರ್ವವಾಗಿರಬೇಡವೆ? ದೇವತೆಗಳಿಗೆ ಜಿನಜನನಿಯ ಸೇವೆ ಮಾಡುವಲ್ಲಿ ಸಡಗರವೋ ಸಡಗರ. ನಾಭಿರಾಜನ

ಭವನವು 'ಮದನಾಮೃತಮಯವಾಗಿಯೂ' 'ಶೃಂಗಾರಮಯವಾಗಿಯೂ' 'ಸೌಕುಮಾರ್ಯಮಯವಾಗಿಯೂ' 'ಅನುರಾಗಮಯವಾಗಿಯೂ' 'ಆಶ್ಚರ್ಯಮಯವಾಗಿಯೂ' ಕಂಗೊಳಿಸುತ್ತಿತ್ತು. ಸುರಮಹತ್ತರಿಕೆಯರು ಸಡಗರದಿಂದ ಕೆಲಸಗಳನ್ನು ನಿರ್ವಹಿಸುತ್ತಿದ್ದರು. ಈ ನಿರೂಪಣೆಯಲ್ಲಿ ಪಂಪ ತೋರಿರುವ ನಾಟಕೀಯ ಧಾಟಿ ಮನೋಹರವಾದುದು. 'ನಿಪುಣಿಕೆ, ನೀನು ಜಿನಜನನಿಯ ಸೆಜ್ಜೆಯನ್ನು ಉಜ್ವಲಗೊಳಿಸು'; 'ಚಂದ್ರಿಕೆ, ಚಂದ್ರಕಾಂತ ಜಲಪಾತ್ರೆಯಲ್ಲಿ ನೀರನ್ನು ತುಂಬಿಸು'—ಹೀಗೆ ಸಡಗರಗೊಂಡು ದೇವಸ್ತ್ರೀಯರು ಕೆಲಸವನ್ನು ನಿರ್ವಹಿಸುತ್ತಿದ್ದರು. ಪಂಪನು ಈ ಭಾಗದಲ್ಲಿ ಪ್ರತಿಯೊಂದು ಅಂಶವನ್ನೂ ಅತ್ಯಂತ ಉತ್ಸುಕತೆಯಿಂದ ಚಿತ್ರೀಕರಿಸಿರುವ ರೀತಿ ಕಣ್ಣಿಗೆ ಕಟ್ಟುವಂತಿದೆ.

ಸ್ವತಃ ದೇವಿಯರೇ ನಿಂತು ಗರ್ಭಶೋಧನೆಯನ್ನು ನಡೆಸಿದಾಗ ಮರುದೇವಿಯ 'ನಯಂ ಬೇಱ್'; 'ಬೆಡಂಗು ಬೇಱ್'; 'ಪೊಳೆವಂಗಚ್ಛಾಯೆಯುಂ ಬೇಱ್' ಎಂಬಂತೆ ಆಕೆಯ ದೇಹ ಪವಿತ್ರವಾದಂತಾಯಿತು. 'ವಿಶುದ್ಧಮಪ್ಪಪಳಿಕಿಂ ಪೆಣ್ಮಾಡಿದಂತೆ' ಅವಳು ಶೋಭಿಸಿದಳು (ಆದಿಪು. vii-೨೩).

ನಾಭಿರಾಜನ ಮಂದಿರಾಂಗಣದಲ್ಲಿ ಕುಬೇರನು ಇಂದ್ರನ ಆಜ್ಞೆಯ ಮೇರೆಗೆ ಸುವರ್ಣ ಪಂಚರತ್ನಗಳ ಮಳೆಯನ್ನು ಕರೆಯುವಾಗ ಕಾಮನ ಬಿಲ್ಲುಗಳು ಜಾರಿ ಭೂಮಿಗೆ ಬಿದ್ದು ಬೇರು ಬಿಟ್ಟಂತೆ, ಮಿಂಚಿನ ಬಳ್ಳಿ ಕವಲಿಟ್ಟಂತೆ, ಆಕಾಶಭೂಮಿಗಳು ಗೋಚರಿಸಿದವು. ಹಿರಣ್ಯಗರ್ಭನ ಗರ್ಭಾವತರಣ ಮಂಗಳ ಮುಹೂರ್ತದಲ್ಲಿ ಭೂಮಿಯು ರತ್ನಗರ್ಭಿತವಾಯಿತು. ದೇವತೆಗಳು ಹರ್ಷಗರ್ಭಿತರಾದರು (ಆದಿಪು. vii-೨೪ ರಿಂದ ೨೬).

ಮತ್ತೊಂದು ದಿನ ಮರುದೇವಿಯು ಹದಿನಾರು ಶುಭಸ್ವಪ್ನಗಳನ್ನು ಕಂಡು, ಆ ಸ್ವಪ್ನ ಫಲಗಳನ್ನು ನಾಭಿರಾಜನಿಂದ ಅರಿತಳು (ಈ ಭಾಗದಲ್ಲಿ ರಗಳೆಯೆಂಬ ಛಂದಸ್ಸು ಕನ್ನಡದಲ್ಲೆ ಮೊಟ್ಟಮೊದಲು ಕಾಣಿಸಿಕೊಂಡಿದೆ). ತೀರ್ಥಂಕರನಾಗುವ ಪುಣ್ಯಜೀವಿ ಮಗನೊಬ್ಬನು ಸ್ವರ್ಗದಿಂದ ಬಂದು ತನ್ನ ಉದರದಲ್ಲಿ ಜನಿಸುವನೆಂದು ಅರಿತ ಆಕೆ ಆನಂದಪುಳಕಿತಳಾದಳು. ಆ ಜ್ಞಾನನಿಧಿ ಗರ್ಭಕ್ಕೆ ಅವತರಿಸಿದ ರೀತಿ ಅತ್ಯಪೂರ್ವವಾದುದು:

ಜ್ಞಾನಮಯಂ ತೇಜೋನಿಧಿ | ತಾನಿರ್ದ್ದುಂ ತಾಯಗರ್ಭದೊಳ್ ಪೀಡೆಯನಂ
ತೇನಂ ಮಾಡಿದನಿಲ್ಲ ಕೃ | ಶಾನುವ ನೆಟಿಲಳುರದಂತೆವೋಲ್ ಕನ್ನಡಿಯಂ
(ಆದಿಪು. vii-೩೨)

ಬೆಂಕಿಯ ನೆರಳು ಕನ್ನಡಿಯನ್ನು ಸುಡದಿರುವಂತೆ ಜ್ಞಾನಸ್ವರೂಪನಾದ ಈ ತೇಜೋನಿಧಿಯು ತಾಯಗರ್ಭದಲ್ಲಿದ್ದರೂ ಅವಳಿಗೆ ಪೀಡೆಯನ್ನೇನೂ ಮಾಡಲಿಲ್ಲ.

ಹೀಗೆ ಗರ್ಭಕ್ಕವತರಿಸಿದಾಗ ಗರ್ಭಾವತರಣವನ್ನು ಆಷಾಢ ಬಹುಳ ಬಿದಿಗೆಯುತ್ತರಾಷಾಢಾ ನಕ್ಷತ್ರದ ಬೆಳಗಿನ ಜಾವದಲ್ಲಿ ಚತುರ್ನಿಕಾಯ ಅಮರರೊಂದಿಗೆ ದೇವೇಂದ್ರನು ಪ್ರಥಮ ಕಲ್ಯಾಣವನ್ನು ಮಾಡಿದನು. ಈ ತೇಜೋಮಯನನ್ನು ಧರಿಸಿದ ತಾಯಿಯ ಗರ್ಭವು ಅಸಾಮಾನ್ಯವಾದುದೆಂಬುದನ್ನು ಕವಿ ಉತ್ಕೃಷ್ಟ ರೀತಿಯ ಉಪಮಾಲಂಕಾರದ ಮೂಲಕ ವ್ಯಕ್ತಪಡಿಸಿದ್ದಾನೆ : ಸ್ಫಟಿಕದ ಕೊಡದಲ್ಲಿ ದೀಪದ ಕುಡಿಯು ಬೆಳಗುವಂತೆ, ಆ ಶುದ್ಧವಾದ ಗರ್ಭಗೃಹದಲ್ಲಿ ತೇಜೋನಿಧಿಯು ಬೆಳಗಿದನು (vii-೩೩).

ಪೂರ್ವಪುರಾಣದಲ್ಲಿ ನಾಭಿರಾಜ ಮತ್ತು ಮರುದೇವಿಯರ ಸೌಂದರ್ಯ ವರ್ಣನೆ ಹಾಗೂ ಅವರ ಆದರ್ಶ ದಾಂಪತ್ಯವು ವಿಸ್ತಾರವಾಗಿ ವರ್ಣಿತವಾಗಿದೆ. ೧೨ನೆಯ ಪರ್ವದ ಮೊದಲ ೬೮ ಶ್ಲೋಕಗಳು ಅದಕ್ಕಾಗಿಯೇ ಮೀಸಲಾಗಿವೆ. ಗುಣದಲ್ಲಿ ತೇಜಸ್ವಿಯಾಗಿ ಸೂರ್ಯನಂತೆ ಪ್ರಕಾಶಿಸುವವನೂ ಚಂದ್ರನಂತೆ ಸಮಸ್ತ ಕಲೆಗಳುಳ್ಳುವನೂ ಆದ ನಾಭಿ ರಾಜನಿಗೆ ಮರುದೇವಿಯು ಪತ್ನಿಯಾಗಿದ್ದಳು. 'ಮರುದೇವಿಯು ಸ್ವರ್ಗಸ್ತ್ರೀಯರ ರೂಪದ ಸಾರವನ್ನು ರಾಶಿಮಾಡಿ ನಿರ್ಮಿಸಲ್ಪಟ್ಟವಳಂತೆ ಇದ್ದಳು' ಎಂಬ ಮಾತನ್ನು ಪಂಪನು ಈ ರೀತಿ ಭಾವ ತುಂಬಿ ಹೇಳಿದ್ದಾನೆ : ಸ್ವರ್ಗಸ್ತ್ರೀರೂಪ ಸರ್ವಸ್ವ ಮುಚ್ಚಿತ್ಯೇವ ವಿನಿರ್ಮಿತಾ.

ಮರುದೇವಿಯೆಂಬಳಂಬರ | ಚರನರಸುರಯುವತಿರೂಪಸರ್ವಸ್ವಮನಾ
ದರದೆ ಬಿದಿ ನೆಱಪಿ ಲಲನಾ | ಸ್ವರೂಪದಿಂ ನಿಱಿಸಿತೆನ್ನದಿನ್ನೇವೊಗೞ್ವೆಂ (vi-೮೦)

ಅವಳು ಮರುದೇವಿ, ಅವಳನ್ನು ಬ್ರಹ್ಮನು ವಿದ್ಯಾಧರ ಸ್ತ್ರೀಯರಲ್ಲಿಯೂ ಸುರನರ ಯುವತಿಯರಲ್ಲಿಯೂ ರೂಪಸರ್ವಸ್ವವನ್ನು ಆದರದಿಂದ ಒಟ್ಟುಗೂಡಿಸಿ ಸ್ತ್ರೀರೂಪ ದಿಂದಿರಿಸಿದನು.

ಪೂರ್ವಪುರಾಣದಲ್ಲಿ ಬಹುತೇಕವಾಗಿ ವರ್ಣನೆ ಪುರಾಣಶೈಲಿಯದಾಗಿದೆ. ಉದಾ ಹರಣೆಗೆ : ಕೃಶಾಂಗಿಯೂ ಪಕ್ವವಾದ ತೊಂಡೆ ಹಣ್ಣಿನ ತುಟಿಯುಳ್ಳವಳೂ ಸುಂದರವಾದ ಹುಬ್ಬುಗಳುಳ್ಳವಳೂ ಮನೋಹರವಾದ ಸ್ತನಗಳುಳ್ಳವಳೂ ಆದ ಆ ಮರುದೇವಿಯು ಲೋಕವನ್ನು ಜಯಿಸುವುದಕ್ಕೋಸ್ಕರ ಮನ್ಮಥನಿಂದ ತೋರಿಸಲ್ಪಟ್ಟ ಪತಾಕೆಯಂತಿದ್ದಳು ಈ ಮೊದಲಾದ ವರ್ಣನಾವೈಖರಿಯೇ ಇಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಆದರೆ ಪಂಪನ ಪರಿ ಬೇರೆ. ಈತನ ಕಲ್ಪನಾ ವಿಲಾಸಕ್ಕೆ ಈ ಪದ್ಯ ಸಾಕ್ಷಿಯಾಗಿದೆ :

ಮೊಗಮಂ ತಾವರೆ ಕಣ್ಣನುತ್ಪಲದಳಂ ಧಮ್ಮಿಲ್ಲಮಂ ಸೋಗೆ ಸೆ
ಳ್ಳುಗುರಂ ಕೇದಗೆ ಪುರ್ವನಂಗಜನ ಬಿಲ್ ದಂತಾಳಿಯಂ ಮುತ್ತು ಕಯ್
ಮುಗಿದಾರಾಧಿಸಿ ಪೋಲ್ತುವೆನ್ನದೆ ಸರೋಜಾತಾದಿ ನಿಸ್ಸಾರ ವ
ಸ್ತುಗಳೊಳ್ ಪೋಲಿಸುವಂತುಟೇಮ್ಮರುಳನೇ ರೂಪಂ ವಿಚಿತ್ರಾಂಗಿಯಾ (vi-೮೫)

ಮುಖವನ್ನು ತಾವರೆಯೂ ಕಣ್ಣನ್ನು ಉತ್ಪಲದಳವೂ ಕೇಶರಾಶಿಯನ್ನು ನವಿಲು ಗರಿಯೂ ಸೆಳ್ಳುಗುರನ್ನು ಕೇದಗೆಯೂ ಹುಬ್ಬುಗಳನ್ನು ಕಾಮನಬಿಲ್ಲೂ ಹಲ್ಲುಗಳ ಸಾಲನ್ನು ಮುತ್ತೂ ಕೈಕಟ್ಟಿ ಆರಾಧಿಸಿ ಹೋಲಿದುವು. ಈ ವಿಚಿತ್ರಾಂಗಿಯ ರೂಪವನ್ನು ಕಮಲಾದಿ ನಿಸ್ಸಾರವಸ್ತುಗಳೊಡನೆ ಹೋಲಿಸುವಷ್ಟು ಮರುಳ ನಾನೆಂದಿಗೂ ಅಲ್ಲ!

'ಮರುದೇವಿಯು ಶ್ರುತದೇವಿಯಂತೆ ಪವಿತ್ರಳೂ ಶಾಸ್ತ್ರವನ್ನು ಅಭ್ಯಾಸಮಾಡದೆಯೇ ಪಂಡಿತಳೂ ಆಗಿದ್ದಳು.' ಪೂರ್ವಪುರಾಣದಲ್ಲಿ ಕಂಡುಬರುವ ಈ ಮೊದಲಾದ ಮರು ದೇವಿಯ ವಿಶೇಷಗುಣಗಳ ವರ್ಣನೆಯನ್ನು ಪಂಪ ಕೈಬಿಟ್ಟಿದ್ದಾನೆ. ಆದಿಪುರಾಣದಲ್ಲಿ ಅವ ರಿಬ್ಬರೂ ಅನ್ಯೋನ್ಯ ಪ್ರೇಮದಿಂದ ದೇವದಂಪತಿಗಳಂತಿದ್ದರೆಂದು ಸೂಚ್ಯವಾಗಿ ವರ್ಣಿ ಸುವ ಜಾಣ್ಮೆಯನ್ನು ಪಂಪನು ತೋರಿದ್ದರೆ, ಜಿನಸೇನರು ಅವರ ಅನ್ಯೋನ್ಯ ದಾಂಪತ್ಯದ ರೀತಿಯ ವಿವರಣೆಯನ್ನು ನಿರೂಪಣಾ ಶೈಲಿಯಲ್ಲಿ ನೀಡಿದ್ದಾರೆ. ಉದಾಹರಣೆಗೆ, ನಾಭಿ ರಾಜನಿಗೆ ಪ್ರಾಣಕ್ಕಿಂತಲೂ ಹೆಚ್ಚುಪ್ರಿಯಳಾದ ಮರುದೇವಿಯು ದೇವೇಂದ್ರನಿಗೆ ಶಚೀ ದೇವಿಯಂತೆ ಬಹಳ ಪ್ರೀತಿಪಾತ್ರಳಾಗಿದ್ದಳು. ಭಾಗ್ಯವಂತನಾದ ಆ ನಾಭಿರಾಜನು ಪ್ರಕಾಶ

ಮಾನವಾದ ವಸ್ತ್ರದಿಂದಲೂ ಆಭರಣಗಳಿಂದಲೂ ಅಲಂಕೃತಳಾದ ಮರುದೇವಿಯಿಂದ ಆಲಂಗಿಸಲ್ಪಟ್ಟ ಶರೀರವುಳ್ಳವನಾಗಿ ಕಲ್ಪಲತೆಯು ಹಬ್ಬಿಕೊಂಡಿರುವ ಕಲ್ಪವೃಕ್ಷದಂತೆ ಶೋಭಿಸಿದನು (xii- ೬೫, ೬೬).

ಪೂರ್ವಪುರಾಣದಲ್ಲಿ ಬರುವ ನಗರ ನಿರ್ಮಾಣದ ವರ್ಣನೆ ಆದಿಪುರಾಣದಲ್ಲಿ ಬಂದಿದ್ದರೂ ಪಂಪನು ಈ ಸಂದರ್ಭದಲ್ಲಿ ಪ್ರಕೃತಿಪ್ರೇಮದಲ್ಲಿ ತನ್ಮಯನಾಗಿರುವುದನ್ನು ಗಮನಿಸಬಹುದಾಗಿದೆ. ಕೋಗಿಲೆ, ದುಂಬಿ, ಇಮ್ಮಾವು, ಬೆಟ್ಟ ಗುಡ್ಡಗಳಿಲ್ಲದೆ ಪಟ್ಟಣವು ಸುಂದರ ಪಟ್ಟಣವಾದೀತೇ? ಎಂಬ ಅಭಿಪ್ರಾಯದ ಮೇರೆಗೆ ತನ್ನ ರಸಿಕತೆಯನ್ನು, ಭಾವುಕತೆಯನ್ನು ಪ್ರದರ್ಶಿಸಿ ಹೀಗೆ ವರ್ಣಿಸಿದ್ದಾನೆ :

ತುಂಬಿ ಗಿಳಿ ಪುರುಳಿ ಕೋಗಿಲೆ | ಯೆಂಬಿವುವೆರಸಖಿಲತರುಗಳಿಂದ್ರನ ಬೆಸದಿಂ
ದಂ ಬಂದುವೆಂದೊಡುಪವನ | ಮಂ ಬಣ್ಣಿಸಲೆನಗೆ ನಾಡೆಯುಂ ಕುಱಿಪಲ್ತೇ
ಎಳಸುವ ಪುರುಳಿಯ ಗಳಪುವ | ಗಿಳಿಯ ತೆಱಿಂದಿರಿದು ಮೊರೆವ ಪೆಣ್ದುಂಬಿಯ ಬಿ
ಚ್ಚಳಿಪ ಪರಭೃತದ ಕಳಕಳ | ದೊಳೆ ಮಸುಳ್ದುದು ದಿವಿಜಯುಗಲ ಕಳಕಳನಿನದಂ

(ಆದಿಪು. vi ೯೨ ರಿಂದ ೯೪)

ದುಂಬಿ, ಗಿಳಿ, ಹೆಣ್ಣುಗಿಳಿ, ಕೋಗಿಲೆಗಳಿಂದ ಕೂಡಿದ ದೇವವೃಕ್ಷಗಳೆಲ್ಲವೂ ಇಂದ್ರನ ಆಜ್ಞೆಯಿಂದ ಅಲ್ಲಿಗೆ ಬಂದುವೆಂದಮೇಲೆ ಆ ಉದ್ಯಾನವನ್ನು ವರ್ಣಿಸಲು ನನಗೆ ಪರಮಾವಧಿಯಾಗಲಿಲ್ಲವೇ? ತನ್ನ ನಲ್ಲನನ್ನು ಬಯಸುತ್ತಿರುವ ಹೆಣ್ಣು ಗಿಳಿ, ಹರಟುವ ಗಂಡುಗಿಳಿ, ಆನಂದದಿಂದ ಹಾರಾಡುತ್ತಿರುವ ಹೆಣ್ಣು ದುಂಬಿ, ಕೋಗಿಲೆಗಳ ಕುಹೂರವ–ಇವುಗಳ ಕಲಕಲ ಧ್ವನಿಗಳಲ್ಲಿ ದಿವಿಜ ಮಿಥುನದ ಕಲಕಲಧ್ವನಿಯು ಅಡಗಿಹೋಯಿತು.

ಈ ಮೊದಲಾದ ಪದ್ಯಗಳು ಪಂಪನ ಸ್ವಯಂಪ್ರತಿಭಾ ಸೃಷ್ಟಿಯದಾಗಿವೆ.

ಗರ್ಭಶೋಧನಾ ಸಂದರ್ಭದಲ್ಲಿ ದೇವತೆಗಳು ನಡೆಸಿದ ವಿವಿಧ ಉಪಚಾರಗಳು ಪೂರ್ವಪುರಾಣದಲ್ಲಿ ವಿಸ್ತೃತವಾಗಿ ೧೧೮ ಶ್ಲೋಕಗಳಲ್ಲಿ (xii ೧೬೬-೨೮೫) ವರ್ಣಿತವಾಗಿವೆ. ಇಲ್ಲಿಯ ಅಭಿಪ್ರಾಯಗಳನ್ನು ಪಂಪನು ಸಂಗ್ರಹಗೊಳಿಸಿದ್ದಾನೆ. ಪೂರ್ವಪುರಾಣದಲ್ಲಿ ಬರುವ ಎಲ್ಲ ವರ್ಣನಾಭಾಗಗಳನ್ನು ಕವಿ ಸ್ವೀಕರಿಸಿಲ್ಲ. ರಸಪ್ರಸಂಗಗಳಂತೆ ಕಂಡುಬರುವ ಕೆಲವು ಭಾಗಗಳನ್ನು ಮಾತ್ರ ಸುಂದರವಾಗಿ ಹಿಡಿದಿಟ್ಟಿದ್ದಾನೆ.

ಮರುದೇವಿಗೆ ತಾಂಬೂಲವನ್ನು ಕೊಡುತ್ತಿದ್ದ ಒಬ್ಬಾಳೊಬ್ಬ ದೇವಸ್ತ್ರೀಯು ತನ್ನ ಕೈಯಲ್ಲಿರುವ ಎಲೆಗಳಿಂದ ಗಿಳಿಯು ಕುಳಿತಿರುವ ಕೊಂಬೆಯುಳ್ಳ ಲತೆಯಂತೆ ಶೋಭಿಸುತ್ತಿದ್ದಳು (ಪೂರ್ವಪು.xii-೧೭೭) ಎಂಬ ಈ ಮಾತನ್ನು ಪಂಪನು ಹೀಗೆ ವರ್ಣಿಸಿದ್ದಾನೆ:

ತಲದೊಳ್ ತಂಬುಲದೆಲೆಗಳ | ಪೊಳೆಪಮರ್ದಿರೆ ದೇವಕನ್ನೆ ಮತ್ತೊರ್ವಳ್ ಕೋ
ಮಲ ಲತೆಯ ನಿಮಿರ್ದ ಕುಡಿಯೊಳ್ | ಗಿಳಿ ಪಾಯ್ದತ್ತೆನಿಸಿ ಸತಿಗೆ ತಂಬುಲಮಿತ್ತಳ್

(vii-೧೨)

ತನ್ನ ಮೃದುವಾದ ಕೈಯಿಂದ ಮರುದೇವಿಗೆ ಆಭರಣಗಳನ್ನು ಕೊಡುತ್ತಿದ್ದ ಒಬ್ಬಳು ದೇವಾಂಗನೆಯು ಕೊಂಬೆಯ ತುದಿಯಲ್ಲಿ ಆಭರಣಗಳನ್ನು ಬಿಟ್ಟಿರುವ ಕಲ್ಪಲತೆಯಂತೆ ಶೋಭಿಸುತ್ತಿದ್ದಳು.

ಪೂರ್ವಪುರಾಣದ ಭಾವನೆಗಳು ಅನೇಕ ಎಡೆಗಳಲ್ಲಿ ಪಂಪನಲ್ಲಿ ಸ್ವಲ್ಪ ವ್ಯತ್ಯಾಸ

ಗೊಂಡು ಪಡಿಮೂಡಿರುವುದನ್ನು ಗಮನಿಸಬಹುದಾಗಿದೆ.

ಕೆಲವೆಡೆ ಪಂಪನ ವರ್ಣನಾವಿಧಾನದಲ್ಲಿ ಮೂಲದಲ್ಲಿ ಕಾಣದ ರಸದ ತೊರೆ ಹರಿದಿರುವುದು ಕಂಡುಬರುತ್ತದೆ. ಉದಾಹರಣೆಗೆ, ಅಪ್ಸರೆಯರ ಸಂಗೀತ-ವೀಣಾ ವಿನೋದಗಳ ವರ್ಣನೆಯಲ್ಲಿ ಅದು ಗೋಚರವಾಗುತ್ತದೆ. ಅಪ್ಸರೆಯರು ಮರುದೇವಿಯ ಮುಂದೆ ಹಾಡಿದಾಗ ಜೇನು ಕರೆದಂತಾಯಿತು; ಅಮೃತದ ಸೋನೆ ಬಂದಂತಾಯಿತು; ರಸದ ತೊರೆ ಹರಿದಂತಾಯಿತು (vii-೧೨). ಅಪ್ಸರೆಯು ವೀಣೆಯನ್ನು ನುಡಿಸುತ್ತಿದ್ದಾಗ ಆಕೆಯ ಅಂಗೈಯ ಕೆಂಪು ಅಪ್ಪಳಿಸಲು ವೀಣೆಯ ದಂಡಿಗೆಯೇ ಚಿಗುರಿದಂತಾಗಿ ಕಂಗೊಳಿಸಿತು (vii-೧೭). ಈ ಮೊದಲಾದ ಭಾಗಗಳಲ್ಲಿ ಪಂಪನ ಕಲ್ಪನಾಶಕ್ತಿಯ ಸ್ವೋಪಜ್ಞತೆ ಕಂಡುಬರುತ್ತದೆ.

ಪೂರ್ವಪುರಾಣದಲ್ಲಿ ಬರುವ ಚಿತ್ರಕವಿತೆಗಳ ವಿವರ ಆದಿಪುರಾಣದಲ್ಲಿ ಬರುವುದಿಲ್ಲ. ದೇವಕನ್ಯೆಯರು ಮರುದೇವಿಯನ್ನು ಉಲ್ಲಾಸದಿಂದಿರಿಸಲು ಚಿತ್ರ ವಿಚಿತ್ರವಾದ ಪ್ರಹೇಳಿಕೆಗಳ ನಿರೂಪಣೆಯನ್ನು ಪಂಪನು ಕೈಬಿಟ್ಟಿದ್ದಾನೆ. ಶ್ಲೇಷಾರ್ಥದೊಂದಿಗೆ ಕೂಡಿದ ಮಾತಿನ ಚತುರತೆ ಪೂರ್ವಪುರಾಣದಲ್ಲಿ ಬಂದಿರುವುದಕ್ಕೆ ಉದಾಹರಣೆ : ಮಧುರಭಾಷಿಣಿಯೇ! ಸರಳವೂ ಉನ್ನತವೂ ಉತ್ತಮವಾದ ನೆರಳುಳ್ಳದೂ ಆದ ಮರಗಳ ಗುಂಪು ಯಾವುದೆಂದು ಜನರು ಹೇಳುತ್ತಾರೆ? ನಿನ್ನ ಶರೀರದಲ್ಲಿ ಸುಂದರವಾದುದು ಯಾವುದು? ಎಂಬ ಸಖಿಯರ ಪ್ರಶ್ನೆಗೆ ಮರುದೇವಿಯ ಉತ್ತರ—"ಸಾಲಕಾನನ" (ಸಾಲವೃಕ್ಷಗಳ ಅರಣ್ಯ; ಮುಂಗುರುಳುಗಳುಳ್ಳ ಮುಖ)—ಹೀಗೆ ನಾನಾರೀತಿಯ ವಾಕ್ಚಾತುರ್ಯ ಇಲ್ಲಿ ಕಂಡುಬರುತ್ತದೆ. ಆದರೆ ಪಂಪನು ಈ ವಿಧಾನಕ್ಕೆ ಏಕೋ ಮನಸೋತಿಲ್ಲ.

ಪೂರ್ವಪುರಾಣದಲ್ಲಿ ಬರುವ ಕೆಲವು ಶ್ಲೋಕಗಳನ್ನು ಕವಿ ಕನ್ನಡಕ್ಕೆ ಸೊಗಸಾಗಿ ತಂದಿದ್ದಾನೆ. ಉದಾಹರಣೆಗೆ :

ಸ ಮಾತುರುದರಸ್ಥೋಽಪಿ ನಾಸ್ಯಾಃ ಪೀಡಾಮಜೀಜನತ್ |
ದರ್ಪಣಸ್ಥೋಽಪಿ ಕಿಂ ವಹ್ನಿರ್ದಹೇತ್ತಂ ಪ್ರತಿಬಿಂಬಿತಃ || (ಪೂರ್ವಪು. xii-೨೭೨)
(ಆದಿಪು. vii-೩೨. ನೋಡಿ ಪು.-೨೩೮)

ಪೂರ್ವಪುರಾಣದಿಂದ ನೇರವಾಗಿ ಶ್ಲೋಕಗಳನ್ನು ತೆಗೆದುಕೊಂಡು ಬಣ್ಣಿಸುವಾಗ, ಕನ್ನಡಿಸುವಾಗ ಪಂಪನ ಉತ್ಸಾಹ ಹೆಚ್ಚುತ್ತದೆ. ಅಲ್ಲಿಯ ಭಾವವು ಬಣ್ಣಗೆಡದಂತೆ ಮೂಲಕ್ಕೆ ಧಕ್ಕೆ ತರದಂತೆ ಕೆಲವೆಡೆ ಅಧಿಕವಾಗಿ ಮೆರುಗನ್ನಿತ್ತೇ ವರ್ಣಿಸುವ ವಿಧಾನ ಪಂಪನದು.

## ಉತ್ತರಕಾಲೀನ ಕಾವ್ಯಗಳು

**ಚಾವುಂಡರಾಯ ಪುರಾಣ :** ಭಾವೀ ತೀರ್ಥಂಕರನು ನಾಭಿರಾಜ ಮರುದೇವಿಯರಿಗೆ ಹುಟ್ಟುವನೆಂದರಿತ ದೇವೇಂದ್ರನು ಅಯೋಧ್ಯೆಯೆಂಬ ಪಟ್ಟಣವನ್ನು ಪಡೆದು, ಅದಕ್ಕೆ ಸಾಕೇತ-ವಿನೀತವೆಂದೂ ಭಾರೀ ಸುಕೌಶಲವಾದುದರಿಂದ ಸುಕೌಶಲವೆಂದೂ ಹೆಸರುಗಳನ್ನು ಇಟ್ಟನು. ನಾಭಿರಾಜ-ಮರುದೇವಿಯರಿಗೆ ಪಟ್ಟವನ್ನು ಕಟ್ಟಿ ಆರು ತಿಂಗಳಿರು

ವಾಗಲೇ ಕುಬೇರನಿಗೆ ಅಯೋಧ್ಯೆಯಲ್ಲಿ ವಸುಧಾರೆಯನ್ನು ಸುರಿಯಲು ಹೇಳಿದನು. ಶ್ರೀ, ಹ್ರೀ, ಧೃತಿ, ಕೀರ್ತಿ, ಬುದ್ಧಿ, ಲಕ್ಷ್ಮಿಯರೆಂಬ ಆರು ಮಂದಿ ಪದ್ಮಸರೋವರದ ದೇವತೆಗಳು ಮರುದೇವಿಗೆ ಕ್ರಮವಾಗಿ ಅಂಗವರ್ಧನ, ಧೈರ್ಯವರ್ಧನ, ಸ್ತುತಿವರ್ಧನ, ಪ್ರಸಾದ ವರ್ಧನ, ಸೌಭಾಗ್ಯವರ್ಧನವನ್ನು ಉಂಟುಮಾಡಿದರು. ಪಂಪನಲ್ಲಿ ಪ್ರತ್ಯೇಕವಾಗಿ ಈ ದೇವಿಯರ ವರ್ಣನೆ ಬರುವುದಿಲ್ಲ. ಪೂರ್ವಪುರಾಣದಲ್ಲಿ ಈ ದೇವಿಯರು ಮರುದೇವಿಗೆ ಕಾಂತಿ, ಲಜ್ಜೆ, ಧೈರ್ಯ, ಸ್ತುತಿ, ಜ್ಞಾನ, ಸಂಪತ್ತು—ಇವುಗಳನ್ನುಂಟುಮಾಡಿದರೆಂಬ ವರ್ಣನೆ ಬರುತ್ತದೆ (ಪೂರ್ವಪು. xii-೧೭೦-೧೭೧) ಈ ಭಾಗದಲ್ಲಿ ಗೌಣ ವ್ಯತ್ಯಾಸ ದೊಂದಿಗೆ ಚಾವುಂಡರಾಯಪುರಾಣವು ಪೂರ್ವಪುರಾಣವನ್ನು ಅನುಸರಿಸಿರುವುದನ್ನು ಗಮನಿಸಬಹುದು. ಋಚಿಕಾಚಲದ ಎಂಟು ಮಂದಿ ವಿದ್ಯುತ್ಕುಮಾರಿಯರೇ ಮೊದಲಾದ ದೇವಿಯರು ಮರುದೇವಿಗೆ ಪರಿಚಾರಿಕೆಯರಾಗಿದ್ದರು. ತೀರ್ಥಂಕರ ಕುಮಾರನು ಜನಿಸುವುದರಿಂದ ಗರ್ಭಶೋಧನಾದಿಗಳಾದ ವನಿತಾಗೂಢ ವ್ಯಾಪಾರಗಳನ್ನು ನಡೆಸಿದ ಸಂದರ್ಭದಲ್ಲಿ ಈಕೆಗೆ ಹದಿನಾರು ಸ್ವಪ್ನಗಳಾದವು (ಈ ಸಂದರ್ಭದಲ್ಲಿ ಕವಿ ಅರ್ಧ ಸಮವೃತ್ತ ಛಂದಸ್ಸಿನ ಪದ್ಯಗಳನ್ನು ರಚಿಸಿರುವುದರ ಮೂಲಕ ಒಂದು ಮಹತ್ತ್ವದ ಕಾಣಿಕೆಯನ್ನು ನೀಡಿದ್ದಾನೆ). ಸರ್ವಾರ್ಥ ಸಿದ್ಧೇಶ್ವರನು ಆ ದೇವಿಯ ಗರ್ಭದಲ್ಲಿ ಅವತರಿಸಿದನು.

ಚಾವುಂಡರಾಯ ಪುರಾಣದಲ್ಲಿ ಗರ್ಭಾವತರಣದ ವಿನ್ಯಾಸ ಇಷ್ಟೇ. ಪೂರ್ವಪುರಾಣ-ಆದಿಪುರಾಣಗಳಲ್ಲಿಯ ವಿವರಣೆ-ವರ್ಣನೆಗಳು ಇಲ್ಲಿಲ್ಲ. ಮರುದೇವಿ ನಾಭಿಯರ ವರ್ಣನೆಗಳಾಗಲಿ, ಪಟ್ಟಣದ ವರ್ಣನೆಯಾಗಲಿ, ದೇವಿಯರು ನಿಂತು ಉಪಚರಿಸಿದ ನಾನಾ ಬಗೆಯ ಉಪಚಾರ ವಿನೋದ ಪ್ರಸಂಗಾದಿಗಳಾಗಲಿ ಇಲ್ಲಿ ಬಂದಿಲ್ಲ.

**ಹಸ್ತಿಮಲ್ಲನ ಪೂರ್ವಪುರಾಣ** : ಕವಿ ತನ್ನ ಪೂರ್ವವರ್ತಿ ಕಾವ್ಯಗಳಲ್ಲಿ ದೊರೆಯುವ ಕಥಾಚೌಕಟ್ಟಿನಲ್ಲಿ ಅತ್ಯಂತ ಸಂಗ್ರಹರೂಪವಾಗಿ ಸರಳ ಶೈಲಿಯಲ್ಲಿ ಈ ಭಾಗವನ್ನು ನಿರೂಪಿಸಿದ್ದಾನೆ. ಅಯೋಧ್ಯಾನಗರದ ಅಧೀಶ್ವರ ನಾಭಿರಾಜನು ಸಕಲ ಗುಣೈಶ್ವರ್ಯ ಸಂಪೂರ್ಣನಾಗಿದ್ದನು. ಆತನ ಪಟ್ಟಮಹಾದೇವಿ ರೂಪಿನಲ್ಲಿ ರತಿಯನ್ನು, ವಿದ್ಯೆಯಲ್ಲಿ ಶಾರದೆಯನ್ನು, ಐಶ್ವರ್ಯದಲ್ಲಿ ಲಕ್ಷ್ಮಿಯನ್ನು ಗೆಲ್ಲುವವಳಾಗಿ ಗುಣಸಂಪನ್ನೆಯಾಗಿದ್ದಳು. ಇಬ್ಬರೂ ಸುಖವಾಗಿರಲು ದೇವೇಂದ್ರನು ಸ್ವಾಮಿಯ ಗರ್ಭಾವತರಣ ಕಲ್ಯಾಣವೆಂದರಿತು ಮರುದೇವಿಯನ್ನು ಪೂಜಿಸಿ, ಆರು ತಿಂಗಳವರೆಗೆ ರತ್ನವೃಷ್ಟಿಮಾಡಿ, ಅಲಂಕಾರಾದಿ ಕ್ರಿಯೆಗಳಿಗೆ ದೇವಿಯರನ್ನು ನೇಮಿಸಿದನು. ಒಮ್ಮೆ ಮರುದೇವಿ ನಾಲ್ನೀರಸ್ನಾನವನ್ನು ಮಾಡಿ ಸುಖನಿದ್ರೆಯಿಂದಿರುವಾಗ ಗಜೇಂದ್ರ, ವೃಷಭ, ಸಿಂಹ, ಕಮಲಾಲಯ, ಸುರ ವಿಮಾನ, ರತ್ನರಾಶಿ, ಮಾಲೆ, ಮಹಾಮೇರು ಎಂಬ ಶುಭಸ್ವಪ್ನಗಳನ್ನು ಕಂಡು ಎಚ್ಚರಗೊಂಡು ಸ್ವಪ್ನ ಫಲಿತಾಂಶವನ್ನು ತಿಳಿದುಕೊಂಡಳು. ಸರ್ವಾರ್ಥಸಿದ್ಧಿಜನು ಗರ್ಭಾವತರಣ ಕಲ್ಯಾಣ ಪೂರ್ವಕ ಆಷಾಢ ಬಹುಳ ಬಿದಿಗೆಯುತ್ತರಾಷಾಢ ನಕ್ಷತ್ರದಲ್ಲಿ ಬಂದು ಪ್ರಥಮಕಲ್ಯಾಣಮಂಗಳನಾದನು.

ಪೂರ್ವಪುರಾಣ-ಆದಿಪುರಾಣಗಳಲ್ಲಿ ಬರುವ ನಾಭಿರಾಜ ಮರುದೇವಿಯರ ವರ್ಣನೆಯನ್ನು ಕವಿ ಒಂದೆರಡು ಪದ್ಯಗಳಲ್ಲಿಯಾದರೂ ಹೇಳಲು ಪ್ರಯತ್ನಿಸಿದ್ದಾನೆ. ಚಾಮುಂಡ

ರಾಯನು ಈ ಭಾಗವನ್ನು ಸಂಪೂರ್ಣವಾಗಿ ಕೈಬಿಟ್ಟಿದ್ದಾನೆ. ಹಾಗೆಯೇ ಪೂರ್ವಕವಿಗಳಲ್ಲಿ ಕಂಡುಬರುವ ಪುರನಿರ್ಮಾಣದ ಬಗೆಗೆ ಹಾಗೂ ಅದರ ವಿವಿಧ ನಾಮಾವಳಿಗಳ ಬಗೆಗೆ ಇಲ್ಲಿ ಉಲ್ಲೇಖವಿಲ್ಲ. ಎಲ್ಲಕ್ಕಿಂತ ಗಮನಾರ್ಹವಾದ ವಿಚಾರವೆಂದರೆ ಕವಿ ಇಲ್ಲಿ ಕೇವಲ ಎಂಟು ಕನಸುಗಳ ಬಗೆಗೆ ಮಾತ್ರ ಹೇಳಿರುವುದು. ಜೈನಪುರಾಣಗಳಲ್ಲಿ ಜಿನಮಾತೆ ಕಾಣುವ ೧೬ ಸ್ವಪ್ನಗಳು ಆಗಮಿಕವಾದ ಅಂಶವಾಗಿದ್ದು, ಅದು ಇಲ್ಲಿ ಸಂಪೂರ್ಣವಾಗಿ ನಿರೂಪಿತ ವಾಗದಿರುವುದು ಆಶ್ಚರ್ಯಕರ ಸಂಗತಿಯಾಗಿದೆ.

**ಪುಣ್ಯಾಸ್ರವದ ಆದೀಶ್ವರರ ಕಥೆ :** ವರ್ಣನಾ ವಿವರಣೆಯ ವಿನ್ಯಾಸಕ್ಕೆ ಕೈಹಾಕದೆ ಕವಿ ಈ ಸಂದರ್ಭವನ್ನು ಅಡಕವಾಗಿಯೇ ಹೇಳಿದ್ದಾನೆ. ಚಾವುಂಡರಾಯಪುರಾಣ, ಹಸ್ತಿಮಲ್ಲನ ಪೂರ್ವಪುರಾಣಗಳಿಗಿಂತ ಸ್ವಲ್ಪ ವಿಸ್ತೃತ ವರ್ಣನೆ ಇಲ್ಲಿ ಕಂಡುಬರುತ್ತದೆ. ಅಹಮಿಂದ್ರನ ಆಯುಸ್ಸು ಇನ್ನೂ ಆರು ತಿಂಗಳಿದೆ ಎನ್ನುವಾಗ ದೇವತೆಗಳ ಆಸನ ಕಂಪನವಾಯಿತು; ಶಿರಸ್ಸಿನ ಮುಕುಟಗಳು ಎರಗಿದವು; ಹೀಗಾಗಲು ಕಾರಣವನ್ನು ದೇವತೆಗಳು ಅವಧಿ ಯಿಂದರಿತರು. ಮರುದೇವಿಯ ಗರ್ಭದಲ್ಲಿ ತೀರ್ಥಂಕರನಾಗುವ ಜೀವವು ಉದಯಿಸು ವುದೆಂದು ತಿಳಿದರು. ಈ ಅಂಶಗಳು ಇತರೆಡೆಗಳಲ್ಲಿಯೂ ಕಂಡುಬರುವ ಅಂಶಗಳೇ. ದೇವೇಂದ್ರನು ವಿನೀತಾಖಂಡದ ವಿಷಯದ ಮಧ್ಯದಲ್ಲಿ ರತ್ನರಂಜಿತವಾದ ಹೇಮಮಯ ವಾದ ಗೋಪುರ, ಚೈತ್ಯ, ಹರ್ಮ್ಯಾದಿಗಳನ್ನು ಕಟ್ಟಿಸಿ ಪುರವನ್ನು ರಚಿಸಿ ಅದಕ್ಕೆ ಅಯೋಧ್ಯೆ ಯೆಂದು ಹೆಸರನ್ನಿಟ್ಟನು (ಉಳಿದ ಹೆಸರುಗಳ ಉಲ್ಲೇಖ ಇಲ್ಲಿ ಬರುವುದಿಲ್ಲ). ದೇವಿ ಯರು ಮರುದೇವಿಯ ಶುಶ್ರೂಷೆಗೆ ನಿಂತರು. ಕುಬೇರನಿಂದ ಮೂರು ಕಾಲಗಳಲ್ಲಿಯೂ ಪ್ರತಿನಿತ್ಯ ಪಂಚಾಶ್ಚರ್ಯಗಳನ್ನು ದೇವೇಂದ್ರನು ಮಾಡಿಸಿದನು (ಇತರೆಡೆಗಳಲ್ಲಿ ರತ್ನ ವೃಷ್ಟಿಯ ವಿಚಾರ ಬರುತ್ತದೆ). ಪದ್ಮಾದಿ ಸರೋವರದ ನಿವಾಸಿನಿಯರಾದ ಶ್ರೀ, ಹ್ರೀ, ಧೃತಿ, ಕೀರ್ತಿ, ಬುದ್ಧಿ, ಲಕ್ಷ್ಮಿ ಹಾಗೂ ಇತರ ದೇವಿಯರಿಂದ ನಾನಾರೀತಿಯ ಸೇವೆಗಳು ನಡೆದವು. ಇಲ್ಲಿ ಸೇವೆಯ ಉಲ್ಲೇಖವಿದೆಯೇ ಹೊರತು ಪೂರ್ವಪುರಾಣ-ಆದಿಪುರಾಣ ಗಳಲ್ಲಿ ಬರುವ ವಿವರವಾದ ವ್ಯಾವರ್ಣನೆಯಿಲ್ಲ.

ಒಮ್ಮೆ ಮರುದೇವಿ ಚತುರ್ಥ ಸ್ನಾನವನ್ನು ಮಾಡಿ ಪವಿತ್ರಗಾತ್ರೆಯಾಗಿ

ಚಂದನದಂಪನಿಕ್ಕಿ ಪೊಸಮಲ್ಲಿಗೆಯಂ ಮುಡಿದುಟ್ಟು ಚೀನಮಂ
ಸೌಂದರವೆತ್ತ ಮುತ್ತಿನಸರಂ ಕೊರಳೊಳ್ಳೊಗಸಲ್ಕೆ ಲೀಲೆ
ಬಂದು ಸುಧಾಂಶುವಕ್ತ್ರೆ ಮರುದೇವಿ ತದೀಯ ಮನಃಪ್ರಿಯಂಗೆ ಸಾ
ನಂದಮನಿತ್ತು ತಳ್ಪತಳದೊಳ್ತಳೆದಳ್ಕೃತಿಗೆಟ್ಟ ನಲ್ಮೆಯಂ (X-೧೫)

ಮರುದೇವಿಯು ಅಂದು ಅಲಂಕೃತಳಾಗಿ ನಾಭಿರಾಜನ ಬಳಿಗೆ ಹೋಗುವ ವರ್ಣನೆ ಆದಿಪುರಾಣದಲ್ಲಿಯೂ ಬೇರೆ ವಾಗ್ಧೋರಣೆಯಲ್ಲಿ ಕಂಡುಬರುತ್ತದೆ. ಆದಿಪುರಾಣದಲ್ಲಿ ವರ್ಣನೆ ಹೀಗೆ ಬರುತ್ತದೆ :'ಕಲ್ಪವೃಕ್ಷವು ಕೊಟ್ಟ ದುಕೂಲವನ್ನುಟ್ಟಳು. ಸಮಸ್ತಾವಯವ ಗಳಲ್ಲಿನ ಮುತ್ತಿನೊಡವೆಗಳ ಕಿರಣಗಳಿಂದ ತುಂಬಿದ ಶುಭ್ರವರ್ಣದಿಂದ ಅವಳ ಹರಿ ಚಂದನದ ಅಂಗರಾಗವು ಕಾಣುತ್ತಿರಲಿಲ್ಲ' (ಆದಿಪು. ಆಶ್ವಾಸ-vii).

ಹದಿನಾರು ಸ್ವಪ್ನಗಳ ನಾಮಮಾತ್ರದ ಉಲ್ಲೇಖವನ್ನು ಎರಡು ಕಂದಪದ್ಯಗಳಲ್ಲಿ ನೀಡಲಾಗಿದೆ. ಪೂರ್ವಪುರಾಣ, ಆದಿಪುರಾಣ, ಚಾವುಂಡರಾಯಪುರಾಣಗಳಲ್ಲಿ ಬರುವ

ಸ್ವಪ್ನವೈಭವ ವರ್ಣನೆಯ ವಿವರವಿಲ್ಲ.

ದಿಕ್ಕುಮಾರಿಯರು ಎಸಗುವ ಕೆಲವೊಂದು ಸೇವೆಗಳಲ್ಲಿ ಬರುವ ವಿವರಕ್ಕೂ ಆದಿಪುರಾಣದ ಭಾಗಕ್ಕೂ ಇಲ್ಲಿ ಹೋಲಿಕೆಯನ್ನು ಕಾಣಬಹುದಾಗಿದೆ. ಪೂರ್ವಪುರಾಣದಲ್ಲಿ ಕಂಡುಬಾರದ ಈ ವಿವರಗಳು ಆದಿಪುರಾಣದಲ್ಲಿ ಮತ್ತು ಪುಣ್ಯಾಸ್ರವದ ಆದೀಶ್ವರರ ಕಥೆಗಳಲ್ಲಿ ಕಂಡುಬರುತ್ತವೆ. ಉದಾಹರಣೆಗೆ :

> ಮತ್ತಂ ಕುಲಶಿಖರ ಶೇಖರಾಯಮಾಣ ಪದ್ಮಾದಿಸರೋವರ ನಿವಾಸಿನಿಯರಪ್ಪ ಶ್ರೀ ಹ್ರೀ ಧೃತಿ ಕೀರ್ತಿ ಬುದ್ಧಿ ಲಕ್ಷ್ಮಿಗಳೆಂಬಱುವರುಮನಾತ್ಮೀಯ ಗುಣಗಣಮಣಿ ವಿಭೂಷಣಂಗಳಿಂ ಜಿನಜನನಿಯನಲಂಕರಿಸಲುಮನಾದ್ಯನಿಧನಜಿನನಿಲಯರುಚಿರರುಚಕಾಚಲದ ಪೂರ್ವ ದಿಗ್ಭಾಗದ ವೈಢೂರ್ಯ್ಯಕಾಂಚನಕನಕಾರಿಷ್ಟ ದಿಕ್ಸ್ವಸ್ತಿಕ ನಂದನಾಂಜನಾಜನಮೂಲಕಂಗಳೆಂಬೆಂಟು ಕೂಟಂಗಳೊಳ್ ರಮಿಯಿಸುವ ವಿಜಯೆ ವೈಜಯಂತೆ ಜಯಂತೆ ಅಪರಾಜಿತೆ ನಂದೆ ನಂದೋತ್ತರೆ ಆನಂದೆ ನಂದಿ ವರ್ಧನೆಯೆಂಬೆಣ್ಬರುಂ ದಿಗ್ವನಿತೆಯರಂ ಪರಮ ಜಿನೋತ್ಸವದೊಳ್ ಶೃಂಗಾರಂಬೆರಸು ಭೃಂಗಾರುಧಾರಿಗಳಾಗಲುಂ ತತ್ಕುಕ್ಷೀಲದ ಪ್ರಾಗ್ದಿಗ್ದೇಶದಮೋಘ ಸುಪ್ರಬುದ್ಧ ರುಂದ್ರ ವಿಮಳರುಚಕರುಚಕೋತ್ತರ ಚಂದ್ರಸುಪ್ರತಿಷ್ಠಮೆಂಬ ಕೂಟಾಷ್ಟಕಂಗಳೊಳ್ ರಮಿಯಿಸುವ ಸುಪ್ರತಿಷ್ಠಿತೆ ಸಪ್ರಣಿಧಿ ಸುಪ್ರಬುದ್ಧೆ ಯಶೋಧರೆ ಲಕ್ಷ್ಮೀಮತಿ ಕೀರ್ತ್ತಿಮತಿ ವಸುಂಧರೆ ಚಿತ್ರೆಯೆಂಬೆಣ್ಬರುಂ ದಿಗಂಗನೆಯರಂ ನಾಭಿರಾಜಾಂಗನೆಗೆ ಮಣಿದರ್ಪಣಮಮಂ ಪಿಡಿಯಲುಂ (ಆದಿಪು. ಆಶ್ವಾಸ -vii).

> ಪದ್ಮಾದಿ ಸರೋವರ ನಿವಾಸಿನಿಯರಪ್ಪ ಶ್ರೀ ಹ್ರೀ ಧೃತಿ ಕೀರ್ತಿ ಬುದ್ಧಿ ಲಕ್ಷ್ಮಿಯೆಂಬ ದೇವಿಯರಂ ತೀರ್ಥಂಕರ ಜನನಿಗೆ ಪಸದನಮಂ ಪುದುಂಗೊಳಿಸಲುಂ ರುಚಕಗಿರಿ ನಿವಾಸಿಯರಪ್ಪ ವಿಜಯೆ ವೈಜಯಂತೆ ಜಯಂತೆ ಅಪರಾಜಿತೆ ನಂದೆ ನಂದೋತ್ತರೆ ಆನಂದೆ ನಂದಿವರ್ಧನೆ ಎಂಬೆಣ್ಬರ್ ದೇವಿಯರಂ ಮಂಗಳ ಕಳಶಧಾರಿಯರಂ ಮಾಡಿಯುಂ, ಸುಪ್ರತಿಷ್ಠೆ ಸುಪ್ರಣೀಥೆ ಸುಪ್ರಬುದ್ಧೆ ಯಶೋಧರೆ ಲಕ್ಷ್ಮೀಮತಿ ಕೀರ್ತಿಮತಿ ವಸುಂಧರೆ ಚಿತ್ರೆ ಎಂಬೆಣ್ಬರಂ ದರ್ಪಣಮಮಂ ಪಿಡಿಯಿಸಿಯುಂ (ಪುಆಕ.)

ಈ ಅಂಶಗಳನ್ನು ಗಮನಿಸಿದಾಗ ಕವಿ ಪಂಪನಿಗೆ ಈ ಭಾಗದಲ್ಲಿ ಋಣಿಯಾಗಿರುವಂತೆ ತೋರುತ್ತದೆ.

**ಪುರುದೇವ ಚರಿತ** : ಮರುದೇವಿ-ನಾಭಿರಾಜನ ವರ್ಣನೆಯು ಇಲ್ಲಿ ಬರುವುದಿಲ್ಲ. ದೇವೇಂದ್ರನು ಅಯೋಧ್ಯೆಯನ್ನು ರಚಿಸಿ ಅದಕ್ಕೆ ಸಾಕೇತ, ವಿನೀತ, ಸುಕೌಶಲನಾಮಗಳನ್ನಿಟ್ಟನು. ಮುಂದೆ ಹದಿನೈದು ತಿಂಗಳು ನಿತ್ಯ ಮೂರು ಕಾಲದಲ್ಲಿ ಮೂರೂವರೆ ಕೋಟಿ ರತ್ನವೃಷ್ಟಿಯಾಗುವಂತೆ ದೇವೇಂದ್ರನು ಕುಬೇರನಿಗೆ ಆಜ್ಞೆ ನೀಡಿದನು. ಮುಂದಿನ ದೇವತೆಗಳ ಸೇವಾ ಶುಶ್ರೂಷೆಯ ಭಾಗವು ಆದಿಪುರಾಣ, ಪುಣ್ಯಾಸ್ರವದ ಆದೀಶ್ವರರ ಕಥೆಗೆ ಸಮನಾಗಿ ಬರುತ್ತದೆ. ಉದಾಹರಣೆಗೆ :

> ಮತ್ತಾರುಚಕಗಿರಿ ಪೂರ್ವಕನಕ ಕಾಂಚ | ನುತ್ತುಂಗತಪನೀಯ ಕೂಟ
> ಸೊಸ್ತಿಕ ಭದ್ರಮಂಜನಮಂಜನ ಮೂಲ | ಮತ್ತಮೆಂಟನೆಯೊಜ್ರಕೂಟ
> ತನ್ನಿವಾಸಿನಿಯರು ವಿಜಯೆ ವೈಜಯಂತಿ | ಸನ್ನುತ ಗುಣೆಯ ಜಯಂತಿ
> ಕನ್ನೆಯಪರಾಜಿತೆ ನಂದೆನಂದಾವತಿ | ಯೂ ನಂದೋತ್ತರೆನಂದಿಷೇಣೆ
>
> ಇಂತಿವರೆಣ್ಬರು ಭೃಂಗಾರವಿಡಿದಹರು.... (ಪುರುಚ. iv- ೬೩ರಿಂದ ೯೫).

ಕವಿ ಇದೇ ಸಂದರ್ಭದಲ್ಲಿ ಚಾವುಂಡರಾಯಪುರಾಣದಿಂದಲೂ ಕೆಲವೊಂದು ಅಂಶಗಳನ್ನು ತೆಗೆದುಕೊಂಡಿರುವುದನ್ನು ಗಮನಿಸಬಹುದಾಗಿದೆ. ಉದಾಹರಣೆ:

> ಆ ಪದ್ಮಾದಿ ಸರೋವರದ ನಿವಾಸಿನಿಯರುಂ ಅಂಗವರ್ಧನ ಧೈರ್ಯವರ್ಧನ ಸ್ಮೃತಿವರ್ಧನ ಮನೋವರ್ಧನ ಪ್ರಸಾದವರ್ಧನ ಸೌಭಾಗ್ಯವರ್ಧನ ಹೇತುಗಳಪ್ಪ ಶ್ರೀ ಹ್ರೀ ಧೃತಿ ಕೀರ್ತಿ ಬುದ್ಧಿ ಲಕ್ಷ್ಮಿಗಳೆಂಬ ವರುಮಂ ಮರುದೇವಿಗೆ ಪರಿಚಾರಿಕೆಯರಾಗಿರಲುಂ ಸೌಧರ್ಮೇಂದ್ರಂ ಬೆಸಸೆ... (ಚಾವುಂಪು., ಪುಟ ೩೫)

ಹಿಮವದಾದಿಯ ಮೂರು ಕುಲಗಿರಿಗಳ ಮೇಲೆ | ರಮಣೀಯ ಸರೋವರ ಮಧ್ಯೆ
ಕಮಲನಿವಾಸಿನಿಯರುಮಪ್ಪರುವರು | ಅಮರಿಯರ್ಗಿಂತೆಂದು ಪೇಳ್ದಂ
ಶ್ರೀ ದೇವಿ ಹ್ರೀ ಧೃತಿ ಕೀರ್ತಿ ಬುದ್ಧಿ ಲಕ್ಷ್ಮಿ| ಯಾದರದಿಂದ ನೀವೆಲ್ಲ
ಮೂಧರೆನುತ ಮರುದೇವಿಯಮ್ಮನ ಗರ್ಭ | ಶೋಧನೆ ಮುಂತಾದನೆಸಗಿ
ಅಂಗವರ್ಧನ ಧೈರ್ಯವರ್ಧನ ಸ್ಮೃತಿವರ್ಧ | ನಂಗಳ ಮನೋವರ್ಧನವ
ಅಂಗನೆ ಪ್ರಾಸಾದವರ್ಧನ ಸೌಭಾ | ಗ್ಯಂಗಳೊರ್ಧನೆಯ ಮಾಡೆಂದು
(ಪುರುಚ. iv-೯೦ ರಿಂದ ೯೨)

ಹದಿನಾರು ಸ್ವಪ್ನಗಳನ್ನು ಕಂಡಳೆಂದು ಹೇಳಿದ್ದಾನೆಯೇ ಹೊರತು ಆ ಸ್ವಪ್ನಗಳ ಹೆಸರನ್ನೂ ವಿವರವನ್ನೂ ನೀಡಿಲ್ಲ. ಪೂರ್ವಪುರಾಣ, ಆದಿಪುರಾಣ, ಚಾವುಂಡರಾಯ ಪುರಾಣಗಳಲ್ಲಿ ಅವುಗಳ ವಿವರವೂ ಪುಣ್ಯಾಸ್ರವದಲ್ಲಿ ಅವುಗಳ ಹೆಸರೂ ಕಂಡುಬರುತ್ತದೆ. ಹಸ್ತಿಮಲ್ಲನ ಪೂರ್ವಪುರಾಣದಲ್ಲಿ ೮ ಸ್ವಪ್ನಗಳ ಹೆಸರು ಮಾತ್ರ ಕಂಡುಬಂದಿರುವುದನ್ನು ಹಿಂದೆಯೇ ಗಮನಿಸಲಾಗಿದೆ.

ಸುರರಾಜನು ಪ್ರಥಮ ಕಲ್ಯಾಣೋತ್ಸವವನ್ನು ಮಾಡಿ ಮರುದೇವಿ ನಾಭಿರಾಜರನ್ನು ಪೂಜಿಸಿದ ಉಲ್ಲೇಖವು ಇಲ್ಲಿ ಬರುತ್ತದೆ. ಚಾವುಂಡರಾಯಪುರಾಣವನ್ನುಳಿದು ಇತರೆಡೆಗಳಲ್ಲಿಯೂ ಇದರ ಉಲ್ಲೇಖವು ಲಭಿಸುವುದನ್ನು ಗಮನಿಸಬಹುದು.

ಈ ಭಾಗದಲ್ಲಿ ಕವಿ ಆದಿಪುರಾಣ, ಚಾವುಂಡರಾಯಪುರಾಣಗಳಿಗೆ ಹೆಚ್ಚು ಹತ್ತಿರವಾದಂತೆ ಕಂಡುಬರುತ್ತಾನೆ.

ಸರ್ವಾರ್ಥಸಿದ್ಧಿಯ ಅಹಮಿಂದ್ರನು ಅವಸಾನಕಾಲವನ್ನರಿತು ನಿತ್ಯಾತ್ಮಧ್ಯಾನದಲ್ಲಿ ನಿರತನಾದನು. ಅಹಮಿಂದ್ರನು ಭೂಲೋಕದಲ್ಲಿ ಅವತರಿಸುವನೆಂದು ಅರಿತು ದೇವೇಂದ್ರನು ಭೂಲೋಕಕ್ಕೆ ಬರಲು ಅನುವಾದನು. ಕನ್ನೆಯರ ಕುಲರನ್ನೆಯಾದ ಶಚೀದೇವಿ ರನ್ನದೊಡವೆಯನ್ನು ತೊಟ್ಟು, 'ಮಿಸುನಿಯ ಚನ್ನ ಪುತ್ತಳಿಯಂದದಿ' ಅಲಂಕಾರಗೊಂಡ ಇತರ ಸುರಸತಿಯರೊಂದಿಗೆ ವೈಭವದಿಂದ ಧರೆಗಿಳಿದು ಅಯೋಧ್ಯೆಯನ್ನು ಹೊಕ್ಕಳು.

ಇಳೆಗಧಿಪನಾದ ಹದಿನಾಲ್ಕನೆಯ ಮನುಕುಲಲಲಾಮ ನಾಭಿರಾಜನಿಗೆ ಮನ್ಮಥನನ್ನು ಗೆಲ್ಲುವ ರೂಪವಂತೆ ಲಲನೆ ಇರುವಳು. ಆಕೆ—

ನಾರಿಯರ ಕುಲರತ್ನ ವಿದ್ಯದಿ ಶಾರದೆಯು ಸೌಭಾಗ್ಯದೇಳ್ಗೆಗೆ
ಶ್ರೀರಮೆಯು ಸುಂದರಕೆ ರತಿಯನು ಜರಿಯುತಿಹಳು (ಪರಿಚ್ಛೇದ-v)

ಆ ವರ್ಣನಾಭಾಗವು ಹಸ್ತಿಮಲ್ಲನ ಪುರಾಣದ ಮಾತುಗಳನ್ನು ನೆನಪಿಗೆ ತರುತ್ತದೆ.

ರೂಪಿನಿಂ ರತಿಯಂ ವಿದ್ಯೆಯಿಂ.ಶಾರದೆಯಂ ಐಶ್ವರ್ಯದಿಂ ಲಕ್ಷ್ಮಿಯಂ
ಗೆಲುವಳ್ ಸಕಲಗುಣಸಂಪನ್ನೆಯಪ್ಪ ಮರುದೇವಿ ಮಹಾದೇವಿ (ಹಪೂರ್ವ. ಪರ್ವ-viii)

ಹೂಮಳೆಗರೆಯುತ್ತಿರಲು ದುಂದುಭಿ ಮೊಳಗುತ್ತಿರಲು ಅರಮನೆಯನ್ನು ಪ್ರವೇಶಿಸಿ ಶೋಭಿಸುತ್ತಿರುವ ಮರುದೇವಿಗೆ ನಮಸ್ಕರಿಸಿದರು. ಅನಂತರ 'ಕೋಮಲಾಂಗಿಯೆ ನಿನ್ನ ಗರ್ಭದಿ ಸ್ವಾಮಿಯುದಿಸುವ ಕಾರಣದಿಮೀ ಸ್ತೋಮ ಸಹ ನಡೆತಂದೆ ಗರ್ಭಾವತರಣ ಕಾಗಿ' (ಪರಿಚ್ಛೇದ-v)ಎಂದು ನೇರವಾಗಿ ಶಚೀದೇವಿ ವಿಷಯವನ್ನು ಪ್ರಸ್ತಾಪಿಸಿದಳು. '[illegible]ರು ನರರಿಗೆರಗುವುದುಚಿತವೇ?' ಎಂದು ಪ್ರಶ್ನಿಸಲು, ಆ ಕೃಪೆ ತಮಗೊದಗಿರುವುದು ಮರುದೇವಿ ಜಿನಮಾತೆಯಾದ ಕಾರಣದಿಂದ ಎಂದು ನುಡಿದರು. ಶಚೀದೇವಿಯು ಜಿನಮಾತೆಯನ್ನು ಕುರಿತು ತಾನೇ ಪ್ರತಿನಿತ್ಯ ಬಂದು ಊಳಿಗಕ್ಕೆ ನಿಲ್ಲುವುದಾಗಿ ತಿಳಿಸಿದಳು. 'ದೇವಿಯರಿಗೆ ಶಚಿ ಒಡತಿಯಾದರೆ ಶಚಿಗೆ ಮರುದೇವಿಯೊಡತಿಯಾದಳು.' ಹೀಗಿರಲು ನಾಲ್ನೀರ ಸ್ನಾನವಾಯಿತು. ದೇವಗಂಗೆಯನ್ನು ತಂದು ದೇವಿಯರೆಲ್ಲರೂ ಮರುದೇವಿಗೆ ಮಜ್ಜನ ಮಾಡಿಸಿದರು. ಇನ್ನೂ ಗರ್ಭಾವತರಣಕ್ಕೆ ಆರು ತಿಂಗಳಿದೆ ಎನ್ನುವಾಗಲೇ ಸುರಪನನುಜ್ಞೆಯಿಂದ ಧನದನು ನಿತ್ಯ ಮೂರು ಸಂಜೆಗಳಲ್ಲಿ ರತ್ನ ಸುವರ್ಣವೃಷ್ಟಿಯನ್ನು ನಡೆಸುತ್ತಿದ್ದನು. ಶುಭಲಗ್ನದಲ್ಲಿ ಅಹಮಿಂದ್ರನು ಮರುದೇವಿಯ ಗರ್ಭದಲ್ಲವತರಿಸಿದನು.

ಈ ವಿಷಯವಿನ್ಯಾಸಗಳನ್ನೊಳಗೊಂಡು ಬಂದಿರುವ ಗರ್ಭಾವತರಣ ಕಲ್ಯಾಣದ ಸಂದರ್ಭದಲ್ಲಿ ಪೂರ್ವಪರಂಪರಾನುಗತವಾಗಿ ಬರುವ ಷೋಡಶ ಸ್ವಪ್ನಗಳ ಉಲ್ಲೇಖವಾಗಲಿ, ನಾಭಿರಾಜನು ಸ್ವಪ್ನಫಲಗಳನ್ನುಸುರುವ ಪ್ರಸಂಗವಾಗಲಿ ಇಲ್ಲಿ ಬರುವುದಿಲ್ಲ. ಇಲ್ಲಿ ಶಚೀದೇವಿಯೇ ನೇರವಾಗಿ ತನ್ನ ಪರಿವಾರದೊಂದಿಗೆ ಬಂದು ಕಾರ್ಯವನ್ನು ನಿರ್ವಹಿಸುವಳು. ಮರುದೇವಿಯಲ್ಲಿ ಆತ್ಮೀಯತೆ, ಭಕ್ತಿ, ಗೌರವ ಆದರಗಳನ್ನು ತೋರಿ ಅದಕ್ಕೆ ಕಾರಣವನ್ನು ವಿವರಿಸುವಳು. ಇತರ ಕಾವ್ಯಗಳಿಗಿಂತ ಇಲ್ಲಿ ಗರ್ಭಾವತರಣ ಕಲ್ಯಾಣದಲ್ಲಿ ಶಚೀದೇವಿಗೆ ಹೆಚ್ಚಿನ ಮಹತ್ತ್ವ ಲಭಿಸಿರುವುದು ಗಮನಾರ್ಹ. ಹಸ್ತಿಮಲ್ಲನನ್ನನುಸರಿಸಿ ಬಂದಿರುವ ಮರುದೇವಿಯ ವರ್ಣನೆ, ಕುಬೇರನಿಂದ ರತ್ನವೃಷ್ಟಿ ವಿಷಯಗಳನ್ನು ಬಿಟ್ಟರೆ ಉಳಿದಂತೆ ವಿಷಯಗಳೆಲ್ಲ ಹೊಸದು. ಕಾವ್ಯಾಂಶದ ದೃಷ್ಟಿಯಿಂದ ಕವಿ ತಕ್ಕಮಟ್ಟಿಗೆ ನೇರ ನಿರೂಪಣಾ ವಿಧಾನಕ್ಕೆ ಕಡಿವಾಣವನ್ನು ಹಾಕಿದ್ದಾನೆ. ಸಾಕಷ್ಟು ಆಕರ್ಷಣೀಯವಾಗಿ ಈ ಭಾಗ ಮೂಡಿ ಬಂದಿದೆ. ಪೂರ್ವಪರಂಪರೆಯ ಕಥಾವಿನ್ಯಾಸವನ್ನನುಸರಿಸದೆ ತನ್ನದೇ ಆದ ವಿಭಿನ್ನ ಮಾದರಿಯನ್ನು ಅಳವಡಿಸಿಕೊಂಡಿರುವುದು ಇಲ್ಲಿ ಒಂದು ವೈಶಿಷ್ಟ್ಯ.

ಗರ್ಭಾವತರಣ ಕಲ್ಯಾಣದಲ್ಲಿ ಈ ಎಲ್ಲ ಕಾವ್ಯಗಳಲ್ಲಿಯೂ ವಿಶೇಷತಃ ಜಿನಜನನಿ ಮರುದೇವಿಗೆ ವಿಶೇಷವಾದ ಪ್ರಾಶಸ್ತ್ಯವು ದೊರೆಯುತ್ತದೆ. ಜೈನಪುರಾಣಗಳು ಜಿನಮಾತೆಗೆ ವಿಶೇಷ ಸ್ಥಾನ-ಮಾನಗಳನ್ನು ನೀಡಿವೆ. ಜಿನಶಿಶುವಿಗೆ ಜನ್ಮನೀಡುವ ಈ ಮಾತೆ ಸಾಮಾನ್ಯ ಮಾತೆಯಲ್ಲ, 'ಮಹಾಮಾತೆ'.

## ಜನ್ಮಾಭಿಷೇಕ ಕಲ್ಯಾಣ

**ಆದಿಪುರಾಣ-ಪೂರ್ವಪುರಾಣ** : ಎರಡನೆಯ ಘಟ್ಟ ಆದಿತೀರ್ಥಂಕರನ ಜನ್ಮಾಭಿಷೇಕಕ್ಕೆ ಸಂಬಂಧಿಸಿದುದು. ತೀರ್ಥಂಕರನಾಗುವ ಶಿಶುವಿನ ಜನನವನ್ನರಿತು ಸೌಧರ್ಮ ಮೊದಲಾದ ಸ್ವರ್ಗಗಳ ಇಂದ್ರರು ದೇವತೆಗಳ ಪರಿವಾರದೊಂದಿಗೆ ಅಯೋಧ್ಯೆಗೆ ಆಗಮಿಸುವುದು, ಸೌಧರ್ಮೇಂದ್ರನ ಅಪ್ಪಣೆಯಂತೆ ಇಂದ್ರಾಣಿಯು ಮರುದೇವಿಗೆ ಮಾಯಾ ನಿದ್ರೆಯನ್ನುಂಟುಮಾಡಿ ಮಗುವನ್ನು ಇಂದ್ರನ ಕೈಗೆ ತಂದುಕೊಡುವುದು, ದೇವತೆಗಳೆಲ್ಲ ಆ ಪುಣ್ಯಶಿಶುವನ್ನು ಐರಾವತದ ಮೇಲೆ ಕೂರಿಸಿಕೊಂಡು ಮಂದರಪರ್ವತಕ್ಕೆ ತೆರಳುವುದು, ಬಳಿಕ ಶಿಶುವನ್ನು ತಂದೆತಾಯಿಗಳಿಗೆ ಒಪ್ಪಿಸಿ ನಾಮಕರಣಮಾಡುವುದು—ಈ ಅಂಶಗಳು ಇಲ್ಲಿ ಬರುವ ಮುಖ್ಯ ನಿರೂಪಣೆಗಳಾಗಿವೆ.

ಭವಾಂತರಗಳಲ್ಲಿ ನುಸುಳಿ ಕ್ರಮವಾಗಿ ಧರ್ಮಸಾಧನೆಯ ಸೋಪಾನಗಳನ್ನೇರಿ, ಶ್ರೇಯೋಧಾರಿಯಾಗಿ ಸರ್ವಾರ್ಥಸಿದ್ಧಿಯಲ್ಲಿ ಅಹಮಿಂದ್ರನಾಗಿ, ಕೊಟ್ಟಕೊನೆಯ ಜನ್ಮದಲ್ಲಿ ಅರ್ಹತ್ ಪಟ್ಟಕ್ಕೆ ಏರಿ ಸಿದ್ಧನಾಗುವ ಆತ್ಮವು ನರಗತಿಯಲ್ಲಿ ಚರಮದೇಹಿಯಾಗಿ ಹುಟ್ಟಿತು. ಮರುದೇವಿಯು

> ಬರೆ ಚೈತ್ರಂ ಕೃಷ್ಣಪಕ್ಷಂ ದೊರೆಕೊಳೆ ನವಮೀವಾಸರಂ ಪೊರ್ದೆ ಲೋಕೋ
> ತ್ತರಮಾಗಿರ್ದುತ್ತರಾಷಾಢದೊಳತಿಶುಭದಂ ಬ್ರಹ್ಮಯೋಗಂ ಮನಂಗೊಂ
> ಡಿರೆ ಭಾಸ್ವನ್ನಾಭಿರಾಜಾಂಗನೆ ವಿಶದಯಶೋಭಾಗಿಯಂ ಭವಪದ್ಮಾ
> ಕರಬೋಧಾದಾಯಿಯಂ ತಿಗ್ಮಕರನುದಯದೊಳ್ ಪುತ್ರನಂ ಪೆತ್ತಳಾಗಳ್ (vii-೩೭)

ಚೈತ್ರಮಾಸದ ಕೃಷ್ಣಪಕ್ಷವು ಬಂದಿತು. ನವಮೀತಿಥಿಯಲ್ಲಿ ಲೋಕೋತ್ತರವಾದ ಉತ್ತರಾಷಾಢ ನಕ್ಷತ್ರವೂ ಮಂಗಳಕರವಾದ ಬ್ರಹ್ಮಯೋಗವೂ ಸೇರಿಕೊಂಡವು. ನಾಭಿರಾಜನ ರಾಣಿಯಾದ ಮರುದೇವಿಯು ಸ್ವಚ್ಛವಾದ ಯಶಸ್ಸಿಗೆ ಪಾತ್ರನೂ ಭವ್ಯರೆಂಬ ತಾವರೆಗೊಳಕ್ಕೆ ಜ್ಞಾನ ನೀಡುವವನೂ ಆದ ಪುತ್ರನನ್ನು ಸೂರ್ಯೋದಯ ಕಾಲದಲ್ಲಿ ಹೆತ್ತಳು.

ಆ ಜನ್ಮೋತ್ಸವಕಾಲದಲ್ಲಿ ಎಲ್ಲಾ ಋತುಗಳೂ ಏಕಕಾಲದಲ್ಲಿ ಕಾಣಿಸಿಕೊಂಡವಂತೆ. ಭೂಕಾಂತೆಯು ನಂದನವನಗಳಲ್ಲಿ ಅರಳಿದ ಅಶೋಕಗಳಿಂದ, ಮಲ್ಲಿಗೆಯ ಮೊಗ್ಗುಗಳ ಆಡಂಬರಾದಿಗಳಿಂದ ಶೋಭಿಸಿದಳು. ತನ್ನನ್ನು ಕಾಪಾಡಿಕೊಳ್ಳುವ ರಾಜನ ಉದಯದಿಂದ ಸಂತುಷ್ಟಳಾದ ಭೂದೇವಿಯ ಹೃದಯದಂತೆ ಸ್ವಚ್ಛವಾದ ಜಲವು ಹರಿಯಿತು. ಅಗ್ನಿಯು ಭೂಮಿಯಲ್ಲಿನ ತೊಂದರೆಗಳನ್ನು ಹೋಗಲಾಡಿಸುವಂತೆ, ನೀರಾಜನ ಮಾಡುವಂತೆ ದಕ್ಷಿಣಾವರ್ತವಾಗಿ ಪ್ರಜ್ವಲಿಸಿತು. ಗಗನಗಂಗೆಯ ತುಂತುರುಗಳನ್ನೊಳಗೊಂಡು ಆನಂದ ಬಾಷ್ಪವನ್ನು ಸೂಸುವಂತೆ ದಿವ್ಯಾನಿಲವು ತೀಡಿತು. ಸ್ವಚ್ಛವಾದ ಆಕಾಶವು ಶರತ್ಕಾಲದ ಚಂದ್ರನಂತೆ ಬೆಳ್ಳಗಿರುವ ಅವನ ಕೀರ್ತಿಪ್ರಸರಕ್ಕವಕಾಶಕೊಡುವಂತೆ ಶೋಭಿಸಿತು.

ಪುರುಪರಮೇಶ್ವರನು ಇಳೆಗವತರಿಸಿದಾಗ 'ಪಂಚಭೂತಗಳಲ್ಲಿಯೂ ಪರಮಾನಂದ ಪರಂಪರೆ ದೊರೆಕೊಂಡಂತಿತ್ತು.' ಪುರಶ್ರೀವನಿತೆಯ ಸೌಂದರ್ಯ ವಿಶೇಷವಾಗಿ ಪರಮನ ಸ್ವಾಗತಕ್ಕಾಗಿ ಶೋಭಿಸುವಂತೆ ಕಂಡಿತು.

ಈ ಕಡೆ ದೇವಲೋಕದಲ್ಲಿ ದೇವದುಂದುಭಿಗಳು ತಾವೇ ತಾವಾಗಿ ಮೊಳಗಿದುವು. ಕಲ್ಪದ್ರುಮಗಳು ತಾವಾಗಿಯೇ ಹೊಸಹೂವುಗಳನ್ನು ಸಾಕೆನ್ನುವಷ್ಟು ಸೂಸಿದವು. ಕಿರೀಟಕ್ಕೆ ಅವನತಿ ಏಕಾಯಿತೆಂದುಕೊಳ್ಳುತ್ತಿದ್ದಂತೆಯೇ ತಮ್ಮಷ್ಟಕ್ಕೆ ದೇವೋತ್ತಮಾಂಗಗಳು ಬಾಗಿದವು. ಈ ಚಿಹ್ನೆಗಳು ತ್ರಿಲೋಕನಾಥನ ಪ್ರಾದುರ್ಭಾವವನ್ನು ಜಗತ್ತಿಗೆಲ್ಲಾ ಸಾರುವಂತೆ ಇದ್ದಿತು. ದೇವೇಂದ್ರಾದಿಯಾಗಿ ಎಲ್ಲರ ಆಸನ ಕಂಪನವಾಯಿತು. ದೇವೇಂದ್ರನು ತನ್ನ ಅವಧಿಜ್ಞಾನದಿಂದ ತೀರ್ಥಂಕರನ ಉದಯವಾಯಿತೆಂದು ತಿಳಿದು ಆನಂದದಿಂದ ಸಿಂಹಾಸನದಿಂದಿಳಿದು, ಮೂರು ಬಾರಿ ಬಲವಂದು ನಮಸ್ಕರಿಸಿ, ಜನ್ಮಾಭಿಷೇಕೋತ್ಸವದಲ್ಲಿ ಆಸಕ್ತಚಿತ್ತನಾದನು. ಚತುರ್ನಿಕಾಯ ದೇವತೆಗಳು ತಮ್ಮ ಪರಿವಾರ ಸಮೇತರಾಗಿ ಬಂದು ನಿಂತರು. ನಾಕದಿಂ ಬುವಿಗೆ ಬರುವಾಗ ಸೌಧರ್ಮೇಂದ್ರನು ಮರುದೇವಿಯನ್ನು ಹಾಗೂ ಜಿನನನ್ನು ಕುರಿತು ಹಾಡುಗಳನ್ನು ದೇವದುಂದುಭಿಗಳ ಶಬ್ದಕ್ಕನುಸಾರವಾಗಿ ಹಾಡುತ್ತ ಶಚೀದೇವಿಯೊಂದಿಗೆ ದೇವನಿಕಾಯದಿಂದೊಡಗೂಡಿ ಬಂದನು. ದೇವತೆಗಳು ಸಾಕೇತಪುರವನ್ನು ಬಳಸಿ ನಿಂತಿರುವಾಗ ಶಚೀದೇವಿಯು ತಿರೋಹಿತ ಶರೀರೆಯಾಗಿ ಆ ರತ್ನಪ್ರಭಾಭಾಸುರವಾದ ಮರುದೇವಿಯ ವೈಭವೋಪೇತವಾದ ಪ್ರಸೂತಿಗೃಹವನ್ನು ಹೊಕ್ಕಳು. ಮರುದೇವಿಯ ಅಂಕತಳದಲ್ಲಿದ್ದ 'ಬಾಲಾರ್ಕನಂ ಪೋಲ್ತು ಭಾಸುರ ತೇಜೋಧಿಕನಪ್ಪ ಬಾಳನನ್ ಒಲ್ದಟ್ಟಿರ್ತು ನೋಡುತ್ತುಮ್' ಸುರಕಾಂತೆ ಮೂರು ಬಾರಿ ಬಲಗೊಂಡು ಬಂದಳು (vii-೪೫). ಮರುದೇವಿಗೆ ಮಾಯಾನಿದ್ರೆಯನ್ನುಂಟುಮಾಡಿ ಮಾಯಾಶಿಶುವನ್ನು ಇರಿಸಿದಳು. ಆ ಮಗುವನ್ನು ಕೈಗೆತ್ತಿಕೊಂಡಾಗ ಶಚಿಗೆ ಆದ ಅನುಭವ ವರ್ಣಿಸಲಸದಳವಾದುದು.

ಪಡೆಯಲ್ಕಾಗದ ನಿಧಿಯಂ | ಬಡವಂ ಪಡೆದಂತೆ ಕಮಳದಳಕರತಳದಿಂ
ಪಿಡಿದೆತ್ತಿಕೊಂಡ ಸಂತಸ | ದೊಡಮೆಯನಾಂ ಪೊಗಟಲಱಿಯೆನಿಂದ್ರಾಂಗನೆಯಾ(vii-೪೬)

ಬಡವನು ತನಗಶಕ್ಯವಾದ ನಿಧಿಯನ್ನು ಪಡೆದಂತೆ ತಾವರೆಯೆಸಳಿನಂತಿರುವ ತನ್ನೊಂದು ಕರತಳದಲ್ಲಿ ಇಂದ್ರಾಂಗನೆಯು ಮಗುವನ್ನೆತ್ತಿಕೊಂಡಳು.

ಮಗುವಿನ 'ಅಲರ್ದಲರ್ಗಣ್ಗಳ ನೋಟದೆ' ಸುಲಲಿತತನು ಶಿಶುವ ಮೈಯ್ಯತೀಟದೆ' ಅತಿಶಯವಾದ ಆನಂದಭರಿತಳಾದ ಶಚೀದೇವಿಯು ಹೊಸದಾದ ಹೂವು ಅಂಕುರಿಸಿದ ಕಲ್ಪಲತೆಗೆ ಹೋಲಿಕೆಯಾದಳು (vii-೪೭).

ಶಚೀದೇವಿಯ ಕೈಯಿಂದ ಮಗು ಸುಗಂಧದ್ರವ್ಯದಿಂದ ಕೂಡಿದ ದೇವೇಂದ್ರನ ದಿವ್ಯವಾದ ತೊಡೆಯನ್ನಲಂಕರಿಸಿತು. ದೇವತೆಗಳ ಮೆರವಣಿಗೆ ಮೇರುಪರ್ವತದೆಡೆಗೆ ಸಾಗಿತು. ಈಶಾನ-ಸನತ್ಕುಮಾರರು ಚಾಮರವನ್ನು ಬೀಸಿದರು. ಎರಗುವ ಮಕುಟಗಳು, ದೇವದುಂದುಭಿಗಳು, ಅಮರ ಕಾಂತ ನರ್ತನಗಳು ಬೆಡಗನ್ನು ಉಂಟುಮಾಡುತ್ತಿದ್ದವು. ವಿಶೇಷವಾದ ಚೆಲ್ವನ್ನು ದಿವಿಜವೃಂದವು ತಂದಿತು. ಈ ಚೆಲುವಿನ ಮಧ್ಯೆ ಇದ್ದಕ್ಕಿದ್ದಂತೆ ಅತ್ಯದ್ಭುತವಾದ ನೋಟ. "ಇಲ್ಲಿ ಭವ್ಯತೆಗೆ ಕಳಶಪ್ರಾಯವಾದ ಒಂದು ಮಹತೋಮಹೀಯ ಭೂಮ ಚಿತ್ರವನ್ನು ತಂದೊಡ್ಡುತ್ತದೆ ಕವಿಪ್ರತಿಭೆ. ನಾವು ಆ ಪ್ರತಿಮೆಯನ್ನು ಕಲ್ಪಿಸಿಕೊಳ್ಳಬೇಕು ಸಾವಧಾನದಿಂದ. ಧ್ಯಾನಾತ್ಮಕರಾಗಿ ಒಮ್ಮೆ ಹತ್ತಿರ ನಿಂತು ಒಮ್ಮೆ ದೂರ ಹೋಗಿ, ಒಮ್ಮೆ ಮರ್ತ್ಯದಿಂದ, ಒಮ್ಮೆ ಅಮರ್ತ್ಯದಿಂದ, ನಾನಾದಿಕ್ಕು ನಾನಾ

ದೂರ, ನಾನಾ ದೃಷ್ಟಿಕೋನಗಳಿಂದ ದರ್ಶಿಸಬೇಕು. . . . ರಸಮೂರ್ಛಿತರಾಗಬೇಕು."[೨೮]

ಹಿಮಾಚಲಕ್ಕಿಂತಲೂ ದೊಡ್ಡದಾದ, ಆ ಐರಾವತಕ್ಕೆ ಮೂವತ್ತೆರಡು ಮುಖಗಳು. ಒಂದೊಂದು ಮುಖದಲ್ಲಿ ಎಂಟೆಂಟು ಬೆಳ್ಳಗೆ ನೀಳ್ದ ದಂತಗಳು ಉದಿಸಿವೆ. ಆ ಒಂದೊಂದು ಕೋಡಿನ ಅಗ್ರಪ್ರದೇಶದಲ್ಲಿ ಒಂದೊಂದು ಸರೋವರವಾಗಿದೆ. ಆ ಒಂದೊಂದು ಹೂಗೊಳದಲ್ಲಿ ಒಂದೊಂದೇ ತಾವರೆ ಅರಳಿದೆ. ಆ ಒಂದೊಂದು ತಾವರೆಯಲ್ಲಿ ಮೂವತ್ತೆರಡು ಎಸಳುಗಳು ಶೋಭಿಸುತ್ತಿವೆ. ಆ ಒಂದೊಂದು ಎಸಳಿನ ಮೇಲೆ ಮೂವತ್ತೆರಡು ದೇವಾಂಗನೆಯರು ನರ್ತಿಸುತ್ತಿದ್ದಾರೆ, ಮೆಟ್ಟಿದರೋ ಮೆಟ್ಟರೋ ಎಂಬಂತೆ. ಈ ವ್ಯಾವರ್ಣನೆಯು ಮೇಲುನೋಟಕ್ಕೆ ಲೆಕ್ಕಾಚಾರವಾಗಿ ಕಂಡುಬಂದರೂ ಮಹಾಕಾಲ್ಪನಿಕ ಸೃಷ್ಟಿಯ ವಿಭೂತಿಯಾಗಿದೆ.

ಜನರಿಗೆ ಸೈನ್ಯವನ್ನು ನೋಡಲು, ಅದರ ಕಲಕಲಧ್ವನಿಯನ್ನು ಕೇಳಲು ಮೊದಲು ಸಾಧ್ಯವಾಯಿತು. ಅದು ಇನ್ನೂ ಮೇಲಕ್ಕೆ ಹೋಗಲು, ಸ್ವಲ್ಪ ನೋಡಲು ಹಾಗೂ ಕಲಕಲಧ್ವನಿ ಮಾತ್ರ ಕೇಳಲು ಸಾಧ್ಯವಾಯಿತು. ಇನ್ನೂ ಮೇಲೆ ಮೇಲೆ ಹೋಗಲು ಅದರ ಸೂಕ್ಷ್ಮ ಆಕೃತಿಯನ್ನು ನೋಡಲು ಶಕ್ಯವಾಗಲಿಲ್ಲ. ಅಷ್ಟು ದೂರ ಅದು ಸಾಗಿತು (vii-೫೭). ಅಲೌಕಿಕತೆಯಲ್ಲಿ ನೈಜ ಚಿತ್ರಣದ ಮೆರಗು ಇಲ್ಲಿ ಮೂಡಿ ನಿಂತಿದೆ. ಹೀಗೆ ಸುರವೃಂದವು ವೈಭವದಿಂದ ಸಾಗುತ್ತಿರುವಾಗ ಜಿನರಾಜನ ಭಕ್ತಿಯ ಪ್ರಭಾವದಿಂದ ಎಂಬಂತೆ ಮೇರು ಪರ್ವತದವರೆಗೆ ಇಂದ್ರನೀಲ ಚಪ್ಪಡಿಗಳು ರೂಪಗೊಂಡವು. ಒಂದೆಡೆ ಆನೆಗಳ ಘಂಟಾ ಡಂಬರದಿಂದ ಕೂಡಿದ ಸೈನ್ಯ; ಮತ್ತೊಂದೆಡೆ ಸಾವಿರಾರು ಚಾಮರಗಳಿಂದ ಬಿಳುಪೇರಿದ ಭಾಗ; ಮಗದೊಂದೆಡೆ ಆಭರಣ ಕಿರಣಗಳಿಂದ ಕಡುಗೆಂಪೇರಿದ ಭಾಗ, ಇನ್ನೊಂದೆಡೆ ದೇವಗಜಸಮೂಹದಿಂದ ಕಪ್ಪೇರಿದ ಭಾಗ—ಹೀಗೆ ಎಲ್ಲೆಡೆಯಲ್ಲಿ ಚೆಲುವನ್ನು ಚೆಲ್ಲುತ್ತಾ ಇಂದ್ರನ ಸೈನ್ಯವು ರಮ್ಯವಾಯಿತು. ಕಲ್ಪವೃಕ್ಷಗಳ ಪುಷ್ಪಾರ್ಘ್ಯದಿಂದ ಎದುರುಗೊಂಡಂತೆ ಆ ಬಾಲಕನನ್ನು ಕರೆತರುತ್ತಿರುವ ಇಂದ್ರಸೈನ್ಯಕ್ಕೆ ಸ್ವಾಗತವು ದೊರಕಿತು. ಆ ಸುರಗಿರಿಯ ವೈಭವವನ್ನು ವರ್ಣಿಸುವಂತೆಯೇ ಇಲ್ಲ. ತೊಂಬತ್ತೊಂಬತ್ತು ಸಾವಿರ ಯೋಜನದಷ್ಟು ಎತ್ತರವಾದ ಆ ಗಿರಿಯು,

> ಜಿನಸವನಮಂಗಳಕ್ಕಾ | ನೆ ನೋಂತೆನೆಂಬಂತೆ ಶಿಖರಿ ನಿಜ ಶಿಖರದ ಪೆಂ
> ಪನೆ ಮೆಱೆದು ಪೊಸತೆ ಮಾಡಿದು | ದೆನಗಂ ವಿಸ್ಮಯಮನದಱಿನೀನಗಮೀಗಳ್
>
> (vii-೬೫)

ಜಿನನ ಅಭಿಷೇಕರೂಪವಾದ ಮಂಗಳ ಕಾರ್ಯವು ನಡೆಯಲು ತಾನೇ ನೋಂತಿದ್ದೇನೆ ಎಂಬಂತೆ ಆ ಬೆಟ್ಟವು ಔನ್ನತ್ಯವನ್ನು ಮೆರೆದು, ನನಗೂ ಹೊಸತೆಂಬುವಂತೆ ವಿಸ್ಮಯವನ್ನು ಉಂಟುಮಾಡಿದೆ ಎಂದು ದೇವೇಂದ್ರನು ಹೊಗಳುತ್ತ ಬಂದನು. ಆ ಬೆಟ್ಟದಲ್ಲಿ ಆವೃತವಾದ ನಾಲ್ಕು ವನಗಳಲ್ಲಿ ಜಿನಾಲಯವು ಶೋಭಿಸುತ್ತಿತ್ತು. ಸುರಗಿರಿಯನ್ನು ಹತ್ತುತ್ತಿರುವಾಗ ಸುರರಮಣಿಯರ ಮನಸ್ಸು ಅಲ್ಲಿಯ ಕಲ್ಪವೃಕ್ಷಲತೆಗಳಲ್ಲಿ ನೆಟ್ಟಿತ್ತು. ಹೂವುಗಳನ್ನು ತರತರದ ಆಭರಣಗಳಿಗಾಗಿ ಆಯ್ದು, ಕೊಯ್ದುಕೊಳ್ಳುವ ದೇವಕನ್ನಿಕೆಯರ ಸಡಗರ ಹೇಳತೀರದು. ದಾರಿಯುದ್ದಕ್ಕೂ ಕಲ್ಪವೃಕ್ಷಗಳ ವೈಭವ. ಹೂವುಗಳ ಪರಾಗಗಳ ಓಕುಳಿಯೊಂದಿಗೆ ಇಂದ್ರಸೈನ್ಯವು ಮೇರುಪರ್ವತದ ಪಾಂಡುಕವನವನ್ನು ತಲುಪಿತು.

ಕ್ಷೀರಸಮುದ್ರದ ಹೊನಲ ಚೆಲುವಿಗೆ ಸೆಣಸುವಂತಿದ್ದ, ಮಂಜಿನ ಪ್ರವಾಹದ ಮತ್ತು ಮುತ್ತಿನ ಹಾರದ ಬಿಳುಪನ್ನು ಬಾರಿಸಿ ಪಾಂಡುಕ ಶಿಲಾತಳವು ಶೋಭಿಸುತ್ತಿತ್ತು. ಅರ್ಧ ಚಂದ್ರಾಕಾರದಂತೆ ಶೋಭಿಸುವ ಪಾಂಡುಕಶಿಲೆಯ ಮಧ್ಯಭಾಗವನ್ನು ಬಿಟ್ಟು ಎರಡು ಭಾಗಗಳಲ್ಲಿ ದೇವೇಂದ್ರ ಈಶಾನೇಂದ್ರರಿಗಾಗಿ ಅಭಿಷೇಕವನ್ನು ಮಾಡಲು ಸಿಂಹಾಸನ ಗಳು, ಉಳಿದ ದೇವತೆಗಳಿಗಾಗಿ ಶ್ರೀಮಂಟಪ ಸಿದ್ಧವಾಗಿತ್ತು. ಪುರುದೇವನು ಆಕೃತಿಯಲ್ಲಿ ಕಿರಿದಾಗಿದ್ದರೂ ದೇಹಕಾಂತಿಯ ರಾಶಿಯು ಮೇರುಪರ್ವತಕ್ಕೆ ಆಭರಣಪ್ರಾಯವಾಯಿತು. ಜಿನಶಿಶುವನ್ನು ಪೂರ್ವಾಭಿಮುಖವಾಗಿ ಕುಳ್ಳಿರಿಸಿ, ಓಂಕಾರೋಚ್ಚಾರಣೆಯ ಮೂಲಕ ಮೊದಲ ಕಲಶವನ್ನು ಕಲ್ಪೇಶ್ವರನು ಎತ್ತಿಕೊಂಡನು. ಕ್ಷೀರಸಮುದ್ರಪರ್ಯಂತವಾಗಿ ನಿಂತ ದೇವತೆಗಳು ಕೈಯಿಂದ ಕೈಯಿಗೆ ಸಮುದ್ರದ ನೀರನ್ನು ಹೊನ್ನಿನ ಗಡಿಗೆಗಳಲ್ಲಿ ತುಂಬಿ ಕೊಡುತ್ತಿದ್ದರು. ದೇವೇಂದ್ರನು ದೋರ್ದಂಡನಾದನು. ತನ್ನ ಸಾವಿರ ತೋಳು ಗಳಿಂದ ಶಿಶುವಿಗೆ ಅಭಿಷೇಕ ಮಾಡುವಾಗ ಮೇರುಪರ್ವತದ ತಳದಲ್ಲಿ ಮತ್ತೊಂದು ಕ್ಷೀರಸಮುದ್ರ ನಿರ್ಮಾಣವಾದಂತಾಯಿತು. ಈ ಸಂದರ್ಭದಲ್ಲಿ ದೇವಗಣವು ಈ ರೀತಿ ಆಲೋಚಿಸಿತು : ಜಿನಬಾಲಕನಾದರೋ ತಾವರೆಯ ದಂಟಿಗಿಂತ ಕೋಮಲ; ಮೇಲೆ ಸುರಿಯುವ ಹಾಲಿನ ಧಾರೆಯೋ ಮೇರುಪರ್ವತವನ್ನು ಅಲೆಯಲೆಯಾಗಿ ಅಪ್ಪಳಿಸುವಂಥ ಬಿರುಸಿನದು. ಇಂದ್ರನೇನು ಇಂಥ ವ್ಯವಸ್ಥೆಯನ್ನು ಮಾಡಿರುವನಲ್ಲಾ (ಮಗುವಿನ ಗತಿ ಯೇನು?) ಎಂದು ಚಿಂತೆಗೀಡಾಗಿದ್ದ ದೇವತೆಗಳಿಗೆ ಧೈರ್ಯ ಬರುವಂತೆ ಆ ಮಗು ಬಿಟ್ಟ ಉಸಿರು ಅವರ ವಿಮಾನಗಳನ್ನು ತೂಗಾಡುವಂತೆ ತಟ್ಟಿತು (vii-೯೧). ಹಾಲ್ಧಾರೆಯಿಂದ ಮುಸುಕಿದ ಶಿಶು "ಬೆಳ್ಮುಗಿಲಿಂದಂ ಮುಸುಕಿದ ಬಾಳಾರ್ಕ ಬಿಂಬಮಿರ್ಪಂತಿರ್ದಂ" ಅಭಿಷೇಕದ ಹನಿಗಳು ದೇವತೆಗಳ ಮೇಲೆ ಬಿದ್ದು ಆಭರಣಕಾಂತಿಯಂತೆ ಶೋಭಿಸಿತು. ಅಲ್ಲಲ್ಲಿ ನಿಂತ ಹಾಲಿನ ಧಾರೆಯು ಮರಕತ ಬಂಡೆಯನ್ನು ಸೋಂಕಿ ಹಸುರಾಗಿಯೂ ಪದ್ಮರಾಗ ಬಂಡೆಗಳ ಮೇಲೆ ಕೆಂಪಾಗಿಯೂ ಇಂದ್ರನೀಲ ಬಂಡೆಗಳಲ್ಲಿ ಹರಿದು ಕಪ್ಪಾಗಿಯೂ ನಾನಾ ಶೋಭೆಯನ್ನು ಪಡೆಯಿತು. ಈ ಮೊದಲಾದ ವರ್ಣನಾಭಾಗದಿಂದ ಅಭಿಷೇಕದ ಮಹಿಮೆಯನ್ನು ಸಾರಿದ ಪಂಪನು—

ಮಜ್ಜನಪೀಠಂ ಸುರಗಿರಿ | ಮಜ್ಜನಜಲವಮೃತಜಲಧಿಜಲವಮರೇಂದ್ರಂ
ಮಜ್ಜನವಳ್ಳನುಮೆನೆ ಜಿನ| ಮಜ್ಜನಮಹಿಮೆಯ ಬೆಡಂಗನೇವಣ್ಣಿಪುದೋ (vii-೧೦೩)

ಸ್ನಾನಪೀಠವು ಮೇರು ಪರ್ವತ, ಸ್ನಾನದ ನೀರು ಕ್ಷೀರಸಮುದ್ರದ ನೀರು, ದೇವೇಂದ್ರನು ಸ್ನಾನಮಾಡಿಸುವವನು ಅಂದಮೇಲೆ ಜಿನನ ಸ್ನಾನದ ಮಹಿಮೆಯ ಬೆಡ ಗನ್ನು ವರ್ಣಿಸುವುದೇನು? ಎಂದು ಅದು ಇನ್ನು ವರ್ಣನಾತೀತವೆಂದು ಹೇಳಿದ್ದಾನೆ. ಅಷ್ಟವಿಧಾರ್ಚನೆಗಳಿಂದ ಭಗವಂತನನ್ನು ಪೂಜಿಸಿ ಜಯಘೋಷವನ್ನು ದೇವತೆಗಳು ಹಾಡಿದರು. ಶಚಿಯು ಭಗವಂತನ ದೇಹವನ್ನು ಒರೆಸಿ ಅಲಂಕರಿಸಿದಳು; ದೇವೇಂದ್ರನ ತೊಡೆಯ ಮೇಲೆ ಕುಳ್ಳಿರಿಸಿದಳು. ದೇವೇಂದ್ರನಿಗೆ ಭಗವಂತನನ್ನು ನೋಡಲು ಎರಡು ಕಣ್ಣುಗಳು ಸಾಲದಾದವು.

ಪರಮನ ನಿರತಿಶಯಾಂಗ | ಸ್ವರೂಪಮಂ ನೆಱೆಯೆ ನೋಡಲಾವೆಡೆಗಂ ತ
ನ್ನೆರಡುಂ ಕಣ್ಗಳ್ ನೆಱೆಯದೆ | ಸುರೇಂದ್ರನುಂ ಗಡ ಸಹಸ್ರಲೋಚನನಾದಂ

ದೇವೇಂದ್ರನು ಪರಿವಾರ ಸಮೇತನಾಗಿ ಅಯೋಧ್ಯೆಗೆ ತೆರಳಿದನು. ವಿಶೇಷವಾದ ಸಿಂಹಾಸನದಲ್ಲಿ ಮಗುವನ್ನು ಕುಳ್ಳಿರಿಸಿದನು. ಮಾಯಾನಿದ್ರೆಯಿಂದ ಎಚ್ಚೆತ್ತು ಮರುದೇವಿ ನಾಭಿರಾಜನೊಂದಿಗೆ ಪುತ್ರನ ವೈಭವವನ್ನು ಈಕ್ಷಿಸಿದಳು. ದೇವೇಂದ್ರನಿಂದ ಆ ಪುಣ್ಯ ದಂಪತಿಗಳಿಗೆ ಪೂಜೆ ದೊರೆಯಿತು. ಜನ್ಮಾಭಿಷೇಕದ ವಿವರವನ್ನು ಅವರಿಗೆ ಬಿತ್ತರಿಸ ಲಾಯಿತು. ಜಾತಕ ಮಹೋತ್ಸವದಲ್ಲಿ ಪರಿಜನ ಪುರಜನರು ಆನಂದದಿಂದ ಭಾಗವಹಿ ಸಿದರು.

ಸರ್ವರ ಸಂತೋಷದಲ್ಲಿ ಭಾಗಿಯಾದ ಸೌಧರ್ಮೇಂದ್ರನು ತಾನು ಆನಂದ ನಾಟಕ ವನ್ನು ಆಡಲು ಬಗೆದನು. 'ಕೃತಾನುಕರಣಮೆ ನಾಟಕಂ', ಆದ್ದರಿಂದ ತಾನು ನಾಟ್ಯವಿದ್ಯಾ ಚಾರ್ಯನಂತೆ ರಂಗವನ್ನು ಹೊಕ್ಕು ಭಗವಜ್ಜನ್ಮಾಭಿಷೇಕಸಂಬಂಧಿಯಾದ ನಾಟಕವನ್ನೇ ಆ ಸಭೆಯಲ್ಲಿ ಆಡಿತೋರಿಸಿದನು.

"ಆ ತಾಂಡವೇಂದ್ರನನ್ನಾಗಲಿ ಆ ನಾಟ್ಯರಂಗವನ್ನಾಗಲಿ ಚಿತ್ರಿಸಿಕೊಳ್ಳುವ ಕಲ್ಪನೆಗೆ ಕೃಪಣತೆ ಒಂದಿನಿತೂ ಸಲ್ಲದು. ಸಮುದ್ರ ಪರಿವೇಷ್ಟಿತ ಸಮಸ್ತ ಪೃಥ್ವೀ ಮಂಡಳವನ್ನು ಅಳೆಯುವಂತೆ ಅವನ ಪದವಿನ್ಯಾಸ, ಕುಲಶೈಲಗಳಲುಗುವಂತೆ ಪದಾಘಾತ. ಅವನ ಬಹು ಸಂಖ್ಯೆಯ ತೋಳುಗಳಾಟಕ್ಕೆ ಹೂಮಳೆಯಂತೆ ತಾರೆಗಳುದುರುತ್ತವೆ. ಹೊರಹೊಮ್ಮುವ ಸುಯ್ಲಿನ ಬಿರುಬಿಗೆ ಕಡಲುಗಳುಚ್ಚಳಿಸುತ್ತವೆ. ಒಮ್ಮೆ ನೆಲದಲ್ಲಿ, ಒಮ್ಮೆ ಆಕಾಶದಲ್ಲಿ ಬಳಿ ಬಂದನು ಎಂಬುದರೊಳಗೆ ದೂರವಾಗಿ ಹೊಳೆಯುತ್ತಾನೆ; ಸೂಕ್ಷ್ಮಾಂಗನಾಗುತ್ತಾನೆ; ತೆಕ್ಕನೆ ಭುವನವ್ಯಾಪಿಯಾಗುತ್ತಾನೆ. ಆ ತಾಂಡವಮೂರ್ತಿಯ ಚಲಿಸುತ್ತಿರುವ ಅಸಂಖ್ಯ ಬಾಹುಗಳ ಮೇಲೆ ದೇವಾಂಗನೆಯರು ಓಳಿಗೊಂಡು ನರ್ತಿಸುತ್ತಿದ್ದಾರೆ. ಆ ಬಾಹುಗಳು ದಿಗಂತದಿಂದ ದಿಗಂತಕ್ಕೂ ಆಕಾಶದಿಂದ ಭೂತಲಕ್ಕೂ ಸಂಚರಿಸುತ್ತಿದ್ದರೂ ಆ ನರ್ತಕಿ ಯರು ಬೆದರುವುದಿಲ್ಲ, ಬೀಳುವುದಿಲ್ಲ. ಕಣ್ಣು ಮುಚ್ಚಿ ಬಿಡುವುದರಲ್ಲಿ ಹದಿನೆಂಟು ಮೈಲಿ ಮುಂಬರಿವ ವೇಗದಿಂದ ಸೂರ್ಯನನ್ನು ಸುತ್ತುತ್ತಿರುವ ಭೂಗೋಳದ ಮೇಲೆ ಕರ್ತವ್ಯ ನಿಷ್ಠರಾಗಿ ಚಲಿಸುತ್ತಿರುವ ಮನುಷ್ಯರಂತೆ! ಅಷ್ಟೇ ಅಲ್ಲ, ದೂರದಿಂದ ನೋಡುವವರಿಗೆ, ನರ್ತಿಸುವ ಆ ದೇವಲಲನೆಯರ ಸಾಲುಗಳು ಕುಣಿದಂತೆಲ್ಲ ಕುಣಿಯುವ ಇಂದ್ರನ ಅಲಂಕಾರದ ಮಣಿಮಾಲೆಗಳಂತೆ ಮಾತ್ರ ತೋರುತ್ತವೆ. ತಾರತಮ್ಯದಿಂದ ಇಂದ್ರನ ರೂಪ ಬೃಹತ್ತು 'ಸುಮನೋಹರ ಭಯಂಕರ'ವಾಗುತ್ತದೆ. ಅಲ್ಲದೆ ತೋಳುಗಳ ಮೇಲೆ ಸುರಯುವತಿಯರು ಕುಣಿದರೆ ಮತ್ತೊಂದು ಕಡೆಯ ತೋಳುಗಳ ಮೇಲೆ ಸುರಯುವಕರು ಕುಣಿಯುತ್ತಿದ್ದಾರೆ. ಪುನಃ ಪಂಪನ ಮಹಾಪ್ರತಿಭೆಯೂ ಏದುತ್ತದೆ. ಭೂಮಾನುಭೂತಿಗೆ ನಾಲಗೆ ತತ್ತರಿಸುತ್ತದೆ, ಕಲ್ಪನೆ ಸೋಲುತ್ತದೆ, ಮತಿ ಭ್ರಮಿಸುತ್ತದೆ. ಆತನ ಮಹಾ ವಾಣಿಯ ಸಾಗರಘೋಷಕ್ಕೆ ಕಿವಿ ಕೊಟ್ಟಲ್ಲದೆ, ನಮಗೆ ತಗುಳಲಾರದು ಆ ಭವ್ಯತೆ."[೨೯]

ಭೂಮಿಯು ರಂಗಸ್ಥಳವಾಯಿತು. ಆಕಾಶವು ರಮ್ಯವಾದ ನಾಟ್ಯಾಲಯವಾಯಿತು. ನರ್ತಕನು ದೇವರಾಜನಾದನು. ದೇವಮಾನವರ ಸಭೆಯೇ ಸಭೆಯಾಯಿತು. ಜಗದ್ಗುರು ವಾದ ಜಿನೇಂದ್ರನು ನಾಟ್ಯಕ್ಕೆ ಆರಾಧ್ಯನಾದನು. ಆ ನೃತ್ಯದ ಫಲವು ತ್ರಿವರ್ಗ ವಿಭವ ವಾಯಿತು. ಅಂದಮೇಲೆ ಸಹಸ್ರ ನಾಲಗೆಗಳುಳ್ಳ ವಾಸುಕಿ ತಾನೆ ಆ ಸಭೆಯನ್ನು ಏನೆಂದು ವರ್ಣಿಸಿಯಾನು?

ಧರ್ಮವೆಂಬ ವರ್ಷದಿಂದ ಒಪ್ಪಿತನಾದ್ದರಿಂದ ಸ್ವಪ್ನದಲ್ಲಿ ತನ್ನ ತಾಯಿಯ ಮುಖ ಕಮಲವನ್ನು ಬಿಳಿಯ ವೃಷಭದ ಆಕಾರದಿಂದ ಹೊಕ್ಕನಾದ್ದರಿಂದ ಆ ಶಿಶುವಿಗೆ ವೃಷಭ ಸ್ವಾಮಿಯೆಂದು ಹೆಸರಿಟ್ಟರು. ಇಷ್ಟೆಲ್ಲಾ ಕಾರ್ಯಗಳನ್ನು ನಡೆಸಿ ದೇವೇಂದ್ರನು ಪರಿವಾರ ಸಮೇತನಾಗಿ ಸ್ವರ್ಗಕ್ಕೆ ಮರಳಿದನು.

ಜನ್ಮಾಭಿಷೇಕದ ವಿನ್ಯಾಸದಲ್ಲಿ ಪಂಪನು ಬಹುತೇಕವಾಗಿ ಜಿನಸೇನರನ್ನು ಅನುಸರಿಸಿದ್ದಾನೆ, ನಿಜ. ಆದರೆ ಅಲ್ಲಿಯ ಮೂಲ ವಿಚಾರಧಾರೆಗೆ, ಸಾಂಪ್ರದಾಯಿಕತೆಗೆ ಯಾವ ಮಸುಕನ್ನೂ ಉಂಟುಮಾಡದೆ ನಿತ್ಯನೂತನಗೊಳಿಸಿದ್ದಾನೆ ಎಂಬುದನ್ನು ಮರೆಯ ಬಾರದು. "ಇವು ಪೂರ್ವಪುರಾಣದ ೧೩, ೧೪ನೆಯ ಸರ್ಗಗಳ ಸಂಗ್ರಹವೆಂಬುದು ನಿಜವಾದರೂ ಸಹಜವಾಗಿಯೇ ಪಂಪಕವಿಯ ಪ್ರತಿಭೆಯ ಪ್ರಕಾಶದಿಂದ ಕಾವ್ಯದ ಸೊಬಗು ಇಲ್ಲಿ ಮಿಗಿಲಾಗಿ ಕಂಡುಬಂದಿರುತ್ತದೆ. ಮುಖ್ಯವಾಗಿ ಐರಾವತ ಗಜೇಂದ್ರದ ವಿಜೃಂಭಣೆ, ಜನ್ಮಾಭಿಷೇಕದ ಕಲಾಪ ಹಾಗೂ ಇಂದ್ರನ ಆನಂದ ನೃತ್ಯಗಳಲ್ಲಿ ಇದನ್ನು ಗಮನಿಸ ಬಹುದು."[೩೦]

ಜಿನನಾಗಲಿರುವ ಶಿಶುವಿನ ಜನನವಾದಾಗ ಪ್ರಕೃತಿಯು ಹರ್ಷವನ್ನು ವ್ಯಕ್ತಪಡಿಸಿತು. ಆಕಾಶವು ನಿರ್ಮಲವಾಯಿತು. ಈ ಕಡೆ ದೇವತೆಗಳು ಆಶ್ಚರ್ಯಗೊಳ್ಳುವಂತೆ ಕಲ್ಪ ವೃಕ್ಷಗಳು ಪುಷ್ಪಗಳನ್ನು ಸುರಿಸಿದುವು. ದೇವದುಂದುಭಿಗಳು ತಾವಾಗಿಯೇ ಮೊಳಗಿದವು. ತಂಗಾಳಿ ಬೀಡಿತು. ಇಂದ್ರನ ಆಸನ ಕಂಪನವಾಯಿತು. ಆತನಿಗೆ ಜಿನಶಿಶುವಿನ ಜನನದ ಅರಿವಾಯಿತು. ದೇವತೆಗಳು ಧರಿಸಿದ್ದ ರತ್ನಕಿರೀಟಗಳು ಭಕ್ತಿಯಿಂದ ಬಾಗಿದವು (ಪೂರ್ವಪು. xiii-೭ರಿಂದ ೧೦). ಈ ಅಭಿಪ್ರಾಯವನ್ನು ಪಂಪನು ಭಾವವು ಬಾಡದಂತೆ ಅಷ್ಟೇ ಉತ್ಸಾಹದಿಂದ ಸಾರಿದ್ದಾನೆ (ಆದಿಪು. vii- ೩೯, ೪೦). ಜೊತೆಗೆ

ಪುರುಪರಮೇಶ್ವರನಿಳೆಗವ | ತರಿಸಿದನಿಂದರಸುವಡೆದೆಮೆಂಬಂತೆವೊಲೀ
ಪರಮಾನಂದಪರಂಪರೆ | ದೊರೆಕೊಂಡತ್ತಿಂತು ಪಂಚಭೂತಂಗಳೊಳಂ (vii-೩೭)

ಎಂಬ ಹೊಸ ಭಾವವನ್ನು ವ್ಯಕ್ತಪಡಿಸಿ ಪಂಚಭೂತಗಳೂ ಸಹ ತೀರ್ಥಂಕರನ ಆಗಮನಕ್ಕೆ ಸಂತೋಷಗೊಂಡು ಸ್ಪಂದಿಸಿದುವೆಂದು ಪಂಪನು ಮತ್ತಷ್ಟು ಭಾವತುಂಬಿ ವರ್ಣಿಸಿದ್ದಾನೆ.

ತೀರ್ಥಂಕರ ಶಿಶುವಿನ ಜನನಕ್ಕೆ ಪುಳಕಗೊಂಡ ದೇವತೆಗಳು ಭೂಲೋಕಕ್ಕೆ ಸಂಭ್ರಮ ಗೊಂಡು ಬರುವ ವಿಚಾರ ಪೂರ್ವಪುರಾಣದಲ್ಲಿ ಹದಿಮೂರು ಶ್ಲೋಕಗಳಲ್ಲಿ (xiii-೧೪ ರಿಂದ ೨೬) ವಿವರವಾಗಿ ವರ್ಣಿತವಾಗಿದ್ದರೆ, ಆದಿಪುರಾಣದಲ್ಲಿ ಅದು ಎರಡು ವಚನಭಾಗ ಮತ್ತು ಒಂದು ಪದ್ಯದಲ್ಲಿ ಸಂಗ್ರಹಗೊಂಡಿದೆ. ಪಂಪನು ತೀರ್ಥಂಕರ ಶಿಶುವನ್ನು ಕರೆದುಕೊಂಡು ಹೋಗುವಾಗ ವರ್ಣನಾಂಶವನ್ನು ಹೆಚ್ಚು ವಿಸ್ತಾರಗೊಳಿಸದೆ ಸಂಗ್ರಹಿಸಿದ್ದಾನೆ. ಹೀಗಾಗಿ ಪೂರ್ವಪುರಾಣದಲ್ಲಿ ಬರುವ ಕೆಲವು ವರ್ಣನೆಗಳು ಇಲ್ಲಿ ಕಂಡು ಬರುವುದಿಲ್ಲ. ಉದಾಹರಣೆಗೆ, ಆ ಸೈನ್ಯದಲ್ಲಿ ಕೆಲವು ದೇವತೆಗಳು ನರ್ತನವನ್ನು ಮಾಡುತ್ತಿದ್ದರು, ಕೆಲವು ದೇವತೆಗಳು ಹಾವಭಾವಗಳನ್ನು ತೋರಿಸುತಿದ್ದರು, ಕೆಲವರು ಭುಜ ಮೊದಲಾದುವುಗಳ ಶಬ್ದಮಾಡುತ್ತಿದ್ದರು, ಕೆಲವರು ಮುಂದೆ ಓಡುತ್ತಿದ್ದರು, ಕೆಲವರು ಹಾಡುತ್ತಿದ್ದರು (xii-೨೦) ಇತ್ಯಾದಿ.

ಶಚೀದೇವಿಯು ಮರುದೇವಿಯ ಗೃಹವನ್ನು ಪ್ರವೇಶಿಸಿ ಜಿನಶಿಶುವನ್ನು ಎತ್ತಿಕೊಂಡು ಸಂತೋಷಗೊಂಡ ರೀತಿಯನ್ನು ಪಂಪನು ಪೂರ್ವಪುರಾಣದಿಂದ ತೆಗೆದುಕೊಂಡು ತನ್ನ ಧಾಟಿಯಲ್ಲಿ ಸೊಗಸಾಗಿ ವರ್ಣಿಸಿದ್ದಾನೆ. ಗುಪ್ತರೀತಿಯಿಂದ ಪ್ರವೇಶಮಾಡಿದ ಆ ಶಚೀದೇವಿಯು ಮರುದೇವಿಗೆ ಮಾಯಾನಿದ್ರೆಯನ್ನುಂಟುಮಾಡಿ, ಅವಳ ಮುಂದೆ ಬೇರೊಂದು ಮಾಯಾಶಿಶುವನ್ನಿರಿಸಿ, ಪಸರಿಸುತ್ತಿರುವ ತೇಜಸ್ಸಿನಿಂದ ಲೋಕವನ್ನು ವ್ಯಾಪಿಸುವ ಚೂಡಾರತ್ನದೋಪಾದಿಯಲ್ಲಿ ಜಗದ್ಗುರುಶಿಶುವನ್ನು ತನ್ನ ಕೈಗಳಿಂದ ತೆಗೆದುಕೊಂಡು ಬಹಳ ಸಂತೋಷಪಟ್ಟಳು. ಈಗ ಈ ಶಚೀದೇವಿಯು ಪಡೆಯಲಸದಳವಾದ ಆ ಜಿನಬಾಲಕನ ಶರೀರಸ್ಪರ್ಶವನ್ನು ಪಡೆದು ಮೂರು ಲೋಕದ ವಿಕಸಿತವಾದ ನೇತ್ರಗಳುಳ್ಳವಳಾಗಿ ಬಾರಿಬಾರಿಗೂ ಆ ಜಿನಬಾಲಕನ ಮುಖವನ್ನು ನೋಡಿ, ಆ ಮಗುವಿನ ಶರೀರವನ್ನು ಮುಟ್ಟಿ ಆಘ್ರಾಣವನ್ನು ಮಾಡಿ ಬಹಳವಾಗಿ ಪ್ರೀತಿಪಟ್ಟಳು. ಆಮೇಲೆ ಬಾಲಕನನ್ನು ತೆಗೆದುಕೊಂಡು ಹೋಗುತ್ತಿರುವಾಗ ಆ ಶಚೀದೇವಿಯು ತನ್ನ ದೇದೀಪ್ಯಮಾನವಾದ ಕಿರಣಗಳಿಂದ ಆಕಾಶವನ್ನು ವ್ಯಾಪಿಸುವ ಸೂರ್ಯನನ್ನು ತೆಗೆದುಕೊಂಡು ಹೋಗುವ ಸ್ವರ್ಗದಂತೆ ಶೋಭಿಸಿದಳು (xii-೩೦ ರಿಂದ ೩೫). ಇದು ಪೂರ್ವಪುರಾಣದಲ್ಲಿ ಬರುವ ವರ್ಣನಾ ವೈಖರಿ. ಪಂಪನು ಈ ಆನಂದದ ವೈಖರಿಯನ್ನು ಎರಡು ಪದ್ಯಗಳಲ್ಲಿ ಸುಂದರವಾಗಿ ವರ್ಣಿಸಿದ್ದಾನೆ (vii-೭-೪೬-೪೭).

ಶಚಿಗೆ ಆದ ಆನಂದ ಅಸದಳವಾದುದು. ಹಿಂದೆಂದೂ ಅನುಭವಕ್ಕೆ ಬಾರದೆ ಇರುವಂತಹದ್ದು. ಸ್ವರ್ಗದಲ್ಲಿ ಎಲ್ಲ ವೈಭವವೂ ಇದೆ. ಸುಖವಿದೆ. ಆದರೆ ಶಿಶುವಿನ ಒಡನಾಟ? ಹುಟ್ಟುತ್ತಿದ್ದಂತೆಯೇ ಯೌವನವೇ ಮೈವೆತ್ತುಬರುವ ದಿವಿಜರಿಗೆ ಈ ಸುಖ ಅಲ್ಲಿ ಸೊನ್ನೆಯೇ. ದೇವತೆಗಳು ಸ್ವರ್ಗಕ್ಕೆ ಒಯ್ಯುತ್ತಿರುವ ಶಿಶುವಾದರೂ ಸಾಮಾನ್ಯವಾದುದೇ? ಮುಂದೆ ಸ್ವರ್ಗಲೋಕವನ್ನು ಮೆಟ್ಟಿ ನಿಲ್ಲುವ ಮಹಾನ್ ಆತ್ಮ!

ಶಚೀದೇವಿಯು ಜಿನಶಿಶುವನ್ನು ತಂದು ದೇವೇಂದ್ರನ ಕೈಗೆ ಕೊಟ್ಟಾಗ ಆತನು ಆವೇಶಗೊಂಡವನಂತೆ ಸ್ತುತಿಸಲು ತೊಡಗಿದನು. ಪೂರ್ವಪುರಾಣದಲ್ಲಿ (xiii-೩೯ ರಿಂದ ೪೦) ಬರುವ ಈ ಭಾಗ ಆದಿಪುರಾಣದಲ್ಲಿ ಇಲ್ಲ.

ಮೆರವಣಿಗೆ ಹೊರಟಾಗ 'ಐರಾವತದ ದಂತಗಳಲ್ಲಿ ಮೂಡಿದ ಕಮಲಗಳ ಎಸಳುಗಳಲ್ಲಿ ಅಪ್ಸರ ಸ್ತ್ರೀಯರು ನರ್ತಿಸಿ ದೇವತೆಗಳಿಗೆ ಆನಂದವನ್ನುಂಟುಮಾಡಿದರು (xii-೫೭). ಪೂರ್ವಪುರಾಣದಲ್ಲಿ ಬರುವ ಈ ಒಂದು ಎಳೆಯನ್ನು ತೆಗೆದುಕೊಂಡು ಪಂಪನು ಭೂಮಾನುಭೂತಿಯನ್ನೊದಗಿಸಿರುವುದನ್ನು ಈ ಹಿಂದೆಯೇ ನೋಡಿದ್ದೇವೆ. ಪಂಪನ ಈ ಪ್ರಸಂಗದ ವರ್ಣನೆ ಸಾಹಿತ್ಯ ಪ್ರಪಂಚಕ್ಕೆ ಒಂದು ಅದ್ಭುತವಾದ ರಮ್ಯ ಕಾಣಿಕೆಯಾಗಿದೆ, ನಿಜ. ಆದರೆ ಈತನ ಈ ಪರಿಕಲ್ಪನೆ ಸ್ವಂತದ್ದಲ್ಲ. ಆದ್ದರಿಂದ ಇದರ ಹೆಗ್ಗಳಿಕೆಯಲ್ಲಿ ಪಂಪನದು ದ್ವಿತೀಯ ಸ್ಥಾನವೇ ಆಗಿದೆ. ಸ್ವಾಮಿಯ ಕೇವಲಜ್ಞಾನ ಕಲ್ಯಾಣವನ್ನು ಮಾಡಲು ದೇವತೆಗಳು ಸಡಗರದಿಂದ ಬರುತ್ತಿರುವಾಗ ಜಿನಸೇನರು ಈ ಭವ್ಯಕಲ್ಪನೆಯನ್ನು ನೀಡಿದ್ದಾರೆ. ಉದಾಹರಣೆಗೆ :

> ತಮ್ಮೈರಾವಣಮಾರೂಢಃ ಸಹಸ್ರಾಕ್ಷೋದ್ಯುತತ್ತರಾಂ |
> ಪದ್ಮಾಕರ ಇವೋತ್ಫುಲ್ಲಪಂಕಜೋ ಗಿರಿಮಸ್ತಕೇ ||

ದ್ವಾತ್ರಿಂಶದ್ವದನಾನ್ಯಸ್ಯ ಪ್ರತ್ಯಾಸ್ಯಂ ಚ ರದಾಷ್ಟಕಂ |
ಸರಃ ಪ್ರತಿರದಂ ತಸ್ಮಿನ್ನಬ್ಜಿನ್ಯೇಕಾ ಸರಃಪ್ರತಿ ||
ದ್ವಾತ್ರಿಂಶತ್ಪಸವಾಸ್ತಸ್ಯಾಂ ತಾವತ್ಪಮಿತ್ರಪತ್ರಕಾಃ |
ತೇಷ್ವಾಯತೇಷು ದೇವಾನಾಂ ನರ್ತಕ್ಯಸ್ತತ್ಪಮಾಃ ಪೃಥಕ್ ||
ನೃತ್ಯಂತಿ ಸಲಯಂ ಸ್ಮೇರವಕ್ತ್ರಾಬ್ಜಾ ಲಲಿತಭ್ರುವಃ |
ಪಶ್ಯಚ್ಚಿತ್ತದ್ರುಮೇಷೂಚ್ಚೈರ್ನ್ಯಸ್ಯಂತ್ಯಃ ಪ್ರಮದಾಂಕುರಾನ್ || (xxii-೫೩ ರಿಂದ ೫೬)

ಆ ಐರಾವತ ಗಜವನ್ನೇರಿದ ಸಾವಿರ ಕಣ್ಣುಗಳುಳ್ಳ ದೇವೇಂದ್ರನು ಪರ್ವತದ ಶಿಖರದಲ್ಲಿ ವಿಕಸಿತವಾದ ಕಮಲಗಳುಳ್ಳ ಪದ್ಮಸರೋವರದಂತೆ ಅಧಿಕವಾಗಿ ಪ್ರಕಾಶಿಸಿದನು. ಈ ಐರಾವತ ಗಜಕ್ಕೆ ಮೂವತ್ತೆರಡು ಮುಖಗಳೂ ಒಂದೊಂದು ಮುಖದಲ್ಲಿ ಎಂಟೆಂಟು ಹಲ್ಲುಗಳೂ ಒಂದೊಂದು ಹಲ್ಲಿನಲ್ಲಿ ಒಂದೊಂದು ಸರೋವರವೂ ಒಂದೊಂದು ಸರೋವರದಲ್ಲಿ ಒಂದೊಂದು ಕಮಲಲತೆಯೂ ಒಂದೊಂದು ಕಮಲಲತೆಯಲ್ಲಿ ಮೂವತ್ತೆರಡು ಕಮಲಗಳೂ ಒಂದೊಂದು ಕಮಲದಲ್ಲಿ ಮೂವತ್ತೆರಡು ಎಸಳುಗಳೂ ದೀರ್ಘವಾದ ಆ ಒಂದೊಂದು ಎಸಳಿನಲ್ಲಿ ಮಂದಹಾಸಯುಕ್ತವಾದ ಮುಖಕಮಲಗಳುಳ್ಳವರೂ ಮನೋಹರವಾದ ಹುಬ್ಬುಗಳುಳ್ಳವರೂ ಚೆನ್ನಾಗಿ ನೋಡುತ್ತಿರುವವರ ಮನಸ್ಸುಗಳೆಂಬ ವೃಕ್ಷಗಳಲ್ಲಿ ಸಂತೋಷಗಳೆಂಬ ಅಂಕುರಗಳನ್ನುಂಟುಮಾಡುವವರೂ ಆದ ಮೂವತ್ತೆರಡು ನರ್ತಕಿಯರು ಲಯಕ್ಕನುಸಾರವಾಗಿ ನರ್ತನ ಮಾಡುತ್ತಾರೆ.

ಪಂಪನು ಪೂರ್ವಪುರಾಣದ ಈ ವರ್ಣನೆಯನ್ನು ಜನ್ಮಾಭಿಷೇಕೋತ್ಸವದ ಸಂದರ್ಭದಲ್ಲಿ ಹೆಚ್ಚು ಸೂಕ್ತವೆಂದು ಭಾವಿಸಿ ಅಳವಡಿಸಿರುವಂತೆ ತೋರುತ್ತದೆ.

ದೇವತೆಗಳು ಜಿನಬಾಲಕನೊಡನೆ ಮೇರುಪರ್ವತದ ಕಡೆಗೆ ಹೊರಟಾಗ ಅಯೋಧ್ಯೆಯ ಜನ ಬೆಕ್ಕಸ ಬೆರಗಾಗಿ ನೋಡುತ್ತಾ ನಿಂತ ಚಿತ್ರಣ ಹಾಗೂ ಅಲ್ಲಿಯ ಸಹಜ ಸೌಂದರ್ಯವನ್ನು ಆದಿಪುರಾಣದಲ್ಲಿ ಚಿತ್ರಿಸಲಾಗಿದೆ. ಆ ವಿವರಗಳು ಪೂರ್ವಪುರಾಣದಲ್ಲಿ ಇಲ್ಲ (ಆದಿಪು.vii-೫೭). ಕವಿಯ ಸ್ವೋಪಜ್ಞತೆಗೆ ಈ ವರ್ಣನಾ ಸನ್ನಿವೇಶ ಉತ್ತಮ ಉದಾಹರಣೆಯಾಗಿದೆ.

ಮೇರು ಪರ್ವತದ ವನಗಳಲ್ಲಿ ದೇವಕನ್ಯೆಯರು ಹೂಗಳನ್ನು ಕಿತ್ತು ಅಲಂಕರಿಸಿಕೊಳ್ಳುವ ಉತ್ಸಾಹವನ್ನು ಅವರ ಬೆಡಗನ್ನು ಪಂಪನು ತನ್ನದೇ ಆದ ಕಲ್ಪನಾಶಕ್ತಿಯಿಂದ ವರ್ಣಿಸಿದ್ದಾನೆ. ಕೋಮಲ ಮಧುರ ವಾತಾವರಣವನ್ನು ಬಿಂಬಿಸುವ ಈ ಪ್ರಸಂಗವೂ ಸಹ ಪೂರ್ವಪುರಾಣದಲ್ಲಿ ಕಂಡುಬರುವುದಿಲ್ಲ.

ಸರಿಗೆಗಿವು ಲಂಬಣಕ್ಕಿವು |ಬರಗಲೆಗಿವು ಮುಗುಳ್ಗಳೆಮ್ಮ ಮೇಖಲೆಗಿವು ನೂ
ಪುರ ರಚನೆಗಿವೆಂದವನಾ | ದರದಿಂದಂ ಕೊಯ್ದುರಾಯ್ದು ದಿವಿಜಾಂಗನೆಯರ್
ಪೊಸಗಂಪುಗೊಂಡುಮವಱೊಳ್ | ಪಸದನಮಂ ನೆಱೆಯೆ ತಮಗೆ ಮಾಡಿಯುಮಂತುಂ
ಪೊಸಪೂವಿನ ಪೊಸದುಡಿಗೆಯ | ಪಸವೋಡಿದುದಿಲ್ಲ ದಿವಿಜವನಿತೆಯರ್ಗಾಗಳ್ (vii-೬೯, ೭೦)

ಜಿನಶಿಶುವಿನ ಕೋಮಲವಾದ ಶರೀರದಲ್ಲಿ ಸುರಿಯುವ ಧಾರೆಯನ್ನು ಮಗು ತಾಳಿಕೊಳ್ಳಲು ಸಾಧ್ಯವೇ? ಎಂಬೀ ಭಾವ ಬರುವ ಮಾತುಗಳು ಪಂಪನ ಪ್ರತಿಭೆಯಿಂದ ಮೂಡಿ ಬಂದ ಸೊಗಸಾದ ಭಾವಗಳೇ ಆಗಿವೆ (ಆದಿಪು. vii-೯೨). ದೇವತೆಗಳಂತೆಯೇ

ಓದುಗರಿಗೂ ಈ ಅನುಮಾನ ತಲೆದೋರಬಹುದು. ಅವರಿಗೂ ಉತ್ತರವೆಂಬಂತೆ ಈ ಮಾತುಗಳು ಕಂಡುಬರುತ್ತವೆ.

ಜಿನಬಾಲಕನ ಅಭಿಷೇಕದ ನಂತರ ದೇವತೆಗಳು ಅಯೋಧ್ಯೆಗೆ ಹಿಂದಿರುಗಿದರು. ಮಹಾಮೇರು ಪರ್ವತವು ನಿರ್ಜನವಾಯಿತು. ಮದುವೆ ಮುಗಿದ ಮೇಲೆ ನೆಂಟರು ಇಷ್ಟರು ಹೊರಟು ಹೋದನಂತರ ಮನೆಯು ಬಿಕೋ ಎನ್ನುವಂತೆ ಹಿಮವತ್ಪರ್ವತವು ಬಿಕೋ ಎಂದಿತು.

ಪರಮಜಿನಸವನ ಜಲನಿ | ರ್ಝ್ಝರಮುಂ ಸುರಬಲಪಯೋಧಿಕಲಕಲಮುಂ ಮಾ
ಣ್ದಿರೆ ನೋಡೆ ಬಿನ್ನನಿರ್ದ್ದುದು | ಸುರಶೈಲಮದೊಂದು ಮದುವೆಗಳಿಪಿದ ಮನೆವೊಲ್
(ಆದಿಪು.vii-೧೦೮)

ಜನರಿಗೆ ಹತ್ತಿರವಾದ ಉಪಮೆಯ ಮೂಲಕ ಪಂಪನು ವರ್ಣಿಸಿರುವ ರೀತಿ ಜಿನ ಸೇನರಲ್ಲಿಲ್ಲ.

ಮೇರು ಪರ್ವತದ ಪಾಂಡುಕ ಶಿಲೆ, ಅಭಿಷೇಕದ ವರ್ಣನೆಗಳನ್ನು ಪೂರ್ವಪುರಾಣದಲ್ಲಿ ಬರುವಂತೆಯೇ ಪಂಪನು ಸಂಗ್ರಹಿಸಿ ಅನುಕರಿಸಿದ್ದಾನೆ; ಭಾವಗೆಡದಂತೆ ಎಚ್ಚರಿಕೆ ವಹಿಸಿದ್ದಾನೆ.

ಕೆಲವೆಡೆ ಪೂರ್ವಪುರಾಣದ ವರ್ಣನಾಭಾಗವನ್ನು ಪಂಪನು ಕೈಬಿಟ್ಟಿದ್ದಾನೆ. ಪೂರ್ವ ಪುರಾಣದ ಕೆಲವು ರಮ್ಯ ಮನೋಹರ ದೃಶ್ಯಗಳು ಆದಿಪುರಾಣದಲ್ಲಿ ಕಂಡುಬರುವುದಿಲ್ಲ. ಉದಾಹರಣೆಗೆ, ಒದ್ದೆಯಾಗಿದ್ದ ಸ್ವಾಮಿಯ ಮೈಯನ್ನು ಶಚೀದೇವಿ ಒರೆಸಿದಳು. ಸ್ವಾಮಿಯ ಮುಖವನ್ನು ಒರೆಸಿದರೂ ಈಕೆಯ ಕಡೆಗಣ್ಣ ಛಕಾಂತಿ ಅಲ್ಲಿ ಕುಳಿತು ನೀರಹನಿ ಯಂತೆ ತೋಳಗಿತು. ಆಗ ಅದನ್ನು ಒರೆಸಲು ಆಕೆ ಹೆಣಗಾಡಿದಳು (ಪೂರ್ವಪು.xiv ೨,೩).

ಜಿನಶಿಶುವಿನ ಅಲಂಕಾರದ ನಂತರ ದೇವೇಂದ್ರನು ಜಿನಶಿಶುವನ್ನು ಸ್ತುತಿಸುವ ಭಾಗವು ೩೭ ಶ್ಲೋಕಗಳಲ್ಲಿ (xiv-೨೨ ರಿಂದ ೫೭) ಸಾಕಷ್ಟು ವಿಸ್ತಾರವಾಗಿ ಬಂದಿದೆ. ಕಥೆಯ ಓಟಕ್ಕೆ ತಡೆಯಾಗಬಹುದೆಂಬ ದೃಷ್ಟಿಯಿಂದ ಪಂಪನು ಇದನ್ನು ಕೈಬಿಟ್ಟಂತೆ ತೋರುತ್ತದೆ.

ಕೆಲವೆಡೆ ಪೂರ್ವಪುರಾಣದಲ್ಲಿ ಕಂಡು ಬರುವ ಸುದೀರ್ಘ ವರ್ಣನೆಯನ್ನು ಪಂಪನು ಔಚಿತ್ಯವರಿತು ಮೊಟಕುಗೊಳಿಸಿರುವುದುಂಟು. ಅಭಿಷೇಕದ ನಂತರ ಅಯೋಧ್ಯೆಗೆ ಬರುವ ದೇವತೆಗಳ ವರ್ಣನೆ ಪೂರ್ವಪುರಾಣದಲ್ಲಿ ೧೫ ಶ್ಲೋಕಗಳಲ್ಲಿ ಬರುತ್ತದೆ. ಅದೇ ಆದಿಪುರಾಣದಲ್ಲಿ ಈ ಭಾಗ ಹದವರಿತು ಬಂದಿದೆ.

ಕೆಲವೆಡೆ ಪೂರ್ವಪುರಾಣದ ನೇರವಾದ ಧ್ವನಿಯೇ ಪಂಪನಲ್ಲೂ ಕಂಡುಬರುತ್ತದೆ. ಮರುದೇವಿ ಮತ್ತು ನಾಭಿರಾಜರೇ! ನೀವೇ ಪುಣ್ಯವಂತರು. ಲೋಕೋತ್ತರನಾದ ಮಗ ನನ್ನು ಪಡೆದಿರುವಿರಿ. ನೀವೇ ಮಹಾ ಭಾಗ್ಯವಂತರು. ಲೋಕಾಧಿಪತಿಗೆ ನೀವು ಮಾತಾಪಿತ ರಾಗಿರುವಿರಿ. ಲೋಕದಲ್ಲಿ ನಿಮಗೆ ಎಣೆಯುಂಟೆ? (ಪೂರ್ವಪು. xiv-೭೮, ೭೯) ಎಂಬ ಈ ಹೊಗಳಿಕೆಯ ಹೃದಯದುಂಬಿದ ಮಾತನ್ನು ಪಂಪನು ಈ ರೀತಿ ಹೇಳಿದ್ದಾನೆ :

ದೊರೆನಿಮಗಿಲ್ಲ ಭೂಭುವನದೊಳ್ ಪೆಱರಿರ್ವ್ವರೆ ನೋಂತಿರೀಜಗ
ದ್ಗುರುಗೆ ಪಿತೃದ್ವಯಂಗಳೆನಿಸಲ್ ನೆಱೆದೊರ್ ಪೆಱರಾರೋ ನೀವೆ ಪೂ

ಜ್ಝರಿರೆಮಗೆಂದು ದಿವ್ಯವಸನಪ್ರಸವಾಭರಣಂಗಳಿಂದಮಾ
ದರಮಮುರ್ವ್ವಂತು ತದ್ಯುಗಳಮಂ ಪರಿಪೂಜಿಸಿದೊಂ ಸುರೇಶ್ವರಂ (vii-೧೧೨)

ಆನಂದ ನೃತ್ಯವನ್ನು ವರ್ಣಿಸುವಾಗ ಪಂಪನು ಪೂರ್ವಪುರಾಣದ ಪದಗತಿಯನ್ನು ಅನುಸರಿಸಿದ್ದಾನೆ. ಅದರ ಗಾಂಭೀರ್ಯ ಘನತೆಯನ್ನು ಉಳಿಸಿದ್ದಾನೆ.

ಪಂಪನು ಜಿನಸೇನರ ಪೂರ್ವಪುರಾಣವನ್ನು ಅನುಸರಿಸಿದ್ದರೂ ಅದರ ಪ್ರತಿಕೃತಿಯನ್ನಾಗಿ ಮಾಡಿಲ್ಲವೆಂಬುದು ಸ್ಪಷ್ಟ. ಉತ್ತಮ ಸಂಗ್ರಹಕಾರನಾಗಿ, ಅನುವಾದಕಾರನಾಗಿ, ಅಷ್ಟೇ ಅಲ್ಲದೆ ತನ್ನದೇ ಆದ ನೂತನ ವರ್ಣನಾ ವಿಧಾನವನ್ನು ಅಲ್ಲಲ್ಲಿ ಸಮೆದು ಸುಂದರಾಕೃತಿಯಲ್ಲಿ ಜನ್ಮಾಭಿಷೇಕವನ್ನು ಮೂಡಿಸಿದ್ದಾನೆ. ಕಲಾಭಿಷೇಕದ ಸ್ವೋಪಜ್ಞತೆಯನ್ನು ಮೆರೆದಿದ್ದಾನೆ.

## ಉತ್ತರಕಾಲೀನ ಕಾವ್ಯಗಳು

**ಚಾವುಂಡರಾಯಪುರಾಣ :** ಯಥಾರೀತಿ ಕವಿ ಇಲ್ಲಿಯೂ ಕೇವಲ ಘಟನಾ ಚೌಕಟ್ಟನ್ನು ಮಾತ್ರ ಪೂರ್ವಪುರಾಣ, ಆದಿಪುರಾಣಗಳಿಗನುಸಾರವಾಗಿ ಅಳವಡಿಸಿದ್ದಾನೆ. 'ಭೂಮಾನುಭೂತಿಯ' ವರ್ಣನೆಯನ್ನು ಪಂಪನು ನಿರೂಪಿಸಿರುವ ಸ್ಥಳದಲ್ಲಿಯೇ ಸಂಗ್ರಹಿಸಿ ಗದ್ಯರೂಪದಲ್ಲಿ ನಿರೂಪಿಸುವ ತಾಳ್ಮೆಯನ್ನು ತೋರಿದ್ದಾನೆ. ಬಹುಶಃ ಆ ಅದ್ಭುತ ಸೌಂದರ್ಯದ ವರ್ಣನೆ ಮನದಲ್ಲಿ ಬೇರೂರಿ ತನ್ನ ಕಾವ್ಯದಲ್ಲಿ ಅಳವಡಿಸಿಕೊಳ್ಳಲು ಒತ್ತಾಸೆಯಾದಂತೆ ತೋರುತ್ತದೆ. ಚೈತ್ರ ಬಹುಳ ನವಮಿಯ ಉತ್ತರಾಷಾಢ ನಕ್ಷತ್ರದ ಬ್ರಹ್ಮಯೋಗದಲ್ಲಿ ಜಿನಶಿಶುವು ಹುಟ್ಟಿರುವುದನ್ನು ಸೌಧರ್ಮೇಂದ್ರನು ಅವಧಿಯಿಂದ ಅರಿತನು. ಮುಂದೆ ಬರುವ ವರ್ಣನೆಯು ಆದಿಪುರಾಣ, ಪೂರ್ವಪುರಾಣಗಳಿಗೆ ಸಮನಾಗಿ ಇಲ್ಲಿಯೂ ಬರುವುದನ್ನು ಗಮನಿಸಬಹುದು.

> ಕಲ್ಪವಾಸಿಗಳ್ ಘಂಟಾಟಂಕಾರದಿಂ ಜ್ಯೋತಿಷರ್ ಸಿಂಹನಾದದಿಂ ವ್ಯಂತರಾಮರರ್ ಭೇರಿನಿನಾದದಿಂ ಭವನವಾಸಿಗಳ್ ಶಂಖನಿನಾದದಿಂದಱಿದು ಆತನಾಜ್ಞೆಯಿಂ ಗಜರಥಾಶ್ವ ವೃಷಭ ಗಾಂಧರ್ವ ನರ್ತಕೀ ಪದಾತಿ ಲಕ್ಷಣಮಪ್ಪ ಸಪ್ತಾನೀಕಂ ಬೆರಸು ಬರೆ (ಚಾವುಂಪು. ಪು. ೪೨)

ಭವನವನಜ್ಯೋತಿಃ ಕ | ಲ್ಪವಾಸದೊಳ್ ಕ್ರಮದೆ ಶಂಖ ಭೇರೀ ಕಂಠೀ
ರವ ಘಂಟಾಧ್ವನಿಗಳ್ ನೆಗ | ೞ್ದುವು ಭೋಂಕೆನೆ ಸಕಳವಿಷ್ಟಪಾಶ್ಚರ್ಯಂಗಳ್
(ಆದಿಪು. vii-೪೦)

ಘಂಟಾಕಂಠೀರವಧ್ವಾನಭೇರೀಶಂಖಾಃ ಪ್ರದಧ್ವನುಃ |
ಕಲ್ಪೇಶಜ್ಯೋತಿಷಾಂ ವನ್ಯಭಾವನಾನಾಂ ಚ ವೇಶ್ಮಸು || (ಪೂರ್ವಪು. xiii- ೧೩)

ಚಾವುಂಡರಾಯನು ತನ್ನ ಹಿಂದಿನ ಎರಡು ಪುರಾಣಗಳನ್ನು ಅನುಸರಿಸಿ ಸಾಂಪ್ರದಾಯಿಕ ಶೈಲಿಯಲ್ಲೇ ವಿವರಗಳನ್ನು ಸಂಗ್ರಹಿಸಿದ್ದಾನೆ. ದೇವೇಂದ್ರನ ಆಜ್ಞೆಯಂತೆ ಚತುರ್ನಿಕಾಯಾಮರರು ನಡೆದುಕೊಂಡರೆಂಬ ಮಾತು ಆದಿಪುರಾಣದಲ್ಲಿ ಬರುವುದಿಲ್ಲ. ಪೂರ್ವಪುರಾಣದಲ್ಲಿ ಇರುವ ವೃತ್ತಾಂತವನ್ನು ಚಾಮುಂಡರಾಯನು ಅನುಸರಿಸಿದ್ದಾನೆ. ಆದಿಪುರಾಣದಲ್ಲಿಯಾದರೋ ಚತುರ್ನಿಕಾಯ ಸಮೂಹ ಅವರ ಪರಿವಾರದೊಡನೆ ತಾನೇ

ಬಂದು ನಿಲ್ಲುತ್ತದೆ; ದೇವೇಂದ್ರನ ಆಜ್ಞೆಯಿಂದಲ್ಲ.

ಶಚೀದೇವಿ ಮರುದೇವಿಯ ಪ್ರಸೂತಿಗೃಹವನ್ನು ಪ್ರವೇಶಮಾಡಿ ಮಗುವನ್ನು ಕರೆತಂದು ದೇವೇಂದ್ರನಿಗೆ ಒಪ್ಪಿಸುತ್ತಾಳೆ. ಮುಂದೆ ಕವಿ ಹೇಳುವ ಮಾತು ಪೂರ್ವಪುರಾಣದ ಅನುವಾದವಾಗಿದೆ.

> ಜಿನಶಿಶುವನೆತ್ತಿಕೊಂಡು ಜಗತ್ರಯದೊಳತಿದುರ್ಲಭಮಪ್ಪ ಜಿನ ರಾಜಗಾತ್ರ ಸ್ಪರ್ಶಸುಖಮಂ ಪಡೆದು ಪಿಂಡೀಕೃತ ತ್ರಿಭುವನ ಸುಖಮನನುಭವಿಸಿದಂತೆ ಸಂತೋಷಂಬಟ್ಟು (ಚಾವುಂಪು. ಪು. ೪೨).
>
> ತದ್ಗಾತ್ರಸ್ಪರ್ಶಮಾಸಾದ್ಯ ಸುದುರ್ಲಭಮಸೌ ತದಾ |
> ಮೇನೇ ತ್ರಿಭುವನೈಶ್ವರ್ಯಂ ಸ್ವಸಾತ್ಕೃತಮಿವಾಖಿಲಂ || (ಪೂರ್ವಪು. ೧೩-೩೩)

ಈಗ ಈ ಶಚೀದೇವಿಯು ಪಡೆಯಲಸದಳವಾದ ಆ ಜಿನಬಾಲಕನ ಶರೀರಸ್ಪರ್ಶವನ್ನು ಹೊಂದಿ ಮೂರುಲೋಕದ ಐಶ್ವರ್ಯವನ್ನೆಲ್ಲ ತನ್ನ ಅಧೀನಮಾಡಿಕೊಂಡಂತೆ ತಿಳಿದಳು.

ವೃಷಭನೆಂಬ ಹೆಸರಿನ ವೃತ್ತಾಂತವನ್ನು ಇಲ್ಲಿ ಕೈಬಿಡಲಾಗಿದೆ. ಸುರಪುರಾದಿ ಜನರ ವರ್ಣನೆಗೆ ಅವಕಾಶವೀಯದೆ ಕವಿ ಸನ್ನಿವೇಶವನ್ನು ಅತ್ಯಂತ ಸಂಗ್ರಹಗೊಳಿಸಿದ್ದಾನೆ. ಪೂರ್ವಪುರಾಣ, ಆದಿಪುರಾಣಗಳ ನೂರಾರು ಶ್ಲೋಕಗಳ ಪದ್ಯಗಳ ಮಹಾಪೂರದಲ್ಲಿ ಇದೊಂದು ಸಣ್ಣ ತೊರೆಯಾಗಿ ಕಂಡುಬರುತ್ತದೆ.

**ಹಸ್ತಿಮಲ್ಲನ ಪೂರ್ವಪುರಾಣ** : ಇಲ್ಲಿ ನಿರೂಪಣೆಯು ಅತ್ಯಂತ ಪರಿಮಿತ ಸಂಗ್ರಾಹಕತೆಯತ್ತ ಸಾಗಿದೆ. ಘಟನಾವಳಿಗಳಂತೂ ಯಾಂತ್ರಿಕವಾಗಿ ನಿರೂಪಿತವಾಗಿವೆ. ಚೈತ್ರ ಮಾಸದ ನವಮೀ ಉತ್ತರಾಷಾಢ ನಕ್ಷತ್ರ ಬ್ರಹ್ಮಯೋಗದ ಸೂರ್ಯೋದಯ ಕಾಲದಲ್ಲಿ ಮಗುವಿನ ಜನನವಾಯಿತೆಂದು ಹೇಳಿ ಕವಿ 'ಭವ್ಯ ಜನಗಳ್ಗೆ ಸುಖವೀವ ಕಾಮಧೇನು ಕಲ್ಪವೃಕ್ಷ ಚಿಂತಾಮಣಿ ಪುಟ್ಟುವಂತೆ ಪುಟ್ಟಿ' ಎಂಬ ಹೋಲಿಕೆಯನ್ನು ನೀಡಿ ಆದಿದೇವನ ಜನ್ಮ ಮಹತ್ತ್ವವನ್ನು ನಿರೂಪಿಸಿದ್ದಾನೆ. ಅನಂತರ ಕಲ್ಪವೃಕ್ಷಗಳಿಂದ ಪುಷ್ಪವೃಷ್ಟಿ, ಧರಣೇಂದ್ರಾದಿ ಲೋಕಗಳಲ್ಲಿ ಸಿಂಹಾದಿ ಧ್ವನಿಗಳು ಉಂಟಾಗುವುವು. ದೇವೇಂದ್ರಾದಿಗಳ ಮಕುಟವೆರಗಿ ಸಿಂಹಾಸನಕಂಪನಾದಿ ಆಶ್ಚರ್ಯಗಳಾಗುವುವು. ಶಚೀದೇವಿ ಮಗುವನ್ನು ದೇವೇಂದ್ರನಿಗೀಯುವ ರೀತಿಯಲ್ಲಿ ಆದಿಪುರಾಣವನ್ನನುಸರಿಸಿ ಹೇಳಿದ್ದಾನೆ. 'ಬಡವಂ ನಿಧಾನಮಂ ಕಂಡಂತಾನಂದಂ ಬಟ್ಟು' ಮಗುವನ್ನು ತೊಡೆಯಲ್ಲಿ ಏರಿಸಿಕೊಂಡು ಮೇರುವಿನ ಪಾಂಡುಕವನದ ಪಾಂಡುಕಶಿಲೆಯ ಮೇಲಿನ ಸಿಂಹಪೀಠದಲ್ಲಿ ಕುಳ್ಳಿರಿಸಿ, ಕ್ಷೀರಸಮುದ್ರದ ಜಲದಿಂದ ದೇವೇಂದ್ರ ಈಶಾನೇಂದ್ರರು ಅಭಿಷೇಕ ಮಾಡಿ, ಸಕಲಾಭರಣಗಳಿಂದ ಅಲಂಕರಿಸಿ, ಮತ್ತೆ ಅಯೋಧ್ಯೆಯನ್ನು ಪ್ರವೇಶಿಸಿ ಜಿನಜನನಿಜನಕರನ್ನು ಪೂಜಿಸಿ, ಮಗುವಿಗೆ ವೃಷಭೇಂದ್ರನೆಂಬ ಹೆಸರನ್ನಿಟ್ಟು ಆನಂದನೃತ್ಯವನ್ನು ಮಾಡಿ ಹೋದರು ಎಂಬ ವೃತ್ತಾಂತವಷ್ಟೇ ಇಲ್ಲಿ ಬಂದಿರುವ ಭಾಗ.

ಚಾವುಂಡರಾಯಪುರಾಣದಲ್ಲಿ ಕವಿ ಕೆಲವಂಶಗಳನ್ನಾದರೂ ವರ್ಣಿಸಲು ಮನಸ್ಸು ಮಾಡಿದ್ದಾನೆ. ಆದರೆ ಇಲ್ಲಿ ಹಾಗಿಲ್ಲ. ಭೂಮಾನುಭೂತಿಯ ಪ್ರಸಂಗವಿಲ್ಲ. 'ವೃಷಭ' ನೆಂಬ ಹೆಸರಿನ ವಿವರಣೆ ಪೂರ್ವಪುರಾಣ, ಆದಿಪುರಾಣಗಳಿಗೆ ಅನುಸಾರವಾಗಿ ಬಂದಿದೆ.

**ಪುಣ್ಯಾಸ್ರವದ ಆದೀಶ್ವರರ ಕಥೆ** : ಜಿನಶಿಶುವಿನ ಜನನವನ್ನರಿತು ಸೌಧರ್ಮೇಂ

ದ್ರಾದಿಗಳು ವಾಹನ, ಆಯುಧ, ಧ್ವಜ, ಪರಿವಾರಸಹಿತರಾಗಿ ಬಂದು ತಾಯಿಯ ಮುಂದೆ ಮಾಯಾಶಿಶುವನ್ನಿರಿಸಿದ ನಂತರ, ಕುಮಾರನನ್ನು ಕರೆದುಕೊಂಡು ಹೋಗಿ ಪಾಂಡುಕ ಶಿಲೆಯಲ್ಲಿರಿಸಿ, ಎಂಟು ಯೋಜನದುದ್ದ, ನೂರು ಯೋಜನ ವಿಸ್ತಾರ, ಐವತ್ತಾರು ಯೋಜನ ಅಗಲವುಳ್ಳ ಚಂದ್ರಕಾಂತದ ಕೋಟ್ಯಂತರ ಕೋಟ್ಯನುಕೋಟಿ ಘಟಗಳಿಂದ ಸೌಧರ್ಮೇಂದ್ರ ಈಶಾನೇಂದ್ರರು ಕ್ಷೀರಾಬ್ಧಿಯ ಹಾಲಿನಿಂದ ಜನ್ಮಾಭಿಷೇಕವನ್ನು ಮಾಡಿ ಅನಂತರ ಮಗುವಿಗೆ ಉಚಿತವಾದ ತೊಡುಗೆಗಳನ್ನು ತೊಡಿಸಿ ತಾಯಿ ತಂದೆಗಳಿಗೆ ಮಗನನ್ನು ಕೊಟ್ಟು ಆನಂದಂ ನೃತ್ಯವನ್ನು ಮಾಡಿ 'ಸದ್ಧರ್ಮಪ್ರವರ್ತಿಸುಗುಮೆಂದೆ' ವೃಷಭನಾಭನೆಂದು ಹೆಸರನ್ನು ಇಟ್ಟು ನಿವಾಸಕ್ಕೆ ಹೋದರು. ಇದು ಇಲ್ಲಿ ಬರುವ ನಿರೂಪಣೆ.

ಜನ್ಮಾಭಿಷೇಕದ ವಿವರಣೆಯಲ್ಲಿ ಪೂರ್ವಾರ್ಧದಲ್ಲಿ ಉಳಿದ ಕಾವ್ಯಗಳಲ್ಲಿ ಬಂದಿರುವಂತೆ ಆಸನಕಂಪದ ವಿವರವಾಗಲಿ, ಗಂಟಾನಿನಾದಾದಿಗಳ ವಿವರವಾಗಲಿ ಇಲ್ಲ. ಶಚೀದೇವಿಯು ಮರುದೇವಿಯ ಬಳಿಗೆ ಹೋಗುವ ಪ್ರಸಂಗವೂ ಇಲ್ಲ. ಉತ್ತರಾರ್ಧದಲ್ಲಿ ಅಂದರೆ ಶಿಶುವಿಗೆ ಅಭಿಷೇಕ ಮಾಡಿಸುವ ಭಾಗದಲ್ಲಿ ಪೂರ್ವಪುರಾಣ, ಆದಿಪುರಾಣದ ಜಾಡನ್ನು ಹಿಡಿದು ವಿವರಗಳು ಸಂಕ್ಷೇಪಗೊಂಡು ಬರುತ್ತವೆ. ಕೊಡಗಳ ವಿಸ್ತೀರ್ಣದ ವೈಭವವನ್ನು ಮಾತ್ರ ಹೇಳಿದೆ. ಉಳಿದ ಕಾವ್ಯಗಳಲ್ಲಿ ದೇವೇಂದ್ರನು ಶಿಶುವಿಗೆ 'ವೃಷಭ'ನೆಂದು ಹೆಸರಿಟ್ಟನೆಂದು ಬಂದಿದ್ದರೆ, ಇಲ್ಲಿ 'ವೃಷಭನಾಭ'ನೆಂಬ ಹೆಸರು ಕಂಡುಬರುತ್ತದೆ. ಇದು ಈ ಕಾವ್ಯದ ಮುಖ್ಯ ಬದಲಾವಣೆ. ವರದಿ ಮಾತ್ರವಾಗಿ ನಿರೂಪಣೆ ಬಂದಿದೆ; ಕಾವ್ಯಾಂಶವಿಲ್ಲ.

**ಪುರುದೇವಚರಿತ :** ಕವಿ ಸಾಕಷ್ಟು ವಿಸ್ತೃತವಾದ ಹರವನ್ನು ಜನ್ಮಾಭಿಷೇಕ ಕಲ್ಯಾಣದ ವರ್ಣನೆಗಾಗಿ ನಿಯೋಜಿಸಿದ್ದಾನೆ. ೫ನೇ ಅಧ್ಯಾಯದಲ್ಲಿ ಒಟ್ಟು ೯೯ ಪದ್ಯಗಳಲ್ಲಿ ಈ ನಿರೂಪಣೆ ಸಾಗುತ್ತದೆ. ಛಂದಸ್ಸಿನ ವೈವಿಧ್ಯವೂ ಇಲ್ಲಿ ಬಂದಿದೆ. ಸಾಂಗತ್ಯವಲ್ಲದೆ ವೃತ್ತ ಪದಗಳೂ ಸಹ ಇಲ್ಲಿ ಬಂದಿವೆ.

ಇಂದ್ರರ ಆಸನಕಂಪ, ಘಂಟಾನಾದಾದಿಗಳ ನಿನಾದ, ಅಯೋಧ್ಯಾಪುರದಲ್ಲಿ ಸಡಗರ, ದೇವತೆಗಳ ಆಗಮನ, ಶಚೀದೇವಿ ಮಗುವನ್ನು ಕಂಡದ್ದು, ತಾಯಿಗೆ ಮಾಯಾನಿದ್ರೆಯನ್ನುಂಟುಮಾಡಿ ಮಗುವನ್ನು ಕರೆತಂದುದು, ಆನಂದಿಸಿದುದು, ತ್ರಿದಶಾಧಿಪನನ್ನು ಐರಾವತದ ಮಸ್ತಕದ ಪೀಠದಲ್ಲಿ ಇರಿಸಿದುದು, ದೇವೇಂದ್ರನು ಸಹಸ್ರಾಕ್ಷನಾದುದು, ವೈಭವದಿಂದ ಜಿನಶಿಶುವನ್ನು ಮೇರುಗಿರಿಯತ್ತ ಕರೆದೊಯ್ದುದು, ಭೂಮಾನುಭೂತಿಯ ವರ್ಣನೆ, ಅಭಿಷೇಕದ ವರ್ಣನೆ, ಅಷ್ಟವಿಧಾರ್ಚನೆ, ಶಚೀದೇವಿಯಿಂದ ದೇವಶಿಶುವಿಗೆ ಅಲಂಕರಣ, ಅಯೋಧ್ಯೆಗೆ ಮರುಪಯಣ, ನಾಭಿರಾಜ ಮರುದೇವಿಯರಿಗೆ ಪೂಜೆ ಸಲ್ಲಿಸಿದುದು, ದೇವಮಾನವರಿಂದ ಸ್ತುತಿ, ದೇವೇಂದ್ರನ ಆನಂದದ ನೃತ್ಯ, ಅಮರರು ದೇವಲೋಕಕ್ಕೆ ಹಿಂದಿರುಗಿದುದು, ಈ ವಿಸ್ತಾರವಾದ ಸಂಯೋಜನೆ ಇಲ್ಲಿ ಅಳವಟ್ಟಿದೆ. ಕವಿ ಪೂರ್ವಪುರಾಣ, ಆದಿಪುರಾಣಗಳನ್ನು ಅನುಸರಿಸಿದ್ದರೂ ಈ ಭಾಗದಲ್ಲಿ ತನ್ನ ಸ್ವೋಪಜ್ಞತೆಯನ್ನು ಮೆರೆಯುವಲ್ಲಿ ಸಫಲನಾಗಿದ್ದಾನೆ.

ಚತುರ್ನಿಕಾಯ ದೇವತೆಗಳೊಂದಿಗೆ ಇಂದ್ರನ ಪಯಣ ಅಯೋಧ್ಯೆಯತ್ತ ಸಾಗುತ್ತದೆ.

ಪುರದೊಳು ಗುಡಿತೋರಣ ರಂಗವಲಿ ಕೇತು | ಪರಿಮಲ ಗಂಧೋದಕ
ಸುರಭಿ ಕಾಲಾಗರು ಧೂಪಸಾರಣೆ ಸುಂ | ದರಿಯರ ಗೀತನರ್ತನವು (iv-೫)
ಮನುವಂಶಾಂಬುಧಿ ಚಂದ್ರ ನಾಭಿರಾಜನ ಗೃಹಾಂ | ಗಣದೊಳು ರಾಯರಾವುತರು
ಮನುಜೇಶ ಮಂಡಳಿಕರು ರಾಜಮಹಾರಾಜ | ರಿನಿಸೆಡೆಯಿಲ್ಲನೋಳ್ಪರಿಗೆ (v-೫)

ನಾಭಿರಾಜ ಮನುವಿನ ಮಗನ ಜನನದಿಂದ ನಗರ ಆನಂದ ಸಂಭ್ರಮದಲ್ಲಿ ತೇಲಾಡುತ್ತಿತ್ತು. ಪುರಜನರಿಂದ, ರಾಜಮಹಾರಾಜಾದಿಗಳಿಂದ ಅರಮನೆ ತುಂಬಿ ತುಳುಕುತ್ತಿತ್ತು. ಇದು ದೇವತೆಗಳು ಬುವಿಗಿಳಿದು ಬರುವ ಮುನ್ನ ನೀಡಿರುವ ವರ್ಣನೆ. ಅಲೌಕಿಕ ವರ್ಣನಾ ವಿಧಾನದ ಲೇಪನವಿಲ್ಲದೆ ನೀಡಿರುವ ವರ್ಣನೆ ಸಹಜ ಸುಂದರವಾಗಿ ಬಂದಿದೆ. ಆದಿಪುರಾಣದಲ್ಲಿ ಪುರಜನರು ಸೂಚಿಸುವ ಸಂತೋಷದ ಸಂಭ್ರಮಗಳು ಸವಿವರವಾಗಿ ಬರುತ್ತವೆ. ಅದನ್ನೇ ಕವಿ ಸಂಗ್ರಹವಾಗಿ ತನ್ನದೇ ಆದ ಶೈಲಿಯಲ್ಲಿ ನೀಡಿದ್ದಾನೆ.

ರತ್ನಪ್ರಭೆಯಿಂದ ರಾರಾಜಿಸುತ್ತಿದ್ದ ಶಚೀದೇವಿಯು ಭಕ್ತಿ ಭಾವದಿಂದ ಭವನವನ್ನು 'ಮೇರು ತಾರಾಳಿ ಬಳಸಿ ಬರ್ಪಂತೆ' ಬಲಗೊಂಡು ಬಂದಳು. ಮಂಗಳ ಪ್ರಸಾಧನಗಳಿಂದ ಕೂಡಿದ ರತ್ನ ತೋರಣಗಳಿಂದ ಶೃಂಗಾರಗೊಂಡ ಸದನವನ್ನು ಹೊಕ್ಕ ಶಚೀದೇವಿಯು 'ಕಂಗಳ ಮನುಮನೋರ್ಮೆಯೆ ಸೂರೆಗೊಂಬ ಬೆಡಂಗಿನ ದಿವ್ಯಮೂರ್ತಿ'ಯನ್ನು ಕಂಡಳು. ಹೀಗೆ ಕವಿ ತನ್ನ ಕಾವ್ಯದಲ್ಲಿ ಹೊಸ ರೀತಿಯಲ್ಲಿ ವರ್ಣನಾಂಶಗಳನ್ನು ಶ್ರದ್ಧೆಯಿಂದ ಅಳವಡಿಸಿದ್ದಾನೆ. ಜಗದೋದ್ಧಾರಕನಾದ ಜಿನಶಿಶುವಿನ ಜನನದ ವರ್ಣನಾ ವಿಧಾನದಲ್ಲಿ ಕವಿ ವಿಶೇಷವಾದ ಆಸಕ್ತಿಯನ್ನು ತೋರಿದ್ದಾನೆ. ಮೂಲ ವಿನ್ಯಾಸಕ್ಕೆ ಧಕ್ಕೆಯಾಗದಂತೆ ಕವಿ ಸಾಗಿದ್ದಾನೆ. ಶಚೀದೇವಿ ಮಗುವನ್ನು ಕೈಯಲ್ಲಿ ಎತ್ತಿಕೊಂಡು ಬಂದ ವರ್ಣನೆಯಲ್ಲಿ ಪಂಪನ ಅನುಕರಣೆಯನ್ನು ಗಮನಿಸಬಹುದಾಗಿದೆ :

ಬಡವಗರಸರ ತೊಡವ ತೊಟ್ಟನೆ ಕಂಡು | ಪಿಡಿಯಲಮ್ಮದೆ ಬೆರಗಾಗಿ
ಕಡೆಸಾರ್ದು ನಿಂದಂತೆ ಪೌಲೋಮಿಬೆಕ್ಕಸ | ವಡುತ ನೋಡಿದಳು ಬಾಲಕನ
ಇದು ಚಿತ್ತದ ಚಿಂತಾಮಣಿ ತ್ರೈಲೋ | ಕ್ಯದ ಸಂಪತ್ತಿನಾವಾಸ
ಇದು ಕಂಗಳ ಕೌತುಕ ನಿತ್ಯ ಸೌಖ್ಯ ಸಂ | ಪ್ರದ ಕಾಮಗವಿ ಕಲ್ಪವೃಕ್ಷ
ಎಂದಿಂತು ರಾಗಿಸಿ ಸುರತರು ಫಲವವಾ | ನಂದದಿಂ ಫಲದಳೆವಂತೆ
ಕೆಂದಳದಳಿಯೆ ಮೈಜುಮ್ಮೇರಿ ನಳಿ ತೋಳ್ಗ | ಳಿಂದೆತ್ತಿ ಪೆಗಲೊಳಿಟ್ಟು (v-೧೩-೧೫)

ಮರುದೇವಿಗೆ ಮಾಯಾನಿದ್ರೆಯನ್ನುಂಟುಮಾಡಿ ಮಗುವನ್ನು ಕರೆತಂದಳು. ಶಚೀದೇವಿಯು ಜಗದೊಡೆಯನಾಗುವ ಆ ಶಿಶುವನ್ನು ನೋಡಿ ಕೆಲಕ್ಷಣ ಬೆಕ್ಕಸ ಬೆರಗಾದ ರೀತಿಯನ್ನು, ಮಗುವನ್ನು ಕುರಿತು ಹೇಳಿಕೊಂಡ ಹೊಗಳಿಕೆಯ ಮಾತುಗಳನ್ನು, ರೋಮಾಂಚನಗೊಂಡು ಮಗುವನ್ನು ಕೈಗೆತ್ತಿಕೊಂಡ ರೀತಿಯನ್ನು ಚಿತ್ರೀಕರಿಸುವಲ್ಲಿ ಕವಿಯ ಕಾವ್ಯಪ್ರಜ್ಞೆ ಪ್ರಜ್ವಲಿಸಿದೆ. ಪೂರ್ವಪುರಾಣದಲ್ಲಿ 'ಪಸರಿಸುತ್ತಿರುವ ತೇಜಸ್ಸಿನಿಂದ ಲೋಕವನ್ನು ವ್ಯಾಪಿಸುವ ಚೂಡಾರತ್ನದೋಪಾದಿಯಲ್ಲಿ ಜಗದ್ಗುರು(ಶಿಶು)ವನ್ನು ತನ್ನ ಕೈಗಳಿಂದ ತೆಗೆದುಕೊಂಡು ಶಚೀದೇವಿಯು ಬಹಳ ಸಂತೋಷಪಟ್ಟಳು' (xiii-೩೨) ಎಂದಷ್ಟೇ ವರ್ಣನೆ ಬರುತ್ತದೆ.

ಆದಿಪುರಾಣದಲ್ಲಿ ಈ ಸಂದರ್ಭದಲ್ಲಿ ಬರುವ 'ಪಡೆಯಲಾಗದ ನಿಧಿಯನ್ನು ಬಡವನು ಪಡೆಯುವ ಹಾಗೆ' ಎಂಬ ಹೋಲಿಕೆಯೊಂದಿಗೆ ಅದರಂತಹದ್ದೇ ಆದ ಮತ್ತೊಂದು ಉಪಮೆಯ ಮೂಲಕ ಕವಿ 'ಬಡವಗರಸರ ತೊಡವ ತೊಟ್ಟನೆ ಕಂಡು ಪಿಡಿಯಲಮ್ಮದೆ ಬೆರಗಾಗಿ' ಎಂದು ವರ್ಣಿಸಿದ್ದಾನೆ. ಉಳಿದಂತೆ ಶಾಂತಿಕೀರ್ತಿಯು ತನ್ನದೇ ಆದ ಧಾಟಿಯಲ್ಲಿ ಚಿತ್ರಗತ ಶೈಲಿಯಲ್ಲಿ ಈ ಪ್ರಸಂಗವನ್ನು ಚೆನ್ನಾಗಿ ಮೂಡಿಸಿದ್ದಾನೆ. ಚಾವುಂಡರಾಯಪುರಾಣ, ಹಸ್ತಿಮಲ್ಲನ ಪೂರ್ವಪುರಾಣ, ಪುಣ್ಯಾಸ್ರವದ ಆದೀಶ್ವರರ ಕಥೆಗಳ ಕಿರಿದಾದ ಹರವಿನಲ್ಲಿ ಈ ವರ್ಣನೆಗಳಿಗೆ ಅವಕಾಶವೇ ಇಲ್ಲ.

ಸುರಸತಿಯರು ಬೆಳ್ಗೊಡೆಯನ್ನು ಹಿಡಿದರು. ಚಾಮರಗಳು ತೆರೆಯ ಮಾಲೆಯಂತೆ ಕಂಡು ಬಂದುವು. ನದಿಯು ಸುರತರುವನ್ನು ಹೊತ್ತಂತೆ, ಇವುಗಳ ಮಧ್ಯೆ ಮಗುವು ಮೋಹವಾಗಿ ಕಂಡುಬರುತ್ತಿತ್ತು. ಈ ಮೊದಲಾದ ವಿವರಗಳು ಶಾಂತಿಕೀರ್ತಿಯ ಕಲ್ಪಿತ ಉಪಮೆಗಳೇ. ಪೂರ್ವಪುರಾಣ, ಆದಿಪುರಾಣಗಳಲ್ಲಿ ಶಿಶುವನ್ನು ದೇವೇಂದ್ರನು ತೊಡೆಯ ಮೇಲಿರಿಸಿಕೊಂಡು ಐರಾವತದಲ್ಲಿ ಕುಳಿತುಕೊಂಡನೆಂಬ ವರ್ಣನೆ ಬಂದರೆ, ಇಲ್ಲಿ ಮಗುವನ್ನು ಕರಿಯ ಮಸ್ತಕದ ಪೀಠದಲ್ಲಿ ಇಡಲಾಯಿತೆಂದು ಹೇಳಲಾಗಿದೆ. ಈ ವಿವರ ಪೂರ್ವಪುರಾಣ, ಆದಿಪುರಾಣಗಳಲ್ಲಿ ಕಂಡುಬರುವ ಆತ್ಮೀಯತೆಯ ಆವರಣದಿಂದ ವಂಚಿತವಾದಂತೆ ಕಂಡುಬರುತ್ತದೆ.

ದೇವೇಂದ್ರನು ಮಗುವಿನ ಸೌಂದರ್ಯವನ್ನು ತಣಿಯಲು ಸಹಸ್ರಾಕ್ಷನಾದನು. ಮಗುವಿನ ಪಾದಪದ್ಮಗಳನ್ನು, ಬಾಹು, ಹೃದಯ, ನೊಸಲುಗಳನ್ನು ಮಸ್ತಕದಲ್ಲಿ ಒತ್ತಿಕೊಂಡು ಭಕ್ತಿಗೌರವ ಆದರಗಳನ್ನು ವ್ಯಕ್ತಪಡಿಸಿದನು. ಈ ವಿವರಗಳೂ ಸಹ ಇಲ್ಲಿ ಹೊಸದಾಗಿ ಬಂದು ಸೇರಿವೆ. ಅಲ್ಲದೆ ದೇವೇಂದ್ರನು ಸಹಸ್ರಾಕ್ಷನಾಗುವುದು ಜಿನಶಿಶುವಿನ ಅಭಿಷೇಕದ ಸಮಯದಲ್ಲಿ. ಆದರೆ ಆ ವಿಷಯವನ್ನು ಕವಿ ಇಲ್ಲಿಯೇ ನೀಡಿದ್ದಾನೆ.

ಭೂಮಾನುಭೂತಿಯ ವರ್ಣನೆ ನಿರೂಪಣಾರೀತಿಯಲ್ಲಿ ಮಾತ್ರ ಬರುತ್ತದೆ. ಆದಿಪುರಾಣದ ಔನ್ನತ್ಯ ಇಲ್ಲಿಲ್ಲ.

ಪಾಂಡುಕಶಿಲೆಯತ್ತ ಸುರಸೈನ್ಯ ಹೊರಟಾಗ ಆಗಸವೆಲ್ಲ ವಿಮಾನ ಛತ್ರಗಳಿಂದ ವ್ಯಾಪಿಸಿತು. ದಿಗ್ಭಾಗವೆಲ್ಲವೂ ಪರಿಮಳದಿಂದ, ಸುರವಾದ್ಯ ಕೋಟಿಗಳಿಂದ ಕೂಡಿತು—ಈ ಮೊದಲಾದ ವರ್ಣನೆಗಳನ್ನು ಕೊಟ್ಟು ಕವಿ ಪಾಂಡುಕ ಶಿಲೆಯತ್ತ ಗಮನ ಹರಿಸುತ್ತಾನೆ. ಇದು ಪೂರ್ವಪುರಾಣ, ಆದಿಪುರಾಣಗಳಿಗನುಸಾರವಾಗಿದೆ. ಕ್ಷೀರಾಬ್ಧಿಯ ಜಲಧಾರೆಯ ಪರಿ ನಾನಾವಿಧವಾಗಿ ಮೈದಳೆಯುತ್ತದೆ. 'ರವಿಕಾಂತಘಟದಲ್ಲಿ ಸ್ವಚ್ಛಾಂಬುಧಾರೆಯಾಗಿಯೂ ಸುವರ್ಣಘಟದಲ್ಲಿ ಅಭಿಷೇಕಗೈಯುವಾಗ ಸವಿ ಮಾವಿನ ತನು ರಸದಂತೆಯೂ ವೈಢೂರ್ಯ ಘಟದಲ್ಲಿ ಇಕ್ಷುರಸದ ಪರಿಯಾಗಿಯೂ ಪಚ್ಚೆ ಘಟದಲ್ಲಿ ನಾರಿಕೇಳವೆಂಬಂತೆಯೂ ಗೋಮೇಧಿಕ ಘಟದಲ್ಲಿ ಹೊಸ ಘೃತದಂತೆಯೂ ಶಶಿಕಾಂತ ಘಟದಲ್ಲಿ ಹೊಸಕ್ಷೀರವೆಂಬಂತೆಯೂ ಮೌಕ್ತಿಕ ಘಟದಲ್ಲಿ ಹೊಸನೊರೆಯಿಂದ ಕೂಡಿದ ದಧಿಯಭಿಷೇಕದಂತೆಯೂ ನೋಡುವವರ ಕಣ್ಣಿಗೆ ಶೋಭಿಸುವುದೆಂದು ಹೊಸವರ್ಣನಾ ವಿನ್ಯಾಸವನ್ನು ಅಳವಡಿಸಿ ಹೇಳಿದ್ದಾನೆ.

ಹರಿನೀಲ ಘಟವೇ ಮೇಘ; ಕಂಕಣ ಪ್ರಭೆಯೇ ಮಿಂಚು; ಸುರಭೇರಿಧ್ವನಿಯೇ

ಗರ್ಜನೆಯಾಗಲು ಪುರುಜಿನ ಬಾಲಕನಂಘ್ರಿಗೆ ಜೀಮೂತ ಕರೆವಂತೆ ಅಭಿಷೇಕವು ಶೋಭಿಸಿತು! (V-೪೫).

ಕ್ಷೀರಧಾರೆಯು ಸುರಗಿರಿಯ ಮೇಲೆ ಹರಿಯುವಾಗ ಶಿರಕ್ಕೆ ಶೇಷೆಯನ್ನು, ಎದೆಗೆ ಕವಚವನ್ನು, ಚರಣಗಳಿಗೆ ಮೌಕ್ತಿಕದ ಕಡಗವನ್ನು ಇಟ್ಟಂತೆ ಶೋಭಿಸುತ್ತಿತ್ತು (V-೪೮). ಈ ರೀತಿಯ ಚಮತ್ಕಾರಯುತವಾದ ವರ್ಣನಾವಿಧಾನವನ್ನು ಕವಿ ತಂದಿದ್ದಾನೆ. ವರ್ಣಿಸುವಾಗ ಅಲ್ಲಲ್ಲಿ ಕವಿ ಕೊಡುವ ಹೋಲಿಕೆ ರಮ್ಯವೆನಿಸುತ್ತದೆ. ಅಕ್ಷತೆಯನ್ನು ಅರ್ಪಿಸಿದಾಗ ಅದು ಹೀಗೆ ಶೋಭಿಸಿತು.

ಸುರಪನಮನದುಲ್ಲಸದಂತೆ ದೇವನ | ವರ ಶುಕ್ಲ ಲೇಶ್ಯೆಯೆಂಬಂತೆ
ಸುರಪರು ಚಂದ್ರನ ನಗುವಕ್ಷತೆಯನು | ಪರಮನ ಪದಕರ್ಚಿಸಿದರು || (V- ೫೭)

ಇತರ ಕಾವ್ಯಗಳಲ್ಲಿ ಈ ಭಾಗದಲ್ಲಿ ಅಷ್ಟವಿಧಾರ್ಚನೆಯ ವರ್ಣನೆಯಿಲ್ಲ. ಕವಿ ಅವಕಾಶ ಕಲ್ಪಿಸಿಕೊಂಡು ತನ್ನ ಭಕ್ತ್ಯಾದ್ರ್ರಹೃದಯವನ್ನು ಪ್ರಕಟಿಸಿದ್ದಾನೆ.

ಸುರವನಿತೆಯರು ತಂದಿತ್ತ ಆಭರಣಗಳಿಂದ ಶಚೀದೇವಿ ಮಗುವಿನ ಶೃಂಗಾರವನ್ನು ಮಾಡಿದಳು. ಶೃಂಗಾರ ಮಾಡಿದರೂ ಅದರ ಸಹಜ ದೇಹಕಾಂತಿಯ ಮುಂದೆ ಸರಿಸಾಟಿಯಲ್ಲವೆನಿಸಿತು. ಈ ಭಾವವನ್ನು ಅನೇಕ ಉಪಮೆಗಳ ಮೂಲಕ ಸುಂದರವಾಗಿ ಸ್ಪಷ್ಟಪಡಿಸಿದ್ದಾನೆ.

ಸೂರ್ಯಂಗೆ ಸೊಡರ ವಾಗ್ದೇವಿಗೆ ಸ್ತೋತ್ರ | ವಾರುಧಿಗುದಕವೀವಂತೆ
ಮಾರವಿಜಯನ ಶೃಂಗರಿಪರ ಜಿನನ ಸೌಂ | ದರ್ಯ ಬೆಳ್ಮಾಡಿತೇನೆಂಬೆ (V-೭೮)

ಮತ್ತೆ ಸುರಸೈನ್ಯದೊಂದಿಗೆ ಇಂದ್ರನು ಹಿಂದಿರುಗಿದನು. ಸುರಸೈನ್ಯವು ಆಕಾಶದಲ್ಲಿ ಉಳಿಯಿತು. ಗಜವಾಹನಾರೂಢನಾಗಿದ್ದ ಶಿಶುವನ್ನು ಇಂದ್ರನು ಕರೆತಂದು ಪೊನ್ನ ರನ್ನ ಮಂಟಪದಲ್ಲಿ ಕುಳ್ಳಿರಿಸಿದನು. ಮುಂದೆ ಶಿಶುವಿನ ಮಾತಾಪಿತೃಗಳನ್ನು ಗೌರವಿಸಿ, ಸ್ತುತಿಸುವ ಪ್ರಸಂಗವು ಆದಿಪುರಾಣ, ಪೂರ್ವಪುರಾಣಗಳಲ್ಲಿ ಬರುವಂತೆಯೇ ಇದೆ.

ಅಯೋಧ್ಯೆಗೆ ಅಯೋಧ್ಯೆಯೇ ಉತ್ಸಾಹಗೊಂಡು ಮಂಗಳ ವಸಂತವನ್ನು ಎಸಗುತ್ತದೆ. ಈ ಸಂದರ್ಭವನ್ನು ಕವಿ ಚಿತ್ರಗತ ಶೈಲಿಯಲ್ಲಿ ನಿರೂಪಿಸಿದ್ದಾನೆ. (ಪೂರ್ವಪುರಾಣ ಆದಿಪುರಾಣಗಳಲ್ಲಿ ಪುರಸ್ತ್ರೀಯರು ಅಲಂಕರಿಸಿಕೊಂಡರೆಂಬ ಹೇಳಿಕೆ ಮಾತ್ರ ಬರುತ್ತದೆ.)

ಕನ್ನೆಯರು ಚೆನ್ನ ವಸ್ತ್ರವನುಟ್ಟು ನಿರಿಗಟ್ಟಿ | ಹೊನ್ನನೂಪುರವಿಟ್ಟು ಕಟಿಸೂತ್ರಗಳ ಕಟ್ಟಿ
ಉನ್ನತೋನ್ನತ ಹಾರ ಕೇಯೂರ ಮುದ್ರಿಕೆಯ | ಬಿನ್ನಣಾದಿ ಕಟ್ಟಿ ಸೊಗಸಿದರು
ಚಿನ್ನದಂಡೆಯ ಪಿಡಿದು ಜಿನಪತಿಗೆ ಪೊಡವಟ್ಟು | ಪನ್ನೀರ ತುಂಬಿ ಕಾಸೆಯನುಟ್ಟು
ಕಣ್ಣ ಕಜ್ಜಲ ತಿಲಕವಿಟ್ಟು ಗಂಧಾಂಬುವನು | ಚೆನ್ನೆಯರು ಚೆಲ್ಲುತಿಹರು (V-೮೦, ೮೧)

ಈ ಮೊದಲಾದ ವಿವರಗಳಲ್ಲಿ ಜಾನಪದೀಯ ಧಾಟಿ ಕಂಡುಬರುತ್ತದೆ. ಮುಂದಿನ ಐದು ಪದ್ಯಗಳಲ್ಲಿ ಆರತಿಯ ಹಾಡು ನಿರರ್ಗಳವಾಗಿ ಹರಿದಿರುವ ಧಾಟಿ-ಲಯ ಮೆಚ್ಚುವಂತಹದ್ದಾಗಿದೆ (ಷಟ್ಪದಿಯನ್ನು ಇಲ್ಲಿ ಕವಿ ನಾಲ್ಕು ಪಾದಗಳನ್ನಾಗಿ ಅಳವಡಿಸಿಕೊಂಡಿದ್ದಾನೆ). ಉದಾಹರಣೆಗೆ :

ಅರಿಕೆವೆಣ್ಣೆನ ಲಲಿತವಕ್ಶಗೆ ಮೆರೆವ ಪರಮಾಗಮ ರಹಸ್ಯಗೆ
ದುರುಳನೆನಿಸಿದ ಕಾಳ ರಾಕ್ಷಸ ಮದವಿದೂರಣಗೆ

ಮುಂದು ಕಾಮನ ಬಿಲ್ಲು ಸುಟ್ಟಗೆ ದುರಿತ ಬೀಜವ ಹುರಿದು ಬಿಟ್ಟಗೆ
ಭರತವನಿಯಾಯೋಧ್ಯಪುರಪತಿ ಪುರುಪರಮೇಶ್ವರಗೆ | ಜಯ ಜಯ ಮಂಗಳ (V- ೮೫)

ಈ ಭಾಗದಲ್ಲಿ ಹೆಚ್ಚು ಅಲೌಕಿಕತೆಯ ಲೇಪನವಿಲ್ಲದೆ ಲೌಕಿಕ ಪರಿಸರದ ಸಡಗರದ ಸ್ವಾಭಾವಿಕತೆ ಕಂಡುಬರುತ್ತದೆ.

ಮುಂದಿನ ಭಾಗದಲ್ಲಿ ಕವಿ ಒಂದು ಪದ್ಯದಲ್ಲಿ ಮನುಕುಲವಂಶದ ಹೆಸರಿನ ಪಟ್ಟಿಯನ್ನು ನೀಡಿದ್ದಾನೆ. ಈ ಪರಂಪರೆಯಿಂದ ಬಂದ ಸ್ವಾಮಿಗೆ ಜಯವೆಂದು ದೇವೇಂದ್ರನು ಆರಾಧಿಸುವ ಭಾಗ ಬರುತ್ತದೆ.

ದೇವೇಂದ್ರನು ಸಹಸ್ರ ಭುಜನಾಗಿ ನೃತ್ಯವನ್ನಾಡಿದ ಹಿರಿಮೆಯನ್ನು ಹೀಗೆ ವರ್ಣಿಸಿದ್ದಾನೆ.

ಶೃಂಗಾರವಡೆದು ಜಂಭಾರಿ ಸಹಸ್ರಭು | ಜಂಗಳ ಪಸರಿಸಿ ನಟಿಸೆ
ರಂಗಸ್ಥಲದೊಳಂತಾ ತೋಳೊಳಗಮರಿಯ | ಭೃಂಗಾಳಿಯಂತಾಡಿದರು
ಮನಕೆ ಬಯಸಿದ ದೇಹವ ವಿಗುರ್ವಿಸಿ | ಅನಿಮಿಷ ಪತಿಭಕ್ತಿಯಿಂದ
ಜಿನನ ಮುಂದಾಡುವ ಶೃಂಗಾರ ರಸವನು | ಮನುಜರ್ಗೆ ವರ್ಣಿಸಲಳವೆ (V-೯೩, ೯೪)

ಆನಂದ ನೃತ್ಯವನ್ನಾಡಿ ಶಿಶುವನ್ನು ನೋಡಿಕೊಳ್ಳಲು ದಾದಿಯರನ್ನು ನೇಮಿಸಿ ಸ್ವರ್ಗಕ್ಕೆ ಮರಳಿದ ವೃತ್ತಾಂತ ಉಳಿದ ಕಾವ್ಯದಂತೆಯೇ ನಿರೂಪಿತವಾಗಿದೆ. 'ವೃಷಭ'ನೆಂದು ನಾಮಾಂಕಿತಮಾಡಿದ ಪ್ರಸಂಗ ಇಲ್ಲಿ ನಿರೂಪಿತವಾಗಿಲ್ಲ.

ಶಾಂತಿಕೀರ್ತಿಯ 'ಜನ್ಮಾಭಿಷೇಕ ಕಲ್ಯಾಣದ' ನಿರೂಪಣೆ ಪೂರ್ವವರ್ತಿ ಕಾವ್ಯದ ಅನುಕರಣಾ ಮಾತ್ರವಾಗಿ ಬಾರದೆ, ತನ್ನದೇ ಆದ ನಿರೂಪಣಾ ವಿಧಾನದಿಂದಾಗಿ ಸಾಕಷ್ಟು ಕಾವ್ಯದ ಮೆರುಗನ್ನು ಹೊಂದಿದೆ. ಕವಿಯ ಸ್ವೋಪಜ್ಞತೆ ಹೆಚ್ಚು ಮೆರೆದಿದೆ; ಅತಿಸಂಗ್ರಾಹಕತೆಯೂ ಇಲ್ಲದೆ, ಅತಿ ವಿವರಣೆಗಳೂ ಇಲ್ಲದೆ ಮಧ್ಯವರ್ತಿಯಾಗಿದೆ.

**ಆದಿ ಪರಮೇಶ್ವರನ ಯಕ್ಷಗಾನ :** ಅತಿ ವಿಸ್ತೃತ ವರ್ಣನೆ ಇಲ್ಲಿ ಕಂಡುಬರುವುದಿಲ್ಲ. ಚಾವುಂಡರಾಯಪುರಾಣ, ಹಸ್ತಿಮಲ್ಲನ ಪೂರ್ವಪುರಾಣ, ಪುಣ್ಯಾಸ್ರವದ ಆದೀಶ್ವರರ ಕಥೆಯ ಅತಿಸಂಗ್ರಾಹಕತೆಯೂ ಇಲ್ಲ. ಈ ಕಥಾಂಶದ ಪೂರ್ವಾರ್ಧದಲ್ಲಿ (ಶಿಶುವನ್ನು ಪಾಂಡುಕ ಶಿಲೆಗೆ ಕರೆದೊಯ್ಯುವವರೆಗೆ) ಕವಿ ಹಸ್ತಿಮಲ್ಲನ ಪೂರ್ವಪುರಾಣವನ್ನು ಅನುಸರಿಸಿರುವುದು ಕಂಡುಬರುತ್ತದೆ.

ವರಚೈತ್ರ ಕೃಷ್ಣಪಕ್ಷದ ನವಮಿಯೊಳು
ತ್ತರಾಷಾಢ ಬ್ರಹ್ಮಯೋಗದ ಸೂರ್ಯೋದಯದಿ
ಕಾಮಧೇನುವು ಕಲ್ಪತರು ಚಿಂತಾಮಣಿ
ಭೂಮಿಜನಕೆ ಪ್ರಸನ್ನತೆಯಾದ ತೆರದಿ

ಸ್ವಾಮಿಯುದ್ಭವಿಸಲು ನಾಗಲೋಕದಿಂ ಶಂಖಧ್ವನಿ ವ್ಯಂತರವಾಸದೊಳ್ದುಂದುಭಿ ಜ್ಯೋತಿರ್ಲೋಕದೊಳ್ಸಿಂಹ ಧ್ವನಿ ಸ್ವರ್ಗಂಗಳೊಳು ಘಂಟಾಧ್ವನಿಗಳು ತಮ್ಮ ತಾವೆಯಾಗುವುದಂ ಕಲ್ಪವೃಕ್ಷಂಗಳೊಳಂ ಪುಷ್ಪವೃಷ್ಟಿಯಿಂ ದೇವೇಂದ್ರರ ಮಕುಟಮೆರಗುವುದುಂ ಸಿಂಹಾಸನಂ ನಡುಗುವುದುಂ ಇವು ಮೊದಲಾದ ಪಲವಾಶ್ಚರ್ಯಂಗಳಾಗೆ ಚತುರ್ನಿಕಾಯಾಮರರ್ಕೈತಂದರ್ (ಆದಿಯ. ಪರಿಚ್ಛೇದ V)

ಚೈತ್ರಮಾಸದ ನವಮೀ ಉತ್ತರಾಷಾಢ ನಕ್ಷತ್ರದ ಬ್ರಹ್ಮಯೋಗದೊಳ್ ಸೂರ್ಯೋದಯಕಾಲದೊಳ್ ಭವ್ಯಜನಂಗಳ್ಗೆ ಸುಖವೀವ ಕಾಮಧೇನು ಕಲ್ಪವೃಕ್ಷ ಚಿಂತಾಮಣಿ ಪುಟ್ಟುವಂತೆ ಪುಟ್ಟೆ ಧರಣೇಂದ್ರಲೋಕದೊಳ್ ಶಂಖಧ್ವನಿ. ವ್ಯಂತರಾವಾಸದೊಳ್ ಭೇರೀಧ್ವನಿ. ಜ್ಯೋತಿರ್ಲೋಕದೊಳ್ ಸಿಂಹಧ್ವನಿ, ಸ್ವರ್ಗಂಗಳೊಳ್ ಘಂಟಾಧ್ವನಿಗಳ್ ತಮ್ಮ ತಾವೆಯಾಗುವುದುಂ, ಕಲ್ಪವೃಕ್ಷಂಗಳ್ಪುಷ್ಪವೃಷ್ಟಿಯುಂ ದೇವೇಂದ್ರಾದಿಗಳ ಮಕುಟವೆರಗುವುದುಂ ಸಿಂಹಾಸನಂ ನಡುಗುವುದುಂ ಮೊದಲಾದ ಪಲಮಾಶ್ಚರ್ಯಂಗಳಾಗೆ ಸೌಧರ್ಮೇಂದ್ರ ನವಧಿಯಿಂದರಿದು ಚತುರ್ನಿಕಾಯಾಮರರ್ ತನ್ನ ಬಳಸಿಬರೆ (ಹಪೂರ್ವ. ೪೧)

ಮುಂದುವರಿದು ಕವಿ ಕೊಡುವ ವಿವರಗಳು ಹೀಗಿವೆ: ಪ್ರಸೂತಿಗೃಹವನ್ನು ಹೊಕ್ಕು ತಾಯಿಯ ತೊಡೆಯಲ್ಲಿದ್ದ ಮಗುವು ಶಿಷ್ಯಭಾವದೊಳಿರುತಿರೆ ಶಚೀದೇವಿ ನೋಡಿ ಹಿಗ್ಗಿದಳು. ಅನಂತರ ತಾಯಿಗೆ ಮಾಯಾನಿದ್ರೆಯನ್ನು ಬರಿಸಿ ಮಗುವನ್ನು ಇಂದ್ರನಿಗೆ ಒಪ್ಪಿಸಿದಳು. 'ಬಡವ ನಿಧಾನವ ಕಂಡ ರೀತಿ' ದೇವೇಂದ್ರನು ದೇವಗಣಸಹಿತ ಮೇರುವಿಗೆ ಅಡರ್ದು ನಡೆದನು. ಈ ಭಾಗವೂ ಸಹ ಹಸ್ತಿಮಲ್ಲನ ಪೂರ್ವಪುರಾಣದ ಅನುಕರಣೆಯೇ ಆಗಿದೆ. ಮುಂದೆ ಅಭಿಷೇಕದ ವರ್ಣನಾಭಾಗವನ್ನು ಕವಿ ಸಂಕ್ಷೇಪವಾಗಿ ನೀಡಿದ್ದಾನೆ (ಹಸ್ತಿಮಲ್ಲನ ಪೂರ್ವಪುರಾಣದಲ್ಲಿ ಈ ಭಾಗವನ್ನು ಕೈಬಿಡಲಾಗಿದೆ). ಪುರಾಣಗಳಲ್ಲಿ ಬರುವ ಸಾಂಪ್ರದಾಯಿಕತೆಯ ರೀತಿಯಲ್ಲಿ ಕವಿ ವರ್ಣನಾವಿವರಗಳನ್ನು ನೀಡಿದ್ದಾನೆ. ಮಂದರಾಗ್ರದ ಪಾಂಡುಕ ಶಿಲೆಯಲ್ಲಿ ಜಿನಶಿಶುವನ್ನು ಇರಿಸಿ, ಪೊಂಗೊಡದಲ್ಲಿ ಕ್ಷೀರಾಬ್ಧಿಯಿಂದ ಗಂಗೆಯನ್ನು ತಂದು ಜಿನಪುಂಗವನಿಗೆ ಅಭಿಷೇಕವನ್ನು ಮಾಡಿದ ಉಲ್ಲೇಖವಿದೆ. ಅನಂತರ ಅಭಿಷೇಕ ನಡೆದಾಗ ಮೇರುಗಿರಿಯಿಂದ ನೀರು ಧುಮ್ಮಿಕ್ಕಿದ ಪರಿಯನ್ನು ಕವಿ ಒಂದೇ ಒಂದು ಪದ್ಯದಲ್ಲಿ ಹೀಗೆ ವರ್ಣಿಸಿದ್ದಾನೆ :

ಮೇರುಗಿರಿಯಿಂದಿಳಿಯೆ ನಿರ್ಜರವಾರಿ ಬೆಳ್ಮುಗಿಲಿಳಿವೊಲು
ಕ್ಷೀರವಾರಿಧಿ ಮುಸುಕಿದಂದದಿ ಭೂರಿವಾರಿಯು ಮಿಳಿತರೆ ಘುಳುಘುಳಿಸುತಾ

(ಆದಿಯ. ಪರಿಚ್ಛೇದ v)

ಅಭಿಷೇಕದ ವೈಭವವನ್ನು ಎರಡು ಉಪಮೆಗಳನ್ನು ನೀಡಿ ತನ್ನ ವರ್ಣನಾಚಾತುರ್ಯವನ್ನು ಪ್ರಕಟಿಸಿದ್ದಾನೆ.

ಮಗುವನ್ನು ಸಾಕೇತಪುರಕ್ಕೆ ಕರೆತಂದು ನವಮಣಿಖಚಿತ ಪೀಠದಲ್ಲಿ ಕುಳ್ಳಿರಿಸಿ, 'ವೃಷಭನಾಥ'ನೆಂದು ವೈಭವದಿಂದ ಹೆಸರನ್ನು ಇಡಲಾಯಿತು.

ಇಂದ್ರನ ಆನಂದನೃತ್ಯದ ವರ್ಣನೆಯಲ್ಲಿ ಕವಿ ಜತಿಗಳನ್ನು ಹಾಕಿ ಅಲ್ಲಲ್ಲಿ ವರ್ಣನೆಯನ್ನು ನೀಡಿದ್ದಾನೆ. ನೃತ್ಯದ ಲಯವನ್ನು ಚಿತ್ರೀಕರಿಸಿದ್ದಾನೆ. ಉದಾಹರಣೆಗೆ :

ಜಕ್ಕಿಣಾಂಗಿಣಿ ತದಿಕ್ಕು ತಕ್ಕ ತೊಂಗಿಣಿಮೆನ್ನುತಾ
ಅಕ್ಕರಿಂದಲಿಮಿಂದ್ರ ನಟಿಸಿದ ಝುಕ್ಕಣಿಯ ಝುಕ್ಕಿಣಿಯ ಸ್ವರಭೇದದಿ ರಾಗರಸದಿ

(ಆದಿಯ. ಪರಿಚ್ಛೇದ v)

ರಂಭೆ, ಊರ್ವಶಿ, ಮೇನಕೆ, ತಿಲೋತ್ತಮೆಯರ ನೃತ್ಯ ದೇವೇಂದ್ರನ ನರ್ತನಕ್ಕೆ ಸರಿಸಾಟಿಯಾಗಿ ನಿಲ್ಲಲಿಲ್ಲವೆಂದು ಸುರಗಣವು ಹೊಗಳುವಂತೆ, ತಾಳ-ದಂಡಿಗೆ-ಆಲಾಪ-ವೀಣೆ ಮೊದಲಾದ ಮೇಳದಲ್ಲಿ 'ಭರತಾಗಮವನ್ನು ವಿಶಾಲಗಾಣಿಸುವಂತೆ' ನರ್ತಿಸಿದ

ನಂತೆ. ಆನಂದನೃತ್ಯದ ನಂತರ ದೇವತೆಗಳು ತಮ್ಮ ತಮ್ಮ ನೆಲೆಗೆ ಮರಳಿದ ಉಲ್ಲೇಖ ಬರುತ್ತದೆ. ಯಕ್ಷಗಾನದ ಕವಿಯಾದ ಈತ ನೃತ್ಯಕಲೆಯನ್ನು ಕುರಿತು ಇತರ ಕವಿಗಳಿಗಿಂತ ಹೆಚ್ಚಿನ ವಿವರವನ್ನು ನೀಡಿರುವುದು ಸಹಜವಾಗಿಯೇ ಇದೆ.

ಕವಿ ಹಸ್ತಿಮಲ್ಲನ ಪೂರ್ವಪುರಾಣವನ್ನು ಅನುಸರಿಸಿ ಅಲ್ಲಲ್ಲಿ ತನ್ನ ವರ್ಣನಾವಿಧಾನ ವನ್ನು ಸೇರಿಸಿ ಸ್ವೋಪಜ್ಞತೆಯನ್ನು ಮೆರೆದಿದ್ದಾನೆ.

ಜನ್ಮಾಭಿಷೇಕ ಕಲ್ಯಾಣದ ಪ್ರಸಂಗದಲ್ಲಿ ಕಥಾಂಶಕ್ಕಿಂತ ನಿರೂಪಣಾಂಶಗಳೇ ಹೆಚ್ಚು. ಈ ಭಾಗ ಜೈನ ಸಾಂಪ್ರದಾಯಿಕ ವಿಷಯಗಳಿಂದ ಕೂಡಿದೆ. ಪಂಪನಲ್ಲಿಯಾದರೋ ಈ ಭಾಗದಲ್ಲಿ ಅಲ್ಲಲ್ಲಿ ನಾಟಕೀಯ ಧಾಟಿಯ ವರ್ಣನಾಂಶಗಳು ಸೇರಿ, ಒಂದು ರೀತಿಯಲ್ಲಿ ಜೈನಪುರಾಣಗಳಲ್ಲಿ ಕಂಡುಬರುವ ಪಂಚಕಲ್ಯಾಣ ವಿಧಿವಿಧಾನಗಳು ಯಾಂತ್ರಿಕತೆಯನ್ನು ನೀಗಿವೆ. ಚಾವುಂಡರಾಯಪುರಾಣ, ಹಸ್ತಿಮಲ್ಲನ ಪೂರ್ವಪುರಾಣ, ಪುಣ್ಯಾಸ್ರವದ ಆದೀ ಶ್ವರರ ಕಥೆಗಳಂತೂ ಈ ಭಾಗದಲ್ಲಿ ಕೇವಲ ಯಾಂತ್ರಿಕ ವಿಧಾನದ ವಿವರಗಳನ್ನು ಸಂಗ್ರಹಿಸಿ ನೀಡಿವೆ, ಅಷ್ಟೇ. ಪುರುದೇವಚರಿತದಲ್ಲಿ ಕವಿ ವಿಶೇಷತಃ ಭಕ್ತಿ ತನ್ಮಯತೆಯನ್ನು ತೋರಿದ್ದಾನೆ. ಆದಿಪರಮೇಶ್ವರನ ಯಕ್ಷಗಾನವು ಚಾವುಂಡರಾಯಪುರಾಣ, ಹಸ್ತಿಮಲ್ಲನ ಪೂರ್ವಪುರಾಣ ಮತ್ತು ಪುಣ್ಯಾಸ್ರವದ ಆದೀಶ್ವರರ ಕಥೆಗಳಿಗಿಂತ ಸ್ವಲ್ಪ ವಿಸ್ತಾರವಾಗಿ ಬಂದಿದೆ.

### ಕರ್ಮಭೂಮಿ ನಿಯೋಗ

**ಆದಿಪುರಾಣ-ಪೂರ್ವಪುರಾಣ :** ಜನ್ಮಾಭಿಷೇಕದ ಕಲ್ಯಾಣ ಮತ್ತು ಪರಿನಿಷ್ಕ್ರಮಣ ಕಲ್ಯಾಣಗಳ ನಡುವೆ ಬರುವ ಕರ್ಮಭೂಮಿಯ ನಿಯೋಗವು ಅತ್ಯಂತ ಮಹತ್ತ್ವಪೂರ್ಣ ವಾದ ಅಂಶವಾಗಿದೆ. ವೃಷಭನನ್ನು 'ಯುಗಪ್ರವರ್ತಕ'ನೆಂದು ಗುರುತಿಸಬಹುದಾದ ಭಾಗ ವಿದು. ವೃಷಭನ ಬಾಲ್ಯ, ಯೌವನ, ವಿವಾಹ, ಸಂತಾನಪ್ರಾಪ್ತಿ, ವೃಷಭನು ಮಕ್ಕಳಿಗೆ ವಿದ್ಯಾದಾನ ಮಾಡಿದುದು, ಬದಲಾಗುತ್ತಿದ್ದ ಕಾಲಧರ್ಮಕ್ಕನುಸಾರವಾಗಿ ಪ್ರಜೆಗಳಿಗೆ ಬದುಕುವ ಮಾರ್ಗವನ್ನು ತಿಳಿಸಿದ್ದು—ಈ ಪ್ರಮುಖಾಂಶಗಳಿಂದ ಈ ಭಾಗವು ಕೂಡಿದೆ.

ನಾಕದಿಂದ ವೃಷಭದೇವನಾಗಿ ಧರೆಗಿಳಿದು ಬಂದರೂ ಆತನ ವೈಭವಕ್ಕೇನೂ ಕೊರತೆ ಯಿಲ್ಲ. ಸಾಕ್ಷಾತ್ ದೇವೇಂದ್ರನೇ ಆತನ ಸೇವೆಗೆ ಟೊಂಕಕಟ್ಟಿ ನಿಂತು ಗರ್ಭಾವತರಣ ಕಲ್ಯಾಣ, ಜನ್ಮಾಭಿಷೇಕ ಕಲ್ಯಾಣಗಳನ್ನೆಸಗಿ ಆತನ ಶುಶ್ರೂಷೆಗೆ ದೇವಕುವರರನ್ನು ನಿಯಮಿ ಸಿದನು.

ಶಿಶು ವೃಷಭನು ಬೆಳೆದ ರೀತಿಯನ್ನು ಕವಿ ಮೂರು ಪದ್ಯಗಳಲ್ಲಿ ಸುಂದರವಾಗಿ ಬಣ್ಣಿಸಿದ್ದಾನೆ. ಬುವಿಯಲ್ಲಿದ್ದರೂ ಅದರ ಧೂಳು ಆತನಿಗೆ ಅಂಟದು. ದೇವಕುಮಾರ ರೊಡನೆ ಆಟವಾಡಿ, ರತ್ನಧೂಳಿಯಿಂದ ತುಂಬಿದ ದೇಹದಿಂದ ಕೂಡಿ, ಮೃದು ಮುಗ್ಧಾ ಳಾಪಗಳಿಂದ ವೃಷಭನು ಬೆಳೆದನು. ಕಿರುಗೆಜ್ಜೆಯ ದನಿಯನ್ನು ಮಾಡುತ್ತಾ ದಾದಿಯರ ಕೈಹಿಡಿದು 'ತಳರ್ನಡೆ ನಡೆದನು.' ಕಮಲದಿಂದ ಬಂಡುಮಿಡಿಯಿತೋ ಎಂಬಂತೆ ತೊದ ಳ್ನುಡಿ ನುಡಿದನು. ಹೀಗೆ ಬಾಲ್ಯಕಾಲವು ಲೌಕಿಕಾಲೌಕಿಕತೆಯ ಸಮ್ಮಿಶ್ರಣದಿಂದ ಕೂಡಿ ವರ್ಣಿತವಾಗಿದೆ. ವೃಷಭನಿಗೆ ಕುಮಾರಾವಸ್ಥೆಯುಂಟಾಯಿತು; ಜೊತೆಗೆ ಮತಿ, ಶ್ರುತ,

ಅವಧಿಜ್ಞಾನಗಳು ಕೈಗೂಡಿದವು. ಸಕಲ ವಾಙ್ಮಯ ಕಲೆ ಮೊದಲಾದವುಗಳನ್ನು ತನಗೆ ತಾನೇ ಪ್ರತ್ಯಕ್ಷಮಾಡಿಕೊಂಡನು. ಅನೇಕ ರೀತಿಯ ಲೀಲಾವಿನೋದಗಳಿಂದ ದೇವಕುಮಾರರ ಒಡನಾಟದಿಂದ ವಿನೋದದಲ್ಲಿ ಕಾಲವನ್ನು ಕಳೆದನು. ಹೀಗಿರುವಾಗ ವೃಷಭಕುಮಾರನು ಯೌವನಾವಸ್ಥೆಗೆ ಕಾಲಿರಿಸಿದನು.

ಕರಿಕಲಭಂ ಮದದ್ವಿರದಲಕ್ಷ್ಮಿಯೊಳೊಂದಿದವೋಲ್‌ಕಿಶೋರ ಕೇ
ಸರಿ ಮೃಗರಾಜಲೀಲೆಯೊಳಳಂಕರಿಸಿರ್ದ್ದವೊಲೆಯ್ದೆ ಮುಗ್ಧ ಸೌಂ
ದರಸುರಭೂರುಹಂ ಕುಸುಮಶೋಭೆಯೊಳಗ್ಗಲಿಸಿರ್ದ್ದವೊಲ್ ಮನೋ
ಹರಮೆನಿಸಿತ್ತು ಯೌವನೋದಯಮಿಂದ್ರನರೇಂದ್ರವಂದ್ಯನಾ (ಆದಿಪು. viii-೪)

ಆನೆಯು ಮದ್ದಾನೆಯ ಕಾಂತಿಯನ್ನು ಹೊಂದಿದಂತೆ, ಸಿಂಹದ ಮರಿಯು ಮೃಗರಾಜ ಲೀಲೆಯಿಂದ ಅಲಂಕೃತವಾದಂತೆ, ಮುಗ್ಧ ಸುಂದರ ಕಲ್ಪವೃಕ್ಷವು ಕುಸುಮಶೋಭೆಯಿಂದ ಅಗ್ಗಳಿಸಿದಂತೆ, ಇಂದ್ರ ನರೇಂದ್ರವಂದಿತನಾದ ವೃಷಭನ ಯೌವನವು ಮನೋಹರವೆನಿಸಿತ್ತು. ಅಷ್ಟೇ ಅಲ್ಲ, ಲೌಕಿಕನಾಗಿದ್ದರೂ ಈತನದು ಅಲೌಕಿಕ ಶರೀರ. ತೀರ್ಥಂಕರತ್ವವನ್ನು ಪಡೆದ ಆತ್ಮನಿಗೆ ಮಾತ್ರ ಇದು ಸಾಧ್ಯ. ನಿಸ್ವೇದತ್ವ, ಸಮಚತುರಸ್ರ ಸಂಸ್ಥಾನ, ವಜ್ರ ವೃಷಭನಾರಾಚ ಸಂಹನನಾದಿ ಲಕ್ಷಣಗಳಿಂದ ಕೂಡಿದವನು. ಪರಮೌದಾರಿಕ ಶರೀರವುಳ್ಳ ಈ ದಿವ್ಯಮೂರ್ತಿಯು ಅತ್ಯಂತ ಸುಂದರಿಯರನ್ನು ಮರುಳುಗೊಳಿಸುವಷ್ಟು ಸೌಂದರ್ಯ ರಾಶಿಯನ್ನು ಹೊಂದಿದ್ದರೂ ಆ ಸುಂದರಿಯರಿಗೆ ಮರುಳುಗೊಂಡವನಲ್ಲ.

ದೈಹಿಕ ಭೋಗಲಾಲಸೆ, ವ್ಯಾಮೋಹ, ಅನುರಾಗಗಳೆಲ್ಲವನ್ನೂ ನೀಗಿ, ಆತ್ಮಾನುರಾಗದ ನೆಲೆಯನ್ನು ಏರಿ 'ವೀತರಾಗತ್ವ'ವನ್ನು ಪಡೆಯಲು ಈ ಆತ್ಮ ಹದಗೊಳ್ಳುತ್ತಿದೆ. ಆದ್ದರಿಂದಲೇ ಈ ನಿರ್ಲಿಪ್ತತೆ.

ಅನಿವಿರಿದೊಂದು ಯೌವನಮದಕ್ಕೆಡೆಯಾಗಿಯುಮಂದು ರಾಗ ಸಂ
ಜನನಮನೆಯ್ದೆ ತಾಳ್ದಿದವಿನಶ್ವರಕೀರ್ತಿಯೊಳಂ ಸರಸ್ವತೀ
ವನಿತೆಯೊಳಂ ವಿಚಾರಿಸೆ ತಟಿದ್ದ್ಯುತಿ ಚಂಚಲೆಯೆಂಬುದೊಂದು ಭಾ
ವನೆಯೊಳ್ ರಾಜ್ಯಲಕ್ಷ್ಮಿಯೊಳನಾದರಮಾಯ್ತು ಮನಂ ಚಿದಾತ್ಮನಾ (ಆದಿಪು. viii-೬)

ಅಷ್ಟೊಂದು ಯೌವನ ಮದಕ್ಕೆಡೆಯಾಗಿದ್ದರೂ ಅವನ ಮನಸ್ಸು ಅಂದು ಶಾಶ್ವತ ಕೀರ್ತಿಯ ಮೇಲೂ ಸರಸ್ವತಿಯ ಮೇಲೂ ಹೆಚ್ಚಾದ ಅನುರಾಗದಿಂದ ಕೂಡಿತ್ತು. ಮಿಂಚಿನ ಕಾಂತೆಯಂತೆ ಚಂಚಲೆಯಾದವಳು ರಾಜ್ಯಲಕ್ಷ್ಮಿ ಎಂಬ ಭಾವನೆಯಿಂದ ಆ ಚಿದಾತ್ಮನಿಗೆ ರಾಜ್ಯಲಕ್ಷ್ಮಿಯ ಮೇಲೆ ಅನಾದರವಾಯಿತು. ಮಗ ವೃಷಭನ ಈ ರೀತಿಯು ನಾಭಿರಾಜನಿಗೆ ಒಂದು ರೀತಿಯ ಸಮಸ್ಯೆಯಂತೆ ತೋರಿತು. ಕುಮಾರನಲ್ಲಿ ವನಿತಾಚಿತ್ತವಿಕಾರಕಾರಿಯಾದ ಯೌವನವು ಸೇರಿದೆ. ವಿವಾಹ ಮಂಗಳವನ್ನು ತಾನು ಮಾಡಲೇಬೇಕು. ಇಲ್ಲದಿದ್ದರೆ ಗಂಧಗಜವು ವನವನ್ನು ಪ್ರವೇಶಿಸುವಂತೆ 'ತಪೋವನಮಂ...ಪೊಕ್ಕಾಗಳೇಗೆಯ್ವುದೋ?' 'ಈತನ ಚಿತ್ತಕ್ಕಂ ಅನಂಗರಾಗರಸಮಂ ಮಾಳ್ಪಂದಮಿನ್ನಾವುದೋ' ಎಂದು ನಾಭಿರಾಜ ಚಡಪಡಿಸಿದನು. ತಂದೆಯ ತಳಮಳ ಲೌಕಿಕ ದೃಷ್ಟಿಯಿಂದ ಸಹಜವಾದುದೇ. ನಾಭಿರಾಜನೇನು ವೈರಾಗ್ಯದ ಕಡೆಗೆ ಇನ್ನೂ ಮನಸ್ಸನ್ನು ಮಾಡಿದವನಲ್ಲ. ಲೋಕರೂಢಿಯಂತೆ ಆತನ ಚಿಂತನೆ ಹರಿದಿದೆ. ಅದರಲ್ಲಿಯೂ ಮಗನ ಈ ನಿರ್ಲಿಪ್ತತೆ ಚಿಂತೆಗಿಟ್ಟುಕೊಂಡಿದ್ದು

ಸಹಜವೇ. 'ಕುಲ, ರೂಪ, ಐಶ್ವರ್ಯ, ಯೌವನ ಮತ್ತು ವಿಲಾಸಗಳಿಂದ ಕೂಡಿದ ಯಾವ ತರುಣಿ ಈತನ ಚಿತ್ತ ಸರೋವರದಲ್ಲಿ ಕಳಹಂಸದಂತೆ ಅಗಲದಂತೆ ಅಕ್ಕರೆಯಿಂದ ರಮಿಸುವಳೋ?' (ಆದಿಪು. viii-೮) ಎಂದು ಚಿಂತಿಸಿ ಆತಂಕಗೊಂಡನು. ಆತನನ್ನು ಮದುವೆಗೊಪ್ಪಿಸುವ ಬಗೆ ಹೇಗೆಂದು ಚಿಂತಿಸಿದನು. ಆದರೂ ಆ ಕಾರ್ಯವನ್ನು ನಿಭಾಯಿಸುವುದರಲ್ಲಿ ಯಶಸ್ವಿಯಾಗಿಯೇ ಬಿಟ್ಟ ನಾಭಿಮನು! ನಾಭಿರಾಜನು ವೃಷಭನನ್ನು ಮದುವೆಗೆ ಒಪ್ಪಿಸುವ ನಯವು ಇಲ್ಲಿ ಸುಂದರವಾಗಿ ನಿವೇದಿತವಾಗಿದೆ. ನಾಭಿಗೆ ವೃಷಭನ ಹಿರಿಮೆ ತಿಳಿದದ್ದೇ. ಆತನಿಂದಾಗಿ 'ಗುರುವಿನ ಗುರು'ವೆಂಬ ಹಿರಿಮೆ ತನಗಾದುದಲ್ಲದೆ ತನಗೆ ತಾನೇ ಲಭಿಸಿದ್ದಲ್ಲ. ಈ ವಿಚಾರಗಳನ್ನೆಲ್ಲಾ ಅರಿಕೆ ಮಾಡಿ

> ಇದುದಲವಸ್ತುವೆನ್ನದೆ ಮದುಕ್ತಿಯನೊಯ್ಯನೆ ಕೇಳ್ದು ದಿವ್ಯಚಿ
> ತ್ತದೊಳವಧಾರಿಸೆಂತೆನೆ ಜಗದ್ಗುರು ಲೋಕಹಿತಾರ್ಥದಿಂದೆ ಸ
> ಲ್ವುದುವಲಮಿಂತಿದಂ ಬಗೆದು ಪುತ್ರಕಲತ್ರ ಪರಿಗ್ರಹಕ್ಕೆ ಮಾ
> ಣದೆ ಬಗೆದರ್ಪುದೊಲ್ಲೆನಿದನೆಂದೊಡೆ ಸೃಷ್ಟಿಯೆ ಕೆಟ್ಟುಪೋಗದೇ (ಆದಿಪು. viii-೧೧)

ಎಂದು ತಂದೆ ಮೃದುವಾಗಿ ವಿನಯಪೂರ್ವಕವಾಗಿ ಬೋಧಿಸಿದನು. ತಂದೆಯು ಮಗನೊಡನೆ ಮಾತನಾಡುವ ಈ ವಿಧಾನ ಹೊಸದೆನಿಸಬಹುದು. ". . . ಅವನಿಗೆ ಮದುವೆಯಾಗಬೇಕೆಂದು ನುಡಿವ ಮಾತು ಬಹುಗೌರವದಿಂದ ನಿವೇದಿತವಾಗುತ್ತದೆ. ಜೈನನೇ ಪುರಾಣಗ್ರಂಥ ಬರೆಯಬೇಕಾಗಿರುವುದರಿಂದ ಆ ಮಾತು ಪ್ರೀತಿ ಗೌರವಗಳಿಗೂ ಮೇಲ್ಮಟ್ಟದ್ದು. ತಂದೆಯೂ ಸಾಮಾನ್ಯನಲ್ಲ. ಶಚೀದೇವಿಯಂಥವರ ಪರಿಚರ್ಯೆಗೆ ಯೋಗ್ಯಳಾಗಿದ್ದವಳು ತಾಯಿ. ಇಂಥವರೂ ತಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಗನಿಗೆ ಅವನೆಷ್ಟೇ ಹಿರಿಯವನಾದರೂ ಆಡುವ ಮಾತು ಸಾಮಾನ್ಯ ಮಾನವತೆಯ ಮಟ್ಟವನ್ನು ಸ್ವಲ್ಪಮಟ್ಟಿಗೆ ಮೀರಿದ್ದು; ಅದನ್ನು ತೋರಿಸಬೇಕೆಂಬುದೇ ಕವಿಯ ಉದ್ದೇಶ..."[೩೧] "ಇಂಥ ತಂದೆ ಮಕ್ಕಳ ಸಂಭಾಷಣವೆಂದರೆ ಸಾಮಾನ್ಯವಲ್ಲ; ವಿಶೇಷವೇ ಸರಿ. ಲೋಕಾತೀತ ಗುಣವಿಶಿಷ್ಟನಾದ ಮಗನನ್ನು ಪಡೆದ ಪುಣ್ಯವೊದಗಿದರೆ ಸುಸಂಸ್ಕೃತನಾದ ತಂದೆ ಹೇಗೆ ಮಾತನಾಡಿಸಬೇಕೆಂಬುದಕ್ಕಿದು ಆದರ್ಶವಾಗಿದೆ."[೩೨] ನಾಭಿರಾಜನು ಮತ್ತೂ ಅನುನಯದಿಂದ ವೃಷಭನನ್ನು ಕುರಿತು 'ಮನುಮಾರ್ಗನಿಪುಣನೆನಿಸಿದ ನಿನಗೆ ನಾನು ಈ ರಾಜಮಾರ್ಗವನ್ನು ತೋರಿದರೆ ಹಾಸ್ಯಾಸ್ಪದವಾಗುತ್ತದೆ. ಶಾಂತಾತ್ಮನೇ, ಮದುವೆಗೆ ಒಪ್ಪು. ನಿನ್ನ ಧರ್ಮ ಸಂತತಿ ನಿಲ್ಲುತ್ತದೆ' ಎಂದು ಬೋಧಿಸಿದಾಗ ವೃಷಭನು ಒಪ್ಪಿಗೆ ಕೊಟ್ಟದ್ದು, ಕೊಟ್ಟ ರೀತಿ ಎರಡೂ ಅತಿಶಯವಾದ ಆನಂದವನ್ನುಂಟುಮಾಡುವಂತಹವುಗಳೇ. ಆತನು ಸೂಸಿದ ಮುಗುಳುನಗೆಯೇ ಒಪ್ಪಿಗೆಯ ಸೂಚನೆಯಾಯಿತು. ರಾಜನ ಆಗ್ರಹ ಪ್ರಜಾನುಗ್ರಹಾರ್ಥವಾಗಿ ವೃಷಭನು ಮದುವೆಗೆ ಒಪ್ಪಿಗೆಯಿತ್ತನು. ನಾಭಿರಾಜನು ಇಂದ್ರನ ಅನುಮತಿ ಪಡೆದು ಕಚ್ಛ-ಮಹಾಕಚ್ಛ ರಾಜರ ತಂಗಿಯರಾದ ಯಶಸ್ವತಿ ಸುನಂದೆಯರೊಡನೆ ವಿವಾಹವನ್ನು ನೆರವೇರಿಸಿದನು. ದೇವೇಂದ್ರನ ಶಿಲ್ಪಿಯು ನಿರ್ಮಿಸಿದ ಪಂಚರತ್ನಮಯವಾದ ಮಂಟಪದಲ್ಲಿ ವಿವಾಹವನ್ನು ವಿಧಿಪೂರ್ವಕವಾಗಿ ನೆರವೇರಿಸಿದನು. ದೇವಮಾನವರಿಬ್ಬರೂ ನೆರೆದು ನಡೆಸಿದ ವಿವಾಹ ವೈಭವವನ್ನು ಪಂಪನು ಸಾಕಷ್ಟು ವಿವರಗಳೊಂದಿಗೆ ಚಿತ್ರೀಕರಿಸಿದ್ದಾನೆ. ಮಂಟಪದ ವೈಭವ ಕೋರೈಸುತ್ತಿರುವಾಗ ದೇವಮಾನವರ ಸಡಗರದ ನೃತ್ಯ ನೆರವೇರು

ತ್ತದೆ. ಈ ಸೋದರಿಯರು ಪರಮನ ಮನವನ್ನು ಸೂರೆಗೊಂಡೇ ಬಿಟ್ಟರು. ಲಾವಣ್ಯ ಕಾಂತಿಯಲ್ಲಿ ಇವರಿಬ್ಬರೂ ನಾಭಿಪುತ್ರನಿಗೆ ಸರಿಸಮಾನರಾಗಿ ನಿಂತರಂತೆ.

ಸಮಲಾವಣ್ಯಪ್ರಸರದ | ಸಮವಿಭವದ ಸಮವಿಲಾಸದಗ್ಗಳಿಕೆಯೊಳಾರ್
ಸಮನಿವರ್ಗೆನೆ ಸಮರಸದೊಳ್ | ಸಮಸಂದತ್ತವರ್ಗೆ ಸಮಸಮಾಯೋಗಸುಖಂ
(viii-೨೪)

ಲಾವಣ್ಯದ ಪ್ರಸರಣದಲ್ಲಿಯೂ ಐಶ್ವರ್ಯದ ವಿಳಾಸದ ಹೆಗ್ಗಳಿಕೆಯಲ್ಲಿಯೂ ಇವರಿಗೆ ಸಮನಾದವರಾರೂ ಇಲ್ಲ ಎಂಬಂತೆ ಸಮರಸದಲ್ಲಿ ಅವರ ಸುಖವು ಸಮನಾಗಿ ಅನುಭವಕ್ಕೆ ಬಂದಿತು.

ಅನೇಕ ವರ್ಷಗಳುರುಳಿದುವು. ಒಮ್ಮೆ ಯಶಸ್ವತಿಯು ಶುಭಪ್ರದವಾದ ಕನಸನ್ನು ಕಂಡಳು. ಶಂಖದಂತೆ ತೋರುವ ಚಂದ್ರ, ಪ್ರಜ್ವಲಿಸುವ ಸೂರ್ಯ, ಮೇರುಪರ್ವತ, ಭೋರ್ಗರೆಯುವ ಸಮುದ್ರ, ಪದ್ಮವನ್ನು ಹಿಡಿದ ಲಕ್ಷ್ಮಿ, ರತ್ನೋಜ್ವಲವಾದ ಕಲ್ಪವೃಕ್ಷ ಇವುಗಳನ್ನು ಕಂಡಳು. ಸ್ವಪ್ನದ ಫಲವನ್ನು ವೃಷಭನಿಂದರಿತಳು. ವಂಶವೆಂಬ ಆಕಾಶಕ್ಕೆ ತಿಲಕಪ್ರಾಯನೂ ತೇಜಸ್ವಿಯೂ ಸಾರ್ವಭೌಮನೂ ಅಗಾಧಗುಣನಿಲಯನೂ ಭೂವಧುವಿನ ವರನೂ ಕಲ್ಪವೃಕ್ಷಪ್ರಾಯನೂ ಆದ ಮಗನು ಹುಟ್ಟುವನೆಂದು ತಿಳಿದು ಪುಳಕಿತಳಾದಳು. ಗರ್ಭವತಿಯಾದ ಯಶಸ್ವತಿಯ ಬಯಕೆಗಳಾದರೂ ವೀರಪುತ್ರನು ಹುಟ್ಟುವನೆಂದು ಸೂಚಿಸುವ ಚಿಹ್ನೆಗಳೇ ಆಗಿದ್ದವು. ಪಂಜರದಲ್ಲಿರುವ ಸಿಂಹಶಿಶುಗಳನ್ನು ತರಿಸಿ ನೋಡುತ್ತಿದ್ದಳು.

"ಕೆಲದೊಳ್ ಶ್ರೀದರ್ಪಣಂ ಬಂದಿರೆಯುಮೊಸೆದು ವಕ್ತ್ರೇಂದುವಂ ಖಡ್ಗದೊಳ್ ನೋಡಲುಂ" ಬಯಸಿದಳು. "ಆತೋದ್ಯ ಪ್ರಗೀತ ಧ್ವನಿಗಳಿರೆ ಧನುರ್ದಂಡ ಟಂಕಾರಮಂ ಕೇಳಲುಂ" ಅಳ್ಕರಾಯಿತು! (viii-೩೩) ಅನಂತರ ಸುಖಪ್ರಸೂತಿ ಕಾಲದಲ್ಲಿ ಚಕ್ರವರ್ತಿ ಪುತ್ರನು ಜನಿಸಿದನು. ಲೀಲಾವಿನೋದಗಳ ಬೆರಕೆಯ ಸಂಭ್ರಮದಲ್ಲಿ ನಾಮಕರಣ ಮಹೋತ್ಸವವು ಜರುಗಿತು.

ಭಾವಿ ಭರತೇಶಪದಮುಮಿ | ಲಾವಿಪುಲಪ್ರೇಮಭರಮುಮೆರ್ದೆಗೊಂಡಿರೆಸ
ದ್ಭಾವದಿನಿಟ್ಟುದು ಬಂಧುಜ | ನಾವಲಿ ಕೂಸಿಂಗೆ ಭರತನೆಂಬೀಪೆಸರಂ (ಆದಿಪು. viii-೩೭)

ಶಿಶುವಾದ ಭರತನು ಅಂತಃಪುರಸ್ತ್ರೀಯರ ಕೈಗಳಿಂದ ಸಂಚರಿಸುವ ರತ್ನದರ್ಪಣದಂತಿದ್ದನು. ಮಗುವಿನ ಬಾಲಕೇಳಿಯು "ಮರುಳ್ಚಿದುದು ತಾಯುಮಮಂ ತಂದೆಯುಮಮಂ". ನುಡಿಯ ತೊದಲಿನಿಂದ ನಡೆಯ ಎಡಹಿನಿಂದ ಹಾಗೂ ಅರಳಿದ ಮುಖದ ಕೆಂಪಾದ ತುಟಿಗಳಿಂದ ಚೆಲುವನ್ನು ಪ್ರಕಾಶಿಸುತ್ತಿದ್ದನು. ಬಾಲಕನು ಬೆಳೆಯುತ್ತಿದ್ದಂತೆ ಅನ್ನಪ್ರಾಶನಾದಿ ವಿಧಿಗಳು ಜರುಗಿದವು. ಭರತನ ಬಾಲಲೀಲೆಗಳೆಲ್ಲಾ ವೀರರಸಪ್ರಧಾನವಾದುವುಗಳೇ. ಭರತನು ಬೆಳೆದು ದೊಡ್ಡವನಾದನು. ರೂಪಲಾವಣ್ಯಗಳಲ್ಲಿ ತಂದೆಯ ಪಡಿಯಚ್ಚು ಎನ್ನುವಂತೆ ಕಂಗೊಳಿಸುತ್ತಿದ್ದನು.

'ತಂದೆಯ ರೂಪೆ; ತಂದೆಯ ವಿಳಾಸಮೆ; ತಂದೆಯ ಚೆಲ್ವೆ; ತಂದೆಯೊಂದಂದಮೆ; ತಂದೆಯೊಂದು ನುಡಿಯೋಜೆಯೆ' ಭರತನಲ್ಲಿ ಒಂದುಗೂಡಿರುವುದು. 'ತಂದೆಯೊಳಚ್ಚಿ ನೊಳೊತ್ತಿದಂತೆವೋಲ್' ಕುಮಾರನು ರೂಪಿನಿಂದ ಶೋಭಿಸಿದನು. 'ಯಶದ ಪಿಂಡವೋ

ಪುಣ್ಯದ ಪುಂಜವೊ' 'ಕ್ಷಾತ್ರಧಾಮವೊ' ಎನ್ನುವಂತೆ ನೆಗಟ್ದಿ ಭರತನನ್ನು ಬಣ್ಣಿಸಲು ಸಾಧ್ಯವೇ? ಪ್ರಥಮ ಚಕ್ರಿ ಶಲಾಕಾಪುರುಷರಲ್ಲಿ ಒಬ್ಬನಾದ ಭರತನ ಜನನ, ಬಾಲ್ಯ-ಯೌವನದೇಳ್ಗೆಯ ವರ್ಣನೆಯನ್ನು ಮಾಡುವುದರಲ್ಲಿ ಕವಿ ತುಂಬ ಅಕ್ಕರೆಯನ್ನು ತೋರಿದ್ದಾನೆ. ಅನಂತರ ಸರ್ವಾರ್ಥಸಿದ್ಧಿಯಲ್ಲಿ ಅಹಮಿಂದ್ರಚರರಾಗಿದ್ದವರು ವೃಷಭ ಹಾಗೂ ಯಶಸ್ವತಿಯರಿಗೆ ವೃಷಭಸೇನ, ಅನಂತ, ವಿಜಯ, ಅನಂತವೀರ್ಯ, ಅಚ್ಯುತ, ವೀರ, ಸುವೀರರೆಂಬ ಮಕ್ಕಳಾಗಿ ಜನಿಸಿದರು. ಒಟ್ಟು ನೂರು ಜನ ಚರಮದೇಹಿಗಳಾದ ಕುವರರು ಜನಿಸಿದರು. ಬ್ರಾಹ್ಮಿಯೆಂಬ ಮಗಳು ಕಿರಿಯವಳಾಗಿ ಹುಟ್ಟಿದಳು.

ವಜ್ರಜಂಘನ ಸೇನಾನಾಯಕನಾಗಿದ್ದ ಅಕಂಪನನು ಅಹಮಿಂದ್ರನಾಗಿ ಜನಿಸಿ ಅನಂತರ ಸುನಂದೆಯ ಗರ್ಭದಲ್ಲಿ ನೆಲೆಸಿದನು. ಈತನು ಗರ್ಭಪ್ರವೇಶ ಮಾಡುತ್ತಿದ್ದಂತೆ ಈಕೆಗೆ ಅಸಾಮಾನ್ಯವಾದ ಬಯಕೆಗಳಾದುವು. ಮದ್ದಾನೆಗಳ ಯುದ್ಧಕೇಳಿ, ಜಟ್ಟಿಗಳ ಕಾಳಗ ನೋಡುವ ಬಯಕೆ ಈಕೆಯದು. ಈಕೆಯಲ್ಲಿ ತಿಲಕಪ್ರಾಯನೂ ಪುಣ್ಯಪುಂಜನೂ ಆದ ಮನುಕುಲ ಶ್ರೇಷ್ಠನು ಜನಿಸಿದನು. ಆ ಮಗುವಿಗೆ 'ಬಾಹುಬಲಿ' ಎಂದು ನಾಮಕರಣ ಮಾಡಿದರು. ಬಾಲ್ಯಸಹಜ ಚೇಷ್ಟೆಗಳಿಂದ, ವೀರೋಚಿತವಾದ ಆಟಗಳಿಂದ ಬೆಳೆದು 'ನಾಭಿನಂದನನಂದನನು' ಯೌವನಕ್ಕೆ ಕಾಲಿರಿಸಿದನು.

ಆ ಕಾಲದ ಕಾಮದೇವನೆಂದ ಮೇಲೆ ಆತನ ರೂಪಾತಿಶಯವನ್ನು ಕೇಳಬೇಕೆ? ಆತನ ಸೌಂದರ್ಯೌನ್ನತ್ಯವನ್ನು ಪಂಪನು ಅತ್ಯಂತ ಗಂಭೀರವಾದ ಪದಬಂಧಗಳಿಂದ ಚಿತ್ರಿಸಿದ್ದಾನೆ.

> ದಲಿತಾಂಭೋಜಾಸ್ಯನಿಂದೀವರದಲನಯನಂ ಪಕ್ವ ಬಿಂಬಾಧರಂ ಕೋ
> ಮಲವಂಶಶ್ಯಾಮನಂಬೋಧರರವನಲಿನೀ ಕುಂತಲಂ ವ್ಯೂಢವಕ್ಷ
> ಸ್ಸ್ಥಲನಾಜಾನುಪ್ರಲಂಬಪ್ರಬಲಭುಜಯುಗಂ ಚಾರುವೃತ್ತೋರುಯುಗ್ಮಂ
> ಕುಲಶೈಲೇಂದ್ರೋನ್ನತಂ ಬಾಹುಬಲಿ ಸಕಲಸೌಂದರ್ಯಸಂಪನ್ನನಾದಂ (viii-೫೧)

ಅರಳಿದ ಮುಖ, ಕನ್ನೈದಿಲೆಯ ಕಣ್ಣು, ಕಳಿತ ತೊಂಡೆಯ ಹಣ್ಣಿನ ತುಟಿ, ಕೋಮಲವಾದ ಬಿದಿರಿನ ಶ್ಯಾಮಲವರ್ಣ, ಮೇಘದ ಗಂಭೀರ ಧ್ವನಿ, ಕಪ್ಪಾದ ಕೂದಲು, ವಿಶಾಲವಾದ ಎದೆ, ಮಂಡಿಯವರೆಗೆ ನೀಳವಾದ ತೋಳುಗಳು, ಸುಂದರವಾದ ದುಂಡಾದ ತೊಡೆಗಳು—ಇವುಗಳನ್ನುಳ್ಳ ಕುಲಶೈಲೇಂದ್ರ ಉನ್ನತಿಯನ್ನು ಪಡೆದು ಬಾಹುಬಲಿಯು ಸಕಲ ಸೌಂದರ್ಯಸಂಪನ್ನನಾದನು. ಈ ಮನ್ಮಥನ ಸೌಂದರ್ಯಕ್ಕೆ ಮರುಳಾಗದ ಕಾಂತಾಜನವಿಲ್ಲ ಎಂದು ಪ್ರತ್ಯೇಕವಾಗಿ ಹೇಳಬೇಕಿಲ್ಲ. ಹಾಗೆ ಹೇಳಿದರೆ ಅದು ಎಗ್ಗಲ್ಲವೆ?—'ಕನಸಿನೊಳಮಾಕುಮಾರನೆ ಮನಮಂ ತಣ್ಮಲೆಯೆ' ಚಿತ್ತಜ, ಚಿತ್ತಭವ, ಮನಸಿಜ, ಅನಂಗ, ಅನಂಗಜನೆಂದು ಬಾಹುಬಲಿಗೆ ಹಲವು ಹೆಸರುಗಳು ಪ್ರಖ್ಯಾತವಾದವು.

ವಜ್ರಜಂಘ ಭವದಲ್ಲಿ ತಂಗಿಯಾಗಿ ಹುಟ್ಟಿದ ಅನುಂದರಿಯೆ ಬಾಹುಬಲಿಗೆ ಸುಂದರಿಯೆಂಬ ತಂಗಿಯಾಗಿ ಹುಟ್ಟಿದಳು.

ಭವದ ಬಂಧನದ ರೀತಿ ಎಲ್ಲೆಲ್ಲಿಂದಲೋ ಹೊಂದಿಸಿಕೊಂಡು ಬಂಧಿಸಿಕೊಂಡು ಬರುವ ರೀತಿಯನ್ನು ನಾವು ಇಲ್ಲಿ ಕಾಣಬಹುದು. ವೃಷಭದೇವನಿಗೆ ಮಕ್ಕಳಾಗಿ ಜನಿಸಿದವರಲ್ಲಿ ಹಲವರು ಭವಾಂತರಸಂಬಂಧಿಗಳು. ಇವರೆಲ್ಲರೂ ವೃಷಭನಂತೆಯೇ ಆತ್ಮಕಲ್ಯಾಣ

ವನ್ನು ಮಾಡಿಕೊಳ್ಳುವವರೇ. ಭೋಗದಲ್ಲಿ ಹೇಗೆ ಸಹಚರರೆನಿಸಿದ್ದರೋ ಯೋಗ ಸಾಧನೆಯಲ್ಲಿಯೂ ಹಾಗೆಯೇ ಸಾಗುವುದನ್ನು ಮುಂದೆ ಕಾಣಬಹುದಾಗಿದೆ.

ವೃಷಭನು ನೂರೊಂದು ಮಂದಿ ಗಂಡುಮಕ್ಕಳನ್ನೂ ಬ್ರಾಹ್ಮೀ ಸೌಂದರಿಯರೆಂಬ ಇಬ್ಬರು ಹೆಣ್ಣುಮಕ್ಕಳನ್ನೂ ಪಡೆದು ಸುಖದಿಂದಿದ್ದನು.

ಒಮ್ಮೆ ಬ್ರಾಹ್ಮೀಸೌಂದರಿಯರು ವೃಷಭನಿಗೆ ಭಕ್ತಿಯಿಂದ ನಮಸ್ಕರಿಸಿ ಸಮೀಪಿಸಿದರು. ಅವರನ್ನು ವೃಷಭನು ಪ್ರೀತಿಯಿಂದ ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಮುದ್ದಿಸಿದನು, ಶ್ಲಾಘಿಸಿದನು. ಆದಿಪರಮೇಶ್ವರನಿಂದ ಹೊಗಳಿಕೆಯನ್ನು ಪಡೆದ ಧನ್ಯವಂತೆಯರು ಅವರು. ಅಂತಹ ವಿನಯಗುಣಗಳು ಅವರಲ್ಲಿ ಮಿಳಿತವಾಗಿದ್ದುವು. 'ನಿಮ್ಮಿರ್ವರ ನೆಗೆೞ್ತೆ ಮಕ್ಕಳಿರ ವಿನಯ ವಿಳಸನನಿಳಯಂ'. ಆದ ಕಾರಣ—

ಈವಯಸಮನೀಶೀಲಮ | ನೀವಿನಯಮನೆಯ್ದೆ ವಿದ್ಯೆಯಿಂ ಪುದಿದೊಡೆ ಮ
ತ್ತೇವೇೞ್ಪುದೋ ನೀಮೆ ಜಗ | ತ್ಪಾವನೆಯರಿರಕ್ಕ ನಿಮಗಮಗ್ಗಳರೊಳರೇ (viii-೫೮)

ಎಂದು ನುಡಿದನು. ಸುವರ್ಣಾಕ್ಷರಗಳಲ್ಲಿ ಬರೆದಿಡುವಂತಹ ಮಹತ್ತ್ವಪೂರ್ಣ ಘಟನೆ ಸಂಭವಿಸಿತು. ಹಿರಿಯವಳಾದ ಬ್ರಾಹ್ಮಿಗೆ ಲಿಪಿವಿದ್ಯೆಯನ್ನು ಬಲಗೈಯಿಂದಲೂ ಸುಂದರಿಗೆ ಗಣಿತವಿದ್ಯೆಯನ್ನು ಎಡಗೈಯಿಂದಲೂ ಕಲಿಸಿಕೊಟ್ಟನು. ಅಲ್ಲದೆ ವ್ಯಾಕರಣ, ಛಂದಸ್ಸು, ಅಲಂಕಾರಶಾಸ್ತ್ರಗಳನ್ನು ಕಲಿಸಿದನು. ಅಧ್ಯಾತ್ಮವಿದ್ಯೆಯಲ್ಲಷ್ಟೇ ಅಲ್ಲದೆ ಲೌಕಿಕವಿದ್ಯೆಯಲ್ಲಿಯೂ ಆದಿಗುರುವೆನಿಸಿದನು. ಭರತನಿಗೆ ನಾಟ್ಯಶಾಸ್ತ್ರ, ಅರ್ಥಶಾಸ್ತ್ರವನ್ನೂ ವೃಷಭಸೇನನಿಗೆ ಗಂಧರ್ವವಿದ್ಯೆಯನ್ನೂ ಅನಂತವಿಜಯನಿಗೆ ವಾಸ್ತುವಿದ್ಯೆಯನ್ನೂ ಕಲಿಸಿದನು. ಬಾಹುಬಲಿಗೆ ಕಾಮತಂತ್ರ, ಸಾಮುದ್ರಿಕೆ, ಆಯುರ್ವೇದ, ಧನುರ್ವೇದ, ಗಜಾಶ್ವವಿದ್ಯೆಗಳನ್ನು ರತ್ನಪರೀಕ್ಷಾಕ್ರಮವನ್ನು ಕಲಿಸಿದನು. ಉಳಿದ ಮಕ್ಕಳಿಗೂ ಲೋಕೋಪಕಾರಿಗಳೆನಿಸಿದ ವಿದ್ಯೆಗಳನ್ನು ಉಪದೇಶಿಸಿದನು. ಹೀಗೆ ಮಕ್ಕಳೊಡನೆ ಸಂತೋಷದಿಂದ ಇಪ್ಪತ್ತುಲಕ್ಷ ಪೂರ್ವ ವರ್ಷಗಳನ್ನು ಕಳೆದನು. ಇಲ್ಲಿ ಪಂಪನು ನೀಡಿರುವ ನಾಟಕೀಯ ಧಾಟಿ ಮನೋಹರವಾಗಿ ಕಂಡು ಬರುತ್ತದೆ. ತನ್ನ ಮಕ್ಕಳೆಡೆಗೆ ಅದು ಹೆಣ್ಣೇ ಆಗಿರಲಿ, ಗಂಡೇ ಆಗಿರಲಿ, ತಂದೆ ತೋರುವ ಕರ್ತವ್ಯನಿಷ್ಠೆ, ತಾರತಮ್ಯ ತೋರದೆ ನಡೆಸಿಕೊಳ್ಳುವ ರೀತಿ ಆದರ್ಶಪ್ರಾಯವಾಗಿದೆ.

ಹೀಗಿರಲು ಕಾಲಧರ್ಮದ ಪ್ರಕಾರ ಪ್ರಕೃತಿಯಲ್ಲಿ ವ್ಯತ್ಯಾಸವುಂಟಾಯಿತು. ಮೊಟ್ಟಮೊದಲು ಬೇಸಾಯವಿಲ್ಲದೆ ಬೆಳೆಯುತ್ತಿದ್ದ ಭತ್ತ, ಗೋಧಿ, ಮೊದಲಾದ ಬೆಳೆಗಳು ವಿರಳವಾದವು. ಕಲ್ಪವೃಕ್ಷಗಳು ರಸವೀರ್ಯ ವಿಪಾಕಗಳನ್ನು ಕಳೆದುಕೊಂಡವು. ಪ್ರಜೆಗಳು ಆಧಿ, ವ್ಯಾಧಿ, ಬಾಧೆಗಳಿಂದ ಪೀಡಿತರಾಗಿ ನಾಭಿರಾಜನ ಅನುಮತಿಯಂತೆ ವೃಷಭನ ಬಳಿಗೆ ಬಂದರು. ಆದಿದೇವನಿಂದ ಮತ್ತೊಂದು ತಿರುವು ಈ ಲೋಕಕ್ಕೆ ಲಭಿಸಿತು. ಪ್ರಜೆಗಳು ತಮ್ಮ ಕಷ್ಟಗಳನ್ನು ಹೇಳಿಕೊಂಡಾಗ ಷಟ್ಕರ್ಮಗಳನ್ನು, ವರ್ಣಾಶ್ರಮ ವಿಭಾಗಗಳನ್ನು, ಗ್ರಾಮ ಗೃಹಾದಿ ಭೇದಗಳನ್ನು ಕರ್ಮಭೂಮಿಯ ಪ್ರಾರಂಭಕಾಲದಲ್ಲಿ ಸ್ಥಾಪಿಸಿದನು. ಇಂದ್ರನು ಮತ್ತೆ ಸಹಾಯಕನಾಗಿ ಬಂದನು. ವೃಷಭನ ಅಪ್ಪಣೆಗನುಸಾರವಾಗಿ ಹಲವು ಪುರಗಳ ನಿರ್ಮಾಣವಾದವು. 'ಪುರಂದರ' ನೆಂದು ಹೆಸರನ್ನು ಪಡೆದು ದೇವೇಂದ್ರನು ಹಿಂದಿರುಗಿದನು. ಪ್ರಜೆಗಳಿಗೆ ಖಡ್ಗಕಾರ್ಯ, ಮಸಿಕರ್ಮ, ಕೃಷಿಕರ್ಮ, ಶಾಸ್ತ್ರವಿದ್ಯೆ,

ವಾಣಿಜ್ಯ, ಚಿತ್ರಕಲಾಪಾದಿ ಶಿಲ್ಪವಿದ್ಯೆಗಳನ್ನು ಜನರಿಗೆ ಬೋಧಿಸಿ ಉಪಕೃತನಾದನು. ಕ್ಷತ್ರಿಯ, ವಣಿಕ, ಶೂದ್ರರೆಂದು ಮೂರು ವರ್ಣದವರಿಗೆ ಕ್ರಮವಾಗಿ ಶಸ್ತ್ರ, ಪಶುಪಾಲನೆ, ವ್ಯವಸಾಯ, ಕ್ರಯವಿಕ್ರಯ ಕಾರ್ಯ, ಶುಶ್ರೂಷಾ ಕಾರ್ಯವನ್ನು ಉಪದೇಶಿಸಿದನು. ವರ್ಣಸಂಕರವಾಗದಂತೆ ವಿವಾಹಪದ್ಧತಿಯನ್ನು ಆಯಾ ಜಾತಿಪದ್ಧತಿಯಲ್ಲಿ ನಿಯಮಿಸಿದನು. ಆಷಾಢ ಬಹುಳದ ಪಾಡ್ಯದ ದಿನದಂದು ಭಗವಂತನಿಂದ ಯುಗವು ಕೃತಯುಗವಾಯಿತು. 'ಕೃತಯುಗಾರಂಭ'ಸೂತ್ರಧಾರನೆನಿಸಿದ ಆದಿಬ್ರಹ್ಮನಿಗೆ ರಾಜ್ಯಾಭಿಷೇಕವನ್ನು ಮಾಡಲು ದೇವೇಂದ್ರನು ಬಂದನು.

ರಾಜ್ಯಾಭಿಷೇಕದ ವರ್ಣನೆ ಕಣ್ಣಿಗೆ ಕಟ್ಟುವಂತೆ ಸಾಗುತ್ತದೆ. ಅಲ್ಲಿನ ನೆಲಗಟ್ಟಿನ ವೈಭವ ಇಂದ್ರನೀಲಮಣಿಯದು. ದೇವತಾಸ್ತ್ರೀಯರು ಮಂಗಳವಸ್ತ್ರಗಳನ್ನು ಸಡಗರದಿಂದ ತರುತ್ತಿದ್ದರು. ಸ್ನಾನೋಪಕರಣಗಳು ಒಬ್ಬರ ಕೈಯಿಂದ ಒಬ್ಬರಿಗೆ ತಲುಪುತ್ತಿದ್ದವು. ಸುರಸ್ತ್ರೀಯರ ಮೃದು ಪದವಿನ್ಯಾಸದ ಶಬ್ದ ಮನೋಹರವಾಗಿತ್ತು. ಹೀಗೆ ಸಾಗುತ್ತದೆ ರಾಜ್ಯಾಭಿಷೇಕದ ಚಿತ್ರಣ. ಪುರುದೇವನನ್ನು ಪೂರ್ವಾಭಿಮುಖವಾಗಿ ಕುಳ್ಳಿರಿಸಿ ಮಹಾನದಿಗಳಿಂದ, ಸರೋವರ ಸಮುದ್ರಾದಿಗಳಿಂದ ನೀರನ್ನು ತಂದು ಅಭಿಷೇಕ ಮಾಡಲಾಯಿತು. ಪಂಪನು ಇಲ್ಲಿ ಹೆಚ್ಚಿನ ವರ್ಣನೆಗೆ ಹೋಗದೆ "ಮುಂಪೋದ ಜನ್ಮಾಭಿಷೇಕಕ್ಕೆ ಸಮಂ ಮೇಲೆಂಬಿನಂ ಕಣ್ಗೆಸೆದುದು ಜಗತೀ ರಾಜರಾಜ್ಯಾಭಿಷೇಕಂ" ಎಂದು ಹೇಳಿ ಅದರ ವೈಭವದ ಹೆಚ್ಚಳಿಕೆಯನ್ನು ನಮ್ಮ ಊಹೆಗೇ ಬಿಟ್ಟಿದ್ದಾನೆ.

ವಿವಿಧ ಪರಿಕರಗಳಿಂದ, ತಾವರೆಯ ಎಲೆಯ ದೊನ್ನೆಗಳಿಂದ, ಇಂದ್ರನೀಲಮಣಿಮಯವಾದ ಕಲಶಾದಿಗಳಿಂದ ದೇವತೆಗಳು, ಪೌರರು ಸ್ವಾಮಿಗೆ ಅಭಿಷೇಕಮಾಡಿದರು. ಸುಂದರಿಯರು ಸ್ವಾಮಿಗೆ ಮಜ್ಜನಮಾಡಿಸಿ ತಮಗಾದ ಆಯಾಸವನ್ನು ಲೆಕ್ಕಿಸದೆ ಸಂತೋಷಗೊಂಡರು. ಅನಂತರ ದೇವ ದುಕೂಲಾದಿಗಳಿಂದ ಅಲಂಕೃತವಾದ ವೃಷಭನಿಗೆ ಇಂದ್ರನು ಪಟ್ಟವನ್ನು ಕಟ್ಟಿದನು. ಪುರುದೇವನು ಚಕ್ರವರ್ತಿತ್ವವನ್ನು ಪಡೆದವನಾಗಿ ಪ್ರಜಾಪಾಲನೆಗೆ ತೊಡಗಿದನು.

ಮುಂದೆ ಹುಟ್ಟಲಿರುವ ಬ್ರಾಹ್ಮಣ ಜಾತಿಗೂ ಅಧ್ಯಯನ, ಅಧ್ಯಾಪನ, ದಾನ, ಯಜನಾದಿಗಳನ್ನು ಪೂರ್ವಪೀಠಿಕಾರೂಪವಾಗಿ ಬೋಧಿಸಿದನು.

ದಂಡದ ವಿಧಿಯನ್ನು ವಿಧಿಸದಿದ್ದರೆ ಪ್ರಜೆಗಳು ತಮ್ಮ ವೃತ್ತಿಯಿಂದ ಪರಿಚ್ಯುತರಾಗುವರೆಂದು ಬಗೆದು ದಂಡವಿಧಿಯನ್ನು ನಿಯಮಿಸಿದನು. ಅಲ್ಲದೆ ಸೋಮಪ್ರಭ, ಹರಿ, ಅಕಂಪನ, ಕಾಶ್ಯಪರನ್ನು ದಂಡಧಾರಿಗಳಾದ ರಾಜರನ್ನಾಗಿ ಸ್ಥಾಪಿಸಿ, ಕುರುವಂಶ-ಹರಿವಂಶ-ನಾಥವಂಶ-ಉಗ್ರವಂಶದ ತಿಲಕರನ್ನಾಗಿ ಮಾಡಿದನು.

ಇಕ್ಷುರಸವನ್ನು ತೆಗೆಯಲು ಪ್ರಜೆಗಳಿಗೆ ಹೇಳಿಕೊಟ್ಟಿದ್ದರಿಂದ 'ಇಕ್ಷುಕುಲತಿಲಕ'ನೆಂದೂ ಪ್ರಜೆಗಳ ಜೀವನೋಪಾಯವನ್ನು ಹೇಳಿಕೊಟ್ಟಿದ್ದರಿಂದ 'ಮನು'ವೆಂದೂ ತನ್ನ ಕುಲೋದ್ಧಾರನಾದ್ದರಿಂದ 'ಕುಳಧರ'ನೆಂದೂ ಕೃತಯುಗಾರಂಭಕ್ಕೆ ಆದಿಯಾದ ಕಾರಣ 'ಆದಿಬ್ರಹ್ಮ'ನೆಂದೂ ಅಪೂರ್ವನಾಮಗಳು ಪ್ರಸಿದ್ಧವಾದವು.

ಅರವತ್ತಮೂರು ಲಕ್ಷಪೂರ್ವದಷ್ಟು ರಾಜ್ಯಭಾರವನ್ನು ಮಾಡುತ್ತಾ ಪುತ್ರ, ಕಳತ್ರ ಮಿತ್ರರೊಡನೆ ನಲಿಯುತ್ತಿದ್ದನು.

ಈ ನಿರೂಪಣೆಯ ಉದ್ದಕ್ಕೂ ಯುಗಪುರುಷನಾದ ವೃಷಭನ ಕಾರ್ಯತತ್ಪರತೆಯ ಮಹತ್ವವು ಮಡುಗಟ್ಟಿ ನಿಂತಿದೆ. ಅಲೌಕಿಕ ಪುರುಷನಾಗಹೊರಟಿರುವ ವೃಷಭನಿಗೆ ಲೌಕಿಕ ಜೀವನದ ಸುವ್ಯವಸ್ಥೆಯು ನೆಲೆಗೊಳ್ಳುವುದರ ಬಗೆಗೆ ಅಷ್ಟೇ ಕಾಳಜಿ ಇದೆ. ಒಂದು ವ್ಯವಸ್ಥಿತ ಸಮಾಜದ ಅಗತ್ಯದ ಪೂರೈಕೆಯನ್ನು ಮಾಡಿ ಅದರ ಪ್ರವರ್ತಕನಾಗಿ ಬಾಳಿ ಬದುಕಿ ತೋರಿಸಿದವನು ವೃಷಭ. ಈ ಚಿತ್ರಣವನ್ನು ಪಂಪನು ಬಹಳ ಗಂಭೀರವಾಗಿ ಚಿತ್ರಿಸಿದ್ದಾನೆ. "ಯಶಸ್ವತಿ ಸುನಂದೆಯರೊಂದಿಗೆ ನಡೆದ ಮದುವೆ, ಭರತ ಬಾಹುಬಲಿ ಮೊದಲಾದ ಮಕ್ಕಳ ಜನನ ಇವೆಲ್ಲವನ್ನೂ ವರ್ಣಿಸುವಾಗ ನಾಯಕನ ನಿರ್ಲಿಪ್ತವೂ ಗಂಭೀರವೂ ಆದ ಮನೋಧರ್ಮ ಎದ್ದು ತೋರುವಂತೆ ಕವಿ ಕಥಾಭಾಗವನ್ನು ನಿರ್ವಹಿಸಿದ್ದಾನೆ. ಶೃಂಗಾರದ ದುಡುಕು, ವರ್ಣನೆಯ ಅತಿರಂಜನೆ ಅಬ್ಬರಗಳು ತೋರುವುದಿಲ್ಲ. ವಿದ್ಯಾಭ್ಯಾಸ ಮಾಡಿಸಲು ಆದಿನಾಥ ತನ್ನ ಹೆಣ್ಣು ಮಕ್ಕಳನ್ನು ಮೊದಲು ಆರಿಸಿಕೊಂಡು, ಅವರಲ್ಲಿ ಬ್ರಾಹ್ಮಿಗೆ ಸಾಹಿತ್ಯಾಭ್ಯಾಸದ ಸಂಕೇತವಾಗಿ ಲಿಪಿಯನ್ನೂ ಸೌಂದರಿಗೆ ವಿಜ್ಞಾನದ ಸಂಕೇತವಾಗಿ ಗಣಿತವನ್ನೂ ಕಲಿಸಿದನೆಂಬುದಾಗಿ ಬಂದಿರುವ ನಿರೂಪಣೆ ಒಂದು ಕಾಲದ ಸ್ತ್ರೀಗೌರವ, ಸ್ತ್ರೀವಿದ್ಯಾಭ್ಯಾಸದ ಸೂಚನೆ ಎನ್ನಬಹುದು. ಅನಂತರದಲ್ಲಿ ಆಧಿ, ವ್ಯಾಧಿ ಬಾಧಿತ ಶರೀರವಾದ ಮಾನವರ ಪ್ರಾರ್ಥನೆಯಂತೆ ವರ್ಣಗಳನ್ನು ವಂಶಕ್ರಮವನ್ನು ನೆಲೆಗೊಳಿಸಿ, ಇಂದ್ರನ ಮೂಲಕವಾಗಿ ಪ್ರಜಾಹಿತದ ಅನೇಕಕಾರ್ಯಗಳನ್ನು ಕೈಗೂಡಿಸಿದ್ದು ಆದಿನಾಥನ ಸಮಾಜ ಪರಿಷ್ಕಾರದ ಕಾರ್ಯ. ಇದು ವಿಭಿನ್ನ ಪೌರಾಣಿಕ ದೃಷ್ಟಿಯನ್ನು ಬಿಂಬಿಸುವ ಜೈನಧರ್ಮದ ಸಂಕಲ್ಪ ಮಾತ್ರವಲ್ಲದೆ, ಆದಿತೀರ್ಥಂಕರನನ್ನು 'ಕೃತಯುಗಾರಂಭ ಸೂತ್ರಧಾರ'ನನ್ನಾಗಿ, 'ಆದಿಬ್ರಹ್ಮ'ನನ್ನಾಗಿ ತೋರಿಸುವ ಸಂಯೋಜನೆಯೂ ಹೌದು."[೩೩]

ವೃಷಭನ ಬಾಲಲೀಲೆಯನ್ನು ಜಿನಸೇನಾಚಾರ್ಯರು ಎಂಟು ಶ್ಲೋಕಗಳಲ್ಲಿ ವರ್ಣಿಸಿದ್ದಾರೆ. 'ಮಗುವಿನ ಬೆಳವಣಿಗೆ ಚಂದ್ರನ ಬಾಲ್ಯಾವಸ್ಥೆಯಂತೆಯೂ ಮಂದಹಾಸವು ಬೆಳುದಿಂಗಳಿನಂತೆಯೂ ನಿರ್ಮಲವಾಗಿದ್ದು, ಇದರಿಂದ ತಂದೆ ತಾಯಿಗಳ ಸಂತೋಷವೆಂಬ ಸಮುದ್ರವು ವೃದ್ಧಿಯನ್ನು ಹೊಂದಿತು. ಅಲ್ಲದೆ ಅದು ಸರಸ್ವತಿಯ ಗೀತ ರಚನೆಯಂತೆ, ಲಕ್ಷ್ಮೀದೇವಿಯ ಹಾಸ್ಯದ ವಿಲಾಸದಂತೆ, ಕೀರ್ತಿಯೆಂಬ ಲತೆಯ ವಿಕಾಸದಂತೆ, ಅವ್ಯಕ್ತವಾದ ವಚನವು ಸಾಕ್ಷಾತ್ ಸರಸ್ವತಿಯು ಆ ಜಿನಬಾಲಕನ ಬಾಲ್ಯವನ್ನು ಅನುಕರಣೆ ಮಾಡುವುದಕ್ಕೋಸ್ಕರ ಬಾಲ್ಯವನ್ನು ಹೊಂದಿದಳೋ ಎಂಬಂತೆ ಇದ್ದಿತು (xiv-೧೬೬-೧೭೩). ಈ ಮೊದಲಾದ ವರ್ಣನೆಗಳು ಅಲೌಕಿಕ ಪುರುಷನಾಗಲಿರುವ ಶಿಶುವಿನ ಅಲೌಕಿಕತೆಯ ಉಪಮೆಗಳಾಗಿ ನಿಲ್ಲುತ್ತವೆ. ಪಂಪನು ಸಂಕ್ಷಿಪ್ತವಾಗಿ ಅಲೌಕಿಕತೆಯ ಮೆರುಗಿಗಿಂತ ಸಹಜ ಸೌಂದರ್ಯಲೀಲೆಯತ್ತ ಗಮನ ಹರಿಸಿದ್ದಾನೆ. ಉದಾಹರಣೆಗೆ :

ಕನಕಮಣಿಕಿಂಕಿಣೀ ಮೃದು | ನಿನದಂ ಕಟಿತಟದೊಳೆಸೆಯೆ ದಾದಿಯರೊಡನಂ
ದಿನಿಸಂ ನಡೆಯಿಸೆ ಲಲಿತೇಂ | ದ್ರನೀಲಮಣಿ ಭೂಮಿಯೊಳ್ ತಳರ್ನಡೆ ನಡೆದಂ
(ಆದಿಪು.viii-೨)

ಜಿನಸೇನರು ಆದಿನಾಥನ ಕುಮಾರಾವಸ್ಥೆಯನ್ನು ೪೦ ಪದ್ಯಗಳಲ್ಲಿಯೂ, ಯೌವನಾ

ವಸ್ಥೆಯನ್ನು ೪೯ ಪದ್ಯಗಳಲ್ಲಿಯೂ ವಿವರವಾಗಿ ವರ್ಣಿಸಿದ್ದರೆ, ಪಂಪನು ಒಂದು ವಚನ ಭಾಗದಲ್ಲಿ ಕುಮಾರಾವಸ್ಥೆಯನ್ನೂ ಮೂರು ಪದ್ಯ ಹಾಗೂ ಒಂದು ವಚನಭಾಗಗಲ್ಲಿ ಯೌವನಾವಸ್ಥೆಯ ವಿವರವನ್ನೂ ಸಾರಸಂಗ್ರಹವಾಗಿ ನೀಡಿದ್ದಾನೆ.

ಪುರಾಣಶೈಲಿಯಲ್ಲಿ ಬರುವ ವರ್ಣನಾವಿಧಾನವನ್ನು ಪಂಪನು ಕೈಬಿಟ್ಟು ಸಂಗ್ರಹವಾಗಿ ನಿರೂಪಿಸಿದ್ದಾನೆ. ಪೂರ್ವಪುರಾಣದಲ್ಲಿ ಯಥಾರೀತಿಯಲ್ಲಿ ವರ್ಣಿತವಾಗುವ ಅಡಿಯಿಂದ ಮುಡಿಯವರೆಗಿನ ವರ್ಣನಾವಿನ್ಯಾಸ ಮೊದಲಾದುವುಗಳನ್ನು ಕೈಬಿಟ್ಟು ವೃಷಭನ ಅಪೂರ್ವ ಸೌಂದರ್ಯವನ್ನೂ ಆ ಸೌಂದರ್ಯದ ಹಿನ್ನೆಲೆಯಲ್ಲಿ ಮೈದಳೆದ ಲೌಕಿಕ ವೈರಾಗ್ಯವನ್ನೂ ಮನೋಹರವಾಗಿ ವರ್ಣಿಸಿದ್ದಾನೆ. 'ಸ್ವಾಮಿಯು ಲಕ್ಷ್ಮಿಯನ್ನು ಮಿಂಚಿನಂತೆ ಚಂಚಲ ಳೆಂದು ತಿಳಿದು ಅವಳನ್ನು ಸ್ವಲ್ಪ ಪ್ರೇಮದಿಂದ ಧರಿಸಿದರು (ಪೂರ್ವಪು. xvi-೪೮). ಈ ಅಭಿಪ್ರಾಯವು ಪಂಪನಲ್ಲಿ ಅತಿ ಸುಂದರವಾಗಿ ಮೂಡಿ ಬಂದಿದೆ.

ಪರಮೌದಾರಿಕದಿವ್ಯಮೂರ್ತ್ತಿ ವಸನಾಲಂಕಾರಮಂದಾರಶೇ
ಖರರಮ್ಯಂ ಧೃತಯೌವನಂ ಮರುಳಿಲ್ ತಾನಾತ್ತುಮತ್ಯಂತ ಸೌಂ
ದರಕಾಂತಾಜನಮಂ ಮಗುಳ್ಚುದಣಮಿಲ್ಲಂತಾಕೆಗಳ್ಗೇನದ
ಚ್ಚರಿಯೋ ಚಿತ್ರದ ರೂಪೆ ರೂಪವಿಭವಂ ಮುಕ್ತ್ಯಂಗನಾಕಾಂತನಾ (ಆದಿಪು. viii-೫)

ವೃಷಭನಾಥನು ಪರಮೌದಾರಿಕವೂ ದಿವ್ಯವೂ ಆದ ದೇಹವುಳ್ಳವನು. ಅವನು ವಸ್ತ್ರಾ ಲಂಕಾರಗಳಿಂದಲೂ ಮಂದಾರ ಪುಷ್ಪದ ಶೇಖರಗಳಿಂದಲೂ ರಮ್ಯನಾದವನು; ತಾರುಣ್ಯ ವಿಭೂಷಿತನು. ಅತ್ಯುತ್ತಮವಾದ ಸುಂದರ ಕಾಂತಾಜನರನ್ನು ಮರುಳುಗೊಳಿಸುವಷ್ಟು ಸೌಂದರ್ಯ ವಿಭೂಷಿತನಾಗಿದ್ದರೂ ತಾನು ಮರುಳುಗೊಳ್ಳದವನು. ಹೀಗೆ ಮುಕ್ತ್ಯಂಗನಾ ಕಾಂತನಾದ ಅವನ ರೂಪವು ಚಿತ್ರದಲ್ಲಿ ಬರೆದ ರೂಪದಂತಿತ್ತು.

ಆದಿದೇವನನ್ನು ವಿವಾಹಕ್ಕೆ ಒಪ್ಪಿಸುವ ಪ್ರಸಂಗದಲ್ಲಿ ಪಂಪನು ಪೂರ್ವಪುರಾಣಕ್ಕೆ ಹೆಚ್ಚು ಋಣಿಯಾಗಿದ್ದಾನೆ. ಅಲ್ಲಿಯ ನಾಟಕೀಯತೆಯ ಸೌಂದರ್ಯವನ್ನು ಇಲ್ಲಿಯೂ ಉಳಿಸಿಕೊಂಡಿರುವುದನ್ನು ಗಮನಿಸಬಹುದಾಗಿದೆ. ಉದಾಹರಣೆಗೆ : 'ಉದಯಪರ್ವತವು ಸೂರ್ಯೋದಯಕ್ಕೆ ನಿಮಿತ್ತವಾಗಿದೆ. ನಾವೂ ನಿನ್ನ ಉದಯಕ್ಕೆ ನಿಮಿತ್ತಮಾತ್ರವಾಗಿರು ವೆವು. ಈಗ ನೀನು ಒಪ್ಪಿದ ಹೆಣ್ಣನ್ನು ಮದುವೆಯಾಗಿ ಸಂತಾನವನ್ನು ಹೆಚ್ಚಿಸಬೇಕು. ಇತರರೂ ಆಗ ನಿನ್ನನ್ನು ಅನುಸರಿಸುವರು. ಇಂದಿನ ಮಕ್ಕಳೇ ಮುಂದಿನ ಧರ್ಮ ಸಂರ ಕ್ಷಕರು. ಮದುವೆಯಾಗುವುದು ಗೃಹಸ್ಥಧರ್ಮ. ಗುರುಹಿರಿಯರ ಮಾತನ್ನು ಯಾರೂ ಮೀರಬಾರದಲ್ಲವೆ? ಇಷ್ಟು ಹೇಳಿ ನಾಭಿರಾಜನು ಕುಳಿತಾಗ ಆದಿದೇವನು ಮುಗುಳ್ನಗೆ ಯಿಂದ ಸಮ್ಮತಿಯನ್ನು ಸೂಚಿಸಿದನು (ಪೂರ್ವಪು. xv, ೫೫-೫೬). ಈ ಸನ್ನಿವೇಶವನ್ನು ರೂಪಿಸುವಲ್ಲಿ ಪಂಪನು ಪೂರ್ವಪುರಾಣಕ್ಕೆ ಹೆಚ್ಚು ಋಣಿಯಾಗಿದ್ದಾನೆ.

ಪೂರ್ವಪುರಾಣದಲ್ಲಿ ಆದಿದೇವನ ಮದುವೆಯ ಪ್ರಸಂಗದ ವಿಸ್ತೃತ ವರ್ಣನೆ ಬಂದಿಲ್ಲ. ನಾಭಿರಾಜನು ದೇವೇಂದ್ರನ ಅನುಮತಿಯನ್ನು ಪಡೆದು ಸುಲಕ್ಷಣ ಸಂಪನ್ನೆಯರಾದ ಇಬ್ಬರು ಕನ್ಯೆಯರಿಗಾಗಿ ಯಾಚಿಸಿದನು. ಕಚ್ಛ-ಮಹಾಕಚ್ಛರ ಸೋದರಿಯರಾದ ಯಶಸ್ವತಿ ಮತ್ತು ಸುನಂದೆಯರನ್ನು ತಂದು ಆತನು ಆದಿದೇವನಿಗೆ ಮದುವೆ ಮಾಡಿದನು (ಪೂರ್ವಪು. xv,೬೭-೭೦). ಈ ರೀತಿ ಪೂರ್ವಪುರಾಣದಲ್ಲಿ ಉಲ್ಲೇಖಮಾತ್ರವಾಗಿ ಬರುವ

ಈ ವಿವಾಹ ಮಹೋತ್ಸವದ ವರ್ಣನೆ ಪಂಪನಲ್ಲಿ ವೈಭವಪೂರ್ಣವಾಗಿ ಬಂದಿದೆ. ವಿವಾಹ ಮಹೋತ್ಸವವು ಜನ್ಮಾಭಿಷೇಕಕ್ಕಿಂತ ನೂರ್ಮಡಿ ಮಿಗಿಲಾದುದು ಎಂದು ದೇವೇಂದ್ರನು ಅಪ್ಸರೆಯರೊಡನೆ ಆಗಮಿಸಿ ಯಾವುದಕ್ಕೂ ಕೊರತೆಯಾಗದಂತೆ ಸಿದ್ಧತೆಯನ್ನು ಮಾಡಿದನು. ಅತ್ತ ಸ್ತ್ರೀಸಮೂಹಕ್ಕೆ ಇಂದ್ರಾಣಿ ಮಾರ್ಗದರ್ಶನ ನೀಡುತ್ತಿದ್ದಳು. ಆದಿದೇವನು ಕಲ್ಪವೃಕ್ಷದಂತೆ ಇದ್ದನು. ಅತ್ತ ಇತ್ತ ಕಲ್ಪಲತೆಗಳಂತೆ ಯಶಸ್ವತಿ ಸುನಂದೆಯರು ಈತನ ಕೈಹಿಡಿದು ಪುಲಕಗೊಂಡಿದ್ದರು ಇತ್ಯಾದಿ ವಿವರಗಳೊಂದಿಗೆ ವಿಸ್ತಾರವಾಗಿ ಈ ಸಂದರ್ಭ ಚಿತ್ರಿತವಾಗಿದೆ (viii, ೧೭ ರಿಂದ ೨೩ ಮತ್ತು ವಚನಭಾಗ). ಶ್ರೀಮತಿ-ವಜ್ರಜಂಘರ ವಿವಾಹೋತ್ಸವದ ಸಮಯದಲ್ಲಿ ವರ್ಣಿತವಾಗಿರುವ ಭಾವುಕತಂತುವನ್ನು ಕವಿ ಇಲ್ಲಿ ಸೆರೆಹಿಡಿದಿಲ್ಲದಿದ್ದರೂ ಪೂರ್ವಪುರಾಣಕ್ಕಿಂತ ಹೆಚ್ಚಿನ ವಿವರಣೆಗಳನ್ನು ನೀಡಿದ್ದಾನೆ.

ಪೂರ್ವಪುರಾಣದಲ್ಲಿ ಬರುವ ಯಶಸ್ವತಿ ಸುನಂದೆಯರ ವರ್ಣನೆಯಲ್ಲಿ ಸಾಂಪ್ರದಾಯಿಕ ಶೈಲಿಯನ್ನು ಪಂಪನು ಕೈಬಿಟ್ಟಿದ್ದರೂ ವೃಷಭಸ್ವಾಮಿಯ ಸೌಂದರ್ಯದೊಂದಿಗೆ ಯಶಸ್ವತಿ ಸುನಂದೆಯರ ಸೌಂದರ್ಯವು ಸರಿದೂಗುತ್ತಿತ್ತು—ಎಂದು ವರ್ಣಿಸುವಲ್ಲಿ ಪಂಪನು ಕಾವ್ಯಶೈಲಿಗಿಂತ ಪುರಾಣಶೈಲಿಯತ್ತ ಸಾಗಿದ್ದಾನೆ. ಉದಾಹರಣೆಗೆ, ಸದ್ವೃತ್ತ ಸಂಪನ್ನರಾದ ಕ್ಷತ್ರಿಯ ಕುಮಾರಿಯರಲ್ಲಿ ಆ ನಾಭಿರಾಜನ ಕುಮಾರನೂ ಆ ನಿಜ ಕುಲತಿಲಕೆಯರಲ್ಲಿ ಆ ಮನುಕುಲತಿಲಕನೂ ದುಂಬಿವಿಂಡಿನಂತೆ ಮನೋಹರವಾದ ಮುಂಗುರುಳುಗಳಿಂದ ಅಲಂಕೃತರೂ ಅರ್ಧಚಂದ್ರನಂತೆ ಹಣೆವಡೆದವರೂ ಆದ ಆ ತರುಣಿಯರಲ್ಲಿ ವಕ್ರಕೇಶಾಲಂಕೃತವಾಗಿ ವಿಶಾಲವಾದ ಹಣೆಯುಳ್ಳವನೂ ಆ ಅರಳಿದ ನೀಲ ಕಮಲದಂತೆ ಕಣ್ಣುಳ್ಳವರಲ್ಲಿ ಅರಳಿದ ಕಮಲದೆಸಳಿನಂತೆ ಚಂಚಲವಾದ ಕಣ್ಣುಳ್ಳವನೂ ನೆರೆದಿರಲು . . . (ಆದಿಪು. ಆಶ್ವಾಸ·viii). ಆದರೆ ಇದೇ ಸಂದರ್ಭದಲ್ಲಿ ಮೂಡಿಬಂದಿರುವ 'ಸಮಲಾವಣ್ಯ ಪ್ರಸರದ...'(viii-೨೪) ಎಂಬ ಪದ್ಯಮಾತ್ರ ಇದಕ್ಕೆ ಅಪವಾದವಾಗಿದೆ. ಅವರ ದಾಂಪತ್ಯದ ಸಮರಸತೆಯನ್ನು ಸುಂದರವಾದ ಕಂದಪದ್ಯದಲ್ಲಿ ಚಿತ್ರಿಸಿದ್ದಾನೆ. ಯಾವ ಶೃಂಗಾರದ ಅಬ್ಬರವೂ ಇಲ್ಲದೆ ಗಂಭೀರವಾಗಿ ಕವಿ ಕಾರ್ಯವನ್ನು ನಿರ್ವಹಿಸಿದ್ದಾನೆ. ಮುಂದೆ ಪಂಪನು ನೀಡುವ ವಚನಭಾಗದ ಪುರಾಣಶೈಲಿಯ ಅಗತ್ಯವೇ ಇರಲಿಲ್ಲವೆನ್ನುವಷ್ಟರಮಟ್ಟಿಗೆ ಈ ಕಿರುಪದ್ಯದ ಸೌಂದರ್ಯದ ಹರವು ಅಪಾರವಾಗಿದೆ.

ಯಶಸ್ವತಿಯ ಸ್ವಪ್ನಪ್ರಸಂಗದಲ್ಲಿ ಆಕೆ ಭೂಮಿ, ಮೇರು, ಸೂರ್ಯ, ಚಂದ್ರ, ಸರೋವರ, ಸಮುದ್ರಗಳನ್ನು ಕಂಡಳೆಂದು ಪೂರ್ವಪುರಾಣದಲ್ಲಿದ್ದರೆ, ಪಂಪನು ಭೂಮಿ, ಸರೋವರಗಳಿಗೆ ಬದಲಾಗಿ ಲಕ್ಷ್ಮಿ, ಸುರತರುಗಳನ್ನು ಉಲ್ಲೇಖಿಸಿದ್ದಾನೆ. ಈ ಸಂದರ್ಭದಲ್ಲಿ ಪೂರ್ವಪುರಾಣದಲ್ಲಿ ಬರುವ ಸುಪ್ರಭಾತದ ವರ್ಣನೆಯನ್ನು (xv, ೧೦೨ ರಿಂದ ೧೧೭) ಪಂಪನು ಕೈಬಿಟ್ಟಿರುವುದು ಉಚಿತವಾಗಿಯೇ ಇದೆ. ಪುರಾಣಕಥೆಯ ಚೌಕಟ್ಟನ್ನು ಬಿಡದೆ ಅನಾವಶ್ಯಕವಾದ ವಿವರಣೆಯ ಗೊಡವೆಗೆ ಹೋಗದೆ ಪಂಪನು ತೋರುವ ಸಮಯಪ್ರಜ್ಞೆ ಶ್ಲಾಘನೀಯವಾದುದು.

ಸ್ವಪ್ನಫಲವನ್ನು ಕೇಳಿ 'ಯಶಸ್ವತಿಯು ಚಂದ್ರೋದಯವಾಗುವಾಗ ಸಮುದ್ರವು ಉಬ್ಬುವಂತೆ ಉಬ್ಬಿಹೋದಳೆಂಬ' (xv-೧೧೭) ಪೂರ್ವಪುರಾಣದಲ್ಲಿ ಬರುವ ಈ ಸಾಮಾನ್ಯವಾದ ವರ್ಣನೆಯನ್ನು ಕೈಬಿಟ್ಟು ಪಂಪನು ಕಾವ್ಯಶೈಲಿಯಲ್ಲಿ ಬಣ್ಣಿಸಿದ್ದಾನೆ.

ಉದಾರಹಣೆಗೆ :

ಪುಳಕಂ ಪುದಿದಿರೆ ರಾಗಂ | ಪೊಳೆಪಂ ತನುರುಚಿಗೆ ಮಾಡೆ ತಂಬೆಲರಲೆಪಿಂ
ಕಳಿಕೆಯೊಳೆ ತುಱುಗಿ ತಳಿರೊಳ್ | ತಳತಳಿಸಿದೊಂದಶೋಕಲತೆಯನೆ ಪೋಲ್ತಳ್
(ಆದಿಪು. viii-೨೯)

ರೋಮಾಂಚನಗೊಂಡ ಯಶಸ್ವತಿಗೆ ರಾಗವು ತನುರುಚಿಗೆ ಹೊಳಪನ್ನು ತಂದಿತು. ತಂಗಾಳಿಯು ಬೀಸಿ ಮೊಗ್ಗುಗಳು ತುಂಬಿ ತಳಿರುಗಳಿಂದ ತಳತಳಿಸಿ ಹೊಳೆಯುವ ಅಶೋಕಲತೆಯನ್ನು ಅವಳು ಹೋಲಿದಳು ಎಂಬ ವರ್ಣನೆಯು ನೂತನ ವಿಧಾನದಿಂದ ಕೂಡಿದೆ.

ಯಶಸ್ವತಿಗೆ ಮೂಡಿದ ಬಯಕೆಯ ವರ್ಣನೆಯನ್ನು ಪಂಪನು ಪೂರ್ವಪುರಾಣದಿಂದ ತೆಗೆದುಕೊಂಡು ಸುಂದರವಾಗಿ ಬೆಳೆಸಿದ್ದಾನೆ. ಮೂಲವನ್ನು ಕೈಬಿಡದೆ ಅದನ್ನು ಬೆಳೆಸಿ ಕೊಂಡು ಹೋಗಿರುವ ಚಾಕಚಕ್ಯತೆಯನ್ನು ಪಂಪನಲ್ಲಿ ಕಾಣಬಹುದು.

'ಯಶಸ್ವತಿ ಗರ್ಭಿಣಿಯಾಗಿದ್ದಳು. ಸೂರ್ಯನನ್ನು ಕಂಡರೆ ಆಕೆಗೆ ಸಹನೆ ಮೀರುತ್ತಿದ್ದಿತು. ಖಡ್ಗದಲ್ಲಿ ತನ್ನ ಮುಖವನ್ನು ನೋಡಿಕೊಳ್ಳುತ್ತಿದ್ದಳು. ತನ್ನ ಪ್ರತಿಬಿಂಬದ ಮೇಲೂ ಆಕೆಗೆ ಆಕ್ರೋಶವಾಗುತ್ತಿದ್ದಿತು. ತನಗೆ ಪ್ರತಿಕೂಲವಾಗಿರುವ ಪ್ರತಿಬಿಂಬವನ್ನು ಆಕೆ ಸಹಿಸದಾದಳು' (ಪೂರ್ವಪು. x, ೧೨೯, ೧೩೦) ಈ ಮೊದಲಾದ ವರ್ಣನಾಭಾಗಗಳಲ್ಲಿ ಪಂಪನು ಕೆಲವು ಸುಂದರವಾದ ವರ್ಣನೆಯನ್ನು ಸ್ವೀಕರಿಸಿ ತನ್ನ ಕೆಲವು ಕಲ್ಪನೆಯನ್ನು ಸೇರಿಸಿ ರೋಚಕಗೊಳಿಸಿದ್ದಾನೆ (viii-೩೩).

ಪುತ್ರೋತ್ಸವ, ನಾಮಕರಣಮಹೋತ್ಸವವೇ ಮೊದಲಾದ ವರ್ಣನೆಗಳು ಜಿನಸೇನ ರಲ್ಲಿ ೮೦ ಶ್ಲೋಕಗಳಲ್ಲಿ ಬಂದಿದ್ದರೆ, ಈ ವರ್ಣನೆಗಳು ಪಂಪನಲ್ಲಿ ಅತ್ಯಂತ ಸಂಕ್ಷಿಪ್ತ ವಾಗಿ ಮೂಡಿ ಬಂದಿವೆ.

ಭರತನು ಎಲ್ಲ ವಿಧದಲ್ಲೂ ತಂದೆಗೆ ಸರಿಸಮಾನನಾಗಿದ್ದನು. ಆದಿದೇವನ ಶರೀರವು ಚರಮಶರೀರವಾಗಿದ್ದಿತು. ಭರತನದೂ ಚರಮಶರೀರವೇ. ಭರತನು ನಕ್ಕಾಗ ಆದಿ ದೇವನೇ ನಕ್ಕಂತೆ ಕಾಣುತ್ತಿದ್ದಿತು. ಇವನು ಮಾತನಾಡಿದಾಗ ಆದಿದೇವನೇ ಮಾತನಾಡಿ ದಂತೆ ಭಾಸವಾಗುತ್ತಿತ್ತು. ಕಲೆ, ವಿದ್ಯೆ, ಕಾಂತಿ, ಆಚರಣೆ ಮತ್ತು ವಿಜ್ಞಾನಗಳಲ್ಲಿ ಇವನು ತನ್ನ ತಂದೆಗೆ ಹೆಗಲೆಣೆಯಾಗಿದ್ದನು. ಆದಿದೇವನೇ ಭರತನ ರೂಪದಲ್ಲಿ ಕಾಣಿಸಿಕೊಳ್ಳು ತ್ತಿರುವನು ಎಂದು ಜನರು ಹೇಳುವಂತಾಯಿತು (ಪೂರ್ವಪು. xv-೧೬೬ ರಿಂದ ೧೬೮). ಈ ಮಾತುಗಳನ್ನು ಪಂಪನು ಸುಂದರವಾಗಿ ಅನುವಾದಿಸಿದ್ದಾನೆ :

ತಂದೆಯ ರೂಪೆ ತಂದೆಯ ವಿಲಾಸಮೆ ತಂದೆಯ ಚೆಲ್ವೆ ತಂದೆಯೊಂ
ದಂದಮೆ ತಂದೆಯೊಂದು ನುಡಿಯೋಜೆಯೆ ತನ್ನೊಳಮರ್ಕೆವೆತ್ತಲಾ
ನಂದಕರಂ ಕರಂ ಸೊಗಯಿಸುತ್ತಿರೆ ಶೋಭಿಸಿದಂ ಕುಮಾರನಾ
ನಂದಿತರೂಪನಂದೆಸೆಯೆ ತಂದೆಯೊಳಚ್ಚಿನೊಳೊತ್ತಿದಂತೆವೋಲ್ (ಆದಿಪು. viii-೪೩)

ಮುಂದೆ ಯಶಸ್ವತಿಗೆ ಹುಟ್ಟಿದ ನೂರು ಮಂದಿ ಪುತ್ರರನ್ನೂ ಬ್ರಾಹ್ಮಿ ಎಂಬ ಮಗಳನ್ನೂ ಪಡೆದ ವಿವರವನ್ನು ಪಂಪನು ಪೂರ್ವಪುರಾಣವನ್ನು ಅನುಸರಿಸಿ ಸಂಗ್ರಹಿಸಿ ದ್ದಾನೆ.

'ವಜ್ರನಾಭಿಗೆ ಮಹಾಬಾಹುವೆಂಬ ಬಂಧುವಾಗಿದ್ದು ಅನಂತರ ಅಹಮಿಂದ್ರನಾದ ದೇವನು ಸ್ವರ್ಗದಿಂದ ಚ್ಯುತನಾಗಿ ವೃಷಭದೇವನ ಕಿರಿಯ ಹೆಂಡತಿ ಸುನಂದೆಯಲ್ಲಿ ಬಾಹುಬಲಿಯೆಂಬ ಪುತ್ರನಾಗಿ ಹುಟ್ಟಿದನು. ಇವನು ತನ್ನ ತಂದೆಗೆ ಸಮಾನನಾಗಿದ್ದನು' (ಪೂರ್ವಪು. xvi-೬). ಬಾಹುಬಲಿಯ ಜನನವನ್ನು ವರ್ಣಿಸುವಾಗ ಪೂರ್ವಪುರಾಣವು ಭರತನ ಜನನ ಪ್ರಸಂಗದ ವರ್ಣನೆಗೆ ತೋರಿರುವ ಉತ್ಸಾಹವನ್ನು ತೋರಿಲ್ಲ. ಆದರೆ ಪಂಪನು ಈ ಕೊರತೆಯನ್ನು ನೀಗಿಸಿ ಬಾಹುಬಲಿಯ ಜನನಕ್ಕೂ ಪ್ರಾಮುಖ್ಯವನ್ನು ನೀಡಿದ್ದಾನೆ. ಬಾಹುಬಲಿಯು ಸುನಂದೆಯ ಗರ್ಭದಲ್ಲಿದ್ದಾಗ ಆಕೆಯುಲ್ಲುಂಟಾದ ಬಯಕೆಯನ್ನು ವರ್ಣಿಸುವಲ್ಲಿ ಭರತನನ್ನು ಗರ್ಭದಲ್ಲಿ ಪಡೆದಾಗ ಯಶಸ್ವತಿಗೆ ಉಂಟಾದ ಬಯಕೆಗಳನ್ನು ವರ್ಣಿಸುವಾಗಿನ ಉತ್ಸಾಹವನ್ನೇ ತೋರಿದ್ದಾನೆ. 'ದಿಗ್ಗಜಗಳ ಸೆಣಸಾಟವನ್ನು ಕಣ್ಣುತುಂಬ ನೋಡಬೇಕು ಎಂದು ಸುನಂದೆಯು ಕಾತರಿಸಿದಳು. ಜಗಜ್ಜಟ್ಟಿಗಳ ಹೋರಾಟವನ್ನು ಕಾಣುವಾಸೆ ಈಕೆಯಲ್ಲಿ ಚಿಗುರಿತು. ಹೊಟ್ಟೆಯಲ್ಲಿರುವ ಮಗುವಿನ ದೋರ್ಬಲ ಗರ್ವವನ್ನು ಈಕೆಯಲ್ಲಿ ನಾವು ಕಾಣಬಹುದಾಗಿತ್ತು' (ಆದಿಪು. viii-೪೮) ಎಂದು ವರ್ಣಿಸುವಲ್ಲಿ ಪಂಪನು ಬಾಹುಬಲಿಗೂ ಭರತನಷ್ಟೇ ಪ್ರಾಮುಖ್ಯ ಕೊಟ್ಟಿರುವುದು ಕಂಡುಬರುತ್ತದೆ.

ಬಾಹುಬಲಿಯ ರೂಪವನ್ನು ವರ್ಣಿಸುವಲ್ಲಿ ಪಂಪನು ಪೂರ್ವಪುರಾಣಕ್ಕೆ ಋಣಿಯಾಗಿದ್ದಾನೆ. ರೂಪವಂತನೂ ಯುವಕನೂ ಬಲಶಾಲಿಯೂ ಆಗಿದ್ದ ಬಾಹುಬಲಿಯು ಆ ಕಾಲದ ಮನ್ಮಥನಾಗಿದ್ದನು. ಗರತಿಯರೂ ಕೂಡ ಬಾಹುಬಲಿಯ ರೂಪವನ್ನು ಮರೆಯಲಾರದೆ ಸ್ವಪ್ನದಲ್ಲಿಯೂ ಅವನನ್ನು ಕಾಣುತ್ತಿದ್ದರು. ಈತನನ್ನು ಮನೋಭವ, ಮನೋಜ, ಮನ್ಮಥ, ಅಂಗಜ, ಮದನ, ಅನನ್ಯಜ ಎಂದು ಸ್ತ್ರೀಯರು ಹೇಳುತ್ತಿದ್ದರು (ಪೂರ್ವಪು. xvi-೨೪, ೨೫) ಎಂಬ ಈ ಭಾಗವನ್ನು ಪಂಪನು ಸೊಗಸಾಗಿ ಕನ್ನಡಿಸಿದ್ದಾನೆ :

ಅಕಮನೀಯವಿಲೋಕನ |ನಾಕಾಲದ ಕಾಮದೇವನೆಂದೊಡೆ ಕಾಂತಾ
ನೀಕದ ಮರುಳ್ಪುದಂ ಮದ | ನಾಕುಲತೆಯನುಂತೆ ಪೇೞ್ವುದೊಂದೆಗ್ಗಲ್ತೇ
ಕನಸಿನೊಳಮಾಕುಮಾರನೆ | ಮನದೊಳ್ ತಣ್ಮಲೆಯೆ ಚಿತ್ತಜಂ ಚಿತ್ತಭವಂ
ಮನಸಿಜನನಂಗನಂಗಜ | ನೆನೆ ನೆಗೞ್ದುವು ಬಾಹುಬಲಿಗೆ ಪಲವುಂ ಪೆಸರ್ಗಳ್

(ಆದಿಪು. viii-೫೨, ೫೮)

ಆದಿದೇವನು ಮಕ್ಕಳಿಗೆ ಆಭರಣಗಳನ್ನು ಕೊಟ್ಟ ಸಂಗತಿ ಪೂರ್ವಪುರಾಣದಲ್ಲಿ ೩೩ ಶ್ಲೋಕಗಳಲ್ಲಿ ವಿಸ್ತಾರವಾಗಿ ಬಂದಿದೆ. ಪಂಪನು ಅದನ್ನು ಒಂದು ವಚನಭಾಗದಲ್ಲಿ ಸಂಕ್ಷೇಪಿಸಿ ಹೇಳಿದ್ದಾನೆ.

ಮಕ್ಕಳ ವಿದ್ಯಾಭ್ಯಾಸಕ್ರಮ, ರಾಜ್ಯಾಭಿಷೇಕ, ವರ್ಣಾಶ್ರಮಸ್ಥಾಪನೆ—ಈ ಮೊದಲಾದ ಘಟನೆಗಳಲ್ಲಿ ಪಂಪನ ಸ್ವಂತಿಕೆ ಎಂದರೆ ಪೂರ್ವಪುರಾಣದ ಸಾರ ಸಂಗ್ರಹತೆ.

## ಉತ್ತರಕಾಲೀನ ಕಾವ್ಯಗಳು

**ಚಾವುಂಡರಾಯಪುರಾಣ** : ಪೂರ್ವಪುರಾಣ, ಆದಿಪುರಾಣಗಳಲ್ಲಿ ಬರುವ ಬಾಲ್ಯ-ಕೌಮಾರ್ಯ-ಯೌವನಾವಸ್ಥೆಗಳ ವರ್ಣನೆ ಇಲ್ಲಿಲ್ಲ. ಸಮಚತುರಸ್ರಸಂಹನನಾದಿಗಳನ್ನು

ಪಡೆದು ನವಯೌವನಾರಂಭದಲ್ಲಿ ಕಚ್ಛ ಮಹಾಕಚ್ಛರ ತಂಗಿಯರಾದ ಯಶಸ್ವತಿ ಸುನಂದೆಯರನ್ನು ಮದುವೆಯಾದನೆಂದು ವರ್ಣಿಸಿದೆ. ನಾಭಿರಾಜನು ಮಗನನ್ನು ಮದುವೆಗೆ ಒಪ್ಪಿಸಿದ ಸುಂದರ ಪ್ರಸಂಗವಿಲ್ಲ. ವಿವಾಹದ ವರ್ಣನೆಯಲ್ಲಿ ಭರತಾದಿಗಳ ಜನನದ ನಿರೂಪಣೆ ಬರುತ್ತದೆ. ಪೂರ್ವಪುರಾಣ, ಆದಿಪುರಾಣಗಳಲ್ಲಿ ಬರುವ ಯಶಸ್ವತಿ-ಸುನಂದೆಯರ ಬಯಕೆ, ಮಕ್ಕಳ ಬಾಲಲೀಲೆ ಈ ವರ್ಣನೆಗಳು ಬಂದಿಲ್ಲ. ಮಕ್ಕಳಿಗೆ ವಿದ್ಯಾಭ್ಯಾಸ, ಪ್ರಜೆಗಳಿಗೆ ಷಟ್ಕರ್ಮಗಳನ್ನು ಹೇಳಿಕೊಟ್ಟದ್ದು, ವರ್ಣಾಶ್ರಮಭೇದ ಇವುಗಳು ಉಲ್ಲೇಖ ಮಾತ್ರವಾಗಿ ಬಂದಿವೆ. ಅತ್ಯಂತ ಸಂಗ್ರಹವಾಗಿ ಈ ಭಾಗವನ್ನು ನಿರೂಪಿಸಿದ್ದಾನೆ. ಆದಿಪುರಾಣ, ಪೂರ್ವಪುರಾಣಗಳಲ್ಲಿ ವರ್ಣಿತವಾಗಿರುವ ಅಂಶಗಳಲ್ಲಿ ಕೆಲವು ರೇಖಾ ಮಾತ್ರವಾಗಿ ನಿರೂಪಿತವಾಗಿವೆ.

**ಹಸ್ತಿಮಲ್ಲನ ಪೂರ್ವಪುರಾಣ** : ಚಾವುಂಡರಾಯಪುರಾಣಕ್ಕಿಂತಲೂ ಅತ್ಯಂತ ಕಿರಿದರಲ್ಲಿ ಇದು ವರದಿಮಾತ್ರವಾಗಿ ನಿರೂಪಿತವಾಗಿದೆ.

ವೃಷಭದೇವನಿಗೆ ಯೌವನ ಪ್ರಾಪ್ತಿಯಾಗಲು ಯಶಸ್ವತಿ ಸುನಂದೆಯರೊಂದಿಗೆ ಮದುವೆ, ಭರತೇಶ್ವರಾದಿ ಮಕ್ಕಳ ಜನನ, ಬ್ರಾಹ್ಮಿ ಸೌಂದರಿಯರಿಗೆ ವಿದ್ಯಾದಾನ, ಭರತಾದಿ ತನುಜರಿಗೆ ಭರತಶಾಸ್ತ್ರಾದಿ ವಿದ್ಯೆಗಳ ಬೋಧನೆ, ದೇವೇಂದ್ರನಿಂದ ರಾಜ್ಯಾಭಿಷೇಕ—ಈ ಘಟನಾವಳಿಗಳು ಮಾತ್ರ ಇಲ್ಲಿ ಬರುತ್ತವೆ. ಕಾವ್ಯಾಂಶದ ತಿರುಳಿಲ್ಲ. ಚಾವುಂಡರಾಯಪುರಾಣದಂತೆಯೇ ಇಲ್ಲಿಯೂ ಶುಷ್ಕ ನಿರೂಪಣೆ ಇದೆ. ಷಟ್ಕರ್ಮ ಬೋಧನೆ, ಕುರುವಂಶಾದಿಗಳ ಪ್ರಾರಂಭ, ವರ್ಣಭೇದಕ್ರಮ ಮೊದಲಾದವುಗಳ ಉಲ್ಲೇಖ ಇಲ್ಲಿ ಬರುವುದಿಲ್ಲ.

**ಪುಣ್ಯಾಸ್ರವದ ಆದೀಶ್ವರರ ಕಥೆ** : ಚಾವುಂಡರಾಯಪುರಾಣ ಮತ್ತು ಹಸ್ತಿಮಲ್ಲನ ಪೂರ್ವಪುರಾಣಗಳಲ್ಲಿರುವಂತೆ ಇಲ್ಲಿಯೂ ಸಂಕ್ಷಿಪ್ತ ವಿವರದ ಚೌಕಟ್ಟು ಕಂಡುಬರುತ್ತದೆ. ವಜ್ರವೃಷಭನಾರಾಚಸಂಹನನಾದಿಗಳಿಂದ ಕೂಡಿದ ಸುಂದರಾಕಾರನೂ ಪ್ರಿಯಹಿತ ವಚನಸಂಯುಕ್ತನೂ ಆದ ವೃಷಭನು ಬೆಳೆಯುತ್ತಿರುವಾಗ ಪ್ರಜೆಗಳು ವೃಷಭನಲ್ಲಿಗೆ ಬಂದು ಜೀವನೋಪಾಯವನ್ನು ಕೇಳಲು ಅವರಿಗೆ ವೃಷಭನು ಕಬ್ಬಿನಲ್ಲಿ ರಸವನ್ನು ತೆಗೆಯುವ ವಿಧಾನವನ್ನು ಹೇಳಿಕೊಟ್ಟನು. ಅಲ್ಲಿಂದ ಇಕ್ಷ್ವಾಕು ವಂಶವು ಉಂಟಾಯಿತು. ಯೌವನಸಂಯುಕ್ತನಾದ ವೃಷಭನನ್ನು ಮದುವೆಗೆ ಮನಸ್ಸನ್ನು ಕೊಡಬೇಕೆಂದು ಕೇಳಿಕೊಂಡಾಗ ಚಾರಿತ್ರ ಮೋಹನೀಯ ವಶದಿಂದ ಅದಕ್ಕೆ ಆತನು ಒಡಂಬಡುತ್ತಾನೆ. ಈ ವಿವರ ಇಲ್ಲಿ ಹೊಸದಾಗಿದೆ. ಆದಿಪುರಾಣ, ಪೂರ್ವಪುರಾಣಗಳಲ್ಲಿ ಸಂಯೋಜಿತವಾಗಿರುವ ತಂದೆ ಮಗನನ್ನು ಮದುವೆಗೆ ಒಪ್ಪಿಸುವ ಸನ್ನಿವೇಶ ಇಲ್ಲಿಲ್ಲ. ಅಲ್ಲದೆ ಇಕ್ಷುರಸದ ವಿವರವೂ ಸಹ ಇಲ್ಲಿ ಮೊದಲಿಗೇ ವರ್ಣಿತವಾಗಿದೆ. ಅನಂತರ ವೃಷಭನ ವಿವಾಹ, ಮಕ್ಕಳ ಜನನ—ಇವುಗಳ ನಿರೂಪಣೆ ಬರುತ್ತದೆ. ಬ್ರಾಹ್ಮಿಸೌಂದರಿ ಮೊದಲಾಗಿ ಮಕ್ಕಳಿಗೆ ವಿದ್ಯಾಭ್ಯಾಸ, ನಾಭಿರಾಜನು ಪ್ರಜೆಗಳಿಗೆ ಗ್ರಾಮಾದಿನಗರ ಭೇದವನ್ನು ವಿಂಗಡಿಸಿಕೊಟ್ಟು, ವರ್ಣಭೇದಕ್ರಮ, ಸಸ್ಯಾದಿ ಜೀವನೋಪಾಯ ಕ್ರಮಗಳನ್ನು ಹೇಳಿಕೊಟ್ಟ ವಿಷಯ ಬರುತ್ತದೆ. ಷಟ್ಕರ್ಮಗಳ ಉಲ್ಲೇಖವಿಲ್ಲ. ಕರ್ಮಭೂಮಿಯ ಉದಯವಾಯಿತೆಂದು ಮಾತ್ರ ಹೇಳಲಾಗಿದೆ. ಅನಂತರ ದೇವೇಂದ್ರ ಪುರಂದರನೆನಿಸಿದುದು, ಸ್ವಾಮಿಗೆ ರಾಜ್ಯಾಭಿಷೇಕ,

ಕುರುವಂಶಾದಿಗಳ ಉದಯದ ಉಲ್ಲೇಖಗಳು ಬರುತ್ತವೆ. ಕಥಾನಿರೂಪಣೆಯಲ್ಲಿ ಕಾವ್ಯಾಂಶವಿಲ್ಲ.

**ಪುರುದೇವಚರಿತ** : ಕವಿ ವೃಷಭನ ಬಾಲ್ಯಾದಿ ಲೀಲೆಗಳನ್ನು ಲೌಕಿಕಾಲೌಕಿಕ ಸಮ್ಮಿಶ್ರಣದಿಂದ ವರ್ಣಿಸಿದ್ದಾನೆ. ಸುರದಾದಿಯರು ಮಜ್ಜನಾದಿಗಳನ್ನೆರೆದು ಮಗುವನ್ನು ಬೆಳೆಸಿದರು. ಅಂಗಾತ ಮಲಗಿ ಆಡುವ ಮಗುವಿನ ಕೈಕಾಲುಗಳು ಕಮಲದಂತೆ ಶೋಭಿಸಿದವು.

ಜಾನಪದೀಯ ಧಾಟಿಯಲ್ಲಿ ಬರುವ ಮುಂದಿನ ವರ್ಣನೆಯಲ್ಲಿ ಸುರತರುಣಿಯರು ಮಗುವನ್ನು ಬೆಳೆಸಿದರಾದರೂ ಲೌಕಿಕ ಕ್ರಿಯೆಗಳನ್ನು ಮರೆಯಲಿಲ್ಲವೆಂಬಂತೆ ಕವಿ ವರ್ಣಿಸಿದ್ದಾನೆ :

ಜೋ ಜೋ ಮನುಕುಲ ಉದಯಾದ್ರಿ ಭಾಸ್ಕರ | ಜೋ ಜೋ ಜಿನರೊಳಗ್ರಜನೆ
ಜೋ ಜೋ ಕಾಶ್ಯಪ ಗೋತ್ರಾದ್ರಿ ಚಂದ್ರನೆ | ಜೋ ಜೋ ಪ್ರಥಮಜಿನೇಂದ್ರ (ಪುರುಚ. vi-೭)

ಮೊದಲಾಗಿ ಹಾಡಿ ಸುರಬಾಲಕನನ್ನು ತೂಗುವ ವರ್ಣನೆ ಇಲ್ಲಿ ಹೊಸದು. ಅನಂತರ ರತ್ನಧೂಳಿಯಲ್ಲಿ ಆಡಿ-ಓಡಿ ಬಿದ್ದು ಅಳುತ್ತ ಎಲ್ಲರ ಕೈಯಲ್ಲಿ ಸಮಾಧಾನ ಮಾಡಿಸಿಕೊಂಡ ಆ ಬಾಲಕನು ನಕ್ಷತ್ರಗಳ ಮಧ್ಯೆ ಹಾದುಹೋಗುವ ನಿಶಾಕರನಂತೆ ಶೋಭಿಸಿದನು. ಆ ಬಾಲಕನ ನುಡಿ ತೊದಳದ ನುಡಿ; ನಡೆ ತೊದಳದ ನಡೆ—ಹೀಗೆ ಆಶ್ಚರ್ಯಕರವಾಗಿ ಬೆಳೆದ. ಆದರೂ ಕವಿಗೆ ಈ ವರ್ಣನೆಯಿಂದ ತೃಪ್ತಿಯಿಲ್ಲ. ತಂದೆತಾಯಿಗಳಿಗೆ ಸಂತೋಷವನ್ನು ನೀಡಲು ಮಗು ತೊದಲು ನುಡಿ, ತರಳ ನಡೆ ನಡೆಯಿತಂತೆ! ಈ ಭಾಗವು ನಮಗೆ ಪಂಪನ ಲೌಕಿಕಾಲೌಕಿಕ ಸಮ್ಮಿಶ್ರದ ಲೇಪನದ ವರ್ಣನಾವಿಧಾನವನ್ನು ನೆನಪಿಗೆ ತರುತ್ತದೆ.

ವಾತಪಿತ್ತಾದಿ ದೋಷರಹಿತನೂ ಸಮಚತುರಸ್ರಸಂಸ್ಥಾನಾದಿ ಅತಿಶಯನೂ ಆದ ಕುಮಾರಾವಸ್ಥೆ ಹೊಂದಿದ ವೃಷಭನು ಶೋಭಿಸುತ್ತಿದ್ದನೆಂಬ ವಿವರ ಪೂರ್ವಪುರಾಣ, ಆದಿಪುರಾಣಗಳಿಗನುಸಾರವಾಗಿ ಬಂದಿದೆ :

ಗಿರಿಗಿರಿ ಪೋರ್ವಂತೆ ಕಾಮವ ಕರಿಗಳ | ಕರುಣದಿಂದ ಮಾಣಿಸಲೆಂದು
ಕರಕಿಸಲಯದಿಂದ ಇಕ್ಕೆಲಕೆರಡನು | ಪುರುಜಿನ ನೂಂಕಿ ಬಿಡಿಸುವ
ವಾಜಿ ವಾರಣ ರೂಪವಡೆದು ಸುರರು ಜಿನ | ರಾಜನ ಮೇಲೆ ಕುಳ್ಳಿರಿಸಿ
ರಾಜವೀಥಿಯೊಳು ವೈಹಾಳಿಯಾಡುವರೆಲ್ಲ | ರಾಜಕುಮಾರರು ಸಮೇತ

(ಪುರುಚ. vi- ೨೮, ೩೦)

ಹೀಗೆ ಕುಮಾರ ಕಾಲವು ಸಂದಿತು. ಕವಿ ಈ ಪ್ರಸಂಗವನ್ನು ಚಿತ್ರಗತ ಶೈಲಿಯಲ್ಲಿ ಸುಂದರವಾಗಿ ವರ್ಣಿಸಿದ್ದಾನೆ.

ಕೌಮಾರಾವಸ್ಥೆ ಕಳೆಯಿತು. ಯೌವನ ಕಾಲಿಟ್ಟಿತು. ಕೌಮಾರಾವಸ್ಥೆಯನ್ನು ವರ್ಣಿಸುವಲ್ಲಿ ಕಂಡುಬರುವ ಉತ್ಸಾಹ ಯೌವನಾವಸ್ಥೆಯ ವರ್ಣನೆಯಲ್ಲಿ ಕಂಡುಬಾರದು. ಯೌವನವು ಏರಿತು ಎಂದಷ್ಟೇ ಹೇಳಿ ಮುಗಿಸಿದ್ದಾನೆ. ನಾಭಿರಾಜನು ಮಗನನ್ನು ಮದುವೆಗೆ ಒಪ್ಪಿಸುವ ಸನ್ನಿವೇಶವು ಪೂರ್ವಪುರಾಣ, ಆದಿಪುರಾಣಗಳಲ್ಲಿಯಂತೆ ಸ್ಪಷ್ಟವಾಗಿ ಮೂಡಿಲ್ಲ. ಪೂರ್ವಪುರಾಣ ಆದಿಪುರಾಣಗಳಲ್ಲಿರುವ ಆಶಯದಂತೆ ಪ್ರಜೆಗಳು ಋಷಭನಲ್ಲಿಗೆ ಬಂದು ಜೀವನಮಾರ್ಗವನ್ನು ಸೂಚಿಸೆಂದು ಬೇಡಿಕೊಂಡ ನಿರೂಪಣೆಯಿದೆ.

ದೇವ ಬಿನ್ನಪವೀ ಭರತಾರ್ಯ ಖಂಡಕ್ಕೆ | ಜೀವನೋಪಾಯವ ಮುಂದೆ
ಆವ ಪರಿಯ ಕರುಣಿಸಬೇಕೆಂಬುದು | ನೀವೆ ಬಲ್ಲಿರಿ ಚಿತ್ತದೊಳು
ಅಷ್ಟಾದಶ ಕೋಟಿ ಕೋಟಿ ಸಾಗರ ಕಾಲ | ನಷ್ಟವೆಯ್ದಿರ್ದ ಧರ್ಮವನು
ಸೃಷ್ಟಿಸಿ ನಡೆವ ಮಾರ್ಗವ ತೋರ್ಪುದೆಂದಾಗ | ಸಾಷ್ಟಾಂಗವೆರಸಿ ಬಿನ್ನವಿಸಿ
(ಪುರುಚ. vii-೩೨, ೩೩)

ಈ ಮಾತುಗಳಲ್ಲಿ ಗೃಹಸ್ಥ ಧರ್ಮವನ್ನು ಸ್ವೀಕರಿಸಬೇಕೆಂದು ಕೇಳಿಕೊಳ್ಳುವ ಸ್ಪಷ್ಟ ಉಲ್ಲೇಖವಿಲ್ಲ. ಜೀವನೋಪಾಯವನ್ನು ನಡೆಸುವ ಮಾರ್ಗದ ಉಲ್ಲೇಖವನ್ನು ಮಾತ್ರ ನೀಡಿ ಕವಿ ಮುಂದಿನ ಸಾಂಗತ್ಯಭಾಗದಲ್ಲಿ 'ಇವು ಮೊದಲಾಗೊಡಂಬಡಿಕೆಗಳಿಂದ ವಿವಾಹಕಾರ್ಯವನನುಕರಿಸಿ' ಎಂದು ಹೇಳಿದ್ದಾನೆ. ಯಶಸ್ವತಿ ಸುನಂದೆಯರೊಂದಿಗೆ ವಿವಾಹವು ನಡೆಯಿತು. ವೃಷಭನನ್ನು ಮದುವೆಗೆ ಒಪ್ಪಿಸಿದ ಸನ್ನಿವೇಶ ಇಲ್ಲಿ ಅಷ್ಟೊಂದು ಪ್ರಭಾವಕಾರಿಯಾಗಿ ಬಂದಿಲ್ಲ. ಆದರೆ ಮದುವೆಯ ವೈಭವದ ವರ್ಣನೆಯಲ್ಲಿ ಕವಿ ಆ ಲೋಪವನ್ನು ತುಂಬಿದ್ದಾನೆ.

ನಗರದೊಳೆಲ್ಲ ಸಾರಣೆಗುಡಿತೋರಣ | ಅಗರುದಶಾಂಗ ಧೂಪ ಘಟ
ಮಗಮಗಿಸುವ ಗಂಧವಿಡಿ ಕುಸುಮಾಂಜಲಿ | ಭುಗಿಲೆಂಬ ವಾದ್ಯಕೋಟಿಗಳು
ಅತ್ಯುತ್ಸವದೊಳು ಸುರನರರೆಲ್ಲ ವ | ಸಂತವನಾಡಿ ಮರ್ತಿಯೊಳು
ತಂತಮ್ಮಚ್ಛಂದ ರತ್ನಾಭರಣಾದಿಯ | ಮುಂತಿಟ್ಟು ನಮಿಸಿ ಬೀಳ್ಕೊಂಡು
(ಪುರುಚ.vi-೩೭, ೪೧)

ಈ ಮೊದಲಾದ ಎಂಟು ಸಾಂಗತ್ಯಗಳಲ್ಲಿ ಮದುವೆಯ ವೈಭವವನ್ನು ಕವಿ ಚಿತ್ರಿಸಿದ್ದಾನೆ.

ದೇವೇಂದ್ರನೇ ಪುರೋಹಿತನಾಗಿ ಈ ವಿವಾಹಕಾರ್ಯವನ್ನು ಎಸಗಿದನೆಂದು ಕವಿ ವಿವಾಹ ವೈಭವದ ವರ್ಣನೆಯ ಮಹತ್ವವನ್ನು ಇನ್ನಷ್ಟು ಹೆಚ್ಚಿಸಿದ್ದಾನೆ. ಕವಿ ಈ ಭಾಗದಲ್ಲಿ ಪಂಪನಿಗೆ ಹೆಚ್ಚು ಋಣಿಯಾಗಿರುವಂತೆ ಕಂಡುಬರುತ್ತದೆ.

ಯಶಸ್ವತಿ ಗರ್ಭಧರಿಸಿದಾಗ ಕಂಡ ಕನಸು, ಅದರ ಫಲ ಪೂರ್ವಪುರಾಣ, ಆದಿಪುರಾಣಗಳಿಗೆ ಅನುಸಾರವಾಗಿ ಬಂದಿದೆ. ಆದರೆ, ರೋಮಾಂಚಕರ ರೀತಿಯ ಬಯಕೆಗಳ ವಿವರವನ್ನು ಕವಿ ಕೈಬಿಟ್ಟಿದ್ದಾನೆ. ಬಾಹುಬಲಿ ಜನನ ವರ್ಣನೆಯ ಬಗೆಗೆ ಪಂಪನು ತೋರಿರುವ ಉತ್ಸಾಹವನ್ನು ಕವಿ ತೋರಿಲ್ಲ. ಉಳಿದ ಮಕ್ಕಳ ಜನನವನ್ನು ಉಲ್ಲೇಖಿಸುವಂತೆಯೇ ಸಾಮಾನ್ಯೀಕರಿಸಿದ್ದಾನೆ. ವಿದ್ಯಾಭ್ಯಾಸದ ವಿವರಗಳು ಆದಿಪುರಾಣಕ್ಕೆ ಅನುಸಾರವಾಗಿ ಬರುತ್ತವೆ. ವಿದ್ಯಾದಾನದ ಪ್ರಸಂಗ ಇಲ್ಲಿ ಭರತನಿಂದ ಪ್ರಾರಂಭವಾಗಿದೆ. ಪೂರ್ವಪುರಾಣ, ಆದಿಪುರಾಣಗಳಂತೆ ಹಾಗೂ ಇತರೆಡೆಗಳಂತೆ ಬ್ರಾಹ್ಮಿ-ಸೌಂದರಿಯರಿಂದಲ್ಲ.

ರಾಜ್ಯಾಭಿಷೇಕದ ವರ್ಣನೆ ನಾಲ್ಕು ಸಾಂಗತ್ಯಗಳಲ್ಲಿ ಮೂಡಿಬಂದಿದೆ. ವೃಷಭನ ಅಲಂಕಾರದ ವೈಭವವನ್ನು ವರ್ಣಿಸಿ ರತ್ನಘಟದಲ್ಲಿ ಅಭಿಷೇಕವನ್ನು ಮಾಡಿದರೆಂದು ಹೇಳಿದ್ದಾನೆ. ಹೆಚ್ಚಿನ ಕಾವ್ಯಗುಣವೇನೂ ತೋರದು.

ಮುಂದೆ ಕಲ್ಪವೃಕ್ಷಗಳು ನಿರ್ವೀರ್ಯವಾದುದು, ದೇವೇಂದ್ರನಿಂದ ಪುರಗಳ ವಿನ್ಯಾಸ, ವರ್ಣವಿನ್ಯಾಸ, ವಂಶಸ್ಥಾಪನೆ ಇವುಗಳ ವರ್ಣನೆಯಲ್ಲಿ ಪೂರ್ವಪುರಾಣ ಮತ್ತು ಆದಿ

ಪುರಾಣಗಳ ವಿಷಯದ ಸಂಗ್ರಹಣೆ ಇದೆ.

**ಆದಿ ಪರಮೇಶ್ವರನ ಯಕ್ಷಗಾನ** : ಕಥಾಚೌಕಟ್ಟು ಹಸ್ತಿಮಲ್ಲನ ಪೂರ್ವಪುರಾಣದಂತೆ ಇದೆ. ಈ ಕಥಾಘಟ್ಟದ ಅಂತಿಮ ಭಾಗವಾದ ವಂಶಸ್ಥಾಪನೆ, ಪ್ರಜೆಗಳಿಗೆ ಬದುಕಿನ ಮಾರ್ಗದ ಬೋಧನೆಯ ವಿವರಗಳು ಇಲ್ಲಿ ಬರುವುದಿಲ್ಲ. ಸಂಕ್ಷಿಪ್ತ ವಿಧಾನದಲ್ಲಿಯೇ ಕವಿ ಅಲ್ಲಲ್ಲಿ ವರ್ಣನಾವಿಧಾನದ ಒಲವನ್ನು ತೋರಿದ್ದಾನೆ.

ಯಶಸ್ವತಿ-ಸುನಂದೆಯರು ದೇವಸ್ತ್ರೀಯರಿಗೆ ಸಮಾನೆಯರು. ಮೇದಿನಿ ಪೊಗಳ್ವಂತೆ ಇವರ ವಿವಾಹವು ಆದಿದೇವನೊಂದಿಗಾಯಿತು. ಇವರಲ್ಲಿ 'ಸಮರತಿ ಸುಖದೊಳಾಗ ಮೇಂದ್ರನುತನಿದ್ದನು' ಎಂದು ಹೇಳುವಲ್ಲಿ ಕವಿ ಪಂಪನ ಪದ್ಯವನ್ನು (ಆದಿಪು.viii-೨೪) ಗಮನಿಸಿರಬೇಕೆನಿಸುತ್ತದೆ.

ಅನಂತರ ಭರತಾದಿಗಳು ಒಬ್ಬೊಬ್ಬರಾಗಿ ದೇವಲೋಕದಿಂದ ಬಂದು ವೃಷಭನ ಮಕ್ಕಳಾದ ವಿಚಾರ ಬರುತ್ತದೆ. ಬ್ರಾಹ್ಮಿ ಸೌಂದರಿಯರ ವಿದ್ಯಾಭ್ಯಾಸ ಹಾಗೂ ಅವರ ವರ್ಣನೆಯಲ್ಲಿ ಕವಿ ವಿಶೇಷ ಆಸಕ್ತಿಯನ್ನು ತೋರಿದ್ದಾನೆ :

> ಹಾವ ಭಾವದಲಿ ವಿಲಾಸ ವಿಭ್ರಮದಿ ಭಾವೆರಿರ್ವರು ಪುಣ್ಯಭಾಗಿಗಳಾಗಿ
> ದೇವಸ್ತ್ರೀಯರ ಗೆಲ್ವ ದೇವಿರಿರ್ವರು ಸ್ತ್ರೀಯಾಂದೇವಿಯೆ ಮೈವೆತ್ತ ಭಾವದೊಳಿಹರು
> ಬ್ರಹ್ಮಿಯೆಂಬಳು ಶಬ್ದಬ್ರಹ್ಮಿ ತಾನಾಗಿ ಹಂಮಾಹಂ ಕೃತಿಯೆಂಬ ಹೆಮ್ಮೆಯನುಳಿದು
> ಬ್ರಹ್ಮಯೋಗವತಾಳಿ ಭಾವಸಿದ್ಧಿಯಲಿ ಕಮ್ಮಗೋಲನ ಗೆಲ್ವ ಕಾರುಣ್ಯ ನಿಧಿಯು
> ಸಿಂಧು ಗಂಭೀರೆ ಸೌಂದರಿಯೆ ಬಾ ದೇವಿ ಕುಂದ ಕುಟ್ಮಳ ದಂತಪಂತಿ ವಿರಾಜೆ
> ಚಂದಿರಾಯತವಕ್ತ್ರೆ ಸುಂದರ ಮೂರ್ತಿ ಮಂದಗಮನೆ ಮಾರಶರಮರ್ದನಾಂಗಿ
>
> (ಆದಿಯ. ಪರಿಚ್ಛೇದ, v)

ಈ ಮುಂತಾದ ವಿವರಗಳು ಇಲ್ಲಿ ವಿಶೇಷವಾಗಿ ಬಂದಿವೆ. ಉಳಿದ ಯಾವ ಮಕ್ಕಳನ್ನೂ ವರ್ಣಿಸದ ಕವಿ ಬ್ರಾಹ್ಮಿ ಸೌಂದರಿಯರನ್ನು ವರ್ಣಿಸಿ ಅವರ ಬಗೆಗೆ ವಿಶೇಷವಾಗಿ ಗೌರವವನ್ನು ತೋರಿದ್ದಾನೆ. ಅವರ ವಿದ್ಯಾಭ್ಯಾಸವನ್ನು ಸಹ ಕವಿ ಅಷ್ಟೇ ಉತ್ಸಾಹದಿಂದ ವರ್ಣಿಸಿದ್ದಾನೆ. 'ಶಾರದೆಯರೆಂದರಿದು ಸುತೆಯರ ಸಾರಿ' ಬ್ರಾಹ್ಮಿಗೆ ದಕ್ಷಿಣ ಹಸ್ತದಿಂದ ಲಿಪಿಶಾಸ್ತ್ರವನ್ನೂ ವಾಮಹಸ್ತದಲ್ಲಿ ಸೌಂದರಿಗೆ ಲೆಕ್ಕವನ್ನೂ ಸ್ವಾಮಿಯು ಬೋಧಿಸಿದನಂತೆ.

ಉಳಿದ ಮಕ್ಕಳ ವಿದ್ಯಾಭ್ಯಾಸದ ವಿವರ ಹೆಚ್ಚಾಗಿ ಬಂದಿಲ್ಲ. ಭರತಾದಿಯ ತನುಜರಿಗೆ ಭರತಶಾಸ್ತ್ರ ಸಮಸ್ತವನ್ನು ತಿಳಿಸಿದನೆಂದು ಹಸ್ತಿಮಲ್ಲನ ಪೂರ್ವಪುರಾಣಕ್ಕೆ ಅನುಸಾರವಾಗಿ ಕವಿ ಹೇಳಿ ಮುಗಿಸಿದ್ದಾನೆ. ಹಸ್ತಿಮಲ್ಲನ ಪೂರ್ವಪುರಾಣದಲ್ಲಿ ನಾಲ್ಕು ಜಾತಿಗಳ ನಿರ್ಮಾಣದ ವರ್ಣನೆಯನ್ನು ಹೇಳಿಲ್ಲ. ಕವಿ ಈ ಭಾಗವನ್ನು ವರ್ಣಿಸಿ ಉಳಿದಂತೆ ಹಸ್ತಿಮಲ್ಲನ ಪೂರ್ವಪುರಾಣದ ನಿರೂಪಣೆಯನ್ನು ನೀಡಿ ಈ ಭಾಗವನ್ನು ಮುಗಿಸಿದ್ದಾನೆ:

> ಕುಮಾರ ಕಾಲವಿಪ್ಪತ್ತು ಲಕ್ಕೆಯು ಪೂರ್ವ ಸಲೆಯೊಳ್ ನಿಂತು
> ಕರ್ಮೋರ್ವಿಯೊಳು ಸಕಲ ಪ್ರವರ್ತನೆಯ ತಾನೆಸಗಿಯುಮಿಂದ್ರನೊಡನೆ
> ಧರಿಸಿ ನವಮಣಿ ಮಕುಟವ ಸುರಪತಿಯು ರಾಜ್ಯಾಭಿಷೇಕವ
> ಹರುಷದಿಂದಲಿಮೆಸಗಿ ಪೊಗಲು ಪರಮಸುಖಿ ಸಾಮ್ರಾಜ್ಯದಿ ಧರೆಯನಾಳಿ

ಆದಿಪರಮೇಶ್ವರನು ಮನುಕಾಲದ ನಟನೆಯ ಮರೆಯಿಸಿ ನಾಲ್ಕು ಜಾತಿ ಭೇದಮಂ ಸರಸ ಪ್ರವರ್ತನೆಯಂ ಜಗತ್ತಿಗೆ ನಿರ್ಮಾಣಮಂ ಮಾಡಿ ಅರವತ್ತು ಮೂರುಲಕ್ಕೆ ಪೂರ್ವಸಲೆ ಪುರುಪರಮೇಶ್ವರಂ ಸಕಲ ವೈಭವಂ ಮಕುಟಬದ್ಧಪರಿವೃತನಾಗಿ

ರಾಜರಾಜಾಧೀಶರಾಜಿತ ರಾಜಧಾನಿಯೋಳಿಂತುಮೋಲಗ
ರಾಜಿಸುತ ರಾಜೇಂದ್ರ ಚಂದ್ರಮತೇಜವಡೆದು (ಆದಿಯ. ಪರಿಚ್ಛೇದ V )

ತನಗೆ ಕುಮಾರಕಾಲವಿಪ್ಪತ್ತು ಲಕ್ಕೆಪೂರ್ವ ಸಲೆ ಅನಂತರ ಕರ್ಮಭೂಮಿ ಪ್ರವರ್ತನೆಯಂ ಮಾಡಿ ದೇವೇಂದ್ರನಿಂ ರಾಜ್ಯಾಭಿಷೇಕಮಂ ಪಡೆದು ಮಕುಟಧರನಾಗಿ ರಾಜ್ಯಸುಖದೊಳರುವತ್ತು ಮೂರು ಲಕ್ಕೆ ಪೂರ್ವಂ ಸಲೆ ಪುರುಪರಮೇಶ್ವರಂ ಸಕಲವೈಭವದಿಂ ಮಕುಟಬದ್ಧಪರಿವೃತನಾಗಿ ಸಿಂಹಾಸನದೊಳೋಲಗಂಗೊಟ್ಟಿರೆ (ಹಪೂರ್ವ.)

ಹೀಗೆ ಕವಿ ಹಸ್ತಿಮಲ್ಲನ ಪೂರ್ವಪುರಾಣವನ್ನು ಅನುಸರಿಸಿರುವಂತೆ ಕಂಡುಬಂದರೂ ಹೆಚ್ಚಿನ ವಿವರಣೆಯನ್ನು ಕೊಡಬೇಕೆಂಬ ಹಂಬಲವನ್ನು ತೋರಿದ್ದಾನೆ.

ವೃಷಭನು ವೈರಾಗ್ಯಪರನಾಗಿ ಸಂಸಾರ ಬಂಧನದಿಂದ ಮುಕ್ತನಾಗುವವರೆಗೆ ಲೌಕಿಕ ಜೀವನದಲ್ಲಿ ಇದ್ದಷ್ಟು ಕಾಲವೂ ಓರ್ವ ಆದರ್ಶ ಮಹಾಪುರುಷನಾಗಿ ಬಾಳಿದವನು. ಮಗನಾಗಿ, ಪತಿಯಾಗಿ, ತಂದೆಯಾಗಿ, ರಾಜನಾಗಿ, ಆದರ್ಶಪ್ರಾಯನಾಗಿ ಮೆರೆದವನು. ಲೌಕಿಕ ನೆಲೆಯಲ್ಲಿ ಈತನು ಎಸಗಿದ ವಿವಿಧ ಮಹಾನ್ ಕಾರ್ಯಗಳು ಲೋಕಕಲ್ಯಾಣ ಕಾರ್ಯಗಳು; ಜಗತ್ತನ್ನು ಮುನ್ನಡೆಸುವ ಕಾರ್ಯಗಳು. ಈ ಹಲವು ವಿಷಯಗಳನ್ನೊಳಗೊಂಡಂತೆ ಈ ಭಾಗವು ಬರುತ್ತದೆ. ಉಳಿದೆಡೆಗಳಂತೆ ಇಲ್ಲಿಯೂ ಪಂಪನಲ್ಲಿ ಅಲ್ಲಲ್ಲಿ ನಾಟಕೀಯತೆ, ವರ್ಣನಾಮಾಧುರ್ಯಗಳು ಸೇರಿ ಸ್ವಾರಸ್ಯಕರವಾಗಿದೆ. ಚಾವುಂಡರಾಯ ಪುರಾಣ, ಹಸ್ತಿಮಲ್ಲನ ಪೂರ್ವಪುರಾಣ, ಪುಣ್ಯಾಸ್ರವದ ಆದೀಶ್ವರರ ಕಥೆ ಇವುಗಳಲ್ಲಿ ಕೇವಲ ಘಟನೆಗಳ ಪಟ್ಟಿಗಳಿವೆ ಅಷ್ಟೇ. ಪುರುದೇವಚರಿತ ಮತ್ತು ಆದಿಪರಮೇಶ್ವರನ ಯಕ್ಷಗಾನಗಳು ಇವುಗಳಂತೆ ತೀರಾ ಸಂಕ್ಷಿಪ್ತವಾಗದೆ ಅಲ್ಪವಿವರಣೆಗೆ ಮನಸೋತಿವೆ. ಅಲ್ಲಲ್ಲಿ ಜಾನಪದೀಯ ಧಾಟಿ, ಸರಳತೆ ಮನಸೆಳೆಯುವಂತಿವೆ. ಇವು ಪುರಾಣಶೈಲಿಯ ನೀರಸತೆಯನ್ನು ನೀಗಿಸುವ ಅಂಶಗಳಾಗಿ ಕಂಡುಬರುತ್ತವೆ.

## ಪರಿನಿಷ್ಕ್ರಮಣ ಕಲ್ಯಾಣ

**ಆದಿಪುರಾಣ-ಪೂರ್ವಪುರಾಣ :** ಆದಿನಾಥನ ಸಾಮ್ರಾಜ್ಯಾಭಿಷೇಕದ ನಂತರ ಆತನ ಬದುಕಿನ ಮೂರನೆಯ ಘಟ್ಟವಾದ ಪರಿನಿಷ್ಕ್ರಮಣ ಕಲ್ಯಾಣವೆಂಬುದು ನಿರೂಪಿತವಾಗಿದೆ. ಭವಾಂತರಗಳಿಂದ ನುರಿತುಬಂದ ಆದಿನಾಥನ ಜೀವವು ಸಾಮ್ರಾಜ್ಯಸುಖವನ್ನೆಲ್ಲ ಅನುಭವಿಸಿ, ಕರ್ತವ್ಯಗಳನ್ನು ಪೂರ್ಣಗೊಳಿಸಿ, ಕೊನೆಗೆ ಸಂಪೂರ್ಣ ವೈರಾಗ್ಯದತ್ತ ತನ್ನ ಜೀವನವನ್ನು ತಿರುಗಿಸಿ ಆತ್ಮವಿಕಸನದಲ್ಲಿ ದೃಢನಿಶ್ಚಯಮಾಡುವ ಸನ್ನಿವೇಶವು ಇಡೀ ಸಾಹಿತ್ಯಕ ಧಾರ್ಮಿಕ ನೆಲೆಗಟ್ಟಿನಲ್ಲಿ ನಿತ್ಯನೂತನವಾಗಬಲ್ಲ ರಸಘಟ್ಟವಾಗಿದೆ. "ಆದಿಪುರಾಣದ ಧರ್ಮ ಹಿಮಾಚಲದ ಶೃಂಗಗಳ ಮಧ್ಯೆ, ಜನ್ಮಾಂತರ ಕಥೆಗಳ ಗೊಂಡಾರಣ್ಯದ ನಡುವೆ ಅಲ್ಲಲ್ಲಿ ದೊರಕುವ ಶ್ರಮಹಾರಕವೂ ಉಲ್ಲಾಸಕಾರಕವೂ ಆದ ಸವಿ ನೀರಿನ ಕೆಲವು ತಿಳಿಗೊಳಗಳಲ್ಲಿ ಈ ನೀಲಾಂಜನಾ ನಾಟ್ಯದ ಭಾಗವೂ ಒಂದು..."[೩೪] ವೃಷಭನ

ಪರಿನಿಷ್ಕ್ರಮಣ ಕಲ್ಯಾಣದ ವರ್ಣನೆಯಲ್ಲಿ ಪಂಪನ ಕಾವ್ಯಶಕ್ತಿ ಮೇಲಾದುದು. ಈ ಕಲ್ಯಾಣಕ್ಕೆ ಕಾರಣವಾಗುವ ಸಂಗತಿಯೇ ನೀಲಾಂಜನೆಯ ನೃತ್ಯ.[೩೫] "ಆದಿನಾಥನ ಜೀವನದ ಬಹು ಮುಖ್ಯವಾದ ಈ ಘಟ್ಟವನ್ನು ಒಂದು ಉಪಾಖ್ಯಾನ(episode)ವಾಗಿ ಮಾಡಿದ ಶ್ರೇಯಸ್ಸು ಪಂಪನಿಗೆ ಸಲ್ಲಬೇಕು.[೩೬] ಪಂಪನ ಈ ಕವಿತಾ ಪ್ರತಿಭೆಗೆ ಮಾರುಹೋಗದ ವಿಮರ್ಶಕನಿಲ್ಲ; ತನ್ಮಯನಾಗದ ಸಹೃದಯನಿಲ್ಲ. ಒರೆಗೆ ಹಚ್ಚಿದಷ್ಟೂ ನಿತ್ಯ ನೂತನತೆಯ ಹೊಳಪನ್ನು ಕಾಣಿಸುವ ಭಾಗವಿದು.

ಆದಿಪುರಾಣದ ಅಷ್ಟಮಾಶ್ವಾಸ ಕೊನೆಗೊಳ್ಳುವ ವಿಧಾನ ಹೀಗಿದೆ :

ನಾನಾಮಾನ್ಯಜನಾಂತರಂಗನಿಹಿತಾನಂದೋದಯಂ ದಿವ್ಯ ಸಂ
ತಾನಸ್ರಙ್ಮಣಿಭೂಷಣಾಂಬರಧರಂ ಸ್ವಾಧೀನ ರಾಜನ್ಯ ಸಂ
ತಾನಂ ಪುತ್ರಕಲತ್ರಮಿತ್ರಸಹಿತಂ ಸಾಕೇತಸಿಂಹಾಸನಾ
ಸೀನಂ ಪಾಲಿಸಿದಂ ಮಹೀವಲಯಮಂ ಸಂಸಾರಸಾರೋದಯಂ (ಆದಿಪು. viii-೭೭)

ವೃಷಭನಾಥನಿಗೆ ವೈರಾಗ್ಯವನ್ನುಂಟುಮಾಡುವ ಸನ್ನಿವೇಶವನ್ನು ಕಲ್ಪಿಸಬೇಕೆಂಬ ಭಾವನೆ ದೇವೇಂದ್ರನಿಗೆ ಬಂದುದು ಬಹುಶಃ ಆದಿನಾಥನ ಈ ರೀತಿಯ ಲೌಕಿಕ ನೆಲೆಯ ನಿಷ್ಠಾವಂತ ಕಾರ್ಯತತ್ಪರತೆಯನ್ನು ಗಮನಿಸಿಯೇ ಎನಿಸುತ್ತದೆ. ಸಂಪೂರ್ಣ ಸುಖ ಸಾಗರದಲ್ಲಿ ವೃಷಭನಾಥ ಮುಳುಗಿದ್ದನೆಂಬ ಅಂಶ ಪೂರ್ವಪುರಾಣದಲ್ಲಿಯೂ ಕಂಡು ಬರುತ್ತದೆ. 'ಪುತ್ರ ಪೌತ್ರಾದಿಗಳೊಡನೆ ಕೂಡಿದ್ದ ಸ್ವಾಮಿಗೆ ಕಾಲ ಅಗೋಚರವಾಗಿ ಕಳೆದುಹೋಯಿತು' (ಪೂರ್ವಪು. xvi-೨೬೮). ಅಷ್ಟೇ ಅಲ್ಲ, 'ಭಗವಂತನು ರಾಜ್ಯಭೋಗ ದಿಂದ ಹೇಗೆ ವಿರಕ್ತನಾಗುವನು?' ಎಂದು ದೇವೇಂದ್ರನು ಯೋಚಿಸಿ ಆಗ ಆಯುಷ್ಯಾವಸ್ಥೆಯು ನಷ್ಟವಾದ ಒಂದು ಪಾತ್ರ ಪ್ರಯೋಗಿಸಿದನು (xvii-೬) ಎಂದು ಪೂರ್ವ ಪುರಾಣದಲ್ಲಿ ಜಿನಸೇನರು ಬಾಯ್ಬಿಟ್ಟೇ ಹೇಳಿದ್ದಾರೆ. ಪಂಪನು ಈ ವಿಷಯವನ್ನು ನೇರವಾಗಿ ಹೇಳದೇ ಇದ್ದರೂ ಆ ಛಾಯೆ ದೇವೇಂದ್ರನ ಕ್ರಿಯೆಯಲ್ಲಿ ಪ್ರತಿಬಿಂಬಿತವಾಗುವಂತೆ ಮಾಡಿದ್ದಾನೆ. ವೃಷಭನಂಥವನಿಗೆ ನಿಮಿತ್ತಮಾತ್ರವಾಗಿಯೇ ಆಗಲಿ ಒಂದು ವೈರಾಗ್ಯ ಸನ್ನಿವೇಶವನ್ನು ದೇವೇಂದ್ರನು ಸೃಷ್ಟಿಸಬೇಕಾಯಿತೆಂದ ಮೇಲೆ ಇನ್ನು ಸಾಮಾನ್ಯರ ಪಾಡೇನು? "ಆ ಅಲೌಕಿಕ ಪುರುಷನನ್ನು ಪ್ರತಿಬೋಧಿಸುವ ಸಂದರ್ಭ ರಚನೆ ಎಂಬುವುದು ಒಂದು ಅಲೌಕಿಕ ಕಾವ್ಯರಚನೆಯೇ ಆಗಿದೆ."[೩೭] ಈ ಪರಿನಿಷ್ಕ್ರಮಣ ಸಮಯ, ಅದಕ್ಕೆ ಹೊಂದಿಕೊಳ್ಳುವಂತೆ ಸಂಸಾರದ ಅನಿತ್ಯತೆಯನ್ನು ಅವನಿಗೆ ಕೊನೆಯ ಬಾರಿಗೆ ಮನಗಾಣಿಸುವ ಒಂದು ಸಂಗತಿ ನಡೆಯುತ್ತದೆ. ಆದಿಪುರಾಣದ ಸಾರವೇ ಇದೆಂದು ಬೇಕಾದರೂ ಹೇಳಬಹುದು; ಪಂಪನು ಇದನ್ನು ಉಜ್ವಲವಾದ ರೀತಿಯಲ್ಲಿ ನಿರೂಪಿಸಿದ್ದಾನೆ.[೩೮] "ಈ ಪ್ರಸಂಗದ ವೈಭವ ಆದಿಪುರಾಣದ ಅತಿಸ್ಮರಣೀಯ ಉದ್ದಾಮ ಪ್ರಸಂಗವೆಂಬುದೊಂದೇ ಅಲ್ಲ, ಸಮಸ್ತ ಕನ್ನಡ ಸಾಹಿತ್ಯದಲ್ಲಿ ಒಂದು ಸುಂದರ ಸನ್ನಿವೇಶ"[೩೯] ಎಂಬ ಹಿರಿಮೆಗೆ ಇದು ಪಾತ್ರವಾಗಿದೆ.

ಆದಿಪುರಾಣದ ನವಮಾಶ್ವಾಸ ಪುರುಪರಮೇಶ್ವರನ ರಾಜಸಭೆಯ ವೈಭವದ ವರ್ಣನೆಯೊಂದಿಗೆ ಪ್ರಾರಂಭವಾಗುತ್ತದೆ. ಪೂರ್ವಪುರಾಣದಲ್ಲಿ ಇಲ್ಲದ ಈ ಪ್ರಸಂಗದ ವರ್ಣನೆ ಆದಿಪುರಾಣದಲ್ಲಿ ಚಿತ್ರಿತವಾಗಿದೆ. ವೃಷಭನ ರಾಜಸಭೆ ಮೃದುತರ ಗಂಭೀರ. "ನೆಟ್ಟಿದ

ರಾಜನ್ಯಕಮಂ ದರಹಸಿತ ಮೃದುವಿಲೋಕನ ಪರಿಭಾಷಣದಿಂದಮಾದರಿಸುತ್ತುಂ” ಇರುವಾಗ,ಭರತಬಾಹುಬಲಿಯರು ಎರಡೋಳಿಯಲ್ಲಿ ಕುಳಿತಿದ್ದರು, ಉಳಿದ ಪುತ್ರರು ಅವರವರ ಆಸನಗಳಲ್ಲಿ ವಿರಾಜಮಾನರಾಗಿದ್ದರು. ಅವರ ಮಕುಟಕಾಂತಿಯ ಪ್ರಭೆ ಆವರಿಸಿತು, ಮಗಮಗಿಸುವ ಕಸ್ತೂರಿ, ಅಗರು, ಶ್ರೀಗಂಧಗಳ ಪರಿಮಳ, ಬಾಸಿಂಗದ ಹೂವಿನ ಹೊಸ ಸುವಾಸನೆಯನ್ನು ಚಾಮರಗಳಿಂದೆದ್ದ ಗಾಳಿಯು ಸುತ್ತ ಹರಡಿತು. ‘ದಂಡನೀತಿ’ ಈವಾಗಲೆ ರೂಢಿಗೆ ಬಂದಿತಷ್ಟೇ. ಅದರ ಪ್ರತಿಬಿಂಬವೋ ಎಂಬಂತೆ ಆ ಸಭೆಯಲ್ಲಿ ಒಂದು ಪುಟ್ಟ ನಾಟಕೀಯ ಸನ್ನಿವೇಶ ಸೃಷ್ಟಿಯಾಗಿದೆ.

ಎಡೆಗೋದಿರದಿರಿ ಮುದ್ದಂ | ನುಡಿಯದಿರಿಂ ನೃಪತಿ ನುಡಿಯೆನುಡಿಯಿಂ ನೀಮಿ
ರ್ಪೆಡೆಯೊಳಿರಿಂ ನೀಮಱಿವಿರ್ | ಮಿಡಿಕಿದೊಡೆನೆ ಚಿತ್ರವೇತ್ರ ದಂಡ ಧರರ್ಕಳ್(ಆದಿಪು.ix-೬)

ಇಂತಹ ಘನ ಗಂಭೀರ ಸಭೆಯಲ್ಲಿ ವೃಷಭನು ಇತರ ರಾಜಮಹಾರಾಜರುಗಳಿಂದ ಸುತ್ತುವರಿದು ವೈಭವದಿಂದ ಮೆರೆಯುತ್ತಿದ್ದನು.

ಆದಿಪುರಾಣದಲ್ಲಿ ಎಂಟು ಪದ್ಯಗಳು ಹಾಗೂ ಒಂದು ವಚನ ಭಾಗವು ಆದಿನಾಥನ ರಾಜಸಭಾವೈಭವದ ವರ್ಣನೆಗೆ ಮೀಸಲಾಗಿದೆ. ಈ ಚಿತ್ರಣ ಪೂರ್ವಪುರಾಣದಲ್ಲಿಲ್ಲ. ರಾಜ್ಯಾಭಿಷೇಕದ ನಂತರ ಆ ರಾಜಾಧಿರಾಜನ ರಾಜಸಭೆಯ ವೈಖರಿಯನ್ನು ವರ್ಣಿಸದಿದ್ದರೆ ಅದು ಅಪೂರ್ಣವೆನಿಸೀತು ಎನ್ನುವಂತೆ, ಅಲ್ಲದೆ ಮುಂದಿನ ಸನ್ನಿವೇಶದ ಸಂಯೋಜನೆಯ ಘಟನೆಯನ್ನು ಹೆಚ್ಚಿಸುವುದಕ್ಕೆಂಬಂತೆ ಈ ವರ್ಣನಾವಿಧಾನವನ್ನು ಕವಿ ಇಲ್ಲಿ ಉದ್ದೇಶಪೂರ್ವಕವಾಗಿ ತಂದಂತಿದೆ.

ಈ ಕಡೆ ರಾಜಸಭೆ ಜರುಗುತ್ತಿದೆ; ಆ ಕಡೆ ದೇವೇಂದ್ರನು ‘ಆದಿದೇವನ ಪರಿನಿಷ್ಕ್ರಮಣ ಮತ್ಯಾಸನ್ನಮೆಂಬುದಂ ನಿಜಾವಧಿಬೋಧದಿಂದಮಱಿದು’ ಸಂಗೀತ ಪ್ರಸಂಗದಿಂದ ಓಲಗಿಸಬೇಕು ಎಂದು ಪರಿವಾರ ಸಮೇತನಾಗಿ ಬಂದನು.

ಪರಮನನೋಲಗಿಸಿ ಕೃತಾ | ರ್ಥರೆಮಪ್ಪೆವಮೋಘಮನವಸರಂಗುಡಿಸುವುದೆಂ
ದಿರದೆನ್ನನಧಿಕ ಭಕ್ತಿಯೆ | ತರೆ ಬಂದುದು ದೇವ ದಿವಜಪೇಟಕಮನಿತುಂ
ಸಮನಿಸಲ್ಲಿವರ ಮನೋರಥ | ಮಮರೀ ನೃತ್ಯಪ್ರಸಂಗಮಕ್ಕಭವ ಭವತ್
ಕ್ರಮಕಮಲಸೇವೆಯಿಂದಿಂ | ತುಮನಂತಂ ಗೀತವಾದಿತಂ ಫಲಮಲ್ತೇ (ಆದಿಪು. ix-೧೦-೧೧)

ದೇವಾ ! ಪರಮನನ್ನು ಸೇವಿಸಿ ಕೃತಾರ್ಥರಾಗೋಣ, ನಮಗೆ ಅಮೋಘವಾದ ಅವಕಾಶವನ್ನು ದೊರಕಿಸಿಕೊಡು ಎಂದು ಪ್ರಾರ್ಥಿಸಿಕೊಂಡು ದೇವತೆಗಳೆಲ್ಲರೂ ನನ್ನೊಡನೆ ಬಂದಿದ್ದಾರೆ. ನಿನ್ನಲ್ಲಿರುವ ಅತಿಶಯ ಭಕ್ತಿಯೇ ನನ್ನನ್ನಿಲ್ಲಿಗೆ ಕರೆತಂದಿದೆ. ಅಭವ ! ಇವರ ಮನೋರಥವು ಈಡೇರಲಿ. ಅಮರಸ್ತ್ರೀಯ ನೃತ್ಯವು ಜರುಗಲಿ. ನಿನ್ನ ಪಾದಕಮಲಗಳ ಸೇವೆಯಿಂದ ಈ ಗೀತವಾದಿಗಳು ಅನಂತ ಫಲವಾಗಿ ಲಭಿಸುತ್ತವೆ ಅಲ್ಲವೆ! ಎಂದು ಈ ಮೊದಲಾಗಿ ಪ್ರಾರ್ಥಿಸಿಕೊಂಡನು. ‘ಅನಂತಂ ಗೀತವಾದಿತಂ ಫಲಮಲ್ತೇ’ ಎಂಬ ಮಾತಿನಲ್ಲಿ ಕವಿ ಮೂಡಿಸಿರುವ ಶ್ಲೇಷಾರ್ಥ ಮಾರ್ಮಿಕವಾಗಿದೆ. ಇದು ಪರಮನಿಗೂ ಅನಂತಫಲವನ್ನು (ಮೋಕ್ಷಪ್ರಾಪ್ತಿ) ದೊರಕಿಸಲು ಹೆದ್ದಾರಿಯಾಗುತ್ತದೆ.

ದೇವೇಂದ್ರನ ಮೊರೆಗೆ ಸ್ವಾಮಿಯು ಮುಗುಳುನಕ್ಕ. ‘ಅವುದು ನಿಮಗಾನಂದಮದಕ್ಕೆ’

ಎಂದು ತನ್ನ ಒಪ್ಪಿಗೆಯನ್ನು ನೀಡಿದ. ಈ ಗಾಂಭೀರ್ಯ ತುಂಬಿದ ಮಾತಿನಲ್ಲಿ ಕವಿ ಎಷ್ಟೆಲ್ಲಾ ಅರ್ಥಗಳನ್ನು ತುಂಬಿಸಿದ್ದಾನೆ! ತನಗಾಗಿಯೇ ಈ ನೃತ್ಯಸಂಗೀತಾದಿಗಳ ವಿನೋದವಲ್ಲ. ಅವರಿಷ್ಟವೇ ತನ್ನಿಷ್ಟವೆಂಬ ನಿರ್ಲಿಪ್ತ ಭಾವ ಒಂದೆಡೆಯಾದರೆ; ಮತ್ತೊಂದೆಡೆ ಮುಂದೆ ದೇವೇಂದ್ರನು ಈ ಪ್ರಸಂಗವನ್ನು ಹೂಡಿರುವಲ್ಲಿ ಗೂಢಾರ್ಥವನ್ನು ತಿಳಿದಿರುವನೆಂಬ ಭಾವವು ಹೊರಹೊಮ್ಮುತ್ತದೆ. ಪರಮನ ಅನುಮತಿ ಪಡೆದು ನೃತ್ಯಸಭೆ ಪ್ರಾರಂಭವಾಗುತ್ತದೆ. ಈ ಸನ್ನಿವೇಶ ಅನುದಾನವೆಲ್ಲವೂ ಪಂಪನ ಸ್ವಯಂ ಮೇಳವಾಗಿದೆಯೇ ಹೊರತು ಪೂರ್ವಪುರಾಣದಲ್ಲಿ ಈ ಯಾವ ಚಿತ್ರಣವೂ ಬಂದಿಲ್ಲ. ಹೊಸ ಸುಂದರ ಸನ್ನಿವೇಶದ ಕಲ್ಪನೆ ಪಂಪನದೇ ಆಗಿದೆ.

ಮುಂದೆ ನೃತ್ಯದ ವರ್ಣನೆ ಪೂರ್ವಪುರಾಣದಲ್ಲಿ ಬಹಳ ನೀರಸವಾಗಿ ಆತುರಾತುರವಾಗಿ ವರದಿಮಾತ್ರವಾಗಿ ಬಂದಿದೆ. ಒಂದೇ ಶ್ಲೋಕದಲ್ಲಿ ನಿರೂಪಿತವಾಗಿದೆ :

> ತತೋ ನೀಲಾಂಜನಾನಾಮ ಲಲಿತಾ ಸುರನರ್ತಕೀ |
> ರಸಭಾವಲಯೋಪೇತಂ ನಟಂತೀ ಸಪರಿಕ್ರಮಂ || (ಪೂರ್ವಪು. xvii-೭)

ತರುವಾಯ ಸುಂದರಿಯಾದ ನೀಲಾಂಜನೆಯೆಂಬ ದೇವನರ್ತಕಿಯು ಶೃಂಗಾರಾದಿ ರಸಭಾವಲಯ ಇವುಗಳಿಗನುಸಾರವಾಗಿ ಸುಖವಾಗಿ ತಿರುಗಿ ನರ್ತನವನ್ನು ಮಾಡುತ್ತ ಆಯುಷ್ಯವೆಂಬ ದೀಪವು ನಷ್ಟವಾಗುತ್ತಿರಲು ಕ್ಷಣಕಾಲದಲ್ಲಿ ಅದೃಶ್ಯಳಾದಳು. ಈ ಸಂದರ್ಭವನ್ನು ಪಂಪನು ಒಬ್ಬ ನುರಿತ ನೃತ್ಯಕಲಾಜ್ಞಾನಿಯಾಗಿ ಚಿತ್ರಿಸಿದ್ದಾನೆ. ಪಂಪ ಅರಿಕೇಸರಿಯ ಆಸ್ಥಾನದಲ್ಲಿರುವಾಗಿನ ಸಂದರ್ಭದಲ್ಲಿ ನೃತ್ಯ ಕಲಾಮೇಳಗಳನ್ನು ವೀಕ್ಷಿಸಿದ್ದುದರ ಒಂದು ಅನುಭವಪೂರ್ಣ ವರ್ಣನೆ ಇದರಲ್ಲಿ ಮೇಳಯಿಸಿದ್ದರೆ ಆಶ್ಚರ್ಯವಿಲ್ಲ. 'ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗಳ್ಗಾಗರಮಾದ ಮಾನಸರೆ ಮಾನಸರ್'ಎಂದು ನುಡಿದಿರುವ ಪಂಪ ಇಂತಹ ಗೋಷ್ಠಿಗಳಲ್ಲಿ ಭಾಗಿಯಾಗದೆ ಇರುತ್ತಿರಲಿಲ್ಲವೆಂದು ಸುಲಭವಾಗಿ ಊಹಿಸಬಹುದಾಗಿದೆ. ಅನುಭವಜನ್ಯವಾದ ಈ ಪ್ರಸಂಗಕ್ಕೆ ಪಂಪನು ತನ್ನ ಕಲ್ಪನಾಗರಿಯನ್ನು ಹರಡಿ, ನಾಟ್ಯಶಾಸ್ತ್ರದ ಸ್ವಾಧ್ಯಾಯ ಜ್ಞಾನರಸವನ್ನು ಬೆರೆಸಿ ಈ ಸಂದರ್ಭವನ್ನು ಹೆಚ್ಚು ಮನೋಹರಗೊಳಿಸಿರುವಂತೆ ತೋರುತ್ತದೆ.

೯ನೇ ಆಶ್ವಾಸದ ೧೪ನೇ ಕಂದಪದ್ಯದ ನಡೆಯಲ್ಲಿ ಪ್ರಾರಂಭವಾಗುವ ಈ ನೃತ್ಯದ ವರ್ಣನೆ ೪೦ನೇ ಕಂದಪದ್ಯದಲ್ಲಿ ಕೊನೆಗೊಳ್ಳುತ್ತದೆ. ಪೂರ್ವಪುರಾಣದಲ್ಲಿ ಕೇವಲ ರೇಖಾಚಿತ್ರವಾಗಿ ಬಂದಿರುವ ಈ ಪ್ರಸಂಗವನ್ನು ಪಂಪನು ಒಂದು ಸುಂದರ ಕಲಾ ಪ್ರಪಂಚ ಸನ್ನಿವೇಶವನ್ನಾಗಿ ಸೃಷ್ಟಿಸಿದ್ದಾನೆ.

ಪುರುದೇವನ ಸಮ್ಮತಿ ದೊರೆಯುತ್ತಿದ್ದಂತೆ ಗೀತ-ವಾದ್ಯ ಮೊಳಗಿತು. ಸಭೆ ರಸ ಭಾವದಿಂದ ಮುಳುಗಿತು. ಸಭೆಯಿಂದ—'ಅಹೋಗೀತಮಹೋವಾದಿತಂ' ಎಂಬ ಹೊಗಳಿಕೆಯ ಕೂಗು ಕೇಳಿಬರುತ್ತಿತ್ತು. ಈ ಮಧ್ಯೆ ಧರಣೇಂದ್ರನಿಗೂ ವರ್ಣಿಸಲಸದಳವಾದ ರೂಪರಾಶಿಯನ್ನು ಹೊತ್ತ ನೀಲಾಂಜನೆ ವಸ್ತ್ರಾಭರಣಗಳಿಂದ ಶೋಭಿಸುತ್ತಿದ್ದಳು. ಈಕೆ ದೇವೇಂದ್ರನ ನರ್ತಕಿ. "ನರ್ತನರಸದೊಳೆ ನಿಚ್ಚಂ ಮೆಚ್ಚುಗೊಳ್ವಳಿಂದ್ರನ ಕೈಯೊಳ್" ಎನಿಸಿದ ನೀಲಾಂಜನೆ "ಕರ್ಬಿನ ಬಿಲ್ಲಿಂ ಮಸೆದ ಮದನನಲರ್ಗಣೆ ಬರ್ದುಕಿತ್ತೆನಿಸುತ್ತೊಳಪೊಕ್ಕಳ್ ಭೋಂಕೆನೆ ನಿಖಿಳಜನಾಂತರಂಗಮಂ ರಂಗಮುಮಂ". ರಂಗವನ್ನು

ಪ್ರವೇಶಿಸಿದ ಈ ದೇವೇಂದ್ರನ ನರ್ತಕಿಯು ಜನಾಂತರಂಗವನ್ನು ಪ್ರವೇಶಿಸಿದ ಮಾತಿನಲ್ಲಿ ಹೆಚ್ಚುಗಾರಿಕೆಯೇನಿಲ್ಲ. 'ನಿಲ್ಲುವುರಸಂಗಳಿಲ್ಲಿ ಮಡಲ್ತು ಎನೆ' ನೀಲಾಂಜನೆಯ ಒಂದೊಂದು ಭಂಗಿಯೂ ರಸಾಸ್ವಾದಕ್ಕೆಡೆಯಾಯಿತು. ಯಾವ ನಡೆಯೂ ಯಾವ ಗತಿಯೂ ವ್ಯರ್ಥವಾದುದಲ್ಲ! ತೆರೆಯ ಮರೆಯಲ್ಲಿದ್ದರೂ ಈಕೆಯ ಪ್ರಭೆ 'ಮೋಡದ ಮರೆಯ ವಿದ್ಯುಲ್ಲತೆಯಂತೆ' ಶೋಭಿಸುತ್ತಿತ್ತು. ತೆರೆ ಎಳೆದ ಕೂಡಲೆ ಆಕೆ ಬಂದು ಅರ್ಪಿಸಿದ 'ಪುಷ್ಪಾಂಜಲಿ'ಯ ನೃತ್ಯ ಪ್ರಾರಂಭದಲ್ಲಿ ಕಾಮನು ಮೊಗ್ಗಿನ ಬಾಣವನ್ನು ಸಭೆಗೆ ಪ್ರಯೋಗಿಸಿದನಂತೆ! ರಾಜರ ಎದೆಯ ಮೇಲೆ ಪ್ರತಿಬಿಂಬಿಸುತ್ತಿದ್ದ ಮಣಿಹಾರದಿಂದ ಅವರ ಎದೆಯನ್ನು ಪ್ರವೇಶಿಸುವುದನ್ನು ಅನುಕರಿಸಿ ರಂಗದಲ್ಲಿ ನೀಲಾಂಜನೆ ಸೊಗಯಿಸಿದ್ದಳು! ವಾದ್ಯಗಳು ವಿಲಂಬಿತ, ಮಧ್ಯ ಮತ್ತು ದ್ರುತಲಯಗಳಿಂದ ಕೂಡಿದ್ದುವು; ಕಾಮರಸೋಪೇತವಾಗಿದ್ದುವು. ಈಕೆಯ ನೃತ್ಯದ ಹಿರಿಮೆ ಅಸದಳವಾದುದು—

ತಾಳದ ಲಯಮಂ ನಿಜಿ ನೀ | ಳಾಳಕಹಾರದ ಪೊದಲ್ಬ ಮುತ್ತೆಂಬವು ಮುಂ
ಮೇಳಿಸಿ ಕೈಕೊಂಡುವು ಉಳಿ | ತಾಳಕಿ ಕೈಕೊಂಡಳೆಂಬುದೊಂದಚ್ಚರಿಯೆ (ಆದಿಪು. ix-೨೪)

ಆಕೆಯ ಉಡುಗೆತೊಡುಗೆಮುಂಗುರುಳುಗಳೂ ತಾಳದ ಲಯಕ್ಕೆ ತಾವೇತಾವಾಗಿ ಸ್ಪಂದಿಸುತ್ತಿದ್ದುವು. ನೃತ್ಯವೇ ಮೂರ್ತಿವೆತ್ತು ಬಂದ ನೀಲಾಂಜನೆ ತಾಳದ ಲಯಕ್ಕೆ ಅಪೂರ್ವ ನೃತ್ಯವನ್ನು ಮಾಡಿದುದರಲ್ಲಿ ಆಶ್ಚರ್ಯವೇನು?

ಭಾವ ಅನುಭಾವ ವಿಭಾವದಲ್ಲಿ ಒಸರುವ ಆಕೆಯ ಅಭಿನಯ ಅಪೂರ್ವ ಗಾಂಭೀರ್ಯವಾದುದು ಜಟಿಲವಾದುದು. ಆಂಗಿಕಾಭಿನಯ, ವಾಚಿಕಾಭಿನಯಗಳಲ್ಲಿ ನೀಲಾಂಜನೆ ಮೆರೆದಳು. ನಾಟ್ಯಶಾಸ್ತ್ರೋಕ್ತವಾದ ಮೂವತ್ತೆರಡು ಅಂಗಹಾರಗಳನ್ನೂ ನೂರೆಂಟು ಕರಣಗಳು ಅವಳ ಡವಕೆಯ ಪರಿಚಾರಿಕೆಗೂ ಗೊತ್ತೆಂದಮೇಲೆ ಆಕೆಗವು ತಿಳಿಯದವೆ? ವಾದಕನು ಜತಿಯನ್ನು ನುಡಿಸುವುದರಲ್ಲಿ ತಡವಡಿಸಿದರೆ ತನ್ನ 'ಪುರ್ವಿಂ ಜತಿಯಂ ತೊಡರದೆ ನಡೆಯಿಸಿ ಪುರ್ವ್ವದೆ ಕುಡುಪೆನೆ ನರ್ತಕಿಯೆ ಸಭೆಗೆ ವಾದಕಿಯಾದಳ್'—ಕೇವಲ ನೃತ್ಯದಿಂದ ಮಾತ್ರವಲ್ಲ, ಇಡೀ ನೃತ್ಯದ ಹಿಮ್ಮೇಳದ ಕಾರ್ಯವನ್ನು ನಿರ್ವಹಿಸಿ ಇಡೀ ಸಭೆಯಲ್ಲಿನ ನರಸುರರನ್ನೆಲ್ಲ ದಂಗುಬಡಿಸಿದ ನೃತ್ಯಕೋವಿದೆ ನೀಲಾಂಜನೆ. ಈಕೆಯ ಪದಗತಿಗೆ, ಪ್ರದರ್ಶಿಸುತ್ತಿದ್ದ ಕರಣಗತಿಗೆ ಸುರವೃಂದದಿಂದ ಹೋ ಹೋ ಎಂಬ ಮೆಚ್ಚುಗೆ ಹೊರಹೊಮ್ಮುತ್ತಿತ್ತು. ಸಭಾಸದರೇ ಏನು ಓದುಗರೂ ಕೂಡ ಈ ಧ್ವನಿಯೊಂದಿಗೆ ಧ್ವನಿ ಬೆರಸುವಂತಹ ರಸಸಮ್ಮೋಹನ ಶಕ್ತಿ ಈ ಪ್ರಸಂಗದಲ್ಲಿ ಮೈಗೂಡಿದೆ. ನೀಲಾಂಜನೆಯ ಅಪೂರ್ವ ಮನೋಹರವಾದ ನರ್ತನವನ್ನು ಪಂಪಕವಿ ಪ್ರತ್ಯಕ್ಷವಾದೊಂದು ದೃಶ್ಯವನ್ನು ಕಣ್ಣೆದುರು ಕಾಣುತ್ತಿರುವ ಹಾಗೆ ಕುಸುರು ಕುಸುರಾಗಿ ಬಿಡಿಸಿ ವರ್ಣಿಸಿದ್ದಾನೆ. ಈ ವರ್ಣನೆಯಲ್ಲಿ ಆತನ ನಾಟ್ಯಶಾಸ್ತ್ರದ ಪರಿಜ್ಞಾನವೂ ಪರಿಸ್ಫುಟಗೊಂಡಿದೆ. ಇಲ್ಲಿ ತೀರ್ಥಂಕರನ ಸಭಾಸದರು ಹೇಗೋ ಹಾಗೆಯೇ ಸಹೃದಯರಾದ ಕಾವ್ಯವಾಚಕರೂ ತನ್ಮಯರಾಗುವಂತಹ ರಸಸ್ಥಾನವನ್ನು ಕವಿ ನಿರ್ಮಿಸಿದ್ದಾನೆ."[೪೦] "೯ ನೆಯ ಆಶ್ವಾಸದಲ್ಲಿ ಪರಿನಿಷ್ಕ್ರಮಣಕ್ಕೆ ಸಮಯವಾಯಿತೆಂದು ಇಂದ್ರನಿಗೆ ತೋರಲು ಆತನು ದೇವಲೋಕದಿಂದ ಇಳಿದು ಬಂದು ಒಂದು ನಾಟ್ಯಪ್ರಸಂಗವನ್ನು ಏರ್ಪಡಿಸುವ ಭಾಗ, ಅಲ್ಲಿ ನಡೆದ ನೀಲಾಂಜನೆಯ ರಮ್ಯ ನೃತ್ಯ ಲೋಕೋತ್ತರವಾದುದು. ಆ ನಾಟ್ಯದ ವರ್ಣನೆ ಕನ್ನಡ

ಸಾಹಿತ್ಯದಲ್ಲಿ ಅತಿಮೋಹಕವೂ ಪ್ರಖ್ಯಾತವೂ ಆದುದು. ಬಹುತರ ರತ್ನಾಕರವರ್ಣಿಯ ಕಾಲದವರೆಗೂ ಅಷ್ಟು ರಂಜಕವಾದ ನಾಟ್ಯವಿಲಾಸ ನಮ್ಮ ಸಾಹಿತ್ಯದಲ್ಲಿ ಬರುವುದಿಲ್ಲ. ಅಷ್ಟೇ ವರ್ಣಮಯವಾದುದು, ಗಂಭೀರತೆಯಲ್ಲಿ ಹಿರಿದಾದುದು ಉತ್ತರ ಕ್ಷಣದಲ್ಲಿ ಆದಿದೇವನಿಗೆ ಉಂಟಾದ ವೈರಾಗ್ಯ. ಮುಂದೆ ಕನ್ನಡ ಸಾಹಿತ್ಯದಲ್ಲಿ ಅನೇಕ ವೈರಾಗ್ಯಗಳ ವರ್ಣನೆಯ ಚಿತ್ರಣಗಳಿವೆ. ಆದರೆ ಇದರ ಹಿರಿಮೆ, ಹಾರ್ದ ಭಾವ ಅನನ್ಯ ಅಸಾಧಾರಣ"[೪೧]. "ನೀಲಾಂಜನೆಯ ನೃತ್ಯಪ್ರಕರಣ ಆದಿಪುರಾಣದ ಅತ್ಯಂತ ರುಚಿರ ಚೇತೋಹಾರಿಯಾದ ಭಾಗ. ಇಂತಹ ಉತ್ಕೃಷ್ಟವಾದ ನೃತ್ಯವರ್ಣನೆ ಕನ್ನಡ ಸಾಹಿತ್ಯದಲ್ಲಿ ಅನ್ಯಾದೃಶವೆಂದರೂ ತಪ್ಪಾಗದು. ಪಂಪನ ಸೌಂದರ್ಯ ದೃಷ್ಟಿ ಇಲ್ಲಿ ಅನುಪಮವಾಗಿ ಪ್ರಕಟವಾಗಿದೆ . . . ಮುಂದಿನ ಪರಿನಿಷ್ಕ್ರಮಣಕ್ಕೆ ಇದೊಂದು ಉಜ್ವಲವಾದ ಹಿನ್ನೆಲೆಯಾಗುತ್ತದೆ. ಸಂಸಾರದ ಅಧ್ರುವ ನಿಸ್ಸಾರ ಸ್ವರೂಪವನ್ನು ನಿರ್ದೇಶಿಸಿ ವಿರತಿಭಾವವನ್ನು ಮನದಲ್ಲಿ ಆಳವಾಗಿ ಬೇರೂರಿಸುತ್ತದೆ"[೪೨] ಎಂಬೀ ಮಾತುಗಳು ವಿಮರ್ಶಕರ ಮೆಚ್ಚುಗೆಗೆ ಪಾತ್ರವಾಗಿರುವ ಈ ಅಪೂರ್ವ ಸನ್ನಿವೇಶದ ಹಿರಿಮೆಯನ್ನು ಪ್ರಜ್ವಲಿಸುತ್ತವೆ.

ಸಂಗೀತನೃತ್ಯ ರಸಪ್ರವಾಹ ಹರಿಯುತ್ತಿದೆ. ಹೀಗಿರುವಲ್ಲಿ—

> ಸುರಗಣಿಕಾನಾಟ್ಯರಸಂ | ಪರಮನ ಚಿತ್ತಮುಮನೆಯ್ದೆ ರಂಜಿಸಿದುದು ವಿ
> ಸ್ಫುರಿತಸ್ಫಟಿಕಂ ಶುದ್ಧಾಂ | ತರಂಗಮೇನನ್ಯರಾಗದಿಂ ರಂಜಿಸದೇ ? (ಆದಿಪು. ix, ೪೩)

ಕವಿ ಇಲ್ಲಿ ಜಾಣತನದಿಂದ ಪರಮನ ಲೌಕಿಕ ಜೀವನದ ರೀತಿಯನ್ನು ವರ್ಣಿಸಿದ್ದಾನೆ. ಆ ಸುರಗಣಿಕಾ ನಾಟ್ಯರಸವು ಪರಮನ ಮನಸ್ಸನ್ನು ಚೆನ್ನಾಗಿ ರಂಜಿಸಿದುದೇನೋ ನಿಜ. ಈತ ಭವ್ಯಜೀವಿ, ಚರಮದೇಹಿ. ಆದರೂ ಸಂಪೂರ್ಣ ಕರ್ಮದಿಂದ ಬಿಡುಗಡೆ ಹೊಂದಿಲ್ಲ. ಆದ್ದರಿಂದಲೇ ಆ ಸ್ಫಟಿಕದಂತಹ ಅಂತರಂಗದಲ್ಲಿ ಅನ್ಯರಾಗವು ರಂಜಿಸುತ್ತಿದೆ. ಆದರೆ ಬೆರೆತಿಲ್ಲ. ತಾವರೆಯ ಮೇಲಿನ ನೀರಿನಂತೆ ಅಂಟಿಯೂ ಅಂಟದ ಜೀವನ ನಿಸ್ಪೃಹತೆ ಈತನದು.

ಇದೇ ಸಮಯದಲ್ಲಿ 'ಆ ಮಧುರಾಕಾರದ ಸುರಕೋಮಲೆ, ತನಗೆ ಆಯುರಂತವು ಬರಲು ಸೌದಾಮಿನಿಯಂತೆ ಭೋಂಕನೆ ರಂಗದಿಂದ ಅದೃಶ್ಯೆಯಾದಾಗ ದೇವೇಂದ್ರನು ರಸಭಂಗಭಯದಿಂದ ಆ ದೊರೆಯ ಪಾತ್ರವನ್ನೇ ತಂದು ಅನುಸಂಧಿಸಿದನು. ದೇವೇಂದ್ರನು ಈ ಸಂಗೀತನಾಟ್ಯ ಸಮ್ಮೇಳನವನ್ನು ಏರ್ಪಡಿಸಿದ್ದುದರ ಉದ್ದೇಶ ವೃಷಭನಿಗೆ 'ಪರಿನಿಷ್ಕ್ರಮಣ'ಕ್ಕೆ ನಿಮಿತ್ತವನ್ನು ಒದಗಿಸಲು ಮಾತ್ರವಾದರೂ ಸಭಾಮರ್ಯಾದೆಯನ್ನು ಕಾಪಾಡುವುದೂ ಆತನ ಧರ್ಮವೇ ಅಲ್ಲವೇ? ಆ ದೃಷ್ಟಿಯಿಂದ ಸಭಾಜನಕ್ಕರಿವಾಗದ ರೀತಿಯಲ್ಲಿ ಮತ್ತೊಬ್ಬ ನೀಲಾಂಜನೆಯಿಂದ ಆ ಕಾರ್ಯಕ್ರಮವನ್ನು ಮುಂದುವರಿಸುವಂತೆ ಮಾಡಿದ. ಆದರೆ ಸೂಕ್ಷ್ಮಮತಿಯಾದ, ಮತಿ-ಶ್ರುತ-ಅವಧಿಜ್ಞಾನಿಯಾದ ಪರಮನ ಜ್ಞಾನ ಜಾಗೃತವಾಯಿತು. ದೇವೇಂದ್ರನ ಈ ಕಾರ್ಯವನ್ನರಿತ ವೃಷಭನಿಗೆ ರಸಭಂಗವಾಯಿತು. ದೇವೇಂದ್ರನ ಉದ್ದೇಶ ಫಲಿಸಿತು. ರಸಭಂಗವಾದುದೇ ಮುಂದೆ ಭವವನ್ನು ಭಂಗಿಸಲು ಕಾರಣವಾಯಿತು.

ತಕ್ಷಣದಲ್ಲಿ ಲೌಕಿಕಾನಿತ್ಯತೆ ವೃಷಭನ ಮನದಲ್ಲಿ ಗಟ್ಟಿಯಾಗಿ ನೆಲೆಯೂರಿತು. ಈ ಭಾಗದಲ್ಲಿ ಕವಿ ಪೂರ್ವಪುರಾಣದ ಅನೇಕ ಭಾವಗಳನ್ನು ಹೆಚ್ಚು ರಸವತ್ತಾಗಿ ಚಿತ್ರಿಸಿ

ದ್ದಾನೆ. ಈ ಅನಿತ್ಯಭಾವನೆ ೩೧ ಶ್ಲೋಕಗಳಲ್ಲಿ ಪೂರ್ವಪುರಾಣದಲ್ಲಿ ಬಂದಿದೆ. ಪಂಪನು ೧೭ ಪದ್ಯಗಳಲ್ಲಿ ಈ ಭಾವನೆಯನ್ನು ಸುಂದರವಾಗಿ ಸ್ಪಷ್ಟೀಕರಿಸಿದ್ದಾನೆ. ಅಲ್ಲಿ ಬರುವ ಕೆಲವು ಸುಂದರವಾದ ಭಾವನೆಗಳನ್ನು ಪ್ರಕಟಿಸುವಾಗ ಕವಿ ಪೂರ್ವಪುರಾಣಕ್ಕೆ ಋಣಿಯಾಗಿ ದ್ದಾನೆ, ನಿಜ. ಆದರೆ ಕವಿ ಮೂಲಭಾವನೆಯ ಸೊಗಸನ್ನು ಮತ್ತಷ್ಟು ಸುಂದರಗೊಳಿಸಿ ಆ ಎರವಲು ಭಾವನೆಯನ್ನು ಓದುಗರ ಮನಸ್ಸಿನಿಂದ ನೀಗಿಸಿದ್ದಾನೆ.

ನೀಲಾಂಜನೆಯ ಸಾವು ಆದಿದೇವನ ಒಳಗಣ್ಣನ್ನು ತೆರೆಯಿಸಿ ಜೀವಿತದ ಕರ್ತವ್ಯದ ಕಡೆಗೆ, ಪರಮಗುರಿಯ ಕಡೆಗೆ ಗಮನ ಹರಿಸುವಂತೆ ಮಾಡಿತು. 'ಜಗತ್ತು ನಶ್ವರವಾದುದು. ಸಂಪತ್ತು ಮಿಂಚಿನಂತೆ ಚಂಚಲವಾದುದು. ಯೌವನ, ಆರೋಗ್ಯ, ಶರೀರ ಇವೆಲ್ಲ ಅಶಾಶ್ವತವಾದವು. ರೂಪ, ಯೌವನ, ಸೌಭಾಗ್ಯಗಳನ್ನು ನೆಚ್ಚಿಕೊಂಡು ಜನರು ಮದೋ ನ್ಮತ್ತರಾಗಿರುವರು. ಅವಿವೇಕಿಗಳಾಗಿ ಇವನ್ನು ಸ್ಥಿರವೆಂದು ನಂಬಿರುವರು. ಈ ಲೋಕ ದಲ್ಲಿ ನಾಶವಾಗದಿರುವುದು ಯಾವುದಾದರೂ ಇದೆಯೇ? ಈ ಜೀವ ನರಕದಲ್ಲಿ ಪಡ ಬಾರದ ಪಾಡನ್ನು ಪಟ್ಟಿದೆ. ಒಮ್ಮೆ ಅದನ್ನು ಸ್ಮರಿಸಿದರೆ ಸಾಕು ಯಾವ ಭೋಗವೂ ನಮ್ಮನ್ನು ಆಕರ್ಷಿಸಲಾರದು. ನೀಲಾಂಜನೆಯು ಚಂಚಲವಾದ ಒಂದು ಸ್ತ್ರೀರೂಪದ ಯಂತ್ರ. ನೋಡುತ್ತಿರುವಾಗಲೇ ಅವಳು ಸತ್ತುಹೋದಳು. ದೇವೇಂದ್ರನು ಬುದ್ಧಿವಂತ. ನಮ್ಮ ಕಣ್ತೆರೆಸಲು ಈ ಕಪಟನಾಟಕವನ್ನು ಪ್ರಯೋಗಿಸಿದನು (ಪೂರ್ವಪು.xvii-೧೨, ೧೩; ೩೬, ೩೮). ಜಿನಸೇನರ ಈ ವರ್ಣನೆಯನ್ನು ಪಂಪನು ನಿಷ್ಠೆಯಿಂದ ಅಳವಡಿಸಿದ್ದಾನೆ :

ನಾರೀರೂಪದ ಯಂತ್ರಂ | ಚಾರುತರಂ ನೋಡೆನೋಡೆ ಕರಗಿದುದೀ ಸಂ
ಸಾರದನಿತ್ಯತೆ ಮನದೊಳ್ | ಬೇರೂಱಿದುದೀಗಳೆಂತಿದಂ ಕಡೆಗಣಿಪೆಂ
ಕೋಟಿತೆಱದಿಂದಮೆಸೆವೀ | ನಾಟಕಮಂ ತೋಱಿ ಮಾಣ್ದನಿಲ್ಲಳ್ ಬಗೆಯೊಳ್
ನಾಟುವಿನಮಮರಿ ಸಂಸೃತಿ | ನಾಟಕಮುಮನೆನಗೆ ನೆಱೆಯೆ ತೋಱಿದಳೀಗಳ್
ತನುರೂಪವಿಭವ ಯೌವನ | ಧನಸೌಭಾಗ್ಯಾಯುರಾದಿಗಳ್ಗೆಣೆ ಕುಡುಮಿಂ
ಚಿನ ಪೊಳಪು ಮುಗಿಲ ನೆೞಲಿಂ | ದ್ರನಬಿಲ್ಬೊಬ್ಬಳಿಕೆಯುರ್ವ್ವ ಪರ್ವ್ವಿದ ಭೋಗಂ
(ಆದಿಪು. ix, ೪೪ ರಿಂದ ೪೭)

ಈ ಭಾಗಗಳಲ್ಲಿಯೂ ಪಂಪನು ಕೆಲವು ಭಾವೋಜ್ವಲಗೊಳಿಸುವ ಮಾತುಗಳನ್ನು ಹೇಳಿದ್ದಾನೆ. ಮುಂದುವರಿದು ವೃಷಭನ ವೈರಾಗ್ಯಭಾವನೆಯ ಧಾಟಿ ಹೀಗೆ ಸಾಗುತ್ತದೆ. 'ಎಷ್ಟು ಶರೀರಗಳನ್ನು ಪಡೆದುದಾಯಿತು? ಎಷ್ಟು ದೇಹವನ್ನು ಬಿಟ್ಟುದಾಯಿತು? ವಿಷಯಾ ನಿಲಕ್ಕೆ ಸಿಕ್ಕಿ ಎಷ್ಟೆಲ್ಲ ಅಲೆದಾಡಿದೆ? ಎಷ್ಟೋ ಬಾರಿ ಸ್ವರ್ಗದಲ್ಲಿ ಸುಖಸಾಗರದಲ್ಲಿ ಮುಳುಗಾಡಿದ್ದರೂ ನನ್ನ ತೃಷ್ಣೆ ಹಿಂಗಿಲ್ಲವಲ್ಲ. ಈ ನರಜನ್ಮದಲ್ಲಿ ಸಿಗುವ ಸುಖವಾದರೂ ಎಷ್ಟು? ಹುಲ್ಲಮೇಲಣ ಹನಿಯಂತಿರುವ ಈ ಸುಖದಿಂದ ನನ್ನ ತೃಷ್ಣೆ ಹಿಂಗುವುದೆ? ಈ ತನಕ ನಿರಂತರವಾಗಿ ತೊಳಲಿದೆ, ಇನ್ನು ಸಂಸಾರದಲ್ಲಿ ನಾನು ಅಲೆಯಲಾರೆ (ಆದಿಪು. ಆಶ್ವಾಸ ix)—ಇತ್ಯಾದಿಯಾಗಿ ವೃಷಭನಿಗೆ ವೈರಾಗ್ಯ ಭಾವನೆಗಳು ಉದಿಸುತ್ತವೆ.

ವೃಷಭನಿಗೆ ಮೂಡಿದ ವೈರಾಗ್ಯ ಪರಿಪಕ್ವಗೊಂಡ ವೈರಾಗ್ಯ. ಮತ್ತೆ ಸಂಸಾರವನ್ನು ಹಿಂದಿರುಗಿ ನೋಡದ, ಮರುಹುಟ್ಟನ್ನು ಗಳಿಸಿಕೊಳ್ಳದ, ಶಾಶ್ವತ ಸುಖದತ್ತ ಹೆಜ್ಜೆ ಇರಿಸಿದ ಗಟ್ಟಿಭಾವದ ನಿರ್ವೇಗ. "ತುಂಬುಜೀವನದ ಮಧ್ಯೆ ಆತನಿಗೆ ವೈರಾಗ್ಯೋದಯವಾಗುವಂತೆ

ಕಥೆಯಲ್ಲಿ ಬರುವ ರಮ್ಯ ಸನ್ನಿವೇಶವೊಂದನ್ನು ಅದಕ್ಕೆ ಸಫಲ ಮಾಧ್ಯಮವನ್ನಾಗಿ ನಿರ್ವಹಿಸುವುದು ಸುಲಭಸಾಧ್ಯವಾದ ಕೆಲಸವಲ್ಲ. ಪಂಪನ ನಿರೂಪಣಾ ನೈಪುಣ್ಯ ಅದನ್ನು ಅತ್ಯಂತ ಯಶಸ್ವಿಯಾಗಿ ನಿರ್ವಹಿಸಿದೆ. ಸಾಮಾನ್ಯ ಚೇತನಕ್ಕೆ ಯಾವ ಪ್ರಸಂಗ ಕೇವಲ ಮನರಂಜನೆಯಲ್ಲಿ ಮುಕ್ತಾಯವಾಗಬಲ್ಲುದೋ ಅದೇ ಒಂದು ಮಹಾ ಚೇತನಕ್ಕೆ ಬೋಧಪ್ರದವಾದ ಒಂದು ಒಳತೋಟಿಯಾಗಿ ಪರಿಣಮಿಸಬಹುದು ಎಂಬುದಕ್ಕೆ ಇದು ಅತ್ಯುತ್ತಮ ನಿದರ್ಶನ. ಇಲ್ಲಿ ಮೊದಲು ರಸಮಾಧುರ್ಯವೇ ಮೇಲುಗೈಯಾಗಿರುವಂತೆ ಕಂಡುಬಂದರೆ, ಕಡೆ ಕಡೆಗೆ ಅದಕ್ಕೂ ಮಿಗಿಲಾದ ಧರ್ಮದ ಧ್ವಜ ತಾನೇ ತಾನಾಗಿ ವಿರಾಜಿಸುವುದನ್ನು ಕಾಣ ಬಹುದು."[೪೩]

ಲೋಕಾಂತಿಕ ದೇವತೆಗಳ ಆಗಮನ, ಅವರು ಆದಿದೇವನ ವೈರಾಗ್ಯವನ್ನು ಪುಷ್ಟಿಗೊಳಿಸಿದುದು, ಭರತಬಾಹುಬಲಿಗಳನ್ನು ರಾಜರನ್ನಾಗಿ ಮಾಡಿದುದು, ಅನಂತರ ಸರ್ವಸಂಗಪರಿತ್ಯಾಗಿಯಾಗಿ ದಿಗಂಬರನಾದುದು—ಈ ವಿಚಾರಗಳನ್ನು ಪೂರ್ವಪುರಾಣದಲ್ಲಿ ೧೫೭ ಶ್ಲೋಕಗಳಲ್ಲಿ ಬಣ್ಣಿಸಲಾಗಿದೆ. ಪಂಪನು ಈ ಭಾಗವನ್ನು ಆದಷ್ಟು ಸಂಗ್ರಹಿಸಿದ್ದಾನೆ. ಸ್ವಾಮಿಯನ್ನು ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು ಹೋಗುವಾಗ ದೇವತೆಗಳು ಗಗನಮಂಡಲವನ್ನು ವ್ಯಾಪಿಸಿದ್ದ ವೈಭವವನ್ನು ಪೂರ್ವಪುರಾಣದಲ್ಲಿ ವರ್ಣಿಸಲಾಗಿದೆ. ಅದನ್ನು ಪಂಪನು ಅನಾವಶ್ಯಕವೆಂದು ಕೈಬಿಟ್ಟಂತೆ ತೋರುತ್ತದೆ. ಆದರೆ ಪುರಜನರು ಹೇಳಿಕೊಳ್ಳುವ ಮಾತುಗಳನ್ನು ಪಂಪನೂ ಸಹ ಕಳೆಯೇರುವಂತೆ ಉತ್ಸಾಹದಿಂದ ನುಡಿದಿದ್ದಾನೆ.

> ಯದಾಪ್ರಭೃತಿ ದೇವೋಯಮವತೀರ್ಣೋ ಧರಾತಲಂ |
> ತದಾಪ್ರಭೃತಿ ದೇವಾನಾಂ ನ ಗತ್ಯಾಗಮವಿಚ್ಛಿದಾ || (ಪೂರ್ವಪು.xvii-೧೪೮)

ಈ ಸ್ವಾಮಿಯು ಭೂಮಿಗೆ ಅವತರಿಸಿದಂದಿನಿಂದ ದೇವತೆಗಳು ಬರುವುದಕ್ಕೂ ಹೋಗುವುದಕ್ಕೂ ವಿರಾಮವೇ ಇಲ್ಲ.

ಈ ಮಾತು ಪಂಪನಲ್ಲಿ ಮಾರ್ನುಡಿಗೊಂಡಿರುವ ಬಗೆ ಹೀಗಿದೆ—

> ಅರಸನ ಪುಟ್ಟಿದಿಂಬಟೆಯಿಮೀ ದಿವಿಜಾಳಿಗೆ ಮಾಣ್ಬುದಿಲ್ಲ ಪೋ
> ಬರವಿವರುಯ್ವರುಂ ಮಗುಟೆತರ್ಪ್ಪರುಮಪ್ಪುದಱಿಂದಮಿಲ್ಲಿ ಕೊ
> ಕ್ಕರಿಕೆಗೆ ಪೇೞಿಮಾವುದೆಡೆ ದೇವನಿನಿಲ್ಲಿಗೆ ತರ್ಪ್ಪರೇಕೆ ಮಂ
> ದರಶಿಖರಾಗ್ರದೊಳ್ ಮಿಸಿಸಿ ಮುನ್ನಿವರಿಲ್ಲಿಗೆ ತಂದರಲ್ಲರೇ (ಆದಿಪು. ix-೭೪)

ಅರಸರು ಹುಟ್ಟಿದಂದಿನಿಂದ ಈ ದೇವತೆಗಳಿಗೆ ಇಲ್ಲಿಗೆ ಬಂದು ಹೋಗುವುದು ತಪ್ಪಲೇ ಇಲ್ಲ! ಇವರೇ ಒಯ್ಯುವವರೂ ತರುವವರೂ ಆಗಿದ್ದರಾದ್ದರಿಂದ ಇದರಲ್ಲಿ ಬೇಸರಕ್ಕೆ ಏನು ಅವಕಾಶ? ಆದಿದೇವನನ್ನು ಇಲ್ಲಿಗೇಕೆ ತರುತ್ತಾರೆ? ಇವರೇ ಅಲ್ಲವೆ ಮಂದರ ಪರ್ವತದಲ್ಲಿ ದೇವನಿಗೆ ಅಭಿಷೇಕ ಮಾಡಿ ಈ ಹಿಂದೆ ಇಲ್ಲಿಗೆ ತಂದವರು? ಎಂದು ಮಾತನಾಡಿಕೊಳ್ಳುವರು.

ಪೂರ್ವಪುರಾಣದಲ್ಲಿ ಪುರಜನರು 'ದೇವತೆಗಳು ನಿಷ್ಕಾರಣವಾಗಿ ಸ್ವಾಮಿಗೆ ವೈರಾಗ್ಯವನ್ನು ತಂದಿಟ್ಟಿರುವರೆಂದು' ಅಜ್ಞಾನಿಗಳಂತೆ ಮಾತನಾಡಿಕೊಳ್ಳುವರು. ಆದರೆ ಪಂಪನು ಪುರಜನರನ್ನು ಉನ್ನತಸ್ತರದಲ್ಲಿರುವವರಂತೆ ಚಿತ್ರಿಸಿದ್ದಾನೆ. ದೇವತೆಗಳು ಮಾಡುವ ಕಾರ್ಯದಲ್ಲಿ ಏನೋ ಅಂತರಾರ್ಥವಿರಲೇಬೇಕೆಂದು ಗ್ರಹಿಸುತ್ತಾರೆ. ಕೆಲವು ವಿವೇಕಿ

ಗಳಂತು 'ಇನ್ನು ಆದಿದೇವನು ಲೌಕಿಕತೆಗೆ ಹಿಂದಿರುಗುವನೆಂಬ ಇಚ್ಛೆಯನ್ನು ತ್ಯಜಿಸಿರಿ' ಎಂದು ಸ್ಪಷ್ಟವಾಗಿಯೇ ನುಡಿಯುವರು.

ಆದಿದೇವನ ಪತ್ನಿಯರಾದ ಯಶಸ್ವತಿ-ಸುನಂದೆಯರ ಪಾತ್ರ ಈ ಸಂದರ್ಭದಲ್ಲಿ ಸಾಮಾನ್ಯಸ್ತರದಲ್ಲಿ ಸಹಜವಾಗಿ ಕಂಡರೂ ವೃಷಭನ ಪತ್ನಿಯರಾಗಿ ಇವರ ಸಂಸ್ಕಾರ ಇಷ್ಟೇನೇ ಎನಿಸುತ್ತದೆ. ಪೂರ್ವಪುರಾಣದಲ್ಲಿ ಅವರ ಪಾತ್ರದ ಘನತೆಯನ್ನು ಸ್ವಲ್ಪ ಮಟ್ಟಿಗಾದರೂ ಕಾಯ್ದಿರಿಸಿಕೊಳ್ಳಲಾಗಿದೆ. 'ಸ್ವಾಮಿಯ ಇಚ್ಛಾನುಸಾರಿಗಳಾದ ಯಶಸ್ವತೀ-ಸುನಂದೆಯರು ಅಂತಃಪುರದ ಮುಖ್ಯಸ್ತ್ರೀಯರಿಂದ ಸುತ್ತಲ್ಪಟ್ಟವರಾಗಿ ಪೂಜಾ ದ್ರವ್ಯದೊಡನೆ ಹಿಂಬಾಲಿಸಿ ಹೋದರು' (xvii-೬೯) ಎಂಬ ವೃತ್ತಾಂತ ಪೂರ್ವಪುರಾಣದಲ್ಲಿ ಕಂಡುಬರುತ್ತದೆ. ಪೂರ್ವಪುರಾಣದಲ್ಲಿ ಕಾಯ್ದಿಟ್ಟ ಈ ಘನತೆ ಆದಿಪುರಾಣದಲ್ಲಿಯಾಗಲಿ ಇತರ ಕನ್ನಡ ಆದಿತೀರ್ಥಂಕರ ಕಾವ್ಯಗಳಲ್ಲಿಯಾಗಲಿ ಕಂಡುಬರುವುದಿಲ್ಲ. ಪಂಪನಲ್ಲಿ ಈ ಸಂದರ್ಭ ಹೀಗೆ ಮೂಡಿ ಬಂದಿದೆ :

ತನಯರನಿಟ್ಟು ಸಂತತಿಯೊಳಿಂತೆಮಗಂ ಬಗೆವೇಟಿದೇಕೆ ಪೋ
ದನೊ ನೃಪನೆಂತು ಸೈರಿಸುವೆವಯ್ಯ ವಿಯೋಗಮನೆಂದು ಸೋರ್ವ್ವ ಕ
ಣ್ಬನಿಯ ತೆರಳ್ಕೆ ಗದ್ಗದಿಕೆಗೊಳ್ವಸರಂ ಮಿಗೆ ಪೋದರಾತ್ಮನಾ
ಥನ ಬಟಿಯಂ ಮನಂ ಮಱುಕಮುಯ್ಯೆ ಯಶಸ್ವತಿಯುಂ ಸುನಂದೆಯುಂ

(ಆದಿಪು. ix-೭೬)

ತನಯರನ್ನು ಮುಂದಿನ ವಂಶಪರಂಪರೆಯಲ್ಲಿ ತೊಡಗಿಸಿ ನಮಗೂ ತನ್ನ ಮನೋಗತಿಯನ್ನು ತಿಳಿಸದೆಯೆ ಈ ನೃಪನೇಕೆ ಹೋದನು ? ಇವನಗಲಿಕೆಯನ್ನು ಸೈರಿಸುವುದು ಹೇಗೆ? ಎಂದು ಗದ್ಗದಸ್ವರದಿಂದ ಬಿಕ್ಕಿ ಬಿಕ್ಕಿ ಕಣ್ಣೀರು ಸುರಿಸುತ್ತ ಯಶಸ್ವತೀ ಸುನಂದೆಯರು ತಮ್ಮ ಪತಿಯ ಹಿಂದೆ ವ್ಯಥೆಯಿಂದ ಹಿಂಬಾಲಿಸಿ ಹೋದರು. ಹೀಗೆ ದುಃಖಗೊಂಡು ಹಿಂಬಾಲಿಸಿ ಹೋದ ಯಶಸ್ವತಿ-ಸುನಂದೆಯರನ್ನು ಅಂತಃಪುರದ ವೃದ್ಧಸ್ತ್ರೀಯರು—'ಅರಸರೀಗಲೇ ಬರುವರು; ಹೆದರಿಕೆಯಿಲ್ಲ' ಎಂದು ಸಮಾಧಾನಪಡಿಸಿ ರಾಜಮಂದಿರಕ್ಕೆ ಕರೆದುಕೊಂಡು ಹೋದರಂತೆ! ಇದು ಪಂಪನು ಕೊಡುವ ಚಿತ್ರಣ. ಎಲ್ಲ ರೀತಿಯಿಂದಲೂ ಆದಿನಾಥನಿಗೆ ಸಮ-ಸಮವಾಗಿ ನಿಂತ ಈ ಸಾಧ್ವಿಯರು ಇಲ್ಲಿ ಮಾತ್ರ 'ಸಮ'ನಾಗಿ ನಿಲ್ಲದಾಗುತ್ತಾರೆ. ಪೂರ್ವಪುರಾಣದಲ್ಲಿಯಾದರೂ ಅವರು ಈ ಸಂದರ್ಭದಲ್ಲಿ ದೀಕ್ಷೆಗೊಂಡ ವಿಚಾರ ಬರುವುದಿಲ್ಲ. ದಾದಿಯರು ಸಮಾಧಾನ ಮಾಡಿದ ಮೇಲೆ ಪೂಜಾಸಾಮಗ್ರಿಗಳನ್ನು ಹಿಡಿದು ಸ್ವಾಮಿಯನ್ನು ಹಿಂಬಾಲಿಸಿದರೆಂದಷ್ಟೇ ಬರುತ್ತದೆ. ಆದರೆ ಪಂಪನ ಚಿತ್ರಣದಲ್ಲಿ ಇವರಿಗೆ ಈ ಒಂದು ಸಂಸ್ಕಾರವಿರುವಂತೆಯೂ ಕಂಡುಬರುವುದಿಲ್ಲ. ಇದೊಂದು ಕುಂದೆನ್ನುವಂತೆ ಕಂಡುಬರುತ್ತದೆ.

ಆದಿದೇವನ ಪರಿನಿಷ್ಕ್ರಮಣ ಭಾಗವು ಪಂಪನಲ್ಲಿ ೭ ವಚನ ಹಾಗೂ ೨೦ ಪದ್ಯಗಳಲ್ಲಿ ಬಹುಮಟ್ಟಿಗೆ ಪೂರ್ವಪುರಾಣದ ಅಭಿಪ್ರಾಯಗಳನ್ನೊಳಗೊಂಡು ಸಂಗ್ರಹಿತವಾಗಿದೆ. ಕೆಲವೆಡೆ ತದ್ರೂಪವೆಂಬಂತೆ ಕನ್ನಡಿಸಿದ್ದಾನೆ.

ತದಂಗವಿರಹಾದ್ಭೇಜುರ್ವಿಚ್ಛಾಯತ್ವಂ ತದಾ ಭೃಶಂ |
ದೀಪ್ರಾಣ್ಯಾಭರಣಾನಿ ಪ್ರಾಕ್ ಸ್ಥಾನಭ್ರಂಶೇ ಹಿ ಕಾ ದ್ಯುತಿಃ || (ಪೂರ್ವಪು. xvii-೧೮೭)

ಆಗ ಆಭರಣಗಳು ಮೊದಲು ಪ್ರಕಾಶಮಾನವಾಗಿದ್ದರೂ ಸ್ವಾಮಿಯ ಶರೀರದ ವಿಯೋಗದಿಂದ ಕಾಂತಿರಹಿತವಾದವು. ನ್ಯಾಯವೇ ಸ್ಥಾನಭ್ರಷ್ಟವಾದರೆ ಕಾಂತಿಯೆಲ್ಲಿ ಬಂದೀತು?

ನಾನಾ ಭೂಷಣವಸ್ತ್ರ | ನೂನಸ್ರಗ್ರುಚಿಸನಾಥನಿಂ ಕಳೆಯಲೊಡಂ
ತಾನೆಸೆದುದಿಲ್ಲದೆಂತುಂ | ಸ್ಥಾನಭ್ರಷ್ಟಂಗೆ ತೇಜಮೆಂಬುದುಮುಂಟೇ? (ಆದಿಪು. ix-೭೮)

ಅವನಿಂದ ಕಳಚಲಾದ ಆಭರಣ, ವಸ್ತ್ರ, ಮಾಲ್ಯಾದಿಗಳು ಆಗ ಪ್ರಕಾಶಿಸದೆ ಹೋದವು. ಸ್ಥಾನಭ್ರಷ್ಟನಾದವನಿಗೆ ತೇಜಸ್ಸೆಂಬುದುಂಟೆ?

ಉತ್ತಮವಾದ ಸುಂದರವಾದ ಭಾವನೆಗಳನ್ನು ಯಥಾವತ್ತಾಗಿ ಕನ್ನಡದಲ್ಲಿ ಮೂಡಿಸುವುದರಲ್ಲಿ ಪಂಪನು ಯಶಸ್ವಿಯಾಗಿದ್ದಾನೆ.

ಬರೆಚೈತ್ರಕೃಷ್ಣಪಕ್ಷಂ | ದೊರೆಕೊಳೆ ನವಮಿಯೊಳಮುತ್ತರಾಷಾಢಂ ದು
ರ್ಧರ ಜಿನ ದೀಕ್ಷೆಯನಘಕುಲ | ಕರ ಚಂಡಂ ಮೂಱು ಜಾವದಾಗಳ್ ಕೊಂಡಂ
(ಆದಿಪು. ix-೭೯)

ಆಗ ಪರಮನು ಕಿತ್ತುಹಾಕಿದ ಕೇಶಗಳನ್ನು ದೇವೇಂದ್ರನು ಕ್ಷೀರಸಾಗರದಲ್ಲಿ ಹಾಕಿದನು. ಪರಿನಿಷ್ಕ್ರಮಣ ಕಲ್ಯಾಣವನ್ನು ಮನ್ನಿಸಿ ಹಿಂದಿರುಗಿದನು.

ಪಂಪನು ಕಥಾವಸ್ತುವಿಗೆ ಪೂರ್ವಪುರಾಣಕ್ಕೆ ಋಣಿಯಾಗಿದ್ದರೂ ನಿರೂಪಣೆಯಲ್ಲಿ ತನ್ನದೇ ಆದ ಕಾವ್ಯೋಚಿತಮಾರ್ಗವನ್ನು ಅನುಸರಿಸಿದ್ದಾನೆ. 'ಪೂರ್ವಪುರಾಣ'ದಲ್ಲಿಯ ಈ ಸಂದರ್ಭವನ್ನು 'ಆದಿಪುರಾಣ'ದ ರಸಸೃಷ್ಟಿಯೊಡನೆ ಹೋಲಿಸಿ ನೋಡಿದರೆ ಪಂಪನ ಅಪೂರ್ವ ಪ್ರತಿಭೆಯನ್ನು ಮನಗಾಣಬಹುದು. ಒಂದರಲ್ಲಿ ಪ್ರಾಚೀನ ಪುರಾಣದ ಸಾಂಪ್ರದಾಯಿಕ ಬೋಧನೆಯಿದ್ದರೆ ಇನ್ನೊಂದರಲ್ಲಿ ಮಾರ್ಗಕಾವ್ಯದ ರಸಪೂರ್ತಿಯಿದೆ.'[೬೫]

## ಉತ್ತರಕಾಲೀನ ಕಾವ್ಯಗಳು

**ಚಾವುಂಡರಾಯಪುರಾಣ :** ವೃಷಭನಾಥನ ವೈರಾಗ್ಯ ಸನ್ನಿವೇಶವು (ನೀಲಾಂಜನೆಯ ನೃತ್ಯಪ್ರಸಂಗ) ಪೂರ್ವಪುರಾಣದಲ್ಲಿ ಬರುವಂತೆ ಸಂಕ್ಷೇಪವಾಗಿ ಬಂದಿದೆ. ಆದಿಪುರಾಣವನ್ನು ಕವಿ ಈ ಪ್ರಸಂಗದಲ್ಲಿ ಅನುಸರಿಸಿರುವುದು ಕಂಡುಬರುವುದಿಲ್ಲ. ಅನಂತರ ಬರುವ ಸಂಸಾರದ ಅನಿತ್ಯತೆಯನ್ನು ವರ್ಣಿಸುವಾಗ 'ದೇಹಾನಿತ್ಯತೆಯನ್ನು ಭಾವಿಸಿ ಸಂಸಾರ ಭೋಗದಲ್ಲಿ ವಿರಕ್ತನಾದನೆಂಬುದನ್ನು ಮಾತ್ರ ಹೇಳಿ, ಪೂರ್ವಪುರಾಣ, ಆದಿಪುರಾಣಗಳಲ್ಲಿ ಬರುವ ವಿವರಣೆಗಳನ್ನು ಕೈಬಿಟ್ಟಿದ್ದಾನೆ. ಸಾರಸ್ವತ, ಆದಿತ್ಯ, ಅರುಣ, ಗರ್ದತೋಯ, ತುಷಿತ, ಅವ್ಯಾಬಾಧ, ಅರಿಷ್ಟರೆಂಬ ಲೋಕಾಂತಿಕ ದೇವರು ನೀಡುವ ಪರಿನಿಷ್ಕ್ರಮಣದ ಉದ್ದೀಪನಾ ನುಡಿಗಳು ಪೂರ್ವಪುರಾಣ, ಆದಿಪುರಾಣಗಳಲ್ಲಿ ವಿವರವಾಗಿ ಬಂದಿವೆ. ಇಲ್ಲಿ ಅದು ಒಂದೇ ಒಂದು ವಾಕ್ಯದಲ್ಲಿ ಮುಗಿದಿದೆ. 'ಪದಿನೆಂಟು ಕೋಟಿ ಕೋಟಿ ಸಾಗರೋಪಮಕಾಲಂ ಮುಸುಳ್ದಿರ್ದ ಧರ್ಮಮಂ ದೇವಾ ನೀನುಜ್ವಳಂ ಮಾಳ್ಪುದೆಂದು' ಪ್ರತಿಬೋಧಿಸಿದರೆಂದಷ್ಟೇ ಬರುತ್ತದೆ. ಈ ಭಾಗದಲ್ಲಿ ಕವಿ ಆದಿಪುರಾಣದಲ್ಲಿ ಬರುವ ಒಂದು ಕಂದಪದ್ಯದ ಭಾಗವನ್ನು ಗದ್ಯದಲ್ಲಿ ಇಟ್ಟಂತೆ ತೋರುತ್ತದೆ. ಉದಾ :

ವಿಶದಯಶಧರ್ಮ್ಮರ್ವಷ್ಟಾ
ದಶಕೋಟ್ಯನುಕೋಟಿ ಸಾಗರೋಪಮಕಾಲಂ
ಪ್ರಶಮಿಸಿ ನಿಂದುದದಂ ನೀಂ
ವಿಶದಂ ಮಾಳ್ಪುದು ಜಗದ್ವಿಶೇಷಕ ಚರಿತಾ (ಆದಿಪು. ix-೬೩)

ವೃಷಭನಾಥನು ಭರತ ಬಾಹುಬಲಿಯರಿಗೆ ಅಧಿರಾಜ-ಯುವರಾಜ ಪದವಿಯನ್ನಿತ್ತು ಉಳಿದ ಮಕ್ಕಳಿಗೂ ರಾಜ್ಯವನ್ನು ಹಂಚಿಕೊಟ್ಟ ವಿಚಾರವೂ ನಾಮಮಾತ್ರವಾಗಿ ಬಂದಿದೆ. ಪರಿನಿಷ್ಕ್ರಮಣ ಕಲ್ಯಾಣವನ್ನು ಮಾಡಿದ ಕ್ರಿಯೆಯು ಪೂರ್ವಪುರಾಣ, ಆದಿಪುರಾಣಗಳಿಗೆ ಅನುಸಾರವಾಗಿ ಬಂದಿದೆ. ಅನಂತರ ವೃಷಭನಾಥನು ಸುದರ್ಶನ ಸಿವಿಗೆಯನ್ನೇರಿ ದೀಕ್ಷೆಗೆ ತೆರಳಿದಾಗ ಯಶಸ್ವತಿ-ಸುನಂದೆಯರು ದುಃಖಿಸುವಾಗ 'ಅರಸನೀಗಳೆ ಬರ್ಕುಮೆಂದು' ಅಂತಃಪುರದ ವೃದ್ಧೆಯರು ಹಿಂದಿರುಗಿಸಿ ಕರೆದೊಯ್ದರೆಂಬಲ್ಲಿ ಕವಿ ಪಂಪನನ್ನು ಅನುಸರಿಸಿರುವುದನ್ನು ಗಮನಿಸಬಹುದಾಗಿದೆ.

**ಹಸ್ತಿಮಲ್ಲನ ಪೂರ್ವಪುರಾಣ** : ಈ ಭಾಗದಲ್ಲಿ ಕವಿ ಚಾವುಂಡರಾಯಪುರಾಣ, ಆದಿಪುರಾಣಗಳನ್ನು ಅನುಸರಿಸಿದ್ದಾನೆ. ಚಾವುಂಡರಾಯಪುರಾಣದಲ್ಲಿ ಬರುವ ಅಲ್ಲೊಂದು ಇಲ್ಲೊಂದು ಪದಪುಂಜಗಳನ್ನು ಕೈಬಿಟ್ಟು ಕೆಲವೆಡೆ ಪರ್ಯಾಯಪದಗಳನ್ನು ಜೋಡಿಸಿ ಸಂಕ್ಷೇಪವಾಗಿ ಬರೆದಿದ್ದಾನೆ. ಉದಾಹರಣೆ :

ಸಮತೆಯಂ ಭಾವಿಸಿ ಬಾಹ್ಯಾಭ್ಯಂತರ ಪರಿಗ್ರಹಮಂ ತೊಱೆದು ವಸ್ತ್ರಾಭರಣಾದಿಗಳಂ ತೊಲಗಿಸಿ ಪೂರ್ವಾಭಿಮುಖವಾಗಿ ಪಲ್ಯಂಕಾಸನದೊಳಿರ್ದು ನಮಃ ಸಿದ್ಧೇಭ್ಯಃ ಎಂದು ಕರ್ಮದ ಬೇರಂ ಪಱಿವಂತೆ ಪಂಚಮುಷ್ಟಿಯಿಂ ಕೇಶಪಾಶಮಂ ಪಱಿದು ಚೈತ್ರ ಬಹುಳ ನವಮಿಯೊಳುತ್ತರಾಷಾಢದೊಳ್ ಮೂಱುಜಾವದಾಗಳೆ ದೀಕ್ಷೆಯಂ ಕೈಕೊಂಡನಾಗಳ್ ಮನಃ ಪರ್ಯಯ ಜ್ಞಾನಮಾದುದಂತು ಚತುರ್ಜ್ಞಾನಧರನ ಕುಂತಳಮಂ ಸುರಪತಿ ರತ್ನದಪಡಲಿಗೆಯೊಳಾಂತುಕೊಂಡು ಪಾಲ್ಗಡಲೊಳಿಕ್ಕಿ ಪರಿನಿಷ್ಕ್ರಮಣ ಕಲ್ಯಾಣಮಂ ಮಾಡಿ ಪೋದಂ (ಚಾವುಂಪು. ಪುಟ ೪೫)

ಬಾಹ್ಯಾಭ್ಯಂತರ ಪರಿಗ್ರಹಮಂ ತೊಱೆದು ನಮಃ ಸಿದ್ಧೇಭ್ಯಃ ಎಂದು ಕುರುಳ್ಗಳಂ ಪಱಿದು ಸುರಪತಿರತ್ನದಪಡಲಿಗೆಯೊಳಾಂತುಕೊಂಡು ಪಾಲ್ಗಡಲೊಳಿಕ್ಕಿ (ಹಪೂರ್ವ.)

ಯಶಸ್ವತಿ ಸುನಂದೆಯರ ಪ್ರಸಂಗದಲ್ಲಿ ಚಾವುಂಡರಾಯಪುರಾಣಕ್ಕಿಂತಲೂ ಹೆಚ್ಚಿನ ಅಂಶಗಳನ್ನು ಸೇರಿಸಿ ವಿವರಿಸಿದ್ದಾನೆ. "ಇತ್ತಂ ಯಶಸ್ವತಿ ಸುನಂದಾ-ದೇವಿಯರ್ ತಮ್ಮ ಪ್ರಾಣೇಶ್ವರಂ ತಮಗೆ ಪೇಳದೆಲ್ಲಿಗೆ ಪೋದಪನೋ ನಾವುವೊಡನೆ ಪೋಪವೆಂದರ ಮನೆಯಂ ಪೊಱಮಟ್ಟು ಪೋಗೆ ಬುದ್ಧಿವಂತರರಸು ಬಂದಪಂ ನೀವೇಕೆ ಪೋಪಿರೆಂ ದಾಸೆಯ ನುಡಿದರಮನೆಗೆ ತಿರುಗಿಸಿ" ಎಂದು ಹೇಳುವಲ್ಲಿ ಕವಿಯು ಆದಿಪುರಾಣಕ್ಕೆ ಹೆಚ್ಚು ಹತ್ತಿರವಾಗಿ ಕಂಡುಬರುತ್ತಾನೆ.

**ಪುಣ್ಯಾಸ್ರವದ ಆದೀಶ್ವರರ ಕಥೆ** : 'ಸೌಧರ್ಮೇಂದ್ರನು ವೈರಾಗ್ಯ ಪುಟ್ಟಿಸಲಂತ ರ್ಮುಹೂರ್ತಾಯುಷ್ಯಮನುಳ್ಳ ನರ್ತಕಿ ನೀಲಾಂಜನೆಯನಾದೀಶ್ವರನ ಮುಂದೆ ಆಡಲ್ಕೊಡಗೊಂಡು ಬರಲ್' ಎಂಬುವ ಕಥಾಭಾಗದಿಂದ ಪರಿನಿಷ್ಕ್ರಮಣದ ಪೀಠಿಕೆ ಆರಂಭವಾಗುತ್ತದೆ. ಉಳಿದೆಡೆಗಳಲ್ಲಿ ದೇವೇಂದ್ರನು ಆದಿದೇವನ ಪರಿನಿಷ್ಕ್ರಮಣ ಕಾಲವನ್ನು ಅವಧಿಯಿಂದ ಅರಿತು ನಿಮಿತ್ತಮಾತ್ರವಾಗಿ ನೀಲಾಂಜನೆಯನ್ನು ಕರೆತರುತ್ತಾನೆಂಬ

ಅಂಶವು ಉಳಿದ ಕಾವ್ಯಗಳಲ್ಲಿ ಸೂಚ್ಯವಾಗಿ ಬಂದಿದ್ದರೆ ಇಲ್ಲಿ ವೈರಾಗ್ಯವನ್ನು ಹುಟ್ಟಿಸಲೆಂದು ಅಂತರ್ಮುಹೂರ್ತದ ಆಯುಷ್ಯವುಳ್ಳ ನರ್ತಕಿ ನೀಲಾಂಜನೆಯನ್ನು ಕರೆತಂದನೆಂದು ನೇರವಾಗಿ ಪ್ರತಿಪಾದಿತವಾಗಿದೆ.

ನೀಲಾಂಜನೆಯ ನೃತ್ಯದ ಬಗೆಗೆ ಒಂದೆರಡು ಮಾತುಗಳನ್ನು ಕವಿ ಪೂರ್ವಪುರಾಣಕ್ಕಿಂತ ಹೆಚ್ಚಾಗಿ ಹೇಳಿರುವುದು ಕಂಡುಬರುತ್ತದೆ. ಆದಿಪುರಾಣದ ವೈಭವೋಪೇತ ವರ್ಣನೆಯಂತೂ ಇಲ್ಲ. ಆದರೆ ಅದರ ಛಾಯೆ ಮಸುಕಾಗಿ ಕಂಡುಬರುತ್ತದೆ. ನೀಲಾಂಜನೆ ಸಕಳ ಸಂಪ್ರದಾಯ ಸಮನ್ವಿತೆಯಾಗಿ ಪೂರ್ವರಂಗವನ್ನು ಪ್ರವೇಶಿಸಿದಳು. ನೂರೆಂಟು ಕರಣ, ಹದಿನೆಂಟು ರೀತಿಯ ಶಿರೋಭೇದಗಳು ಶೋಭಿಸುವಂತೆ, ಮೂವತ್ತಾರು ಕಣ್ಗಳ ಭೇದವು ಅಳವಡಲು'ರಸಮಂ' ಬೀಱುತ್ತುಂ ದೇವಗಣಿಕೆ ನಟಿಸಿದಳಾಗಳ್' ಎಂದು ಕವಿ ಸಂಕ್ಷೇಪವಾಗಿ ಹೇಳಿದ್ದಾನೆ. ನೀಲಾಂಜನೆ ನೃತ್ಯವಾಡುತ್ತಿರಬೇಕಾದರೆ ಮಿಂಚು ಸಂಚರಿಸಿದಂತೆ ಆಕೆ ಅದೃಶ್ಯವಾದಳು. ಮತ್ತೊಬ್ಬ ನೀಲಾಂಜನೆಯನ್ನು ಸೃಷ್ಟಿಸುವ ವಿಚಾರ ಇಲ್ಲಿ ಬರುವುದಿಲ್ಲ. ಇಲ್ಲಿ ದೇವೇಂದ್ರನಿಗೆ ಆದಿದೇವನಲ್ಲಿ ವೈರಾಗ್ಯವನ್ನು ಹುಟ್ಟಿಸುವುದಷ್ಟೇ ಧ್ಯೇಯ. ರಸಭಂಗದ ಕಡೆಗೆ ಗಮನ ಹೋಗಿಲ್ಲ. ದೇಹಾನಿತ್ಯತೆಯ ಕಟು ಸತ್ಯ ಆದಿದೇವನ ಮನದಾಳಕ್ಕಿಳಿಯಿತು. ಈತನ ವೈರಾಗ್ಯವನ್ನು ಕಂಡು ಲೋಕಾಂತಿಕ ದೇವತೆಗಳು ಹೊಗಳಿದರು. ಭರತನಿಗೆ ಅಖಿಳ ರಾಜ್ಯವನ್ನೂ ಅಯೋಧ್ಯಾಪುರವನ್ನೂ ಬಾಹುಬಲಿಗೆ ಪೌದನಪುರವನ್ನೂ ಕೊಟ್ಟು, ವೃಷಭಸೇನನಿಗೆ ಪುರಿಮತಾಳಪುರವನ್ನೂ ಉಳಿದ ಕುಮಾರರಿಗೆ ಕಾಶ್ಮೀರ ದೇಶವನ್ನೂ ಕೊಟ್ಟನೆಂಬ ವಿವರಗಳಲ್ಲಿ ಕೊನೆಯ ಎರಡು ವಿವರಗಳು ಉಳಿದ ಆದಿ ತೀರ್ಥಂಕರನ ಚರಿತೆಗಳಲ್ಲಿ ದೊರೆಯವು.

ಸ್ವಾಮಿಯು ಮಂಗಳಸ್ನಾನಮಾಡಿ ಸುದರ್ಶನ ಸಿವಿಗೆ ಏರಿ ಹೋಗುವ ವಿವರ ಉಳಿದ ಕಾವ್ಯಗಳಲ್ಲಿ ಬರುವಂತೆಯೇ ಇದೆ. ಇಲ್ಲಿ ಕಚ್ಛ-ಮಹಾಕಚ್ಛಾದಿಗಳ ಸಮೇತ ಕೇಶಲೋಚನದ ಕ್ರಿಯೆಯು ನಡೆಯುತ್ತದೆ. ಉಳಿದ ಕಾವ್ಯಗಳಲ್ಲಿ ಸ್ವಾಮಿಯ ಪರಿನಿಷ್ಕ್ರಮಣದ ಕಲ್ಯಾಣವಾದ ನಂತರ ಆತನ ಕುಂತಳಗಳನ್ನು ದೇವೇಂದ್ರನು ಕ್ಷೀರಸಾಗರದಲ್ಲಿ ಬಿಟ್ಟ ಮೇಲೆ ಅವರೂ ದೀಕ್ಷಿತರಾಗುವ ವಿಚಾರ ಬರುತ್ತದೆ.

ಯಶಸ್ವತಿ ಸುನಂದೆಯರ ಬಗೆಗೆ ಯಾವೊಂದು ಉಲ್ಲೇಖವೂ ಬರುವುದಿಲ್ಲ.

**ಪುರುದೇವಚರಿತೆ** : ಕವಿ ನೇರವಾಗಿ ಆದಿಪುರಾಣಕ್ಕೆ ಋಣಿಯಾಗಿರುವುದೇ ಅಲ್ಲದೆ ತನ್ನದೇ ಆದ ಮಾತುಗಳನ್ನು ಸೇರಿಸಿ ಅದಷ್ಟು ದೀರ್ಘ ವಿವರಣೆಯೊಂದಿಗೆ ಕಾವ್ಯ ಶೈಲಿಯಲ್ಲಿ ಈ ಭಾಗವನ್ನು ಮೈದುಂಬಿಸಲು ಪ್ರಯತ್ನಿಸಿದ್ದಾನೆ.

ರಾಜಸಭೆಯ ಮುಂದೆ ನೃತ್ಯ ಪ್ರಾರಂಭವಾಗುತ್ತದೆ. ಕವಿ ನೀಲಾಂಜನೆಯ ನೃತ್ಯದ ವಿವರವನ್ನು ಹೆಚ್ಚಾಗಿ ನೀಡದೆ ವೈರಾಗ್ಯಭಾವನೆಗೆ ಹೆಚ್ಚು ಒತ್ತನ್ನು ಕೊಟ್ಟು ವಿವರಿಸಿದ್ದಾನೆ. ಬಹುಶಃ ನೀಲಾಂಜನೆಯ ನೃತ್ಯದ ವಿವರಣೆ ಪಂಪನ ಮುಂದೆ ಎಷ್ಟೇ ಆಗಲಿ ಮಸುಕಾಗುವುದೆಂಬ ಭೀತಿ ಕವಿಗೂ ಇದ್ದಿರಬೇಕು. 'ಆಡುವ ನೀಲಾಂಜನೆಯ ವಿಲಾಸವು ನೋಡುವ ಸುರಸಭೆಯನ್ನು ಉಲ್ಲಾಸದಿಂದ ಮೂಡಿ ಮುಳುಗಿಸಿತು, ನಿಮಿಷ ಮಾತ್ರದೊಳು ಕಣ್ಮಾನವನ್ನು ಸೂರೆಮಾಡಿತು' ಎಂದು ಹೇಳಿ

ಪುರಂದರನಾಚಾರ್ಯನಾಗೆ ನೀಲಾಂಜನೆ | ಚರಣ ಕುಶಲ ನಾಡಿಪೋಪ
ಪರಮನ ಮನವ ಪೊಕ್ಕುದುಮೆನೆಮಿಕ್ಕಿನ | ನರಸುರಾದಿಗಳ ಪಾಡೇನು? (ಪುರುಚ. vi-೮೮)

ಎಂದು ಕವಿ ಪಂಪನ ಅಭಿಪ್ರಾಯವನ್ನು ಅತಿಸಂಕ್ಷಿಪ್ತವಾಗಿ ಸಾಕಷ್ಟು ಪ್ರಭಾವಕಾರಿಯಾಗಿ ಮಂಡಿಸಿದ್ದಾನೆ.

ಲೌಕಿಕ ನಶ್ವರತೆಯ ಭಾವಗಳನ್ನು ನಿರೂಪಿಸುವಾಗ ಕವಿ ಪಂಪನ ಹಲವಾರು ಮಾತುಗಳನ್ನು ನೇರವಾಗಿ ಅನುಕರಿಸಿದ್ದಾನೆ. ಅಲ್ಲಲ್ಲಿ ತನ್ನತನವನ್ನು ಮೆರೆಸಿದ್ದಾನೆ. ಉದಾಹರಣೆಗೆ :

ಅಕ್ಕಟ ಸಂಸಾರಿಗಳ ರೂಪಯವ್ವನ | ಮಿಕ್ಕಮೆ ಕ್ಷಣಮಾತ್ರದೊಳು
ರಕ್ಕಸಕಾಲನ ಕೈಯೊಳು ಕಬಳವ |ಸಿಕ್ಕಿದಂತಲ್ತೆ ಶರೀರ (vi-೯೧)

ಮೊದಲ ಸಾಲು ಪೂರ್ವಪುರಾಣ ಆದಿಪುರಾಣಗಳಲ್ಲಿಯ ಭಾವವನ್ನು ಮಂಡಿಸಿದರೆ ಉಳಿದ ಭಾಗವು ಪ್ರಭಾವಕಾರಿಯುತವಾದ ಈತನ ಮಾತುಗಳೇ ಆಗಿವೆ.

ಸುರಧನು ನೀರ ಬುದ್ಬುದ ವಿದ್ಯುದ್ಭಯ | ಲ್ಬೋರೆ ಮಂಜುಪುಂಜಸಂಧ್ಯಾರುಣ
ದರಿಯ ಭೂರುಹಮಿಂದ್ರಜಾಲ ಸ್ವಪ್ನದ ಸಿರಿ | ತೆರೆಮಾಲೆಯಂದಡಧ್ರುವವು (ಪುರುಚ.vi-೯೨)

ಎಂಬ ಮಾತುಗಳಲ್ಲಿಯೂ ಪಂಪನ ಭಾವನೆ ಸಾಕಷ್ಟು ಮಿಳಿತವಾಗಿದೆ.

ಮುಂದೆ ಕವಿ ದ್ರವ್ಯಸಂಸಾರ, ಕ್ಷೇತ್ರಸಂಸಾರ, ಕಾಲಸಂಸಾರ, ಭವಸಂಸಾರ, ಭಾವಸಂಸಾರಗಳ ವಿವರವನ್ನು ನೀಡಿ ಮತ್ತೆ ಪಂಪನ ಮಾತಿನ ವೈಖರಿಗೇ ಬಂದಿದ್ದಾನೆ :

ಸುರಲೋಕದ ಸುರವಾರ್ಧಿಯೊಳ್ ಪಂಚಾಗ್ನಿ | ಯುರಿ ಕಿಡದೀಯಾತ್ಮನಿಗೆ
ನರಭೋಗಮೆಂಬ ಪುಲ್ಪನಿಯನೀಯಲು ಪರಿ | ಹರಿಪುದೆ ದುರುಳಪಂಚಾಗ್ನಿ (ಪುರುಚ. vi-೧೦೧)

ಲೌಕಿಕ ನಶ್ವರತೆಗೆ ಪುಷ್ಟಿಯನ್ನು ನೀಡುವ ತನ್ನದೇ ಆದ ಕೆಲವು ಮಾತುಗಳನ್ನು ಜೋಡಿಸಿದ್ದಾನೆ :

ಬಹ್ವಾರಂಭ ಪರಿಗ್ರಹಾಪೇಕ್ಷಕ | ವಿಹ್ವಳ ನಿಂದ್ರಿಸುಖಾರ್ತಿ
ಗಹ್ವರದೊಳು ರಾತ್ರಿಯೊಳು ಸಿಕ್ಕಿದ ಚಕ್ರ | ವಾಲದಂತು ಮರುಗನೆ (ಪುರುಚ. vi-೧೦೨)

ಬಹ್ವಾರಂಭ ಪರಿಗ್ರಹಿಯ ವ್ಯರ್ಥ ವಿಹ್ವಲಕ್ಕೆ ಚಕ್ರವಾಕದ ವ್ಯರ್ಥ ಪ್ರಲಾಪವನ್ನು ಹೋಲಿಕೆ ನೀಡಿದ್ದಾನೆ. ಕವಿಸಮಯ ಮಾದರಿಯ ಹೋಲಿಕೆಯಾದರೂ ಅಭಿಪ್ರಾಯವನ್ನು ಸ್ಪಷ್ಟಪಡಿಸುವಲ್ಲಿ ಅದು ಸಹಕಾರಿಯಾಗಿದೆ.

ಮೂರು ಗಳಿಗೆ ಬಾಳುವವನಿಗೂ ಮುವತ್ತು ಮೂರು ಸಾಗರಕಾಲ ಬಾಳಿದವನಿಗೂ ಮರಣವು ಹತ್ತಿರ ಬಂದಾಗ ಒಂದೇ ಪ್ರಕಾರದ ದುಃಖವುಂಟಾಗುವುದು. ಕರ್ಮಗಳನ್ನು ಕೆಡಿಸಿದಲ್ಲದೆ ಜೀವ ಸಂಕುಳಕ್ಕೆ ಎಲ್ಲಿಯ ಸುಖ? 'ಪರದ್ರವ್ಯದ ವಾಂಛೆ ಇಲ್ಲದಿಹುದೆ ಮೋಕ್ಷ' ಎಂದು ಸುಂದರವಾಗಿ ಕವಿ ಈ ಭಾಗವನ್ನು ನಿರೂಪಿಸಿದ್ದಾನೆ. ಅನಂತರ ಲೋಕಾಂತಿಕ ದೇವತೆಗಳು ವೈರಾಗ್ಯ ಭಾವನೆಗೆ ನೀಡುವ ಪುಷ್ಟಿ, ದೇವೇಂದ್ರಾದಿಗಳ ಆಗಮನ, ಭರತಾದಿಗಳಿಗೆ ವೃಷಭನು ರಾಜ್ಯವನ್ನು ಹಂಚಿದುದು—ಈ ಮೊದಲಾದ ಉಲ್ಲೇಖಗಳು ಬಂದಿವೆ.

ಪರಮನ ಚರಮಾಲಂಕಾರವನ್ನು ದೇವಾದಿಗಳು ಕಣ್ತುಂಬ ನೋಡಿದರೆಂಬ ಸಂದರ್ಭದಲ್ಲಿ ಕವಿ ಭರತಾದಿ ಮಕ್ಕಳು ತಂದೆಯಲ್ಲಿ ವಿನಂತಿಸಿಕೊಳ್ಳುವ ಮಾತು, ಅದಕ್ಕೆ ತಂದೆಯ

ಉತ್ತರ—ಇವುಗಳನ್ನು ಸೊಗಸಾಗಿ ಸೇರಿಸಿದ್ದಾನೆ.

ಭರತ ಮುಂತಾದ ಸುತರು ಬಂಧುವರ್ಗವು | ಚರಣಕೆರಗಿ ಪೇಳ್ದರಿಂತು
ಧರೆಯಭಾರವನೆನ್ನೊಳಾರೋಪಿಸಲು ನಾನು | ಧರಿಸಲಾರ್ಪೆನೆ ದೇವಮೆನಲು
ಮಲತರ ಮುರಿದು ಧರ್ಮವ ಕಾಯ್ದು ದುಷ್ಟರ | ಕುಲವ ನಿಗ್ರಹಿಸಿ ಕಡೆಯೊಳು
ಚಲದಿಂ ಮುಕ್ತಿಯ ಸಾಧಿಸುವುದು ಕ್ಷತ್ರಿಯ | ಕುಲಧರ್ಮದಿನರಿ ಮಗನೆ |
(ಪುರುಚ.vi-೧೨೩, ೧೨೪)

ಹೀಗೆ ಲೌಕಿಕ ಧರ್ಮನೀತಿಯನ್ನು ಅನಂತರ ಮುಕ್ತಿಯ ಮಾರ್ಗವನ್ನು ಸಮನ್ವಯಿಸಿ ನುಡಿದು ಸುದರ್ಶನ ಸಿವಿಗೆ ಏರಿ ವನಕ್ಕೆ ತೆರಳಿದನು.

ಯಶಸ್ವತಿ-ಸುನಂದೆಯರ ಪ್ರಸಂಗ ಚಾವುಂಡರಾಯಪುರಾಣ, ಹಸ್ತಿಮಲ್ಲನ ಪೂರ್ವ ಪುರಾಣಗಳಿಗನುಸಾರವಾಗಿ ಬಂದಿದೆ. ಉದಾಹರಣೆಗೆ :

ಅಂತಾಗಳೆಶಸ್ವತಿ ದೇವಿ ಸುನಂದೆಯರ್ | ಓಂತನೆ ತಗುಳ್ದೈದುತಿರಲು
ತಾಂತಿರುಗ್ಯೆತಪ್ಪ ನರನೆಂದೆಳೆದೊಯ್ದು | ರಂತಃಪುರವೃದ್ಧೆಯರು (ಪುರುಚ. vi-೧೩೧)

ದೀಕ್ಷಾವಿಧಿಯ ವರ್ಣನೆಯಲ್ಲಿಯೂ ಪಂಪನ ಅನುಕರಣೆಯನ್ನು ಕಾಣಬಹುದು. ಉದಾಹರಣೆಗೆ:

ಸ್ಮರಿಸಿ ತನ್ನೊಳಗಿಂದ್ರಸಿದ್ಧಷ್ಟಗುಣಗಳ | ದುರಿತವ ಪರಿದಿಡುವಂತೆ |
ಪರಿದಿಟ್ಟು ವಸ್ತ್ರಾಭರಣವಾದಿ ಬಾಹ್ಯಾಂ | ತರ ಸಂಗಮಿನಿಸಿಲ್ಲದಂತು (ಪುರುಚ. vi-೩೫)

ವೃಷಭನಾಥನು ಕರ್ಮಗಳನ್ನು ಬೇರುಸಹಿತ ಕಿತ್ತುಹಾಕುವಂತೆ ಲೋಚನ್ನು ಮಾಡಿ ಕೊಂಡನು ಎಂದು ಪಂಪನು ಹೇಳಿದ್ದರೆ (ಆದಿಪು. ix-೭೭), ಕವಿ ಇಲ್ಲಿ ವಸ್ತ್ರಾಭರಣಾದಿ ಗಳನ್ನು 'ದುರಿತವ ಪರಿದಿಡುವಂತೆ ಪರಿದಿಟ್ಟು' ಎಂದಿದ್ದಾನೆ.

ಒಟ್ಟಿನಲ್ಲಿ ಈ ಭಾಗ ಸಾಕಷ್ಟು ಕಾವ್ಯಮಯವಾಗಿದೆ. ಓದುಗರಿಗೆ ಬೇಸರವಾಗದಂತೆ ನಿರ್ವಹಣೆಯನ್ನು ಕವಿ ಮಾಡಿದ್ದಾನೆ.

**ಆದಿಪರಮೇಶ್ವರನ ಯಕ್ಷಗಾನ** : ಆದಿಪುರಾಣದ ಭಾವವನ್ನೇ ಕವಿ ತನ್ನ ಮಾತಿನಲ್ಲಿ ಸಂಕ್ಷೇಪಿಸಿ ಹೇಳಲು ಯತ್ನಿಸಿದ್ದಾನೆ. ನೀಲಾಂಜನೆಯ ನಾಟ್ಯದ ವಿವರವನ್ನು ಕೊಟ್ಟಿಲ್ಲ. 'ನೀಲಾಂಜನೆಯ ನೃತ್ಯವು ಶೃಂಗಾರ ರಸ ಸುಧಾಂಬುವನ್ನು ಸಭೆಗೆ ಎರೆಯಿತೆಂದಷ್ಟೇ ಹೇಳಿದ್ದಾನೆ. ಆಕೆ ಅದೃಶ್ಯೆಯಾದಾಗ 'ಸುರಸತಿಯೋ' 'ಸುರಗಿಣಿಯೋ' 'ವ್ಯಂತರ ದೇವ ತೆಯೋ'ಎಂಬಂತೆ ಅವಳಂತೆಯೇ ಇರುವ ನವನವೋಜ್ವಲ ಕಾಂತಿ 'ಭಾಸುರಕರಮಾಗಿ' ತುಂಬಿಬರುತ್ತದೆ. ಇದು ಪರಮನಿಗೆ ಮಾತ್ರ ವೇದ್ಯವಾಗುತ್ತದೆ.

ಅಂತರಾಳದಿ ತೋರಿ ಮಂಜಿನ ಸಂತೆ ಹರಿದವೊಲದೃಶ್ಯವಾಗಲು
ಚಿಂತಿಸಿಯು ಸಂಸ್ಕೃತಿಯ ಬಾಳಿದರಂತೆಯೆಂದು
ನಾರಿಯರ ನೆರೆಮೋಹ ಸೌಖ್ಯವು ಭೂರಿ ರಾಜ್ಯದ ವಿಭವದೇಳ್ಗೆಯು
ಕಾರಮೇಘದೊಲೊಡ್ಡುದೊರೆಯು ಪಾರ್ವುದೈಸೆ (ಆದಿಯ. ಪರಿಚ್ಛೇದ v)

ಎಂಬುದಾಗಿ ವೃಷಭನು ಚಿಂತಿಸಿ ಇದುವರೆಗೆ ತಾನು 'ಅಂತಕನ ಗೆಲುವಂಥ ಕಜ್ಜವನ್ನು ಅಂತುದಿಲ್ಲ'ವೆಂದು ಪರಿತಪಿಸಿದನು. ಇಲ್ಲಿ ಕವಿ ನೀಲಾಂಜನೆ ಅದೃಶ್ಯವಾದುದನ್ನು 'ಮಂಜಿನ ಸಂತೆ ಹರಿದಂತೆ' ಎಂದು ವರ್ಣಿಸಿರುವ ಭಾಗ ಪ್ರಭಾವಕಾರಿಯಾಗಿದೆ. ಕವಿಗೆ

ತನ್ನ ಮಾತಿನ ಧಾಟಿಯಲ್ಲಿ ತನ್ನ ಪೂರ್ವಕವಿಗಳ ಭಾವವನ್ನು ಉಳಿಸಿಕೊಂಡು ಹೇಳ ಬೇಕೆಂಬ ಕಳಕಳಿ ಇದೆ.

ಭರತಾದಿಗಳಿಗೆ ರಾಜ್ಯವನ್ನು ನೀಡುವ ವೃತ್ತಾಂತ, ಲೋಕಾಂತಿಕ ದೇವತೆಗಳ ಉಲ್ಲೇಖ ಇಲ್ಲಿ ಬರುವುದಿಲ್ಲ.

ದೇವೇಂದ್ರಾದಿಗಳು ಬಂದು ವೃಷಭನಾಥನಿಗೆ ಪರಿನಿಷ್ಕ್ರಮಣ ಕಲ್ಯಾಣವನ್ನು ಎಸಗಿ ದೇವಲೋಕಕ್ಕೆ ಮರಳುತ್ತಾರೆ. ಈ ಭಾಗದಲ್ಲಿ ಕವಿ ಚಾವುಂಡರಾಯಪುರಾಣಕ್ಕೆ ಹೆಚ್ಚು ಋಣಿಯಾಗಿರುವಂತೆ ಕಂಡುಬರುತ್ತಾನೆ.

ಯಶಸ್ವತಿ-ಸುನಂದೆಯರನ್ನು ಸಮಾಧಾನಪಡಿಸಿ ಅರಮನೆಗೆ ಕರೆದುಕೊಂಡು ಹೋಗುವ ಭಾಗದಲ್ಲಿ ಹಸ್ತಿಮಲ್ಲನ ಪೂರ್ವಪುರಾಣದ ಅನುಕರಣೆ ಕಂಡುಬರುತ್ತದೆ.

ಇದುವರೆಗೆ ಆದಿತೀರ್ಥಂಕರ ತನ್ನ ಹಿಂದಿನ ಭವಗಳಲ್ಲಿ ಅದೆಷ್ಟು ಬಾರಿ ವೈರಾಗ್ಯ ಪರನಾಗಿ ಸಂಸಾರವನ್ನು ತ್ಯಜಿಸಲಿಲ್ಲ! ಆದರೆ ಅಲ್ಲೆಲ್ಲಾ ಆತನಿಗೆ ಪ್ರತಿಫಲವಾಗಿ ದೊರೆ ತುದು ಭೋಗಸುಖ ಮಾತ್ರ. ಆದರೆ ಈ ವೈರಾಗ್ಯವಾದರೂ ಚರಮವೈರಾಗ್ಯ. ಆತ್ಮನನ್ನು ವೀತರಾಗತ್ವದ ನೆಲೆಗೆ ಏರಿಸುವ ವೈರಾಗ್ಯ! ಆದ್ದರಿಂದಲೇ ದೇವತೆಗಳಿಂದ ವೃಷಭನ ವೈರಾಗ್ಯದ ಕೊಂಡಾಟ. ಅದಕ್ಕಾಗಿ ಕಲ್ಪಿಸುವ ನಿಮಿತ್ತವಾದರೂ ಅಸಾಧಾರಣ. ಪಂಪನ ವರ್ಣನೆಯಲ್ಲಿ ಮೂಡುವ ನೀಲಾಂಜನೆಯ ನಾಟ್ಯರಸದ ಓಕುಳಿಯಾಗಲಿ, ವೃಷಭನ ವೈರಾಗ್ಯಭಾವರಸದ ಗಾಂಭೀರ್ಯವಾಗಲಿ ಓದುಗರ ಮನವನ್ನು ತುಂಬುವಂತಹವು. ನೀಲಾಂಜನೆಯ ನಾಟ್ಯರಸದಲ್ಲಿ ಮುಳುಗುವ ಸಹೃದಯರನ್ನು ವೈರಾಗ್ಯ ಭಾವರಸವು ಬಡಿದೆಬ್ಬಿಸುತ್ತದೆ, ಎಚ್ಚರಿಸುತ್ತದೆ, ಚೇತನಕ್ಕೆ ಆಧ್ಯಾತ್ಮಿಕ ಸಂಸ್ಕಾರವನ್ನುಣಿಸುತ್ತದೆ. ಸಂಸಾರದ ರೀತಿಯ ಬಗೆಗೆ ಕ್ಷಣಕಾಲವಾದರೂ ನಿಂತು ವಿಮರ್ಶಿಸುವ ರೀತಿಯನ್ನು ಕಲಿಸುತ್ತದೆ. ಮೇರುಸದೃಶವಾದ ಈ ಭಾಗದಲ್ಲಿ 'ಪಂಪನಿಗೆ ಪಂಪನೇ ಸರಿದೊರೆ' ಎಂದ ಮೇಲೆ ಉಳಿದ ಕವಿಗಳ ಬಗೆಗೆ ಹೇಳುವ ಆವಶ್ಯಕತೆ ಇಲ್ಲವಾದರೂ ಪುರುದೇವಚರಿತ ಮತ್ತು ಆದಿಪರಮೇಶ್ವರನ ಯಕ್ಷಗಾನಗಳ ಕೆಲವು ವರ್ಣನಾ ಭಾಗವನ್ನು ಗಣನೆಗೆ ತೆಗೆದುಕೊಳ್ಳದೆ ಇರುವಂತಿಲ್ಲ. ರಸೋತ್ಕರ್ಷವನ್ನು ತಾರದಿದ್ದರೂ ಅಲ್ಲಲ್ಲಿ ಸ್ವಾರಸ್ಯ ಪೂರ್ಣವಾಗಿ ಕಂಡುಬರುವ ಭಾಗಗಳು ತಲೆದೋರಿವೆ.

## ಕಚ್ಛ-ಮಹಾಕಚ್ಛಾದಿಗಳ ದೀಕ್ಷೆ; ದ್ರವ್ಯಲಿಂಗಿಗಳ ವೃತ್ತಾಂತ; ಆಹಾರದಾನ

**ಆದಿಪುರಾಣ-ಪೂರ್ವಪುರಾಣ** : ವೃಷಭನಾಥನೊಂದಿಗೆ ಸ್ವಾಮಿಭಕ್ತಿಯಿಂದಾಗಿ ನಾಲ್ಕು ಸಾವಿರ ಮಂದಿ ರಾಜರು ತಾವೂ ದಿಗಂಬರತ್ವವನ್ನು ಧರಿಸಿದರು. ಆದರೆ ಕ್ರಮೇಣ ಅವರು ಕಠಿಣ ತಪಸ್ಸನ್ನು ಸಹಿಸಲಾರದೆ ದ್ರವ್ಯಲಿಂಗಿಗಳಾದರು. ಕೆಲವರು ಗೆಡ್ಡೆಗೆಣಸು ಗಳನ್ನು ತಿನ್ನಲಾರಂಭಿಸಿದರು, ವಸ್ತ್ರಧಾರಿಗಳಾದರು. ಕೆಲವರು ಏಕದಂಡಧಾರಿಗಳಾದರು. ಕೆಲವರು ತ್ರಿದಂಡಧಾರಿಗಳಾದರು. ವೃಷಭನಾಥನ ಮೊಮ್ಮಗ ಮರೀಚಿಯು ವಸ್ತ್ರ ಧರಿಸಿ ಸಂನ್ಯಾಸಿಯಾಗಿ ಮಿಥ್ಯಾಶಾಸ್ತ್ರವನ್ನು ಉಪದೇಶಿಸಿದನು. ಕೆಲವರು ಮಿಥ್ಯಾದೃಷ್ಟಿಗಳಾದರು. ಈ ದ್ರವ್ಯಲಿಂಗಿಗಳ ಪ್ರಸಂಗವನ್ನು ಪೂರ್ವಪುರಾಣದಲ್ಲಿ ವಿಸ್ತಾರವಾಗಿ ಹೇಳಲಾಗಿದೆ. ಅಲ್ಲದೆ ಸ್ವಾಮಿಯ ನಿಶ್ಚಲಭಾವ ತಮಗಿಲ್ಲವಲ್ಲಾ ಎಂಬ ವಿನಯಭಾವ ಅವರಲ್ಲಿ ಹೆಚ್ಚಾಗಿ

ಕಂಡುಬರುತ್ತದೆ. ಉದಾಹರಣೆಗೆ ಕೆಲವರು ನಾಚಿಕೆಪಟ್ಟು ನಡುಗುವ ಶರೀರದಿಂದ ಸ್ವಾಮಿಗೆ ಪರಾಙ್ಮುಖರಾಗಿ ವ್ರತವನ್ನು ಬಿಟ್ಟರು. ಕೆಲವರು ಸ್ವಾಮಿಯ ಪಾದಗಳಲ್ಲಿ ಬಿದ್ದು 'ಪ್ರಭುವೇ! ನಮ್ಮನ್ನು ಕಾಪಾಡು. ಹಸಿವೆಯಿಂದ ಕೃಶವಾದ ಶರೀರವುಳ್ಳ ನಮ್ಮನ್ನು ಕ್ಷಮಿಸು' ಎಂದು ಸ್ವಾಮಿಯಿಂದ ಮರೆಯಾದರು. ದೊಡ್ಡ ಆನೆಗಳು ಹೊರುವ ಭಾರ ವನ್ನು ಸಣ್ಣ ಹೋರಿಗಳು ಹೊರಬಲ್ಲವೆ? ಆದ್ದರಿಂದ ಕ್ಷುಧಾದಿ ಬಾಧೆಗಳಿಂದ ವ್ರತಭ್ರಷ್ಟ ರಾಗಿ ಫಲಗಳನ್ನು ತಿನ್ನಬೇಕೆಂಬ ಇಚ್ಛೆಯಿಂದ ವನಗಳಿಗೆ-ಸರೋವರಗಳಿಗೆ ಹೋದರು (ಪೂರ್ವಪು. xviii-೪೬, ೫೧). ಆದರೆ ಪಂಪನಲ್ಲಿ ಸ್ವಾಮಿಯನ್ನು ನಿಂದಿಸುವ ಅಂಶ ಕಟುವಾಯಿತೆನಿಸುತ್ತದೆ. ತಪಶ್ಚರಣಕ್ಕೆ ಸೋತ ಆ ಮಿಥ್ಯಾದೃಷ್ಟಿಗಳ ರೀತಿಯ ಕುಸಂಸ್ಕಾರ ವನ್ನು ಪಂಪನು ಅವರ ಕಟುನಿಂದೆಯ ಮೂಲಕ ತೋರಿಸಿದ್ದಾನೆ :

ದಿವಸಮನೊಂದು ಮೇಣೆರಡುಮೂಱನೆ ನಿಲ್ವುದು ಮೂಱುತಿಂಗಳಾ
ಯ್ತುವಚಱನಿಂತು ನಿಂದನೊಳನೇ ಶನಿನಿಲ್ವವೊಲಿಲ್ಲಿ ಪಾೞಿಗಿ
ನ್ನೆವರೆಗಮಿರ್ದ್ದೆವಿನ್ನೆಮಗೆ ನಿತ್ತರಿಸಲ್ ನೆಱವಿಲ್ಲ ತಾಱಲಾ
ದುವು ತನು ಕೂೞುನೀರ ದೆಸೆಯಿಲ್ಲದೊಡಲ್ಗಳನೆಂತು ತಾಳ್ದುವಂ (ಆದಿಪು.ix-೪೯)

ಒಂದು ಎರಡು ಇಲ್ಲವೆ ಮೂರು ದಿನಗಳ ಕಾಲ ನಿಲ್ಲಬಹುದು. ಈ ಬೇಸರದವನು ನಿಂತು ಮೂರು ತಿಂಗಳಾದುವಲ್ಲ. ಶನಿ ನಿಂತಂತೆ ನಿಂತೇ ಇರುವನಲ್ಲ. ಇದುವರೆಗೆ ಏನೋ ಹಂಗಿನಲ್ಲಿ ನಿಂತೆವು. ಇನ್ನು ನಮಗೆ ಸಹಿಸಲು ಸಾಧ್ಯವಿಲ್ಲ. ದೇಹವು ತಾರ ಲಾಯಿತು. ಅನ್ನನೀರುಗಳಿಲ್ಲದೆ ದೇಹವನ್ನು ಧರಿಸುವುದೆಂತು? ಆತನ ಸಂಕಷ್ಟಗಳನ್ನು 'ಕಟ್ಟಿಕೊಳ್ಳುವ ಕಣೆ'ಯಾದರೂ ತಮಗೇಕೆ ಎಂಬ ಅಭಿಪ್ರಾಯ ಇವರದು. ಹೀಗೆ ಗುಱುಗುಮ್ಮೆಂದು, ಪಸಿದಿರ್ದು ಬೆದಬೆದಬೆಂದವರ ಚಿತ್ರಣವನ್ನು ಹಾಗೂ ಆ ಚಂಚಲ ಮನೋಧರ್ಮದವರ ಮಾನಸಿಕ ಸ್ಥಿತಿಯನ್ನು ಚಿತ್ರಿಸುವುದರ ಜೊತೆಗೆ ಇಲ್ಲಿ ಆದಿದೇವನ ತಪೋನಿಷ್ಠೆಯ ಘನತೆಯ ಅರಿವೂ ಸಹ ಓದುಗರಿಗೆ ಉಂಟಾಗುವಂತೆ ಚಿತ್ರಿಸಲಾಗಿದೆ. ಆಡುಮಾತಿನ ಧಾಟಿ ಇಲ್ಲಿ ಮೋಹಕವಾಗಿದೆ. "ಆದಿನಾಥನೊಂದಿಗೆ ಕಚ್ಛ ಮಹಾಕಚ್ಛರೂ ಮರೀಚಾದಿಗಳೂ ತಪಸ್ಸಿಗೆ ನಿಂತು ಅದನ್ನು ಮುಂದುವರಿಸಲಾಗದೆ ಬೇಸರಪಟ್ಟು ಆತ್ಮನಿಂದೆ ಮಾಡಿಕೊಳ್ಳುವ ಪ್ರಸಂಗದಲ್ಲಿಯೂ ಆದಿನಾಥನ ಬಂಧುಗಳಾದ ನಮಿವಿನಮಿ ಗಳು ಆತನಲ್ಲಿ ಆಸ್ತಿಯ ಪಾಲು ಬೇಡಿ ಧರಣೇಂದ್ರನೊಂದಿಗೆ ನಡೆಸಿದ ಸಂವಾದ ದಲ್ಲಿಯೂ ಇದೇ ಸಹಜೋಕ್ತಿ ವಿಲಾಸವನ್ನು ನಾವು ಎದುರುಗೊಳ್ಳುತ್ತೇವೆ. ವೈರಾಗ್ಯ ತಪಶ್ಚರ್ಯೆಗಳ ಗಂಭೀರವಾದ ವಾತಾವರಣದಲ್ಲಿ ಈ ವಿನೋದಮಿಶ್ರವಾದ ದೇಸೀ ಮಾತಿನ ಸೊಗಸು ಹಿತಮಿತವಾಗಿ ಬೆರೆತು ಬಂದು, ಆ ವಾತಾವರಣ ತಿಳಿಗೊಳ್ಳುವಂತೆ ಮಾಡಿದೆ. ಪಂಪನ ರಚನಾನೈಪುಣ್ಯದ ವಿಶೇಷ ಲಕ್ಷಣಗಳಲ್ಲಿ ಇದೂ ಒಂದು."[೪೫]

ಆದಿದೇವನು ತಪಸ್ಸು ಮಾಡುವಾಗ ದೇವೇಂದ್ರನು ಆಗಮಿಸಿ ಪೂಜಿಸಿ ಭಕ್ತಿಭಾವ ದಿಂದ ಸ್ತುತಿಸುವ ಭಾಗವು ಪೂರ್ವಪುರಾಣದಲ್ಲಿ ಬರುತ್ತದೆ (xvi-೨೨೩ ರಿಂದ ೨೪೮). ಆದರೆ ಪಂಪನು ಅದನ್ನು ಕೈಬಿಟ್ಟಿದ್ದಾನೆ.

ಕಚ್ಛ ಮಹಾಕಚ್ಛರ ಮಕ್ಕಳಾದ ನಮಿ ವಿನಮಿ ಪ್ರಸಂಗವು ಪೂರ್ವಪುರಾಣದಲ್ಲಿ ವಿಸ್ತಾರವಾಗಿ ಚಿತ್ರಿತವಾಗಿದೆ. ನಮಿ ವಿನಮಿಗಳು ಆದಿದೇವನ ಬಳಿಗೆ ಬಂದು ಅಡ್ಡಬಿದ್ದು

ತಮ್ಮನ್ನು ಅನಾಥರನ್ನಾಗಿ ಮಾಡಿ ತಪಸ್ಸಿಗೆ ಬಂದು ನಿಂತಿರುವೆ ಎಂದು ಆಕ್ಷೇಪಣೆ ಮಾಡುತ್ತ ನಿಂತಾಗ ಈ ಉಪಸರ್ಗದ ನಿವಾರಣೆಗಾಗಿ ಧರಣೇಂದ್ರನು ಉಪಾಯವಾಗಿ ಅವರನ್ನು ಆ ಸ್ಥಳದಿಂದ ಕರೆದುಕೊಂಡು ಹೋಗಿ ವಿಜಯಾರ್ಧಪರ್ವತದಲ್ಲಿ ರಾಜರನ್ನಾಗಿ ಮಾಡಿದುದನ್ನು ಜಿನಸೇನರು ೩೧೨ ಶ್ಲೋಕಗಳಲ್ಲಿ (ಪರ್ವ xix) ವಿಸ್ತಾರವಾಗಿ ವರ್ಣಿಸಿದ್ದಾರೆ. ಈ ವೃತ್ತಾಂತ ಪಂಪನಲ್ಲಿ ವಿಹಿತ ರೀತಿಯಲ್ಲಿ ೮ ವಚನ ೨೬ ಪದ್ಯಗಳಲ್ಲಿ ಸಂಗ್ರಹಿತವಾಗಿದೆ.

ಕಚ್ಛ ಮಹಾಕಚ್ಛರ ಪ್ರಸಂಗದಂತೆ ಕವಿ ನಮಿವಿನಮಿ ಪ್ರಸಂಗದಲ್ಲಿಯೂ ಕಣ್ಮುಂದೆ ದೃಶ್ಯವನ್ನೊಡ್ಡಿಸುವವನಂತೆ ವಿವರಣೆಯನ್ನು ನೀಡಿದ್ದಾನೆ. ನಮಿವಿನಮಿಗಳು ಭೋಗಾಸಕ್ತರಾಗಿ ತಪೋನಿರತನಾದ ಸ್ವಾಮಿಯ ಪಾದಗಳಿಗೆ ವಂದಿಸಿ ತಮ್ಮ ಅಭೀಷ್ಟವನ್ನು ಬೇಡಿಕೊಳ್ಳಲು ತೊಡಗಿದರು. ನಿರ್ವಿಕಾರನಾದ ಆ ಸ್ವಾಮಿಯ ಮುಂದೆ ತಮ್ಮ ಭೋಗಾಕಾಂಕ್ಷೆಯ ಕೂಗು ಮುಟ್ಟದೆಂಬ ಅರಿವು ಇಲ್ಲದ ಅಜ್ಞರವರು. 'ಎಮಗಮೆಮಗಪ್ಪ ಭಾಗದ ಸಮಕಟ್ಟಂ ದೇವ ಕುಡಲೆವೇೞ್ಕುದು' 'ನಂಟರ್ ನಿಮಗೆಮ್ಮಿಂದಗ್ಗಳಮಾರ್?' ಎಂಬುದು ಅವರ ಉಪರೋಧ. ಆದರೆ ಈ ಸ್ವಾಮಿಯು ಎಲ್ಲಾ ನಂಟುಗಳಿಂದ ದೂರವಾಗುತ್ತಿರುವ ಪರಿಯ ಬಗೆಗೆ ಅವರಿಗೆ ಇನಿತಾದರೂ ಅರಿವಿಲ್ಲ. ಮುಂದೆ ಧರಣೇಂದ್ರನು ತನ್ನ ಆಕೃತಿಯನ್ನು ಮರೆಮಾಚಿಕೊಂಡವನಾಗಿ ಬಂದು ನಮಿವಿನಮಿಗಳಿಗೆ ಅವರ ಮೂರ್ಖತದ ಬಗೆಗೆ ಅರಿವು ಮೂಡಿಸಲು ಪಟ್ಟ ಶ್ರಮ ವ್ಯರ್ಥವಾಯಿತು. ನಮಿವಿನಮಿಗಳ ಪಟ್ಟು ಏನೇ ಇರಲಿ, ಅವರು ತೋರುವ ಸ್ವಾಮಿನಿಷ್ಠೆಯನ್ನು ಮೆಚ್ಚಲೇಬೇಕು. 'ಪಳಾಳಮಂ ನುಡಿವ ನಿಮ್ಮ ನುಡಿಗೆಮಗೀಗಳ್ ಮುಳಿಯಲೆಡೆಯಿಲ್ಲ, ಮುದಿಗಣ್ಣಾಗಿ ನಿಮ್ಮಂತು ಪೞಿಯ ನುಡಿವರುಮೊಳರೇ? ಕುಡುವಂ ಗುರು, ಪಡೆವರ್ ಪೆರರ್, ಎಡೆಯೊಳ್ ನೀಮಾರ್ಗೆ? ಇದೇಕೆ ಕಿಡೆನುಡಿದಪಿರಿ? ಪೆರ್ಗಡೆತನದೊಳದೇವಡೆವಿರ್? ನಿಮಗೆಮ್ಮ ಕಜ್ಜದೊಳ್ ಪೊರೆಯುಂಟೇ? ಎಂದು ನಮಿವಿನಮಿಗಳು ಧರಣೇಂದ್ರನಿಗೆ ಹೇಳುವ ಈ ಮಾತುಗಳಲ್ಲಿ ಅವರ ನೇರವಾದ ಮುಚ್ಚುಮರೆಯಿಲ್ಲದ ಸರಳ ಸ್ವಭಾವ, ಭಕ್ತಿನಿರ್ಭರತೆ ಅಡಕವಾಗಿದೆ. ಕೊನೆಗೆ ಧರಣೇಂದ್ರನು ವಿಧಿಯಿಲ್ಲದೆ ವೈಕ್ರಯಿಕ ಶರೀರಧಾರಿಯಾಗಿ ಅವರಿಗೆ ಭೂಮಿಯನ್ನು ಕೊಡುವ ಪ್ರಸಂಗವನ್ನು ಕಾಣುತ್ತೇವೆ.

ನಮಿವಿನಮಿಗಳ ಆಕಾಂಕ್ಷೆಯನ್ನು ಧರಣೇಂದ್ರನು ಹೇಗೋ ಉಪಾಯದಿಂದ ನಿರ್ವಹಿಸಿದನೆಂದು ಪೂರ್ವಪುರಾಣದಲ್ಲಿ ಬಂದರೆ ಪಂಪನು ಧರಣೇಂದ್ರನು 'ವಿಕ್ರಿಯೆಯಿಂದಂ ಬೆಸಸು'ವಂತೆ ಮಾಡಿದನು (ix-೧೧೨) ಎಂದು ಸ್ಪಷ್ಟರೂಪದಲ್ಲಿ ಆ ಉಪಾಯವನ್ನು ನಿರೂಪಿಸಿದ್ದಾನೆ.

## ಆಹಾರದಾನ

ಆದಿನಾಥನು ತನ್ನ ತಪಸ್ಸನ್ನು ಮುಗಿಸಿ ಆಹಾರ ಸ್ವೀಕಾರಕ್ಕೆ ತೆರಳಿದ ಹಾಗೂ ದಾನತೀರ್ಥ ಪ್ರವರ್ತಕನೆನಿಸಿದ ಶ್ರೇಯಾಂಸನಿಂದ ಆಹಾರ ಸ್ವೀಕರಿಸಿದ ಪ್ರಸಂಗವು ಗಂಭೀರೋದಾತ್ತವಾದ ನೆಲೆಯಲ್ಲಿ ಸಾಂಪ್ರದಾಯಿಕವಾಗಿ ಸಾಗಿದೆ.

ಆರುತಿಂಗಳ ಕಠಿಣ ತಪಸ್ಸಿನಲ್ಲಿ ತೊಡಗಿದ್ದ ಆದಿದೇವನು ಬಹಿರ್ಮುಖನಾಗಿ ಚರಿಗೆಗೆ

ಹೊರಟನು. ತನ್ನೊಡನೆ ದೀಕ್ಷೆಪಡೆದವರೆಲ್ಲರೂ ಹಸಿವು ನೀರಡಿಕೆಯನ್ನು ಸಹಿಸಲಾರದೆ ವ್ರತಭ್ರಷ್ಟರಾದುದುನ್ನು ಕಂಡು ಮುಂದಿನ ಮುನಿಪರಂಪರೆಗೆ ಚರ್ಯಾಮಾರ್ಗವನ್ನು ತೋರಲು ಊರೂರುಗಳನ್ನು ಸುತ್ತಿದನು. ಆದರೆ ಆಹಾರ ಕೊಡುವ ಕ್ರಮ ತಿಳಿಯದೆ ಜನಸಾಮಾನ್ಯರು ಉತ್ಸಾಹದಿಂದ ವೃಷಭನಾಥನನ್ನು ಸ್ವಾಗತಿಸಿ ಲೌಕಿಕ ಆಮಿಷಗಳನ್ನು ದಾನವಾಗಿ ಒಡ್ಡಲೆತ್ನಿಸಿದರು. ಈ ಸಂದರ್ಭ ಪೂರ್ವಪುರಾಣದಲ್ಲಿ ೨೮ ಶ್ಲೋಕಗಳಲ್ಲಿ ನಾಟಕೀಯತೆಯನ್ನೊಳಗೊಂಡು ಬಂದಿದೆ. ಪಂಪನು ಸ್ವಾರಸ್ಯ ಕೆಡದಂತೆ ಆರು ಪದ್ಯ ಗಳಲ್ಲಿ ಸಂಗ್ರಹವಾಗಿ ಅದಕ್ಕೆ ರೂಪಕೊಟ್ಟಿದ್ದಾನೆ (ix-೧೨೪ ರಿಂದ ೧೨೯). ಅಲ್ಲಿಯ ನಾಟಕೀಯತೆಯನ್ನು ಇಲ್ಲಿಯೂ ಉಳಿಸಿಕೊಂಡಿದ್ದಾನೆ.

ಆದಿನಾಥನು ಚರಿಗೆಗೆ ಹೊರಟಾಗ ಕೆಲ ಜಡಮತಿಗಳು—"ಬೆಸನಾವುದು ಎಮಗೆ ? ಬೆಸನಂ ಬೆಸಸುವುದು ಏ ಬಾಚಿಸ್ತೆ?" ಎಂದು ಸ್ರಗ್ಗಸನ ವಿಲೇಪನ ಭೂಷಾ ಪ್ರಸರಗಳನ್ನು ಮುಂದಿಟ್ಟರು; ಮತ್ತೆ ಕೆಲ ಜಡಮತಿಗಳು ಬೋನವನ್ನು ಜಲವನ್ನು ಎದುರೊಟ್ಟಿ 'ಬನ್ನಿ ಸ್ವೀಕರಿಸಿ' ಎಂದರು; ಇನ್ನು ಕೆಲವರು ಚಪ್ಪರವನ್ನು ಸಿದ್ಧಗೊಳಿಸಿ ಕನ್ಯೆಯನ್ನು ಮುಂದಿಟ್ಟು 'ಮದುವೆಗೆ ನಿಲ್' ಎಂದರು; ಇನ್ನು ಕೆಲವು ರಾಜರು ತಮ್ಮ ಐಶ್ವರ್ಯವನ್ನು ಎದುರಿ ಟ್ಟರು; ಇನ್ನು ಕೆಲವರು 'ಮಿಂದುಂಡೀಗಳ್ ಬಿಜಯಂಗೈಯಿರಿ' ಎಂದು ಬೇಡಿಕೊಂಡರು —ಹೀಗೆ ಚರ್ಯಾಪರ್ಯಟನ ಕಾಲದಲ್ಲಿ ಮತ್ತೆ ಆರು ತಿಂಗಳು ಕಳೆಯಿತು.

ಈ ಸಮಯದಲ್ಲಿ ಹಸ್ತಿನಾಪುರಾಧೀಶ ಕುರುವಂಶ ಶ್ರೇಷ್ಠನಾದ ಸೋಮಪ್ರಭನ ತಮ್ಮನು, ಸ್ವಯಂಪ್ರಭೆ, ಶ್ರೀಮತಿ, ಸ್ವಯಂಪ್ರಭದೇವ, ಕೇಶವಮಹೇಶ, ಅಚ್ಯುತ ಪ್ರತೀಂದ್ರ, ಧನದೇವ ಮೊದಲಾದ ಜನ್ಮವನ್ನು ತಳೆದು ಶ್ರೇಯಾಂಸನಾಗಿ ಜನಿಸಿದ್ದನು. ಅಂದಿನ ಬೆಳಗಿನ ಜಾವ ಕಲ್ಪವೃಕ್ಷಗಳಿಂದ ಕೂಡಿದ ರಾಜಗೃಹಾಂಗಣಕ್ಕೆ ಅಲಂಕಾರ ಪ್ರಾಯವಾದ ಸುರಶೈಲವು ಬಂದಿರುವುದನ್ನು ಶ್ರೇಯಾಂಸನು ಕನಸಿನಲ್ಲಿ ಕಂಡನು. ಸೋಮಪ್ರಭನು ಅದರ ಫಲವಾಗಿ ಮೇರುಗಿರಿಸದೃಶನೂ ಬಯಸಿದ ಇಷ್ಟಾರ್ಥಗಳನ್ನು ಸಲ್ಲಿಸುವವನೂ ಆದ ಆದಿಬ್ರಹ್ಮನು ಸಮೀಪಿಸುವನೆಂದು ತಿಳಿದಾಗ ಭವಾಂತರ ಸಂಬಂಧವನ್ನು ಪಡೆದು ಬಂದಿದ್ದ ಶ್ರೇಯಾಂಸನು ಆನಂದಪರವಶನಾದನು. ಪೂರ್ವ ಪುರಾಣದಲ್ಲಿ ಶ್ರೇಯಾಂಸನ ವಿವಿಧ ಭವಗಳ ವಿವರವನ್ನು ನೀಡಿಲ್ಲ. ಆದಿಪುರಾಣದಲ್ಲಿ ಓದುಗರ ನೆನಪಿನ ಸರಣಿಗೆ ಸಹಾಯವಾಗುವಂತೆ ಅವುಗಳ ಪಟ್ಟಿಯನ್ನು ನೀಡಲಾಗಿದೆ. ಅಲ್ಲದೆ ಕನಸಿನ ವೃತ್ತಾಂತದಲ್ಲಿ ಶ್ರೇಯಾಂಸನು ಮೇರುಪರ್ವತ, ಕಲ್ಪವೃಕ್ಷ, ವೃಷಭ, ಸೂರ್ಯ, ಚಂದ್ರ, ಸಮುದ್ರಗಳನ್ನು ಕಂಡನೆಂದು ಪೂರ್ವಪುರಾಣದಲ್ಲಿ ಹೇಳಿದ್ದರೂ ಮೇರುಪರ್ವತಕ್ಕೇ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಟ್ಟು ಕನಸಿನ ಫಲವನ್ನು ನಿರೂಪಿಸಲಾಗಿದೆ. ಪಂಪನು ಮೇರುಪರ್ವತ-ಕಲ್ಪವೃಕ್ಷಗಳ ವಿಚಾರವನ್ನು ಮಾತ್ರ ತೆಗೆದುಕೊಂಡು ಅವುಗಳಿಗೆ ಅನುಸಾರವಾಗಿ ಕನಸಿನ ಫಲವನ್ನು ಹೇಳಿಸಿದ್ದಾನೆ. ಇದರಿಂದ ಕಾವ್ಯಾಂಶದ ಲೋಪವೇನೂ ಕಂಡುಬರುವುದಿಲ್ಲ.

ಚರಿಗೆಗಾಗಿ ಸ್ವಾಮಿಯು ವಿಧಿಪೂರ್ವಕವಾಗಿ ಹಸ್ತಿನಾಪುರವನ್ನು ಪ್ರವೇಶಿಸಿದಾಗ ಶ್ರೇಯಾಂಸ ಸೋಮಪ್ರಭರು ಕಾಲಿಗೆರಗಿದರು. ಯೋಗಾಯೋಗ ಸಂಬಂಧ. ಆದಿ ತೀರ್ಥಂಕರನ ದಿಗಂಬರ ರೂಪವನ್ನು ನೋಡುತ್ತಿದ್ದಂತೆ ಶ್ರೇಯಾಂಸನು ಜಾತಿಸ್ಮರ

ನಾದನು. ಶ್ರೀಮತಿಯಾದ ಭವದಲ್ಲಿ ವಜ್ರಜಂಘನೂ ತಾನೂ ಸರ್ಪಸರೋವರದಲ್ಲಿ ಚಾರಣಯುಗಳಕ್ಕೆ ವಿಧಿವತ್ತಾಗಿ ಮಾಡಿದ ಆಹಾರದಾನವನ್ನು ನೆನಪಿಗೆ ತಂದುಕೊಂಡು ವಿಧಿಪೂರ್ವಕವಾಗಿ ಮುನಿಗಳನ್ನು ಆಹಾರಕ್ಕೆ ನಿಲ್ಲಿಸಿದನು.

ಶ್ರೀದಾನತೀರ್ಥಮೀತನಿ | ನಾದುದು ಫೇಱರಾದಿತೀರ್ಥಂಕರನಂ ನಿಱಿಸ
ಲ್ಕೇ ದೊರೆಯರೀಗಳೀಯುಗ | ದಾದಿಯೊಳೀತನೆ ಸರಸ್ವತೀ ಮಣಿಹಾರಂ (ಆದಿಪು. X-೧)

ಎಂಬ ಹೊಗಳಿಕೆಗೆ ಶ್ರೇಯಾಂಸನು ಪಾತ್ರನಾದನು. ಚಿನ್ನದ ಕಲಶದಲ್ಲಿ ತುಂಬಿದ ಅಮೃತ ರಸಕ್ಕೆ ಸಮಾನವಾದ, ಪುಣ್ಯಧಾರೆಯಂತೆ ಸೊಗಯಿಸುತ್ತಿದ್ದ ಕಬ್ಬಿನ ರಸದ ಧಾರೆಯನ್ನು ಶ್ರೇಯಾಂಸನು ಆ ತೀರ್ಥಂಕರನು ಮೇಲ್ಮುಖವಾಗಿ ಹಿಡಿದ ವಿಶಾಲವಾದ ಪಾಣಿಯಲ್ಲಿ ಎರೆದನು.ರತ್ನವೃಷ್ಟಿ, ಪುಷ್ಪವೃಷ್ಟಿ, ಸುರದುಂದುಭಿಯೊಂದಿಗೆ 'ಅಹೋ ದಾನಿ! ಅಹೋ ಪಾತ್ರ! ಅಹೋ ದಾನ! ಅಹೋ ದೇಯ! ಎಂಬ ದಿವ್ಯಧ್ವನಿಗಳು ಕೇಳಿ ಬಂದವು. ದೇವನು 'ಅಪೂರ್ವವಾದ ಈ ದಾನವು ಅಕ್ಷಯವಾಗಲಿ' ಎಂದು ಹರಸಿದನು. ಅದರ ಫಲವಾಗಿ ಆ ಪುಣ್ಯದಿನ ಅಕ್ಷಯ ತೃತೀಯೆ ಎಂದು ಪ್ರಸಿದ್ಧವಾಯಿತು. ಶ್ರೇಯಾಂಸನು ತನಗೆ ಜಾತಿಸ್ಮರಣೆಯಾದುದನ್ನು ಭರತನಿಗೆ ವಿವರಿಸಿ ಚತುರ್ವಿಧ ದಾನ ಆದರ ವಸ್ತು-ಪಾತ್ರ-ಫಲಗಳ ವಿವರವನ್ನು ತಿಳಿಯಹೇಳಿದನು. ಭರತನು ಆ ದಾನಮಹಿಮನನ್ನು ಪೂಜಿಸಿ ಹೊಗಳಿ ಹಿಂದಿರುಗಿದನು.

ಆದಿಪುರಾಣದಲ್ಲಿ ಈ ಭಾಗವು ಬಹುವಾಗಿ ಪೂರ್ವಪುರಾಣದ ಸಂಗ್ರಹವೇ ಆಗಿದೆ. 'ಅಕ್ಷಯ ತೃತೀಯೆ'ಯ ಬಗೆಗೆ ಪೂರ್ವಪುರಾಣದಲ್ಲಿ ಉಲ್ಲೇಖವಿಲ್ಲ. ಅಕ್ಷಯ ತೃತೀಯೆಯ ಮಹತ್ತ್ವ ವನ್ನು ಹೆಚ್ಚುಗೊಳಿಸಲೆಂಬಂತೆ ಪಂಪನು ಅದರ ಉಲ್ಲೇಖವನ್ನು ನೀಡಿದ್ದಾನೆ (ಈಗಲೂ ಜೈನರಲ್ಲಿ ಆ ದಿನವನ್ನು ಪರ್ವದಿನವನ್ನಾಗಿ ಆಚರಿಸಲಾಗುತ್ತದೆ).

ಅಕ್ಷಯದಾನಂ ನಿಮಗ | ಕ್ಕಕ್ಷೂಣಮಿದೆಂದು ಪರಮಮುನಿಪರಸೆ ಬೞಿ
ಕ್ಕಕ್ಷಯತೃತೀಯೆಯೆಂದಱಿ | ಲಕ್ಷಿತಿಗಂನೆಗಱ್ದುದಲ್ತೆ ತತ್ಪುಣ್ಯದಿನಂ (ಆದಿಪು. X-೬)

## ಉತ್ತರಕಾಲೀನ ಕಾವ್ಯಗಳು

**ಚಾವುಂಡರಾಯಪುರಾಣ :** ಕಚ್ಛ-ಮಹಾಕಚ್ಛಾದಿಗಳು ವ್ರತಭ್ರಷ್ಟರಾದುದು, ನಮಿ-ವಿನಮಿ ಪ್ರಸಂಗ, ಆಹಾರದಾನದ ಪ್ರಸಂಗ—ಇವುಗಳಲ್ಲಿ ಕವಿ ಪೂರ್ವಪುರಾಣ, ಆದಿ ಪುರಾಣಗಳೆರಡಕ್ಕೂ ಋಣಿಯಾಗಿದ್ದಾನೆ. ದಾನಮಹಿಮೆಯನ್ನು ವರ್ಣಿಸುವಾಗ ವಿಶೇಷ ಆಸಕ್ತಿಯನ್ನು ತೋರಿ ಸಂಸ್ಕೃತ ಶ್ಲೋಕ, ಪ್ರಾಕೃತ ಗಾಹೆ, ಕನ್ನಡ ಕಂದಪದ್ಯಗಳನ್ನು ಸೇರಿಸಿ ನಿರೂಪಣೆಯನ್ನು ಹೆಚ್ಚು ಗಾಂಭೀರ್ಯಗೊಳಿಸಿದ್ದಾನಾದರೂ ಆತನ ಗದ್ಯನಿರರ್ಗಳತೆಯ ಮಧ್ಯೆ ಪದ್ಯಗಳು ಬಂದು ಅದರ ಅವ್ಯಾಹತ ಶೈಲಿಗೆ ಒಂದು ರೀತಿ ತಡೆಯನ್ನುಂಟು ಮಾಡಿವೆಯೆಂದೇ ಹೇಳಬೇಕು.

ಪರಮನ ತಪಸ್ಸಿನ ಪ್ರಖರತೆಯನ್ನು ವರ್ಣಿಸುವಾಗ ಆದಿಪುರಾಣದ ಪದಪುಂಜಗಳನ್ನು ಅಲ್ಲಲ್ಲಿ ಬಳಸಿಕೊಂಡಿರುವಂತೆ ಕಂಡುಬರುತ್ತದೆ. ಉದಾಹರಣೆಗೆ :

ಅವ್ಯಕ್ತಾಕ್ಷರ ಪರಿಜಪ ಪರಾಯಣನಾಗಿ ಗುಂಜದ್ಗುಹಾ ಮಹೀಧರಕ್ಕೆಣೆಯಾದೊಡೆ
(ಚಾವುಂಪು. ಪು.೪೬)

ಪರಮನೊಳಗೊಳಗದೊಂದಂ | ಪರಿಜಪನಂಗೆಯ್ಯೆಗೆಯ್ಯೆ ನೆಗಲ್ದಿವ್ಯಕ್ತಾ
ಕ್ಷರದಿಂ ನಿಗೂಢತರ ನಿ | ರ್ಝರರವ ಗುಂಜದ್ಗುಹಾತಲಕ್ಕೆಣೆಯಾದಂ (ಆದಿಪು. ix-೮೭)

ಕೆಲವೆಡೆ ಆದಿಪುರಾಣದ ಗದ್ಯಭಾಗವನ್ನೂ ಸಹ ಕವಿ ಹಾಗೆಯೇ ತೆಗೆದುಕೊಂಡಿರುವುದನ್ನು ಗಮನಿಸಬಹುದಾಗಿದೆ :

ಆದಿದೇವಂ ಸಪ್ತರ್ಧಿ ಸಂಪನ್ನನಾಗಿ ಯೋಗದೊಳೊಂದೆರಡು ತಿಂಗಳ್ ನಿಲೆ ಕಚ್ಛ ಮಹಾಕಚ್ಛ ಮರೀಚ್ಯಾದಿಗಳ್ ಮೊಗಮಂ ನೋಡಿ ಕೈಯನೆತ್ತಿಕೊಳ್ವುದುಮಂ ಕಾಣದತಿ ಕ್ಷುತ್ಪಿಪಾಸಾಪೀಡಿತರಾಗಿ ಪಣ್ಣಂ ತಿನಲುಂ (ಚಾವುಂಪು. ಪು. ೪೭)

ಅಂತಾ ಪರಮೇಶ್ವರಂ ಸಪ್ತರ್ಧಿಸಂಪನ್ನನಾಗಿ ನಿಶ್ಚಳಯೋಗನಿಯೋಗದಿಂದಮೊಂದೆರಡು ತಿಂಗಳ್ ನಿಲೆ ಕಚ್ಛಮಹಾಕಚ್ಛಮರೀಚ್ಯಾದಿಗಳಾದಿಮುನಿಪತಿಯಮೊಗಮಂ ನೋಡಿ ಕಯ್ಯನೆತ್ತಿಕೊಳ್ವುದಂ ಕಾಣದೆ ಕ್ಷುತ್ಪಿಪಾಸಾಶೀತಾತಪಪ್ರಮುಖ ಪರೀಷಹಂಗಳಂ ಸೈರಿಸಲಾರದೆ ಭಗ್ನೋತ್ಸಾಹರುಂ ದೂರೋತ್ಸಾರಿತಾಭಿಮಾನರುಮಾಗಿ (ಆದಿಪು. ಆಶ್ವಾಸ ix).

ನಮಿ-ವಿನಮಿ ಪ್ರಸಂಗದಲ್ಲಿ ಧರಣೇಂದ್ರನು ವೈಕ್ರಯಿಕ ಶರೀರವನ್ನು ತೋರಿ, ವೃಷಭನೇ ರಾಜ್ಯವನ್ನು ಕೊಟ್ಟಂತೆ ಆದಿಪುರಾಣಕ್ಕೆ ಅನುಸಾರವಾಗಿ ಹೇಳಿದ್ದಾನೆ.

ಶ್ರೇಯಾಂಸನು ಕಂಡ ಕನಸಿನ ವರ್ಣನೆಯಲ್ಲಿ ಕವಿ ಪೂರ್ವಪುರಾಣವನ್ನು ಅನುಸರಿಸಿದ್ದಾನೆ.

ಅಕ್ಷಯ ತೃತೀಯೆಯ ಉಲ್ಲೇಖವನ್ನು ಆದಿಪುರಾಣಕ್ಕೆ ಅನುಸಾರವಾಗಿ ನೀಡಿದ್ದಾನೆ.

**ಹಸ್ತಿಮಲ್ಲನ ಪೂರ್ವಪುರಾಣ :** ಕವಿ ಈ ಭಾಗದಲ್ಲಿ ಆದಿಪುರಾಣದ ಸಾರಸಂಗ್ರಹವನ್ನು ಅತಿಸುಂದರವಾಗಿ ಗದ್ಯಶೈಲಿಯಲ್ಲಿ ನಿರೂಪಿಸಿದ್ದಾನೆ. ಈ ಸನ್ನಿವೇಶಗಳಲ್ಲಿ ಬರುವ ಯಾವ ಮುಖ್ಯಾಂಶಗಳನ್ನೂ ಬಿಡದಂತೆ ಸುಂದರವಾಗಿ ಪಾಕವಿಳಿಸಿದ್ದಾನೆ. ಕಚ್ಛಾದಿಗಳು ಮಿಥ್ಯಾಜ್ಞಾನಿಗಳಾದುದು, ಮರೀಚಿಯು ಕಪಿಲಧರ್ಮವನ್ನು ಪ್ರಚಾರಮಾಡಿ ಮಿಥ್ಯಾ ಮಾರ್ಗವನ್ನು ಬೋಧಿಸಿದುದು, ಸ್ವಾಮಿಯ ತಪೋಮಹಿಮೆಯಿಂದುಂಟಾದ ಪ್ರಶಾಂತತೆ, ನಮಿ-ವಿನಮಿಗಳ ಪ್ರಸಂಗ, ಸ್ವಾಮಿಯ ಆಹಾರವಿಘ್ನ, ಆಹಾರದಾನ, ಇವುಗಳಲ್ಲಿ ಹೆಜ್ಜೆ ಹೆಜ್ಜೆಗೂ ಕವಿ ಆದಿಪುರಾಣವನ್ನು ಅನುಸರಿಸಿದ್ದಾನೆ; ನಾಟಕೀಯ ಪ್ರಸಂಗಗಳಿಗೆ ಹೆಚ್ಚು ಒತ್ತನ್ನು ಕೊಟ್ಟಿದ್ದಾನೆ. ಉದಾಹರಣೆಗೆ : ಚಾವುಂಡರಾಯಪುರಾಣದಲ್ಲಿ ನಮಿವಿನಮಿಗಳು ಸ್ವಾಮಿಗೆ ತಪೋಭಂಗವನ್ನು ಮಾಡುವಾಗ ಧರಣೇಂದ್ರನು ಅದನ್ನು ಅರಿತು 'ವಿಕ್ರಿಯೆಯಿಂ ದೇವರ ಬೆಸಸಿದಂತು ಮಾಡಿ' ರಾಜ್ಯವನ್ನು ಹಂಚಿದನೆಂದಷ್ಟೇ ಬಂದಿದ್ದರೆ, ಇಲ್ಲಿ ಇನ್ನೂ ಹೆಚ್ಚಿನ ವಿವರಗಳನ್ನು ಆದಿಪುರಾಣಕ್ಕೆ ಅನುಸಾರವಾಗಿ ನೀಡಿದ್ದಾನೆ. ಉದಾಹರಣೆಗೆ :

ಧರಣೇಂದ್ರನಾಸನಕಂಪದಿಂದವಧಿಯನರಿದು ಬಂದು ಜಿನರ್ಗೆರಗೆ ತದನಂತರಮವರೊಳಿಂತೆಂದನಾಂ ಧರಣೇಂದ್ರಂ, ಆದಿನಾಥನ ಕಿಂಕರಂ. ದೇವನೆನ್ನೊಡನೆ ನಿಮಗೆ ಬೇಕಾದ ಸೀಮೆಯಂ ಕೊಡೆಂದು ನಿರೂಪಿಸಿದಂ. ನಿಮಗೆ ಬೇಕಾದ ಸೀಮೆಯನಾಂ ಕೊಡುವೆಂ ಬನ್ನಿಮೆನೆ, ದೇವಂ ನಮ್ಮ ಮೊಗದ ಮುಂದೆ ನಿರೂಪಂಗೊಟ್ಟಲ್ಲದೆ ಬಾರೆವೆನೆ, ಧರಣೇಂದ್ರಂ ವೈಕ್ರಯಿಕದಿಂ ಸ್ವಾಮಿ ನಿರೂಪಿಸಿದಂತೆ ಮಾಡಿ ಅವರನೊಡಗೊಂಡು ಪೋಗಿ, ವಿಜಯಾರ್ಧ

ಪರ್ವತದ ದಕ್ಷಿಣೋತ್ತರ ಶ್ರೇಣಿಗಳ ನೂರ್ಪತ್ತು ಪಟ್ಟಣಂಗಳ್ಗೆ ಒಡೆಯರಂ ಮಾಡಿ (ಹಪೂರ್ವ. ಪರ್ವ viii).

ಹಿಂದಿರುಗಿದ ವಿಚಾರದಲ್ಲಿ ಕವಿ ಸಂಭಾಷಣೆಯನ್ನು ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಹೆಣೆದಿರುವ ಶೈಲಿ ಮೋಹಕವಾಗಿದೆ, ನಾಟಕೀಯವಾಗಿದೆ.

ಸ್ವಾಮಿಗೆ ಚರಿಗೆಯಲ್ಲಿ ವಿಘ್ನವಾಗುವ ಪ್ರಸಂಗದಲ್ಲಿಯೂ ಕೂಡ ಕವಿ ನಿರ್ವಹಣೆಯನ್ನು ಆದಿಪುರಾಣಕ್ಕೆ ಅನುಸಾರವಾಗಿ ನೀಡಿದ್ದಾನೆ. ಚಾವುಂಡರಾಯಪುರಾಣದಲ್ಲಿ ಸ್ವಾಮಿಯನ್ನು ಕಂಡ ಜನರು ತಮ್ಮ ಸ್ವಾಮಿ ಬಂದನೆಂದು ವಸ್ತುವಾಹನವನ್ನು ತಂದು ಮುಂದಿಡುವುದನ್ನು ಮಾತ್ರ ಹೇಳಲಾಗಿದೆ. ಆದರೆ ಇಲ್ಲಿ ಕವಿ ಆದಿಪುರಾಣದ ಆ ಸಂಪೂರ್ಣ ಪ್ರಸಂಗವನ್ನು ವ್ಯವಧಾನವಾಗಿ ಗದ್ಯದಲ್ಲಿ ಸಂಗ್ರಹಿಸಿದ್ದಾನೆ. ಉದಾಹರಣೆಗೆ:

ಮತ್ತಮಿತ್ತಲ್ ಪುರುಪರಮೇಶ್ವರ ಧರ್ಮ ಪ್ರವರ್ತನೆ ಕಾರಣಮಾಗಿ ಚರ್ಯಾ ನಿಮಿತ್ತಂ, ಆರುದಿಂಗಳಂತ್ಯದೊಳ್ ಯೋಗಮಂ ಪತ್ತುವಿಟ್ಟು ಬಿಜಯಂಗೆಯ್ಯಲದಂ ಕಂಡ ವಿವೇಕಿಗಳ್ನಿಲಿಸಲರಿಯದೆ ನಮ್ಮೊಡೆಯಂ ರಾಜ್ಯಮನಾಳಲ್ಬಂದನೆಂದು ವಸ್ತ್ರಾಭರಣ ಗಜತುರಗಾದಿ ವಸ್ತುಗಳಂ ತಂದು ಮುಂದಿರಿಸುವುದುಮಂ, ಕೆಲರಜ್ಞಾನಿಗಳ್ ತಮ್ಮ ಸುತೆಯರಂ ಶೃಂಗರಿಸಿ ತಂದು ಮದುವೆಯಾಗವೇಳ್ಕುಮೆಂಬುದುಮಂ ಇವು ಮೊದಲಾಗಿ ಪಲವು ವಿಕಾರಂಗಳಂ ಮಾಡುತ್ತಿರೆ (ಹಪೂರ್ವ. ಪರ್ವ ix).

ಶ್ರೇಯಾಂಸನು ಕಂಡ ಕನಸು, ಕನಸಿನ ಫಲ, ಭವಾಂತರಗಳ ಪಟ್ಟಿ, ದಾನಾದಿ ಪ್ರಸಂಗಗಳಲ್ಲಿಯೂ ಕವಿ ಆದಿಪುರಾಣದ ಜಾಡನ್ನೇ ಹಿಡಿದು ಸಂಗ್ರಹಿಸಿದ್ದಾನೆ. ಇಲ್ಲಿಯ ಪ್ರಸಂಗವು ಚಿಕ್ಕದಾಗಿ ಚೊಕ್ಕವಾಗಿ ನಿರ್ವಹಣೆಗೊಂಡಿದೆ.

**ಪುಣ್ಯಾಸ್ರವದ ಆದೀಶ್ವರರ ಕಥೆ :** ಕಚ್ಛ-ಮಹಾಕಚ್ಛಾದಿಗಳು ವ್ರತಭ್ರಷ್ಟರಾದುದು, ವನದೇವತೆಗಳು ಝುಂಕಿಸಿದುದು, ಅದಕ್ಕಂಜಿ ಭೌತಿಕಾದಿ ವೇಷಧಾರಿಗಳಾದುದು, ನಮಿ ವಿನಮಿಗಳಿಗೆ ಧರಣೇಂದ್ರನು ವಿಜಯಾರ್ಧದ ರಾಜ್ಯವನ್ನು ಕೊಟ್ಟುದು, ಪುರುದೇವನು ಚರಿಗೆಗೆ ಬಂದಾಗ ಆರು ತಿಂಗಳವರೆಗೆ ಅಲಾಭವಾದುದು, ಭರತನು ಸ್ವಾಮಿಗೆ ಅಲಾಭವಾದಾಗ ಆತನ ಬಳಿಗೆ ಬಂದು 'ನೀವು ನಮ್ಮ ಪುರಕ್ಕೆ ಬಂದು ರಾಜ್ಯಮಂ ಮಾಳ್ಪುದೆಂದು' ಕೇಳಿಕೊಂಡದ್ದು, ಸೋಮಪ್ರಭನ ತಮ್ಮ ಶ್ರೇಯಾಂಸನಿಗೆ ಕಲ್ಪವೃಕ್ಷ ಮನೆಗೆ ಬಂದಂತೆ ಕನಸಾದುದು, ಅದರ ಫಲವನ್ನು ಅರಿತುದು, ಸ್ವಾಮಿಯನ್ನು ನೋಡಿ ಜಾತಿಸ್ಮರನಾಗಿ ಇಕ್ಷುರಸವನ್ನು ಎರೆದುದು, ಪಂಚಾಶ್ಚರ್ಯಗಳಾದುದು, ಅಕ್ಷಯ ತದಿಗೆಯ ವೃತ್ತಾಂತ, ಭರತನಿಗೆ ಮುನ್ನಿನ ಭವದ ನಿರೂಪಣೆ, ಭರತನು ಶ್ರೇಯಾಂಸನನ್ನು ಪೂಜಿಸಿ ತೆರಳಿದುದು ಈ ಪ್ರಸಂಗಗಳು ಇಲ್ಲಿ ಸಂಕ್ಷೇಪವಾಗಿ ಬಂದಿವೆ.

ಆದಿನಾಥನು ಆಹಾರಕ್ಕಾಗಿ ಬಂದಾಗ ಚರಿಗೆಯನ್ನು ನೀಡಲರಿಯದ ಮೂಢ ಜನರ ರೀತಿಯನ್ನು ಒಂದು ಕಂದ ಪದ್ಯದಲ್ಲಿ ಹೇಳಿದ್ದಾನೆ :

ಪುರವೆನಿತನಿತಂ ಪೊಕ್ಕಡೆ | ಧರಣೀಪತಿ ಬಂದನೆಂದು ವರನೃಪರೆಲ್ಲಂ
ಹರಿಹಯ ಕನ್ಯಾರತ್ನೋ | ತ್ಕರಮಂ ತಮತಮಗೆ ತಂದು ಕಾಣಿಕೆಯೀಯಲ್
(ಪುಆಕ. x-೨೧)

ಎಂದು ಆ ಚಿತ್ರಣವನ್ನು ಸಂಕ್ಷೇಪಿಸಿ ಹೇಳಿದ್ದಾನೆ. ಒಟ್ಟಾರೆ ಈ ಅಂಶಗಳು ಸಂಗ್ರಾಹಕ

ಶೈಲಿಯಲ್ಲಿ ಬೇಸರತರಿಸದಂತೆ ಓದಿಸಿಕೊಂಡು ಹೋಗುತ್ತವೆ. ಅತಿಯಾದ ವರ್ಣನೆಯಿಲ್ಲದೆ ಕಥೆಯ ಓಟ ಸಮಗತಿಯಲ್ಲಿ ಸಾಗಿದೆ. ಚರಿಗೆಗೆ ಬಂದ ಪ್ರಸಂಗದಲ್ಲಿ ಭರತನು ವೃಷಭನನ್ನು ರಾಜ್ಯಭಾರಮಾಡಿ ಎಂದು ಕೇಳಿಕೊಂಡ ರೀತಿಯೊಂದು ಇಲ್ಲಿ ಹೊಸದಾಗಿದೆಯಲ್ಲದೆ ಉಳಿದಂತೆ ಪೂರ್ವವರ್ತಿ ಕಾವ್ಯಗಳ ಕಥಾವಿವರಣೆ ಇಲ್ಲಿಯೂ ಕಂಡುಬರುತ್ತದೆ.

**ಪುರುದೇವಚರಿತ** : ಹಸ್ತಿಮಲ್ಲನ ಪೂರ್ವಪುರಾಣ ಮತ್ತು ಚಾವುಂಡರಾಯಪುರಾಣಗಳಿಗಿಂತ ಇಲ್ಲಿ ವಿವರವಾಗಿ ಕಥೆಯನ್ನು ನಿರ್ವಹಿಸಲಾಗಿದೆ. ಕಾವ್ಯಧಾಟಿಯನ್ನು ಕಾಯ್ದುಕೊಳ್ಳುವ ಪ್ರಯತ್ನವಿದೆ.

ಕಚ್ಛ-ಮಹಾಕಚ್ಛರ ನಿರೂಪಣೆಯಲ್ಲಿ ಕವಿ ಚಾವುಂಡರಾಯಪುರಾಣದ ವರ್ಣನಾಭಾಗದ ಚೌಕಟ್ಟನ್ನೇ ತೆಗೆದುಕೊಂಡಿದ್ದಾನೆ.

ಪೂರ್ವಪುರಾಣ, ಆದಿಪುರಾಣ, ಚಾವುಂಡರಾಯಪುರಾಣಗಳಲ್ಲಿ ವರ್ಣಿತವಾಗಿರುವ ಸ್ವಾಮಿಯ ತಪೋವಿಧಾನವನ್ನು ಇಲ್ಲಿ ಕೈಬಿಡಲಾಗಿದೆ.

ಆದಿಪುರಾಣ, ಪೂರ್ವಪುರಾಣ, ಹಸ್ತಿಮಲ್ಲನ ಪೂರ್ವಪುರಾಣಗಳಲ್ಲಿರುವ ನಾಟಕೀಯತೆಯನ್ನು ಉಳಿಸಿಕೊಂಡಿದ್ದಾನೆ. ಧರಣೇಂದ್ರನು ಬಂದು ಸ್ವಾಮಿಯನ್ನು ಬೇಡುವ ಬದಲು ಭರತನನ್ನು ಬೇಡಲು ಸಲಹೆಯನ್ನು ನೀಡಿದಾಗ, ನಮಿವಿನಮಿಗಳು ನೀಡುವ ಉತ್ತರದಲ್ಲಿ ಹೊಸ ಉಪಮೆಗಳನ್ನು ಸೇರಿಸಿ ಹೇಳಿದ್ದಾನೆ. ಇಲ್ಲಿಯೂ ಸಹ ಅವರ ಸ್ವಾಮಿನಿಷ್ಠೆ ಎದ್ದು ಕಾಣುತ್ತದೆ :

ಒಡೆಯ ಕೊಟ್ಟಪರಾವು ಉಂಡಪೆವೆಲ್ಲ | ಕಡೆಯ ಮಾನವರ ಬೇಡುವೆವೆ
ಕಡಲತಡಿಯೊಳಿರ್ದ ಬಾವಿಯೊಳಲ್ಲದೆ | ಕುಡಿವರೆ ಬುಧರುಪ್ಪುನೀರ(ಪುರುಚ.vii, ೭-೧೭)

ಪೂರ್ವಪುರಾಣ, ಆದಿಪುರಾಣಗಳಲ್ಲಿ ಈ ಸಂದರ್ಭದಲ್ಲಿ ಬರುವ ಒಂದು ಉಪಮೆ ಹೀಗಿದೆ :

ವೃದ್ಧಿಹೊಂದುತ್ತಿರುವ ಅಧಿಕವಾದ ಫಲವನ್ನಿಚ್ಛಿಸುವ ಯಾವ ಬುದ್ಧಿಶಾಲಿಯು ತಾನೆ ಕಲ್ಪವೃಕ್ಷವನ್ನು ಬಿಟ್ಟು ಬೇರೆ ವೃಕ್ಷವನ್ನು ಸೇವಿಸುವನು? ಪುರುದೇವಚರಿತದ ಹೋಲಿಕೆ ಜನಸಾಮಾನ್ಯರಿಗೆ ಹೆಚ್ಚು ಹತ್ತಿರವಾದ ಹೋಲಿಕೆಯಾಗಿದೆ.

ವೈಕ್ರಯಿಕ ಶರೀರದಿಂದ ನಮಿವಿನಮಿಯರನ್ನು ಅನುನಯಿಸಿದ ವಿವರ ಇಲ್ಲಿಯೂ ಕಂಡುಬರುತ್ತದೆ. ಪೂರ್ವಪುರಾಣ ಮತ್ತು ಆದಿಪುರಾಣಗಳಲ್ಲಿ ಕಂಡುಬರುವ ವಿದ್ಯಾಧರಪುರದ ವರ್ಣನೆಯನ್ನು ಇಲ್ಲಿ ಕೈಬಿಡಲಾಗಿದೆ.

ಚರಿಗೆಗೆ ಸ್ವಾಮಿ ಪ್ರಥಮ ಬಾರಿಗೆ ಹೊರಟಾಗ ಜನರ ಪ್ರತಿಕ್ರಿಯೆಯನ್ನು ವರ್ಣಿಸುವಲ್ಲಿ ಕವಿ ಚಾವುಂಡರಾಯಪುರಾಣವನ್ನು ನೆನಪಿಗೆ ತರುತ್ತಾನೆ. ಉದಾಹರಣೆಗೆ :

ಚರಿಸುತ ಬರೆ ಕಂಡವರಿಲ್ಲಿಗೆ | ಮ್ಮರಸ ಬಿಜಯಂಗೆಯ್ದರೆಂದು
ಕರಿಯಶ್ವ ಕನ್ಯಾವಸ್ತ್ರಾಭರಣಗಳ ಮುಂ | ದಿರಿಸುತ ಕಾಣಿಕೆಯೆಂದು (ಪುರುಚ. vii-೨೬)
ನಮ್ಮ ಪರಮಸ್ವಾಮಿ ಬಂದನೆಂದು ವಸ್ತುವಾಹನಮಂ ತಂದು ಮುಂದಿಡುವುದುಂ
(ಚಾವುಂಪು. ಪು. ೪೭)

ಅನಂತರ ಬರುವ ಸಾಂಗತ್ಯಗಳೂ ಕೂಡ ಚಾವುಂಡರಾಯಪುರಾಣದ ವಿವರಣೆಯ ಚೌಕಟ್ಟಿನಲ್ಲಿ ಅಳವಟ್ಟಿವೆ. ಉದಾಹರಣೆಗೆ :

ನೆರೆದು ಮುಸುಕುವಾಖಿಲ ಜನದಾಶ್ಚರ್ಯ | ಪರಿಯಟನದಿಂ ಮತ್ತೆ ಮಗುಳ್
ಆರುದಿಂಗಳು ಪೋಗಲಂತು ಸಂವತ್ಸರ | ಪರಿಪೂರ್ಣ ತೀವಿದ ಬಳಿಕ
ಕುರುಜಾಂಗಣದ ಹಸ್ತಿನಪುರಾಧೀಶನಾ | ಕುರುವಂಶಾಗ್ರಣಿ ಸೋಮಪ್ರಭನ
ನಿರುತ ಸರ್ವಾರ್ಥ ಸಿದ್ಧಿಯಿಂ ಬಂದ ಧನದೇವನ | ಕಿರಿಯ ಶ್ರೇಯಾಂಸನಾಗಿರ್ದ
ಚಂದ್ರನಂತಭಿವೃದ್ಧಿಯನೆಯ್ದುಲೆ ಯೌವನ | ಸುಂದರ ರೂಪಸದ್ಗುಣನು
ಅಂದಿನ ಬೆಳಗಪ್ಪ ಜಾವದೊಳ್ ಸ್ವಪ್ನವ | ಚಂದದಿ ಕಂಡನೆಂತೆನಲು
ಮಂದರಾದ್ರಿಯ ಕಲ್ಪವೃಕ್ಷದ ಮೃಗರಾಜ | ನಿಂದುವರ ರವಿಯ ವೃಷಭನ
ಸಿಂಧುವನಷ್ಟಮಂಗಲ ಧಾರಿಣೆಯರಪ್ಪ| ಸುಂದರಿಯರು ಬರ್ಪುದನು

(ಪುರುಚ. vii-೨೭ರಿಂದ ೩೦)

ಅಖಿಳ ಜನಾಶ್ಚರ್ಯ ಪರ್ಯಟನದೊಳ್ ಮತ್ತಱುದಿಂಗಳ್ ಪೋಗೆ ಬರಿಸಂ ನೆಱೆದಂದು ಕುರುಜಾಂಗಣ ವಿಷಯದ ಹಸ್ತಿನಾಪುರಮನಾಳ್ವ ಕುರುವಂಶದ ಸೋಮಪ್ರಭಂಗೆ ಧನದೇವಂ ಸರ್ವಾರ್ಥಸಿದ್ಧಿಯಿಂ ಬಂದು ಶ್ರೇಯಾಂಸನೆಂಬ ತಮ್ಮನಾಗಿ ತನಗಂದಿನ ಬೆಳಗಪ್ಪ ಜಾವದೊಳ್ ಮಂದರಾದ್ರಿಯಂ ಕಲ್ಪವೃಕ್ಷಗಳುಂ ಸಿಂಹವೃಷಭಂಗಳುಂ ಸೂರ್ಯೇಂದುಗಳುಂ ಸಮುದ್ರಮುಮಷ್ಟಮಂಗಲಧಾರಿಭೂತರೂಪಂಗಳುಂ ತನ್ನ ಮನೆಯ ಮುಂದೆ ಬಂದಿರ್ದುದಂ ಸ್ವಪ್ನದೊಳ್ ಕಂಡು (ಚಾವುಂಪು. ಪು. ೪೭)

ಇದಾದನಂತರ ಚಾವುಂಡರಾಯಪುರಾಣದಲ್ಲಿ ದೊರೆಯುವ ವರ್ಣನೆ ಇಲ್ಲಿ ಕಂಡು ಬರುತ್ತದೆ. ಸ್ವಾಮಿ ಕಿರುಮನೆ ಪೆರ್ಮನೆ ಎನ್ನದೆ ಬರುತ್ತಿರುವಾಗ ಪರಿಚಾರಕನೊಬ್ಬನು ಸೋಮಪ್ರಭನರಮನೆಯತ್ತ ಬರುವ ವಿಚಾರ ತಿಳಿದು ಶ್ರೇಯಾಂಸನು 'ಬಡವ ನಿಧಿಯ, ಬಂಜೆ ಸುತನ, ಕುರುಡ ಕಣ್ಣ ಪಡೆದಂತೆ ರಾಗಿಸಿ' ಹೊಂಗಲಶಾದಿಗಳನ್ನು ಹಿಡಿದು ಆ ನೃಪಮುನಿಯ ಎದುರಿಗೆ ಹೋದನು. ಶ್ರೇಯಾಂಸನು ದಿಗಂಬರನನ್ನು ಕಾಣುತ್ತಿದ್ದಂತೆಯೇ ಜಾತಿಸ್ಮರನಾಗುವ ವಿಚಾರ ಇತರ ಕಾವ್ಯಗಳಲ್ಲಿ ಕಂಡುಬರುವಂತೆಯೇ ಇಲ್ಲಿಯೂ ಕಂಡುಬರುತ್ತದೆ.

ತಾರಾಧಿಪ ಮೇರುವ ಬಲಗೊಂಬಂತೆ ರಾಜನು ಮುನಿಪನ ಬಲವಂದು—

ಭೂರಿರತ್ನದ ಹಡಗಿಗೆ ಸ್ವಲ್ಪ ಬೆಲೆಯ ಸಂಚ | ಕಾರವ ಕೊಡುವ ಮಾಳ್ಕೆಯೊಳು
ಆರಾಯನಾದಿದೇವನ ದಿವ್ಯಹಸ್ತಕ್ಕೆ | ನೀರನಿಡುವ ಸಮಯದೊಳು (ಪುರುಚ. vii-೪೨)

ಶ್ರೇಯಾಂಸನು ತನ್ನ ಕೈಗಳಿಂದ ಭೂರಿ ರತ್ನಗಳು ಚೆನ್ನಾಗಿ ತೋರುವ ರೀತಿ ಹಸ್ತವನ್ನು ಉನ್ನತಮಾಡಿ ಪನ್ನೀರ ಶುದ್ಧಿಯೆರೆದನು. ಸ್ವಾಮಿಯ ಔನ್ನತ್ಯದ ಮುಂದೆ ರಾಜನು ನೀಡುವ ಆಹಾರದಾನವೂ ಸರಿಸಾಟಿಯಾಗಲಾರದು ಎಂಬ ಭಾವವನ್ನು ಕವಿ ಲೌಕಿಕ ಉಪಮೆಯ ಮೂಲಕ ವರ್ಣಿಸಿದ್ದಾನೆ.

ಮುಂದಿನ ಸಾಂಗತ್ಯ ಚಾವುಂಡರಾಯಪುರಾಣದಲ್ಲಿ ಬರುವ ಸಂಸ್ಕೃತ ಶ್ಲೋಕದ ಛಾಯೆಯಾಗಿದೆ :

ಶ್ರದ್ಧೆ ಶಕ್ತಿ ಭಕ್ತಿ ವಿಜ್ಞಾನಾಲುಬ್ಧತೆ | ಪೊರ್ದಿದ ದಯೆಕ್ಷಮೆಗಳೊಳು
ಶುದ್ಧಮನೋಹಾರಮಪ್ಪ ಸ್ವಗೃ | ಹದೊಳು ಉಚ್ಚಾಸನದಿ ಕುಳ್ಳಿರಿಸಿ (ಪುರುಚ. vii-೪೪)
ಶ್ರದ್ಧಾ ಶಕ್ತಿರಲುಬ್ಧತಂ ಭಕ್ತಿರ್ಜ್ಞಾನಂ ದಯಾಕ್ಷಮಾ |
ಇತಿ ಶ್ರದ್ಧಾಯಸ್ಸಪ್ತಗುಣಾಃ ಸ್ಯುರ್ಗೃಹಮೇಧಿನಾ || (ಚಾವುಂಪು. ಪು. ೪೭. ಪ. ೪೪)

ಅನಂತರ ಸ್ವಾಮಿಗೆ ಅಣ್ಣತಮ್ಮಂದಿರು ಮಾಡುವ ಅಷ್ಟವಿಧಾರ್ಚನೆಯ ವಿವರವನ್ನು ಕವಿ ಉತ್ಸಾಹದಿಂದ ನಿರೂಪಿಸಿದ್ದಾನೆ. ಬೇರೆಡೆ ಕಂಡುಬಾರದ ಈ ಭಾಗವು ಅಲ್ಲಲ್ಲಿಯೇ ಉಪಮೆಯ ಮೆರುಗಿನಿಂದ ಕೂಡಿದೆ :

ಘರ್ಮೋದಕ ಮುನೀಂದ್ರನ ಪಾದಕ್ಕೆ | ಪೆರ್ಮೆಯಿಂದೆರೆಯಲಗ್ರಜನು
ನಿರ್ಮಲವಾಗಿ ತೊಳೆದ ತನ್ನ ನಾದಿಯ | ಕರ್ಮಮಲ ತೊಳೆವಂತೆ (ಪುರುಚ. vii-೪೫)

ಚಾವುಂಡರಾಯಪುರಾಣದಲ್ಲಿ ಬರುವ ಗಾಹೆಯ ಅಭಿಪ್ರಾಯವನ್ನು ಹಿಡಿದಂತೆ ಈ ಕೆಳಗಿನ ಸಾಂಗತ್ಯವನ್ನು ಕವಿ ನೀಡಿದ್ದಾನೆ :

ಶುದ್ಧ ವಚನ ಮನ ಕಾಯಯೇಷಣ ಮೆಂಬ | ಶುದ್ಧಿನವಕದೊಡಗೂಡಿ
ಸಿದ್ಧ ಭಕ್ತಿಗೆ ಪ್ರಾರ್ಥಿಸಿ ದೇವನ ಹಸ್ತ | ಶುದ್ಧಿಯನಿತ್ತನಂತಾಗ (ಪುರುಚ. vii-೫೫)
ಪಡಿಗಹಮುಂಚಟ್ಠಾಣಂ | ಪಾಯೋದಕಂ ಮುಚ್ಚಣಚ್ಛ ಪಣಮಚ್ಚ |
ಮಣವಯಣಕಾಯಸುದ್ಧಿಂ | ಎಸ್ಸಣ ಸುದ್ಧೀ ಚ ನವವಿಹಂಪುಣ್ಣಂ ||
(ಚಾವುಂಪು. ಪು. ೪೮, ಪ. ೪೫)

ಈ ಪದ್ಯದಲ್ಲಿ ಸ್ವಾಮಿಯನ್ನು ತಡೆದು ನಿಲ್ಲಿಸುವ, ಉಚ್ಚಾಸನವನ್ನು ನೀಡುವ, ಪಾದಪ್ರಕ್ಷಾಲನ ಪೂಜೆ ನಮಸ್ಕಾರಗಳ ವಿಧಿಯನ್ನು ಹೇಳಿಲ್ಲ. ಗಾಹೆಯ ಉಳಿದ ಅರ್ಧ ಭಾಗದ ಅಭಿಪ್ರಾಯವು ಇಲ್ಲಿದೆ.

ಅಕ್ಷಯ ಮೋಕ್ಷ ಫಲನೀವ ವೃಕ್ಷಕೆ ತಾ | ಪೇಕ್ಷಿಸಿ ನೀರೆರೆವಂತೆ
ಇಕ್ಷುರಸವ ಪೊಂಗೊಡದೊಳು ರಾಜಮು | ಮುಕ್ಷುವ ಹಸ್ತಕೆರೆಯಲು (ಪುರುಚ. vii-೫೭)

ಎಂದು ಆಹಾರದಾನದ ವಿಧಾನವನ್ನು ಸುಂದರವಾಗಿ ವರ್ಣಿಸಿದ್ದಾನೆ.

ಚಾವುಂಡರಾಯಪುರಾಣದಲ್ಲಿ ಬರುವ ಕಂದಪದ್ಯವೂ ಸಹ ಇಲ್ಲಿ ಸಾಂಗತ್ಯದಲ್ಲಿ ಮೈದಳೆದಿರುವುದನ್ನು ಗಮನಿಸಬಹುದಾಗಿದೆ.

ವಸುಧಾರೆ ದೇವ ದುಂದುಭಿ ಸುರಕೀರ್ತನ | ಕುಸುಮಶರ ಗಂಧ ಮರುತ
ಪೊಸರತ್ನ ವೃಷ್ಟ್ಯಾದಿ ಪಂಚಾಶ್ಚರ್ಯ ಮಾ | ಗಸದೊಳು ದಿವಿಜರೆಸಗಲು (ಪುರುಚ. vii-೫೯)
ವಸುಧಾರೆ ದೇವದುಂದುಭಿ | ಕುಸುಮಾಸಾರಂ ಸುರ ಪ್ರಶಂಸಾಧ್ವನಿ ಬಂ
ದೆಸಗುವ ಸುರಭಿ ಸಮೀರಂ | ಪೊಸತಾಗಿರೆ ತೊಟ್ಟನಾಯ್ತು ಪಂಚಾಶ್ಚರ್ಯಂ (ಚಾವುಂಪು. ೪೭)

ಅನಂತರ ಅಕ್ಷಯ ತದಿಗೆಯ ವಿಷಯ, ಭರತನ ಪ್ರಶ್ನೆ, ಶ್ರೇಯಾಂಸನ ಜಾತಿ ಸ್ಮರಣೆಯ ವಿಷಯ—ಇವುಗಳಲ್ಲೆಲ್ಲಾ ಚಾವುಂಡರಾಯಪುರಾಣದ ಪ್ರಭಾವ ಉದ್ದಕ್ಕೂ ಕಂಡುಬರುತ್ತದೆ. ಅಲ್ಲಲ್ಲಿ ಕವಿ ವರ್ಣನಾಕ್ರಮದಲ್ಲಿ ಸ್ವೋಪಜ್ಞತೆಯನ್ನು ತೋರಿದ್ದಾನೆ.

ಆಹಾರದಾನದ ನಂತರ ದೂರದವರೆಗೆ ಸ್ವಾಮಿಯೊಡನೆ ಹೋಗಿ ಸ್ವಾಮಿಯ ಅನುಜ್ಞೆ ಮೀರಲಾರದೆ ಸಾಷ್ಟಾಂಗವೆರಗಿ ಹಿಂದಿರುಗಿದ ವರ್ಣನೆ ಉಳಿದೆಡೆ ಕಂಡುಬರುವುದಿಲ್ಲ.

**ಆದಿಪರಮೇಶ್ವರನ ಯಕ್ಷಗಾನ** : ಕಚ್ಛಾದಿಗಳು ಭಗವಂತನಂತೆ ತಪಸ್ಸನ್ನು ಆಚರಿಸಿದುದು, ಆದರೆ ಪರೀಷಹಗಳನ್ನು ಜಯಿಸದೆ ವ್ರತಭ್ರಷ್ಟರಾದುದು—ಈ ವಿಷಯಗಳು ಹಸ್ತಿಮಲ್ಲನ ಪೂರ್ವಪುರಾಣಕ್ಕೆ ಹತ್ತಿರವಾಗಿ ಕಂಡುಬಂದರೂ ಕಚ್ಛಾದಿಗಳು ವ್ರತಭ್ರಷ್ಟರಾದ ಸನ್ನಿವೇಶ ಇಲ್ಲಿ ವಿಭಿನ್ನ ರೀತಿಯಲ್ಲಿ ಬಂದಿದೆ. ಅವರು ಫಲವನ್ನು ಕಿತ್ತುಕೊಳ್ಳಲು ಹೋದಾಗ, 'ಫಲವನ್ನೀಯದೆ ತರುಗಳು ಸೆಳೆಕೊಂಡವು' ನೀರನ್ನು ಕುಡಿಯಲು ಹೋದಾಗ

ನೀರು ಶಿಲೆಯಂತೆ ಆಯಿತು. ಇದನ್ನು ಕಂಡು ಸ್ವೇಚ್ಛಾವೃತ್ತಿಯು ದಿಗಂಬರರಿಗೆ ಸಲ್ಲ ದೆಂದು ತಿಳಿದು ನಾರುಡೆಯನ್ನು ಧರಿಸಿ ಫಲ-ಜಲಗಳನ್ನು ಸ್ವೀಕರಿಸಿದರು. ಈ ಕಲ್ಪನೆ ಉಳಿದ ಕಾವ್ಯಗಳಲ್ಲಿ ಇಲ್ಲ. ಅಲ್ಲೆಲ್ಲಾ ವನದೇವತೆಗಳು ಎಚ್ಚರಿಕೆ ನೀಡುವುದು ಕಂಡು ಬರುತ್ತದೆ.

ನಾರುಡೆ ಮೊದಲಾದುವುಗಳನ್ನು ಧರಿಸಿದರೆಂಬ ವಿವರ ಹಸ್ತಿಮಲ್ಲನ ಪೂರ್ವ ಪುರಾಣಕ್ಕೆ ಅನುಸಾರವಾಗಿ ಬರುತ್ತದೆಯೇ ಹೊರತು ಉಳಿದ ಕಾವ್ಯಗಳಲ್ಲಿ ಬರುವಂತೆ ಭಸ್ಮಲೇಪನ, ಏಕದಂಡಿ, ತ್ರಿದಂಡಿ ವಿಚಾರಗಳು ಬರುವುದಿಲ್ಲ.

ಆದಿನಾಥನ ತಪೋನಿರ್ಭರತೆಯನ್ನು ಸಾಕಷ್ಟು ವಿವರವಾಗಿ ಕವಿ ಹೇಳಿದ್ದಾನೆ. ಆದಿ ಪುರಾಣ ಪೂರ್ವಪುರಾಣಗಳಂತೆ ವಿಸ್ತೃತ ವಿವರ ಕಂಡುಬರುತ್ತದೆಯಾದರೂ ಇಲ್ಲಿಯ ವಾಗ್ಧೋರಣೆ ಬೇರೆ.

ದ್ವಾದಶಾನುಪ್ರೇಕ್ಷೆಗಳನ್ನು ಧ್ಯಾನಿಸುತ್ತ ನಿತ್ಯನಿರ್ಮಲನಾಗಿ ನಿಜತತ್ವದ ಉಗ್ರತಪವನ್ನು ತಾಳ್ದ ಅಗ್ರಗಣ್ಯನಾದ ಸ್ವಾಮಿಯು ಶ್ರೀಮನ್ಮಹಾಮೇರು ನಿಂತಂತೆ ನಿಂತು, ಪೀಡಿಸುವ ದುಃಖಗಳಿಗೆ ಸಿಂಗನಾದನು—ಇತ್ಯಾದಿ ವಿವರಗಳಿವೆ. ಕವಿ ಪ್ರಾಸದ ಕಡೆಗೇ ಹೆಚ್ಚು ಗಮನವಿತ್ತಿದ್ದಾನೆ. ಪೂರ್ವಪುರಾಣ, ಆದಿಪುರಾಣಗಳ ಗಾಂಭೀರ್ಯ ಇಲ್ಲಿಯ ತಪೋ ನಿರೂಪಣೆಯ ಭಾಗದಲ್ಲಿ ಬಂದಿಲ್ಲ.

ನಮಿವಿನಮಿಗಳ ಪ್ರಸಂಗದಲ್ಲಿ ಕವಿ ಹಸ್ತಿಮಲ್ಲನ ಪೂರ್ವಪುರಾಣವನ್ನು ಅನುಸರಿಸಿ ದ್ದಾನೆ. ಅಲ್ಲಿಯ ಗದ್ಯಭಾಗವನ್ನು ಕವಿ ಯಕ್ಷಗಾನದ ಮಟ್ಟಿಗೆ ಅಳವಡಿಸಿದ್ದಾನೆ. ಆಹಾರ ದಾನ ಪ್ರಸಂಗ, ಅಕ್ಷಯ ತದಿಗೆ ಮೊದಲಾದ ವಿಚಾರಗಳು ಹಸ್ತಿಮಲ್ಲನ ಪೂರ್ವ ಪುರಾಣದ ಛಾಯಾವರ್ತಿಗಳೇ ಆಗಿವೆ.

ಸಾಧನೆ-ಸಿದ್ಧಿಗಳು ಎಲ್ಲರಿಗೂ ಲಭಿಸುವಂತಹವಲ್ಲ. ಅನುಕರಣೆ ಮಾತ್ರದಿಂದ ಅವು ಲಭಿಸವು; ಅಚಲ ನಿಷ್ಠೆ, ಆತ್ಮಬಲವೆಂಬುದು ಬೇಕು. ಕಚ್ಛ-ಮಹಾಕಚ್ಛ ಮೊದಲಾದ ಪ್ರಸಂಗಗಳು ವೃಷಭನ ತಪೋನಿಷ್ಠೆಯನ್ನು ಸಾಧನೆಯ ಹಿರಿಮೆಯನ್ನು ಎತ್ತಿ ಹಿಡಿಯು ತ್ತವೆ. ಈ ಪ್ರಸಂಗದಲ್ಲಿ ಪಂಪನಲ್ಲಿ ಕಂಡುಬರುವ ನಾಟಕೀಯ ಶೈಲಿಯನ್ನು ಉತ್ತರ ಕಾಲೀನ ಕವಿಗಳೆಲ್ಲರೂ ತಮ್ಮ ತಮ್ಮ ಕಾವ್ಯಗಳ ಹರವಿನ ಚೌಕಟ್ಟಿಗೆ ತಕ್ಕಂತೆ ಅಳವಡಿಸಿ ಕೊಂಡಿರುವುದು ಗಮನಾರ್ಹ.

## ಕೇವಲಜ್ಞಾನ ಕಲ್ಯಾಣ

**ಆದಿಪುರಾಣ-ಪೂರ್ವಪುರಾಣ :** ಇಲ್ಲಿಗೆ ಆದಿತೀರ್ಥಂಕರ ಚರಿತ್ರೆಯ ಒಂದು ಹಂತ ಮುಗಿದಂತಾಯಿತು. ಮುಂದೆ ಪುರುದೇವನು ಉಗ್ರತಪಸ್ಸಿನಿಂದ ಕರ್ಮದ ಬೇರನ್ನು ಕತ್ತರಿಸಿ ಕೇವಲಜ್ಞಾನವನ್ನು ಸಂಪಾದಿಸುವುದು, ಆದಿತೀರ್ಥಂಕರನಾಗಿ ನಿಂತು ಧರ್ಮೋ ಪದೇಶ ಮಾಡಿ ಮುಂದೆ ಕಾಲವೊದಗಿದಾಗ ಪರಿನಿರ್ವಾಣ ಹೊಂದುವುದು—ಈ ಅಂಶ ಗಳು ಈ ಭಾಗದ ಕಥಾಂಶವಾಗಿವೆ. ವೃಷಭನಾಥನು ತನ್ನ ಆತ್ಮವನ್ನು ಉದ್ಧಾರಮಾಡಿ ಕೊಂಡುದಲ್ಲದೆ ಇತರ ಜೀವಕೋಟಿಗಳಿಗೂ ಆತ್ಮೋದ್ಧಾರದ ಮಾರ್ಗವನ್ನು ತಿಳಿಸಿ ದವನು.

ವೃಷಭನಾಥನ ಘೋರ ಯೋಗಸಾಧನೆ ಸಾಗುತ್ತದೆ. ಆತ್ಮಕಲ್ಯಾಣವೊಂದನ್ನೇ ಗುರಿಯಾಗಿಟ್ಟುಕೊಂಡ ಈತನ ತಪದ ರೀತಿಯನ್ನು ವಿವರಿಸುವಲ್ಲಿ ಪಂಪನು ನಿಷ್ಠೆಯನ್ನು ತೋರಿದ್ದಾನೆ. ಪೂರ್ವಪುರಾಣದ ವಿಸ್ತೃತ ವಿವರವು ಇಲ್ಲಿ ಇಲ್ಲದಿದ್ದರೂ ಔಚಿತ್ಯಪೂರ್ಣ ಸಂಗ್ರಾಹಕತೆ ಇದೆ.

ಭೋಗದ ಹಿನ್ನೆಲೆಯಲ್ಲಿಯೇ ಬಂದ ಜೀವ ಅದನ್ನು ಸಂಪೂರ್ಣವಾಗಿ ಕಿತ್ತೊಗೆದು ಯೋಗದ ತುತ್ತತುದಿಗೆ ಏರುವ ಪವಿತ್ರ ಕಾಲಯೋಗವನ್ನು ನಾವು ಈ ಭಾಗದಲ್ಲಿ ದರ್ಶಿಸುತ್ತೇವೆ.

ಸ್ವಾಮಿಯ ತಪೋವಿಧಾನವು ಜೈನಪಾರಿಭಾಷಿಕ ಪದಗಳಿಂದ ತುಂಬಿದೆ. ಇಲ್ಲಿ ಕಾವ್ಯಾಂಶ ಕಡಿಮೆ ಎಂಬ ಮಾತು ನಿಜವಾದರೂ ಈ ಗಾಂಭೀರ್ಯಯುತ ಸನ್ನಿವೇಶವನ್ನು ನಿಭಾಯಿಸುವಲ್ಲಿ ಕವಿಗೆ ಪೌರಾಣಿಕ ಶೈಲಿಯಿಂದ ದೂರವಾಗುವುದೂ ಅಷ್ಟೇ ಕಷ್ಟವಾಗುವುದೆಂಬುದನ್ನು ನಾವು ನೆನಪಿನಲ್ಲಿಟ್ಟುಕೊಳ್ಳಬೇಕಾಗುತ್ತದೆ. ಸಂಪ್ರದಾಯನಿಷ್ಠ ಪುರಾಣದಲ್ಲಿ ಇಂತಹವು ಅನಿವಾರ್ಯವೆಂಬಂತೆ ಕಂಡುಬರುತ್ತವೆ. "ಆತನು (ವೃಷಭನು) ಕೇವಲಜ್ಞಾನ ಪಡೆದುದು, ಸೌಧರ್ಮೇಂದ್ರನು ನಾಲ್ಕನೆಯ ಕೇವಲಜ್ಞಾನ ಕಲ್ಯಾಣವನ್ನು ನಡೆಸಿದುದು ಇವುಗಳ ನಿರೂಪಣೆಯೂ ಆ ಮುಂದಿನ ಧರ್ಮೋಪದೇಶ ಕಥನವೂ ಸಾಮಾನ್ಯವಾಚಕರಿಗೆ ದುರ್ಗಮವೆನ್ನುವ ಮಟ್ಟಿಗೆ ಮತೀಯ ಪರಿಭಾಷೆ ಪ್ರಕ್ರಿಯೆಗಳಿಂದ ದಟ್ಟೈಸಿವೆಯೆನ್ನಬೇಕು. ಸಮವಸರಣ ಮಂಟಪದ ವಿಸ್ತಾರವಾದ ವರ್ಣನೆ ತನ್ನ ವೈಭವ ವಿಲಾಸಗಳಿಂದ ಅದ್ಭುತರಮ್ಯವಾಗಿದ್ದರೂ ಅದೂ ಕಾವ್ಯೇತರವಾದ ಭಾಗವೇ. ಹೃದಯಸ್ಪರ್ಶಿಯಾದ ಕಥೆ ಸನ್ನಿವೇಶಗಳಿಗೆ ಅವಕಾಶವಿಲ್ಲದಿರುವುದರಿಂದ ಸಾರ್ವತ್ರಿಕವಾದ ಆಕರ್ಷಣೆ ಇಲ್ಲಿ ಸಾಧ್ಯವಿಲ್ಲ. ಆದರೆ ಜೈನಧರ್ಮ ಸಂಪ್ರದಾಯನಿಷ್ಠರಿಗೆ ಇವೆಲ್ಲ ಪವಿತ್ರಸ್ಥಾನಗಳಾಗಿವೆ. ಧರ್ಮಗ್ರಂಥಗಳಲ್ಲಿ ಇದು ಸಹಜ"[೪೬] ಎಂಬ ಮಾತುಗಳು ಆದಿಪುರಾಣದ ಈ ಪ್ರಸಂಗದ ನಿರ್ವಹಣೆಯ ರೀತಿಯನ್ನು, ಧಾರ್ಮಿಕ ಕಾವ್ಯದ ಅನಿವಾರ್ಯ ಅಂಶಗಳನ್ನು ಪರಿಚಯಿಸುತ್ತವೆ.

ಚರಿಗೆಯನ್ನು ಮುಗಿಸಿಕೊಂಡು ಬಂದ ವೃಷಭಸ್ವಾಮಿಯು ಅನಿಂದ್ಯವಾದ ಜಿನಕಲ್ಪಿತಾಚಾರವನ್ನು ಕೈಕೊಂಡನು. ಯೋಗಯೋಗ್ಯ ಪ್ರದೇಶಗಳಲ್ಲಿ ಸ್ಥಿರ ಧ್ಯಾನಾಧೀನ ಮನಸ್ಕನಾಗಿ ವಿಹರಿಸುತ್ತಾ ಸಹಸ್ರ ವರ್ಷಗಳನ್ನು ಕಳೆದನು. ಪುರಿಮತಾಲ ಪಟ್ಟಣದ ಹೊರಭಾಗಕ್ಕತಿ ಸಮೀಪವೆನಿಸಿದ ಶಕಟೋದ್ಯಾನದಲ್ಲಿನ ಆಲದ ಮರದ ಕೆಳಗೆ ವಿಶಾಲವೂ ನಿರಾಕುಲವೂ ನಿರ್ಜಂತುಕವೂ ಆದ ಶಿಲಾಪಟ್ಟದಲ್ಲಿ ಪಲ್ಯಂಕಾಸನದಲ್ಲಿ ಕುಳಿತು ಪೂರ್ವಾಭಿಮುಖನಾಗಿದ್ದನು. ಆಗಿನ ಆತನ ತಪೋವಿಧಾನದ ರೀತಿಯನ್ನು ಕವಿ ತನ್ಮಯತೆಯಿಂದ ಹೀಗೆ ವರ್ಣಿಸಿದ್ದಾನೆ :

ಕರಣಗಣಂ ಕುನುಂಗಿರೆ ಮನಂ ನೊಸಲಲ್ಲಿರೆ ಲೋಚನಂಗಳು
ಳ್ಳರೆ ಮುಗುಳ್ದಿಂಬುವೆತ್ತಿರೆ ಕರದ್ವಯಪಲ್ಲವಮಂಕದೊಳ್ ಮರ
ಲ್ದಿರೆ ತನು ನಿಷ್ಪ್ರಕಂಪಮಿರೆ ದಂತಚಯಂ ಸಮನಾಗಿ ತನ್ನೊಳೊಂ
ದಿರೆ ಸಮಸಂದುದಾ ಪರಮಯೋಗಿಗೆ ಯೋಗನಿಯೋಗಭಾವನಂ (ಆದಿಪು. X-೧೪)

ಇಂದ್ರಿಯಸಮೂಹವು ಕುಗ್ಗಿ ಮನಸ್ಸು ನೊಸಲಲ್ಲಡಗಿತ್ತು. ಕಣ್ಣುಗಳು ತುಸು

ಮುಗುಳಾಗಿ ಇಂಬಾಗಿದ್ದುವು. ಕರಪಲ್ಲವಗಳೆರಡೂ ತೊಡೆಯ ಮೇಲೆ ಅಗಲಿಸಿ ಇಡಲ್ಪಟ್ಟಿದ್ದವು. ದೇಹವು ನಿಷ್ಕಂಪವಾಗಿತ್ತು. ದಂತಚಯವು ಸಮನಾಗಿ ಹೊಂದಿಕೊಂಡಿತ್ತು. ಹೀಗೆ ಆ ಪರಮಯೋಗಿಗೆ ಯೋಗಿ ನಿಯೋಗ ಭಾವನೆಯು ಸರಿದೋರಿತು ಎಂಬಲ್ಲಿ ಸಹಜೋಕ್ತಿಯ ವಿವರಣೆಯನ್ನು ಪುಟ್ಟಪುಟ್ಟ ವಾಕ್ಯಗಳಲ್ಲಿ ಕವಿ ನೀಡಿದ್ದಾನೆ. ಸ್ವಾಮಿಯ ಯೋಗವಿಧಾನದ ಚಿತ್ರವನ್ನು ಕಣ್ಮುಂದೆ ಕಟ್ಟಿದ್ದಾನೆ.

ಸಿದ್ಧಪರಮೇಷ್ಠಿಗಳ ಎಂಟುಗುಣಗಳನ್ನು ನೆನೆದು ಪಂಚಸಮಿತಿ-ತ್ರಿಗುಪ್ತಿ ಅಹಿಂಸಾದಿ ಪಂಚವ್ರತಗಳನ್ನು ಕೈಕೊಂಡನು. ಹನ್ನೆರಡು ಅನುಪ್ರೇಕ್ಷೆ, ದಶಧರ್ಮ, ಸಮ್ಯಕ್ಚಾರಿತ್ರಾದಿಗಳನ್ನು ಬಹುಕಾಲದವರೆಗೆ ಆಚರಿಸಿದನು. ಮೋಕ್ಷಪ್ರಾಸಾದಕ್ಕೆ ಏರಲು ಮೆಟ್ಟಲಾದ ಕ್ಷಪಣಕ ಶ್ರೇಣಿಯನ್ನೇರಿ ಶುಕ್ಲಧ್ಯಾನವನ್ನು ಹಂತಹಂತವಾಗಿ ಸಾಧಿಸಿಕೊಂಡು ಅನಂತಾನುಬಂಧಿ, ಪ್ರತ್ಯಾಖ್ಯಾನ, ಅಪ್ರತ್ಯಾಖ್ಯಾನ, ಸಂಜ್ವಲನಗಳಿಗೆ ಸಂಬಂಧಿಯಾದ ಕ್ರೋಧ, ಮಾನ, ಮಾಯ, ಲೋಭಗಳನ್ನು ನಾಶಮಾಡಿ ನೋಕಷಾಯಗಳನ್ನು ಘಾತಿಸಿ ಘಾತಿಕರ್ಮಗಳನ್ನು ನಾಶಗೊಳಿಸಿಕೊಂಡು ಅನಂತಜ್ಞಾನ, ಅನಂತದರ್ಶನ, ಅನಂತಸುಖ ಮತ್ತು ಅನಂತವೀರ್ಯಗಳೆಂಬ ಚತುಷ್ಟಯದಲ್ಲಿ ವಿಲಾಸಿಯಾಗಿ ವೃಷಭಯತಿಪತಿಯು ಕೈವಲ್ಯಲಕ್ಷ್ಮಿಯನ್ನು ಪಡೆದನು. ಉತ್ತರಾಷಾಢ ನಕ್ಷತ್ರದ ಫಾಲ್ಗುಣ ಬಹುಳ ಏಕಾದಶಿಯು ಸ್ವಾಮಿಯು ಕೇವಲಜ್ಞಾನಿಯಾದ ಪುಣ್ಯತಿಥಿಯಾಗಿದೆ.

ಧ್ಯಾನ ಮರೀಚಿಯಿಂದ ಬೆದರಿ ಘಾತಿ ತಮಗಳು ಅಸ್ತವಾದವು. ಭವ್ಯರ ಸಂತಾನವೆಂಬ ಕಮಲರಾಶಿಗೆ ಅರಳುವ ಸೌಭಾಗ್ಯವೊದಗಿತು. ದೇವತೆಗಳು ಹೂಮಳೆಗರೆದರು. ನಗಾರಿ ಧ್ವನಿಗಳಿಂದ ಸುರವಂದಿಮಾಗಧರ ಹೊಗಳಾಟದಿಂದ ದಿಕ್ಕುಗಳು ವ್ಯಾಪ್ತವಾದವು. ಸ್ವಾಮಿಯ ಕೈವಲ್ಯಬೋಧೋದಯ ಮಹಿಮೆಯು ಜಗದಾಶ್ಚರ್ಯಕರವಾಗಿದ್ದಿತು. ದೇವತೆಗಳು ಸಡಗರದಿಂದ ಸ್ವಾಮಿಯ ಬಳಿಗೆ ಬಂದು ಸ್ತುತಿಸಿದರು. ಸೌಧರ್ಮೇಂದ್ರನು ತನ್ನ ಆಜ್ಞೆಯಿಂದ ಕುಬೇರನು ನಿರ್ಮಿಸಿದ ಸಮವಸರಣವನ್ನು ಕಂಡನು. ಗಂಧಕುಟಿಯನ್ನು ಪ್ರದಕ್ಷಿಣೆ ಬಂದು ಸ್ತುತಿಸಿದನು.

ಅಷ್ಟರಲ್ಲಿ ಪುರಿಮತಾಲ ಪಟ್ಟಣದೊಡೆಯನಾದ ಭರತರಾಜನಿಗಿಂತ ಕಿರಿಯನಾದ ವೃಷಭಸೇನ ಕುಮಾರನು ಅನೇಕ ವಿಧವಾದ ಪೂಜಾದ್ರವ್ಯಗಳನ್ನು ಹಿಡಿದು ಪರಿವಾರ ಸಮೇತನಾಗಿ ಬಂದನು. ಸ್ವಾಮಿಯ ಶ್ರೀಮುಖವನ್ನು ಕಾಣುತ್ತಿದ್ದಂತೆಯೆ ಆಸನ್ನ ಭವ್ಯನು ಪ್ರೇರಿತನಾದನು; ಕಾಲಲಬ್ಧಿಯನ್ನು ಪಡೆದನು. ದೀಕ್ಷಾಸ್ವೀಕಾರದ ನಂತರ ವೃಷಭಸೇನನು ಸಪ್ತರ್ಧಿಸಂಪನ್ನನಾದನು.

ಈ ಕಡೆ ಭರತನಿಗೆ ಪುರುದೇವನಿಗುಂಟಾದ ಕೈವಲ್ಯ ಮಹಿಮೆಯನ್ನು, ಆಯುಧಾಗಾರದಲ್ಲಿ ಪ್ರಕಾಶಮಾನವಾದ ಚಕ್ರದ ಉತ್ಪತ್ತಿಯನ್ನು, ರಾಣಿ ಮಾದೇವಿಗಾದ ಪುತ್ರೋತ್ಸವದ ಸಂತೋಷವನ್ನು ಕ್ರಮವಾಗಿ ಪುರೋಹಿತ, ಆಯುಧಾಧ್ಯಕ್ಷ ಮತ್ತು ಅಂತಃಪುರದ ವೃದ್ಧ ಕಂಚುಕಿಯರು ಬಂದು ತಿಳಿಸಿದರು. ಆಗ ಭರತನು—

ಧರ್ಮಾರ್ಥಕಾಮಮೆಂಬಿವು | ಧರ್ಮ್ಮಾರ್ಥಿಜನಕ್ಕೆ ನೆಱೆದ ನೆರ್ಮಂತವಱೊಳ್
ಧರ್ಮ್ಮಂಪ್ರಧಾನಮರ್ಥಂ | ಧರ್ಮಾಂಘ್ರಿಪಫಳಮದರ್ಕ್ಕೆ ರಸಮದುಕಾಮಂ (ಆದಿಪು. X-೫೦)

ಧರ್ಮ, ಅರ್ಥ, ಕಾಮಗಳೆಂಬಿವು ಧರ್ಮಾರ್ಥಿಜನರ ವಿಶ್ವಾಸಕ್ಕೆ ಪಾತ್ರವಾದವು.

ಅವುಗಳಲ್ಲಿ ಧರ್ಮವು ಪ್ರಧಾನ. ಧರ್ಮವೃಕ್ಷದ ಹಣ್ಣು ಅರ್ಥ. ಆ ಹಣ್ಣಿನ ರಸವೇ ಕಾಮ ಎಂಬುದಾಗಿ ನುಡಿದು, ಅರ್ಹಂತನ ಪಾದಗಳಿಗೆರಗುವುದೇ ತನಗೆ ಈಗ ಮಿಗಿಲಾದ ಕರ್ತವ್ಯವೆಂದು ನುಡಿದನು. ಜೀವನಸಿದ್ಧಾಂತದಲ್ಲಿ ರೂಪಿಸಿಕೊಳ್ಳಬೇಕಾಗಿರುವ ಲೌಕಿಕಾ ಲೌಕಿಕ ಅಂಶಗಳ ನಡುವಿನ ಸೇತುವೆ, ಸಂಬಂಧಗಳನ್ನು ಈ ಮಾತುಗಳು ಅಪೂರ್ವವಾಗಿ ನಿರೂಪಿಸುತ್ತವೆ, ಕಾವ್ಯದ ಜೀವನಾಡಿಯಾಗಿ ಮಿಡಿಯುತ್ತವೆ. "ತನ್ನ ಕೃತಿಯನ್ನು ಓದುವವ ರಲ್ಲಿ ಈ ತಿಳಿವಳಿಕೆ ಸಿದ್ಧಾಂತಗಳನ್ನು ಮನದಟ್ಟು ಮಾಡಿಸಬೇಕೆಂಬುದೇ ಪಂಪನ ಕಾವ್ಯೋದ್ದೇಶ."[೪೭]

ಸಮವಸರಣಕ್ಕೆ ಆಗಮಿಸಿದ ಭರತನು ಸ್ವಾಮಿಯನ್ನು ಸ್ತುತಿಸತೊಡಗಿದನು. ಆ ಸ್ತುತಿಯ ತನ್ಮಯತೆಯಲ್ಲಿ ಪಂಪನ ಭಕ್ತಿಯ ಪರವಶತೆ ಮಿಳಿತಗೊಂಡಿರುವುದು ಸಹಜವಾಗಿದೆ. ಭಕ್ತಾರ್ದ್ರಹೃದಯ ಇಲ್ಲಿ ಭಗವಂತನನ್ನು ಸ್ತುತಿಸಿ ತಣಿಯಲು ಯತ್ನಿಸಿದೆ.

ಭರತನ ಸ್ತುತಿಯಲ್ಲಿ ಅರ್ಹಂತನ ದಿವ್ಯ ಸಾಧನೆಯ ಹಿರಿಮೆ ಹಾಗೂ ಆ ಹಿರಿಮೆಯನ್ನು ಸಾಧಿಸುವ ಹಂಬಲ ಅಡಕವಾಗಿವೆ.

ಅಳತೆಗೆ ತೂಕಕ್ಕೆಣಿಕೆಗ | ಮೊಳಗಾದುವು ಸಕಳವಸ್ತುಗಳ್ ಭುವನಜನ
ಕ್ಕಳೆಯಲ್ ತೂಗಲ್ಕೆಣಿಸ | ಲ್ಕಳುಂಬಮೆನಿಸಿದುದು ನಿನ್ನ ಗುಣಗಣಮರ್ಹಾ (ಆದಿಪು. X-೫೫)

ಈ ಭುವನಜನಕ್ಕೆ ಸಕಲ ವಸ್ತುಗಳು ಅಳತೆಗೂ ತೂಕಕ್ಕೂ ಎಣಿಕೆಗೂ ಸಿಗುತ್ತವೆ. ಆದರೆ ಅರ್ಹಂತನೇ! ನಿನ್ನ ಗುಣಗಳು ಮಾತ್ರ ಅಳತೆಗೂ ತೂಕಕ್ಕೂ ಎಣಿಕೆಗೂ ಮೀರಿದವು.

ಭವನಿಗಳದ ತೊಡರಂ ಕಳೆ | ಭವ ಜಳಧಿಯ ತಡಿಗೆ ಸಾರ್ಚು ಭವಗಹನದುಪ
ದ್ರವಮಂ ಕಿಡಿಸು ಭವಾಂತಕ | ಭುವನಕ್ಕುಯ್ ತಡೆಯದೆನ್ನ ನೀಂ ಭವಮಥನಾ (ಆದಿಪು.X-೫೮)

ಭಕ್ತಿಯ ಭರದಲ್ಲಿ ಹೃದಯ ತುಂಬಿಬಂದು ಬೇಡುತ್ತಿರುವ ಹೃದಯ ಭಗವಂತನ ಸ್ವರೂಪ'ವೀತರಾಗತ್ವ'ವೆಂಬುದನ್ನು ಮರೆಯುತ್ತದೆ. ಅವರವರ ಬಂಧ-ಮುಕ್ತಿಗೆ ಅವ ರವರೆ ಕಾರಣರಾದರೂ ಭಕ್ತಿಪೂರಿತ ಭಾವವು ಅಲೌಕಿಕ ಸಾರವನ್ನು ಹೊಂದಲು ಬಯಸಿ 'ಸಂಸಾರದ ಸಂಕೋಲೆಯ ತೊಡರಿನಿಂದ ತಪ್ಪಿಸು, ಸಂಸಾರಸಮುದ್ರದ ದಡವನ್ನು ದಾಟಿಸು. ಸಂಸಾರವೆಂಬ ಕಾಡಿನ ಉಪದ್ರವವನ್ನು ಕೆಡಿಸು. ಹೇ ಭವಮಥನ, ಸಂಸಾರ ನಾಶಕವಾದ ಭವನಕ್ಕೆ ನನ್ನನ್ನು ತಡೆಯದೆ ಒಯ್ಯು' ಎಂದು ಬೇಡುತ್ತದೆ. ಹೇ ಜಿನ! ಜನನ-ಮರಣ ಸಂಕೋಲೆಯು ಪೂರ್ಣವಾಗಿ ನಶಿಸುವವರೆಗೆ ನಿನ್ನನ್ನು ಸ್ಮರಿಸುತ್ತಿರುವೆನೆಂದು ಪ್ರತಿಜ್ಞೆಯನ್ನು ಮಾಡಿದ ಭರತ. ಆ ಪ್ರತಿಜ್ಞೆಗೆ ಕಳಸವಿಟ್ಟಂತೆ—

ಅಮರೇಂದ್ರೋನ್ನತಿ ಖೇಚರೇಂದ್ರವಿಭವಂ ಭೋಗೀಂದ್ರಭೋಗಂ ಮಹೇಂ
ದ್ರಮಹೈಶ್ವರ್ಯಮಿವೆಲ್ಲಮಧ್ರುವಮಿವಂ ಬೇಳ್ಪಿಂತು ಬೇಳಲ್ಲೆನು
ತ್ತಮ ದೀಕ್ಷಾವಿಧಿಯುಂ ಸಮಾಧಿಮರಣಂ ಕರ್ಮಕ್ಷಯಂ ಬೋಧಿಲಾ
ಭಮಮೋಘಂ ದೊರೆಕೊಳ್ವುದಕ್ಕೆಮಗೆ ಮುಕ್ತಿ ಶ್ರೀಮನೋವಲ್ಲಭಾ (ಆದಿಪು. X-೬೧)

ಇಂದ್ರನ ಉನ್ನತಿ, ಖೇಚರೇಂದ್ರನ ವಿಭವ, ಭೋಗೀಂದ್ರ ಭೋಗ, ಮಹೇಂದ್ರನ ಮಹೈಶ್ವರ್ಯ ಇವೆಲ್ಲ ಅಸ್ಥಿರಗಳು; ಆದ್ದರಿಂದ ಅಪ್ರಾರ್ಥನೀಯಗಳು. ಉತ್ತಮ ದೀಕ್ಷಾವಿಧಿ, ಸಮಾಧಿಮರಣ, ಕರ್ಮಕ್ಷಯ ಮತ್ತು ಬೋಧಿಲಾಭಗಳು ನಮ್ಮ ಕೈಸಾರಲಿ

ಮುಕ್ತಿ ಶ್ರೀಮನೋವಲ್ಲಭಾ ಎಂದು ಭಾವನಿರ್ಭರತೆಯಿಂದ ಪ್ರಥಮ ಚಕ್ರಿಯ ಹೃದಯ ತನ್ನೆಲ್ಲ ಲೌಕಿಕ ಹಿರಿಮೆಯನ್ನು ಮರೆತು ಮಿಡಿಯುತ್ತದೆ. ಪ್ರಥಮ ಜಿನನ ಪ್ರಥಮ ಪುತ್ರನ ಭಕ್ತಿ ಪುಷ್ಪಾಂಜಲಿಯನ್ನು ಇಲ್ಲಿ ಸುಂದರವಾಗಿ ಹೆಣೆಯಲಾಗಿದೆ. ಪೂರ್ವಪುರಾಣದಲ್ಲಿಲ್ಲದ ಈ ಭಾಗ ಹೃದಯಸ್ಪರ್ಶಿಯಾಗಿದೆ. "ಈ ಒಂಬತ್ತು ಪದ್ಯಗಳು ಸಂಸಾರಕ್ಕೆ ಆಸತ್ತ ಪಂಪನ ಒಂದು ಭಾವಗೀತೆ".[೪೮] "ಈ ಸ್ತುತಿ ಎಲ್ಲ ಧರ್ಮಗಳ ದೇವದೇವತಾಪುರುಷರಿಗೆ ಸಮಾನವಾಗಿ ಅನ್ವಯಿಸುವ ವ್ಯಾಪಕವಾದ, ಉದಾರವಾದ ದೃಷ್ಟಿಯಿಂದ ಕೂಡಿರುವುದು ಮೆಚ್ಚತಕ್ಕುದಾಗಿದೆ. ಪಂಪನ ಹೃದಯದ ಮೊರೆಯನ್ನೇ ಇಲ್ಲಿ ಕೇಳಬಹುದು"[೪೯].

ಜಿನೇಶ್ವರನ ದಿವ್ಯಧ್ವನಿ ಹೊರಟಿತು. ಭರತಾದಿಗಳಿಗೆ ಸಂಸಾರ ಸ್ವರೂಪ, ಸಪ್ತ ತತ್ವಾದಿ ಉಪದೇಶ ಲಭ್ಯವಾಯಿತು. ಇಲ್ಲಿ ಪಂಪನು ಸರಳವಾಗಿ ತತ್ತ್ವೋಪದೇಶದ ಭಾಗವನ್ನು ನಿರ್ವಹಿಸಿದ್ದಾನೆ. ತಾತ್ವಿಕ ವಿಷಯವನ್ನು ಅಡಕಗೊಳಿಸಿ ಸಂಕ್ಷಿಪ್ತವಾಗಿ ನಿರೂಪಿಸಿದ್ದಾನೆ. ಉದಾಹರಣೆಗೆ :

> ಸಮ್ಯಗ್ದರ್ಶನಜ್ಞಾನಚಾರಿತ್ರಂಗಳ್‌ಅವಿಕಲಂಗಳ್ ಮೋಕ್ಷಕಾರಣಂಗಳ್ ಅಲ್ಲಿ ತತ್ವಾರ್ಥ ಶ್ರದ್ಧಾನಂ ಸಮ್ಯಗ್ದರ್ಶನಂ, ಆ ತತ್ವಮುಂ ಜೀವಾಜೀವಾಸ್ರವಬಂಧ ಸಂವರನಿರ್ಜ್ಜರಾ ಮೋಕ್ಷಭೇದದಿಂ ಸಪ್ತವಿಧಂ; ಪ್ರಮಾಣನಯ ನಿಕ್ಷೇಪಾನುಯೋಗ ಸದಾದಿಗಳಿಂ ನಿಶ್ಚಿಯಿಸಿದ ಸಪ್ತತತ್ವಂಗಳೊಳಗೆ ಚೇತನಾಲಕ್ಷಣಮಪ್ಪುದು ಜೀವತತ್ತ್ವಂ. ಅಜೀವ ತತ್ವಮುಂ ಸಂಸಾರ ಮುಕ್ತ ಭೇದದಿಂ ದ್ವಿವಿಧಮಕ್ಕುಂ, ಅಲ್ಲಿಮುಕ್ತ ಜೀವಮೇಕಪ್ರಕಾರಮೇ. ಸಂಸಾರಿ ಜೀವಂ ತ್ರಸಸ್ಥಾವರ ವಿಕಲ್ಪದಿಂದಿರ್ತೆಱನಕ್ಕುಮಲ್ಲಿಯುಂ ತ್ರಸನಾಮ ಕರ್ಮ್ಮೋದಯವಶಂಗಳ್ ತ್ರಸಕಾಯಂಗಳ್. ಸ್ಥಾವರನಾಮ ಕರ್ಮ್ಮಪಾಕಾಧೀನಂಗಳ್ ಸ್ಥಾವರಂಗಳ್. . . .
> (ಆದಿಪು. ಆಶ್ವಾಸ x)

ಈ ವಿವರಗಳನ್ನು ಕವಿ ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಅತ್ಯಂತ ಸರಳೀಕರಿಸಿ ಬಾಲಪಾಠದಂತೆ ನೀಡಿದ್ದಾನೆ. ಪಾಂಡಿತ್ಯದ ಧೋರಣೆಯನ್ನು ತೋರದೆ, ಜಟಿಲಗೊಳಿಸದೆ ನಿರೂಪಿಸಿರುವ ವಿಧಾನ ಮೆಚ್ಚುವಂತಹದ್ದು. ಆದರೂ ಈ ಪಾರಿಭಾಷಿಕ ಪದಗಳು ವ್ಯಾಖ್ಯಾನವನ್ನು ಬಯಸುತ್ತವೆಯೆಂಬುದನ್ನು ಗಮನಿಸಬೇಕು.

ತತ್ತ್ವೋಪದೇಶದ ನಂತರ ಕುರುವಂಶ ಚೂಡಾಮಣಿಯಾದ ಸೋಮಪ್ರಭ, ಆತನ ತಮ್ಮ ಶ್ರೇಯಾಂಸ, ಭರತೇಶನ ತಮ್ಮ ಅನಂತವೀರ್ಯ ಇವರು ದೀಕ್ಷಿತರಾಗಿ ಗಣಧರರಾದರು. ಬ್ರಾಹ್ಮೀ ಸುಂದರಿಯರೂ ದೀಕ್ಷಿತರಾದರು. ಶ್ರುತಕೀರ್ತಿಯು ಶ್ರಾವಕ ಶ್ರೇಷ್ಠನಾದನು. ಪ್ರಿಯವ್ರತೆ ಶ್ರಾವಕಿಯರಲ್ಲಿ ಶ್ರೇಷ್ಠಳೆನಿಸಿದಳು. ಮರೀಚಿಯನ್ನುಳಿದು ಕಚ್ಛ ಮಹಾಕಚ್ಛರು ಅರ್ಹದ್ರೂಪಧಾರಿಗಳಾದರು. ಅನಂತವೀರ್ಯನು ಮೋಕ್ಷಲಕ್ಷ್ಮಿಗೆ ವಲ್ಲಭನಾದನು (ಸಾಮಾನ್ಯವಾಗಿ ಬಾಹುಬಲಿಯನ್ನು ಪ್ರಥಮ ಮೋಕ್ಷಗಾಮಿ ಎಂದು ಪರಿಗಣಿಸಲಾಗಿದೆ. ಆದರೆ ವರ್ತಮಾನಕಾಲದಲ್ಲಿ ಮೋಕ್ಷಕ್ಕೆ ಹೋದವರಲ್ಲಿ ಅನಂತವೀರ್ಯ ಮೊದಲಿಗನಾಗಿದ್ದಾನೆ).

"ಪಾಪಾವಗ್ರಹದಿಂ ವಿನಯೋತ್ಕರ ಸಸ್ಯಾವಳಿ ಸುಗಿದುಗಿದು ಕೂಡೆ ಬಾಡಿರ್ದುದು". ಆದ್ದರಿಂದ ಹೇ ದೇವ ನಿನ್ನ ಧರ್ಮವಿಹಾರವು ನಡೆಯಲಿ ಎಂದು ದೇವೇಂದ್ರನು ಬೇಡಿಕೊಂಡನು. ಸಮವಸರಣವು ಗಗನಮಂಡಲದಲ್ಲಿ ಹೊರಟಿತು. ಶಕ, ಕಾಶ್ಮೀರ,

ಆಂಧ್ರ, ಕರ್ನಾಟಕ, ಮಗಧಾದಿಗಳಲ್ಲಿ ಪರಮಾತ್ಮನ ಸಮವಸರಣವು ಸಂಚರಿಸುತ್ತಾ ವಿರಾಜಿಸಿತು.

ಕೇವಲಜ್ಞಾನೋತ್ಪತ್ತಿ ಮಹೋತ್ಸವವನ್ನು ದೇವತೆಗಳು ಆದಿತೀರ್ಥಂಕರನಿಗೆ ಎಸಗಿದ ಹಿನ್ನೆಲೆಯಲ್ಲಿ ಅವರ ವಿಶಾಲಹೃದಯದ ಮನೋಭಾವವಿದೆ. ಕೇವಲಜ್ಞಾನ ಕಲ್ಯಾಣದಲ್ಲಿ ಸ್ವಾಮಿ ಸಮವಸರಣದಲ್ಲಿ ವಿರಾಜಮಾನನಾಗಿದ್ದನೆಂಬುದು ಸ್ವಾಮಿಯ ವೈಭವಕ್ಕೋಸ್ಕರ ಮಾತ್ರವಲ್ಲ. ಸ್ವಾಮಿಯು ಜೀವಕೋಟಿಗೆ ಉಪದೇಶವನ್ನು ನೀಡಿ ಉದ್ಧರಿಸಲಿ ಎಂಬ ವಿಶಾಲ ಮನಸ್ಸು ದೇವೇಂದ್ರನಿಗಿದೆ. ಆ ಜೀವಕೋಟಿಗಳಲ್ಲಿ ತಾನೂ ಒಬ್ಬನೆಂಬುದನ್ನು ಅವನು ಮರೆಯುವುದಿಲ್ಲ. ತಾನು ಸ್ವರ್ಗಾಧಿಪತಿಯೆಂಬ ಅಹಮಿಕೆಯಿಲ್ಲದೆ ಮೋಕ್ಷ ಮಾರ್ಗವನ್ನರಿಯಲು, ಸಮವಸರಣದ ಧರ್ಮೋಪದೇಶದ ಸಭೆಯನ್ನು ರಚಿಸಲು ಕಾರಣ ಕರ್ತನಾಗಿ ತನ್ಮೂಲಕ ಪುಣ್ಯಭಾಗಿಯಾಗಿದ್ದಾನೆ, ಕೃತಾರ್ಥನಾಗಿದ್ದಾನೆ ದೇವೇಂದ್ರ.

ಆದಿಪುರಾಣದಲ್ಲಿ ಬರುವ ಈ ಕೇವಲಜ್ಞಾನ ಕಲ್ಯಾಣದ ಭಾಗವು, ಪೂರ್ವಪುರಾಣದಲ್ಲಿ ಬರುವ ಅತ್ಯಂತ ವಿಸ್ತೃತ ರೂಪದ ವರ್ಣನೆಯ ಸಂಗ್ರಹಭಾಗವೇನೋ ನಿಜ. ಆದರೆ ಪಂಪನ ಸ್ವಂತಿಕೆ ಇಲ್ಲವೆಂದಲ್ಲ. ಆದಿದೇವನ ತಪದ ವರ್ಣನೆ, ಪರೀಷಹಗಳ ಜಯ, ಧರ್ಮಧ್ಯಾನ ಶುಕ್ಲಧ್ಯಾನಗಳಲ್ಲಿ ತನ್ಮಯನಾಗಿ ಕೇವಲಿಯಾದುದನ್ನು ಪೂರ್ವಪುರಾಣ ದಲ್ಲಿ ಜಿನಸೇನರು ವಿಸ್ತೃತವಾಗಿ ವರ್ಣಿಸಿದ್ದಾರೆ. ೧೧೫ ಶ್ಲೋಕಗಳಲ್ಲಿ (XX-೧೫೪ ರಿಂದ ೨೬೮) ಪೂರ್ವಪುರಾಣದಲ್ಲಿ ವಿಸ್ತಾರವಾಗಿ ಬರುವ ಈ ವಿವರಗಳು ಪಂಪನಲ್ಲಿ ಸಂಗ್ರಹ ವಾಗಿ ಸರಳವಾಗಿ ನಿರೂಪಿತವಾಗಿವೆ. ಜೈನ ಪರಿಭಾಷೆಯನ್ನು ಬಿಡದಿದ್ದರೂ ಅತ್ಯಂತ ಜಟಿಲತೆಗೆ ಹೋಗದೆ ಎರಡು ವಚನ ಮತ್ತು ಮೂರು ಪದ್ಯಗಳಲ್ಲಿ ವರ್ಣಿಸಿದ್ದಾನೆ. ಧ್ಯಾನದಲ್ಲಿ ತನ್ಮಯನಾದ ಭಗವಂತನ ಸ್ವರೂಪವನ್ನು ಪಂಪನು ಸರಳೀಕರಿಸಿ ಸಹಜೋಕ್ತಿ ಯಲ್ಲಿ ಚಿತ್ರಿಸಿದ್ದಾನೆ. ಪೂರ್ವಪುರಾಣದಲ್ಲಿ ಬರುವ ಧ್ಯಾನವಿಧಾನದ ವಿಸ್ತಾರ ವರ್ಣನೆ ಪಂಪನಲ್ಲಿ ಕಂಡುಬರುವುದಿಲ್ಲ.

ಕರ್ಮಾರಿಯನ್ನು ನಾಶಮಾಡಿ ಕೇವಲಜ್ಞಾನವನ್ನು ಪಡೆದ ವೃಷಭನಾಥನನ್ನು ಶತ್ರುಸೈನ್ಯ ವನ್ನು ಜಯಿಸಿದ ವೀರಯೋಧನಂತೆ ಎಂದು ಪೂರ್ವಪುರಾಣದಲ್ಲಿ ವರ್ಣಿಸಿದ್ದರೆ, ಪಂಪನು ನೇರವಾಗಿ ಇದರ ನಿರೂಪಣೆಯನ್ನು ಮಾಡಿದ್ದಾನೆ. ಉದಾಹರಣೆಗೆ :

'ಮೋಹವೆಂಬ ಶತ್ರುಗಳನ್ನು ಭೇದಿಸುವುದಕ್ಕೆ ಇಚ್ಛಿಸುವ ಆ ಸ್ವಾಮಿಗೆ ಇಂದ್ರಿಯ ಸಂಯಮ, ಪ್ರಾಣಿಸಂಯಮಗಳೆರಡೂ ಮಸ್ತಕದ ಕವಚ, ಶರೀರದ ಕವಚಗಳಾಗಿದ್ದವು. ಶ್ರೇಷ್ಠವಾದ ಧ್ಯಾನವು ಜಯಶೀಲವಾದ ಅಸ್ತ್ರವಾಗಿದ್ದಿತು. ಜ್ಞಾನಗಳೆಂಬ ಅಮಾತ್ಯರು ಪರಿಣಾಮ ವಿಶುದ್ಧಿ ಶಕ್ತಿಯ ಚ್ಯುತಿಯನ್ನು, ಸೈನ್ಯಚ್ಯುತಿಯನ್ನು ಪರಿಹರಿಸುವುದಕ್ಕೋಸ್ಕರ ಮುಂದೆಮಾಡಲ್ಪಟ್ಟರು. ವಿಶುದ್ಧ ಪರಿಣಾಮವು ಸೇನಾಪತಿಯಾಯಿತು. ಗುಣಗಳೆಂಬ ಸೈನಿಕರಿಗೆ ಪ್ರತಿಪಕ್ಷದಲ್ಲಿ ರಾಗದ್ವೇಷ ಮೊದಲಾದುವು ಹೇಳಲ್ಪಟ್ಟಿವೆ. ಹೀಗೆ ಸೈನ್ಯವನ್ನು ಸೇರಿಸಿದ ಜಗದ್ಗುರುವಿನ ಜಯದ ಉದ್ಯೋಗದಲ್ಲಿ ಕರ್ಮವನ್ನು ಚೂರುಚೂರು ಮಾಡ ಲಾಯಿತು (XX-೨೩೫ ರಿಂದ ೨೩೭). ಪಂಪನು ಇಂತಹ ಗಂಭೀರ ವಿಚಾರದಲ್ಲಿ ಅಲಂಕಾರ ವಿಧಾನಕ್ಕೆ ಒಲಿಯದೆ ನೇರಮಾರ್ಗದ ವರ್ಣನಾವಿಧಾನವನ್ನೇ ಕೈಗೊಂಡಿದ್ದಾನೆ.

ಸಮವಸರಣದ ವರ್ಣನೆ ಜೈನಪುರಾಣಗಳಲ್ಲಿ ಒಂದು ಅಂಗವಾಗಿ ಸೇರ್ಪಡೆಯಾಗಿದೆ.

('ಜೈನಪುರಾಣಲಕ್ಷಣ'ಗಳಲ್ಲಿ ಇದನ್ನು ಗಮನಿಸಲಾಗಿದೆ). ಸಮವಸರಣದ ಹಾಗೂ ಸ್ವಾಮಿಯ ವಿಭೂತಿಯನ್ನೊಳಗೊಂಡ ವಿವರಗಳು ಪೂರ್ವಪುರಾಣದಲ್ಲಿ ೫೧೨ ಪದ್ಯಗಳಲ್ಲಿ ಸವಿಸ್ತಾರವಾಗಿ ವರ್ಣನೆಗೊಂಡಿದ್ದರೆ, ಪಂಪನು ಉಚಿತರೀತಿಯಲ್ಲಿ ೧೨ ವಚನ ಹಾಗೂ ೨೨ ಪದ್ಯಗಳಲ್ಲಿ ಅಂದಗೆಡದಂತೆ ಸೆರೆಹಿಡಿದಿದ್ದಾನೆ.

ಸ್ವಾಮಿಯ ಕೇವಲಜ್ಞಾನೋದಯ ಹಾಗೂ ತನಗೆ ಒದಗಿ ಬಂದ ಚಕ್ರರತ್ನ ಉತ್ಪತ್ತಿ, ಪುತ್ರೋತ್ಪತ್ತಿಯ ವಿಚಾರಗಳು ಭರತನಿಗೆ ಹೇಗೋ ತಿಳಿಯುತ್ತವೆ ಎಂದು ಪೂರ್ವ ಪುರಾಣದಲ್ಲಿ ಬರುತ್ತದೆ (xxiv-೭). ಆದರೆ ಆದಿಪುರಾಣದಲ್ಲಿ ಕವಿಯು ಅದಕ್ಕೊಂದು ನಾಟಕೀಯ ಪ್ರಸಂಗವನ್ನು ಕಲ್ಪಿಸಿ ಸುಂದರವಾಗಿ ವರ್ಣಿಸಿದ್ದಾನೆ. ಪುರೋಹಿತಾದಿಗಳು ಬಂದು ನಮಸ್ಕರಿಸಿದರು. ಕಟ್ಟಿದ ಪೇಟದ ಇಳಿಬಿಟ್ಟ ಬಟ್ಟೆಯಿಂದ ಬಾಯನ್ನು ಮರೆಮಾಡಿಕೊಂಡು ವಿಷಯವನ್ನು ದೂತರು ತಿಳಿಸುವ ರೀತಿ ನಾಟಕೀಯತೆಯಿಂದ ಕೂಡಿದೆ.

ಪಂಪನ ನಡಿಗೆ ಪೂರ್ವಪುರಾಣವನ್ನು ಸಂಗ್ರಹಿಸುತ್ತಾ, ಅಲ್ಲಲ್ಲಿಯೇ ಅಲ್ಲಿಯ ಮಾತುಗಳನ್ನೇ ಕನ್ನಡೀಕರಿಸುವ ನಿಷ್ಠೆಯನ್ನು ತೋರಿದೆ. ಉದಾಹರಣೆಗೆ :

> ಅಥವಾ ಸರ್ವಮಪ್ಯೇತತ್ಫಲಂ ಧರ್ಮಸ್ಯ ಪುಷ್ಕಲಂ |
> ಯತೋ ಧರ್ಮತರೋರರ್ಥಃ ಫಲಂ ಕಾಮಸ್ತು ತದ್ರಸಃ || (ಪೂರ್ವಪು. xxiv, ೭)

ಅಥವಾ ಸಂಪೂರ್ಣವಾದ ಇವೆಲ್ಲವೂ ಧರ್ಮದ ಫಲವಾಗಿದೆ. ಏತಕ್ಕೆಂದರೆ ಅರ್ಥವು ಧರ್ಮವೆಂಬ ವೃಕ್ಷದ ಫಲವಾಗಿದೆ. ಕಾಮವು ಆ ಫಲದ ರಸವಾಗಿದೆ ಎಂಬ ಭಾವವನ್ನು ಪಂಪನೂ ಸಹ ಹಿಡಿದಿಟ್ಟಿದ್ದಾನೆ (ಆದಿಪು. x-೫೦). ಜಿನಸೇನರ ಜೀವನದೃಷ್ಟಿ ಪಂಪನಲ್ಲಿಯೂ ಅಚ್ಚೊತ್ತಿದೆ.

ಭರತಚಕ್ರವರ್ತಿಯು ಮಾಡುವ ಸ್ತುತಿಯು ಪೂರ್ವಪುರಾಣದಲ್ಲಿಯೂ ಕಂಡುಬರುತ್ತದೆ (೬೬ ಶ್ಲೋಕಗಳಲ್ಲಿ ಈ ವರ್ಣನೆ ಬರುತ್ತದೆ). ಆದರೆ ಪಂಪನು ತನ್ನದೇ ಆದ ಧಾಟಿಯಲ್ಲಿ ಭಕ್ತಿ ಭಾವುಕ ಧ್ವನಿಯನ್ನು ತಂದಿದ್ದಾನೆ.

ಆದಿಪುರಾಣದಲ್ಲಿ ವೃಷಭಸೇನನು ಗಣಧರನಾಗುವುದು ಭಗವಂತನ ದರ್ಶನಮಾತ್ರದಿಂದ. ಆ ಪರಮನ ದಿವ್ಯದರ್ಶನವೊಂದೇ ಆತನ ಕಾಲಲಬ್ಧಿಯ ದ್ವಾರವನ್ನು ತೆಗೆಯಲು ಸಾಕಾಯಿತು.ಭಗವಂತನ ಮಹಿಮೆಯನ್ನು ಪಂಪನು ಅಧಿಕಗೊಳಿಸುವಂತೆ ವರ್ಣಿಸಿದ್ದಾನೆ. ಪೂರ್ವಪುರಾಣದಲ್ಲಿಯಾದರೋ ಭಗವಂತನು ಭರತನಿಗೆ ಉಪದೇಶ ಮಾಡಿದನಂತರ, ಆ ಉಪದೇಶದ ಪ್ರಭಾವಕ್ಕೊಳಗಾಗಿ ವೃಷಭಸೇನನು ಗಣಧರನಾಗುತ್ತಾನೆ.

ಸ್ವಾಮಿಯ ತತ್ತ್ವೋಪದೇಶದ ನಿರೂಪಣೆ ಪೂರ್ವಪುರಾಣದಲ್ಲಿ ಜಟಿಲವಾಗಿದೆ. ಆದರೆ, ಆದಿಪುರಾಣದಲ್ಲಿ ಈ ಭಾಗ ಅದಕ್ಕೆ ಅಪವಾದವಾಗಿದೆ. ಪಂಪನಂತಹ ಉದ್ದಾಮ ಪಂಡಿತನು ಜನಸಾಮಾನ್ಯರನ್ನು ದೃಷ್ಟಿಯಲ್ಲಿಟ್ಟುಕೊಂಡು ತೋರಿರುವ ಧೋರಣೆ ಸದ್ಭಾವ ಪೂರಿತವಾಗಿದೆ. "ಪಂಪನ ಆದಿಪುರಾಣ ಎಲ್ಲ ಅರ್ಥದಲ್ಲೂ ಹೆಚ್ಚು ಮಾನವೀಯ, ಪೂರ್ವಪುರಾಣ ವಿದ್ವದೀಯ."[೫೦]

ಪೂರ್ವಪುರಾಣದಲ್ಲಿ ಬರುವ ಸೌಧರ್ಮೇಂದ್ರನ ೧೦೦೮ ನಾಮಕೀರ್ತನವನ್ನು ಪಂಪನು ಕಥಾ ಬೆಳವಣಿಗೆಯ ದೃಷ್ಟಿಯಿಂದ ಕೈಬಿಟ್ಟಂತೆ ತೋರುತ್ತದೆ.

## ಉತ್ತರಕಾಲೀನ ಕಾವ್ಯಗಳು

**ಚಾವುಂಡರಾಯಪುರಾಣ** : ಪೂರ್ವಪುರಾಣ, ಆದಿಪುರಾಣಗಳಲ್ಲಿ ಬಂದಿರುವ ವಿಸ್ತೃತ ವರ್ಣನಾಭಾಗವನ್ನು ಕೈಬಿಡಲಾಗಿದೆ. ಧ್ಯಾನತತ್ವದ ವರ್ಣನೆ, ತಪೋವಿಧಾನಾದಿ ವರ್ಣನೆಗಳನ್ನು ಕೈಬಿಟ್ಟು ಕಥಾಘಟನೆಯ ಮುಖ್ಯಾಂಶಗಳನ್ನು ಮಾತ್ರ ಕವಿ ನಿರೂಪಿಸಿದ್ದಾನೆ. ಹದಿನೆಂಟು ಸಾಲುಗಳಲ್ಲಿ ಈ ಪ್ರಸಂಗವನ್ನು ಮುಗಿಸಿದ್ದಾನೆ.

ಸನ್ನಿವೇಶದ ಸ್ವರೂಪವನ್ನು ನೋಡಿದಾಗ ಈ ಭಾಗದಲ್ಲಿ ಚಾವುಂಡರಾಯಪುರಾಣವು ಆದಿಪುರಾಣಕ್ಕಿಂತ ಪೂರ್ವಪುರಾಣಕ್ಕೆ ಹೆಚ್ಚು ಋಣಿಯಾಗಿರುವುದು ಕಂಡುಬರುತ್ತದೆ. ಭರತನಿಗೆ ವೃದ್ಧ ಕಂಚುಕಿಗಳು ಬಂದು ತಿಳಿಸುವ ಕೇವಲಜ್ಞಾನೋತ್ಪತ್ತಿ, ಚಕ್ರರತ್ನ ಉತ್ಪತ್ತಿ, ಪುತ್ರೋತ್ಪತ್ತಿ ವಿಚಾರಗಳು ಪೂರ್ವಪುರಾಣದ ರೀತಿಯನ್ನು ಹೋಲುತ್ತವೆ. ಆದಿಪುರಾಣದ ನಾಟಕೀಯತೆಯನ್ನು ಕವಿ ಅನುಸರಿಸಿಲ್ಲ. ವೃಷಭಸೇನನು ಗಣಧರನಾಗುವುದು ವೃಷಭಸ್ವಾಮಿಯು ಭರತನಿಗೆ ಉಪದೇಶ ಮಾಡಿದ ನಂತರ ಎಂಬ ಅಂಶವೂ ಪೂರ್ವಪುರಾಣದ ಅನುಸರಣೆಯನ್ನು ಸ್ಪಷ್ಟೀಕರಿಸುತ್ತದೆ.

ಸೋಮಪ್ರಭ-ಶ್ರೇಯಾಂಸಾದಿಗಳು ದೀಕ್ಷಿತರಾದರೆಂದು ಇಲ್ಲಿ ಹೇಳಲಾಗಿದೆ. ಆದರೆ ಅವರು ಗಣಧರರಾದ ವಿಚಾರವನ್ನು ಇಲ್ಲಿ ಹೇಳಿಲ್ಲ. ಉಳಿದ ಅಂಶಗಳು ಪೂರ್ವವರ್ತಿ ಕಾವ್ಯಗಳಂತೆಯೇ ಇವೆ.

**ಹಸ್ತಿಮಲ್ಲನ ಪೂರ್ವಪುರಾಣ** : ಈ ಭಾಗದ ಆರಂಭ ಭಾಗದಲ್ಲಿ ಕವಿ ಆದಿಪುರಾಣದ ಮಾತುಗಳನ್ನೇ ಅನುಸರಿಸಿ ಇಟ್ಟಿದ್ದಾನೆ. ಉದಾಹರಣೆಗೆ :

> ಇತ್ತಂ ವೃಷಭಯೋಗೀಂದ್ರಂ ಸಕಲ ಸಾವದ್ಯಾತಿದೂರಕಮಪ್ಪ ಜಿನಕಲ್ಪಿತಮೆಂಬಾಚಾರಮಂ ಕೈಕೊಂಡು ಯೋಗಯೋಗ್ಯ ಪ್ರದೇಶಂಗಳೊಳವಹಿತ ಧ್ಯಾನಾಧೀನ ಮಾನಸನಾಗಿ ವಿಹರಿಸುತುಂ ಸಹಸ್ರಸಂವತ್ಸರಂಗಳಂ ಕಳೆದು ಬಂದು ಪುರಿಮತಾಳಪುರದ ಪೊರಗಣ ನಿಕಟೋದ್ಯಾನದಾಲದ ಮರದ ಕೆಳಗೆ ನಿರ್ಜಂತುಕಮಾದ ಶಿಲಾತಳದೊಳ್ ಪೂರ್ವಾಭಿಮುಖವಾಗಿ ಪಲ್ಯಂಕಾಸನದೊಳ್ ಕುಳ್ಳಿರ್ದು (ಹಪೂರ್ವ. ಪರ್ವ ix).
>
> ಅನ್ನೆಗಮಿತ್ತ ವೃಷಭಯೋಗೀಂದ್ರನುಂ ಸಕಳಸಾವದ್ಯಾತಿ ದೂರಮಪ್ಪ ಜಿನಕಲ್ಪಿತಮೆಂಬಾಚರಣೆಯಂ ಕೈಕೊಂಡು, ಯೋಗ ಯೋಗ್ಯಂಗಳೊಳ್ ಅವಹಿತಧ್ಯಾನಾಧೀನಮಾನಸನಾಗಿ ವಿಹಾರಿಸುತ್ತುಂ ಸಂವತ್ಸರ ಸಹಸ್ರಂಗಳಂ ಕಳಿಪಿ ಪುರಿಮತಾಳ ಪುರ ಬಹಿರ್ಭಾಗ ನಿಕಟ ಶಕಟೋದ್ಯಾನ ವಟವಿಟಪಿಯ ಕೆಳಗೆ ವಿಶಾಲ ನಿರಾಕುಲನಿರ್ಜಂತುಕ ನಿರ್ಮ್ಮಲ ಶಿಲಾಪಟ್ಟದೊಳ್ ನಿಬಿಡ ನಿಬದ್ಧ ಪಲ್ಯಂಕಾಸನನುಂ ಪೂರ್ವಾಭಿಮುಖನುಮಾಗಿರ್ದ್ದಾಗಳ್ (ಆದಿಪು. ಆಶ್ವಾಸ x)

ಮುಂದೆ ಪರಮನ ಧ್ಯಾನದ ರೀತಿಯನ್ನು ಹಾಗೂ ಅವನು ಕೇವಲಜ್ಞಾನವನ್ನು ಪಡೆದನೆಂಬುದನ್ನು ಮೂರೇ ವಾಕ್ಯಗಳಲ್ಲಿ ಹೇಳಿ ಮುಗಿಸಿದ್ದಾನೆ. 'ದ್ವಾದಶಾನುಪ್ರೇಕ್ಷಾದಿ ತತ್ಪರನಾಗಿ, ವೀತರಾಗಪರ ಮೋಕ್ಷದಿಂದ ಘಾತಿಚತುಷ್ಟಯಗಳನ್ನು ಕೆಡಿಸಿ ಅನಂತ ಚತುಷ್ಟಯನಿಲಯನಾದನು. ಕೇವಲಜ್ಞಾನನಿಲಯನಾದನೆಂದು ಅತ್ಯಂತ ಸಂಗ್ರಹರೂಪವಾಗಿ ಹೇಳಿ ಮುಗಿಸಿದ್ದಾನೆ. ದೇವತೆಗಳು ಸಡಗರದಿಂದ ಸ್ವಾಮಿಯ ಬಳಿಗೆ ಬಂದ ವಿವರವನ್ನು ಇಲ್ಲಿ ಕೈಬಿಡಲಾಗಿದೆ. ಸಮವಸರಣದ ವರ್ಣನೆಯನ್ನು ನಾಲ್ಕು ಸಾಲುಗಳಲ್ಲಿ

ಹೇಳಲಾಗಿದೆ.

ಭರತನಿಗೆ ಪುರೋಹಿತಾದಿಗಳು ಬಂದು ಮೂರು ಒಸಗೆಗಳನ್ನು ತಿಳಿಸಿದರೆಂಬ ವೃತ್ತಾಂತವು ಬಂದಿದ್ದರೂ ಆದಿಪುರಾಣದ ನಾಟಕೀಯತೆ ಇಲ್ಲಿ ಬಂದಿಲ್ಲ.

ತತ್ವಬೋಧನೆಯ ಭಾಗವು ಪೂರ್ವಪುರಾಣದಲ್ಲಿ ಸುದೀರ್ಘವಾಗಿಯೂ ಆದಿಪುರಾಣದಲ್ಲಿ ಸಂಗ್ರಹವಾಗಿಯೂ ಬಂದಿದೆ. ಆದರೆ ಇಲ್ಲಿ ಚಾವುಂಡರಾಯಪುರಾಣದಂತೆ ತತ್ತ್ವೋಪದೇಶ ಸಾರವನ್ನು ಹೇಳಿಲ್ಲ. "ಹೇಯೋಪಾದೇಯಂಗಳಪ್ಪ ಸಂಸಾರಕರಣಾದಿ ಸಮಸ್ತ ತತ್ತ್ವಸ್ವರೂಪಮಂ ಬೆಸಗೊಳ್" ಎಂದು ಮಾತ್ರ ನಿರೂಪಿತವಾಗಿದೆ. ಭರತನು ಕೈಗೊಳ್ಳುವ ಸ್ತುತಿಯ ಉಲ್ಲೇಖವು ಇಲ್ಲಿಲ್ಲ. ಅನಂತರ ಅನಂತವೀರ್ಯಾದಿಗಳ ವಿಚಾರವು ಪೂರ್ವವರ್ತಿ ಕಾವ್ಯಗಳಂತೆಯೇ ಬರುತ್ತದೆ.

ಚಾವುಂಡರಾಯಪುರಾಣದಂತೆ ಹಸ್ತಿಮಲ್ಲನ ಪೂರ್ವಪುರಾಣದ ಮುಖ್ಯ ಉದ್ದೇಶ ಘಟನೆಗಳನ್ನು ಹೇಳುವುದಾಗಿದೆಯೇ ಹೊರತು ವಿವರಗಳನ್ನಲ್ಲ.

**ಪುಣ್ಯಾಸ್ರವದ ಆದೀಶ್ವರರ ಕಥೆ :** ಆದಿಪುರಾಣದ ಜಾಡನ್ನು ಸ್ವಲ್ಪಮಟ್ಟಿಗೆ ಹಿಡಿದು ಸಂಕ್ಷಿಪ್ತಗತಿಯಲ್ಲಿ ಅಲ್ಲಲ್ಲಿ ಕೆಲವು ಹೊಸವಿಚಾರಗಳನ್ನು ಕಥಾಘಟ್ಟದಲ್ಲಿ ಸಮಾವೇಶಗೊಳಿಸಿರುವುದು ಕಂಡುಬರುತ್ತದೆ.

ಸ್ವಾಮಿಗೆ ಕೇವಲಜ್ಞಾನವಾಯಿತು. ಇಂದ್ರನ ಆಜ್ಞೆಯಿಂದ ಕುಬೇರನು ಸಮವಸರಣವನ್ನು ರಚಿಸಿದನು. ಈ ಭಾಗವನ್ನು ಕವಿ ಸಾಕಷ್ಟು ವಿಸ್ತಾರವಾಗಿ ವರ್ಣಿಸಿದ್ದಾನೆ. ವಚನ ಭಾಗದ ಜೊತೆಗೆ ನಾಲ್ಕು ಕಂದಪದ್ಯಗಳು ಸೇರಿಕೊಂಡಿವೆ. ಎರಡು ಪುಟಗಳ ಹರವಿನಲ್ಲಿ ಈ ವರ್ಣನೆಯು ಇದೆ. ಅನಂತರ ಕವಿ ಇದರ ವಿಸ್ತಾರವಾದ ವರ್ಣನೆಗೆ ಸಮವಸರಣ ಗ್ರಂಥದಲ್ಲಿ ನೋಡಿಕೊಳ್ಳಬೇಕೆಂದು ಸೂಚಿಸಿದ್ದಾನೆ. ಅಂದರೆ, ಕಥೆಯನ್ನು ಮುಂದುವರಿಸುವ ಕಾರ್ಯದಲ್ಲಿ ಈ ವರ್ಣನೆಯೇ ಮುಂದಾಗಿ ನಿಲ್ಲಬಾರದೆಂಬ ಪ್ರಜ್ಞೆ ಕವಿಗಿದೆ.

ಇತರ ಕಾವ್ಯಗಳಲ್ಲಿ ಈ ಸಂದರ್ಭದಲ್ಲಿ ಕಂಡುಬಾರದ ಆದಿತೀರ್ಥಂಕರನ ಯಕ್ಷಯಕ್ಷಿಯರ ವಿಚಾರ ಇಲ್ಲಿ ಹೊಸದಾಗಿ ಸೇರಿದೆ—

ಆ ಮಹಿಮಾಂಬೋನಿಧಿಗಂ | ಗೋಮುಖಿಯಕ್ಷಂ ಬಳಿಕ್ಕ ಚಕ್ರೇಶ್ವರಿಯೆಂ
ಬೀ ಮಹಿಮೆ ಯಕ್ಷಿ ಯಕ್ಷ ಶಿ | ಖಾಮಣಿಗಳುಮಾದಿ ತೀರ್ಥಂಕರರೊಳ್ನೆಱೆಗುಂ (ಪುಆಕ. X-೨೭)

ಸಮವಸರಣ ಮಂಟಪದಲ್ಲಿ ದೇವ ನಿಕಾಯವು ಕುಳಿತಿರುವಾಗ ವೃಷಭಸೇನನು ಬಂದು ಸ್ವಾಮಿಯನ್ನು ಅರ್ಚಿಸಿ, ಸ್ತುತಿಸಿ ತನ್ನ ಮಗನಿಗೆ ರಾಜ್ಯವನ್ನು ಒಪ್ಪಿಸಿ ತಪಂಬಟ್ಟು ಪ್ರಥಮಗಣಧರನಾದನೆಂದು ಬರುತ್ತದೆ. ವೃಷಭಸೇನನು ಮಗನಿಗೆ ರಾಜ್ಯವನ್ನು ಒಪ್ಪಿಸುವ ವಿಚಾರ ಇತರೆಡೆ ಕಂಡುಬರುವುದಿಲ್ಲ.

ಈ ಕಡೆ ಭರತನ ವಿಷಯವನ್ನು ಹೇಳುವಾಗ ಕವಿ ವೈಭವೀಕರಿಸಿ ಈ ರೀತಿ ಹೇಳಿದ್ದಾನೆ: 'ಸುರಪತಿಯಮಿಕ್ಕ ವಿಭವಂ ಭರತನೊಳವತರಿಸಿತೆಂಬಿನಂ'—ಪುರುಪರಮೇಶ್ವರ ತನಯನು ಪರಮೋತ್ಸವದಿಂದ ಅರಸುಗೈಯುತ್ತಿದ್ದನೆಂದು ಹೇಳಿದ್ದಾನೆ. ಮೂರು ಒಸಗೆಗಳನ್ನು ಭರತನಿಗೆ ತಿಳಿಸುವ ರೀತಿಯಲ್ಲಿ ಆದಿಪುರಾಣದಲ್ಲಿ ಬರುವ ನಾಟಕೀಯತೆಯನ್ನು ಇಲ್ಲಿಯೂ ಕಾಣುತ್ತೇವೆ. ಉದಾಹರಣೆಗೆ :

ಅಂತು ರಾಜ್ಯಂಗೆಯ್ಯುತಿರ್ದೊಂದು ದಿವಸಂ ಸಕಳ ಸಾಮಂತ ಸಂದೋಹದಿಂ

ದೋಲಗಂಗೊಟ್ಟಿರ್ಪುದುಮಾಗಳಾಸ್ಥಾನ ಮಂಟಪಕ್ಕೆ ಮೂವರ್ ಪುರುಷರ್ ಬಂದು ನಿಟಿಳ
ತಟಘಟಿತ ಕರಕಿಸಲಯಧರಪಲ್ಲವಕ್ಕೆ ಹಸ್ತಾಂಬುಜಮನಡ್ಡಮಿಕ್ಕಿಯಿಂತೆಂದು ಬಿನ್ನವಿಸಿದರ್

ಈ ಬಿನ್ನಪದಲ್ಲಿ ಮೊದಲಿಗೆ ಪುತ್ರೋತ್ಸವ ಮತ್ತು ಚಕ್ರರತ್ನೋದಯಗಳನ್ನು ತಿಳಿಸಿ ಅನಂತರ ಕೇವಲಜ್ಞಾನೋದಯದ ವಿಚಾರವನ್ನು ಹೇಳಲಾಗಿದೆ. 'ಈ ತ್ರಿವಿಧೋತ್ಸಾಹ ದೊಳ್ ಆವುದು ಮುಖ್ಯಂ ಮಂಗಳಮದಂ ನೆಗಳ್ಬುದು' ಎಂದು ಭರತನಿಗೇ ಅವುಗಳ ಆಯ್ಕೆಯನ್ನು ಮಾಡಿಕೊಳ್ಳುವಂತೆ ಹೇಳಿರುವ ವಿಚಾರ ಇತರತ್ರ ಬರುವುದಿಲ್ಲ. ಭರತನು 'ಎಲ್ಲಂ ಧರ್ಮದಿಂ ದೊರೆಗೊಳ್ಗುಮೆಂದು' ನಿಶ್ಚಯಿಸಿ, ಬಿನ್ನವಿಸಿಕೊಳ್ಳಬಂದವರಿಗೆ ಬೇಡಿದುದನ್ನು ಕೊಟ್ಟು ಸಮವಸರಣಕ್ಕೆ ಬಂದನು. ಉಳಿದ ಭಾಗವು ಸಂಗ್ರಾಹಕ ಶೈಲಿಯಲ್ಲಿ ಮುಖ್ಯ ಕಥಾಘಟ್ಟಗಳನ್ನೊಳಗೊಂಡಂತೆ ಬಂದಿದೆ. ಇದೇ ಸಂದರ್ಭದಲ್ಲಿ ಈ ಕಾವ್ಯದಲ್ಲಿ ಬರುವ ಸೋಮಪ್ರಭ-ಶ್ರೇಯಾಂಸರು ಜಯಕುಮಾರನಿಗೆ ರಾಜ್ಯವಿತ್ತು ದೀಕ್ಷಿತರಾದರೆಂಬ ಸಂಗತಿಯು ಮಿಕ್ಕೆಡೆ ಕಂಡುಬರುವುದಿಲ್ಲ.

ಇಲ್ಲಿ ಕಥಾಂಶವು ನಿರೂಪಣೆಮಾತ್ರವಾಗಿರದೆ ಅಲ್ಲಲ್ಲಿ ಕಾವ್ಯತ್ವವನ್ನು ಉಳಿಸಿಕೊಂಡು ಸಾಗಿರುವುದನ್ನು ಗಮನಿಸಬಹುದಾಗಿದೆ.

**ಪುರುದೇವಚರಿತ** : ಚಾವುಂಡರಾಯಪುರಾಣದ ಗದ್ಯಭಾಗವನ್ನು ಅಲ್ಲಲ್ಲಿ ಸಾಂಗತ್ಯ ದಲ್ಲಿ ಅಳವಡಿಸಿಕೊಂಡಿದ್ದಾನೆ. ಚಾಮುಂಡರಾಯನು ಕೈಬಿಟ್ಟಿರುವ ವರ್ಣನಾವಿಧಾನ ವನ್ನು ಪೂರ್ವಪುರಾಣ, ಆದಿಪುರಾಣಗಳಲ್ಲಿ ಕಂಡುಬರುವ ವರ್ಣನೆ ಆಶಯಗಳಿಗನು ಸಾರವಾಗಿ ಸಾಂಗತ್ಯದಲ್ಲಿ ನಿರೂಪಿಸಿರುವಂತೆ ಕಂಡುಬರುತ್ತದೆ.

ಸ್ವಾಮಿಯು ಕೇವಲಜ್ಞಾನವನ್ನು ಪಡೆಯುವಾಗಿನ ಸಂದರ್ಭವನ್ನು ಕವಿ ೧೯ ಸಾಂಗತ್ಯ ಗಳಲ್ಲಿ ವರ್ಣಿಸಿದ್ದಾನೆ. ಸ್ವಾಮಿಯು ಹಂತಹಂತವಾಗಿ ಉನ್ನತ ನೆಲೆಗೇರುವ ರೀತಿಯು ಇಲ್ಲಿ ಸರಳ ರೂಪದಲ್ಲಿ ಮೂಡಿದೆ. ಜೈನಪಾರಿಭಾಷಿಕ ಪದಗಳ ಸಂಯೋಜನೆಯೊಂದಿಗೆ ಈ ಭಾಗ ಸಾಗಿದೆ. ದೇವತೆಗಳು ಕೇವಲಜ್ಞಾನ ವಿಷಯವನ್ನರಿತುಕೊಂಡು ಸ್ವಾಮಿಯ ಬಳಿಗೆ ಬರುವ ವರ್ಣನೆಯನ್ನು ಅಲ್ಲಲ್ಲಿ ಚಿತ್ರಗತ ಶೈಲಿಯಲ್ಲಿ ಹೇಳಿದ್ದಾನೆ. ಅಲ್ಲಲ್ಲಿ ವರ್ಣನೆ ಆಕರ್ಷಣೀಯವಾಗಿ ಕಂಡುಬರುತ್ತದೆ. ಉದಾಹರಣೆಗೆ, ಚತುರ್ನಿಕಾಯಾಮರರು ಭೂಮಿ ಗಿಳಿಯಲು—"ಭೂಮಿಯೆಲ್ಲವು ರತ್ನಗಂಧಕುಸುಮಮಯ | ವ್ಯೋಮವೆಲ್ಲವು ಛತ್ರ ಧ್ವಜವೆ" ಆಯಿತಂತೆ (vii-೧೦೦).

ಗಂಧಕುಟಿಗೆ ಬಲವಂದ ದೇವಸಮೂಹವು ದೇವನ ಪಾದಾರ್ಚನೆಯನ್ನು ಮಾಡಿದು ದನ್ನು ಕವಿ ಉತ್ಸಾಹದಿಂದ ವರ್ಣಿಸಿದ್ದಾನೆ. ಪೂಜೆಯ ಕ್ರಿಯೆ ಬಂದಾಗಲೆಲ್ಲಾ ಅಷ್ಟವಿಧಾ ರ್ಚನಾ ವಿಧಿಯನ್ನು ಸಾಧ್ಯವಾದಷ್ಟೂ ವರ್ಣಿಸದೆ ಬಿಡುವುದಿಲ್ಲ. ದೇವೇಂದ್ರನು ಜಲ ಗಂಧಾದಿ ಅಭಿಷೇಕವನ್ನು ಮಾಡಿದನೆಂಬುದನ್ನು ಈ ರೀತಿ ವರ್ಣಿಸಿದ್ದಾನೆ :

ಹೇಮ ಭೃಂಗಾರದ ಜಲವೊ ಭಕ್ತಿಯೊಳಾ | ವ್ಯೋಮ ತರಂಗಣಿ ಬಂದು
ಸ್ವಾಮಿಯ ಪಾದದೊಳ್ ಬಿರ್ದಪಳೆಂಬಂತೇ | ತಾಮಾಡಿ ಜಲವ ಸುರೇಶ
ಹರಿಚಂದನ ಗಂಧ ರಕ್ತವೊ ಇಂದ್ರನ | ಕರಪಲ್ಲವಗಳಾರುಣವೊ
ಪರಮನ ನಖರಕ್ತವೊಯೆಂಬಾ ಶಂಕೆಯೊಳ್| ಮೆರೆವಗಂಧವನರ್ಚಿಸಿದನು

(ಪುರುಚ.vii-೧೦೨, ೧೦೩)

ಅಲ್ಲಲ್ಲಿ ಕವಿ ಉಪಮಾಸರಮಾಲೆಯನ್ನು ನೀಡಿ ಚಿತ್ರಣವನ್ನು ವಿವರಿಸಲು ಪ್ರಯತ್ನಿಸಿದ್ದಾನೆ. ಅಲ್ಲಲ್ಲಿ ಉಪಮೆಗಳು ಪುನುರುಕ್ತಿಗೊಂಡಿವೆ. ಉದಾಹರಣೆಗೆ, ಅಕ್ಷತೆಯ ಪುಂಜವು ನಕ್ಷತ್ರಾಧಿಪ ಎರಗಿದಂತೆ ಕಂಡಿತೆಂಬ ಭಾವನೆಯನ್ನು ಕವಿ ಈ ಹಿಂದೆಯೂ ತಂದಿದ್ದಾನೆ.

ಅಷ್ಟವಿಧಾರ್ಚನೆಯನ್ನು ಮಾಡಿ ಸುರಾಧಿಪರು ಪರಮನ ಪಾದಕ್ಕೆ ಎರಗಿದ ರೀತಿಯ ವರ್ಣನೆಯನ್ನು ಕವಿ ಮನೋಹರವಾಗಿ ನೀಡಿದ್ದಾನೆ. ಉದಾಹರಣೆಗೆ:

ಕುಡಿಮಿಂಚು ಚಂಚಲತ್ವವ ಬಿಟ್ಟು ಸರ್ವಜ್ಞ | ನಡಿಗೆರಗಿತೊಯೆಂಬಂತೆ
ತಡೆಯದೆ ದೇವೇಂದ್ರನಂಘ್ರಿಗೆ ಸುರರಾಜರು | ಪೊಡೆವಟ್ಟಸೊಬಗನೇನೆಂಬೆ
(ಪುರುಚ. vii-೧೧೦)

ಭರತನಿಗೆ ಪುರೋಹಿತ, ಅಂತಃಪುರದ ವೃದ್ಧ ಕಂಚುಕಿ, ಆಯುಧಾಗಾರದ ಅಧ್ಯಕ್ಷರು ಬಂದು ಕೇವಲಜ್ಞಾನ, ನಂದನೋತ್ಪತ್ತಿ, ಚಕ್ರೋತ್ಪತ್ತಿಯ ವಿಚಾರವನ್ನು ತಿಳಿಸಿದರು. (ಕೊನೆಯ ಎರಡು ಒಸಗೆಗಳನ್ನು ಹೇಳುವಲ್ಲಿ ಕವಿ ಅನುಕ್ರಮಣಿಯನ್ನು ಬದಲಾಯಿಸಿರುವುದನ್ನು ಗಮನಿಸಬಹುದು). ಆದಿಪುರಾಣದ ನಾಟಕೀಯತೆಯನ್ನು ಇಲ್ಲಿ ಕೈಬಿಡಲಾಗಿದೆ.

ಪರಿವಾರಸಮೇತನಾಗಿ ಬಂದ ಭರತನು ಸ್ವಾಮಿಯನ್ನು ಬಲಗೊಂಡು ಬಂದು ಸ್ತುತಿಸುವುದನ್ನು ಒಂದು ಸಾಂಗತ್ಯದಲ್ಲಿ ನಿರೂಪಿಸಿದ್ದಾನೆ :

ಕಾಲಸಂಹರ ಕರ್ಮಮರ್ದನ ದುರ್ಮೋಹ | ಜಾಲಾಂಧಕಾರ ಮಾರ್ತಾಂಡ
ಮೂಲೋಕ ಮಸ್ತಕ ಮಣಿದೀಪ ಪುರುಜಿನ | ಪಾಲಿಸು ಕೃಪೆಯಿಂದಲೆನ್ನ (ಪುರುಚ.vii-೧೧೬)

ವೃಷಭಸೇನನು ಗಣಧರನಾದ ವಿಚಾರಾದಿಗಳು ಇತರ ಕಾವ್ಯಗಳಂತೆಯೇ ಬಂದಿವೆ.

ಕವಿ ಚಾವುಂಡರಾಯಪುರಾಣವನ್ನು ಅನುಸರಿಸಿದ್ದರೂ ತೀರಾ ನಿರೂಪಣಾಮಾತ್ರವಾಗಿ ಈ ಕಥಾಂಶವನ್ನು ವಿವರಿಸದೆ ಅಲ್ಲಲ್ಲಿ ಕಾವ್ಯ ಸೌಂದರ್ಯದ ಹಿನ್ನೆಲೆಯಲ್ಲಿ ಈ ಭಾಗವನ್ನು ನಿರ್ವಹಿಸಿದ್ದಾನೆ.

**ಆದಿಪರಮೇಶ್ವರನ ಯಕ್ಷಗಾನ** : ಈ ಭಾಗದಲ್ಲಿ ಕವಿ ಹಸ್ತಿಮಲ್ಲನ ಪೂರ್ವಪುರಾಣವನ್ನು ಅನುಸರಿಸಿರುವುದೇ ಅಲ್ಲದೆ ಅಲ್ಲಿ ಕಂಡುಬಾರದ ವರ್ಣನಾಭಾಗವನ್ನು ಅಲ್ಲಲ್ಲಿ ವಿಸ್ತರಿಸಿದ್ದಾನೆ.

ಈ ಮುಂದಿನ ಪದ್ಯ ಭಾಗಗಳಲ್ಲಿ ಕವಿ ಹಸ್ತಿಮಲ್ಲನ ಪೂರ್ವಪುರಾಣದ ನವಮ ಪರ್ವದಲ್ಲಿ ಬರುವ ಗದ್ಯಭಾಗವನ್ನು ಅನುಸರಿಸಿರುವಂತೆ ಕಂಡುಬರುತ್ತದೆ. ಉದಾಹರಣೆಗೆ :

ಇತ್ತಲು ವೃಷಭಮುನೀಂದ್ರ ತಾ ಮುದವೆತ್ತು ಸಾವದ್ಯದೋಷವು
ಪತ್ತದೊಲು ಜಿನಕಲ್ಪಿತವುಮೆಂಬುತ್ತಮದ ಪದನ್ಯಾಸಮಾಪತ್ತಿ ಮುದದಿ
ಯೋಗಯೋಗ್ಯ ಪ್ರದೇಶ ಭೂಮಿಯನಾಗಳವಹಿತ ಧ್ಯಾನದಿ
ಭಾಗಿತಾನಾಧೀನ ಮಾನಸನಾಗಿ ತಾ ವ್ಯವೆಹರಿಸುತ ಸಹಸ್ರವರುಷಾ
ಕಳೆದು ಬಂದಾ ಪುರಿಮತಾಳದ ಪೊಳಲ ಶಕಟೋದ್ಯಾನದ
ಬಳಿಯ ವಟ ಭೂರುಹದ ಕೆಳಗಣ ನಿರ್ಜಂತುಕದೊಳು ಪೂರ್ವ ಮುಖದಿ
ಶುದ್ಧ ಪಲ್ಯಂಕಾಸನದಿ ಮುನಿ ಕುಳ್ಳಿರ್ದು. . . .

(ಹಪೂರ್ವ.ದ ಪದ್ಯಭಾಗವನ್ನು ಪುಟ ೩೧೨ರಲ್ಲಿ ಕೊಡಲಾಗಿದೆ)

ಅನಂತರ ದೇವಗಣ ಸಮೂಹವು ಆದಿನಾಥನಿಗೆ ಕೇವಲಜ್ಞಾನವು ಒದಗಿರುವುದನ್ನು ಅರಿತುದು, ಸಮವಸರಣದ ವರ್ಣನೆ, ಇವುಗಳಲ್ಲಿಯೂ ಸಹ ಹಸ್ತಿಮಲ್ಲನ ಪೂರ್ವ ಪುರಾಣದ ಹೆಜ್ಜೆಯನ್ನೇ ಅನುಸರಿಸಲಾಗಿದೆ. ಸಮವಸರಣಕ್ಕೆ ಬಂದಾಗ ದೇವೇಂದ್ರನು ಭಗವಂತನನ್ನು ಸ್ತುತಿಸಿದ ವರ್ಣನೆ ಇಲ್ಲಿ ಸಂಕ್ಷಿಪ್ತವಾಗಿ ಬಂದಿದೆ. ಪೂರ್ವಪುರಾಣ, ಆದಿಪುರಾಣ ಮತ್ತು ಪುರುದೇವಚರಿತಗಳಲ್ಲಿ ಕಂಡುಬರುವ ಸ್ತುತಿಯು ಇಲ್ಲಿಯೂ ಕಂಡುಬರುತ್ತದೆ. ಆದರೆ ಇಲ್ಲಿಯ ವೈಖರಿ ಬೇರೆ :

ಶೀಮದನಂತಚತುಷ್ಟಯ ಮೂರ್ತಿ | ಕಾಮಮದ ವಿಧ್ವಂಸಿಸದ್ಧರ್ಮವರ್ತಿ
ಶ್ರೀಮನ್ಮಹಾದೇವ ಶ್ರೀಕಾರ ಭುವನ | ಕಾಮಿತ ಫಲದಾಯಕಾ ಕಾರುಣ್ಯನಿಲಯಾ
ಭಾಸುರ ಜ್ಞಾನಪ್ರಕಾಶ ಸರ್ವೇಶ | ವಾಸವಾರ್ಚಿತ ಪುಣ್ಯವಾರಾಶಿಗಣ್ಯ
ಶ್ರೀ ಸುರಾನರ ಜ್ಯೋತಿಷ್ಕರಾರಾಧ್ಯ | ಭಾಸುರೋಜ್ವಲಗಾತ್ರಭವರೋಗ ವೈದ್ಯ
ಕೋಟಿಚಂದ್ರಾರ್ಕ ಕಿರಣ ದಿವ್ಯಗಾತ್ರಾ | ಸಾಟಿಯಾರ್ನಿನಗೆ ಸಂಸಾರಾಬ್ಧಿ ಛೈತ್ರಾ
ಆಟಕೋಟಲೆಯ ಕರ್ಮಾರಿವಿದಹನಾ | ಮಾಟಕೂಟದ ಸಮವಸರಣ ಶ್ರುತಿಸವನಾ
(ಆದಿಯ. ಪರಿಚ್ಛೇದ v)

ಕವಿ ಇಲ್ಲಿ ಪ್ರಾಸವನ್ನು ಮೇಳವಿಸಿದ್ದಾನೆ; ಭಕ್ತಿಭಾವವನ್ನು ಮೆರೆದಿದ್ದಾನೆ.

ವೃಷಭಸೇನನು ಸ್ವಾಮಿಯ ಬಳಿಗೆ ಬಂದು ಗಣಧರನಾದನೆಂಬ ಭಾಗದಲ್ಲಿ ಇತರೆಡೆ ದೊರಕದ ಕೆಲವು ವಿಧಿವಿಧಾನಗಳ ವಿವರಣೆಯನ್ನು ನೀಡಿದ್ದಾನೆ.

ವೃಷಭಸೇನನು ಸ್ವಾಮಿಗೆ ಬಂದೆರಗಿ, ದಿವ್ಯವಾದ ಗಂಧಸುರಭಿಯಿಂದ ಕೂಡಿದ ಕುಂದಕುಟ್ಮಲಗಳಿಂದ ಅರ್ಚಿಸಿ—

ದುರಿತ ಕರ್ಮ ಕುಟಾರ ಕರುಣರಸ ಸಾರಾಬ್ಧಿ ಸಾರಾ
ಶರಣುಹೊಕ್ಕೆ ಕಾಯ್ದುದೆನ್ನ ಪುರುಜಿನೇಂದ್ರ ಪೂರ್ಣಕೃಪೆಯೊಳು (ಆದಿಯ. ಪರಿಚ್ಛೇದ-v)

ಎಂದು ಸ್ತುತಿಸುವ ಭಾಗವಾಗಲಿ ಕುರುಳನ್ನು ಕಿತ್ತ ಬಗೆಗಾಗಲಿ, ಇತರೆಡೆ ವಿವರಗಳು ದೊರೆಯವು. ಆದರೂ ಇಲ್ಲಿ ಕಾವ್ಯಾಂಶದ ಹೆಚ್ಚಳಿಕೆಯೇನನ್ನೂ ಸಾಧಿಸಿದಂತೆ ಆಗಿಲ್ಲ.

ಭರತನು ಸ್ವಾಮಿಗೆ ನಮಸ್ಕರಿಸಿ ಹೊರಡಲನುವಾದಾಗ ಭಕ್ತಿರಸವು ಉಕ್ಕಿ 'ಸ್ವಾಮಿ ಪೊಡವಿಸಂಪದವನ್ನಿತ್ತೆ, ಕಡೆಗೆ ಬಿಡದೆ ನಿನ್ನಡಿಗಾಣ್ಬ ಬಗೆಗೆ ದೇವಾ ಅಭಯವನ್ನು ನೀಡು' 'ನಿನ್ನೊಡನೆ ಹಲವಾರು ಭವದಿಂದ ಬಂದ ನಿನ್ನ ಕುಮಾರನು ನಾನು ಎಂಬುದನ್ನು ಮರೆಯದಿರು.'

ಮರೆಹೊಕ್ಕೆ ನಿನ್ನ ಶ್ರೀಪಾದವಾ ಭವ್ಯರೆರೆಯೆ ಪಾಲಿಸು ನಿತ್ಯಪದವಾ
ಶರಣು ನೀನಲ್ಲದೆನಗೊವ್ವರಿಲ್ಲ ಪುರುದೇವ ನೀನೆ ಅಧಿದೇವಾ (ಆದಿಯ. ಪರಿಚ್ಛೇದ v)

ಎಂದು ಆತ್ಮೀಯವಾಗಿ ಮೊರೆಹೊಕ್ಕಿದ್ದಾನೆ. ಆದಿಪುರಾಣದ ಪ್ರಭಾವ ಕವಿಗೆ ಸಾಕಷ್ಟು ಆಗಿರುವುದನ್ನು ಇಲ್ಲಿ ಗುರುತಿಸಬಹುದು.

ಇಲ್ಲಿ ಕಂಡುಬರುವ ಭರತ ಭುಜಬಲಿಗಳು ಅರಮನೆಯನ್ನು ಸೇರಿ ಚಕ್ರರತ್ನ ಪೂಜೆಯನ್ನು ಮಾಡಿದ ಸಂಗತಿಯಾಗಲಿ, ಬಾಹುಬಲಿಯನ್ನು ಪೌದನಪುರಕ್ಕೆ ಕಳುಹಿಸಿದನೆಂಬ ವಿಚಾರವಾಗಲಿ, ಉಳಿದ ಕಾವ್ಯಗಳಲ್ಲಿ ದೊರೆಯುವುದಿಲ್ಲ.

ಜೀವಿಗಳಿಗೆ ಉಪದೇಶವನ್ನು ಮಾಡಿ ಅವರನ್ನು ಉದ್ಧರಿಸಬೇಕೆಂದು ಸ್ವಾಮಿಯನ್ನು ಕುರಿತು ದೇವೇಂದ್ರನು ಬಿನ್ನಯಿಸಿಕೊಳ್ಳುವ ಗದ್ಯ ಭಾಗವು ಆದಿಪುರಾಣದ ಕಂದ ಪದ್ಯಕ್ಕೆ ಋಣಿಯಾದಂತಿದೆ. ಉದಾಹರಣೆಗೆ :

ಎಲೆ ಸ್ವಾಮಿ ಭವ್ಯ ಜೀವಂಗಳೆಂಬ ಸಸಿಗಳು ಕೊರಗಿರ್ಪುವು ಸದ್ಧರ್ಮಾಮೃತಮಂ ತಳಿಯುತ್ತಂ ವಿಹರಿಸಲ್ವೇಳ್ಕೆಂದು ಬಿನ್ನವಿಸೆ (ಆದಿಯ. ಪರಿಚ್ಛೇದ-v)

ದೇವ ವಿನಯೋತ್ಕರಂಸ | ಸ್ಯಾವಳಿ ಸುಗಿದುಗಿದು ಕೂಡೆ ಬಾಡಿರ್ದ್ದುದು ಪಾ
ಪಾವಗ್ರಹದಿಂದದನಖಿ | ಳಾವನಿತಳ ಕಂತು ತಳಿಯೆ ಧರ್ಮಾಮೃತಮಂ (ಆದಿಪು. X-೬೭)

ಅಂಗವಂಗಾದಿ ದೇಶಗಳಲ್ಲಿ ಸ್ವಾಮಿಯು ವಿಹಾರವನ್ನು ಕೈಗೊಂಡು ಪರಮಬೋಧೆಯನ್ನು ನೀಡಿದನು; ಕೈಲಾಸಾದ್ರಿಯಲ್ಲಿ ನೆಲಸಿದನು ಎಂಬಲ್ಲಿಗೆ ಪೂರ್ವಪುರಾಣ, ಆದಿಪುರಾಣಗಳ ಅನುಸಾರವಾಗಿ ಈ ಭಾಗವು ಕೊನೆಗೊಳ್ಳುತ್ತದೆ. ಈ ಅಂಶವನ್ನು ಉಳಿದ ಕಾವ್ಯಗಳಲ್ಲಿ ಕೈಬಿಡಲಾಗಿದೆ.

ಸ್ವಾಮಿ ಉಪದೇಶಕನಾಗಿ 'ಅರ್ಹಂತ' ಪದವಿಗೆ ಏರಿದ ಮುಖ್ಯ ಭಾಗವು ಕೇವಲ ಜ್ಞಾನಕಲ್ಯಾಣದಲ್ಲಿ ಕಂಡುಬರುತ್ತದೆ. ಇದು ಹಲವಾರು ಜೈನ ಪುರಾಣ ಸಂಪ್ರದಾಯಗಳ ವರ್ಣನೆಯಿಂದ ದಟ್ಟೈಸಿರುವ ಭಾಗ. ಪಾರಿಭಾಷಿಕ ಪದಗಳ ಬಳಕೆ ಹೆಚ್ಚು. ಆದರೂ ಅವುಗಳ ಹೆಚ್ಚಿನ ವಿವರಣೆಗೆ ಕವಿಗಳು ಹೋಗಿಲ್ಲ (ಇವುಗಳ ಹೆಚ್ಚಿನ ವಿವರಣೆಗೆ ನಾವು ದ್ರವ್ಯಾನುಯೋಗದ ಮೊರೆ ಹೋಗಬೇಕು). ಅಲ್ಲಲ್ಲಿ ಭಕ್ತಿಭಾವವು ತಲೆದೋರಿದೆ. ಪಂಪನಂತೂ ಈ ಸಂದರ್ಭದಲ್ಲಿ ಭರತನ ಮೂಲಕ ತನ್ನೆಲ್ಲ ಭಕ್ತಿಭಾವವನ್ನು ಮನದಣಿಯೆ ತೋಡಿಕೊಂಡಂತೆ ಕಂಡುಬರುತ್ತದೆ. ಪುರಾಣದ ಮಾದರಿಯ ಬಿಗಿಯಿಂದ ಹೊರಬಂದು ಭಕ್ತಿರಸದಲ್ಲಿ ಮುಳುಗುವಂತಾಗುತ್ತದೆ. ಉತ್ತರಕಾಲೀನ ಕಾವ್ಯಗಳಲ್ಲಿ ಯಾಂತ್ರಿಕ ನಡೆ ಕಂಡುಬರುತ್ತದೆಯೇ ಹೊರತು ಹೆಚ್ಚಿನ ಕಾವ್ಯಾಂಶವಿಲ್ಲ.

ಕೇವಲಜ್ಞಾನ ಕಲ್ಯಾಣದ ಅನಂತರ ಆದಿತೀರ್ಥಂಕರ ಚರಿತೆಯ ಒಂದು ಹಂತ ಮುಗಿದಂತಾಗುತ್ತದೆ. ಆತನ ಭವಾವಳಿಯ ಸರಮಾಲೆಯನ್ನೇ ಅಲ್ಲದೆ ಭೋಗದ ನೀರಸತೆಯನ್ನರಿತು ಶಾಶ್ವತ ಪದವಿಯನ್ನು ಗಳಿಸಿಕೊಂಡು ಧರ್ಮಾಮೃತಸಾರ ಬೋಧಕನಾದ ಆದಿತೀರ್ಥಂಕರನ ವೃತ್ತಾಂತವನ್ನು ನೋಡಿದೆವು. ಇನ್ನು ಮುಂದೆ ಬರುವ ಕಥೆ ಆದಿತೀರ್ಥಂಕರನ ಮಕ್ಕಳ ಕಥೆ. ಅದರಲ್ಲಿಯೂ ಪ್ರಥಮಚಕ್ರಿ ಹಾಗೂ ಹದಿನಾರನೆಯ ಮನುವಾದ ಭರತನ ಹಾಗೂ ಪ್ರಥಮ ಮನ್ಮಥ ಬಾಹುಬಲಿ ಇವರ ರೋಚಕ ಕಥೆ. ಈ ಭಾಗವನ್ನು ಮೋಕ್ಷ ಕಲ್ಯಾಣದ ನಂತರ ಪರಿಶೀಲಿಸಲಾಗಿದೆ.

## ಮೋಕ್ಷಕಲ್ಯಾಣ

**ಆದಿಪುರಾಣ-ಪೂರ್ವಪುರಾಣ :** ಆದಿತೀರ್ಥಂಕರನ ಜೀವನದ ಕೊನೆಯ ಘಟ್ಟವೇ ಮೋಕ್ಷಕಲ್ಯಾಣ. ಆದಿಪುರಾಣದ ಉತ್ತರಾರ್ಧ ಭಾಗದಲ್ಲಿ ಆಕರ್ಷಣೀಯ ಭಾಗವೆಂದರೆ ಭರತ-ಬಾಹುಬಲಿ ಪ್ರಕರಣ. ಈ ರಸಾವೇಶ ಆದಿಪುರಾಣದ ಮುಂದಿನ ಮೂರು ಆಶ್ವಾಸಗಳಲ್ಲಿ ಕಂಡುಬರುವುದಿಲ್ಲ. ಇಲ್ಲಿಯದು ಶಾಂತಗಂಭೀರ ನಿಲುವು.

ಭರತನ ಸಾಮ್ರಾಜ್ಯಾಭಿಷೇಕ, ಸಾಧನ-ಸಂಪತ್ತು-ವೈಭವ, ಬ್ರಾಹ್ಮಣ ವರ್ಣಸ್ಥಾಪನೆ,

ಭರತಚಕ್ರಿಯು ಕಂಡ ಹದಿನಾರು ಕನಸುಗಳು, ಸ್ವಪ್ನ ಫಲವಾಗಿ ಧರ್ಮವು ಖಿಲವಾಗುವುದೆಂದರಿವುದು—ಈ ಮೊದಲಾದ ಸಂಗತಿಗಳ ಕಥಾಘಟ್ಟಗಳು ಇಲ್ಲಿ ಬರುತ್ತವೆ. ಪೂರ್ವಪುರಾಣದ ಹರವನ್ನು ಕವಿ ಇಲ್ಲಿ ಸಂಕ್ಷಿಪ್ತಗೊಳಿಸಿ ನಿರೂಪಿಸಿದ್ದಾನೆ. ಉತ್ತರಕಾಲೀನ ಕವಿಗಳಲ್ಲಿಯೂ ಸಹ ಈ ವಿಷಯಗಳು ಅತ್ಯಂತ ಸಂಕ್ಷಿಪ್ತರೂಪದಲ್ಲಿ ಬಂದಿವೆ.

ಪೂರ್ವಪುರಾಣದಲ್ಲಿ ಬರುವ ಎಷ್ಟೋ ವಿವರಗಳನ್ನು ಪಂಪನು ಕೈಬಿಟ್ಟಿದ್ದಾನೆ. ಗಣಧರರ ಪಟ್ಟಿಯ ನಂತರ ಬರುವ ಜೈನಧರ್ಮ ಸ್ವರೂಪ, ಶ್ರಾವಕಾಚಾರದ ವಿವರಗಳು ಆದಿಪುರಾಣದಲ್ಲಿ ಕಂಡುಬರುವುದಿಲ್ಲ. ಕಥೆಯಲ್ಲಿ ಅಲ್ಲಲ್ಲಿ ಈ ವಿಚಾರಗಳನ್ನು ನಿರೂಪಿಸಿರುವುದರಿಂದ ಪ್ರತ್ಯೇಕವಾಗಿ ಕವಿ ಅದನ್ನು ನಿರೂಪಿಸಲು ಹೋಗಿಲ್ಲವೆನಿಸುತ್ತದೆ.

ನಾಯಕವ್ಯಕ್ತಿಯಾದ ಆದಿನಾಥನು ಮುಕ್ತಿಸಂಪದವನ್ನು ಪಡೆಯುವುದೇ ಇಲ್ಲಿ ಮುಖ್ಯವಾದ ಭಾಗ. ಈ ಸಂದರ್ಭದಲ್ಲಿ ದೇವೇಂದ್ರನು ಕೊನೆಯದಾದ ಪರಿನಿರ್ವಾಣ ಕಲ್ಯಾಣವನ್ನು ಜರುಗಿಸುವ ನಿರೂಪಣೆ ಸಂಕ್ಷೇಪವಾಗಿ ಬರುತ್ತದೆ.

ಪೂರ್ವಪುರಾಣದ ೪೨ನೇ ಪರ್ವದಲ್ಲಿ ಭರತೇಶ್ವರನು ಕ್ಷತ್ರಿಯ ಧರ್ಮವನ್ನು ರಾಜರುಗಳಿಗೆ ಉಪದೇಶಿಸುವ ವರ್ಣನೆ ಬರುತ್ತದೆ. ಇಲ್ಲಿಗೆ ಜಿನಸೇನಾಚಾರ್ಯರು ಬರೆದ ಪೂರ್ವಪುರಾಣ ನಿಂತು ಹೋಗಿದೆ. ಅಲ್ಲಿಂದ ಮುಂದೆ ೪೭ನೆ ಪರ್ವದವರೆಗೆ ಗುಣಭದ್ರಾಚಾರ್ಯರು, ವೃಷಭನಾಥನ ಎಪ್ಪತ್ತೊಂದನೇ ಗಣಧರನಾದ ಜಯಕುಮಾರನ ಜೀವನ ವೃತ್ತಾಂತವನ್ನು ಸೇರಿದಂತೆ ವರ್ಣಿಸಿದ್ದಾರೆ. ಇದನ್ನೆಲ್ಲಾ ಪಂಪನು ಕೈಬಿಟ್ಟು ಪೂರ್ವಪುರಾಣದ ೪೭ನೇ ಪರ್ವದ ವಿಷಯವಾದ ವೃಷಭನಾಥನ ಮಹಾನಿರ್ವಾಣ ವಿಷಯವನ್ನು ತೆಗೆದುಕೊಂಡಿದ್ದಾನೆ. (ಕನ್ನಡ ಆದಿತೀರ್ಥಂಕರ ಕಾವ್ಯಗಳಲ್ಲಿ ಚಾವುಂಡರಾಯಪುರಾಣವೊಂದೇ ಜಯಕುಮಾರನ ಕಥೆಯನ್ನು ನಿರೂಪಿಸಿರುವ ಕಾವ್ಯ. ಈ ಉಪಾಖ್ಯಾನವನ್ನು ಕನ್ನಡಕ್ಕೆ ಮೊಟ್ಟಮೊದಲಬಾರಿಗೆ ತಂದುಕೊಟ್ಟ ಹೆಗ್ಗಳಿಕೆ ಚಾಮುಂಡರಾಯನದು.) ಅನಂತರ ಭರತನ ವೈರಾಗ್ಯ, ಕೇವಲಜ್ಞಾನ, ಮೋಕ್ಷಪ್ರಾಪ್ತಿಯ ನಿರೂಪಣೆ ಹಾಗೂ ಆದಿದೇವನ ಇತರ ಮಕ್ಕಳು ಯಥಾಗತಿಯನ್ನು ಹೊಂದಿದರೆಂಬಲ್ಲಿಗೆ ಕಥೆ ಮುಕ್ತಾಯಗೊಳ್ಳುತ್ತದೆ.

ಮೋಕ್ಷಕಲ್ಯಾಣ ಪ್ರಕರಣದಲ್ಲಿ ಧಾರ್ಮಿಕ ಪರಿಭಾಷೆಗಳು ತುಂಬಿಕೊಂಡಿವೆ (ಪೂರ್ವಪುರಾಣಕ್ಕೆ ಹೋಲಿಸಿದರೆ ಅತ್ಯಲ್ಪ). ಕಾವ್ಯಾಂಶದ ದೃಷ್ಟಿಯಿಂದ ಎಲ್ಲೋ ಅಲ್ಲೊಂದು ಇಲ್ಲೊಂದು ಪದ್ಯಗಳು ಮನಸೆಳೆಯುತ್ತವೆ, ಅಷ್ಟೇ. ಆದರೆ ಕೆಲವು ಸಾಂಪ್ರದಾಯಿಕ ವಿವರಗಳು ಸಹಜವಾಗಿಯೇ ಅಡಕಗೊಳ್ಳಬೇಕಾಗುತ್ತವೆ. ಧಾರ್ಮಿಕ ಕಾವ್ಯದಲ್ಲಿ ಇಂತಹ ಕೆಲವು ಅಂಶಗಳನ್ನು ಓದುಗರು ದಾಟಲೇಬೇಕೆಂಬುದನ್ನು ಈ ಹಿಂದೆಯೂ ಗಮನಿಸಲಾಗಿದೆ.

ಭರತನು ಚೈತ್ಯಾಲಯಗಳನ್ನು ಕಟ್ಟಿಸಿ ಕೃತ್ರಿಮಾಕೃತ್ರಿಮ ಚೈತ್ಯಾಲಯಗಳನ್ನು ಧ್ಯಾನಿಸಿ, ತೀರ್ಥಂಕರ ಸ್ತುತಿಯಲ್ಲಿ ಮಗ್ನನಾಗಿದ್ದನು. ಈ ಭಾಗದಲ್ಲಿ ಪಂಪನ ಆರಾಧ್ಯದೇವನಾಗಿರಬಹುದಾದ ಮಾಣಿಕ್ಯದೇವ(ಪದ್ಮಪ್ರಭ)ನ ಸ್ತುತಿಯಿದೆ. ಪಂಪನು ಈ ಭಾಗದಲ್ಲಿ ಅದಕ್ಕಾಗಿ ಅವಕಾಶ ಕಲ್ಪಿಸಿಕೊಂಡಂತೆ ತೋರುತ್ತದೆ.

ಈ ಸಮಯದಲ್ಲಿ ವೃಷಭಸ್ವಾಮಿಯು ಇನ್ನು ಹದಿನಾಲ್ಕು ದಿನಗಳ ಕಾಲ ಆಯುಷ್ಯ

ವಿರಲು ಕೈಲಾಸಪರ್ವತದ ಸಿದ್ಧಕೂಟದಲ್ಲಿ ಪುಷ್ಯಮಾಸದ ಹುಣ್ಣಿಮೆಯಂದು ಯೋಗ ನಿರೋಧಪೂರ್ವಕವಾಗಿ ಯೋಗಪಲ್ಯಂಕಾಸನದಲ್ಲಿ ಪೂರ್ವಾಭಿಮುಖವಾಗಿ ಕುಳಿತನು. ಈ ಸಂದರ್ಭದಲ್ಲಿ ಭರತಾದಿಗಳು ಕಂಡ ಕನಸು ವೃಷಭದೇವ ನಿರ್ವಾಣ ಸನ್ನಿಹಿತ ವಾದುದಕ್ಕೆ ಸಂಕೇತವಾಯಿತು. ಭರತನು ಸ್ವಾಮಿಯ ಬಳಿ ಬಂದು ಪೂಜಾವಿಧಿಯನ್ನು ನಡೆಸಿದನು. ಘಾತಿಕರ್ಮಗಳನ್ನು ನಾಶಪಡಿಸಿದ್ದ ಭಗವಂತನು ಈಗ ಅಘಾತೀಯ ಕರ್ಮ ಗಳನ್ನೂ ನಾಶಮಾಡಿದನು.

ಪೂರ್ವಪುರಾಣದಲ್ಲಿ ಈ ಸಂಬಂಧವಾಗಿ ಬರುವ ಭಾಗವಿಷ್ಟು. ಭಗವಂತನು ಮಾಘ ಮಾಸದ ಕೃಷ್ಣಪಕ್ಷದ ಚತುರ್ದಶಿಯಲ್ಲಿ ಸೂರ್ಯೋದಯ ಕಾಲದಲ್ಲಿ ಅಭಿಜಿನ್ಮುಹೂರ್ತ ದಲ್ಲಿ ಮುನಿಗಳೊಡನೆ ಪಲ್ಯಂಕಾಸನವನ್ನು ಹೊಂದಿದವನೂ ಪೂರ್ವಾಭಿಮುಖನೂ ಸೂಕ್ಷ್ಮಕ್ರಿಯಾ ಪ್ರತಿಪಾತಿಯೆಂಬ ಕೊನೆಯದಾದ ವ್ಯುಪರತ ಕ್ರಿಯಾನಿವೃತ್ತಿಯೆಂಬ ಧ್ಯಾನದಿಂದ ಐದು ಹ್ರಸ್ವಸ್ವರಾಕ್ಷರಗಳನ್ನು ಉಚ್ಚರಿಸುವಷ್ಟು ಕಾಲದಿಂದ ಅಘಾತಿಕರ್ಮ ಗಳ ನಾಶವನ್ನು ಮಾಡುವವನೂ ಕೊನೆಯದಾದ ಹದಿನಾಲ್ಕನೆಯ ಅಯೋಗಿ ಕೇವಲಿಗುಣ ಸ್ಥಾನವನ್ನು ಹೊಂದಿದವನೂ ಪರಮೌದಾರಿಕ ತೈಜಸ ಕಾರ್ಮಣಗಳೆಂಬ ಮೂರು ಶರೀರಗಳ ನಾಶವಾಗುತ್ತಿರಲು ಕ್ಷಾಯಿಕ ಸಮ್ಯಕ್ತ್ವ ಜ್ಞಾನದರ್ಶನ ವೀರ್ಯ ಸೂಕ್ಷ್ಮತ್ವ ಅವಗಹನ ಅಗುರುಲಘುತ್ವ ಅವ್ಯಾಬಾಧತ್ವಗಳೆಂಬ ತನ್ನ ಎಂಟು ಗುಣಗಳಿಂದ ಪರಿ ಪೂರ್ಣವಾದ ಸಿದ್ಧಾವಸ್ಥೆಯನ್ನು ಹೊಂದಿ ಕ್ಷಣಕಾಲದಲ್ಲಿ ತನುವಾತವನ್ನು ಸಿದ್ಧಲೋಕದ ತುತ್ತತುದಿಯನ್ನು ಹೊಂದಿದವನೂ ನಿತ್ಯನೂ ನಿರಂಜನ ಕರ್ಮ ರಜೋರಹಿತನೂ ಪೂರ್ವಶರೀರದಿಂದ ಸ್ವಲ್ಪ ನ್ಯೂನವಾದ ಪರಿಮಾಣವುಳ್ಳವನೂ ಅಮೂರ್ತಿತ್ವ-ರೂಪ ರಸಗಂಧಸ್ಪರ್ಶರಾಹಿತ್ಯವನ್ನು ಹೊಂದಿದವನೂ ಲೋಕಾಲೋಕವನ್ನು ಯಾವಾಗಲೂ ನೋಡುವವನೂ ಆತ್ಮಸುಖಪರವಶನೂ ಆಗಿದ್ದನು (ಪೂರ್ವಪು. ೪೭-೩೩೮ ರಿಂದ ೩೪೨).

ಪಂಪನು ಈ ಮೇಲಿನ ವಿವರಗಳನ್ನು ವಚನಭಾಗದಲ್ಲಿ ನೀಡಿರುವನಲ್ಲದೆ, ಭಗ ವಂತನು ಮುಕ್ತಿಗೆ ಸಂದ ದಿನದ ವಿವರವನ್ನು ನೇರವಾಗಿ ಕಂದಪದ್ಯದಲ್ಲಿ ಹಿಡಿದಿಟ್ಟಿದ್ದಾನೆ:

ದೊರೆಕೊಂಡ ಮಾಘಮಾಸಂ | ಬರೆ ಕೃಷ್ಣ ಚತುರ್ದಶೀದಿನಂ ಸಮನಿಸೆ ತ
ತ್ಪುರುದೇವಂ ಮುಕ್ತಿವಧೂ | ವರತೆಯನಭಿಜಿನ್ಮುಹೂರ್ತದೊಳ್ ಕೈಕೊಂಡಂ
(ಆದಿಪು. xvi -೨೫)

ಮಾಘಮಾಸದ ಕೃಷ್ಣಚತುರ್ದಶಿಯು ಪ್ರಾಪ್ತವಾದಾಗ ಅಂದಿನ ಅಭಿಜಿನ್ಮುಹೂರ್ತದಲ್ಲಿ ಪುರುದೇವನು ಮುಕ್ತಿವಧುವಿನ ವರಣಕ್ಕೆ ಪಾತ್ರನಾದನು.

ಆದಿದೇವನು ಪರಬ್ರಹ್ಮಕ್ಕೆ ಸಂದ ರೀತಿಯನ್ನು ಪ್ರಭಾವಕಾರಿಯಾದ ವೃತ್ತ ಒಂದ ರಿಂದ ಚಿತ್ರಿಸಿದ್ದಾನೆ :

ಗುಣಮೆಂಟುಂ ಬಂದು ತನ್ನೊಳ್ ಪೆಣೆದಿರೆ ಸಾದ್ಭುತನುಂ ಲೋಕಚೂಡಾ
ಮಣಿಯುಂ ಶಶ್ವತ್ತ್ರಿಲೋಕೀಪ್ರಣುತನುಮತಿವಿಖ್ಯಾತನುಂ ಭವ್ಯಚಿಂತಾ
ಮಣಿಯುಂ ತಾನಾಗಿ ತನ್ನೊಳ್ ನೆಱೆಯೆ ಪಡೆದು ತನ್ನಂದಮಂ ತಾನೆ ತನ್ನ
ತ್ತಣೆನಾದಿಬ್ರಹ್ಮನೇಕಕ್ಷಣದೊಳ್ ಪರಬ್ರಹ್ಮಸದ್ಮಕ್ಕೆ ಸಂದಂ (ಆದಿಪು. xvi-೨೪)

ಎಂಟು ಗುಣಗಳೂ ಅವನಲ್ಲಿ ಸೇರಿಕೊಂಡವು. ಆಗ ಆದಿಬ್ರಹ್ಮನು ಸುಖಸ್ವರೂಪನಾಗಿ, ಲೋಕಚೂಡಾಮಣಿಯಾಗಿ, ತ್ರಿಲೋಕದ ಜನರಿಂದ ಸ್ತುತಿಸಲ್ಪಟ್ಟವನಾಗಿ ಅತಿ ಪ್ರಖ್ಯಾತನಾಗಿ, ಭವ್ಯ ಚಿಂತಾಮಣಿಯೆನಿಸಿಕೊಂಡು ತನ್ನಲ್ಲಿ ತಾನಾಗಿ ತನ್ನಂದವನ್ನು ಪೂರ್ಣವಾಗಿ ತಾನೆ ಕಂಡುಕೊಂಡು ಒಂದು ಕ್ಷಣದಲ್ಲಿಯೇ ಪರಬ್ರಹ್ಮಸದ್ಮಕ್ಕೆ ಸಂದನು.

ದೇವತೆಗಳು ಆಗಮಿಸಿದರು. ಉತ್ಕೃಷ್ಟವಾದ ಪರಮಪದದ ಗುರಿಯನ್ನು ಮುಟ್ಟಿದ ಆದಿದೇವನಿಗೆ ದೇವತೆಗಳು ಭಕ್ತಿ ಗೌರವಗಳಿಂದ ಸೇವೆಯನ್ನು ಸಲ್ಲಿಸಿದರು. ಅಗ್ನಿಕುಮಾರನ ಕಿರೀಟದ ಮಣಿಯಿಂದ ಒದಗಿದ ಅಗ್ನಿಯಿಂದ ಕೊನೆಯ ಸೇವೆಯೆಂಬಂತೆ ದೇವತೆಗಳು ಸ್ವಾಮಿಯ ಪರಮೌದಾರಿಕ ಶರೀರವನ್ನು ದಹಿಸಿದರು.[೫೧] ಸ್ವಾಮಿ ಮುಕ್ತಾತ್ಮನಾದನೆಂಬ ಸಂತೋಷದಿಂದ ನೃತ್ಯವನ್ನು ಮಾಡಿ ಕೃತಕೃತ್ಯರಾದರು.

ಇಲ್ಲಿಗೆ ಆದಿದೇವನಿಗೆ ಸಂಬಂಧಿಸಿದ ಚರಿತ್ರೆ ಮುಗಿಯುತ್ತದೆ.

## ಉತ್ತರಕಾಲೀನ ಕಾವ್ಯಗಳು

**ಚಾವುಂಡರಾಯಪುರಾಣ** : ವೃಷಭಸ್ವಾಮಿಯು ಸಮವಸರಣವನ್ನು ಬಿಟ್ಟು ಕೈಲಾಸಕ್ಕೆ ಬಂದು ನೆಲೆಸಿದುದು, ಭರತಾದಿಗಳ ಸ್ವಪ್ನ, ಸ್ವಪ್ನಫಲ, ಭರತನು ಸ್ವಾಮಿಗೆ ಪೂಜೆ ಸಲ್ಲಿಸಿದುದು, ಸ್ವಾಮಿ ಮುಕ್ತಿಹೊಂದಿದುದು—ಈ ವಿಚಾರಗಳು ಇಲ್ಲಿ ರೇಖಾಮಾತ್ರವಾಗಿ ಬಂದಿವೆ.

ಪರಮೌದಾರಿಕ ಶರೀರದ ಬಗೆಗೆ ಹೇಳಿಲ್ಲ. ಅದರ ಬದಲಿಗೆ ಸೂಚ್ಯವಾಗಿ 'ದೇವನಿಕಾಯಮಗ್ನೀಂದ್ರ ಮಕುಟಾನಲೋದ್ದೀಪಿತ ದೀಪಧೂಪ ಸುರಭಿ ಮಾಲ್ಯಾದಿಗಳಿಂ ಜಿನಕ್ಷೇತ್ರ ಪೂಜಾವಿಧಿಯಂ ನಿರ್ವರ್ತಿಸಿ'ದ ವಿಚಾರ ಮಾತ್ರ ಬರುತ್ತದೆ. ಸೌಧರ್ಮೇಂದ್ರನ ಆನಂದ ನೃತ್ಯದ ಉಲ್ಲೇಖವಿದೆ.

**ಹಸ್ತಿಮಲ್ಲನ ಪೂರ್ವಪುರಾಣ** : ಈ ವಿಷಯವಾಗಿ ಬರುವ ಕೆಲವು ಅಂಶಗಳು ಅತ್ಯಂತ ಸಂಕ್ಷಿಪ್ತ ರೀತಿಯಲ್ಲಿ ಕಂಡುಬರುತ್ತವೆ. ಪರಮೌದಾರಿಕ ಶರೀರದ ದಹನ ಕ್ರಿಯೆಯ ವಿಚಾರ ಇಲ್ಲಿಲ್ಲ. "ದೇವೇಂದ್ರಾದಿಗಳ ನಿರ್ವಾಣಕಲ್ಯಾಣಮಂ ಮಾಡಿಯಾನಂದ ನೃತ್ಯಮನಾಡಿ ಸ್ವರ್ಗಕ್ಕೆ ಪೋದರ್" ಎಂಬ ಅಂಶ ಮಾತ್ರ ಬರುತ್ತದೆ.

**ಪುಣ್ಯಾಸ್ರವದ ಆದೀಶ್ವರರ ಕಥೆ** : ಇಲ್ಲಿಯೂ ಸಹ ಮುಖ್ಯ ಕಥಾರೇಖೆಯ ಸಂಕ್ಷಿಪ್ತ ಉಲ್ಲೇಖ ಕಂಡು ಬರುತ್ತದೆ. ಮಾಘ ಕೃಷ್ಣ ಚತುರ್ದಶಿಯ ವಾಸರದಲ್ಲಿ ಮುಕ್ತಿಯನ್ನು ಹೊಂದಿದ ವಿಚಾರವು ಬರುತ್ತದೆ. ಅಭಿಜಿತ್ ನಕ್ಷತ್ರದ ಉಲ್ಲೇಖವಿಲ್ಲ. ಅಗ್ನಿಕುಮಾರಾದಿಗಳ ವಿವರವನ್ನು ಕೈಬಿಟ್ಟು ಕವಿ ಪರಿನಿರ್ವಾಣವು ಸ್ವಾಮಿಗೆ ನಡೆಯಿತೆಂದಷ್ಟೇ ಹೇಳಿದ್ದಾನೆ. ಬ್ರಾಹ್ಮಿ, ಸೌಂದರಿಯರು ಅಚ್ಯುತಕಲ್ಪದಲ್ಲಿ ಹುಟ್ಟಿದ ಉಲ್ಲೇಖ ಇಲ್ಲಿ ಕಂಡುಬರುತ್ತದೆ. ಉಳಿದವರೂ ಯಥಾಯೋಗ್ಯಗತಿಯನ್ನು ಪಡೆದರೆಂದು ಹೇಳಲಾಗಿದೆ.

**ಪುರುದೇವಚರಿತ** : ಭರತಾದಿಗಳು ಸ್ವಪ್ನವನ್ನು ಕಂಡ ವಿವರದಲ್ಲಿ ಶಾಬ್ದಿಕವಾಗಿ ಕವಿ ಚಾವುಂಡರಾಯಪುರಾಣವನ್ನು ಅನುಸರಿಸಿದ್ದಾನೆ. ಅನಂತರ ಚಾವುಂಡರಾಯಪುರಾಣದಲ್ಲಿ ಕಂಡುಬಾರದ ಅಘಾತೀಯ ಕರ್ಮನಾಶದ ವಿವರ ಇಲ್ಲಿ ಬರುತ್ತದೆ. ಪೂರ್ವಪುರಾಣ, ಆದಿಪುರಾಣಗಳಲ್ಲಿ ಕಂಡುಬರುವ ವಿವರಗಳು ಅಲ್ಲಲ್ಲಿ ಅತ್ಯಂತ ಸಂಕ್ಷೇಪ

ರೀತಿಯಲ್ಲಿ ಬಂದಿವೆ. ಅಷ್ಟಕರ್ಮಗಳು ದೂರವಾದ ನಂತರ ಸ್ವಾಮಿಗೆ ದೊರೆಕೊಂಡ ಗುಣವಿಶೇಷದ ವರ್ಣನೆಯಲ್ಲಿ ಕಾವ್ಯಾಂಶವನ್ನು ತರಲು ಕವಿ ಪ್ರಯತ್ನಿಸಿದ್ದಾನೆ.

ಭಾನುಬಿಂಬಕೆ ಮೇಘಮರಸಿದಂತಾತ್ಮನ | ಜ್ಞಾನವ ಮರಸಿ ಕೊಂಡಿರ್ಪ
ಜ್ಞಾನಾವರಣೀಯ ಹಾನಿಯೊಳಾತ್ಮನಿಗೆ | ಜ್ಞಾನಮನಂತಮಾಗಿಹುದು (ಪುರುಚ. xi-೩೮)
ಇಂದ್ರಿಯ ನೀಚ ಸುಖದೊಳಾತ್ಮನ ಕೂಡಿ | ಬಂಧಿಕಾರನ ಪೋಲು ಬಿಡದೆ
ಬಂಧನವನು ಮಾಳ್ಪ ಆಯುಷ್ಯಕ್ಷಯದಿಂದ | ಲಿಂದ್ರಿಯ ಸೂಕ್ಷ್ಮತ್ವವಹುದು
(ಪುರುಚ.xi-೪೦)

ಕವಿ ವಿಷಯವನ್ನು ವರದಿಮಾತ್ರವಾಗಿ ಒಪ್ಪಿಸದೆ ಅಲಂಕಾರಗಳನ್ನು ಬೆಸೆದು ವಿಷಯ ವನ್ನು ವಿವರಿಸಿದ್ದಾನೆ.

ಸ್ವಾಮಿಯ ಅಂತ್ಯಕ್ರಿಯೆಯ ವಿಚಾರ ಸಂಕ್ಷಿಪ್ತವಾಗಿ ಬಂದಿದೆ. ಮಿಕ್ಕೆಡೆಗಳಲ್ಲಿ ಕಂಡು ಬಾರದ ಸ್ವಾಮಿಯ ಜಯಕಾರಸ್ತುತಿ ಇಲ್ಲಿ ಕಂಡುಬರುತ್ತದೆ. ಆದರೆ ಹೆಚ್ಚಿನ ಕಾವ್ಯಗುಣ ವೇನೂ ತೋರದು.

**ಆದಿಪರಮೇಶ್ವರನ ಯಕ್ಷಗಾನ :** ಉಳಿದ ಕಾವ್ಯಗಳಲ್ಲಿನ ಕೆಲವು ವಿವರಗಳನ್ನು ಇಲ್ಲಿ ಕೈಬಿಡಲಾಗಿದೆ. ಭರತಾದಿಗಳ ಸ್ವಪ್ನದ ವೃತ್ತಾಂತ, ಸ್ವಾಮಿಯ ಅಂತ್ಯಕ್ರಿಯೆಯ ವಿಚಾರ ಗಳು ಇಲ್ಲಿ ಕಂಡುಬರುವುದಿಲ್ಲ. ಸ್ವಾಮಿಯು ಮೋಕ್ಷಕ್ಕೆ ಸಂದ ವಿಚಾರವಿದೆಯೇ ಹೊರತು ಆ ಪುಣ್ಯತಿಥಿಯನ್ನು ತಿಳಿಸಿಲ್ಲ.

## ಭಾಗ ೩ : ಭರತ ಬಾಹುಬಲಿಗಳ ಚರಿತ್ರೆ

**ಆದಿಪುರಾಣ-ಪೂರ್ವಪುರಾಣ :** ಆದಿತೀರ್ಥಂಕರ ಚರಿತ್ರೆಗಳಲ್ಲಿ ಆದಿತೀರ್ಥಂಕರನ ಕಥೆಯೊಂದಿಗೆ ಭರತ ಬಾಹುಬಲಿಗಳ ವೃತ್ತಾಂತವೂ ಹೆಣೆದುಕೊಂಡು ಬರುತ್ತದೆ. ಆದಿಪುರಾಣಾಂತರ್ಗತವಾಗಿ ಬರುವ ಭರತನ ದಿಗ್ವಿಜಯ ಪ್ರಸಂಗ ಮತ್ತು ಭರತ ಬಾಹುಬಲಿಗಳ ವ್ಯಾಯೋಗ ಪ್ರಸಂಗಗಳು ಆದಿಪುರಾಣದ ಸ್ವಾರಸ್ಯವನ್ನು ಹೆಚ್ಚಿಸುವ ಭಾಗಗಳಾಗಿವೆ. "ಆಧ್ಯಾತ್ಮಿಕ ಸಿದ್ಧಿಸಾಧನೆಗಳ ಒಂದು ಮುಖವು ಆದಿನಾಥನ ಚರಿತ್ರೆ ಯಲ್ಲಿ ತೋರಿದ್ದರೆ ಇನ್ನೊಂದು ಮುಖವು ಅವನ ಮಕ್ಕಳಾದ ಭರತಬಾಹುಬಲಿಗಳ ಚರಿತ್ರೆಯಲ್ಲಿ ತೋರಿ ಕಥೆಗೆ ಸಮಗ್ರತೆ ಉಂಟಾಗಿದೆ"[೫೨]. ಆದಿನಾಥನ ಜನ್ಮಾವಳಿಯ ಕಥೆಗಳಲ್ಲಿ ಭೋಗದ ನೀರಸವನ್ನು ನೋಡಿದೆವು. ಇನ್ನು ವಿಭವದ ನಿಷ್ಫಲತೆಯನ್ನು ಅವನ ಹಿರಿಯ ಮಗನೂ ಪ್ರಥಮ ಚಕ್ರವರ್ತಿಯೂ ಆದ ಭರತನ ವೃತ್ತಾಂತದಲ್ಲಿ ನೋಡಬೇಕಾ ಗಿದೆ.[೫೩] ಆದಿನಾಥನ ಕಥೆಯಲ್ಲಿ ಕಾಮಭೋಗನಿರಸನವೂ ಭರತ ಬಾಹುಬಲಿಗಳ ಕಥೆ ಯಲ್ಲಿ ಅಹಂಕಾರ ನಿರಸನವೂ ಚಿತ್ರಿತವಾಗಿದೆ. ಮುಕ್ತಿಯ ಪಥದಲ್ಲಿ ಸಮ್ಯಕ್ತ್ವವನ್ನು ಪೂರ್ಣರೂಪದಲ್ಲಿ ಧರಿಸಲು ಕಷಾಯನಿರಸನ ಅತ್ಯವಶ್ಯವೆಂಬುದನ್ನು ಇವರ ಕಥೆಗಳು ಅತ್ಯಂತ ಮಾರ್ಮಿಕವಾಗಿ ಚಿತ್ರಿಸುತ್ತವೆ.

ಪುರುದೇವನ ಪ್ರಥಮ ಪುತ್ರನಾದ ಭರತ ಪ್ರಥಮ ಚಕ್ರಿ; ಶಲಾಕಾಪುರುಷದಲ್ಲಿ ಒಬ್ಬ; ಸಮ್ಯಗ್ದರ್ಶನ ಚಾರಿತ್ರಗಳನ್ನು ಹರಡಲು ಉತ್ಸುಕನಾದವನು. ಅದಕ್ಕಾಗಿ ತನ್ನ ಪ್ರಜೆಗಳಲ್ಲಿ ಉತ್ತಮರೆನಿಸಿದ ಜನರನ್ನು ಆರಿಸಿ ಜನಸಾಮಾನ್ಯರ ಆಧ್ಯಾತ್ಮಿಕ ಜ್ಞಾನವನ್ನು ಹೆಚ್ಚಿಸಲು

ಬ್ರಾಹ್ಮಣವರ್ಗವನ್ನು ನಿಯಮಿಸಿದವನು; ಹದಿನಾರನೆ ಮನು; ಭೋಗಯೋಗ ಸಮನ್ವಯಿ "ರಾಜ ಭರತನು, ಓರ್ವ ರಾಜನಾಗಿ, ತನ್ನ ತಂದೆಯು ಆರಂಭಿಸಿದ ಕಾರ್ಯಚಟುವಟಿಕೆಗಳ ನಿಷ್ಠಾವಂತ ಪರಿಪಾಲಕನಾಗಿದ್ದನು. ಮಾನವ ಜನಾಂಗದ ಸಾಂಸ್ಕೃತಿಕ ಐಕ್ಯತೆಯನ್ನು ಆತನ ತಂದೆಯು ಕಂಡುಕೊಂಡಿದ್ದನು. ರಾಜಕೀಯ ಐಕ್ಯತೆಯನ್ನು ರೂಪಿಸುವುದು ಭರತನ ಕಾರ್ಯಭಾರಕ್ಕೆ ಬಿಟ್ಟ ವಿಷಯವಾಗಿತ್ತು. ರಾಜ ಭರತನ ವಿಶ್ವವಿಜಯವು ಒಂದು ರೀತಿಯ ಆಧ್ಯಾತ್ಮಿಕ ದಿಗ್ವಿಜಯವೇ ಆಗಿತ್ತು. ಯಾವ ರಕ್ತಪಾತವೂ ಇಲ್ಲದೆ ಆತನ ಸೈನ್ಯವು ವಿಜಯವನ್ನು ಗಳಿಸಿತು."[೫೪]

ಒಂದೆಡೆ ಧರ್ಮದ ದಿಗ್ವಿಜಯವನ್ನು ಸಾಧಿಸಿದ ಧರ್ಮಚಕ್ರಿಯ ಧರ್ಮಾಮೃತವನ್ನು ಸಾರುವ ವಿಹಾರ, ಮತ್ತೊಂದೆಡೆ ಲೌಕಿಕ ವಿಜಯದ ಸಾಧನೆ; ಒಂದೆಡೆ ಧರ್ಮಕ್ಕೆ ಒಲಿದು ಜನರು ತಲೆಬಾಗುವ ಪ್ರಸಂಗ, ಮತ್ತೊಂದೆಡೆ ರಾಜರು ಭರತನಿಗೆ ಹೆದರಿ ಆತನನ್ನು ಒಪ್ಪಿಕೊಳ್ಳುವ, ಯುದ್ಧ ಮಾಡಿದರೂ ಶರಣಾಗುವ ದಿಗ್ವಿಜಯದ ಲೌಕಿಕ ಪ್ರಸಂಗಗಳು ಬರುತ್ತವೆ. ತಂದೆ ಮಕ್ಕಳ ಈ ದಿಗ್ವಿಜಯ ಯಾತ್ರೆ, ಲೌಕಿಕಾಲೌಕಿಕದ ಯಾತ್ರೆಯಾಗಿದೆ. ಲೌಕಿಕ ದಿಗ್ವಿಜಯ ಯಾತ್ರೆಯೂ ಕೊನೆಗೆ ಅಲೌಕಿಕ ಯಾತ್ರೆಯಲ್ಲಿಯೇ ಪರ್ಯವಸಾನವಾಗಿ ಶಾಂತವಾಗುತ್ತದೆ.

## ದಿಗ್ವಿಜಯ ಯಾತ್ರೆ

ಆದಿಪುರಾಣದ ನಾಲ್ಕು ಆಶ್ವಾಸಗಳಲ್ಲಿ (೧೧ ರಿಂದ ೧೪) ಭರತನ ದಿಗ್ವಿಜಯದ ವರ್ಣನೆ ಬರುತ್ತದೆ. ಮೊದಲನೆಯ ಮೂರು ಆಶ್ವಾಸಗಳಲ್ಲಿ ಅರಮನೆಯ ರಾಣಿಯರ ವಿಲಾಸವನ್ನು ವರ್ಣಿಸಲು ಕವಿ ಅವಕಾಶವನ್ನು ತೆಗೆದುಕೊಂಡಿದ್ದಾನೆ. ಆ ಗುಂಪೆಲ್ಲಾ ಅವನೊಡನೆ ನಡೆಯುತ್ತದೆ. ಅಲ್ಲಿ ಅವರು ವನಸೌಂದರ್ಯಕ್ಕೆ ಮನಸೋಲುವುದು, ಅವರ ಜಲಕ್ರೀಡೆ, ಬೆಳುದಿಂಗಳ ವಿಹಾರ, ವಿನೋದಾದಿಗಳು ವರ್ಣಿತವಾಗಿವೆ. ದಿಗ್ವಿಜಯ ಪ್ರಾರಂಭ ನಿರೂಪಣೆ, ಷಟ್‌ಖಂಡಮಂಡಲವಿಜಯ, ದಿಗ್ವಿಜಯ ಧ್ವಜಾರೋಹಣ (ಬಾಹುಬಲಿ ಚರಿತ್ರೆ) ಇವೆಲ್ಲವೂ ಪೂರ್ವಪುರಾಣದಲ್ಲಿ ೧೧ ಪರ್ವಗಳ ವಿಶಾಲಭೂಮಿಕೆಯಲ್ಲಿ (೨೬ನೇ ಪರ್ವದಿಂದ ೩೬ನೇ ಪರ್ವ) ಹರಡಿರುವ ಈ ವಿವರಗಳನ್ನು ಪಂಪನು ನಾಲ್ಕು ಆಶ್ವಾಸಗಳಲ್ಲಿ ಕುಶಲತೆಯಿಂದ ನಿರ್ವಹಿಸಿದ್ದಾನೆ.

ಸಮವಸರಣದಿಂದ ಹಿಂದಿರುಗಿದ ಭರತ ಸುದರ್ಶನವೆಂಬ ಚಕ್ರಪೂಜೆಯನ್ನು ಮಾಡಿದನು. ಅನಂತರ ಛತ್ರರತ್ನ, ಖಡ್ಗರತ್ನ, ದಂಡರತ್ನ, ಚರ್ಮರತ್ನ, ಮಣಿರತ್ನ, ಕಾಕಿಣೀರತ್ನ, ಗೃಹಪತಿರತ್ನ, ಸೇನಾನಿರತ್ನ, ತಕ್ಷರತ್ನ, ಪುರೋಹಿತ ರತ್ನ, ಗಜರತ್ನ, ಅಶ್ವರತ್ನ, ಸ್ತ್ರೀರತ್ನವೆಂಬ ಜೀವಾಜೀವ ರತ್ನಗಳು ಹುಟ್ಟಿದವು. ಅವುಗಳನ್ನು ಪೂಜಿಸಿ ಜ್ಯೇಷ್ಠಪುತ್ರನ ಜಾತಕರ್ಮೋತ್ಸವವನ್ನು ಮಾಡಿದನು. ಅಷ್ಟರಲ್ಲಿ ಶರತ್ಕಾಲದ ಆಗಮನವಾಯಿತು.

ಪೂರ್ವಪುರಾಣದಲ್ಲಿ ಸುದರ್ಶನ ಚಕ್ರದ ಉಲ್ಲೇಖ ಮಾತ್ರವಿದೆಯೇ ಹೊರತು ಉಳಿದ ರತ್ನಗಳ ಉಲ್ಲೇಖವಿಲ್ಲ.

ಶರದೃತುವಿನ ವರ್ಣನೆ ಜಿನಸೇನ-ಪಂಪರ ಕಲ್ಪನೆ ವಿಭಿನ್ನ ಜಾಡನ್ನು ಹಿಡಿದು ಸುಂದರವಾಗಿ ವರ್ಣಿತವಾಗಿದೆ. ಋತು ಒಂದೇ ಆದರೂ ನೋಡುವ ಕಣ್ಣು ಬೇರೆ. ಅವರಿಗೆ

ಪ್ರಿಯವಾಗುವ ಚಿತ್ರಗಳನ್ನು ಹಿಡಿಯುವಲ್ಲಿ ಸ್ವತಂತ್ರರಾಗಿದ್ದಾರೆ. ಪಂಪನ ವರ್ಣನೆ ಸಾಂದ್ರ, ಸಂಕೀರ್ಣ; ಜಿನಸೇನರ ವರ್ಣನೆ ವಿಸ್ತೃತ, ಗಂಭೀರ. ಪೂರ್ವಪುರಾಣದಲ್ಲಿ ಐವತ್ತು ಶ್ಲೋಕಗಳಲ್ಲಿ ಅದನ್ನೇ ಸ್ವತಂತ್ರವಾದ ಭಾಗವೆಂಬಂತೆ ವರ್ಣಿಸಲಾಗಿದೆ. ಆದರೆ ಆದಿಪುರಾಣದಲ್ಲಿ ದಿಗ್ವಿಜಯದ ವರ್ಣನೆಗೂ ಇದಕ್ಕೂ ಅಲ್ಲಲ್ಲಿ ಒಂದು ರೀತಿಯ ಸಂಬಂಧವನ್ನು ಕಲ್ಪಿಸಿಕೊಂಡು ಪರಿಣಾಮಕಾರಿಯಾಗಿ ವರ್ಣಿಸಲಾಗಿದೆ. ಒಂದು ವಚನ ನಾಲ್ಕು ಪದ್ಯಗಳಲ್ಲಿ ಶರದೃತುವಿನ ವರ್ಣನೆಯನ್ನು ಮಾಡಿದ್ದಾನೆ. ಉದಾಹರಣೆಗೆ:

> ಆತನ ದಿಗ್ವಿಜಯದೊಸಗೆಯೊಳ್ ದಿಗಂಗನೆಯರೆತ್ತಿದ ಬೆಳ್ಳಿಯ ಕಳಶಂಗಳಂತೆ ತಳದಳಿಸಿ ಪೊಳೆವ ಮುಗುಳ್ಗಳುಂ, ಆತನ ಬರವಿನುತ್ಸವಕ್ಕೆ ಸಂತಸಂಬಟ್ಟು ಮಹೀಲಲನೆಯ ನಗೆಮೊಗದಂತೆ ತಿಳಿದ ಕೊಳಂಗಳುಂ, ಆತನ ಪಡೆಗೆ ನಡೆಯಲೆಡೆ ಮಾಡಿದಂತೆ ಬಳ್ವಳಾದ ದೆಸೆಗಳುಂ...'(ಆದಿಪು. ಆಶ್ವಾಸ xi).

ದಿಗ್ವಿಜಯ ಯಾತ್ರೆಯಲ್ಲಿಯೂ ಒಂದು ಪ್ರಶಾಂತ ವಾತಾವರಣವು ಕಂಡುಬರುವುದು ಇಲ್ಲಿಯ ವೈಶಿಷ್ಟ್ಯ. 'ಬೆಳೆದು ಬಾಗಿರುವ ಹೊಸ ಬತ್ತದ ಗದ್ದೆ, ಆಗತಾನೆ ಅರಳಿದ ತಾವರೆಗಳು—ಇವುಗಳ ಕಂಪು ಹರಡಲು, ದಿಕ್ಕುದಿಕ್ಕಿಗೂ ದಿಗ್ವಿಜಯದ ಒಸಗೆಯಂತೆ ಶರದೃತುವು ಆಗಮಿಸಿತು. ಸೂರ್ಯನ ಕಾವಿನ ತೀವ್ರತೆಯಿಂದ ಅದು ಭರತನ ಮುಳಿಸನ್ನೂ ಚಂದ್ರಕಿರಣದ ಉಜ್ವಲತೆಯಿಂದ ಅವನ ಸಂತೋಷವನ್ನೂ ಶರದೃತು ಅನುಕರಿಸಿತು. ಆಗಸದಿಂದ ಮುತ್ತಿನ ಮಳೆಯಾದಂತೆ ಬೆಳ್ಮುಗಿಲುಗಳು ತೇಲಿದವು. ಬಿಳಿಮಳೆಯಾಗಿ ಕೊಳಗಳು ಏರ್ಪಟ್ಟಂತೆ ಆಗಸದಲ್ಲಿ ಬೆಳ್ಮುಗಿಲುಗಳು ತೇಲಿದುವು. ಕಾಂತಿಯಿಂದ ಮಿಂದಂಥ ಬೆಳ್ದಿಂಗಳು, ಅರಳಿದ ಹೊಸಜಾಜಿ ಇವು ದಿಶಾಕಾಂತೆಗೆ ಶುಭ್ರವಾದ ಸೀರೆಯುಡಿಸಿದಂತೆ ಕಂಗೊಳಿಸಿದವು (ಆದಿಪು. ಆಶ್ವಾಸ xi). ಈ ವರ್ಣನಾ ಭಾಗದಲ್ಲಿ ರಕ್ತಪಾತವಿಲ್ಲದೆ ದಿಗ್ವಿಜಯ ಸಾಧನೆಯ ಸೂಚನೆಯ ಭಾವ ಅಡಗಿರುವುದೇ ಅಲ್ಲದೆ, ಪಂಪನ ಪ್ರಕೃತಿಪ್ರೇಮಭಾವವು ವ್ಯಕ್ತವಾಗುತ್ತದೆ.

ಈ ಪ್ರಸಂಗದಲ್ಲಿ ಪೂರ್ವಪುರಾಣದಲ್ಲಿ ಬರುವ ಸಾಂಪ್ರದಾಯಕವೆನಿಸುವ ಕೆಲವು ವರ್ಣನೆಗಳು ಹೀಗಿವೆ : 'ಸರೋವರ ಮತ್ತು ನದಿಗಳು ತಿಳಿಯಾದ ಮಹಾಕವಿಗಳ ಕಾವ್ಯದಂತೆ ನಿರ್ಮಲವಾಗಿದ್ದುವು, ಹಾರಾಡುತ್ತಿರುವ ಹಂಸಪಕ್ಷಿಗಳ ಸಮೂಹವು ಶರದೃತುವೆಂಬ ಲಕ್ಷ್ಮಿಯ ಕಂಠಾಭರಣದಂತೆ ಶೋಭಿಸಿತು. ಕಮಲವನದ ಪರಾಗದಲ್ಲಿ ಮುಳುಗಿ ದುಂಬಿವಿಂಡು ಹಳದಿಯಾಗಿ ಶರದೃತುವಿನ ಬಂಗಾರದ ಮಣಿಗಳ ಕಂಠಮಾಲೆಯಂತೆ ಕಂಗೊಳಿಸಿತು...' (ಪೂರ್ವಪು. xxvi- ೭ ರಿಂದ ೧೧).

ಪೂರ್ವಪುರಾಣದಲ್ಲಿ ಬರುವ ದಿಗ್ವಿಜಯ ಪ್ರಾರಂಭದ ರಣೋತ್ಸಾಹದ ವರ್ಣನೆಯನ್ನು ಪಂಪನು ಸಂಗ್ರಹಿಸಿದ್ದಾನೆ. ದಿಗ್ವಿಜಯಕ್ಕೆ ಹೊರಡುವ ಹೊತ್ತಿನಲ್ಲಿ ಭರತನಿಗೆ ಶುಭ ಸೂಚನೆಗಳಾದವು. ಸ್ಥಪತಿರತ್ನನು ದಿವ್ಯವಾದ ರಥವನ್ನು ರಚಿಸಿಕೊಟ್ಟನು. ಶುಭ ಮುಹೂರ್ತದಲ್ಲಿ ಪ್ರಯಾಣ ಹೊರಟ ಮನುವಂಶ ತಿಲಕನನ್ನು ನೋಡಿದ ಪುರಜನರು ಆತನನ್ನು ಮನ್ಮಥನೆಂದು ಬಗೆದು ಮರುಳಾದರು. ದಿಗ್ವಿಜಯೋನ್ಮುಖನಾದ ಭರತೇಶನನ್ನು ನೋಡಲು ಕುತೂಹಲದಿಂದ ನಿಂತ ವನಿತೆಯರನ್ನು ಪಂಪನು ಎಂಟು ಪದ್ಯಗಳಲ್ಲಿ ಚಿತ್ರಿಸಿ ಒಂದು ನಾಟಕೀಯ ಸನ್ನಿವೇಶವನ್ನು ಮೂಡಿಸಿದ್ದಾನೆ. ಅವರಲ್ಲಿ ಒಬ್ಬಳಂತೂ—

ಪಿರಿದೊಂದುತ್ಸುಕಭಾವದಿಂ ಸರಿಗೆಯಂ ಕಾಲೊಳ್ ಕಟೀಸೂತ್ರಮಂ
ಕೊರಲೊಳ್ ಚಂಪಕಮಾಲೆಯಂ ಕನಕಕಾಂಚೀಸ್ಥಾನದೊಳ್ ರತ್ನನೂ
ಪುರಮಂ ಕೈಗಳೊಳಾಗಳೆ ತೊಡಚ್ಚುತ್ತುಂ ಜನಂ ಕೂಡೆ ಕ
ವ್ವರೆಗೊಂಡೆಯ್ತರೆ ನೋಡಲೆಂದು ಪರಿದಳ್ ಚಕ್ರೇಶಸೌಂದರ್ಯ್ಯಮಮಂ (ಆದಿಪು. xi-೨೨)

ಭರತನನ್ನು ನೋಡಲು ಕಾತರಗೊಂಡ ಆ ಹೆಣ್ಣು ಗಡಿಬಿಡಿಯಲ್ಲಿ ಒಂದು ಅಂಗದ ಒಡವೆಯನ್ನು ಮತ್ತೊಂದು ಅಂಗಕ್ಕೆ ಇಟ್ಟುಕೊಳ್ಳುತ್ತ ಬರುವ ಚಿತ್ರಣವನ್ನು ಪಂಪನು ಸಹಜಸುಂದರವಾಗಿ ನೀಡಿದ್ದಾನೆ.

ಆದಿಪುರಾಣದಲ್ಲಿ ಭರತನ ಪುರಸ್ತ್ರೀಯರು ಕಾಮವಶರಾಗಿ ಈ ಸಂದರ್ಭದಲ್ಲಿ ಚಿತ್ರಿತರಾಗಿದ್ದರೆ; 'ಜಯಶೀಲನಾಗು ಪ್ರಭುವೆ, ಹತ್ತು ದಿಕ್ಕುಗಳನ್ನು ಜಯಿಸು' ಈ ಮೊದಲಾಗಿ ಆಶಿಸುತ್ತಾ ಸ್ತ್ರೀಯರು ಉಪ್ಪರಿಗೆಯ ಕಿಟಕಿಗಳಿಂದ ಪುಷ್ಪಾಂಜಲಿಯನ್ನು ಸೂಸಿದರೆಂಬಂತಹ ವರ್ಣನೆಗಳು ಪೂರ್ವಪುರಾಣದಲ್ಲಿ ದೊರೆಯುತ್ತವೆ.

ಸೈನ್ಯವು ಚಕ್ರರತ್ನದ ಹಿಂದೆ ಹೊರಟಿತು. ಗಂಗಾನದಿಯನ್ನು ತಲುಪುವಾಗಿನ ಮಾರ್ಗ ವರ್ಣನೆ ಹಾಗೂ ಗಂಗಾನದಿಯ ವರ್ಣನೆ ಇಬ್ಬರಲ್ಲಿಯೂ ವಿಭಿನ್ನ ಶೈಲಿಯಲ್ಲಿ ಬಂದಿರುವುದನ್ನು ಗಮನಿಸಬಹುದು. ಈ ಭಾಗದಲ್ಲಿ ಜಿನಸೇನರು ಬೇರೆಯದೇ ಆದ ದೃಶ್ಯಾವಳಿಗಳಿಂದ ವರ್ಣನಾಗಾಂಭೀರ್ಯವನ್ನು ತೋರಿರುವರು. ದಾರಿಯುದ್ದಕ್ಕೂ ಭರತನು ಕಂಡ ಚಕ್ರವಾಕಪಕ್ಷಿ, ನದೀತೀರದ ಲತಾಮಂಟಪಾದಿಗಳನ್ನು ವರ್ಣಿಸುತ್ತ ಸಹೃದಯರ ಪರಿಸರಕ್ಕೆ ಹತ್ತಿರವಾಗಿ ಕಂಡುಬರುವ ಎತ್ತು, ಕರು, ಬತ್ತದ ಗದ್ದೆ, ಕೃಷಿಕರು, ಹಳ್ಳಿಯ ಪ್ರಮುಖರು ಈ ಮೊದಲಾದವರ ಚಿತ್ರಣಗಳನ್ನು ನೀಡಿದ್ದಾರೆ. ಪಂಪನಲ್ಲಿಯಾದರೋ ಈ ರೀತಿಯ ಜನಸಾಮಾನ್ಯರ ವರ್ಣನೆಯಿಲ್ಲ. ಆತನು ಕೊಡುವುದು ಏನಿದ್ದರೂ ರಾಣಿವಾಸದ ಚಿತ್ರಣವನ್ನು. ಬಿಸಿಲಿನ ಝಳಕ್ಕೆ ವನಿತೆಯರ ಮುಖಗಳು ಬಾಡಿದವು; ಪ್ರಯಾಣ ಆಯಾಸದಿಂದ ಅವರ ದೇಹಗಳು ಸೊರಗಿದುವು; ತಲೆಯುಡುಗೆಗಳು ಅಸ್ತವ್ಯಸ್ತವಾದವು; ಮುಡಿದ ಹೂಮಾಲೆಗಳು ಬಾಡಿದವು; ನಡೆ ನಿಧಾನವಾಯಿತು. ಗಂಗೆಯ ದಡದಲ್ಲಿನ ವನಶ್ರೀಯನ್ನು ಕಂಡಾಗ ಸಾರಥಿಯು ತೇರನ್ನು ನಿಲ್ಲಿಸಿ—'ಕಡು ಪಗಲಾದುದು; ದೇವರ್ ನಡೆವುದು ವನಜಕೇಳಿಗೆ; ಕಡುರಯ್ಯಂ ಬನದ ತೊರೆಯ ಸಿರಿ' ಎಂದು ಬಿನ್ನವಿಸಿದನು. ಭರತನು ಆನಂದದಿಂದ ಅಲ್ಲಿ ಬೀಡುಬಿಟ್ಟನು. ಅಂತಃಪುರ ವಿಳಾಸಿನಿಯರೊಡನೆ ವನವಿಹಾರಕ್ಕೆ ತೊಡಗಿದನು. ಹನ್ನೊಂದನೆಯ ಆಶ್ವಾಸದ ಉತ್ತರಾರ್ಧವು ಭರತನ ವನಕೇಳಿ ವರ್ಣನೆಗೆ ಮೀಸಲಾಗಿದೆ. ಈ ಭಾಗವು ಪಂಪನ ವನಸಿರಿಯ ಪ್ರೇಮವನ್ನು ಪ್ರತಿಧ್ವನಿಸುವಂತೆ ಕಂಡುಬರುತ್ತದೆ. ಅದೆಷ್ಟು ಹೂಗಳನ್ನು ವರ್ಣಿಸಿದರೂ ಆತನಿಗೆ ತೃಪ್ತಿ ಕಂಡುಬರುವುದಿಲ್ಲ. ವನಸಿರಿಯನ್ನು ಹಾಡಿಹೊಗಳಿದರೂ ತೃಪ್ತಿಯಿಲ್ಲ. "ಪಂಪನು ಹಿತಮಿತವಾಗಿ ಮಾಡಿದ ಪ್ರಕೃತಿ ವರ್ಣನೆಗಳಲ್ಲಿ ಅಪೂರ್ವವಾದ ಅನುಭೂತಿಯನ್ನು ಸುಭಗತೆಯನ್ನು ನಾವು ಅನೇಕ ಸಲ ಕಾಣುತ್ತೇವೆ."[೫೫] ವನಸಿರಿಯನ್ನು ಕಂಡು ಭರತನ ರಾಣಿಯರು ಪುಳಕಗೊಂಡು ಹಾಡುವ, ಬಣ್ಣಿಸುವ ಧ್ವನಿಗಳು ಪಂಪನ ಪ್ರತಿಧ್ವನಿಗಳಂತೆಯೇ ಕಂಡುಬರುತ್ತವೆ. "ಪಂಪನ ಕಣ್ಣು ಪ್ರತಿಯೊಂದು ಹೂವಿನ ಸೊಗಸನ್ನೂ ಇಡಿ ಇಡಿಯಾಗಿ ಬಿಡಿ ಬಿಡಿಯಾಗಿ ಬಣ್ಣಿಸಿ ಅದರ ಬಗ್ಗೆ ಹೊಸತೊಂದು ಕಣ್ಣನ್ನೆ ನಮ್ಮಲ್ಲಿ

ತೆರೆಸುತ್ತದೆ."[೫೬] ಪಂಪ ಕನ್ನಡನಾಡಿನ ಬಗೆಬಗೆಯ ಹೂಗಳ ಬಣ್ಣ, ಆಕಾರ, ಸುಗಂಧಗಳನ್ನು ನವಿರಾಗಿ ಬಣ್ಣಿಸಿ ಅವುಗಳ ಮಾಧುರ್ಯವು ನಮ್ಮ ಮುಂದೆ ನಿಲ್ಲುವಂತೆ ಮಾಡಿದ್ದಾನೆ. ಪಾಟಲೀಪುಷ್ಪದ ಪರಿಮಳ, ಸುರಹೊನ್ನೆಯ ಸೌಂದರ್ಯ, ಕುಂಕುಮ ಕೇಸರಗಳನ್ನು ತುಂಬಿದ 'ಪೊನ್ನ ಬಾಯಿನದ ಬಟ್ಟಲಿವೆಂಬಿನಂ' ತೋರುವ ಹೊಸ ಪರಾಗಗಳಿಂದ ಕೂಡಿದ ಕರ್ಣಿಕಾರ, ಕಂಪು ಹಾಗೂ ಬಣ್ಣಗಳೆರಡಲ್ಲಿಯೂ ವಿಶೇಷತೆಯನ್ನು ಮೆರೆಯುವ ಸಂಪಿಗೆ, ಸೌರಭದ ಸಮೃದ್ಧಿಯನ್ನು ಹೊಂದಿರುವ ಕೇತಕೆ, ಮುಟ್ಟಿದರೆ ಬಾಡುವ ಜಾಜಿಮಲ್ಲಿಗೆ ಮೊದಲಾದವುಗಳನ್ನು ಆ ಸುಮಕೋಮಲೆಯರು ಬಣ್ಣಿಸಿ, ಅಲಂಕರಿಸಿಕೊಂಡರೆಂಬ ವರ್ಣನೆ ಮನೋಹರವಾಗಿದೆ.

ಮಾವು-ಮಲ್ಲಿಗೆಗಳನ್ನು ವರ್ಣಿಸಲು ಪಂಪನಿಗೆ ಇಲ್ಲಿ ಉತ್ತಮ ಅವಕಾಶ ಲಭಿಸಿದೆ. ಅವನಿಗೆ ಇವೆರಡೆಂದರೆ 'ಸಂಸಾರ ಸಾರ ಸರ್ವಸ್ವ' (ಪಂಪಭಾರತ i-೫೬). ಮಾವನ್ನು ಕುರಿತು ಆತನು ವರ್ಣಿಸುವ ಬಗೆ ಇಲ್ಲಿ ಅತ್ಯಪೂರ್ವವಾಗಿ ಕಂಡುಬರುತ್ತದೆ.

ತಳಿರೊಳ್ ನೀನೆ ಬೆಡಂಗನೆಸೆವಗೆಳೊಳ್ ನೀಂ ನೀಱನೈ ಪುಷ್ಪಸಂ
ಕುಳದೊಳ್ ನೀನೆ ವಿಲಾಸಿಯೈ ಮಿಡಿಗಳೊಳ್ ನೀಂ ಚೆಲ್ವನೈ ಪಣ್ಣಾಪ
ಣ್ಗಳಿನೋವೋ ಪೆಱತೇನೋ ನೀನೆ ಭುವನಕ್ಕಾರಾಧ್ಯನೈ ಭೃಂಗಕೋ
ಕಿಳಕೀರಪ್ರಿಯಚೂತರಾಜ ತರುಗಳ್ ನಿನ್ನಂತೆ ಚೆನ್ನಂಗಳೆ (ಆದಿಪು. xi-೯೬)

ನೀನೆ ತಳಿರುಗಳ ವಿಷಯದಲ್ಲಿ ಅತಿಸುಂದರ, ಮೊಗ್ಗುಗಳಲ್ಲಿಯೂ ನೀನೇ ಚೆಲುವ, ಹೂಗಳ ವಿಷಯದಲ್ಲಿಯೂ ನೀನು ವಿಲಾಸಿ, ಮಿಡಿಗಾಯಿಗಳಲ್ಲಿಯೂ ನೀನೇ ಸುಂದರ, ಮಾಗಿದ ಹಣ್ಣುಗಳಿಂದ ನೀನು ಭುವನೈಕಪೂಜಿತ, ಮತ್ತೇನನೆನ್ನೋಣ! ದುಂಬಿ, ಕೋಗಿಲೆ, ಗಿಣಿಗಳಿಗೆ ಪ್ರಿಯನಾದ ಚೂತರಾಜ, ಇತರ ಗಿಡಗಳು ನಿನ್ನಷ್ಟು ಸುಂದರವಾಗಿವೆಯೇ?

ಮಾವನ್ನು ಕುರಿತ ಮುಕ್ತಕದಂತೆ ಈ ಪದ್ಯ ಕಂಡುಬರುತ್ತದೆ. ಕವಿಗೆ ಮಾವಿನೊಡನಿರುವ ಪ್ರೀತಿಗೌರವಗಳ ಪ್ರತೀಕವಾಗಿ ಈ ಪದ್ಯ ಸುಂದರವಾಗಿ ಆತ್ಮೀಯ ಶೈಲಿಯಲ್ಲಿ ಮೈಗೂಡಿ ಬಂದಿದೆ. ಹಾಗೆಯೇ ಮಲ್ಲಿಗೆ, ಕೋಗಿಲೆಗಳ ಬಗೆಗೂ ಕವಿಗೆ ಅಮಿತವಾದ ಪ್ರೀತಿ. 'ಮಲ್ಲಿಗೆಗೆ ಬಸಂತದೊಳ್ ಬಯಸಿ ಮಾಡಿದರ್,....ಪಟ್ಟ ಬಂಧಮಂ ಮಧುಮನೋವಲ್ಲಭರಿರ್ವರುಂ ಅಱಿೖವಟ್ಟು' ಎನ್ನುತ್ತಾನೆ. "ನಮ್ಮ ಕವಿಗಳಿಗಿರುವ ಪುಷ್ಪ. ಪ್ರೀತಿಯೆಲ್ಲ ವರ್ಣನಾಕಾರ್ಯಕ್ಕೆ ಹರಿದು ಬಂದು ಕನ್ನಡ ಸಾಹಿತ್ಯದಲ್ಲಿ ನಮಗೆ ದೊರಕುವ ವನವರ್ಣಶೋಭೆಯ ಚಿತ್ರಣದಲ್ಲಿ ಅತಿ ಸುಂದರವಾದ ಸ್ನಿಗ್ಧವಾದ ಪದ್ಯಗಳು ನಿರ್ಮಾಣಗೊಂಡಿವೆ."[೫೭]

ಭರತನ ರಾಣೀವಾಸದ ಸಂಭಾಷಣೆಯಲ್ಲಿ ಪಂಪನ ಮನೋಗತ ಪ್ರಕೃತಿಪ್ರಿಯತೆ, ನಾಟಕೀಯ ವಿಧಾನದಲ್ಲಿ ಹೊರಹೊಮ್ಮಿದೆ. ಅಲ್ಲದೆ ಅಂತಃಪುರಸ್ತ್ರೀಯರು ವನದಿಂದ ಬೀಳ್ಕೊಡುವಾಗ ಅವರು ಪ್ರೀತಿಯಿಂದ ಹೂಗಳೊಡನೆ ಸಂಭಾಷಣೆ ನಡೆಸುವ ರೀತಿಯ ಸಂವಿಧಾನ ಕೌಶಲ ಮೆಚ್ಚುವಂತಹದ್ದು. ಗಿಡಮರಗಳಲ್ಲಿ ಆತ್ಮೀಯ ಮನೋಭಾವವನ್ನು ತುಂಬಿ ಹರಿಸಿ, ಅವುಗಳಿಗೆ ಜೀವಕಳೆಯನ್ನು ತರಲಾಗಿದೆ. 'ಮೊಗ್ಗುಗಳ ಕುಚ್ಚನ್ನು, ತಳಿರ ಗೊಂಚಲನ್ನು, ಸುಂದರವಾಗಿ ಆಡುತ್ತಿರುವ ಕೊಂಬೆಗಳಲ್ಲಿನ ಮಿಡಿಗಾಯಿಗಳನ್ನು ಪ್ರೀತಿಸದೆ, ರಕ್ಷಿಸದೆ, ಸೊನೆ ಸುರಿಯುವಂತೆ ಹಿಂಸಾಚಾರಗಳಿಂದ ತರಿದು ನೋಯಿಸಿ

ಕಾಡಿಸಿದೆವು. ಎಲೆ ಬಾಲಚೂತ! ಈ ಎಲ್ಲ ಅಪರಾಧಗಳನ್ನು ಮನಸ್ಸಿಗೆ ತಂದುಕೊಳ್ಳದೆ, ನಾವೂ ನೀವೂ ಜೊತೆಯಲ್ಲಿರುವುದನ್ನು ಮಾತ್ರ ಸ್ಮರಿಸಿಕೊ' (ಆದಿಪು. xi-೧೩೧) ಎಂದು ಹೇಳುವಲ್ಲಿ ಸುಮಕೋಮಲವಾದ ಭಾವವನ್ನೇ ಕಾಣುತ್ತೇವೆ. ಇಲ್ಲಿ ಕವಿಯ ನಿರೂಪಣೆ ಭಾವಗೀತಾತ್ಮಕವಾಗಿ ಕಂಡುಬರುತ್ತದೆ.

ಭರತನೊಡನೆ ರಾಣಿವಾಸವು ಜಲಕ್ರೀಡೆಯಲ್ಲಿ ಆನಂದಿಸಿತು. ಭರತನು ವನಕ್ರೀಡೆಯ ವೈಭವದಿಂದ ಮೆರೆದು, ವಿಲಾಸದಿಂದ ಜಲಕ್ರೀಡೆಯನ್ನಾಡಿ ಸಮಸ್ತ ಅಂತಃಪುರಸ್ತ್ರೀಯರನ್ನು ಆಕರ್ಷಿಸಿ ಶೋಭಿಸಿದನೆಂದು ಹೇಳಿ ಪಂಪನು ಈ ಪ್ರಸಂಗವನ್ನು ಮುಗಿಸಿದ್ದಾನೆ.

"ವಿಜಯ ಪ್ರಸ್ಥಾನದ ದೊರೆಮಗ ಭರತನನ್ನು ತಂತಮ್ಮ ಮನೆಯ ಮಾಡುಗಳಿಂದ ನೋಡಿ ನಲಿದ ಪೌರಸ್ತ್ರೀಯರ ಸಂಭ್ರಮದ ಕಥನದಲ್ಲಿಯೂ ರಾಣಿವಾಸದ ಜನರ ಸಹ ಪ್ರಯಾಣದ ಕಥನದಲ್ಲಿಯೂ ಒಂದು ಕಾಲದ ರಾಜವೈಭವ, ವಿಲಾಸ, ಬೆಡಗುಗಳ ಹೊಳಹುಗಳನ್ನು ಕಾಣಬಹುದು. ಅವು ಇಲ್ಲಿ ಸಿಡಿದ ಶೃಂಗಾರರಸದ ತುಂತುರು ಹನಿಗಳಾಗಿದ್ದರೆ, ವನವಿಹಾರ, ಜಲಕೇಳಿಯ ಭಾಗಗಳಲ್ಲಿ ತೊರೆಯ ಪೂರವಾಗಿರುವುದನ್ನು ಕಾಣಬಹುದು. ಈ ಪೂರ ನಿರ್ಭರವಾಗಿ ಹರಿಯುವುದು ಇಲ್ಲಿಂದ ಮುಂದಿನ ಭರತನ ಸೇನಾ ಕಟಕದ ಚಂದ್ರಿಕಾ ವಿಹಾರದ ವರ್ಣನೆಯಲ್ಲಿ. ಇವೆಲ್ಲ ಕಾವ್ಯಾಂಗಗಳಾದ ಅಷ್ಟಾದಶ ವರ್ಣನೆಗಳನ್ನು ಉಚಿತ ಸ್ಥಾನಗಳಲ್ಲಿ ಸಂಯೋಜಿಸಬೇಕೆಂಬ ಉದ್ದೇಶದಿಂದ ಸೇರಿವೆಯೆಂದುಕೊಂಡರೂ, ಪಂಪನು ಯಾವುದೇ ಪ್ರಕೃತಿ ಸೌಂದರ್ಯದ ಚಿತ್ರಣದಲ್ಲಿಯೂ ಮಾನವವ್ಯಾಪಾರದ ಚಿತ್ರಣದಲ್ಲಿಯೂ ತೋರುವ ಸೊಗಸು ಸಹಜತೆಗಳು ಇಲ್ಲಿಯೂ ತುಂಬಿ ಸೂಸಿವೆಯೆಂದು ಧಾರಾಳವಾಗಿ ಹೇಳಬಹುದು."[೫೮] ಇದು ಪಂಪನ ವರ್ಣನಾ ವಿಧಾನದ ವೈಖರಿಯ ವೈಶಿಷ್ಟ್ಯವಾಗಿದೆ.

ಗಂಗಾನದಿಯು ಭರತರಾಜನ ಸ್ತ್ರೀಯರ ಮಾರ್ಗಾಯಾಸವನ್ನು ಹೋಗಲಾಡಿಸಿತೆಂದು ಹೇಳಿ ಮುಂದೆ ಆ ಗಂಗಾನದಿಯ ದಡದ ವನರಾಜಿಯ ಸೌಂದರ್ಯವನ್ನು ವರ್ಣಿಸುವಲ್ಲಿ ಪಂಪನು ತೋರಿರುವ ಆತ್ಮೀಯ ವಾತಾವರಣವು ಜಿನಸೇನರಲ್ಲಿ ತೋರಿಬರುವುದಿಲ್ಲ. ವನದ ಸಮೃದ್ಧಿಯನ್ನು ಭರತನಿಗೆ ಸಾರಥಿಯು ತಿಳಿಸುವನು. ವೀಕ್ಷಕ ವಿವರಣಾ ರೀತಿಯಲ್ಲಿ ಈ ಭಾಗವು ಇಲ್ಲಿ ಬಂದಿದೆ. ಅಲ್ಲಿನ ಗಿಡ, ಮರ, ಪಕ್ಷಿಗಳ ವರ್ಣನೆ ಮಾಡುವುದೇ ಅಲ್ಲದೆ ಭರತನ ಸೈನಿಕರು ಬೀಡುಬಿಟ್ಟ ಕಾಡಿನ ಚಿತ್ರಣವನ್ನು ನೀಡಲಾಗಿದೆ. ಉದಾಹರಣೆಗೆ : 'ಮನ್ಮಥನ ಬಾಣಗಳೋ ಎಂಬಂತೆ ವಿಕಸಿತ ಗೋರಂಟೆ ಹೂಗಳು ಕಾಮುಕರ ಮನಸ್ಸನ್ನು ಅಪಹರಿಸಿದುವು. ಪುಷ್ಪರಸದಲ್ಲಿ ಆಸಕ್ತವಾದ ಈ ಭ್ರಮರಗಳು ಮನ್ಮಥನ ಬಾಣಗಳಲ್ಲಿರುವ ಗರಿಗಳಿಗೆ ಸಮಾನವಾದ ರೆಕ್ಕೆಗಳೊಡನೆ ಕಮಲಗಳ ಸಮೂಹದಲ್ಲಿ ಸಂಚರಿಸುತ್ತವೆ' (ಪೂರ್ವಪು. xxvi-೨೧, ೨೨). ಈ ರೀತಿಯ ವರ್ಣನೆಗಳೇ ಅಲ್ಲದೆ ಪ್ರತ್ಯೇಕ ಸೈನ್ಯದ ವರ್ಣನೆ, ಭರತನ ಸೈನ್ಯ ಬೀಡುಬಿಟ್ಟೊಡನೆಯೇ ಆಶ್ಚರ್ಯಕರವಾಗಿ ನಿರ್ಮಾಣಗೊಂಡ ವಾಸಸ್ಥಾನದ ವರ್ಣನೆ ಬರುತ್ತದೆ. ಪಂಪನು ನೀಡಿರುವ ಶೃಂಗಾರಾದಿ ವರ್ಣನೆ ಇಲ್ಲಿ ಕಂಡುಬರುವುದಿಲ್ಲ.

ಶ್ರೀಮತಿ ವಜ್ರಜಂಘರ, ಲಲಿತಾಂಗ ಸ್ವಯಂಪ್ರಭೆಯರ ಪ್ರಣಯವನ್ನು ಗಂಭೀರ ಮಾಧುರ್ಯದ ಹಿನ್ನೆಲೆಯಲ್ಲಿ ವರ್ಣಿಸಿದ ಪಂಪನು ಚಕ್ರವರ್ತಿಯ 'ಚಂದ್ರಚರಿತ'ವನ್ನೂ

ಅಷ್ಟೇ ಗಾಂಭೀರ್ಯ ಮಾಧುರ್ಯದಿಂದ ಒಂದೇ ಪದ್ಯದಲ್ಲಿ ಹೇಳಿ ಮುಗಿಸಿದ್ದಾನೆ. ಉದಾಹರಣೆಗೆ : 'ನಲ್ಲಳ ತಲೆಯ ಆಭರಣವಾದ ಉತ್ಪಲದಿಂದ ಹೊಡೆತವೂ ಚಿನ್ನದ ಒಡ್ಯಾಣದಿಂದ ಬಂಧನವೂ, ಅಂದುಗೆಗಳ ಶಬ್ದಗಳಿಂದ ಕೂಡಿದ ಎಡಗಾಲಿನ ಒದೆತಗಳೂ ಚಲಿಸುತ್ತಿರುವ ಹುಬ್ಬುಗಳ ತುದಿಯಿಂದ ಸೂಚಿತವಾದ ತರ್ಜನೆಯೂ ಅಲುಗುತ್ತಿರುವ ಕೆಂದುಟಿಗಳೂ ಪ್ರಣಯಕೋಪವುಳ್ಳ ಸುರತದ ಆರಂಭದಲ್ಲಿ ಚಕ್ರಿಗೆ ಆನಂದವನ್ನುಂಟುಮಾಡಿದುವು'(ಆದಿಪು. xii-೪೨). ಆದರೆ ಚಕ್ರವರ್ತಿಯ ಕಟಕಕ್ಕೆ ಸೇರಿದ ವಿಳಾಸಿನೀವಾಸದವರ ನಡೆನುಡಿಗಳನ್ನು ಚಿತ್ರಿಸುವಾಗ ದೀರ್ಘವಾಗಿ ಯಾವ ಅಡತಡೆ ಸಂಕೋಚವಿಲ್ಲದೆ ದಿಗ್ವಿಜಯ ಯಾತ್ರೆ ಎಂಬುದನ್ನು ಮರೆತು ಕಾಮವಿಜಯವೆಂಬಂತೆ ಸಹಜವಾಗಿ ವರ್ಣಿಸಿದ್ದಾನೆ (ಆದಿಪು.xii- ೧೨ ರಿಂದ ೪೬).

ಪಂಪನು ಕೊಡುವ ಈ ಕೌಮುದೀ ಮಹೋತ್ಸವದ ವರ್ಣನೆಯಲ್ಲಿ 'ಬೇಟಮನೆ ವಸ್ತು ಮಾಡಿಯೆ ಕವಿತ್ವ ವರ್ಣಕವಿತ್ವ—ಕಾಮತತ್ತ್ವವಿದನೆನಿಸಿದತಿ ವಿದಗ್ಧನ' ವರ್ಣನಾ ವಿಲಾಸ ಕಂಡುಬರುತ್ತದೆ. ನಲ್ಲ ನಲ್ಲೆಯರ ವಿಲಾಸ, ಹುಸಮುನಿಸು, ಸರಸಸಲ್ಲಾಪಗಳ ಮೇಳವೇ ಇಲ್ಲಿ ಕಂಡುಬರುತ್ತದೆ. ಮುಳಿಸನೊಳಗೊಂಡ ನಲ್ಲೆಯ ಮುಖವನ್ನು ನೋಡಿ, ಮುಗುಳು ನಗೆ ಸೂಸಿ ದೂರಾಗುವ ನಲ್ಲ, ನಲ್ಲ ನುಡಿದರೂ ನುಡಿಯದಿದ್ದರೂ ಅದರಲ್ಲಿ ಕೈತವವನ್ನು ಕಂಡು ಹುಸಿಮುನಿಸನ್ನು ತೋರುವ ನಲ್ಲೆ, ಕಾಂತೆಯ ಕಣ್ಣೀರಿನಲ್ಲಿ ಕರಗಿ ನೀರಾಗುವ ಕಾಂತನ ಕೋಪ, ನಲ್ಲನಗಲಿಕೆಯಿಂದ 'ಒಡಲುರಿಗುಂ', 'ಮನಂ ಮಱುಗುಗುಂ', 'ಕಿವಿಗಿಱ್ರನೆವೋಕುಂ', 'ಕಣ್ಬೆಡುಗುಗುಂ', 'ಬಾಯ್ಬಿಡದೆ ಬತ್ತುಗುಂ', 'ನೊಂದು ಕುಂದುಗುಂ', 'ನುಡಿತಡವಕ್ಕುಂ' ಎಂದು ವಿರಹತಾಪದ ಪ್ರತಿಕ್ರಿಯೆಗಳನ್ನು ಪಟ್ಟಿಮಾಡಿ ಹೇಳುವ ವಿರಹಿ—ಹೀಗೆ ನಾನಾ ಬಗೆಯ ಪ್ರಣಯದ ಚಿತ್ರಯಾತ್ರೆ ಶೃಂಗಾರರಸದ ಭಟ್ಟಿಯನ್ನಿಳಿಸಿದಂತೆ ಸಾಗುತ್ತದೆ.

ಇಲ್ಲಿ ಬರುವ ಕೌಮುದೀ ಮಹೋತ್ಸವದ ಸನ್ನಿವೇಶ ಯೋಜನೆ ಪಂಪನ ಸ್ವತಃ ಸೃಷ್ಟಿಯಾಗಿದೆ. ಇದು ಪೂರ್ವಪುರಾಣದಲ್ಲಿ ಕಂಡುಬರುವುದಿಲ್ಲ.

## ದಿಗ್ವಿಜಯ ಸಾಧನೆ

ಭರತನು ದಿಗ್ವಿಜಯ ಕಾರ್ಯೋನ್ಮುಖನಾದನು. "ದಿಗ್ವಿಜಯದಲ್ಲಿಯೂ ಘಟನಾ ಪರಂಪರೆಗಳು ಸಹಜವಾಗಿಯೇ ಆತ್ಮಾಭಿಮಾನ, ವೀರಾವೇಶ ಹಾಗೂ ಶೌರ್ಯ ಪ್ರದರ್ಶನಗಳ ಸನ್ನಿವೇಶಗಳಿಂದ ತರಂಗಿತವಾಗಿ ಉಜ್ವಲವಾಗಿ ನಿರೂಪಿತವಾಗಿವೆ."[೫೯]

ಮಂಗಳಗೀತೆ, ಮಂಗಳಪಾಠಕರಿಂದ ಶೋಭಿಸುತ್ತಿದ್ದ ಮರುಬೆಳಗ್ಗೆ ಪ್ರಪ್ರಥಮ ದಿಗ್ವಿಜಯದ ಕಾರ್ಯದತ್ತ ಸೈನ್ಯವು ತೊಡಗಿತು. 'ಪೋಗಲ್ವೇೞ್ ಪಯಣಮಂ' ಎಂದು ಆಜ್ಞಾಪಿಸಿ ವಿಜಯ ಪರ್ವತವೆಂಬ ಗಜೇಂದ್ರವನ್ನೇರಿ ಪೂರ್ವಸಮುದ್ರದ ಕಡೆಗೆ ದಂಡೆತ್ತಿ ಹೊರಟನು. ಸೈನ್ಯದ ತುಳಿತದಿಂದ ಭೂಮಂಡಲವು ಅದುರಿತು. ಎಲ್ಲ ದಿಕ್ಕುಗಳಿಗೂ ಹರಡಿದ ವಿಜಯ ಪ್ರಯಾಣಕಾಲದ ಮಂಗಳವಾದ್ಯಗಳ ಶಬ್ದಗಳನ್ನು ಕೇಳಿ ಶತ್ರು ಸಮೂಹವು ನಡುಗಿಹೋಯಿತು. ಅವನು ಬರುವ ವಾರ್ತೆಗಳನ್ನು ಕೇಳಿಯೇ ಆ ಮಾರ್ಗದಲ್ಲಿನ ಅರಸರು ಆಯುಧಗಳನ್ನು ಕೆಳಗಿಳಿಸಿ ಚತುರಂಗಬಲವನ್ನೂ ರತ್ನಸಮೂಹವನ್ನೂ

ತಂದೊಪ್ಪಿಸಿ ಚಕ್ರಿಗೆ ತಲೆಬಾಗಿದರು. ನಿರಾಯಾಸವಾಗಿ ಪೂರ್ವಸಮುದ್ರವು ಭರತನ ಕೈವಶವಾಯಿತು. ಪೂರ್ವಪುರಾಣದಲ್ಲಿಯೂ ಪೂರ್ವದಿಕ್ಕಿನ ಮಾಂಡಲಿಕರು ಬಂದು ಅಧೀನರಾದ ವಿಚಾರವನ್ನು ಸಂಕ್ಷಿಪ್ತವಾಗಿ ಹೇಳಿ ಮುಗಿಸಲಾಗಿದೆ. ಇಲ್ಲಿ ಬರುವ ಕನ್ಯಾದಾನದ ವಿಚಾರವನ್ನು ಪಂಪನು ಕೈಬಿಟ್ಟಿದ್ದಾನೆ.

ಪಶ್ಚಿಮ ಸಮುದ್ರದ ಪ್ರಯಾಣ ಸಮಯದಲ್ಲಿ ಸಮುದ್ರದ ವರ್ಣನೆಯನ್ನು ಜಿನ ಸೇನರು ಎರಡು ಕಡೆ ಸಾಕಷ್ಟು ವಿಸ್ತೃತರೂಪದಲ್ಲಿ (ಪೂರ್ವಪು. xxviii-೪೫ ರಿಂದ ೧೦೩, ೧೦೭ ರಿಂದ ೨೦೨) ಮಾಡಿದ್ದಾರೆ. ಪಂಪನು ಸಮುದ್ರವನ್ನು ಕುರಿತು ಅತ್ಯಂತ ಕಿರಿದರಲ್ಲಿ ಅದರಲ್ಲಿಯೂ ಪೂರ್ವಪುರಾಣದಲ್ಲಿನ ಭಾವವನ್ನೇ ಅನುಕರಿಸಿ ವರ್ಣಿಸಿದ್ದಾನೆ. ಉದಾ ಹರಣೆಗೆ :

> ನಿಜಗಂಭೀರಪಾತಾಲಮಹಾಗರ್ತಾಪದೇಶತಃ |
> ಅತೃಪ್ಯಂತಮಿವಾಂಭೋಭಿರಾತಾಲುವಿವೃತಾನನಂ || (ಪೂರ್ವಪು. xxviii-೭೭ )

ಎಷ್ಟು ನದಿಗಳು ಬಂದುಬಿದ್ದರೂ ತೃಪ್ತಿಪಡದೆ ಸಮುದ್ರವು ತನ್ನ ಪಾತಾಳಬಿಲ ದಂತಿರುವ ಬಾಯನ್ನು ಅಗಲವಾಗಿ ತೆರೆದಿರುವುದು.

> ಪುಗೆ ಪಲವುಂ ತೊಱೆಗಳನೀ | ರಗಾಧ ಜಳರಾಶಿ ಕುಡಿದು ತಣಿಯದೆ ಪಾತಾ
> ಳಗಣಂಗಳಿವೆತ್ತಂ ತಾ | ಳುಗೆವರೆಗಂ ತೆಱೆದ ಬಾಯನನುಕರಿಸಿರ್ಕುಂ |
> (ಆದಿಪು. xii-೧೨ ರಿಂದ ೭೯)

ಭರತನ ಪುಣ್ಯವನ್ನು ನಡೆಸಿದಂತೆ ಸಾರಥಿ ಸಮುದ್ರದಲ್ಲಿ ರಥವನ್ನು ನಡೆಸುತ್ತಿದ್ದನು. ಕೆಲವು ಯೋಜನ ಹೋಯಿತು. ಆದರೆ ಸಮುದ್ರವು ಕುದುರೆಯನ್ನು ನುಂಗಿದಂತಾಗಿ ಅದು ನೀರಿನ ನಡುವೆ ನಿಂತುಹೋಯಿತು. ಪೂರ್ವಪುರಾಣದ ಈ ಭಾಗವನ್ನು ಪಂಪನು ಭಾಷಾಂತರಿಸಿದ್ದಾನೆ :

> ಅಂತು ಶೂರಸಾರಥಿ ಚೋದಿತಮಪ್ಪ ರಥಮಮುಂ ಪುಣ್ಯಸಾರಥಿ ಚೋದಿತಮಪ್ಪ ಮನೋರಥಮುಮುತ್ಸಾಹಮಂ ಪಡೆಯೆ ಪನ್ನೆರಡು ಯೋಜನಂಬರಂ ಪೋದಾಗಳ್ (ಆದಿಪು. ಆಶ್ವಾಸ xii)

> ಮಿಡುಕಲ್ ಸಲ್ಲಿಲ್ಲಿಂ ದೋ | ರಡಿಯಂ ನಿನಗೆಂದು ಲವಣವಾರಾಶಿಯೆ ಬ
> ಲ್ಪಿಡಿವಿಡಿದಂತೆ ವರೂಥಂ | ಮಿಡುಕದೆ ನಿಂದತ್ತು ಚೋದ್ಯಮಪ್ಪಿನಮಾಗಳ್
> (ಆದಿಪು. xii-೮೫)

ಹೀಗೆ ಶೂರನಾದ ಸಾರಥಿಯಿಂದ ಪ್ರೇರಿತವಾದ ರಥವೂ ಪುಣ್ಯಸಾರಥಿಯಿಂದ ಪ್ರೇರಿತವಾದ ಮನೋರಥವೂ ಉತ್ಸಾಹವನ್ನು ಪಡೆದು ಹನ್ನೆರಡು ಯೋಜನದವರೆಗೆ ಹೋಯಿತು. ಆಗ ಇಲ್ಲಿಂದ ಒಂದು ಹೆಜ್ಜೆಯನ್ನೂ ಮುಂದಕ್ಕಿಡಲು ಬಿಡುವುದಿಲ್ಲ ಎಂದು ಆ ಲವಣಸಮುದ್ರವೇ ಬಲವಾಗಿ ಹಿಡಿದು ನಿಲ್ಲಿಸಿದಂತೆ ರಥವು ನಿಂತುಹೋಯಿತು.

ಸಮುದ್ರದಲ್ಲಿ ರಥವು ನಿಂತಾಗ ಭರತೇಶನಲ್ಲಿ ಉಕ್ಕಿದ ಕೋಪದ ವರ್ಣನೆ ಪೂರ್ವ ಪುರಾಣದಲ್ಲಿಲ್ಲ. ಪಂಪನಲ್ಲಿ ಈ ಸಂದರ್ಭವು ವೀರರಸದಲ್ಲಿ ಮನೋಹರವಾಗಿ ಮೈದಳೆ ದಿದೆ. 'ಲವಣ ಸಮುದ್ರವನ್ನು ಕುಡಿಯುವೆನೋ, ಇಲ್ಲವೆ ತೋಳುಗಳಿಂದ ತುಳುಕಿಸಿ ಬರಿದು ಮಾಡುವೆನೋ ಎಂಬಂತೆ ಆವರಿಸಿದ ಕೋಪದಿಂದ ಕಣ್ಣುಗಳು ಕಿಡಿಯನ್ನೂ

ಕೆಂಡವನ್ನೂ ಕಾರುತ್ತಿರಲು ಭರತನು ಮುಳಿದನು (ಆದಿಪು. xii-೮೭).

ಅಲ್ಲಿಂದ ಮುಂದೆ ಮಾಗಧ ಪ್ರಕರಣವು ಪೂರ್ವಪುರಾಣದ ಅನುಕರಣೆಯಾಗಿದೆ. ಎರಡೂ ಕಡೆ ನಾಟಕೀಯತೆ ಮನೋಹರವಾಗಿ ಕಂಡುಬರುತ್ತದೆ. 'ಸಮುದ್ರದ ನೀರು ಬೊಗಸೆಯ ನೀರಿಗೆ ಸಮಾನ. ಬಾಣಾನಳದಿಂದ ಮಾಗಧನನ್ನು ಸುಡುವೆ' ಎಂದು ವಜ್ರಕಾಂಡವೆಂಬ ಬಿಲ್ಲಿಗೆ ಅಮೋಘವಾದ ಬಾಣವನ್ನು ಎತ್ತಿಕೊಂಡು ಅದರ ಮೇಲೆ

ಪುರುಪರಮೇಶ್ವರ ಪುತ್ರಂ | ಭರತೇಶ್ವರ ಚಕ್ರವರ್ತ್ತಿ ಬಂದಿರ್ದ್ದಂ ತ
ದ್ಧರಣಿನಿವಾಸಿಗಳುಂ ವ್ಯಂ | ತರಾಮರರ್ ಬಂದು ಕಾಣ್ಬುದವನತಮಕುಟರ್ (xii-೮೯)

ಪುರುರಾಜನ ಪುತ್ರನಾದ ಭರತೇಶ್ವರ ಚಕ್ರವರ್ತಿಯು ಬಂದಿರುವನು. ಅವನ ಭೂಮಿಯಲ್ಲಿ ವಾಸಮಾಡುವ ವ್ಯಂತರಾಮರರು ಆನಮ್ರಕಿರೀಟರಾಗಿ ಬಂದು ಕಾಣುವುದು! ಎಂದು ಬರೆದು ಅದನ್ನು ಬಿಟ್ಟಾಗ, ಉಲ್ಕಾಪಾತದಂತೆ ಅದು ಮಾಗಧನ ಅರಮನೆಯಲ್ಲಿ ಹೋಗಿ ಬಿದ್ದಿತು. ಇದನ್ನು ನೋಡಿ ಮಾಗಧನಿಗೆ ಅಪರಿಮಿತವಾದ ಕೋಪ ಉಕ್ಕೇರಿತು. ಮಾಗಧ ಪರಿವಾರದ ಅಮರರು 'ನಮಗೆ ಯುದ್ಧಕ್ಕೆ ಅಪ್ಪಣೆ ಕೊಡು, ಅವನು ಯಾರೇ ಆಗಿರಲಿ ನಾವು ಸೈರಿಸುತ್ತೇವೆಯೇ' ಎಂದು ಕೋಪಗೊಂಡರು. ಪರಿವಾರಕ್ಕೆ ಸಮಾಧಾನ ಹೇಳಿ ಮಾಗಧನು ಯುದ್ಧಸನ್ನದ್ಧನಾದಾಗ ಕುಲವೃದ್ಧರು ಬಂದು ಹಿತನುಡಿಗಳನ್ನಾಡಿದರು. 'ಈ ಪ್ರಪಂಚದಲ್ಲಿ ಶೌರ್ಯ, ತ್ಯಾಗದ ಹೊಗಳಿಕೆ, ವಿದ್ಯಾಗರ್ವ ಒಬ್ಬನಲ್ಲೇ ಎಂದೂ ನಿಯತವಾಗದು. ದೊಡ್ಡವರಿಗಿಂತ ದೊಡ್ಡವರು ಲೋಕದಲ್ಲಿ ಇದ್ದೇ ಇರುತ್ತಾರೆ.' ಮಾಗಧನ ಕುಲವೃದ್ಧರ ಈ ಸಮಯೋಚಿತ ಹಿತೋಕ್ತಿಗಳು ಜೀವನಾನುಭವದ ಸಾರದಂತಿವೆ. ಅವರು ಮಾಗಧನಿಗೆ ಚಕ್ರವರ್ತಿಯ ಹಿರಿಮೆಯನ್ನು ಅರಿಕೆಮಾಡಿಕೊಡುತ್ತಾ ಈ ಜನ್ಮದ ಕೊನೆಯಲ್ಲಿ ನಿರ್ವಾಣವನ್ನು ಪಡೆಯಲಿರುವ ಚರಮಾಂಗನೂ ಪುರುರಾಜಪುತ್ರನೂ ಚಕ್ರವರ್ತಿಯೂ ಆದ ಭರತ ಮಹಾರಾಜನಿಗೆ ಎಣೆಯಾರು? ಎಂದು ಹೇಳಲು ಆತನ ಗರ್ವ ಕರಗಿಹೋಯಿತು. ಬಾಣವನ್ನು ಪೂಜಿಸಿ ಚಕ್ರವರ್ತಿಗೆ ಶರಣಾದನು. ತನಗೆ ಎರಗಿದ ಮಾಗಧನನ್ನು ಭರತನು ಸನ್ಮಾನಿಸಿ ಕಳಿಸಿಕೊಟ್ಟನು. ಈ ಸಂದರ್ಭದಲ್ಲಿ ತೀಕ್ಷ್ಣವಾದ ಮಾತುಗಾರಿಕೆಯ ನಾಟಕೀಯ ಶೈಲಿ ಮನೋಹರವಾಗಿ ಕಂಡುಬರುತ್ತದೆ.

ಉದ್ದಕ್ಕೂ ಪೂರ್ವಪುರಾಣವನ್ನು ಕವಿ ಅನುಸರಿಸಿದ್ದರೂ ಅಲ್ಲಲ್ಲಿಯೇ ತನ್ನದೇ ಆದ ಕೆಲವು ಭಾವನೆಗಳನ್ನು ಹೆಣೆದಿದ್ದಾನೆ.

ಮಾಗಧನು ಹೆಮ್ಮೆಯನ್ನು ತೊರೆದನು. ಭರತಚಕ್ರವರ್ತಿಯ ಚರಣಾರವಿಂದಗಳಿಗೆ ಸಾಷ್ಟಾಂಗ ಪ್ರಣತನಾದನು. ಪುಂಗಿಯ ಧ್ವನಿಗೆ ಹಾವಿನ ಕೊರಳಿನಂತೆ ಮೂರೆಡೆ ಬಾಗಿದನು! 'ಮಾಗಧನು ತಳಮಳಗೊಳ್ಳುತ್ತಾ ನಮಸ್ಕರಿಸಿದನು. ಆಗ ಅವನ ಗರ್ವವೆ ಕರಗಿ ನೀರಾದಂತೆ ಅವನ ಕಿರೀಟದಲ್ಲಿನ ರತ್ನಗಳ ಕಾಂತಿಸಮೂಹವು ಭರತಚಕ್ರವರ್ತಿಯ ಪಾದಕಮಲದ ಮೇಲೆ ಹರಡಿತು' (ಆದಿಪು. xii-೧೧೧ ,೧೧೨). ಮಾಗಧನು ಭರತನಿಗೆ ವಿನೀತನಾದನೆಂಬುದನ್ನು ಕವಿ ಇಲ್ಲಿ ಆಲಂಕಾರಿಕವಾಗಿ ತಿಳಿಯಪಡಿಸಿದ್ದಾನೆ.

'ಅರಸನು ದೊಡ್ಡ ದೊಡ್ಡ ಅಲೆಗಳು ಎದ್ದು ಬೀಳುತ್ತಿರುವ ಆಳವಾದ ಸಮುದ್ರವನ್ನು ಹೊಕ್ಕನು. ಸಾರಥಿ ರಥಗಳಲ್ಲದೆ ಅವನೊಡನೆ ಮತ್ತಾರೂ ಇಲ್ಲ. ಏನಾಗುವುದೋ ತಿಳಿಯದು. ಬಲ್ಲಿದನಾದ ಮಾಗಧರಾಯನು ಅಲ್ಲಿರುವನು. ರಾಜನಾದ ಭರತೇಶ್ವರನ

ದೋರ್ದಂಡಕ್ಕೆ ಅವನ ಪುಣ್ಯ ನೆರವಾಗಲಿ' ಎಂದು ಸೈನಿಕರು ಗಾಬರಿಯಿಂದ ನುಡಿಯುವ ಈ ಅಂಶ ಆದಿಪುರಾಣದಲ್ಲಿ ಮಾತ್ರ ಕಂಡುಬರುತ್ತದೆ. ಪಂಪನ ವರ್ಣನೆಯಲ್ಲಿ ಸೈನಿಕರು ತಮ್ಮ ಚಕ್ರವರ್ತಿಯ ಬಲದಲ್ಲಿ ಎಷ್ಟೇ ನಂಬಿಕೆಯನ್ನಿಟ್ಟಿದ್ದರೂ ಅವರ ಸಾಮಾನ್ಯ ಹೃದಯ ಜಾಗೃತವಾಗಿ ಈ ರೀತಿ ಆಲೋಚಿಸುವಂತೆ ಮಾಡಿದೆ. ಇಲ್ಲಿ ಸೈನಿಕರಿಗೆ ಭರತನಲ್ಲಿದ್ದ ಕಳಕಳಿಯ ಭಾವವು ವ್ಯಕ್ತವಾಗುತ್ತದೆ. ಪೂರ್ವಪುರಾಣದಲ್ಲಿ ವರ್ಣಿತವಾಗಿ ರುವ ಸೈನಿಕರ ಬಗೆಗಿನ ಚಿತ್ರಣ ಬೇರೆಯಾಗಿ ನಿಲ್ಲುತ್ತದೆ. ಇಲ್ಲಿಯ ಆತ್ಮೀಯ ಭಾವ ಅಲ್ಲಿ ಕಂಡುಬರುವುದಿಲ್ಲ.

ದಕ್ಷಿಣ ಸಮುದ್ರದ ವಿಜಯ ಪಂಪನಲ್ಲಿ ೧೩ನೇ ಆಶ್ವಾಸದ ಮೊದಲೆರಡು ಪದ್ಯಗಳಲ್ಲಿ ಮುಗಿದುಹೋಗುತ್ತದೆ. ಪೂರ್ವಪುರಾಣದಲ್ಲಿ ಈ ಪ್ರಸಂಗವನ್ನು ೧೬೮ ಶ್ಲೋಕಗಳಲ್ಲಿ (೨೯ನೇಪರ್ವ) ಪ್ರಕೃತಿ ಸೌಂದರ್ಯದ ವರ್ಣನೆಯೊಂದಿಗೆ ವಿವರಿಸಲಾಗಿದೆ. ದಿಗ್ವಿಜಯದ ಅನಂತರ ಆ ಸ್ಥಳವನ್ನು ಆವರಿಸಿಕೊಂಡ ಸೈನ್ಯವು ಪ್ರಕೃತಿಯ ಮಡಿಲಿನಲ್ಲಿ ಹೇಗೆ ಶೋಭಿಸುತ್ತಿತ್ತೆಂಬುದನ್ನು ಪಂಪನು ವರ್ಣಿಸಿದ್ದಾನೆ. ಇಲ್ಲಿಂದ ಮುಂದೆ ಪಂಪ ಭರತನ ದಕ್ಷಿಣ ಸಮುದ್ರದ್ವಾರ ವಿಜಯ, ವಿಜಯಾರ್ಧಗುಹಾದ್ವಾರೋದ್ಘಾಟನ, ಭರತೋತ್ತ ರಾರ್ಧ ವಿಜಯ ವರ್ಣನ, ಭರತಾಭಿರಾಜ ಕೈಲಾಸಾಭಿಗಮನಗಳನ್ನು ಸಂಗ್ರಹಿಸಿದ್ದಾನೆ.

ಒಂದು ಕಡೆ ಧರ್ಮವಿಜಯ, ಮತ್ತೊಂದು ಕಡೆ ಭೂಮಂಡಲ ವಿಜಯ. ಈ ಲೌಕಿಕಾಲೌಕಿಕ ವಿಜಯಗಳ ನಡುವೆ ಭೇದಗಳು ಸುಸ್ಪಷ್ಟ. "ಆದಿನಾಥನು ಕೇವಲಜ್ಞಾನ ವನ್ನು ಪಡೆದ ಮೇಲೆ, ಧರ್ಮಾಮೃತವನ್ನು ಲೋಕಕ್ಕೆಲ್ಲಾ ಎರೆಯಲು ತನ್ನ ವಿಹಾರವನ್ನು ಕೈಕೊಂಡನು. ಈ ಧರ್ಮದಿಗ್ವಿಜಯದಲ್ಲಿ ದಯೆಯೇ ಎತ್ತಿದ ಧ್ವಜ, ಧರ್ಮವೇ ಗೆಲ್ಲುವ ಚಕ್ರಾಯುಧ, ಭವ್ಯಸಮೂಹವೇ ಒತ್ತಿ ನಡೆಯುವ ಸೇನೆ! ಕೊಲೆಯ ಲೇಪವಿಲ್ಲದ ಈ ಧರ್ಮದ ಧಾಳಿಯಲ್ಲಿ ತೀರ್ಥಂಕರನಿಗೆ ತಾವಾಗಿಯೇ ಮಣಿಯದವರು ಯಾರು?— ಭರತನ ದಿಗ್ವಿಜಯವಾದರೋ ಹೀಗೆ ಸಾಗಲಿಲ್ಲ. ತನ್ನ ಆಯುಧಶಾಲೆಯಲ್ಲಿ ಹುಟ್ಟಿದ ಭಯಂಕರವಾದ ಚಕ್ರರತ್ನವನ್ನು ಮುಂದಿಟ್ಟುಕೊಂಡು ಅವನು ಸಕಲಸೈನ್ಯದೊಡನೆ ಧಾಳಿ ಯಿಡುತ್ತಾನೆ. ಅವನ ಪ್ರತಾಪಕ್ಕೆ ಹೆದರಿ ರಾಜರು ಪಾದಕ್ಕೆ ಬಿದ್ದು ಕಪ್ಪಕಾಣಿಕೆಯನ್ನು ಒಪ್ಪಿಸುತ್ತಾರೆ, ದ್ವೀಪ ನಿವಾಸಿಗಳು ಬೆದರಿ ಓಲೈಸುತ್ತಾರೆ; ಪರ್ವತ ಪ್ರಾಂತಗಳವರು ವಿನೀತರಾಗಿ ನಿಲ್ಲುತ್ತಾರೆ. ಎಲ್ಲ ದಿಕ್ಕುಗಳಿಗೂ ಹರಿದು, ಹೋದ ಕಡೆಯಲ್ಲೆಲ್ಲಾ ಶತ್ರು ಗಳನ್ನು ನಡುಗಿಸಿ ಭರತನು ವಿಜಯಶಾಲಿಯಾಗುತ್ತಾನೆ. ಷಟ್‌ಖಂಡ ಭೂಮಂಡಲದ ಒಡೆಯನಾಗುತ್ತಾನೆ"[೫೯]. ಒಂದೆಡೆ ಪ್ರಶಾಂತತೆಯ ಮಾಧುರ್ಯ, ಮತ್ತೊಂದೆಡೆ ಗೆಲು ವಿನ ಸಾಧನೆಯ ಆರ್ಭಟವು ಇವರ ಈ ವಿಜಯಸಾಧನೆಯಲ್ಲಡಗಿದೆ.

ಭರತನು ಗಳಿಸಿಕೊಂಡ ಎಲ್ಲಾ ದಿಕ್ಕುಗಳ ವಿಜಯಗಳಿಗೂ ಸಮಾನ ಪ್ರಾಮುಖ್ಯವನ್ನು ಕೊಟ್ಟು ಪಂಪನು ವಿವರಿಸಿಲ್ಲ. ಒಂದು ವಿಜಯಕ್ಕೂ ಇನ್ನೊಂದು ವಿಜಯಕ್ಕೂ ವಿಧಾನ ದಲ್ಲಿ ವ್ಯತ್ಯಾಸ ಕಡಿಮೆ. ಹೋದ ಕಡೆಯಲ್ಲೆಲ್ಲಾ ಭರತನ ಹೆಸರನ್ನು ಕೇಳಿ, ಅವನ ಚಕ್ರರತ್ನಕ್ಕೆ ಗೌರವವನ್ನು ತೋರಿ ಎರಗುವವರೇ. ಮೂಲದಂತೆ ಇಲ್ಲಿಯೂ ಒಂದು ರೀತಿಯ ಯಾಂತ್ರಿಕತೆ ವರ್ಣನೆಯಲ್ಲಿ ಗೋಚರವಾಗುತ್ತದೆ. "ಇಂಥ ಸಾಧುವಾದ ಸಮರವಿಜಯವನ್ನು 'ಕಾವ್ಯಂಗಳೊಳ್ಕೂಡೆ' ಬಣ್ಣಿಸಬೇಕಾದರೆ ಪಂಪನಂಥವನಿಗೆ ಕೂಡ

ಏನು ಮಾಡುವುದಕ್ಕೂ ಆಗದೆ ಹೋಗಿದೆ. ಪುರಾಣಕ್ಕೆ ಅಪಚಾರವಾಗದ ಹಾಗೆ ಭರತೇಶನ ಪುಣ್ಯಕಥೆಯನ್ನು ಭವ್ಯರಿಗೆ ಹೇಳುವುದು ಈ ದಿಗ್ವಿಜಯ ಪ್ರಕರಣದ ಮಹಾಗುಣ".[೬೦]

## ಭರತೇಶ್ವರನ ಗರ್ವಭಂಗ

ಭರತನು ವೃಷಭಾದ್ರಿಗೆ ಬಂದು ಆ ಪರ್ವತದ 'ಮೇಖಳಾಭಿತ್ತಿಯೊಳ್ ಆತ್ಮೀಯ ವಿಶ್ವ ವಿಶ್ವಂಭರಾ ಪ್ರಶಸ್ತಿಯನ್ ಅೞ್ತಿಯೊಳ್ ಬರೆಯಿಸುವೆನೆಂದು' ಹೋಗಿ ನೋಡುವಾಗ, ಅಸಂಖ್ಯಾತ ಕೋಟಿ ಕಲ್ಪಗಳಲ್ಲಿ ಆಳಿದ ರಾಜರುಗಳ ಹೆಸರುಗಳೆಲ್ಲ ವೃಷಭಾದ್ರಿಯಲ್ಲಿ ಕಂಗೊಳಿಸಿದುವು. "ತತ್ ಪ್ರಶಸ್ತಿಗಳೊಳಂತವನೊಯ್ಯನೆ ನೋಡಿ ನೋಡಿ ಸೋರ್ದುದು ಕೊಳಗೊಂಡ ಗರ್ವರಸಮಾ ಭರತೇಶ್ವರ ಚಕ್ರವರ್ತಿಯಾ", ಹಾಗೆ ಗಳಿತ ಗರ್ವಾನ್ವಿತನಾಗಿ ಸಿಗ್ಗುಗೊಂಡರೂ ಅವನು ಮಾಡಿದ್ದಾದರೂ ಏನು? ಪೂರ್ವಾವನಿಪಾಳ ಪ್ರಶಸ್ತಿಯೊಳೊಂದಂ ದಂಡ ರತ್ನದಿಂ ಸೀಂಟಿ ಕಳೆದು ನಿಜಪ್ರಶಸ್ತಿಗೆಡೆಮಾಡಿ, ಕಾಕಿಣೀ ರತ್ನದಿಂದ ಬರೆಸಿಯೇ ಬಿಟ್ಟ. ಗರ್ವರಸ ಸೋರಿದವನಾದರೂ ಅದು ಪೂರ್ಣ ನಾಶವಾಗದ ಕಾರಣ ತನ್ನ ಪ್ರಶಸ್ತಿಯನ್ನು ಕೆತ್ತಿಸಿಕೊಂಡನು.

ಸ್ವಸ್ತಿ ಸಮಸ್ತನೃಪೇಶ್ವರ | ಮಸ್ತಕ ವಿನ್ಯಸ್ತ ಶಾಸನಂ ಸಕಲಜಗ |
ದ್ವಿಸ್ತಾರಿತಯಶನನ್ವಯ | ವಿಸ್ತಾರಕನಾದಿದೇವನಗ್ರತನೂಜಂ || (ಆದಿಪು. xiii-೭೨)

ಇವೇ ಮುಂತಾಗಿ ಸಾಗುವ ನೆಗಳ್ದ ತನ್ನ ಕೀರ್ತಿಯನ್ನು ಈ ವಿಖ್ಯಾತ ವೃಷಭಾದ್ರಿಯಲ್ಲಿ 'ನಿೞಿಸಿದಂ ನೆಲಂ ನಿಲ್ವಿನೆಗಂ'—ತನ್ನ ಕೀರ್ತಿಯನ್ನು ನೆಲನಿಲ್ಲುವವರೆಗೆ ನೆಲೆಗೊಳಿಸಿದನು ಎಂಬಲ್ಲಿ ಅಡಕಗೊಂಡಿರುವ ವಿಡಂಬನೆ ಗಮನಾರ್ಹವಾದುದು. ಇದೇ ತಾನೇ ಭರತ ತನ್ನ ಪ್ರಶಸ್ತಿಗಾಗಿ ಒಂದನ್ನು ಸೀಂಟಿ ಎಡೆಮಾಡಿಕೊಂಡಿದ್ದಾನೆ. ಮುಂದೆ ಮತ್ತೊಬ್ಬನೂ ತನ್ನ ಪ್ರಶಸ್ತಿಗೆ ಹೀಗೆಯೇ ಗತಿ ಕಾಣಿಸುವನೆಂಬ ಅರಿವು ಆತನಿಗೆ ಇಲ್ಲವಾಯಿತು. ಮಮಕಾರದ ಮುಂದೆ ಈ ರೀತಿಯ ಆಲೋಚನೆಗೆ ಎಡೆಯಿಲ್ಲವಾಯಿತು. "ಬಾಹ್ಯಾಂಗವನ್ನು ಗೆದ್ದು ಮೇಲೇರುತ್ತಲೇ ಹೋಗುವುದೆಂದರೆ, ಅಂತರಂಗದಲ್ಲಿ ಸೋತು ಅಧಃಪತನ ವಡೆಯುತ್ತಾ ಬರುವುದು"[೬೧] ಎಂಬುದಕ್ಕೆ ಭರತ ಉದಾಹರಣೆಯಾಗಿ ನಿಲ್ಲುತ್ತಾನೆ. ಇದನ್ನು ಚಕ್ರರತ್ನ ನಿಂತಾಗ ಆತನು ತನ್ನ ಅನುಜರೊಡನೆ ತೋರಿದ ಧೋರಣೆಯಿಂದ ಗುರುತಿಸಬಹುದಾಗಿದೆ.

ಪೂರ್ವಪುರಾಣದಲ್ಲಿ ಭರತನೇ ಸ್ವತಃ ಪ್ರಶಸ್ತಿಯನ್ನು ಕೈಯಾರ ಬರೆದನೆಂದಿದೆ. ಪಂಪನಲ್ಲಿ ಅದು ಮಾರ್ಪಟ್ಟು ಚಕ್ರವರ್ತಿಯ ಘನತೆಗನುಗುಣವಾಗಿ ಕಾಕಿಣೀ ರತ್ನದಿಂದ ಅದನ್ನು ಬರೆಸಿದನೆಂದು ಬರುತ್ತದೆ. ಉಳಿದಂತೆ ಭರತನ ವಿಜಯಪ್ರಶಸ್ತಿಯ ವೈಭವವು ಪೂರ್ವಪುರಾಣದಲ್ಲಿ ೧೯ ಪದ್ಯಗಳಲ್ಲಿ (xxxii-೧೪೦ ರಿಂದ ೧೫೮) ವಿವರಿತವಾಗಿದೆ. ಪಂಪನಲ್ಲಿ ಈ ಭಾಗವು ಕನ್ನಡಕ್ಕೆ ರೂಪಾಂತರಗೊಂಡು ಬಂದಿದೆ.

ವಿಜಯಾರ್ಧ ಪರ್ವತದ ದಕ್ಷಿಣೋತ್ತರ ಶ್ರೇಣಿಯ ನಮಿವಿನಮಿಗಳು ಬಂದು ಭರತನಿಗೆ ತಲೆಬಾಗಿ ಸುಭದ್ರೆಯೆಂಬ ತಮ್ಮ ಸೋದರಿಯನ್ನು ಮದುವೆ ಮಾಡಿಕೊಟ್ಟರು. ಪೂರ್ವಪುರಾಣದಂತೆಯೇ ಈ ವೃತ್ತಾಂತವನ್ನು ಆದಿಪುರಾಣದಲ್ಲಿ ಯಾಂತ್ರಿಕವಾಗಿ ನಿರ್ವಹಿಸಲಾಗಿದೆ.

ಭೂಮಂಡಲವನ್ನು ಗೆದ್ದು ಭರತನು ಕೈಲಾಸಗಿರಿಗೆ ಬಂದನು. ಈ ಸಂದರ್ಭದಲ್ಲಿ ಪೂರ್ವಪುರಾಣದಲ್ಲಿ ಮತ್ತೆ ಸಮವಸರಣದ ವರ್ಣನೆ ಬಂದಿದೆ. ಜಿನಸೇನರಿಗೆ ಆ ದಿವ್ಯ ಸಭೆಯನ್ನು ಎಷ್ಟು ವರ್ಣಿಸಿದರೂ ಸಾಲದು. ಆದರೆ, ಪಂಪನು ಕಥೆಯ ಮುಂದಿನ ಮುಖ್ಯ ವಿವರಗಳನ್ನು ದೃಷ್ಟಿಯಲ್ಲಿಟ್ಟುಕೊಂಡಿರುವುದರಿಂದ ವರ್ಣನೆಗೆ ಅವಕಾಶವಿಲ್ಲ. ಭರತನು ಸ್ವಾಮಿಯನ್ನು ಪೂಜಿಸುವ, ಸ್ತುತಿಸುವ ರೀತಿ ಪೂರ್ವಪುರಾಣದಲ್ಲಿ ೭೪ ಪದ್ಯಗಳಲ್ಲಿದ್ದರೆ, ಪಂಪನು ಸುಂದರವಾದ ಪೃಥ್ವೀಛಂದಸ್ಸಿನಲ್ಲಿ ಅಷ್ಟಕವನ್ನು ಹೆಣೆದಿದ್ದಾನೆ. ಅವುಗಳಲ್ಲಿ ಒಂದನ್ನು ಉದಾಹರಣೆಯನ್ನಾಗಿ ನೋಡಬಹುದು :

ಅನೇಕ ಭುಜನೇತ್ರಪಜ್ಞ್ತಿರಸನಾದಿಗಳ್ ದೇವ ನಿ
ನ್ನನರ್ಚಿಸುವ ನೋಱ್ಪ ಬಣ್ಣಿಸುವ ಪೊತ್ತದೇಕಾಗದಿಂ
ದ್ರನಂತೆನಗೆ ಸಾಲವಿನ್ನೆರಡೆ ಕೈಯ್ಯೆರಡ್ಕಣ್ಗಳೊಂ
ದೆ ನಾಲಗೆಯುಮೆಂದೆ ಚಿಂತಿಸುವೆನಾದಿಭಟ್ಟಾರಕಾ (ಆದಿಪು. xiii-೮೯)

ದೇವ! ನಿನ್ನನ್ನು ಪೂಜಿಸಲು ಅನೇಕ ಭುಜಗಳೂ ನೋಡಲು ಅನೇಕ ಕಣ್ಣುಗಳೂ ವರ್ಣಿಸಲು ಅನೇಕ ನಾಲಗೆಗಳೂ ಇಂದ್ರನಿಗಿರುವಂತೆ ನನಗೇಕೆ ಅಂಥ ಸಮಯವು ದೊರಕದು! ನನಗಿರುವುದು ಎರಡು ಕೈಗಳು, ಕಂಗಳೆರಡು, ನಾಲಗೆಯೊಂದು. ಇವುಗಳಿಂದ ನಾನು ನಿನ್ನನ್ನು ಹೇಗೆ ತಾನೆ ಅರ್ಚಿಸಲಿ ಎಂದು ಚಿಂತಿಸುತ್ತಿರುವೆನು.

ಭರತನ ಭಕ್ತಿಭಾವದ ಮಂಗಳ ದೃಶ್ಯ ಇಲ್ಲಿ ಎದುರಾಗುತ್ತದೆ. ದಿಗ್ವಿಜಯ ಕೋಲಾಹಲದ ನಂತರ ಶಾಂತಿಯ ಮಂಗಳದಂತೆ ಈ ಭಾಗ ಕಂಡುಬರುತ್ತದೆ.

## ಉತ್ತರಕಾಲೀನ ಕಾವ್ಯಗಳು

**ಚಾವುಂಡರಾಯಪುರಾಣ :** ಪೂರ್ವಪುರಾಣ ಮತ್ತು ಆದಿಪುರಾಣಗಳಿಂದ ಸಂಗ್ರಹಿತವಾಗಿರುವ ಈ ಭಾಗಗಳು ಚಾಮುಂಡರಾಯನ ಸಂಗ್ರಹದ ಕೈಚಳಕವನ್ನು ತೋರುತ್ತವೆ. ಪೂರ್ವಪುರಾಣದಲ್ಲಿ ೧೧ ಪರ್ವಗಳಲ್ಲಿ, ಆದಿಪುರಾಣದಲ್ಲಿ ೨ ಪರ್ವಗಳಲ್ಲಿ ಹರಡಿರುವ ಈ ವಿಸ್ತಾರ ಎರಡು ಪುಟಗಳಲ್ಲಿ ಅಡಕಗೊಂಡಿದೆ. "ಚಕ್ರಪೂಜೆಯಂ ಮಾಡಿ ಶರತ್ಕಾಲ ಪ್ರವೇಶದೊಳ್ ದಿಗ್ವಿಜಯೋದ್ಯುಕ್ತನಾಗಿ ಮುನ್ನಂ ಪೂರ್ವಾಭಿಮುಖದೆ ಗಂಗಾತಟಂ ಬಿಡಿದು ನಡೆದು" ಎಂದು ಮಾತ್ರ ಹೇಳಿರುವನೇ ಹೊರತು, ಪೂರ್ವಪುರಾಣ ಆದಿಪುರಾಣಗಳಲ್ಲಿ ಬರುವ ಗಂಗಾತಟದ ವರ್ಣನೆ, ವನಸಿರಿಯ ಸೌಂದರ್ಯದ ವರ್ಣನೆ, ಸೈನಿಕರ ಸಂಭಾಷಣೆ ಮೊದಲಾದ ವಿಚಾರಗಳು ಇಲ್ಲಿಲ್ಲ. ಆದಿಪುರಾಣದ ವನಮಹೋತ್ಸವ ಚಂದ್ರಿಕಾ ಮಹೋತ್ಸವಗಳ ವರ್ಣನೆಗೂ ಇಲ್ಲಿ ಅವಕಾಶವಿಲ್ಲ. ಭರತನು ದಿಗ್ವಿಜಯ ಯಾತ್ರೆಯನ್ನು ಒಂದು ಪವಿತ್ರ ಕಾರ್ಯಾಚರಣೆಯಾಗಿ ಚಕ್ರರತ್ನಕ್ಕೆ ಮರ್ಯಾದೆಯನ್ನು ನೀಡುವವನಂತೆ ತೆಗೆದುಕೊಂಡಿದ್ದಾನೆ. ಹೀಗಾಗಿ ಇಲ್ಲಿ ಆತನ ದೃಢತೆ ಏಕಾಗ್ರತೆಯೆಲ್ಲಾ ಅದೊಂದಕ್ಕೇ ಮೀಸಲು. ಅಂತಃಪುರಸ್ತ್ರೀಯರ ಬೆಡಗು-ಬಿನ್ನಾಣಗಳಿಗೆ ಎಡೆಯಿಲ್ಲ. ಚಾಮುಂಡರಾಯನು ಬೀಡುಬಿಟ್ಟ ಸೈನ್ಯಾದಿಗಳನ್ನು ವಿವರಿಸುವ ತಂಟೆಗೆ ಹೋಗಿಲ್ಲ. ಹಾಗೆ ಮಾಡಿದ್ದರೆ ಸ್ವತಃ ಯೋಧನಾಗಿದ್ದ ಅತನ ವಾಣಿ ಸತ್ವಯುತವಾಗಿ ಸಾಗುತ್ತಿತ್ತೇನೋ. ಆದರೆ ಕವಿ ಇಲ್ಲಿ ಆ ಕಡೆಗೆ ಗಮನ ಹರಿಸಿಲ್ಲ. ಕೃತಮಾಲ, ಮಧ್ಯಮಖಂಡದ

ಚಿಲಾತ-ಅವರ್ತರ ವೃತ್ತಾಂತಾದಿಗಳನ್ನು ಸಂಗ್ರಹಿಸಿ ಬರೆದಿದ್ದಾನೆ. ನಮಿ-ವಿನಮಿಗಳ ಪ್ರಸಂಗ, ಸುಭದ್ರೆಯೊಂದಿಗೆ ಭರತನು ಮದುವೆಯಾದ ಪ್ರಸಂಗಗಳನ್ನು ಇಲ್ಲಿ ಕೈಬಿಡಲಾಗಿದೆ.

ವೃಷಭಾಚಲದಲ್ಲಿ ವಿಜಯಪ್ರಶಸ್ತಿಯನ್ನು ಬರೆಸುವ ಸಂದರ್ಭದಲ್ಲಿ ಚಾವುಂಡರಾಯ ಪುರಾಣವು ಆದಿಪುರಾಣಕ್ಕೆ ಹೆಚ್ಚು ಹತ್ತಿರವಾಗಿದೆ :

> ಭರತಾಚಳಮಂ ಕಂಡು ನಿಜವಿಜಯ ಪ್ರಶಸ್ತಿಯನಲ್ಲಿ ಬರೆಯಿಸುವೆನೆಂದು ಪೋಗಿ ಪೂರ್ವಚಕ್ರವರ್ತಿಗಳ ವಿಜಯ ಪ್ರಶಸ್ತಿಯಂ ಕಂಡು ಗಳಿತಮದನಾಗಿ ಕಿರಿದೆಡೆಯಂ ದಂಡ ರತ್ನದಿನೊರಸಿ ಕಳೆದು ವಿಜಯ ಪ್ರಶಸ್ತಿಯಂ ಬರೆಯಿಸಿ

ಎಂದು ಹೇಳುವಾಗ ಪಂಪನನ್ನು ಅಕ್ಷರಶಃ ಅನುಸರಿಸದೇ ಹೋದರೂ ಕವಿ ಅಲ್ಲಿಯ ಅಭಿಪ್ರಾಯವನ್ನು ಸಂಗ್ರಹವಾಗಿ ಗದ್ಯದಲ್ಲಿ ನಿರೂಪಿಸಿದ್ದಾನೆ. ಪ್ರಶಸ್ತಿಯ ವಿವರವನ್ನು ನೀಡಿಲ್ಲ. ಘಟನೆಯ ಮುಖ್ಯಾಂಶವನ್ನು ಮಾತ್ರ ನೀಡಿದ್ದಾನೆ.

ದಿಗ್ವಿಜಯ ಯಾತ್ರೆಯನ್ನು ಸಂಗ್ರಹಿಸಿದ ಚಾಮುಂಡರಾಯನು ಸಮವಸರಣದ ವರ್ಣನೆಯನ್ನು ಸಾಕಷ್ಟು ವಿಸ್ತಾರವಾಗಿ ಐದು ಪುಟಗಳಲ್ಲಿ ವರ್ಣಿಸಿದ್ದಾನೆ. ಜೈನಪುರಾಣಗಳಲ್ಲಿ ಅದರ ಮಹತ್ತ್ವವನ್ನು ಹೆಚ್ಚು ಮನನಮಾಡಿಸಿದ್ದಾನೆ. ಅನಂತರ ನಾಲ್ಕು ಸಂಸ್ಕೃತ ವೃತ್ತಗಳಲ್ಲಿ ಆದಿದೇವನನ್ನು ಕುರಿತ ಸ್ತುತಿಯು ಕಂಡುಬರುತ್ತದೆ.

**ಹಸ್ತಿಮಲ್ಲನ ಪೂರ್ವಪುರಾಣ** : ಆದಿಪುರಾಣವನ್ನು ಅನುಸರಿಸಿದಂತೆ ಪ್ರಾರಂಭಗೊಳ್ಳುವ ಈ ಭಾಗವು ಅತ್ಯಂತ ಸಂಕ್ಷಿಪ್ತ ರೂಪದಲ್ಲಿ ಅಡಕಗೊಂಡಿದೆ : "ಅತ್ತ ಭರತೇಶ್ವರಂ ಬೇರೆ ಬೇರೆ ಸಾಸಿರ ಯಕ್ಷರಿಂ ರಕ್ಷಿಸಲ್ಪಟ್ಟು ಚಕ್ರ, ಛತ್ರ, ಅಸಿ, ದಂಡ, ಚೂಡಾಮಣಿ, ಕಾಕಿಣಿ ರತ್ನಂಗಳೆಂಬೇಳುಂ ಅಜೀವರತ್ನಂಗಳುಮಂ ಗೃಹಪತಿ, ಸೇನಾಪತಿ, ಸ್ಥಪತಿ, ಪುರೋಹಿತ, ಅಶ್ವ, ಗಜ, ಸ್ತ್ರೀರತ್ನಗಳೆಂಬೇಳುಂ ಜೀವರತ್ನಂಗಳುಮಂ ಪೂಜಿಸಿ ತನ್ನ ಹಿರಿಯ ಮಗನ ಜಾತಕರ್ಮ ಮಹೋತ್ಸವದಿಂದ ಮಾಡಿ" ಎಂದು ಪ್ರಾರಂಭಿಸಿ "ತದನಂತರಂ ದಿಗ್ವಿಜಯ ಜಯ ಪ್ರಾರಂಭ ಸನ್ನಾಹ ಭೇರಿಯಂ ಪೊಯ್ಸಿ ಹಸ್ತ್ಯಶ್ವ ರಥ ಪದಾತಿ ದೇವ ವಿದ್ಯಾಧರಾನೀಕಮೆಂಬ ಷಡಂಗಬಲಂಬೆರಸು ಪೊಡಮಟ್ಟು ಷಡಂಗ ಮಂಡಲಮಂ ಸಾಧಿಸಿ ಮಗುಳ್ದು ಬರುವಲ್ಲಿ" ಕೈಲಾಸಕ್ಕೆ ಹೋಗಿ ಸ್ವಾಮಿಯನ್ನು ಪೂಜಿಸಿ ಬಂದ ವೃತ್ತಾಂತ ಭಾಗಗಳು ಮಾತ್ರ ಇಲ್ಲಿವೆ. ಬೇರೆ ಯಾವ ವಿವರಗಳನ್ನೂ ಇಲ್ಲಿ ಹೇಳಿಲ್ಲ. ಚಾವುಂಡರಾಯಪುರಾಣದಲ್ಲಿ ಮುಖ್ಯವಾದ ಘಟನೆಗಳನ್ನು ಹೇಳಿದ್ದರೆ, ಇಲ್ಲಿ ಆ ಪ್ರಯತ್ನವನ್ನೂ ಮಾಡಿಲ್ಲ. ಕವಿ ಅತ್ಯಂತ ಭರದಲ್ಲಿ ಮುಂದಿನ ಕಥಾಂಶಕ್ಕೆ ನುಗ್ಗಿದ್ದಾನೆ. ಚಕ್ರವರ್ತಿಯ ಗರ್ವಭಂಗದ ವೃತ್ತಾಂತವನ್ನು ಇಲ್ಲಿ ಕೈಬಿಡಲಾಗಿದೆ.

**ಪುಣ್ಯಾಸ್ರವದ ಆದೀಶ್ವರರ ಕಥೆ** : ದಿಗ್ವಿಜಯದ ವಿಷಯವು ಪೂರ್ವಪುರಾಣ, ಆದಿಪುರಾಣಗಳ ಹಂದರದಲ್ಲಿಯೇ ಬಂದರೂ ಅವುಗಳಲ್ಲಿಯ ವಿಸ್ತಾರವಿಲ್ಲ. ಅಲ್ಲಲ್ಲಿ ಕೆಲವು ವ್ಯತ್ಯಾಸಗಳನ್ನು ಕಾಣಬಹುದಾಗಿದೆ.

ಮಾಗಧಾಮರನನ್ನು ಸಾಧಿಸುವ ಉಪಾಯವೇನೆಂದು ಚಿಂತಿಸುತ್ತ ಮಲಗಿರುವಾಗ ಭರತನು ಬೆಳಗಿನ ಜಾವದಲ್ಲಿ ಕನಸನ್ನು ಕಂಡನು. ರಥವನ್ನು ಏರಿ ಸಮುದ್ರವನ್ನು ಹೊಕ್ಕು ನೀರಿನಲ್ಲಿ ಹನ್ನೆರಡು ಯೋಜನದವರೆಗೆ ಹೋಗಲು ಅಲ್ಲಿಂದ ಮುಂದೆ ರಥವು ಚಲಿಸ

ಲಿಲ್ಲ. ಆ ಸಮಯದಲ್ಲಿ ತಾನು ಮಾಗಧನರಮನೆಗೆ ದಿವ್ಯಬಾಣವನ್ನು ಎಸೆದುದನ್ನು ಕನಸಿನಲ್ಲಿ ಕಂಡು ಎಚ್ಚರಗೊಂಡನು. ಈ ಕನಸು ಭರತನಿಗೆ ಮುನ್ಸೂಚನೆಯಾಗಿ ತೋರಿತು. ಅದೇ ರೀತಿ ಬೆಳಗಾಗಿ ಆತನು ಮಾಗಧಾಮರನನ್ನು ಶರಣುಗೊಳಿದನು. ತ್ರೈಲೋಕ್ಯ ವಿಜಯ ಎಂಬ ಚಾಪವನ್ನು ಧರಿಸಿ ಮಂತ್ರಯುಕ್ತವಾದ ಬಾಣಗಳನ್ನು ತುಂಬಿಕೊಂಡು ಮುನ್ನಡೆಯುತ್ತಿದ್ದ ರಥವು ಸಮುದ್ರದ ಕಿರಿದಂತರ ಹೋಗಿ ನಿಂತು ಬಿಟ್ಟಿತು. ಕೋಪಗೊಂಡ ಭರತನು ಬಾಣದ ಮೊನೆಯಲ್ಲಿ ಲೇಖನವನ್ನು ಬರೆದು ಕಳಿಸಿದನು. ಅಲ್ಲದೆ ಆ ಲೇಖನವನ್ನು ಮಾಗಧನ ರಾಜ ಮಂದಿರದ ಓಲಗ ಶಾಲೆಯ ಕಂಬದಲ್ಲಿ ಕೆತ್ತಿಸಲು ಸೂಚಿಸಿದನು. ಇದನ್ನು ಓದಿದ ಮಾಗಧಾಮರ ಕ್ಷಣಕಾಲ ಕೋಪ ಗೊಂಡರೂ ಹಿರಿಯರ ಬೋಧನೆಯಿಂದ ಭರತನಿಗೆ ಶರಣಾದನು.

ಇಲ್ಲಿ ಬರುವ ಕನಸಿನ ವೃತ್ತಾಂತ ಹಾಗೂ ಗೋಡೆಯ ಮೇಲೆ ಓಲೆಯ ವೃತ್ತಾಂತ ಬರೆಸಬೇಕೆಂದು ಹೇಳುವ ಸೂಚನೆ ಹೊಸದಾಗಿ ಕಂಡುಬರುತ್ತದೆ. ಉಳಿದ ಆದಿ ತೀರ್ಥಂಕರ ಚರಿತ್ರೆಗಳಲ್ಲಿ ಈ ವಿಚಾರವು ಬಂದಿಲ್ಲ.

ವಿಜಯ ಪ್ರಶಸ್ತಿಯ ನಿರೂಪಣೆಯಲ್ಲಿ ಈ ಕೃತಿ ಪೂರ್ವಪುರಾಣದ ಅನುವರ್ತಿಯಾಗಿ ಕಂಡುಬರುತ್ತದೆ. "ವೃಷಭಗಿರಿಯೊಳು ಪೂರ್ವಚಕ್ರಿಗಳಂಕಮಾಲೆಯಂ ದಂಡರತ್ನದಿಂ ತೊಡೆದಾತ್ಮೀಯ ವಿಜಯಪ್ರಶಸ್ತಿಯಂ ಬರೆದು" ಎಂಬ ನಿರೂಪಣೆ ಇಲ್ಲಿದೆ.

ಕವಿ ಈ ಭಾಗದಲ್ಲಿ ವೀರರಸಪ್ರಧಾನವೆನಿಸುವ ವರ್ಣನಾ ವಿಧಾನವನ್ನು ತಂದು ಈ ಭಾಗವನ್ನು ವರದಿಯಾಗಿಸದೆ ಕಾವ್ಯಾಂಶವನ್ನು ನೀಡಿದ್ದಾನೆ.

**ಪುರುದೇವಚರಿತ** : ಈ ಭಾಗದಲ್ಲಿ ಶಾಂತಕೀರ್ತಿಯು ಚಾವುಂಡರಾಯಪುರಾಣದ ಕಥಾ ಚೌಕಟ್ಟಿಗೆ ಅಲ್ಲಲ್ಲಿಯೇ ವರ್ಣನೆಯ ಮೆರುಗನ್ನು ಸೇರ್ಪಡೆಗೊಳಿಸಿದ್ದಾನೆ. ಅನಾ ವಶ್ಯಕವಾದ ಸುದೀರ್ಘ ವರ್ಣನೆಗೆ ಹೋಗದೆ ಹಿತಮಿತವಾದ ವರ್ಣನಾ ಸಂವಿಧಾನವನ್ನು ಇಲ್ಲಿ ತಂದಿದ್ದಾನೆ.

ಈ ಭಾಗ ಚಾವುಂಡರಾಯಪುರಾಣದ ಗದ್ಯಭಾಗವಾದ

ಮರುದೇವಮನುವಿನ ಕಾಲದಿಂ ತಗುಳ್ದು ಪರಿವೃದ್ಧಮಾಗಿರ್ದುಪಸಮುದ್ರಮಂ ಪುಗದೆ
ಗಂಗಾವನ ವೇದಿಕಾ ದ್ವಾರದಿಂ ವನಮಂ ಪೊಕ್ಕು

ಎಂಬುದನ್ನು ಅನುಕರಿಸಿ ಹೀಗೆ ಹೇಳಿದ್ದಾನೆ :

ಮರುದೇವನೆಂಬ ಮನುವಿನ ಕಾಲದಿನಿತ್ತು | ಪರಿವೃತವಾದುಪರ್ನವದ
ಪೊರಗೆ ಗಂಗಾನದಿ ವೇದಿಕೆ ದ್ವಾರದಿಂ | ದಿರದಾವನವ ಪೊಕ್ಕಾಗ (viii-೫)

ಮುಂದೆ ಪೂರ್ವಪುರಾಣ, ಆದಿಪುರಾಣಗಳಲ್ಲಿ ಕಂಡುಬರುವ ವರ್ಣನಾಭಾಗವನ್ನು ಸಂಕ್ಷಿಪ್ತಗೊಳಿಸಿ ತನ್ನದೇ ಆದ ವರ್ಣನಾ ವಿನ್ಯಾಸದ ಸ್ವೋಪಜ್ಞತೆಯನ್ನು ತೋರಿದ್ದಾನೆ. ಉದಾಹರಣೆಗೆ :

ನೀಲಗಿರಿಗಳಂತೆ ಕರಿಗಳು ಪವನನ | ಸೋಲಿಸಲಾರ್ಪವಾಜಿಗಳು
ಬಾಲಾರ್ಕರಥವ ಮಿಗುವ ತೇರ್ಗಳು ಭಟ | ಕಾಲನ ಗೆಲುವ ವಿಕ್ರಮರು (viii-೬)

ಚತುರಂಗ ಬಲದ ಹಿರಿಮೆಯನ್ನು ಕವಿ ಸುಂದರವಾಗಿ ವರ್ಣಿಸಿದ್ದಾನೆ. ಲವಣಾಂ ಬುಧಿಯ ಸಮೀಪದಲ್ಲಿ ತಂಗಿರುವಾಗ—

ಪಡೆವಾಳನಲ್ಲಿ ಕಟಕಕೆ ಕಾಪನಿಟ್ಟು | ಬಿಡದೆ ತ್ರಿರಾತ್ರಾಶನದಿ
ದೃಢವಾಗಿ ದರ್ಭಶಯನಮಿರ್ದು ಮಂತ್ರವ | ಬಿಡದೆ ಸ್ಮರಿಸುತಿರ್ದಲ್ಲಿ (ಪುರುಚ. viii-೯)

ಪರಮೇಷ್ಠಿಗಳ ಅಭಿಷೇಕ ಪೂಜೆಯನ್ನು ಮಾಡಿ, ಅಜಿತಂಜಯವೆಂಬ ರಥವನ್ನು ಏರಿ ಹನ್ನೆರಡು ಯೋಜನ ಇರುವಾಗಲೇ ಗಂಗಾದ್ವಾರದಿಂದಲೇ ಮೇಘಶರದಲ್ಲಿ ಲೇಖನವನ್ನು ಬರೆದು ಮಾಗಧ ವ್ಯಂತರನಿಗೆ—

ಪುರುಜಿನನಂದನ ಭರತ ಚಕ್ರೇಶಗೆ |ಶರಧಿಯ ಮಧ್ಯವಾಸಿಗಳು
ಎರಗಿ ಕಪ್ಪವ ಕೊಟ್ಟು ಬಾಳ್ವುದೆಂದ | ಕ್ಕರವ ಬರೆದು ಎಚ್ಚನಾಗ (ಪುರುಚ. viii-೧೨)

ಈ ಕಥಾಚೌಕಟ್ಟಿನಲ್ಲಿ ಕವಿ ಹೆಜ್ಜೆ ಹೆಜ್ಜೆಗೂ ಚಾವುಂಡರಾಯಪುರಾಣದ ಅನುಕರಣೆ ಮಾಡಿರುವುದು ಸ್ಪಷ್ಟ. ಒಂದು ವ್ಯತ್ಯಾಸವೆಂದರೆ ಭರತಚಕ್ರಿಯು ಸ್ವಪ್ರೇರಣೆಯಿಂದ ಅಶನ, ದರ್ಭಶಯನ, ಮಂತ್ರಪಠನಗಳನ್ನು ಮಾಡಿದನೆಂದು ಇಲ್ಲಿ ಬರುತ್ತದೆ. ಚಾವುಂಡರಾಯಪುರಾಣದಲ್ಲಿ ಪುರೋಹಿತಾದಿ ಕುಲವೃದ್ಧರುಪರೋಧದಿಂದ ಹಾಗೆ ಮಾಡಿದನೆಂದು ಬರುತ್ತದೆ. ಪುರುದೇವಚರಿತೆಯಲ್ಲಿಯ ಸಂಯೋಜನೆಯಲ್ಲಿ ಭರತಚಕ್ರಿಯ ಘನತೆಯು ಮತ್ತಷ್ಟು ಹೆಚ್ಚಿದಂತೆ ಕಂಡುಬರುತ್ತದೆ.

ಮಾಗಧವ್ಯಂತರ, ವಿಜಯಾರ್ಧದೇವ, ತಮಿಸ್ರಗುಹೆಯ ಕೃತಮಾಲಾಮರರು ಶರಣಾದದ್ದು, ಪಶ್ಚಿಮಖಂಡ, ಮ್ಲೇಚ್ಛಖಂಡ, ಮಧ್ಯಮ ಖಂಡಗಳನ್ನು ವಶಪಡಿಸಿಕೊಂಡದ್ದು, ಬಳಾಕಾ-ಆವರ್ತಕರೆಂಬ ಮ್ಲೇಚ್ಛರಾಜರಿಗೆ ಕುಲದೈವನಾದ ಮೇಘಮುಖರೆಂಬ ನಾಗರಾಜರು ಸಹಾಯಕರಾದುದು, ಭರತನ ಕಡೆಯ ಕುರುಕುಲಾಗ್ರಣಿಯಾದ ಸೋಮಪ್ರಭನ ಮಗ ಜಯಕುಮಾರನು ಮೇಘಕುಮಾರನನ್ನು ಸೋಲಿಸಿದ ಸಂದರ್ಭದಲ್ಲಿ ಬಳಾಕಾವರ್ತರು ಹೆದರಿ ಶರಣಾಗಿ ತಮ್ಮ ಎಂಟು ಮಂದಿ ಕನ್ಯೆಯರನ್ನು ಚಕ್ರಿಗೆ ಒಪ್ಪಿಸಿ ಮರ್ಯಾದೆ ಸಲ್ಲಿಸಿದುದು, ಹಿಮವತ್ಪರ್ವತದವರೆಗಿನ ಭೂಮಂಡಲ ಸಾಧನೆ ಇವೆಲ್ಲವೂ ಯಥಾವತ್ತಾಗಿ ಚಾವುಂಡರಾಯಪುರಾಣವನ್ನು ಅನುಸರಿಸಿ ಚಿತ್ರಿತವಾಗಿವೆ.

ವೃಷಭಾಚಲದಲ್ಲಿ ಭರತನು ತನ್ನ ಪ್ರಶಸ್ತಿಯನ್ನು ಬರೆಸಿಕೊಳ್ಳುವ ವೃತ್ತಾಂತದಲ್ಲಿ ಚಾವುಂಡರಾಯಪುರಾಣವು ಆದಿಪುರಾಣದ ಛಾಯೆಯನ್ನು ಅನುಸರಿಸಿದ್ದರೆ ಇಲ್ಲಿ ಸುಸ್ಪಷ್ಟವಾಗಿ ಆದಿಪುರಾಣದ ಅನುಕರಣೆ ಕಂಡುಬರುತ್ತದೆ. ಪ್ರಶಸ್ತಿಯಲ್ಲಿ ಬರೆದ ವಿಚಾರವಿದು :

ಹುಂಡಾವಸರ್ಪಿಣಿ ಪ್ರಥಮ ಜಿನಾತ್ಮಜ | ಖಂಡ ಷಟ್ಕವ ಬಾಯ್ಕೇಳಿಸಿಯು
ಮಂಡಲೀಕರನೆಲ್ಲಯೆರಗಿಸಿ ಕಪ್ಪವ | ಕೊಂಡ ದಕ್ಷಿಣಭರತದೊಳು
ಸ್ವಸ್ತಿಶ್ರೀ ಪುರುಜಿನನಂದನನರಿಯ | ಮಸ್ತಕ ಮಣಿಧೌತ ಚರಣ
ಸ್ವಸ್ತದಿಂ ದಿಗ್ವಿಜಯಂಗೆಯ್ದು ಪೋದ | ಪ್ರಶಸ್ತಿಗೆ ಭದ್ರಭೂಯಾತು
(ಪುರುಚ. viii- ೪೧, ೪೨ )

ಈ ಪ್ರಶಸ್ತಿಯನ್ನು ಅವನು ಬರೆಸುವ ಮುನ್ನ ಭರತನಿಗಾದ ಅನುಭವದ ರೀತಿಯ ಹಿನ್ನೆಲೆಯ ವಿವರಣೆಯಲ್ಲಿಯೂ ಆದಿಪುರಾಣ, ಚಾವುಂಡರಾಯಪುರಾಣವನ್ನು ಅನುಸರಿಸಿದಂತೆ ಕಂಡುಬರುತ್ತದೆ.

ನಡೆತಂದುತ್ತರ ಮ್ಲೇಚ್ಛದ | ನಡುವಣ ವೃಷಭಾದ್ರಿಯೊಳು
ಎಡೆಗೊಡದಿರೆ ತನ್ನ ವಿಜಯ ಪ್ರಶಸ್ತಿಗೆ | ಉಡುಗಿತು ಮುನ್ನಿನಗರ್ವ
ಕಿರಿದೆಡೆಯನು ದಂಡರತ್ನದಿಂ ದೊರೆ ಮ | ತ್ತಿರದೆ ಕಾಕಿಣಿ ರತ್ನದಿಂದ
ಬರಸಿ ತನ್ನಯ ವಿಜಯ ಪ್ರಶಸ್ತಿಯ | ನಿರದೆ ತಕ್ಷ ರತ್ನದಿಂದ (ಪುರುಚ. viii- ೩೯, ೪೦)

'ಗಳಿತಮದನಾಗಿ' ಎಂಬ ಚಾವುಂಡರಾಯಪುರಾಣದ ಪದಪುಂಜವನ್ನಾಗಲಿ 'ಸೋರ್ದುದು ಗರ್ವರಸಂ' ಎಂಬುದನ್ನಾಗಲಿ ಪುನರಾವರ್ತಗೊಳಿಸದೆ 'ಗರ್ವ ಉಡುಗಿತು' ಎಂಬ ಸಾಮಾನ್ಯ ಪಡೆನುಡಿಯನ್ನು ಬಳಸಿ ಕವಿ ಮೂಲಕ್ಕೆ ಧಕ್ಕೆ ಬಾರದಂತೆ ನಿರೂಪಿಸಿದ್ದಾನೆ.

ದಿಗ್ವಿಜಯಾನಂತರ ಭರತನು ಆಗಮಿಸಿದನು. ೭೨ ಸಾಂಗತ್ಯಗಳಲ್ಲಿ (viii, ೫೯-೧೩೦) ಕವಿ ಸುದೀರ್ಘವಾಗಿ ಈ ಭಾಗವನ್ನು ವರ್ಣಿಸಿದ್ದಾನೆ. ಭರತನು ಸಮವಸರಣದಲ್ಲಿ ಸ್ವಾಮಿಯನ್ನು ನೋಡಿ ಸ್ತುತಿಸಿರುವ ಭಾಗ ಹೀಗಿದೆ :

ಕಷ್ಟದ ಸಂಸಾರದೊಳೆನ್ನನಿರಿಸಿ ನಿ | ಮ್ಮಿಷ್ಟವ ಪಡೆದಿರೇನಾಯ್ತು
ದಿಟ್ಟಿಸಿ ನಿಮ್ಮ ಪಾದವ ಕಾಣಲಾಬಂಧ | ಕೆಟ್ಟು ಪೋಗದೆ ನಿಮಿಷದೊಳು
(ಪುರುಚ. viii-೩೯)

ಎಂದು ಆತ್ಮವಿಶ್ವಾಸದಿಂದ ಲೌಕಿಕ ದಿಗ್ವಿಜಯವನ್ನು ಸಾಧಿಸಿದ ಭರತ ತಾನೂ ಸಹ ತಂದೆಯಂತೆ ಸಂಸಾರವನ್ನು ಕೊಡವಿಬಿಡುವ ನುಡಿಯನ್ನು ಆಡುತ್ತಾನೆ. ಸಮವಸರಣದ ಮಹಿಮೆಯೇ ಹಾಗೆ. ಅಲ್ಲಿ ಕಾಲಿರಿಸುತ್ತಿದ್ದಂತೆ ಲೌಕಿಕದ ನಶ್ವರತೆ ಬೆಳಗುತ್ತದೆ. ಆತ್ಮ ಕಲ್ಯಾಣದ ಹಿರಿಮೆಯೇನೆಂಬುದು ತಾತ್ಕಾಲಿಕವಾಗಿಯಾದರೂ ತಿಳಿದುಬರುತ್ತದೆ. ಈ ಭಾಗದಲ್ಲಿ ಕವಿ ಪೂರ್ವಪುರಾಣ, ಆದಿಪುರಾಣಗಳನ್ನು ಅಕ್ಷರಶಃ ಅನುಸರಿಸದಿದ್ದರೂ ಅಲ್ಲಿಯ ಆಶಯವನ್ನು ನೀಡಿದ್ದಾನೆ.

**ಆದಿಪರಮೇಶ್ವರನ ಯಕ್ಷಗಾನ** : ಸೈನ್ಯವು ಹೊರಟ ರೀತಿಯನ್ನು ಅಲ್ಲಿಯ ಉತ್ಸಾಹವನ್ನು ಕವಿ ನೀಡಲು ಯತ್ನಿಸಿದ್ದಾನೆ.

ದಿಗ್ವಿಜಯಕ್ಕೆ ಹೊರಡಲು ಸೂಚನಾರ್ಥವಾಗಿ ಭೇರಿನಿನಾದವು ಹೊರಟಿತು. 'ಕರಿತುರಗ ಕಾಲಾಳು ರಥಗಳು ಮೊರೆವ ವಾದ್ಯದಾರವದೊಳು' ಮಾಂಡಲಿಕ ಮಂತ್ರಿ, ಸೇನಾಪತಿ ಮೊದಲಾದವರು ಜನರನ್ನು ತೀವಿ ನೆರೆದರು—ಈ ಮೊದಲಾದ ವರ್ಣನೆಗಳು ಪೂರ್ವ ಪುರಾಣ, ಆದಿಪುರಾಣಗಳ ವರ್ಣನೆಯನ್ನು ನೆನಪಿಗೆ ತರುತ್ತವೆ. ಭರತನು ಯುದ್ಧ ಸನ್ನದ್ಧನಾದ ರೀತಿಯಲ್ಲಿ ಕವಿ ಚಿತ್ರೀಕರಣದ ಸೊಗಸನ್ನು ತುಂಬಲು ಯತ್ನಿಸಿದ್ದಾನೆ :

ಜ್ಯೋತಿಪ್ರಭೆಯೆಂಬ ಮಕುಟವ | ಪ್ರೀತಿಯಿಂದ ಧರಿಸಿಯು
ನೂತನೋನ್ನತ ಪ್ರಭೆಯ ಸೂಸುವ | ಖ್ಯಾತಿ ನವಮಣಿ ವಿರಚಿತ ಭೂಷಣಗಳು
ತೊಟ್ಟು ದಿವ್ಯಾಂಬರವ ಧರಿಸಿಯು | ಕಟ್ಟಿದನು ಹೊಂಜುರುಗಿಯ
ಇಟ್ಟು ತಿಲಕಳವಟ್ಟು ಮಾಲೆಯೂ | ಕಟ್ಟಾಳುಗಳ ದೇವನು ಪೊರಟನಾಗ
(ಆದಿಯ. ಪರಿಚ್ಛೇದ ೬)

ಹೋದ ಹೋದ ಕಡೆಗಳಲ್ಲೆಲ್ಲಾ ರಾಜರು ಚಕ್ರಿಗೆ ಎರಗಿ ಕಪ್ಪಕಾಣಿಕೆಗಳನ್ನು ಸಲ್ಲಿಸಿ ತಮ್ಮ ಕನ್ನೆಯರನ್ನು ನೀಡಿದರು.

'ಎರಗಿದರ ಮನ್ನಿಸುತ ಮಲತರ ಶಿರವ ತಿರಿಕಲ್ಲಾಡುತ ಧರೆಯನ್ನು ಸಾಧಿಸಿದನೆಂದು' ಬರುವ ಭಾವ ಇಲ್ಲಿ ಹೊಸದಾಗಿದೆ.

ದಿಗ್ವಿಜಯ ವರ್ಣನೆ ನೀಡುವಾಗ ವಿಜಯಯಾತ್ರೆಯೊಂದಿಗೆ ವಿವಾಹಯಾತ್ರೆಯೂ ನಡೆದಂತೆ ಕವಿ ವರ್ಣಿಸಿದ್ದಾನೆ.

ಭರತನು ದಿಗ್ವಿಜಯ ಮಾಡಿದ ಸ್ಥಳಗಳ ವಿವರಗಳನ್ನು ಸಂಪೂರ್ಣವಾಗಿ ಕವಿ ನೀಡಿಲ್ಲ. ಅಲ್ಲಲ್ಲಿ ಕೆಲವನ್ನು ಮಾತ್ರ ನೀಡಿದ್ದಾನೆ. ದಿಗ್ವಿಜಯ ಪ್ರಶಸ್ತಿಯ ವೃತ್ತಾಂತ ಇಲ್ಲಿ ಬರುವುದಿಲ್ಲ.

ಭರತನು ದಿಗ್ವಿಜಯಾನಂತರ ಸಮವಸರಣಕ್ಕೆ ಹೋಗಿ ಸ್ವಾಮಿಯನ್ನು ದರ್ಶನ ಮಾಡಿದ ವಿಚಾರ ಇಲ್ಲಿ ಬರುವುದಿಲ್ಲ. ದಿಗ್ವಿಜಯಕ್ಕೆ ತೆರಳುವ ಮುನ್ನವೇ ಸ್ವಾಮಿಯ ದರ್ಶನದ ಲಾಭವನ್ನು ಪಡೆದ ವೃತ್ತಾಂತವು ಇಲ್ಲಿ ಬರುತ್ತದೆ.

## ಭರತ-ಬಾಹುಬಲಿ ವ್ಯಾಯೋಗ

**ಆದಿಪುರಾಣ-ಪೂರ್ವಪುರಾಣ :** ಇದು ಸಾಹಿತ್ಯಲೋಕದಲ್ಲಿ ಅತ್ಯಂತ ಸಹಜಸುಂದರ ವಾಗಿ ಮೂಡಿ ಬಂದಿರುವ ಉತ್ಕೃಷ್ಟಭಾಗಗಳಲ್ಲಿ ಒಂದಾಗಿದೆ. ಮತ್ತೆ ಮತ್ತೆ ಓದುಗರಿಗೆ ಈ ಸನ್ನಿವೇಶ ಸೌಂದರ್ಯದ ಆಸ್ವಾದನೆಗೆ ಕರೆಕೊಡುವಂತಿದೆ. "ಈ ಪ್ರಸಂಗ ಕನ್ನಡ ಕಾವ್ಯಪ್ರಪಂಚದಲ್ಲಿ ಶಿಖರಪ್ರಾಯವಾದ್ದರಲ್ಲಿ ಒಂದು"[೬೨] ಎಂಬುವ ಹೆಮ್ಮೆಗೆ ಪಾತ್ರ ವಾಗಿರುವ ಈ ಭಾಗ ಸವಿದಷ್ಟೂ ಅಮೃತಪ್ರಾಯವಾಗಿರುವ ಧರ್ಮ ಕಾವ್ಯಧರ್ಮಗಳ ಉತ್ತಮ ಮೇಳವಾಗಿದೆ.

"ಈ ಪೂರ್ವಪುರಾಣದ ಕಥಾಗತಿಯನ್ನು ಅನುಸರಿಸಿ ಪಂಪ ಕವಿ ತನ್ನ ಆದಿಪುರಾಣ ದಲ್ಲಿ ಭರತ ಬಾಹುಬಲಿಗಳ ವ್ಯಾಯೋಗ ವೃತ್ತಾಂತವನ್ನು ರೂಪಿಸಿದ್ದಾನೆ. ಆದಿನಾಥನ ಚರಿತ್ರೆಯ ಉತ್ತರ ಭಾಗದಲ್ಲಿ ಇದೇ ದಟ್ಟವಾದ ಕಥಾಂಶವಿರುವ ಮಹತ್ತ್ವದ ರಸಸ್ಥಾನ. ಅಲ್ಲಿಯ ಹಾಗೆಯೇ ಇಲ್ಲಿಯೂ ಕಥೆ, ಲೌಕಿಕವಾದ ನೆಲೆಗಟ್ಟಿನ ಮೇಲೆ ಬೆಳೆದಿದೆ. ಭಾವನೆಗಳು ಮಾನವಸಹಜವಾದ ಚಿತ್ತವೃತ್ತಿಗಳಿಗೆ ಹೊಂದಿಕೊಂಡು ಅರಳಿವೆ. ಸ್ವಾಮಿತ್ವ-ಭೃತ್ಯತ್ವ, ಅಧಿರಾಜತೆ-ಅಧೀನತೆ, ಆತ್ಮಾಭಿಮಾನ-ಅತ್ಯಾಶೆ ಇವು ಕಾರಣವಾಗಿ ಅಣ್ಣ ತಮ್ಮಂದಿರ ನಡುವೆ ಮನಸ್ತಾಪ ಹುಟ್ಟಿತು. ದೊಡ್ಡ ಯುದ್ಧದಲ್ಲಿ ಪರ್ಯವಸಾನವಾಗಲಿ ದ್ದುದು, ವಿವೇಕಿಗಳಾದ ಮಂತ್ರಿಗಳ ಮಧ್ಯ ಪ್ರವೇಶದಿಂದ ತಪ್ಪಿ ದ್ವಂದ್ವಯುದ್ಧಕ್ಕೆ ಸೀಮಿತಗೊಂಡಿತು. ಯುದ್ಧದಲ್ಲಿ ತಮ್ಮ ಗೆದ್ದು ಅಣ್ಣ ಸೋತಾಗ, ಅಣ್ಣನ ಚಕ್ರಾಯುಧ ಪ್ರಯೋಗವೂ ವಿಫಲವಾದಾಗ, ಇಬ್ಬರೂ ತಂತಮ್ಮ ಅತಿರೇಕ ವರ್ತನೆಗಳಿಗೆ ಪಶ್ಚಾತ್ತಾಪ ಪಟ್ಟರು. ತಮ್ಮ ಬಾಹುಬಲಿಗೂ ವೈರಾಗ್ಯೋದಯವುಂಟಾಗಿ, ಆತ ಸಕಲವನ್ನೂ ಅಣ್ಣ ಭರತನಿಗೇ ಒಪ್ಪಿಸಿ ತಪಸ್ಸಿಗೆ ತೆರಳಿದನು. ಈ ಹಂದರದ ಕಥಾಪ್ರಸಂಗ ಒಂದು ಸುಂದರ ಸುರಸ ಕಾವ್ಯಖಂಡವಾಗಿ 'ಆದಿಪುರಾಣ'ದಲ್ಲಿ ನಿರೂಪಿತವಾಗಿದ್ದು, ಇದು ತನ್ನ ಸೊಗಸಿ ನಿಂದ ಕನ್ನಡದ ಉತ್ತರಕಾಲೀನ ಕವಿಗಳಿಗೂ ಸಹೃದಯರಾದ ವಾಚಕರಿಗೂ ಮೆಚ್ಚುಗೆಯ ವಸ್ತುವಾಗಿದೆ."[೬೩]

ದಿಕ್ಕು-ದಿಕ್ಕುಗಳನ್ನೆಲ್ಲ ಗೆದ್ದು ಬಂದ ಚಕ್ರರತ್ನ ಇದ್ದಕ್ಕಿಂತೆ "ಆಯೋಧ್ಯಾಪುರಮಂ

ಪುಗದೆ ತಱುಂಬಿನಿಂದುದು". ಆದರ ರಕ್ಷಕ ಯಕ್ಷಸಹಸ್ರರು, 'ಭರತನನ್ನು ವಿದ್ವೇಷಿಸುವವರು ಇನ್ನೂ ಇರುವರೆಂದಾಯಿತು. ಅವರ ನಾಶಕ್ಕೆ ಭರತನೇಕೆ ನಾವೇ ಹೋಗಿ ಮುಗಿಸಿದರಾಯಿತು' ಎಂದುಕೊಳ್ಳುತ್ತಿದ್ದಂತೆ, ಸೇನಾಧಿಪತಿಗಳು ಚಕ್ರರತ್ನ ಸ್ಖಲನವನ್ನು ಭರತನಿಗೆ ತಿಳಿಸಿದರು. ಭರತನಿಗೆ ಆಶ್ಚರ್ಯ! ಪುರೋಹಿತರನ್ನು ಕರೆಸಿಕೊಂಡು, ದಿಗ್ವಿಜಯವನ್ನು ಸಾಧಿಸಿ ಬಂದ ಈ ಚಕ್ರರತ್ನ ಇಂದು ಇಲ್ಲಿ ನಿಂತಿದೆ—

ಎನಗಮರಾತಿಗಳೊಳರೆಂ | ಬಿನಿತು ಪರಾಭವಮನೀಗಳೀ ಚಕ್ರಂ ಸೂ
ಚನೆಗೈದುದಿನ್ನಸಾವಂ | ತನಗಿರಲೆಡೆಮಾಡಿದಪ್ಪನಂತಕಮುಖಮಂ (ಆದಿಪು. xiv-೯)

ಎಂದು ಗಂಭೀರವಾಗಿ ನುಡಿದಾಗ ಪುರೋಹಿತನು ವಿನಯಶೀಲನಾಗಿ ಈ ವಿಚಾರದಲ್ಲಿ ತಾನು ತಿಳಿದುದನ್ನು ಬಿನ್ನವಿಸಿಕೊಂಡನು. 'ಅರಸ! ಪರರಾಜರ ಭೂಮಂಡಲವನ್ನೇನೋ ವಶಪಡಿಸಿಕೊಂಡಾಯಿತು. ಇನ್ನು ಅಂತರ್ಮಂಡಲವನ್ನು ಶೋಧಿಸಬೇಕಾಗಿದೆ' ಎಂದು ನುಡಿದು ಅಷ್ಟಕ್ಕೇ ಸುಮ್ಮನಾಗದೆ

ಪುರುತನಯಂ ತಾನಾಮುಂ | ಪುರುತನಯರೆಮೆಮಗೆ ತಂದೆಯಿತ್ತವನಿತಳಂ
ಪೊರೆಯುಂಟೆ ತಮಗೆ ಭಾಗ್ಯಾ | ನುರೂಪದಿಂ ಬಾಳ್ವೆಮೆಱಗೆವೆಂಬತಿಮದದಿಂ
ನಿನ್ನನುಜರನಿಬರುಂ ಮಾ | ನೋನ್ನತರಣಮೆಱಗರವರೊಳಗ್ಗಳದದಟಂ
ತನ್ನಭಿಮಾನದ ಭುಜಬಲ | ದುನ್ನತಿಯನೆ ಮೆಱೆವ ಬಾಹುಬಲಿ ಮುನ್ನೆಱಗಂ
(ಆದಿಪು. xiv-೧೬, ೧೭)

ಅವನು ಪುರುರಾಜನ ಮಗ. ನಾವೂ ರಾಜನ ಮಕ್ಕಳೇ. ತಂದೆ ಕೊಟ್ಟ ಭೂತಳವು ನಮಗೆ ಹೊರೆಯೆ? ಭಾಗ್ಯಾನುಗುಣವಾಗಿ ನಾವು ಬಾಳುವೆವು. ನಾವಾರಿಗೂ ತಲೆಬಾಗೆವು ಎಂಬ ಅತಿಮದದಿಂದ ನಿನ್ನ ತಮ್ಮಂದಿರೆಲ್ಲರೂ ಮಾನೋನ್ನತರಾಗಿದ್ದಾರೆ. ಅವರು ಯಾರಿಗೂ ಸ್ವಲ್ಪವೂ ಜಗ್ಗರು. ಅವರಲ್ಲಿ ಅತಿ ಶೂರನೂ ತನ್ನ ಅಭಿಮಾನಾಶ್ರಯವಾದ ಭುಜಬಲದ ಉನ್ನತಿಯಿಂದಲೇ ಮೆರೆಯುತ್ತಿರುವವನೂ ಆದ ಬಾಹುಬಲಿಯು ಮೊದಲು ಬಾಗನು—

ಆದಿಬ್ರಹ್ಮರ ಕೊಟ್ಟೀ | ಮೇದಿನಿಗಾನೊಡೆಯನಾತನರಸಿನಿವಿರಿದೊಂ
ದಾದೊಡಮೇನೆನಗೆಂಬ ಮ | ದೋದಯದೊಳ್ ದೇವ ಬಾಹುಬಲಿ ಬಲಿದಿರ್ದಂ
(ಆದಿಪು.xiv-೧೮)

ಆದಿಬ್ರಹ್ಮರು ಕೊಟ್ಟಿರುವ ಈ ಮೇದಿನಿಗೆ ನಾನು ಒಡೆಯ. ಭರತರಾಜನ ಅರಸುತನ ಎಷ್ಟೇ ದೊಡ್ಡದಾಗಿದ್ದರೂ ನನಗೇನು ಎಂಬ ಮದದಿಂದ ಬಾಹುಬಲಿ ಬಲಿತಿರುವನು ಎಂದು ಹೇಳಿ, ಬಾಹುಬಲಿಯ ಬಲಪರಾಕ್ರಮಗಳನ್ನು ಕುರಿತು ವಿವರಿಸಿದನು. ಈ ಎಲ್ಲ ವಿಷಯಗಳನ್ನು ಪುರೋಹಿತನು ಹೇಗೆ ಸಂಗ್ರಹಿಸಿದನೆಂಬುದಕ್ಕೆ ಕಾವ್ಯದಲ್ಲಿ ಯಾವ ಸನ್ನಿವೇಶವೂ ರಚನೆಗೊಂಡಿಲ್ಲ. ಆದರೂ ಅಣ್ಣನಿಗೆ ತಿಳಿಯದ ತಮ್ಮಂದಿರ ಈ ಗುಣವನ್ನು ಪುರೋಹಿತನು ಅರಿತಿದ್ದಾನೆ, ಇಲ್ಲ ಊಹಿಸಿದ್ದಾನೆ. ಅದೇನೇ ಆಗಿದ್ದರೂ, ಮುಂದೆ ಈತನು ಆಡಿದ ಮಾತುಗಳಲ್ಲಿ ಸತ್ಯವಿದೆ ಎನಿಸುತ್ತದೆಯಾದರೂ ಪೂರ್ವಪೀಠಿಕೆಯಲ್ಲಿಯೇ ಅಣ್ಣ-ತಮ್ಮಂದಿರಲ್ಲಿ ಅಸಮಾಧಾನವನ್ನು ಮೂಡಿಸುವ ಮಾತುಗಳಂತೆ ಮೇಲಿನ ಮಾತುಗಳು ಕಂಡುಬರುತ್ತವೆ. ಇದುವರೆಗೆ ಅಣ್ಣತಮ್ಮಂದಿರಲ್ಲಿ ಅಸಮಾಧಾನದ ಒಂದು

ಗೆರೆಯಾದರೂ ಮೂಡಿ ಬಂದಿರಲಿಲ್ಲ. ಆದರೆ ಈಗ? ಚಕ್ರಸ್ಖಲನದಿಂದಾಗಿ ಮೊದಲೇ ಅಸಮಾಧಾನದಿಂದಿದ್ದ ಭರತ ತನ್ನವರಿಂದಲೇ ಈ ಚಕ್ರರತ್ನದ ಸ್ಖಲನವೆಂದರಿತು ಮತ್ತಿನ್ನೆಷ್ಟು ಉರಿದೇಳಬೇಡ? ಅತನಲ್ಲಿ ಏರಿದ ಕೋಪ ವಿವೇಕವನ್ನು ಕಳೆದುಕೊಳ್ಳುವಂತೆ ಮಾಡಿತು. ಪುರೋಹಿತನು ಅಷ್ಟಕ್ಕೇ ಸುಮ್ಮನಿರದೆ, 'ಭರತೇಶ್ವರ ನಿನ್ನ ಪಾದಪದ್ಮಗಳಿಗೆರಗಿ ನಿನ್ನ ತಮ್ಮಂದಿರು ಸುಖವನ್ನನುಭವಿಸಲಿ; ಇಲ್ಲವೆ ಪುರುಪರಮೇಶ್ವರನ ಪಾದಪದ್ಮಗಳಿಗೆರಗಿ ತಪಸ್ಸನ್ನು ಕೈಗೊಳ್ಳಲಿ!' ಹೀಗೆ ಹೇಳಿ ಕಳುಹಿಸಿ ಎಂದು ಹೇಳಿಕೊಟ್ಟ ಮಾತಿಗೆ ಭರತ ಕಿವಿಗೊಟ್ಟ. ಕೋಪದಿಂದ ತಹತಹಿಸಿದ. ಆತನ ಕೋಪಾವೇಶದಲ್ಲಿ ಆದ ಅಂಗಾಂಗಗಳ ಚಿತ್ರಣ–ಉದ್ರೇಕಗೊಂಡ ಮಾತುಗಳು ಸಂದರ್ಭೌಚಿತ್ಯವನ್ನು ಸಾರುತ್ತವೆ. ಉದಾಹರಣೆಗೆ :

ವಿಕಸಿತನಾಸಾಪುಟ ನತಿ | ವಿಕಂಪಿತಾತಾಮ್ರದಶನವಸನಂ ಬದ್ಧ
ಭ್ರುಕುಟಿಪುಟಂ ಭರತೇಶ್ವರ | ನಕಾಲ ಯಮರಾಜಲೀಲೆಯಂ ಕೈಕೊಂಡಂ
(ಆದಿಪು. xiv-೨೪)

ಅವನ ಮೂಗಿನ ಹೊಳ್ಳೆಗಳು ವಿಕಸಿತವಾದವು. ಕೆಂಪಾದ ತುಟಿಗಳು ವಿಕಂಪಿತವಾದವು. ಹುಬ್ಬು ಗಂಟಿಕ್ಕಿದುವು. ಆಗ ಭರತೇಶ್ವರನು ಅಕಾಲ ಯಮರಾಜನ ಲೀಲೆಯನ್ನು ಕೈಗೊಂಡನು.

ಪಂಪನು ಈ ಭಾಗದುದ್ದಕ್ಕೂ ಪೂರ್ವಪುರಾಣದ ಭಾಗವನ್ನು ಸೊಗಸಾಗಿ ಸಂಗ್ರಹಿಸಿದ್ದಾನೆ. ಕೆಲವೆಡೆ ತನ್ನದೇ ಆದ ವರ್ಣನೆಯನ್ನು ನೀಡಿದ್ದಾನೆ. ಅದಕ್ಕೆ ಮೇಲಿನ ಪದ್ಯವೂ ಉದಾಹರಣೆಯಾಗಿದೆ. ಮುಂದೆ ಭರತನ ಮಾತು ಹೀಗೆ ಸಾಗುತ್ತದೆ : 'ಹೇಗೂ ತಾವು ಸೋದರರು. ಕೊಲೆಗೆ ಪಾತ್ರರಾಗುವುದಿಲ್ಲವೆಂಬ ಮನೋಬಲವಿರಬೇಕು . . . . ಅವರನ್ನು ಸೋಲಿಸಲು ತನ್ನಿಂದಾಗದೇ? ಮತ್ತೆಲ್ಲ ಅರಸುಗಳೆರಗಿದರೂ ತನಗೆ ಬಂದ ಭಾಗ್ಯವೇನು? ಬಾಹುಬಲಿ ಇದಕ್ಕೆ ಹೊರತೆ? ಪೌದನಪುರವು ತನ್ನಾಳ್ವಿಕೆಗೊಳಪಡದೆ, ಮತ್ತಿತರ ಪಟ್ಟಣಗಳೆಲ್ಲ ವಶಕ್ಕೆ ಬಂದರೇನುಪಯೋಗ? ಬಾಹುಬಲಿ ಮುಂತಾದವರು ತನ್ನನ್ನು ಅಲಕ್ಷಿಸಿದಾಗ ಯಾವುದನ್ನು ಸೋಲಿಸಿದರೆ ಏನು? ಈ ಭೂಮಂಡಲವು ಆಜ್ಞಾಧೀನವಾಗಿದ್ದರೂ ಏನು ಉಪಯೋಗ? ಎಂದು ಕೋಪಾಟೋಪದಿಂದ ನುಡಿದ ಭರತನಿಗೆ, ಪುರೋಹಿತನು ಪತ್ರವೊಂದನ್ನು ಬರೆದು ತಮ್ಮಂದಿರಲ್ಲಿಗೆ ದೂತರನ್ನು ಕಳಿಸುವಂತೆ ತಿಳಿಸಿದನು. ದೂತರು ತಮ್ಮಂದಿರಲ್ಲಿಗೆ ಸಂದೇಶವನ್ನು ತಲುಪಿಸಿದರು.

ಎನಗೊರ್ವಂಗುಪಭೋಗ್ಯಮಲ್ತು ವಸುಧಾಸಾಮ್ರಾಜ್ಯಮೋರಂತೆ ನಿ
ಮ್ಮನಿಬರ್ಗಂ ಪಿರಿಯಣ್ಣನೇಂ ಜನಕನೇನೆಂಬೊಂದು ಕೊಂಡಾಟದಿಂ
ವಿನಯಂಸಾಲ್ವುದು ತಾಮುಮಾಮುಮೊಡನಿರ್ಪ್ಪಂ ಬಪ್ಪುದೆಂಬೀಶಶಾ
ಸನಮಂ ನೆತ್ತಿಯೊಳಾಂತು ಬನ್ನಿಮೆಱಗಿಂ ಚಕ್ರೇಶಪಾದಾಬ್ಜದೊಳ್ (ಆದಿಪು. xiv-೩೧)

'ನನಗೊಬ್ಬನಿಗೇ ಈ ಸಾಮ್ರಾಜ್ಯವು ಉಪಭೋಗಾರ್ಹವಲ್ಲ. ಇದು ನಿಮಗೂ ಸಂಬಂಧಪಟ್ಟುದೇ. ಹಿರಿಯಣ್ಣನೇನು, ತಂದೆಯೇನು ಇಬ್ಬರೂ ಸಮಾನರು ಎಂಬ ಸದ್ಬುದ್ಧಿಯಿಂದ ಅವನಲ್ಲಿ ವಿನಯವನ್ನು ತಳೆಯಿರಿ. ನಾನೂ ನೀವೂ ಒಡನಿದ್ದುಕೊಂಡು ಬಾಳೋಣ ಎಂಬ ರಾಜನ ಆಜ್ಞೆಯನ್ನು ತಲೆಯಲ್ಲಿ ಹೊತ್ತು ಚಕ್ರೇಶನಾದ ಭರತನ

ಪಾದಪದ್ಮಗಳಿಗೆರಗಲು ಬನ್ನಿ' ಎಂದು ನುಡಿದ ದೂತನ ಮಾತುಗಳನ್ನು ಕೇಳಿ ಅವರನ್ನು ಗೌರವಿಸಿ ಬೀಳ್ಕೊಟ್ಟರು.

ಆದಿಪುರಾಣದಲ್ಲಿ ಭರತನ ಸಹೋದರರು ದೂತನ ಮಾತಿಗೆ ಏನೊಂದನ್ನೂ ಪ್ರತಿಯಾಗಿ ಹೇಳಿ ಕಳಿಸುವುದಿಲ್ಲ. ಆದರೆ ಪೂರ್ವಪುರಾಣದಲ್ಲಿ ಈ ಸಂದರ್ಭದಲ್ಲಿ ಸೋದರರು ದೂತರನ್ನು ಕುರಿತು ಈ ಮಾತುಗಳನ್ನು ಆಡುವರು—'ತಂದೆಯು ಇಲ್ಲದ ಕಾಲದಲ್ಲಿ ಸಹೋದರರಿಗೆ ಅಣ್ಣನು ಪೂಜ್ಯನೆಂದು ಮಹಾರಾಜನು (ಭರತನು) ಹೇಳಿದ ಮಾತು ಸತ್ಯವಾದುದು. ಅದು ನಮಗೆ ಇಷ್ಟವೂ ಆಗಿದೆ. ಆದರೆ ಸರ್ವಜ್ಞನಾದ ನಮ್ಮ ಈ ತಂದೆಯು ಪ್ರತ್ಯಕ್ಷವಾಗಿ ವಿರಾಜಿಸುತ್ತಿದ್ದಾನೆ. ಅವನು ನಮಗೆ ಮಾನ್ಯಸಾಕ್ಷಿಯಾಗಿದ್ದಾನೆ. ನಮ್ಮ ಈ ಐಶ್ವರ್ಯವು ಅವನಿಂದ ದೊರೆತುದಾಗಿದೆ. ಆದುದರಿಂದ ಈ ವಿಷಯದಲ್ಲಿ ತಂದೆಯ ಚರಣದ ಆಜ್ಞಾಧೀನರಾಗಿರುತ್ತೇವೆ. ಸ್ವೇಚ್ಛಾಚಾರಿಗಳಾಗಿರುವುದಿಲ್ಲ. ಭರತೇಶ್ವರನು ನಮಗೇನೂ ಕೊಡತಕ್ಕುದೂ ಇಲ್ಲ; ನಮ್ಮಿಂದ ತೆಗೆದುಕೊಳ್ಳತಕ್ಕುದೂ ಇಲ್ಲ. ಚಕ್ರವರ್ತಿಯಾಗಿರುವ ಭರತರಾಜನು ವಿಭಾಗಕ್ಕೋಸ್ಕರ ನಮ್ಮನ್ನು ಕರೆಯುವುದಕ್ಕೆ ಕಳುಹಿಸಿರುವುದರಿಂದ ನಾವು ಬಹು ಸಂತುಷ್ಟರಾಗಿದ್ದೇವೆ. ಕಂಠದವರೆಗೆ ತೃಪ್ತಿಯುಳ್ಳವರೂ ಆಗಿದ್ದೇವೆ (ಪೂರ್ವಪು.xxxiv-೬೨ ರಿಂದ ೬೫). ಪಂಪನು ಈ ಮಾತುಗಳಲ್ಲಿರುವ ವ್ಯಂಗ್ಯಲೇಪನವನ್ನು ತೆಗೆದುಹಾಕಿ ದೂತರು ಹೋದನಂತರ ಸೋದರರು ಆಡುವ ಮಾತನ್ನು ಮತ್ತಷ್ಟು ಪರಿಸ್ಫುಟಗೊಳಿಸಿದ್ದಾನೆ :

> ಪಿರಿಯಣ್ಣಂ ಗುರು ತಂದೆಯೆಂದೆಱಗುವಂ ಮುನ್ನೆಲ್ಲಮಿನ್ನೀಗಳಾ
> ಳರಸೆಂಬೊಂದು ವಿಭೇದಮಾದೊಡೆಱಕಂ ಚಿಃ ಕಷ್ಟಮಲ್ತೇ ವಸುಂ
> ಧರೆಗಯ್ಯಂ ದಯೆಗೆಯ್ಯೆ ಮುಂ ಪಡೆದುದರ್ಕಿಂತೀತನೊಳ್ ತೊಟ್ಟ ಕಿಂ
> ಕರಭಾವಂ ನಮಗಕ್ಕಿಗೊಟ್ಟು ಮಡಗೂೞುಣ್ಬಂದಮಂ ಪೋಲದೇ (ಆದಿಪು. xiv-೩೨)

ಹಿರಿಯಣ್ಣನು ಗುರು, ತಂದೆ ಎಂದು ತಿಳಿದು ಮೊದಲು ನಮಸ್ಕರಿಸುವುದು ಯುಕ್ತ. ಆದರೆ ಈಗ ಆಳು-ಅರಸ ಎಂಬ ಭೇದಭಾವವುಂಟಾದುದರಿಂದ ಸ್ನೇಹ ತೋರಿಸುವುದು ಕಷ್ಟವಲ್ಲವೇ? ಭೂಮಿಯನ್ನು ತಂದೆಯು ದಯೆಮಾಡಿಕೊಟ್ಟ ಕಾರಣ ನಾವು ಅದನ್ನು ಹಿಂದೆ ಪಡೆದೆವು. ಈಗ ನಾವು ಭರತನಲ್ಲಿ ಕಿಂಕರಭಾವವನ್ನು ತೋರಿಸಿದರೆ ನಾವೇ ಅಕ್ಕಿ ಕೊಟ್ಟು, ಅವನು ತಿಂದು ಮಿಕ್ಕ ಎಂಜಲುಂಡಂತಾಗುವುದಿಲ್ಲವೆ? ಎಂದು ತಮ್ಮಲ್ಲಿ ಆಲೋಚಿಸಿದರು. ಮೂಲದಲ್ಲಿಲ್ಲದ ಸೊಗಸು ಇಲ್ಲಿ ಮೈದಳೆದಿದೆ. 'ಅಕ್ಕಿಗೊಟ್ಟು ಮಡಗೂೞುಣ್ಬಂದಮಂ ಪೋಲದೇ?' ಎಂಬ ಮಾತುಗಳು ಪಂಪನಲ್ಲಿ ದೇಸೀಸೌಂದರ್ಯದೊಂದಿಗೆ ಶಕ್ತಿಯುತವಾಗಿ ಬಂದಿವೆ. ಪಂಪನ ವರ್ಣನೆ ಜಿನಸೇನರ ವರ್ಣನೆಗಿಂತ ಹೆಚ್ಚು ತೀಕ್ಷ್ಣವಾದುದು.

'ಇಂದ್ರನಿಂದ ನಮಸ್ಕೃತವಾದ ಪಾದಕಮಲಗಳುಳ್ಳ ಪುರುರಾಜನ ಮಕ್ಕಳು ನಾವು. ಪುರಷಾರ್ಥವನ್ನು ಉಜ್ಜ್ವಲಗೊಳಿಸದೆ ಬಿಡೆವು. ಈ ಭೂಭಾರವು ನಮಗೆ ಹೊಟ್ಟೆನ ಹೊರೆಗೆ ಎಣೆ' ಎಂದು ಭಾವಿಸಿ ಸಮವಸರಣಕ್ಕೆ ಹೊರಟು, ಆದಿದೇವನ ಮುಂದೆ ನಡೆದುದನ್ನು ಸಂಕ್ಷೇಪವಾಗಿ ನಿವೇದಿಸಿ, ನಿನ್ನ ಪಾದಾರವಿಂದವೇ ಶರಣೆಂದು ಅನ್ಯರಿಗೆರಗೆವೆಂದು ತಿಳಿಸಿ ಭರತನ ಅನುಜರು ದೀಕ್ಷಿತರಾದರು. ಪೂರ್ವಪುರಾಣದಲ್ಲಿ ವೃಷಭನ ಮಕ್ಕಳು ಸ್ವಾಮಿಯ

ಬಳಿಗೆ ಬಂದು ಸ್ವಾಮಿಯ ದಿಗ್ದರ್ಶನವನ್ನು ಕೇಳುವರು. ಆಗ ಸ್ವಾಮಿಯು ಅವರಿಗೆ ಪ್ರತ್ಯಕ್ಷವಾಗಿ ವಾಚ್ಯವಾಗಿ ವೈರಾಗ್ಯಪರವಾದ ಸಲಹೆಗಳನ್ನು ಮುಂದಿನಂತೆ ನೀಡುವನು. 'ಎಲೈ ಕುವರರೆ! ನಶ್ವರವಾದ ರಾಜ್ಯದಿಂದೇನು ಪ್ರಯೋಜನ? ಚಂಚಲವಾದ ಬಾಳು ವಿಕೆಯಿಂದೇನು ಪ್ರಯೋಜನ? ಐಶ್ವರ್ಯಲೇಪದಿಂದ ದೂಷಿತವಾದ ಯೌವನ ಮದೋನ್ಮತ್ತತೆಯಿಂದೇನು ಪ್ರಯೋಜನ? ಬಹುಕಾಲದವರೆಗೆ ಭೋಗಿಸಿದರೂ ಯಾವ ಪದಾರ್ಥಗಳಿಂದ ತೃಪ್ತಿಯಿಲ್ಲವೋ ಅದಕ್ಕೆ ಬದಲಾಗಿ ಗ್ಲಾನಿಯೇ ಉಂಟಾಗುವುದೋ, ವಿಷಮಿಶ್ರವಾದ ಭೋಜನಗಳಂತೆ ಭೋಗಿಸಲ್ಪಟ್ಟ ಅಂತಹ ವಿಷಯಗಳು ಸಾಕು' ಇತ್ಯಾದಿ ವಿವರಗಳು ೧೧ ಶ್ಲೋಕಗಳಲ್ಲಿ (xxxiv-೧೧೪ ರಿಂದ ೧೨೪) ಬಂದಿವೆ. ಪಂಪನು ವೃಷಭನ ಉಪ ದೇಶದ ವಿಚಾರವನ್ನು ಕೈಬಿಟ್ಟಿದ್ದಾನೆ. ಪಂಪನ ಮಾರ್ಪಾಡು ಶ್ಲಾಘ್ಯವಾದುದು. ಪಂಪನ ಪ್ರಕಾರ ಸೋದರರು ಸ್ವಯಂ ನಿರ್ಧಾರದಿಂದ ಸಂನ್ಯಾಸಿಗಳಾದ ಪ್ರಾಜ್ಞರು.

ಪುರೋಹಿತನ ಮಾತು ನಿಜವೇ ಆಯಿತು. ಭರತನ ಅನುಜರು ಮಾನನಿಧಿಗಳೇ! ಛಲವಾದಿಗಳೇ! ಇದರಲ್ಲಿ ಸಂಶಯವಿಲ್ಲ.

ಭರತಾನುಜರ ತಪಸ್ಸಿನ ವರ್ಣನಾವಿವರಣೆಯನ್ನು ಪಂಪನು ಕೈಬಿಟ್ಟು, ಈ ಭಾಗದ ಸಾರವೆನಿಸುವ ಭರತ ಬಾಹುಬಲಿಗಳ ವ್ಯಾಯೋಗಕ್ಕೇ ಹೆಚ್ಚಿನ ಗಮನ ನೀಡಿದ್ದಾನೆ.

ಭರತನು ತನ್ನ ಅನುಜರು ದೀಕ್ಷಿತರಾದುದನ್ನು ತಿಳಿದು ಮೆಚ್ಚಿಕೊಂಡನು. ಆದರೆ 'ಈ ತಮ್ಮಂದಿರು ಛಲದಿಂದ ಎರಗದೆ ದೀಕ್ಷಿತರಾದರು. ಇನ್ನು ಬಾಹುಬಲಿಯನ್ನು ಎರಗಿಸುವುದಾದರೂ ಹೇಗೆ?' ಎಂಬ ಭೀತಿ ಭರತನಿಗೆ ತನಗರಿವಿಲ್ಲದಂತೆ ಮೂಡಿ ಬಂದಿತು. ಅಲ್ಲದೆ ಪುರೋಹಿತನಾದರೂ ಬಾಹುಬಲಿಯ ಬಗೆಗೆ ವಿಶೇಷವಾಗಿ ಹೇಳಿರುವನಲ್ಲವೇ? ಸಾಮದಿಂದ ಬಾಹುಬಲಿಯನ್ನು ಸಂತಯಿಸಲಾಗದಿದ್ದರೆ ಚಕ್ರರತ್ನವಿದ್ದೇ ಇದೆಯಲ್ಲ ಎಂದು ಮೊದಲೇ ನಿರ್ಧರಿಸಿಕೊಂಡವನಂತೆ ಸಮಾಧಾನಪಟ್ಟುಕೊಂಡನು.

ಬಾಹುಬಲಿಯ ಬಳಿಗೆ ಹೋದ ದೂತನ ಬಗೆಗೆ ವಿಶೇಷ ವಿವರ ಬರುತ್ತದೆಯೇ ಹೊರತು ಉಳಿದ ಸಹೋದರರ ಬಳಿಗೆ ಹೋದ ದೂತನ ಬಗೆಗೆ ಪಂಪನು ವಿವರವನ್ನು ನೀಡಿಲ್ಲ. ಬಾಹುಬಲಿಯ ಕಡೆಗೆ ಹೋದ ದೂತನು ವಿಶೇಷ ಪ್ರತಿಭೆಯುಳ್ಳವನು; ಕೊಂಕುನುಡಿಯಲ್ಲಿ ನುರಿತವನು; ನಂಬಲು ಯೋಗ್ಯವಾದ ಮಾತುಳ್ಳವನು; ಎಲ್ಲ ಭಾಷೆಗಳಲ್ಲಿ ಪರಿಚಯವುಳ್ಳವನು; ವಯೋಬುದ್ಧಿಗಳಲ್ಲಿ ವೃದ್ಧನು; ಪ್ರಸಿದ್ಧನು. ಆ ದೂತನು ಚತುರಂಗ ಬಲೋತ್ಸಾಹದಿಂದ ಕೂಡಿದ ಪೌದನಪುರವನ್ನು ಪ್ರವೇಶ ಮಾಡಿದನು. ದಕ್ಷಿಣಾಂಕನು ಪೌದನಪುರಕ್ಕೆ ಪ್ರವೇಶಮಾಡಿದಾಗ ದಾರಿಯುದ್ದಕ್ಕೂ ಆತನು ಕಂಡ ಪರಿಸರವನ್ನು ಜಿನಸೇನರು ೨೪ ಪದ್ಯಗಳಲ್ಲಿ ವಿವರಿಸಿದ್ದರೆ (xxxv-೨೧ ರಿಂದ ೪೪), ಪಂಪನು ಅದರ ಭಾವವನ್ನು ಒಂದೇ ಪದ್ಯದಲ್ಲಿ ಹೇಳಿ ಮುಗಿಸಿದ್ದಾನೆ. ಪೌದನಪುರ ವೀರೋಚಿತ ಶಿಖಾಮಣಿಗಳ ಸ್ಥಾನವೆಂಬಂತೆ ವರ್ಣನೆಯನ್ನು ತಂದಿದ್ದಾನೆ.

ಬಾಹುಬಲಿಯನ್ನು ನೋಡುತ್ತಿದ್ದಂತೆಯೇ ಆ ಸೂಕ್ಷ್ಮಮತಿಯಾದ ದೂತ, ಭರತ ಬಾಹುಬಲಿಯರ ನಡುವಣ ಅಂತರವನ್ನು ಒಂದೇ ಗಳಿಗೆಯಲ್ಲಿ ಗುರುತಿಸಿಕೊಂಡಂತೆ ಮನದಲ್ಲಿ—

ಪುರುಪರಮೇಶ್ವರ ಪುತ್ರಂ | ಭರತೇಶ್ವರ ಚಕ್ರವರ್ತ್ತಿಗನುಜನೆನಲ್ ಸುಂ
ದರ ರೂಪನೀ ಕುಮಾರನ್ | ದೊರೆ ಚಕ್ರಿಗಮೆಸೆಯದಿನಿತು ತೇಜಸ್ಫುರಿತಂ (ಆದಿಪು. xiv-೪೫)

ಎಂದು ಭರತನಿಗಿಂತಲೂ ಈತನೇ ತೇಜೋಮಯಿ ಎಂಬ ತೀರ್ಮಾನಕ್ಕೆ ಬರುತ್ತಾನೆ. ಪತ್ರದ ಒಕ್ಕಣೆಯ ಧಾಟಿ, ಹಿಂದೆ ಕಳುಹಿಸಿದ ಸೋದರರ ಪತ್ರದ ಒಕ್ಕಣೆಗಿಂತಲೂ ಬೇರೆ. ಮೊದಲೆರಡು ಸಾಲುಗಳಲ್ಲಿ ಷಟ್ಖಂಡವಿಜಯಚಕ್ರಿಯು ತನಗೆ ಆಶೀರ್ವಚನವನ್ನು ಪ್ರೀತಿಯ ಆಲಿಂಗನವನ್ನು ಸೂಚಿಸಿದ ಭಾಗವನ್ನು ಕೇಳಿದ ಬಾಹುಬಲಿಯು ಪತ್ರದ ಒಕ್ಕಣೆಯನ್ನು ಅಲ್ಲಿಗೇ ನಿಲ್ಲಿಸಿ, ಭರತನ ಯೋಗಕ್ಷೇಮವನ್ನು ವಿಚಾರಿಸಿಕೊಂಡನು. 'ಈಗಲಾದರೂ ನಾವು ಸ್ಮರಣೆಗೆ ಬಂದೆವಲ್ಲ. ಆತನು ದಿಗ್ವಿಜಯಿಯಾಗಿ ಹೊಗಳಿಕೆಗೆ ಪಾತ್ರರಾದುದನ್ನು ಕೇಳಿ ಸಂತುಷ್ಟರಾಗಿದ್ದೇವೆ' ಎಂದು ಸಮಾಧಾನಚಿತ್ತದಿಂದ ನುಡಿದನು.

ಇನ್ನು ಹೇಳುವುದೇನಾದರೂ ಇದೆಯೋ ಎಂದಾಗ ದೂತನು ಭರತನ ದಿಗ್ವಿಜಯ ಯಾತ್ರೆಯನ್ನು ಸಂಕ್ಷಿಪ್ತವಾಗಿ ಬಣ್ಣಿಸಿ ಆತನ ವಿಜಯಪ್ರಶಸ್ತಿಯನ್ನು ವಿವರಿಸಿದನು. ಈ ಭಾಗದಲ್ಲಿ ಕವಿ ಮೂಲದಲ್ಲಿರುವಂತೆ ಭರತನ ವಿಜಯಯಾತ್ರೆಯ ಸಿಂಹಾವಲೋಕನ ವನ್ನು ಮಾಡಿಸಿದ್ದಾನೆ. ಪೂರ್ವಪುರಾಣದಲ್ಲಿ ಪತ್ರದ ಒಕ್ಕಣೆ ಓದುವುದಕ್ಕಿಂತ ಮುನ್ನವೇ ದೂತನನ್ನು ಕುಳ್ಳಿರಿಸಿ, ಬಾಹುಬಲಿಯು ಭರತನ ಬಗೆಗೆ ವಿಚಾರಿಸಿಕೊಳ್ಳುವ ಭಾಗ ಹೀಗೆ ಬರುತ್ತದೆ: 'ಇಷ್ಟು ದಿನ ಕಳೆದ ಮೇಲಾದರೂ ನಮ್ಮನ್ನು ಚಕ್ರವರ್ತಿಯು ನೆನೆದಿರುವನಲ್ಲ . . . ಹಲವಾರು ಚಿಂತೆಗಳಲ್ಲಿ ಮುಳುಗಿರುವ ಲೋಕಪಾಲಕನಾದ ಚಕ್ರವರ್ತಿ ಕ್ಷೇಮವೆ?' ಪಂಪನು ಪತ್ರದ ಪೂರ್ವಪೀಠಿಕಾ ಭಾಗದ ನಂತರ ಈ ಮಾತುಗಳನ್ನು ಕನ್ನಡಿಸಿರುವನು.

ಮುಂದೆ ದೂತನಾಡಿದ ಮಾತು ಬಾಹಬಲಿಯನ್ನು ಕೆರಳಿಸುತ್ತದೆ. ಪತ್ರವನ್ನು ಪೂರ್ಣ ಓದಲಾಗಲೇ ಇಲ್ಲ (ಪೂರ್ವಪುರಾಣದಲ್ಲಿ ಭರತನ ಪತ್ರವನ್ನು ಓದುವ ಪ್ರಸಂಗವೇ ಬರುವುದಿಲ್ಲ). ಆ ಪತ್ರದ ಸಾರಾಂಶವೆಂಬಂತೆ ದೂತನು ಸಂದೇಶವನ್ನು ನಿರೂಪಿಸು ತ್ತಾನೆ :

ಎನ್ನಣುಗದಮ್ಮನಿಲ್ಲದೆ | ಬಿನ್ನನೆ ಸಾಮ್ರಾಜ್ಯಮಿನಿತುಮಾರೆಱಕಮುಮ
ತ್ಯುನ್ನತಿಯಲ್ತೆನಗಾತಂ | ಮುನ್ನೆಱಗದೊಡೆಂದು ಬೆಸಸಿಯಟ್ಟಿದನೆನ್ನಂ (ಆದಿಪು. xiv-೬೨)

'ನನ್ನ ಪ್ರೀತಿಯ ತಮ್ಮನಿಲ್ಲದೆ ನನ್ನೆಲ್ಲ ಸಾಮ್ರಾಜ್ಯವೂ ವ್ಯರ್ಥವೇ. ಅವನು ತನಗೆ ಮೊದಲು ಬಂದೆರಗದಿದ್ದರೆ, ಯಾರು ನನಗೆ ನಮಸ್ಕರಿಸಿದರೂ ಅದು ಅತಿಶಯವಾದ ಉನ್ನತಿಯನ್ನು ನನಗೆ ತಾರದು' ಎಂದು ನನ್ನನ್ನು ಕಳುಹಿಸಿದ್ದಾನೆ.

ಈ ಮಾತುಗಳನ್ನು ಕೇಳುತ್ತಿದ್ದಂತೆಯೇ ಇದುವರೆಗೆ ಭರತನ ದಿಗ್ವಿಜಯ ಸಾಹಸ ಗಳನ್ನು ಕುರಿತು ಕೇಳುತ್ತಿದ್ದ ಬಾಹುಬಲಿಗೆ ಉಂಟಾದ ಕೋಪದ ಸ್ಥಿತಿಯನ್ನು ಕವಿ ಚಿತ್ರಿ ಸಿರುವ ರೀತಿ ಹೀಗಿದೆ. ಕೋಪದಿಂದ ಬೆವರಿನ ಕಪೋಲತಲವು ಕೆಂಪಾಯಿತು. ಆಗ ಅವನು ಉರಿಯುತ್ತಿದ್ದ ಬೆಂಕಿಯುಂಡೆಯಂತೆ ದೀಪ್ತವಾದ ಕಪೋಲದಲ್ಲಿ ಉಕ್ಕಿ ಹರಿದ ಮದಜ ಲಾಟೋಪದಿಂದ ಭೀಷಣವೂ ಅರುಣವೂ ಆದ ಗಂಡ ಪ್ರದೇಶವುಳ್ಳ ಮದ್ದಾನೆಯನ್ನು ಅನುಕರಿಸಿದನು. ಕೋಪದ ಮುಗುಳುನಗೆ ಬೀರಿ, ದೂತನಿಗೆ ಗ್ರಹಚಾರ ಬಿಡಿಸುವವನಂತೆ ಆತನ ಸಾಮೋಪಾಯದ ಬಗೆಗೆ ಟೀಕಿಸಿದನು. 'ಚಕ್ರರತ್ನವನ್ನು ಮುಂದಿಟ್ಟುಕೊಂಡು ಮಾಡಿರುವ ದಿಗ್ವಿಜಯ ಅದೆಂತಹ ದಿಗ್ವಿಜಯ?' 'ಆದರೆ ನೀನು ಹೇಳಿದುದು ನಿನ್ನರಸನ

ವಿಜಯಸಾಹಸವನ್ನಲ್ಲ. ಆತನ ಬನ್ನವನ್ನೇ ಎತ್ತಿಹಿಡಿದಿರುವೆ. ಚಕ್ರವನ್ನು ಮುಂದಿಟ್ಟು ಭಿಕ್ಷೆ ಬೇಡಿ ತಂದುದನ್ನು ಅದೇನು ಹೊಗಳುವೆ?' ಈ ಮುಂತಾಗಿ ವ್ಯಂಗ್ಯಲೇಪನವನ್ನು ತನ್ನ ವೀರಾಟ್ಟಹಾಸದಲ್ಲಿ ಸೇರಿಸಿ ನುಡಿದನು. ಮುಂದುವರಿದು—

ಹಿರಿಯಣ್ಣಂಗೆಱಗುವುದೇಂ | ಪರಿಭವವೇ ಕೀೞ್ ನೆತ್ತಿಯೊಳ್ ಬಾಳಂ ನಿ
ರ್ನೆರಮೂೞ್ ಚಲದಿನೆಱಗಿಸ | ಲಿರೆ ಭರತಂಗೆಱಗುವೆಱಕಮಂಜಮೆಯಲ್ತೇ
ವಿನಯಮುಮೆಱಕಮುಮಪ್ಪುದು | ಸನಾಭಿಗಳ್ ಸಂಗತಂಗಳಪ್ಪೊಡೆ ಪೆಸರ್ಗೊಂ
ಡನಿತಱೊಳೆನ್ನಂ ಸೈರಿಸ | ನೆನೆ ಭರತಂಗೆಱಗಿ ಲೋಕದಿಂ ನಗಿಸುವೆನೇ

(ಆದಿಪು. xiv-೭೫, ೭೬)

ಹಿರಿಯಣ್ಣನಿಗೆ ತಲೆಬಾಗುವುದು ಅವಮಾನವೇನಲ್ಲ. ಆದರೆ ಅವನು ನೆತ್ತಿಯ ಮೇಲೆ ಕತ್ತಿಯಿಂದ ಗೀರಿ ಅಕಾರಣವಾಗಿ ಛಲದಿಂದ ತಲೆ ಬಾಗಿಸಹೊರಟಿರುವನು. ದಾಯಾದಿಗಳು ಸಂಗತರಾಗಿ ಸ್ನೇಹದಿಂದಿದ್ದರೆ ಅವರಲ್ಲಿ ವಿನಯವೂ ಪ್ರೀತಿಯೂ ಯೋಗ್ಯವಾಗುತ್ತವೆ. ಆದರೆ ಭರತನು ನನ್ನ ಹೆಸರನ್ನು ಹೇಳಿದರೆ ಸಾಕು, ಸಹಿಸನು. ಆದಕಾರಣ ಅವನಿಗೆ ತಲೆಬಾಗಿ ನಾನು ಜನರು ನಗುವಂತೆ ಮಾಡಲೆ? ಅಲ್ಲದೆ 'ಭರತನು ಷಟ್ಖಂಡಮಂಡಿತವಾದ ಭೂಮಿಗೆ ಒಡೆಯನೆಂಬ ಒಡೆಯನ ಮಾತನ್ನು ದೂರದಿಂದಲೆ ಕೇಳಿ ಸಂತೋಷಿಸುವ ನಂಟೇ ಸಾಕು. ಕರೆದೊಡನೆ ಕಾರ್ಯವೇನು? ಜೀಯ, ಅರಸ, ದೇವ ಎನ್ನುವುದಕ್ಕೆ, ಆಳೆಂಬ ದೈನ್ಯಕ್ಕೆ ಎಲ್ಲೈ ದೂತನೆ, ನಾನೇಕೆ ತನುವನ್ನೊಡ್ಡಬೇಕು? ಹಾಗೆ ತನುವನ್ನೊಡ್ಡದಂತೆ ದೇವದೇವನೂ ಪುರುದೇವನೂ ಎನಿಸಿದ ಆದಿದೇವನು ದಯಪಾಲಿಸಿದ ನೆಲಕ್ಕಾಗಿ ಯಾರೊಡನೆಯೂ ಸ್ಪರ್ಧೆ ಬೇಕಿಲ್ಲ. ರಾಜಾಧಿರಾಜತ್ವವನ್ನು ಏರಿಸಿಕೊಂಡು ಚಕ್ರವು ಹುಟ್ಟಿದುದರಿಂದ ಚಕ್ರೇಶ್ವರನೆನಿಸಿಕೊಂಡು ವೃಥಾ ನನ್ನ ಮೇಲೆ ಸಾಮರ್ಥ್ಯವನ್ನು ತೋರುವುದೇ? (xvi-೭೭ ರಿಂದ ೭೯) ಎಂದು ಇಷ್ಟೆಲ್ಲವನ್ನೂ ಆರ್ಭಟಿಸಿ ಮುಂದುವರಿದು—

ದೊರೆಯಲ್ಲದಂಗೆ ನುಡಿವುದು | ಪುರುಳಿಲ್ಲದ ಮಾತನೆಮ್ಮೊಳಂ ನುಡಿವುದೆ ಪೇಳ್
ಎರಲೆಗೆ ಪಾಡುವ ಗೋರಿಯ | ನರಣ್ಯದೊಳ್ ಮೃಗವಿರೋಧಿಗಂ ಪಾಡುವುದೇ

(xiv-೮೦)

ಪುರುತನಯರ್ ಭುಜಬಲಿಯುಂ | ಭರತನುಮೆನೆ ದೊರೆಗೆ ವಂದೊಡಾರಳವುಮನೀ
ಧರೆಯಱಿಯಲೊಡಂ ತೂಗಲ್ | ಧರೆಗೆ ತುಲಾದಂಡಮಲ್ತೆ ಮದ್ಭುಜದಂಡಂ || (xiv- ೮೧)

'ಸಮರ್ಥನಲ್ಲದವನೊಡನೆ ಅರ್ಥವಿಲ್ಲದ ಮಾತನ್ನು ಆಡಲಿ. ನಮ್ಮೊಡನೆಯೂ ಹಾಗೆ ಆತ ಮಾತನಾಡಬಹುದೆ? ಜಿಂಕೆಯನ್ನು ಹಿಡಿಯುವುದಕ್ಕಾಗಿ ಹಾಡುವ ಗಾನವನ್ನು ಸಿಂಹದ ಎದುರಿಗೆ ಹಾಡಬಹುದೆ? ಭುಜಬಲಿಯೂ, ಭರತನೂ ಪುರುತನಯರು ಹೀಗಿರುವಾಗ ಹೋಲಿಕೆಗೆ ಬಂದರೆ ಯಾರ ಶಕ್ತಿಯು ಈ ಭೂಮಿಯಲ್ಲಿ ಅಧಿಕವಾದುದೆಂದು ನಿಶ್ಚಯಿಸಲು ಭುಜಬಲಿಯ ಬಾಹುದಂಡವು ತಕ್ಕಡಿಯಾಗಿ ನಿಲ್ಲುವುದು.' ಹೀಗೆ ಕಡ್ಡಿ ಎರಡು ತುಂಡು ಮಾಡಿದಂತೆ, ನಿರ್ದಾಕ್ಷಿಣ್ಯವಾಗಿ ಭರತನನ್ನು ಖಂಡಿಸಿದನು. ಬಾಹುಬಲಿಗೆ ಭರತನಲ್ಲಿ ಅಸೂಯೆಯಿಲ್ಲವಾದರೂ ಚಕ್ರಾಧೀಶನಾದ ತನಗೆ ಬಂದು ಎರಗು ಎಂದು ಹೇಳಿಕಳುಹಿಸಿದ ನುಡಿಯೊಂದು ಬಾಹಬಲಿಯ ಕೋಪವನ್ನು ಕೆರಳಿಸಿ ಅಣ್ಣನೆಂಬ ವಾತ್ಸಲ್ಯವನ್ನು ಕಿತ್ತೊಗೆಯಿಸಿ, ಇಷ್ಟೆಲ್ಲಾ ಕಟೂಕ್ತಿಗಳನ್ನಾಡಿಸಿತು. ಮಾನವಸಹಜವಾದ ರಾಗ

ದ್ವೇಷಾದಿ ಭಾವಗಳ ಪ್ರತಿರೂಪ ಇಲ್ಲಿ ಪ್ರಭಾವಕಾರಿಯಾಗಿ ಸಾಗಿದೆ.

ಈ ಭಾಗದಲ್ಲಿ ಪಂಪನು ಹೆಜ್ಜೆಹೆಜ್ಜೆಗೂ ಪೂರ್ವಪುರಾಣದ ಅನುವರ್ತಿಯಾಗಿದ್ದಾನೆ. ಆದರೂ ಇಲ್ಲಿಯ ನುಡಿ ಇನ್ನೂ ಸ್ಪಷ್ಟ. ಮೂಲದಲ್ಲಿ 'ಯುದ್ಧಭೂಮಿಯೇ ನಮ್ಮಿಬ್ಬರ ಪರಾಕ್ರಮಕ್ಕೆ ಒರೆಗಲ್ಲು' ಎಂದಿದ್ದರೆ ; ಪಂಪನ ಮಾತು 'ತೂಗಲ್ ಧರೆಗೆ ತುಲಾದಂಡ ಮಲ್ತೆ ಮದ್ಭುಜದಂಡಂ' ಎಂಬುದು ಇನ್ನೂ ಹರಿತಗೊಂಡು ಬಂದಿದೆ.

ಬಾಹುಬಲಿ ಭರತನಿಗೆ ತನ್ನೊಡನೆ ಯುದ್ಧಕ್ಕೆ ಬರುವಂತೆ ಆಹ್ವಾನವನ್ನು ನೀಡಿ ದೂತನನ್ನು ಕಳುಹಿಸಿಕೊಟ್ಟನು. ವಿವೇಕಿಯಾದ ದೂತನು ಬಂದು ಚಕ್ರವರ್ತಿಗೆ ನಮಸ್ಕರಿಸಿ—

ನಿನಗೀಷಟ್ಖಂಡಭೂಮಂಡಲಮೆಱಗಿದುದೇಂ ಸಾಲದೇ ಬೇಡದುದ್ವೃ
ತ್ತನೊಳಿನ್ನೇನೆಂದು ದೇವರ್ ಕಡೆಗಣಿಸಿರೆ ಸೌದರ್ಯ್ಯಮಂ ಕಾದ ಪೆಂಪೀ
ವನಧಿದ್ವೀಪಾಂತರಾಳಕ್ಷಿತಿಯೊಳೆಸೆಗುವಾಕ್ಷೇಪಮಂ ಮಾಣ ನೀಂ ಕ್ರೋ
ಧನನಾಗಲ್ ನಿನ್ನ ತಮ್ಮಂ ನಿನಗೆಱಗನಿದಂ ನಂಬು ರಾಜಾಧಿರಾಜಾ (ಆದಿಪು. xiv-ಅ೪)

'ರಾಜಾಧಿರಾಜ, ನಿನಗೆ ಷಟ್ಖಂಡಭೂಮಂಡಲವು ಎರಗಿದುದು ಸಾಲದೆ? ಅವಿನೀತ ನಾದ ತಮ್ಮನಿಂದ ಆಗಬೇಕಾದುದೇನೆಂದು ಅವನನ್ನು ಕಡೆಗಣಿಸು. ಒಳ್ಳೆಯ ಸೋದರತನ ವನ್ನು ಕಾಯ್ದುಕೊಂಡ ನಿನ್ನ ಹಿರಿಮೆಯು ಸಮುದ್ರಪರಿವೃತವಾದ ದ್ವೀಪಗಳೊಳಗಣ ಭೂಮಿಯಲ್ಲಿ ಪ್ರಸಿದ್ಧವಾಗುವುದು. ನಿಂದೋಕ್ತಿಯನ್ನು ತಪ್ಪಿಸಿಕೊ. ನೀನು ಕೋಪಿಸಿ ಕೊಂಡರೆ ನಿನ್ನ ತಮ್ಮನು ನಿನಗೆರಗನು. ನನ್ನ ಈ ಮಾತನ್ನು ನಂಬು.'

ಮೂಲದಲ್ಲಿಲ್ಲದ ದಕ್ಷಿಣಾಂಕನ ಈ ಬುದ್ಧಿವಾದದ ಮಾತು ಪಂಪನ ಸ್ವಂತಿಕೆಯ ಸುಂದರ ಕಲ್ಪನೆಯಾಗಿದೆ. ಸಮಯೋಚಿತವಾಗಿದೆ. ರಾಜಕೀಯ ವ್ಯವಹಾರದ ಇಂಗಿತಜ್ಞತೆ ಯುಳ್ಳುದಾಗಿದೆ.

ಎರಡೂ ಕಡೆಯ ಸಮರಸನ್ನಾಹವನ್ನು, ರಣೋತ್ಸಾಹವನ್ನು ಪಂಪನು ವೀರೋಚಿತ ವಾಗಿ ವರ್ಣಿಸಿದ್ದಾನೆ. ೧೪ನೇ ಆಶ್ವಾಸದ ೮೭ರಿಂದ ೧೦೦ನೆಯ ಪದ್ಯದವರೆಗೆ ಅದನ್ನು ವರ್ಣಿಸಿದ್ದಾನೆ. ಪೂರ್ವಪುರಾಣದಲ್ಲಿ ಈ ಸಂದರ್ಭದಲ್ಲಿ ಸೈನಿಕರ ಮತ್ತು ಅವರ ಪ್ರಾಣಕಾಂತೆಯರ ನಡುವೆ ಪ್ರಣಯ ಸರಸಸಲ್ಲಾಪಗಳ ವರ್ಣನೆ ಬರುತ್ತದೆ. ೧೦೯ ಶ್ಲೋಕಗಳು (ಪೂರ್ವಪು. xxxv-೧೪೧-೨೪೯) ಈ ಸಂದರ್ಭದಲ್ಲಿ ಬಂದಿವೆ. ಪಂಪನು ಈ ಸಂದರ್ಭದಲ್ಲಿ ತೋರಿರುವ ಸಮಯಪ್ರಜ್ಞೆ ಸ್ತುತ್ಯರ್ಹವಾದುದು. ಈ ಭಾಗವನ್ನು ಪಂಪನು ಸಂಪೂರ್ಣವಾಗಿ ಕೈಬಿಟ್ಟಿದ್ದಾನೆ.

ವೃಷಭನಾಥನ ಇಬ್ಬರು ಚರಮದೇಹಿ ಪುತ್ರರ ನಡುವೆ ನಡೆಯುವ ಯುದ್ಧದಲ್ಲಿ ಸಂಭವಿಸಬಹುದಾದ ಭೀಕರ ಹಿಂಸೆಯನ್ನು, ವಿನಾಶವನ್ನು ಗುರುತಿಸಿದ ಉಭಯ ಪಕ್ಷದ ಮಂತ್ರಿಗಳು ಧರ್ಮಯುದ್ಧವನ್ನು ಮಾಡಲೊಪ್ಪಿಸಲು ನಿಶ್ಚಯಿಸಿದರು. ಮಂತ್ರಿಗಳು ಭರತಬಾಹುಬಲಿಗಳ ಬಳಿಗೆ ಹೋಗಿ, 'ಈ ಯುದ್ಧದಿಂದ ಏನು ಪ್ರಯೋಜನ? ನಿಮ್ಮಿ ಬ್ಬರ ನಡುವೆ ಧರ್ಮಯುದ್ಧವಾಗುವುದು ಸರ್ವೋತ್ತಮ; ಸೇನೆಸೇನೆಗಳ ನಡುವೆ ಯುದ್ಧ ಬೇಡ; ವಿರೋಧದ ಕಾರಣ ವ್ಯಕ್ತಿಗತವಾದ ಅಭಿಮಾನ ಮತ್ತು ಪ್ರತಿಭಟನೆ; ಜನಕ್ಷಯ ಕರಣದಲ್ಲಿ ಅಯಶಸ್ಸು ಮಾತ್ರ. ಆದ್ದರಿಂದ ಇದನ್ನು ಕಡೆಗಣಿಸಿ' ಎಂದು ಉಚಿತ

ರೀತಿಯಲ್ಲಿ ನುಡಿದರು. "ಪಂಪಕವಿ ಯುದ್ಧದಿಂದಾಗುವ ವಿಪತ್ತನ್ನು ಎತ್ತಿ ಆಡಿರುವುದನ್ನು ಗಮನಿಸಬೇಕು. ಅವನ ಮಂತ್ರಿಗಳು ಭರತನನ್ನು ಹೊಗಳಿದಂತೆ ಮಾಡಿ, ಮೆಲ್ಲಗೆ ಧರ್ಮಯುದ್ಧಕ್ಕೆ ಒಪ್ಪಿಸಿದ ಯುಕ್ತಿಯನ್ನು ಗಮನಿಸಬೇಕು. ಇಂತಹ ಕಡೆಗಳಲ್ಲೆಲ್ಲ ಪಂಪ ತತ್ಕಾಲೀನ ರಾಜಕೀಯ ಜ್ಞಾನದಲ್ಲಿ ತನಗಿರುವ ಪಟುತ್ವ ತೋರಿಸಿದ್ದಾನೆ"[೬೪]. ತಂತಮ್ಮ ತೋಳ್ಬಲವನ್ನು ಮೆರೆದು ಹಿರಿಮೆಯನ್ನು ತೋರಿಸಬೇಕೆಂದಿದ್ದ ಈ ಅಣ್ಣತಮ್ಮಂದಿರಿಗೆ ಕೊಂಚ ಅಸಮಾಧಾನವೇ ಆಯಿತು. ಕೊಂಚ ಕಿನಿಸಾಡಿದರು. ಬಾಹುಬಲಿಯೊಡನೆ ಯುದ್ಧ ಸಂಘರ್ಷವೊದಗಲೆಂಬ, ಭರತನ ಬಯಕೆಯು 'ಗರ್ಭಿಣಿಯಾದ ದರಿದ್ರ ಕುಟುಂಬಿನಿಯ ಬಯಕೆಯಂತೆ' ಆಯಿತು. 'ನಿಮ್ಮರಸನ ಗರ್ವೋನ್ನತಿಯ ಕ್ಷಯವನ್ನು ಸ್ವಲ್ಪವಾದರೂ ನೋಡಿರಿ! ಬಳಿಕ ಧರ್ಮಯುದ್ಧವೇ ಜರುಗಲಿ!' ಎಂದು ಬಾಹುಬಲಿ ನುಡಿದನು. ಕೊನೆಗೆ ದೃಷ್ಟಿ, ಜಲ, ಬಾಹು ಯುದ್ಧಗಳೆಂಬ ದ್ವಂದ್ವಯುದ್ಧ ನಡೆಸಲು ಅವರು ಒಪ್ಪಿಕೊಂಡರು.

ಪಂಪನು ಧರ್ಮಯುದ್ಧದ ಪೂರ್ವಪೀಠಿಕೆಯ ವಿವರಣೆಯಲ್ಲಿ ಪೂರ್ವಪುರಾಣವನ್ನು ಅನುಸರಿಸಿದ್ದರೂ ಅಲ್ಲಲ್ಲಿಯೇ ಕೆಲವು ವ್ಯತ್ಯಾಸಗಳು ಸ್ಪಷ್ಟವಾಗಿ ಗೋಚರಿಸುತ್ತವೆ. ಸೈನ್ಯದ ಅಟಾಟೋಪವನ್ನು ನೋಡಿ ಜನರು ತಂತಮ್ಮ ಅರಸರ ಬಗೆಗೆ ಮಾತನಾಡಿಕೊಳ್ಳುವ ಯುದ್ಧದ ವಿನಾಶದ ಭೀತಿಯನ್ನು ತೋರುವ ಪೂರ್ವಪುರಾಣದ ಮಾತುಗಳನ್ನು ಪಂಪನು ಕೈಬಿಟ್ಟಿದ್ದಾನೆ. ಅವರ ಪ್ರತಿನಿಧಿಗಳೋ ಎಂಬಂತೆ ಮುಖ್ಯಮಂತ್ರಿಗಳಿಂದಷ್ಟೇ ಆ ಭೀತಿಯನ್ನು ವ್ಯಕ್ತಪಡಿಸಿದ್ದಾನೆ. ಮುಖ್ಯಮಂತ್ರಿಗಳು ಭರತ ಬಾಹುಬಲಿಗಳ ಬಳಿಗೆ ಹೋಗಿ ಅವರನ್ನು ಒಪ್ಪಿಸುವ ವಿಧಾನದಲ್ಲಿ ಮೂಲದಲ್ಲಿಲ್ಲದ ನಾಟಕೀಯತೆಯಿದೆ. ಇಬ್ಬರೂ ಹಿರಿಯರ ಅಭಿಪ್ರಾಯಕ್ಕೆ ಮನಸ್ಸಿಲ್ಲದ ಮನಸ್ಸಿನಿಂದಲೇ ಒಪ್ಪಿಕೊಂಡರೆಂಬ ಸಹಜ ಚಿತ್ರಣ ಮೂಲದಲ್ಲಿಲ್ಲ. ಇದು ಪಂಪನ ಸಮಯಪ್ರಜ್ಞೆಯ ಒಳನೋಟ.

ಹೋರಾಟಗಾರರು ಅಣ್ಣ ತಮ್ಮಂದಿರು. ಉಳಿದವರು ಪ್ರೇಕ್ಷಕರು. ದೃಷ್ಟಿ, ಜಲ, ಮಲ್ಲಯುದ್ಧಗಳಲ್ಲಿ ಭರತನಿಗೆ ಸೋಲಾಯಿತು. ಯುದ್ಧದ ವೈಖರಿಯನ್ನು ಚಿತ್ರಿಸುವಲ್ಲಿ ಮೂಲದಲ್ಲಿರುವ ಚಿತ್ರಗತ ಶೈಲಿಯನ್ನು ಪ್ರಭಾವಕಾರಿಯಾಗಿ ತಂದಿದ್ದಾನೆ.

ಸೋದರರಿಬ್ಬರೂ ನೀಲ ನಿಷಧಗಿರಿಗಳು ಒಂದಕ್ಕೊಂದು ಪೊಣರ್ದು ನಿಂತಂತೆ ಯುದ್ಧಕ್ಕೆ ನಿಂತರು. ಎರಡೂ ಕಡೆಯ ರಾಜಲೋಕವು ಮಧ್ಯಸ್ಥವಾಗಿ ನಿಂತು ಮಿಡುಕದೆ ನೋಡುತ್ತಿತ್ತು. ಇಬ್ಬರೂ ಒಬ್ಬರಿಗೊಬ್ಬರು ಎವೆಯಿಕ್ಕದೆ ಬೆಂಕಿಯಂತೆ ಉರಿಯುವ ಕೆಂಡಕಾರುವ ಕಣ್ಣುಗಳಿಂದ ದಿಟ್ಟಿಸಿ ನೋಡಿದರು. ಇನ್ನೂ ಭುಜಬಲಿಯ ಕಣ್ಣುಗಳಿಗೆ ಕಣ್ಣುಗಳನ್ನು ಸೇರಿಸಲು ಭರತನಿಂದಾಗಲಿಲ್ಲ. ಕಣ್ಣುಗಳನ್ನು ಹೀರುವಂತೆ ನೋಡುತ್ತಿದ್ದ ಬಾಹುಬಲಿಯ ದೃಷ್ಟಿಗಳಿಗೆ ಭರತ ಸೋತನು. ಮತ್ತೆ ಇಬ್ಬರೂ ಎರಡು ಸಲಗಗಳು ಸರೋವರವನ್ನು ವಿಲಾಸದಿಂದ ಹೊಗುವಂತೆ ಸರೋವರವನ್ನು ಹೊಕ್ಕು ತುಳುಕಿದರು. ಬಾಹುಬಲಿಯ ಮೈಕಟ್ಟು ಭರತನಿಗಿಂತಲೂ ಮಿಗಿಲಾದುದು. ಭರತನು ಎರಚಿದ ನೀರು ತಮ್ಮನ ಉರದಲ್ಲಿ ಹಾರಾಂಶದ ಕಾಂತಿಯಂತೆ ಶೋಭಿಸಿತು. ಬಾಹುಬಲಿಯ ನೀಳಬಾಹು ನಿರ್ದಾಕ್ಷಿಣ್ಯವಾಗಿ ಹೆಚ್ಚು ಪ್ರಮಾಣದ ಜಲವನ್ನು ಭರತನ ಮುಖದ ಮೇಲಪ್ಪಳಿಸಿತು. ಭರತನ ಮುಖ ಜೋತು ಬಿದ್ದಿತು; ಮತ್ತೆ ಭರತಚಕ್ರಿಗೆ ಸೋಲು. ಸೋಲಿನ ರೋಷವು ತಮ್ಮನ ಗೆಲುವಿನ ಜಯಘೋಷದಿಂದಾಗಿ ಹೆಚ್ಚಿತು. ಭರತನು ಕನಲಿ ತಮ್ಮನ ಮೇಲೆ

ನುಗ್ಗಿದನು. ಆದರೆ ಆದುದೇ ಬೇರೆ. ಕನಕಾಚಲವನ್ನು ಘನಮರಕತ ಶೈಲವು ಹೊತ್ತಿದೆಯೆಂಬಂತೆ ಆ ಚಿತ್ರ ಕಾಣುತ್ತಿತ್ತು. ಆದರೆ ಬಾಹುಬಲಿಯು ಇದ್ದಕ್ಕಿದ್ದಂತೆ ಭರತಣ್ಣನನ್ನು, ಅನಾಮತ್ತಾಗಿ ಮೇಲೆತ್ತಿ ಇಕ್ಕಲೊಲ್ಲದವನಾಗಿ ನಿಧಾನವಾಗಿ ಕೆಳಗಿಳಿಸಿದ. ಅಭಿಮಾನಭಂಗಗೊಂಡ ಭರತ ಅಂತು ತನಗೆ ಪರಿಭವವು ಬರಲು ಮುಳಿಸಿನ ದಳ್ಳುರಿಗಳನ್ನು ಉಗುಳುತ್ತ ತನ್ನ ಚಕ್ರರತ್ನವನ್ನು ನೆನೆಸಿಕೊಂಡು ಬಾಹುಬಲಿಯ ತಲೆಯನ್ನು ತಂದು ಒಪ್ಪಿಸಬೇಕೆಂದು ಆಜ್ಞಾಪಿಸಿದನು. ಆದರೆ ಆದದ್ದೇ ಬೇರೆ. ಬಾಹುಬಲಿಯ ಅಗಣ್ಯ ವ್ಯಕ್ತಿತ್ವದ ಮುಂದೆ ಚಕ್ರರತ್ನ ಮಣಿಯಿತು. ಲೋಕ ಮೆಚ್ಚಿತು.

ಮಲ್ಲಯುದ್ಧ ಸಂದರ್ಭದಲ್ಲಿ ಪೂರ್ವಪುರಾಣದಲ್ಲಿ ಬರುವ ಭಾಗ ಹೀಗಿದೆ : ಬಾಹುಬಲಿ ಮಲ್ಲಯುದ್ಧದಲ್ಲಿ ಭರತನನ್ನು ಮೇಲಕ್ಕೆತ್ತಿದಾಗ, ಭರತ ಮನಸ್ಸಿನಲ್ಲಿಯೇ ಚಕ್ರವನ್ನು ಸ್ಮರಿಸಿ ತಮ್ಮನನ್ನು ನಾಶಮಾಡುವಂತೆ ಆಜ್ಞಾಪಿಸಿದ. ಅದು ನಿಷ್ಫಲವಾದ ಮೇಲೆ ಬಾಹುಬಲಿಯು ಅಣ್ಣನನ್ನು ಕೆಳಗಿಳಿಸಿದ. ಜನರು ಭರತನಿಗೆ ಛೀಮಾರಿ ಹಾಕಿದರು. ಪಂಪ ಚಕ್ರರತ್ನದ ಪ್ರಯೋಗವನ್ನು ಈ ಸಂದರ್ಭದಲ್ಲಿ ತಂದಿಲ್ಲ. ಮಲ್ಲಯುದ್ಧದಲ್ಲಿಯೂ ಕೊನೆಯ ಬಾರಿಗೆ ಸೋತು, ರೊಚ್ಚಿಗೆದ್ದು ನಿಂತ ಭರತನು ಹಾಗೆ ಮಾಡಿದನೆಂದು ಬರುವ ವರ್ಣನೆಯ ಮಾರ್ಪಾಡು ಹೆಚ್ಚು ಪ್ರಭಾವಕಾರಿಯಾಗಿದೆ. ಚಕ್ರರತ್ನ ನಿಗಿನಿಗಿಸುತ್ತ ಬಾಹುಬಲಿಯನ್ನು ಪ್ರದಕ್ಷಿಣೆ ಮಾಡಿ ಪಕ್ಕದಲ್ಲಿ ಬಂದು ನಿಂತಿತು ಎಂಬ ವರ್ಣನೆ ಪೂರ್ವಪುರಾಣದಲ್ಲಿದ್ದರೆ, ಪಂಪನು ಬಾಹುಬಲಿಯ ಔನ್ನತ್ಯವನ್ನು ಹೆಚ್ಚಿಸುವವನಂತೆ ಚಕ್ರವು ಭರತೇಶನ ಮಾತನ್ನು ಕೇಳದೆ ಬಾಹುಬಲಿಯನ್ನು ಬಲವಂದು ಆತನನ್ನು ಭೇದಿಸಲಾರದೆ ಅವನ ಬಲಗಡೆ ಮಂಕಾಗಿ ನಿರ್ವೀರ್ಯವಾಗಿ ನಿಂತುಕೊಂಡಿತು (xiv-೧೧೭) ಎಂದು ವರ್ಣಿಸಿದ್ದಾನೆ. ಮಲ್ಲಯುದ್ಧದಲ್ಲಿ ಭರತನನ್ನು ಮೇಲೆತ್ತಿದ ಬಾಹುಬಲಿ ಭರತನ ಚಕ್ರವರ್ತಿ ಪದಕ್ಕೆ ಅಗೌರವವಾಗಬಾರದೆಂದು ಭಾವಿಸಿ ಆತನನ್ನು ನೆಲಕ್ಕೆ ಕುಕ್ಕಲಿಲ್ಲವೆಂಬ ಪೂರ್ವಪುರಾಣದ ಈ ಮಾತು ಆದಿಪುರಾಣದಲ್ಲಿ ಹೆಚ್ಚು ಪ್ರಭಾವಶಾಲಿಯಾಗಿ ಬಂದಿದೆ.

ಭರತಾವನೀಶ್ವರಂ ಗುರು | ಪಿರಿಯಣ್ಣಂ ಚಕ್ರವರ್ತ್ತಿ ಮಹಿಮಾಕರನೀ
ದೊರೆಯನುಮಳವಳಿಯೆ ವಸುಂ | ಧರೆಯೊಳ್ ತಂದಿಕ್ಕಿ ಭಂಗಮಂ ಮಾಡುವೆನೇ
(ಆದಿಪು.xiv-೧೧೨)

ಭರತನು ನನ್ನ ದೊಡ್ಡಣ್ಣ, ಗುರು, ಚಕ್ರವರ್ತಿ, ಮಹಿಮೆಗೆ ಆಗರ. ಶಕ್ತಿಯಳಿದ ಈ ರಾಜನನ್ನು ಭೂಮಿಯ ಮೇಲೆ ಎಸೆದು ಅದೇಕೆ ಅವಮಾನವನ್ನು ಮಾಡಲಿ? ಪಂಪನ ಪ್ರತಿಭೆಯ ತೀಕ್ಷ್ಣತೆಯು ಜಿನಸೇನರ ಎಷ್ಟೋ ಮಾತುಗಳನ್ನು ಮತ್ತಷ್ಟು ಪ್ರಭಾವಕಾರಿಯನ್ನಾಗಿಸಿವೆ.

ಭರತನು ಯಾವ ಚಕ್ರರತ್ನದಿಂದ ಬೀಗಿ ಗರ್ವದ ಮಾತುಗಳನ್ನಾಡಿದ್ದನೋ ಅದೇ ಚಕ್ರರತ್ನ ಇಂದು ಬಾಹುಬಲಿಯ ಮುಂದೆ ಮಸುಳಿ ನಿಂತಿದೆ. ಅದರಂತೆಯೇ ಭರತನ ಅಹಂಭಾವವೂ ಮಾಯವಾಗಿ, ಅಪಮಾನಗೊಂಡವನಂತೆ ಆತನೂ ತಲೆತಗ್ಗಿಸಿ ನಿಂತಿದ್ದಾನೆ. ಎಂತಹ ವೈಚಿತ್ರ್ಯ! ಈ ಸ್ಥಿತಿಯಲ್ಲಿ ಬಾಹುಬಲಿಯ ಮನಸ್ಸು ವೈರಾಗ್ಯದತ್ತ ತಿರುಗುತ್ತದೆ. ರಾಜ್ಯವಿಮೋಹ ಬಹಳ ಕಷ್ಟ.

ಸೋದರರೊಳ್ ಸೋದರರಂ | ಕಾದಿಸುವುದು ಸುತನ ತಂದೆಯೆಡೆಯೊಳ್ ಬಿಡದು
ತ್ಪಾದಿಸುವುದು ಕೋಪಮನಳ | ವೀದೊರೆತೆನೆ ತೊಡರ್ವುದೆಂತು ರಾಜ್ಯಶ್ರೀಯೊಳ್
(ಆದಿಪು.xiv-೧೨೨)

ಅಣ್ಣತಮ್ಮಂದಿರ ಮೇಲೆ ಅಣ್ಣತಮ್ಮಂದಿರನ್ನು ಕಾದಿಸುವುದು, ತಂದೆ ಮಕ್ಕಳಿಗೂ ಕೋಪವನ್ನು ತಂದಿಡುವುದು. ಅದರ ಸಾಮರ್ಥ್ಯ ಈ ಪರಿಯದೆಂದಮೇಲೆ ಆ ರಾಜ್ಯ ಶ್ರೀಯ ವಿಷಯದಲ್ಲಿ ಪ್ರವರ್ತಿಸುವುದೆಂತು?

ಅಲ್ಲದೆ ಈ ರಾಜ್ಯಲಕ್ಷ್ಮಿಯ ಚಂಚಲತೆ, ಇಂದ್ರಿಯಸುಖದ ನಶ್ವರತೆಗಳನ್ನು ಚಿಂತಿಸಿ ದನು. ಅತೀಂದ್ರಿಯಸುಖವೇ ಸುಖವೆಂದು ಬಗೆದು ಅದನ್ನು ಪಡೆಯಲು ಜಿನದೀಕ್ಷೆ ಯನ್ನು ಪಡೆಯಲು ಮನಸ್ಸು ಮಾಡಿ, ಅಣ್ಣ ಭರತನನ್ನು ಕುರಿತು—'ಚಕ್ರೇಶ ಸಿಗ್ಗನುೞಿ ಮುಳಿಸಂ ನೀನೆಂದಿಗಂ ಬಿಸುಡು, ತಮ್ಮಂದಿರೊಳಿಂತಿಂತು ಕಟ್ಟುವಪ್ಪುದು ಪೆಂಪೇ? ಎಂದು ಪ್ರಶ್ನಿಸಿ ಈ ಚಕ್ರರತ್ನದಿಂದ ತನಗೆ ಎಂದೂ ಪರಾಭವವುಂಟಾಗದೆಂದು ಹೇಳಿ ದನು. 'ನಿನ್ನ ಆಜ್ಞಾಧೀನವಾದ ಚಕ್ರವು ನನ್ನ ದೇಹವೆಂಬ ಬೆಟ್ಟವನ್ನು ಗೆಲ್ಲಲು ಸಮರ್ಥ ವಾಗುವುದಿಲ್ಲ. ವಜ್ರಗಿರಿಯನ್ನು ವಜ್ರವು ನಾಶಪಡಿಸಲು ಸಾಧ್ಯವೇ? ವಿರಾಗಿಯಾಗಿ ಹೊರಟವನಿಗೂ ಈ ಮಾನದ ಹಮ್ಮು ಬಿಡದೆ ಸತಾಯಿಸುತ್ತದೆ! ಈ ಒಂದು ಆವೇಗದಲ್ಲಿ ರುವಾಗಲೇ ಹೇಳುವ ಮಾತಿದು :

ನೆಲಸುಗೆ ನಿನ್ನ ವಕ್ಷದೊಳೆ ನಿಶ್ಚಲಮೀಭಟಖಡ್ಗಮಂಡಲೋ
ತ್ಪಲವನವಿಭ್ರಮಭ್ರಮರಿಯಪ್ಪ ಮನೋಹರಿ ರಾಜ್ಯಲಕ್ಷ್ಮಿ ಭೂ
ವಲಯಮನಯ್ಯನಿತ್ತುದುಮನಾಂ ನಿನಗಿತ್ತೆನಿದೇವುದಣ್ಣ ನೀ
ನೊಲಿದ ಲತಾಂಗಿಗಂ ಧರೆಗಮಾಟಿಸಿದಂದು ನೆಗೞ್ತೆ ಮಾಸದೇ (೧೩೦-೧೪)

ಯೋಧಖಡ್ಗಗಳೆಂಬ ಉತ್ಪಲವನದಲ್ಲಿ ಸೊಗಸಿನಿಂದ ನಲಿಯುವ ದುಂಬಿಯಂತಿರು ವವಳೂ ಮನಸ್ಸಿಗೆ ಆಹ್ಲಾದವನ್ನುಂಟುಮಾಡುವವಳೂ ಆದ ರಾಜ್ಯಲಕ್ಷ್ಮಿಯು ನಿನ್ನ ಎದೆಯ ಮೇಲೆ ನಿಶ್ಚಲವಾಗಿ ನೆಲೆಸಿರಲಿ! ನನ್ನಯ್ಯನಿತ್ತ ರಾಜ್ಯವನ್ನು ನಿನಗೆ ಸಮರ್ಪಿಸು ವೆನು. ನೀನು ಬಯಸಿರುವ ಹೆಣ್ಣನ್ನೂ ಭೂಮಿಯನ್ನೂ ನಾನು ಬಯಸಿದರೆ, ನನ್ನ ಕೀರ್ತಿಯು ಮಾಸದೆ?

ಚಂಚಲವಾದ ರಾಜ್ಯಲಕ್ಷ್ಮಿ ಭರತನಲ್ಲಿ ಸ್ಥಿರವಾಗಿ ನೆಲೆಸುವುದಾದರೂ ಹೇಗೆ? ಅದು ಬಾಹುಬಲಿಗೆ ತಿಳಿದಿರಲಿಲ್ಲವೆ? ಈ ಮಾತು ವಿರೋಧಾಭಾಸವಾಗುವುದಿಲ್ಲವೇ ಎಂಬ ಪ್ರಶ್ನೆ ಮೂಡಿ ಬರುವುದು. ಆದರೆ, ಮುಂದೆ ಪೂರ್ವಪುರಾಣದಲ್ಲಿಲ್ಲದಿರುವ ಒಂದು ಸನ್ನಿವೇಶವನ್ನು ಸೃಷ್ಟಿಸಿ ಇಲ್ಲಿ ಬರುವ ಪ್ರಶ್ನೆಗೆ ತಾನೇ ತಾನಾಗಿ ಉತ್ತರವು ಮೂಡಿ ಬರುವಂತೆ ಮಾಡಿದ್ದಾನೆ ಪಂಪ. ಬಾಹುಬಲಿಗೆ ಮಾನಕಷಾಯ ಉಳಿದುಹೋಗಿರುವ ಮತ್ತು ಅದನ್ನು ಭರತನೇ ಬಂದು ನಿವಾರಿಸುವ ಸನ್ನಿವೇಶದ ಹೊಸ ಸೃಷ್ಟಿಯಲ್ಲಿ ನಮಗೆ ಉತ್ತರ ಸಿಗುತ್ತದೆ. ಅಂದರೆ ಬಾಹುಬಲಿಯ ಕಷಾಯದ ಪೊರೆ ಸಂಪೂರ್ಣವಾಗಿ ಕಳಚಿರಲಿಲ್ಲ. ಆದ್ದರಿಂದಲೇ ಇಂತಹ ಆವೇಶಗೊಂಡ ಮಾತುಗಳನ್ನು ಆಡಿರುವ ನೆಂಬುದು ತಿಳಿದು ಬರುತ್ತದೆ. ಪಂಪನು ಚಿತ್ರಿಸಿರುವುದಾದರೂ ಸಾಧಕನಾಗಹೊರಟಿರುವ ಬಾಹುಬಲಿಯ ಚಿತ್ರವನ್ನೇ ಹೊರತು 'ಸಿದ್ಧ'ನನ್ನಲ್ಲ. ವೈರಾಗ್ಯದ ಮೂಲೆಯಲ್ಲಿ

ಕಿಂಚಿನ್ಮಾತ್ರವೂ ಕಲ್ಮಶವೆಂಬುದು ಸಲ್ಲದು. ಆ ಕಲ್ಮಶ ನೀಗುವವರೆಗೆ ವೈರಾಗ್ಯ ಸಿದ್ಧಿಸದು. ವೀತರಾಗತ್ವ ನೆಲೆಯಾಗದು. ಈ ಒಂದು ದರ್ಶನವನ್ನು ಕವಿ ಅದ್ಭುತವಾಗಿ ಬಾಹುಬಲಿಯ 'ಮಾನಕಷಾಯ' ನಿವಾರಣಾ ಸನ್ನಿವೇಶದಲ್ಲಿ ಬೆಳಕಿಗೆ ತಂದು ಸಾರಿದ್ದಾನೆ. (ರಾಜ್ಯಲಕ್ಷ್ಮಿಯನ್ನು ಕುರಿತ ವಿವರಣೆಯನ್ನು ಬಾಣನ ಕಾದಂಬರಿಯಿಂದ ಪಂಪ ತೆಗೆದು ಕೊಂಡಿರುವುದನ್ನು ವಿದ್ವಾಂಸರು ಗುರುತಿಸಿದ್ದಾರೆ.)

ಬಾಹುಬಲಿ-ಭರತರು ಒಬ್ಬರಿಗೊಬ್ಬರು ಪಶ್ಚಾತ್ತಾಪಗೊಂಡು ನುಡಿಯುವ ಮಾತು ಗಳು ಸೊಗಸಾದ ನಾಟಕೀಯತೆಯ ಶೈಲಿಯಲ್ಲಿ ಮೂಲಕ್ಕೆ ಧಕ್ಕೆಯಾಗದಂತೆ ಮಾರ್ನುಡಿ ಗೊಂಡು ಬಂದಿವೆ. 'ನಿನ್ನಲ್ಲಿ ನಾನು ಎಸಗಿದ ಅವಿನಯವನ್ನು ಅವಧರಿಸಬೇಡ. ಆಗ್ರಹ ವನ್ನು ಬಿಡು. ನನ್ನನ್ನು ಕ್ಷಮಿಸು' ಎಂದು ಹೇಳಿ ತೆರಳಲು ಬಾಹುಬಲಿ ಸಿದ್ಧನಾದನು. ಭರತನು ಮನಸ್ಸಿನಲ್ಲಿ ಆವರಿಸಿದ್ದ ಕೋಪವನ್ನು ಬಿಟ್ಟನು. ಪಶ್ಚಾತ್ತಾಪಗೊಂಡನು. "ನೀನೊರ್ಬನ್ನೆ ಮನುವಂಶಕ್ಕೆ ಲಲಾಮನಪ್ಪನುಜನ್ನೆ ಬೇಡಮ್ಮ ನೀನುಂ ತಪೋವನಮಂ ಸಾರ್ವುದುಮಾನದಾರ್ಗೆ ಮೆಱೆವೆಂ ಮತ್ಪ್ರಾಜ್ಯ ಸಾಮ್ರಾಜ್ಯಮಂ?" ಹೀಗೆ ಹೇಳಿ ತಮ್ಮನ ಪಾದಕಮಲಗಳಲ್ಲಿ ಕಣ್ಣೀರು ಹರಿಸಿದನು. ಇಲ್ಲಿ ಪರಸ್ಪರ ತಪ್ಪೊಪ್ಪಿಗೆ ಹೃದಯ ಕಲಕುವ ವಾತಾವರಣ ಸೃಷ್ಟಿಯಾಗಿದೆ.

"ಈ ಪ್ರಸಂಗ ಕನ್ನಡ ಕಾವ್ಯಪ್ರಪಂಚದಲ್ಲಿ ಶಿಖರಪ್ರಾಯವಾದ್ದರಲ್ಲಿ ಒಂದು. ಆದಿ ಪುರಾಣದಲ್ಲಿ ಧಾರ್ಮಿಕ ಪ್ರಕರಣಗಳು ತಮ್ಮ ತಮ್ಮ ವಿಶಿಷ್ಟ ಸಮಯಗಳಲ್ಲಿ ಹಿರಿಯ ವಾಗಿದ್ದರೆ, ಈ ಪ್ರಸಂಗ ತುಂಬು ಹೊಮ್ಮುಗೆಯಲ್ಲಿರುವ ವೀರದ ಸಮಸ್ತ ಅಂಶಗಳನ್ನು ಮುಡಿಗೆ ಮುಟ್ಟಿಸುತ್ತದೆ. ಚಾರಿತ್ರ್ಯ, ಗೌರವ, ಮಾನವಗುಣದ ಮೂಲಭೂತ ಗರಿಮೆ ಇವು ಜಿನತ್ವ ಸಿದ್ಧಿಯ ಈಚೆಯ ಮಟ್ಟಗಳಲ್ಲಿ ಯಾವ ಪರಮೋನ್ನತಿಗೆ ಏಳುತ್ತವೆ ಎಂಬುದರ ನಿಲುವಾಗುತ್ತದೆ."[೬೫]

ಈ ವಿಚಾರ ಮೂಲದಲ್ಲಿಲ್ಲದ ವರ್ಣನೆಯ ಚಿತ್ರವಾಗಿದೆ. ಮೂಲದಲ್ಲಿ 'ಅಯ್ಯೋ, ನಿಂದ್ಯ ಕಾರ್ಯವನ್ನು ಮಾಡಿದೆನು' ಎಂದು ತನ್ನನ್ನು ನಿಂದಿಸಿಕೊಂಡು, ದೀನ ವಚನವನ್ನು ಪ್ರಯೋಗಿಸಿದನೆಂದು ಮಾತ್ರ ಬರುತ್ತದೆ.

ಬಾಹುಬಲಿಯ ವೈರಾಗ್ಯ ಸನ್ನಿವೇಶದ ಭಾಗದಲ್ಲಿ ಕವಿ ಅಲ್ಲಲ್ಲಿ ಕೆಲವು ಮಾತುಗಳನ್ನು ಅಂದವಾಗಿ ಭಾವಾನುವಾದ ಮಾಡಿದ್ದಾನೆ :

ಅಭೇದ್ಯೇ ಮಮ ದೇಹಾದ್ರೌ ತ್ವಯಾ ಚಕ್ರಂ ನಿಯೋಜಿತಂ |
ವಿದ್ಧ್ಯಕಿಂಚಿತ್ಕರಂ ವಾಜ್ರೇ ಶೈಲೇ ವಜ್ರಮಿವಾಪತತ್ || (ಪೂರ್ವಪು.xxxvi-೯೩)

'ವಜ್ರಮಯವಾದ ಪರ್ವತದಲ್ಲಿ ಬೀಳುತ್ತಿರುವ ವಜ್ರದೋಪಾದಿಯಲ್ಲಿ ಭೇದಿಸ ಲಶಕ್ಯವಾದ ನನ್ನ ಶರೀರವೆಂಬ ಪರ್ವತದಲ್ಲಿ ನಿನ್ನಿಂದ ಪ್ರಯೋಗಿಸಲ್ಪಟ್ಟ ಚಕ್ರವು ಏನೂ ಮಾಡಲಾರದೆಂದು ತಿಳಿ.'

ನಿನ್ನೀ ಬೆಸಸಿದ ಚಕ್ರಮ | ದೆನ್ನೀ ದೇಹಾದ್ರಿಯಂ ಗೆಲಲ್ ನೆಱೆಯದು ನೀಂ
ಬಿನ್ನನಿದೇಕಿರ್ಪೆಯದೆಂ | ತೆನ್ನ ಗೆಲಲ್ ವಜ್ರಗಿರಿಯನಾರ್ಕ್ಕುಮೆ ವಜ್ರಂ (ಆದಿಪು.xiv-೧೨೯)
ಮೃಷ್ಯತಾಂ ಚ ತದಸ್ಮಾಭಿಃ ಕೃತಮಗೋ ಯದೀದೃಶಂ |
ಪ್ರಚ್ಯುತೋ ವಿನಯಾತ್ಸೋಽಹಂ ಸ್ವಂ ಚಾಪಲಮದೀದೃಶಮ್ || (ಪೂರ್ವಪು.xxxvi-೧೦೦)

'ನಮ್ಮಿಂದ ಇಂತಹ ಯಾವ ಅಪರಾಧವು ಮಾಡಲ್ಪಟ್ಟಿತೋ ಅದು ಕ್ಷಮಿಸಲ್ಪಡಲಿ. ಪ್ರಸಿದ್ಧನಾದ ನಾನು ವಿನಯದಿಂದ ಚ್ಯುತನಾದೆನು. ನನ್ನ ಚಪಲತ್ತ್ವವನ್ನು ತೋರಿಸಿದೆನು. ರಾಜ್ಯಸಂಪತ್ತನ್ನು ತ್ಯಜಿಸುವ ತಪ್ಪನ್ನು ಅವಿನಯವನ್ನು ಚಪಲತ್ವವನ್ನು ತೋರಿಸಿದುದನ್ನು ಕ್ಷಮಿಸಬೇಕು.'

ಅವಧರಿಸದೆ ನಿನ್ನೊಳ್ ಪಿರಿ | ದವಿನಯಮಂ ನೆಗೞ್ದಿ ದೋಷಮಂ ತಪದೊಳ್ ನೀ
ಗುವೆನಸದಾಗ್ರಹಮಂ ಬಿಸು | ಡುವುದೊರ್ಮೆಗೆ ಮಱೆವುದೆನ್ನ ದುರ್ವಿಳಸನಮಂ
(ಆದಿಪು.xiv-೧೩೧)

ಮೂಲದ ಭಾವವನ್ನು ಹಿಡಿದಿಟ್ಟು ಅಲ್ಲಲ್ಲಿಯೇ ತನ್ನ ಕೆಲವು ಸ್ವಯಂಸೃಷ್ಟಿಯ ರಚನೆಯಿಂದ ಈ ಭಾಗವನ್ನು ಕವಿ ಮೂಲಕ್ಕಿಂತ ಹೆಚ್ಚು ಕಳೆಯೇರಿಸಿದ್ದಾನೆ.

ಬಾಹುಬಲಿಯ ಅತ್ಯದ್ಭುತವಾದ ಗುಣವಿಶೇಷಗಳು ಇಲ್ಲಿ ಸಾಂದ್ರಗೊಂಡು ಬಂದಿವೆ. 'ಈ ಪ್ರಸಂಗದಲ್ಲಿ ನಾವು ನೋಡುವುದು ಬಾಹುಬಲಿಯ ಲೋಕಾಶ್ಚರ್ಯಕರವಾದ ತ್ಯಾಗ, ವಿರಾಗ, ಔದಾರ್ಯ, ಕ್ಷಮೆಗಳನ್ನು; ಅವನ ವ್ಯಕ್ತಿತ್ವ ಭರತನನ್ನು ಪರಿವರ್ತಿಸಿದ ಬಗೆಯನ್ನು, ವಿಜಯೋನ್ಮತ್ತನಾಗಬೇಕಾದ ಗಳಿಗೆಯಲ್ಲಿ ಬಾಹುಬಲಿ ಮೆರೆಯುವ ತ್ಯಾಗಕ್ಕೆ ಮೂರು ಲೋಕಗಳ ಬೆಲೆಯುಂಟು.'[೬೬]

ಬಾಹುಬಲಿಯು ಆದೀಶ್ವರನಲ್ಲಿ ದೀಕ್ಷೆಯನ್ನು ತೆಗೆದುಕೊಳ್ಳುವ ಭಾಗದಲ್ಲಿ ಪಂಪನಲ್ಲಿ ಇರುವ ವಿವರ ನಾಟಕೀಯತೆ ಪೂರ್ವಪುರಾಣದಲ್ಲಿ ಇಲ್ಲ. ಪೂರ್ವಪುರಾಣದಲ್ಲಿ ಗುರುವಿನ ಅಡಿದಾವರೆಗಳ ಸಮೀಪದಲ್ಲಿ ಬಾಹುಬಲಿ ದೀಕ್ಷೆಯನ್ನು ತೆಗೆದುಕೊಂಡನೆಂದಷ್ಟೇ ಬಂದರೆ, ಪಂಪನು ಈ ಸಂದರ್ಭಕ್ಕೆ ವಿಶೇಷ ಮಹತ್ವವನ್ನು ಕೊಟ್ಟು ವರ್ಣಿಸಿದ್ದಾನೆ. ಸಮವಸರಣದಲ್ಲಿ ಬಾಹುಬಲಿ ರಾಜಹಂಸನಂತೆ ವಿರಾಜಿಸಿದನು. ಭಗವಂತನಿಗೆ ಸಾಷ್ಟಾಂಗವೆರಗಿ ನಿಂತನು. ಪುರುಪರಮೇಶ್ವರ ಮುಖನೆಂಬ ಚಂದ್ರನ ಕಿರಣಗಳಿಂದ ಬಾಹುಬಲಿಯ ಮುಖಕಮಲ ಹೃದಯಕಮಲಗಳೆರಡೂ ಅರಳಿದವು. ಕರಕಮಲಮಾತ್ರ ಮುಚ್ಚಿತು. ಇದಕ್ಕಿಂತ ಮತ್ತೇನು ಆಶ್ಚರ್ಯವುಂಟು? ಎಂದು ಕವಿ ಚಮತ್ಕಾರವಾಗಿ ವರ್ಣಿಸಿದ್ದಾನೆ. ಅಲ್ಲದೆ—

ಮೊದಲೊಳ್ ದೇವರ ದಯೆಗೆ | ಯ್ದುದಲ್ತೆ ಯುವರಾಜಪದವಿಯೆನಗೀಗಳುಮ
ಭ್ಯುದಯಕರಪ್ರವ್ರಜ್ಯದ | ಪದವಿಯ ಯುವರಾಜಪದವಿಯಂ ದಯೆಗೆಯ್ಯಿಂ (ಆದಿಪು.xiv-೧೩೮)

ಎಂದು ದೀಕ್ಷೆಯನ್ನು ಸ್ವೀಕರಿಸಿದನೆಂಬ ಅಂಶ ಇಲ್ಲಿ ಹೊಸದಾಗಿ ಬಂದು ಸೇರಿದೆ. ಲೌಕಿಕ ನೆಲೆಗಟ್ಟಿನಿಂದ ಅಲೌಕಿಕ ನೆಲೆಗಟ್ಟಿಗೆ ಏರಲು ಅಪ್ಪಣೆ ಕೇಳುತ್ತಿದ್ದಾನೆ. ತಂದೆಗೆ ಸಮನಾದ ಮಗ !

ಬಾಹುಬಲಿ ದೀಕ್ಷೆಯನ್ನು ಸ್ವೀಕರಿಸಿ ದ್ವಾದಶಾಂಗ ಚತುರ್ದಶ ಪೂರ್ವಧಾರಿಯಾದನು. ಏಕವಿಹಾರಿಯಾಗಿ ಒಂದು ವರ್ಷಕಾಲ ಪ್ರತಿಮಾಯೋಗದಿಂದ ನಿಂತನು. ಅಲ್ಲಿ ಅವನ ದೇಹದ ಮೇಲೆ ಹುತ್ತಗಳೆದ್ದವು, ಬಳ್ಳಿಗಳು ಹಬ್ಬಿದವು. ಜಡೆಯು ಬೆಳೆದು ಬಳ್ಳಿಗಳೊಂದಿಗೆ ಹೆಣೆದುಕೊಂಡಿತು. ವಿಷಾಹಿಗಳು ಬುಸುಗುಟ್ಟಿದುವು. ಅದು ಆ ಮುನೀಶ್ವರನ ಧ್ಯಾನಾಗ್ನಿಯಿಂದ ಹೊರಬಂದ ಧೂಮವೇಣಿಯ ಸಮೂಹದಂತೆ ಕಾಣಿಸಿತು. "ವಿಜಯದ ತುತ್ತತುದಿಯಲ್ಲೇ ಆ ವೈಭವದ ಸುವರ್ಣ ಮಂದಿರವನ್ನೇ ತನ್ನ ತ್ಯಾಗದ ತ್ರಿವಿಕ್ರಮ

ಪಾದದಿಂದ ಪುಡಿಗೈದು ಮುಗಿಲೆತ್ತರ ನಗ್ನಯೋಗದಲ್ಲಿ ನಿಲ್ಲುವ ಶಾಂತ ದಿವ್ಯ ದೃಶ್ಯವನ್ನು ಕಾಣುತ್ತೇವೆ."[೬೭] ಈತನ ಜೀವನಸಂದೇಶ ಯಾವ ಕಾಲಕ್ಕೂ ನಿಲ್ಲುವಂಥದು. ಮಾನವನನ್ನು ಅಧೋಮುಖಿಗೊಳಿಸುವ ದ್ವೇಷಾಸೂಯೆಗಳ ಪಾಶವೀಶಕ್ತಿಯ ಬಿಡುಗಡೆಯನ್ನು ಪಡೆದು ನೆಲೆಗೇರಿದುದರ ಸುಂದರ ಚಿತ್ರಣವಿದೆ. "ರಾಜಿಕ ಆರ್ಥಿಕ ಸಾಮಾಜಿಕ ಕ್ಷೇತ್ರಗಳಲ್ಲಿ. . . . ಪಕ್ಷಪಕ್ಷಗಳ ಖಂಡನ ಮಂಡನಗಳಿಂದ . . . . ಕ್ಷಣಕ್ಷಣಕ್ಕೂ ಹುಟ್ಟುತ್ತಿರುವ ಸಹಸ್ರ ಸಹಸ್ರ ವಿಷಮವಿರೋಧಿಗಳಿಗೆ ಏಕೈಕ ಬೀಜಮದ್ದು ತ್ಯಾಗವೀರನಾದ ಬಾಹುಬಲಿಯ ಚರಿತ್ರ. ನಮ್ಮನಮ್ಮ ಹಮ್ಮುಬಿಮ್ಮುಗಳನ್ನು ಮರೆಯುವುದಕ್ಕೂ ನಮ್ಮನಮ್ಮ ಸ್ವಾರ್ಥ ಅಸೂಯೆ ದರ್ಪಕೋಪಾದಿಗಳನ್ನು ನಿಗ್ರಹಿಸುವುದಕ್ಕೂ ನಮಗೆ ಬಾಹುಬಲಿಯಂತಹ ವ್ಯಕ್ತಿ ಆರಾಧ್ಯದೈವನಾಗಬೇಕು."[೬೮]

ಬಾಹುಬಲಿ ಕಠಿಣವಾಗಿ ತಪಸ್ಸನ್ನು ಮಾಡುತ್ತಿದ್ದರೂ ಬಾಹುಬಲಿ ಮುನಿಗೆ ಕೇವಲಜ್ಞಾನವುಂಟಾಗಲಿಲ್ಲ. ಭರತನು ಆಶ್ಚರ್ಯಗೊಂಡು ವೃಷಭನಾಥನನ್ನು ಈ ಬಗೆಗೆ ಕೇಳಿದನು : 'ನಿನ್ನ ನೆಲದಲ್ಲಿದ್ದೇನೆಂಬ ಅಭಿಮಾನ ಕಷಾಯವಿರುವುದರಿಂದ ಅವನಿಗೆ ಕೇವಲಜ್ಞಾನ ಬೋಧೆಯಾಗಿಲ್ಲ. ನೀನು ಹೋಗಿ ಅವನ ಕಾಲುಗಳಿಗೆರಗಿದರೆ ಕೇವಲಜ್ಞಾನಬೋಧೆಯಾಗುವುದು, ಎಂದು ವೃಷಭನು ಭರತನಿಗೆ ಹೇಳಿದನು. ಅದರಂತೆ ಭರತನು ಬಾಹುಬಲಿಯನ್ನರ್ಚಿಸಿ, ಹೀಗೆಂದನು :

ನಿನ್ನ ಮಡಗೂಚ್ಚಿಲಂ ಮಾ | ನೋನ್ನತ ನೀನೀಯೆ ಬಂದುದೆನಗಿದನೆನತೆಂ
ದೇನ್ನಿನಗೆ ಬಗೆಯಲಪ್ಪುದೆ | ನಿನ್ನನೆ ನೀಂ ಬಗೆಯ ಬಗೆಯದಿರ್ ಪೆಱಪೆಱತಂ

(ಆದಿಪು.xiv-೧೪೪)

'ಮಾನೋನ್ನತ! ಈ ನೆಲವು ನಿನ್ನ ಎಂಜಲು, ನೀನು ಕೊಡಲು ಅದು ನನಗೆ ಬಂದಿತು. ಇದನ್ನು ನನ್ನದೆಂದು ನೀನು ತಿಳಿಯಬಹುದೆ? ನಿನ್ನನ್ನೇ ನೀನು ಧ್ಯಾನಿಸು. ಬೇರೆ ವಿಷಯಗಳನ್ನು ಬಗೆಯಬೇಡ.'

ಹೀಗೆ ಹೇಳುತ್ತಿದ್ದಂತೆಯೇ ಮಾನಕಷಾಯವೆಲ್ಲವೂ ನೀಗಿ ಮುನಿಪತಿಗೆ ಕೇವಲಬೋಧೆಯು ಒದಗಿತು. ಭರತ ಇಲ್ಲಿ ಅಟಾಟೋಪದಿಂದ ಮೆರೆಯುವ ಹಿಂದಿನ ಭರತನಲ್ಲ. ಸಾಕಷ್ಟು ಪರಿಪಕ್ವಗೊಂಡವನಾಗಿ ಕಾಣುತ್ತಾನೆ. ಒಂದೆಡೆ ಬಾಹುಬಲಿ, ಮತ್ತೊಂದೆಡೆ ಭರತ ಇವರ ಉದಾತ್ತ ಚೇತನದ ಚಿತ್ರಣವಿದೆ. ಮಾನಕಷಾಯ ನಿವಾರಣೆಯ ಚಿತ್ರ ಪಂಪನಲ್ಲಿ ಮನೋಹರವಾಗಿ ಮೈಗೂಡಿದೆ. "ಪುರಾಣಕಾರ ಉತ್ತಮಕವಿಯೂ ಆಗಿದ್ದರಿಂದ ಜೀವನವನ್ನು ಕುರಿತು ರಸಯುಕ್ತ ಚಿತ್ರಗಳು ರೂಪಗೊಳ್ಳುತ್ತವೆ . . . ಪಂಪನ ಕಾವ್ಯ ಅವನ ಬಯಕೆಯಂತೆ ಧರ್ಮ, ಕಾವ್ಯಧರ್ಮ ಎರಡನ್ನೂ ಪ್ರತಿಪಾದಿಸುತ್ತದೆ."[೬೯]

ಪೂರ್ವಪುರಾಣದಲ್ಲಿ ಈ ಪ್ರಕರಣ ಅತಿವಿಸ್ತಾರವಾಗಿ ಬರುತ್ತದೆ. ಇಪ್ಪತ್ತೆರಡು ಪರೀಷಹ ಜಯದ ವರ್ಣನೆ, ಇಂದ್ರಿಯನಿಗ್ರಹ, ಮಹಾವ್ರತಧಾರಿಯ ತಪೋಶುದ್ಧಿಗಳು, ವನ್ಯಪಶುಗಳಲ್ಲಿ ಮೈತ್ರಿ ಮೊದಲಾದ ವರ್ಣನೆ ಬರುತ್ತದೆ. ಆದರೆ ಪಂಪನಲ್ಲಿ ಈ ವಿವರಗಳು ಬರುವುದಿಲ್ಲ. ಮಾನಕಷಾಯದ ವಿವರ ಪೂರ್ವಪುರಾಣದಲ್ಲಿ ಸ್ಪಷ್ಟವಾಗಿಲ್ಲ. ಒಂದು ವರ್ಷ ಕಾಲಾವಧಿಯ ವನವಾಸದ ಕೊನೆಯಲ್ಲಿ ಭರತೇಶ್ವರನಿಂದ ಪೂಜಿಸಲ್ಪಟ್ಟ ಆ ಬಾಹುಬಲಿ ಮುನಿಯು ನಾಶರಹಿತವಾದ ಕೇವಲಜ್ಞಾನವೆಂಬ ಪರಮಜ್ಯೋತಿಯನ್ನು

ಪಡೆದನು. ಆ ಭರತೇಶ್ವರನು ನಮ್ಮ ದೆಸೆಯಿಂದ ಬಹುಕ್ಲೇಶವುಳ್ಳವನಾದನು. ಈ ಪ್ರಕಾರವಾಗಿ ಯಾವ ಸ್ನೇಹವು ಈ ಬಾಹುಬಲಿ ಸ್ವಾಮಿಯ ಹೃದಯದಲ್ಲಿದ್ದಿತೋ ಅದರಿಂದ ಕೇವಲಜ್ಞಾನವು ಆ ಭರತೇಶ್ವರನ ಪೂಜೆಯ ಅಪೇಕ್ಷೆಯುಳ್ಳದ್ದಾಗಿದ್ದಿತು ಎಂದಿಷ್ಟೇ ಮೂಲದಲ್ಲಿ ಬರುವ ಅಂಶ. ಪಂಪನಾದರೋ ಅದಕ್ಕೊಂದು ಸುಸ್ಪಷ್ಟ ರೂಪವನ್ನು ಕೊಟ್ಟು ಸುಂದರ ನಾಟಕೀಯ ಸನ್ನಿವೇಶವನ್ನೇ ಕಲ್ಪಿಸಿದ್ದಾನೆ.

ಪೂರ್ವಪುರಾಣದಲ್ಲಿ ಬಾಹುಬಲಿಯ ಕೇವಲಜ್ಞಾನದ ನಂತರ ಆತನ ಸ್ತುತಿ ಒಂಬತ್ತು ವೃತ್ತಗಳಲ್ಲಿ ಬಂದಿದೆ. ಪಂಪನು ಈ ಭಾಗವನ್ನು ಕೈಬಿಟ್ಟಿದ್ದಾನೆ. (ಬಾಹುಬಲಿಯನ್ನು ಪೂರ್ವಪುರಾಣದಲ್ಲಿ ಈ ಸಂದರ್ಭದಲ್ಲಿ ಅಂತಿಮ ಶರೀರಧಾರಿಗಳಲ್ಲಿ ಮೊದಲನೆಯವ ನೆಂದು ಕರೆದು ಸ್ತುತಿಸಲಾಗಿದೆ (xxxvi-೨೦೪). ಆದರೆ, ಅನಂತವೀರ್ಯನು ಮೋಕ್ಷಕ್ಕೆ ಹೋದವರಲ್ಲಿ ಮೊದಲಿಗ, ಬಾಹುಬಲಿಯಲ್ಲ ಎಂಬುದನ್ನು ಈ ಹಿಂದೆಯೇ ಗಮನಿಸಿದೆ.

ಒಟ್ಟಿನಲ್ಲಿ "ಈ ಸಮಗ್ರವಾದ ಭರತ-ಬಾಹುಬಲಿ ವೈಷಮ್ಯ ಪ್ರಕರಣ ಪೂರ್ವ ಪುರಾಣದ ನಿರೂಪಣೆಯನ್ನು ಅನುಸರಿಸಿಯೇ ಮುನ್ನಡೆದರೂ ಭಾವ ಉಕ್ತಿಗಳನ್ನು ಅಲ್ಲಲ್ಲಿ ಅಂಗೀಕರಿಸಿದ್ದರೂ ಚುರುಕಾದ ಕ್ರಿಯೆ, ಸಂವಾದವನ್ನು ಕಳೆಗಟ್ಟಿಸುವ ನಾಟ ಕೀಯ ಕೌಶಲ, ದೇಸಿ ಮಾತುಗಾರಿಕೆಯ ಆಕರ್ಷಣೆಯಿಂದ ಉತ್ಕೃಷ್ಟವಾಗುವ ಹಾಗೆ ಪಂಪ ಅದನ್ನು ನಿರ್ವಹಿಸಿದ್ದಾನೆ."[೭೦]

## ಉತ್ತರಕಾಲೀನ ಕಾವ್ಯಗಳು

**ಚಾವುಂಡರಾಯಪುರಾಣ :** ಆದಿಪುರಾಣದ ಕಥಾವಿಸ್ತಾರವನ್ನು ಕವಿ ಇಲ್ಲಿ ಅಡಕ ಗೊಳಿಸಿ ಅತ್ಯಂತ ಸಂಕ್ಷಿಪ್ತರೂಪದಲ್ಲಿ ಸಂಗ್ರಹಿಸಿದ್ದಾನೆ. ಚಕ್ರರತ್ನದ ತಡೆ, ಪುರೋಹಿತನ ನುಡಿ, ತಮ್ಮಂದಿರಲ್ಲಿಗೆ ಶಾಸನಹರರನ್ನಟ್ಟಿದುದು, ತಮ್ಮಂದಿರು ದೀಕ್ಷೆ ಪಡೆದುದು, ಬಾಹುಬಲಿಯ ಬಳಿಗೆ ದೂತರನ್ನಟ್ಟಿದುದು, ಪತ್ರದ ಒಕ್ಕಣೆಯನ್ನು ಕೇಳಿದ ಬಾಹುಬಲಿ ಕುಪಿತನಾದುದು, ಸಮರಸನ್ನದ್ಧನಾಗಿ ದೂತರನ್ನು ಕಳಿಸಿದುದು, ಭರತಬಾಹುಬಲಿಗಳ ನಡುವೆ ದ್ವಂದ್ವಯುದ್ಧವನ್ನು ಮಂತ್ರಿಗಳು ನಿಯಮಿಸಿದುದು, ತ್ರಿವಿಧ ದ್ವಂದ್ವಯುದ್ಧ ದಲ್ಲಿ ಭರತನ ಸೋಲು, ಭರತನ ಚಕ್ರರತ್ನಪ್ರಯೋಗ, ಬಾಹುಬಲಿಯ ವೈರಾಗ್ಯ, ತಪಸ್ಸು, ಮಾನಕಷಾಯ ನಿವಾರಣೆ, ಬಾಹುಬಲಿಗೆ ಕೇವಲಜ್ಞಾನಪ್ರಾಪ್ತಿ—ಈ ಕಥಾಭಿತ್ತಿಯಲ್ಲಿ ಕವಿ ಆದಿಪುರಾಣದ ಕಥಾರೇಖೆಯನ್ನು ನಿರೂಪಿಸಿದ್ದಾನೆ. ದೂತರ ಮಾತಿನ ವಿವರವಾಗಲಿ ಪತ್ರದ ಒಕ್ಕಣೆಯ ವಿವರವಾಗಲಿ ಇಲ್ಲಿ ಇಲ್ಲ. ಕವಿ ನಮ್ಮ ಊಹೆಗೇ ಬಿಡುವಂತೆ ಉಲ್ಲೇಖವನ್ನು ಮಾತ್ರ ನೀಡಿದ್ದಾನೆ. ಕೆಲವೆಡೆ ಮೂಲದಲ್ಲಿಯ ಸೊಗಸನ್ನು ಕೆಡಿಸಿರುವು ದುಂಟು. ಯುದ್ಧಗಳಲ್ಲಿ ಕ್ರಮವಾಗಿ ಜಯಿಸುತ್ತ ಬಂದ ಬಾಹುಬಲಿ ಮಲ್ಲಯುದ್ಧದಲ್ಲಿ "ಪಲವಾಯಂಗಳೊಳ್ ಪೊಣರ್ದು" ಶ್ರಾಂತವಾದಾಗ, "ಭರತನಂ ಪಿಡಿದೆತ್ತಿ ನೆಲಕಿಕ್ಕು ವುದುಂ" ಎಂದು ಹೇಳಿ, ಬಾಹುಬಲಿಯ ಪಾತ್ರದ ಔನ್ನತ್ಯವನ್ನು ದಿಢೀರೆಂದು ಇಳಿಸಿಬಿಟ್ಟಿ ದ್ದಾನೆ. ಭರತನು ನಾಚಿಕೆಯಿಂದ ನಿಂತಾಗ ಬಾಹುಬಲಿ ಅಣ್ಣನನ್ನು ಕುರಿತು "ಅಣ್ಣ ಸಿಗ್ಗನುಳಿವುದು ನೀನೀ ಸಾಮ್ರಾಜ್ಯಮನಾವಗಂ ಕೈಕೊಳ್ಳುದೆನಗಿದೇನುಂ ಬಾರ್ತೆಯಲ್ಲ" ಎಂಬ ಮಾತಿನ ಧಾಟಿಯಲ್ಲಿ ಮೂಲದಲ್ಲಿರುವ ಆಕರ್ಷಣೆಯನ್ನು 'ನೆಲಸುಗೆ ನಿನ್ನ

ವಕ್ಷದೊಳೆ...' ಎಂಬ ಮಾತಿನ ಹರಿತಗತಿಯನ್ನು ಉಳಿಸಿಕೊಂಡಿಲ್ಲ. ತೀರ ಸಾಮಾನ್ಯವಾಗಿ ನುಡಿದಿದ್ದಾನೆ.

ಬಾಹುಬಲಿಯ ತಪಶ್ಚರಣಕಾಲದಲ್ಲಿ ಮೈಯನ್ನು ಅಡರುವ ಬಳ್ಳಿಗಳನ್ನು ಖೇಚರಿಯರು "ಬ್ರಾಹ್ಮೀ ಸೌಂದರಿಯರ್ ರೂಪಗೊಂಡು ಸರಸಂ ನುಡಿದು ಬಿಡಿಸಿ ಕಳೆದರ್" ಎಂದು ಹೇಳುವಲ್ಲಿ ಕವಿಯ ಸ್ವೋಪಜ್ಞತೆಯು ವ್ಯಕ್ತವಾಗುತ್ತದೆ. ಖೇಚರಿಯರು ಬ್ರಾಹ್ಮೀ ಸೌಂದರಿಯರ ರೂಪವನ್ನು ಧರಿಸಿ ಬಂದರೆಂದು ಹೇಳುವಲ್ಲಿ, ಮೂಲದಲ್ಲಿಲ್ಲದ ಆತ್ಮೀಯ ವಾತಾರವರಣವನ್ನು ಕಲ್ಪಿಸಿದ್ದಾನೆ. ಮಾನಕಷಾಯ ನಿವಾರಣೆಯ ಸನ್ನಿವೇಶ ಆದಿಪುರಾಣದ ಆಶಯವನ್ನು ಸಂಗ್ರಹಿಸಿದೆಯಾದರೂ, ಅಲ್ಲಿಯ ನಾಟಕೀಯತೆಯನ್ನು ಕವಿ ಉಳಿಸಿಕೊಂಡಿಲ್ಲ. ಕವಿ ಆದಿಪುರಾಣದ ಭಾವವನ್ನು ಸಂಗ್ರಹಿಸಿರುವುದೇ ಅಲ್ಲದೆ, ಅಲ್ಲಲ್ಲಿ ಶಾಬ್ದಿಕವಾಗಿಯೂ ಅನುಕರಿಸಿದ್ದಾನೆ.

**ಹಸ್ತಿಮಲ್ಲನ ಪೂರ್ವಪುರಾಣ :** ಕವಿ ಈ ಸಂದರ್ಭದ ನಿರೂಪಣೆಯಲ್ಲಿ ಆದಿಪುರಾಣಕ್ಕೆ ನೇರವಾಗಿ ಋಣಿಯಾಗಿದ್ದಾನೆ. ಅಲ್ಲಿಯ ವಿಸ್ತಾರ ಕಥಾಚೌಕಟ್ಟನ್ನು ಸರಳ ಗದ್ಯದಲ್ಲಿ ಚಾವುಂಡರಾಯಪುರಾಣದ ಮಾದರಿಯಲ್ಲಿ ಸಂಕ್ಷಿಪ್ತಗೊಳಿಸಿದ್ದಾನೆ. ಚಾವುಂಡರಾಯಪುರಾಣದ ಕಥಾ ಚೌಕಟ್ಟು ಇಲ್ಲಿಯೂ ಇದೆಯಾದರೂ ಅಲ್ಲಲ್ಲಿಯೇ ಚಾವುಂಡರಾಯಪುರಾಣದಲ್ಲಿಲ್ಲದ ಕೆಲವು ವಿವರಗಳನ್ನು ನೀಡಲಾಗಿದೆ. ನೂರು ಮಂದಿ ತಮ್ಮಂದಿರ ಬಳಿ ದೂತನು "ನೀವಿನಿಬರುಂ ಪಿರಿಯಣ್ಣನಾದ ಚಕ್ರವರ್ತಿಗೆರಗಿ ಅವನೊಡಗೂಡಿ ರಾಜ್ಯಲಕ್ಷ್ಮಿಯನನುಭವಿಸುವುದು" ಎಂಬ ಮಾತಿನಿಂದಲೂ, ಬಾಹುಬಲಿಯ ಮುಂದೆ ದೂತನು ನಿಯಮಿಸುವ—"ಸ್ವಾಮಿ, ನಿನ್ನಣ್ಣನಪ್ಪ ಚಕ್ರೇಶ್ವರಂಗೆರಗಿಯವನೊಳ್ಕೂಡಿ ಸಕಲ ಸಾಮ್ರಾಜ್ಯಸುಖಮನನುಭವಿಸು" ಎಂಬ ಮಾತಿನಿಂದಲೂ ಇದು ಸ್ಪಷ್ಟ. ಆದಿಪುರಾಣದಲ್ಲಿ ದೂತರು ಹೇಳುವ ಮಾತಿನ ಮುಂದೆ ಈ ಮಾತುಗಳು ತೀರಾ ಸಪ್ಪೆ ಎನಿಸುತ್ತವೆ. ಅದೇ ಮುಂದಿನ ಭಾಗದಲ್ಲಿ ಕವಿ ಆದಿಪುರಾಣದ ಆಶಯವನ್ನು ಹಿಡಿದಿಟ್ಟಿದ್ದಾನೆ. ಉದಾಹರಣೆಗೆ "ನಾವೆಲ್ಲರುಂ ಪಿರಿಯಣ್ಣನುಂ ಪೆತ್ತ ತಂದೆಯುಂ ಸರಿಯೆಂದು ಭಕ್ತಿಯಿಂದೆರಗಿದೆವು. ಇನ್ನೆರಗುವುದುಮೊಡೆಯ ಬಂಡತನಮೆಂದಾಲೋಚಿಸಿ" ಎಂಬ ಭರತನ ತಮ್ಮಂದಿರ ಮಾತುಗಳಲ್ಲಿ ಅದು ಗೋಚರವಾಗುತ್ತದೆ. "ಕುಂಬರ ಚಕ್ರದ ಗರ್ವದಿಂದೆನ್ನ ತನಗೆರಗವೇಳ್ದಟ್ಟಿದನೆ?" ಎಂಬ ಬಾಹುಬಲಿಯ ಮಾತುಗಳಿಂದ ಇದು ಸ್ಪಷ್ಟ.

ಬಾಹುಬಲಿ ವೈರಾಗ್ಯಪರನಾಗಿ ನಿಂತಾಗ ಭರತನು ಬಾಹುಬಲಿಗೆ "ತಪಂಗೊಳ್ಳಲಾಗದು ಎನ್ನೊಡನೆ ರಾಜ್ಯಸುಖಮನನುಭವಿಸೆಂದು" ಹೇಳಿ, "ತಮ್ಮನ ಪಾದಮಂ ಕಟ್ಟಿಕೊಂಡು ಶೋಕಿಸಿ ನಾನಾಪ್ರಕಾರದಿಂದಣ್ಣನನೊಡಂಬಡಿಸಿ" ಬಾಹುಬಲಿ ದೀಕ್ಷಿತನಾಗಲು ತೆರಳಿದನು. ಅಣ್ಣತಮ್ಮಂದಿರ ಶೋಕವೃತ್ತಾಂತದ ಆತ್ಮೀಯ ನಿಲವು ಉಳಿದ ಉತ್ತರಕಾಲೀನ ಆದಿತೀರ್ಥಂಕರ ಚರಿತ್ರೆಗಳಲ್ಲಿ ದೊರೆಯದು.

ಬಾಹುಬಲಿಯ ಘೋರ ತಪಸ್ಸಿನ ವಿವರಣೆಯ ಸಂದರ್ಭದಲ್ಲಿ ಖೇಚರಿಯರು ಬಳ್ಳಿಯನ್ನು ಬಿಡಿಸಿದ ವೃತ್ತಾಂತ ಬರುವುದಿಲ್ಲ. ಒಂದು ವರ್ಷ ಕಾಲ ಬಾಹುಬಲಿ ಯೋಗದಲ್ಲಿದ್ದನು. ಲತೆಪುಪ್ಪಗಳು, ಆತನ ಮೈಯ್ಯನಡರಿದವೆಂಬ ವೃತ್ತಾಂತ ಮಾತ್ರ

ಬರುತ್ತದೆ. ಮಾನಕಷಾಯ ನಿವಾರಣಾ ವೃತ್ತಾಂತವು ಚಾವುಂಡರಾಯಪುರಾಣಕ್ಕಿಂತ ಸ್ವಲ್ಪ ವಿಸ್ತಾರಗೊಂಡು ಆದಿಪುರಾಣವನ್ನನುಸರಿಸಿ ಬಂದಿದೆ. ಚಿಕ್ಕಚಿಕ್ಕ ವಾಕ್ಯಗಳೊಂದಿಗೆ ನಾಟಕೀಯ ಧಾಟಿಯಲ್ಲಿ ಕವಿ ಮೂಲದ ಆಶಯವನ್ನು ಕಾಪಾಡಿಕೊಂಡು ಬಂದಿದ್ದಾನೆ. "ಎಲೆ ಸ್ವಾಮಿ, ಬಾಹುಬಲಿ ಮುನೀಶ್ವರಂಗಿಂತಪ್ಪ ಘೋರ ತಪದೊಳಗಿರ್ದುಂ ಕೇವಲ ಜ್ಞಾನಮೇಕುದಿಸದು" ಎನೆ—"ಎಲ್ವೈ ಭವ್ಯಾ, ಕೇಳ್ವೈ. ತಪಗೊಂಡು ನಿನ್ನ ನೆಲದೊಳಿರ್ದೆ ನೆಂಬ ಮಾನಕಷಾಯಮಾವರಿಸಿಯಿನ್ನುಂ ಪೋದುದಿಲ್ಲಂ. ನೀಂ ಪೋಗಿ ಕಾಲ್ಗೆರಗ ಲೊಡನೆ ಕೇವಲಬೋಧಂ ಪುಟ್ಟುಗು" ಎಂದು ನಿರೂಪಿಸಲು ಜಿನನಿಗೆರಗಿ ದಿವ್ಯಾರ್ಚನೆ ಗಳಿಂದ ಬಾಹುಬಲಿಯ ಪಾದಗಳನ್ನು ಪೂಜಿಸಿ "ಎಲೆ ಸ್ವಾಮೀ, ನೀಂ ಕೊಡೆ ನನಗೆ ಬಂದುದಲ್ಲದೆ ಬೇರೊಂದು ರಾಜ್ಯಮುಂಟೆ? ಅದು ಕಾರಣಂ ನಿನ್ನ ಗುಣವನೆ ಭಾವಿಸು. ಬೇರೊಂದು ವಿಕಲ್ಪಮಂ ನೆನೆಯಲಾಗದು" ಎಂದಾಗ ಮಾನಕಷಾಯವು ಕೆಟ್ಟು ಕೇವಲ ಜ್ಞಾನೋತ್ಪತ್ತಿಯಾಯಿತು. ಆದಿಪುರಾಣದ ತೀಕ್ಷ್ಣತೆ ಇಲ್ಲದಿದ್ದರೂ ಸಂಕ್ಷಿಪ್ತ ಹರವಿ ನಲ್ಲಿಯೇ ನಾಟಕೀಯತೆಯ ಧಾಟಿ ಸರಳಸುಂದರವಾಗಿ ಮೈಗೂಡಿ ಬಂದಿದೆ.

**ಪುಣ್ಯಾಸ್ರವದ ಆದೀಶ್ವರರ ಕಥೆ** : ಕಥಾವಿಧಾನದಲ್ಲಿ ಚಾವುಂಡರಾಯಪುರಾಣ ಹಾಗೂ ಹಸ್ತಿಮಲ್ಲನ ಪೂರ್ವಪುರಾಣಗಳ ರೀತಿಯ ಸಂಕ್ಷಿಪ್ತತೆಯಿದೆ. ಬಾಹುಬಲಿ ಭರತನನ್ನು ಮೇಲೆತ್ತಿ ಇಕ್ಕಿದ ವಿಚಾರವಾಗಲಿ, ಭರತನು ಚಕ್ರರತ್ನ ಪ್ರಯೋಗಿಸಿದ ವಿಚಾರವಾಗಲಿ ಇಲ್ಲಿ ಬಂದಿಲ್ಲ. "ಯುದ್ಧಮನೊಡರ್ಚಿ ಬಾಹುಬಲಿ ಗೆದ್ದು ಬಳಿಕ್ಕಂ ಭರತೇಶ್ವರಂಗೆ ಪೊಡವಟ್ಟುತ್ತಮ ಕ್ಷಮೆಯಂ ಮಾಡಿ ತನ್ನ ಮಗನಪ್ಪ ಮಹಾಬಲಿಯಂ ಭರತಂಗಪ್ಪಯಿಸಿ ಚಕ್ರಿಮೊದಲಾಗೊಡೆಯರೆಲ್ಲರುಂ ಪ್ರಾರ್ಥಿಸಿದೊಡಂ ನಿಲ್ಲದೆ ವೃಷಭ ಸ್ವಾಮಿಯ ಸಮೀಪಕ್ಕೆ ಪೋಗಿ ದೀಕ್ಷೆಗೊಂಡು" ಎಂಬ ಅಂಶವು ಮಾತ್ರ ಕಂಡುಬರುತ್ತದೆ. ಬಾಹುಬಲಿಯ ವೈರಾಗ್ಯಕ್ಕೆ ನಿರ್ದಿಷ್ಟ ಕಾರಣವನ್ನು ಕವಿ ನೀಡಿಲ್ಲ. ಯುದ್ಧದಲ್ಲಿ ಗೆದ್ದು ಇದ್ದಕ್ಕಿದ್ದಂತೆ ವೈರಾಗ್ಯಪರನಾಗುವ ಅಂಶವನ್ನು ಮಾತ್ರ ಕಾಣುತ್ತೇವೆ. ಭರತ-ಬಾಹುಬಲಿ ಸನ್ನಿವೇಶಕ್ಕೆ ಕವಿ ಅಷ್ಟಾಗಿ ಪ್ರಾಮುಖ್ಯವನ್ನು ನೀಡಿಲ್ಲ.

ಮಾನಕಷಾಯ ನಿವಾರಣೆಯಲ್ಲಿ ಕವಿ ಆದಿಪುರಾಣವನ್ನು ಅನುಸರಿಸಿರುವುದು ಕಂಡು ಬರುತ್ತದೆ. ಉದಾಹರಣೆಗೆ : "ನೀಂ ಭುಂಜಿಸಿ ಬಿಟ್ಟೆಂಜಲನಾಂ ಸ್ವೀಕರಿಸಿದ ಭೂ ಮಂಡಲಂ" ಎಂಬ ಮಾತಿನಲ್ಲಿ ಅದನ್ನು ಗುರುತಿಸಬಹುದು. ಅಲ್ಲಿಯ ನಾಟಕೀಯ ಸಂವಿಧಾನವನ್ನು ಕವಿ ಇಲ್ಲಿಯೂ ಮೂಡಿಸಿದ್ದಾನೆ.

ಅಲ್ಲಲ್ಲಿಯೇ ಉಪಮಾಲಂಕಾರದ ಮೆರುಗನ್ನು ತಂದು ಕಾವ್ಯಾಂಶವನ್ನು ಮೆರೆಯಲು ಯತ್ನಿಸಿದ್ದಾನೆ.

ಚಕ್ರರತ್ನ ಪುರಪ್ರವೇಶ ಮಾಡಿದ ಸಂದರ್ಭ—

ದಿನಕರಕೋಟಿ ಪ್ರಭೆಯ ಮ | ನನುಕರಿಸುವ ತೇಜಮುಳ್ಳ ಚಕ್ರಂ ಸಾಕೇ
ತನಮಂ ಪುಗಲೊಲ್ಲದೆ ಕಡು | ಮುನಿದವೊಲಿರೆ ಚಕ್ರಿ ನೋಡಿ ವಿಸ್ಮಯ ಬೆತ್ತಂ (ಪುಆಕ.X-೩೧)

ಬಾಹುಬಲಿಯ ತಪಸ್ಸಿನ ಸಂದರ್ಭ—

ಪುತ್ತಡರ್ದು ಬಳ್ಳಿಗಳ್ ನೆಱ | ಸುತ್ತಿರೆ ಮೆಯ್ಯಲ್ಲಿ ಕಂಡು ಖೇಚರಿಯೊರ್ವಳ್
ಮತ್ತವ ತೊಲಗಿಸೆ ಮುನಿಪತಿ | ಮೃತ್ತಿಕೆಗಳೆದಿರ್ದಪೊನ್ನಕರುವೆನಲೆಸೆದಂ (ಪುಆಕ. X-೩೨)

**ಪುರುದೇವಚರಿತ :** ಹೆಜ್ಜೆಹೆಜ್ಜೆಗೂ ಕವಿ ಚಾವುಂಡರಾಯಪುರಾಣದ ಅನುವರ್ತಿಯಾಗಿರುವಂತೆ ಕಂಡುಬರುತ್ತಾನೆ. ಉದಾಹರಣೆಗೆ :

ಮರಿಯಾದೆಯುಳ್ಳವರೆಲ್ಲ ತಮ್ಮಣ್ಣಗೆ | ಎರಗದೆ ಸಮವಸರಣದಿ
ಪರಮೇಶ್ವರನಿಗೆರಗಿ ಜಾತರೂಪವ | ಧರಿಸಿದರೆಂಬುದ ಕೇಳ್ದು
ಭರತನಾಶ್ಚರ್ಯಂಬಟ್ಟು ಮನದಿ ಮೆಚ್ಚಿ | ಸ್ಮರಚಕ್ರಿ ಭುಜಬಲಿಯೆಡೆಗೆ
ಬರಸಿ ಲೇಖವನವನಾ ಸ್ಥಿತಿಯೊಳೆ ತನ್ನ ದೂ | ತರ ಕೈಯ ಕಳುಹಲಾಮದನ

(ಪುರುಚ. X-೭, ೮)

ಅಭಿಮಾನಧನರಪ್ಪನಿಬರುಮೆಱಗಲೊಲ್ಲದೆ ಪರಿಚ್ಛೇದಿಸಿ ನಿಜಗುರುಚರಣಮೂಲದೊಳ್ ತಪಮಂ ಕೈಕೊಳ್ವುದುಮದಂ ಕೇಳ್ದು ಭರತನಾಶ್ಚರ್ಯಂಬಟ್ಟು ಮನದೊಳೆ ಮೆಚ್ಚಿ ಬಾಹುಬಲಿ ಕುಮಾರನಲ್ಲಿಗಾ ಸ್ಥಿತಿಯೊಳೋಲೆಯುಮಂದೂತರುಮನಟ್ಟಿದೊಡೆ ಲೇಖಾವಾರ್ತಾಕರ್ಣನದೊಳತಿ ಕುಪಿತನುಂ ಸಮರ ಸನ್ನದ್ಧನುಮಾಗಿ ಬಂದು ದೂತರಂ ಕಳಿಪೆ (ಚಾವುಂಪು. ಪುಟ ೫೮)

ಬಲುವಾಗಿ ಪೊಣರ್ದು ಬಾಹುಬಲಿ ಭರತನ | ನೆಲಕಿಕ್ಕಲದುವೆ ಸಿಗ್ಗಾಗಿ
ಮುಳಿದು ಚಕ್ರಕೆ ಬೆಸಸಲುಮದು ಬಲವಂದು | ಬಲದಭಾಗದೊಳು ನಿಂದಾಗ

(ಪುರುಚ.X-೧೩)

ಮಲ್ಲಯುದ್ಧದೊಳ್ ಪೊಣರ್ದು ಪಲವಾಯಂಗಳೊಳ್ ಪೊಣರ್ದು ಶ್ರಾಂತವಾದಾಗಳ್ ಭರತನಂ ಪಿಡಿದೆತ್ತಿ ನೆಲಕಿಕ್ಕುವುದುಂ ಭರತನುಂ ಸಿಗ್ಗಾಗಿ ಚಕ್ರರತ್ನಂ ಬೆಸಸಿದೊಡದು ಬಂದು ಬಾಹುಬಲಿಯಂ ಬಲಗೊಂಡು ನಿಲೆ (ಚಾವುಂಪು. ಪುಟ ೫೮)

**ಆದಿಪರಮೇಶ್ವರನಯಕ್ಷಗಾನ :** ಭರತಚಕ್ರಿಯು ತನ್ನ ದಿಗ್ವಿಜಯಯಾತ್ರೆಯ ನಂತರ ಮಂತ್ರಿವರರನ್ನು ಬಾಹುಬಲಿಯ ಬಳಿಗೆ ಕಳುಹಿಸಿಕೊಡುವುದು, ಸ್ಮರರಾಜ ಬಾಹುಬಲಿಯ ಆಸ್ಥಾನದ ಸಲ್ಲೀಲೆ, ಬಂದ ಮಂತ್ರಿಗಳನ್ನು ಬಾಹುಬಲಿ ಕುಮಾರನು ವಿಚಾರಿಸಿಕೊಂಡುದು, ಮಂತ್ರಿಗಳು ಭರತನನ್ನು ಬಂದು ನೋಡೆನ್ನಲು ಬಾಹುಬಲಿಯು ತಿರಸ್ಕರಿಸಿದುದು, ಮಂತ್ರಿಗಳು ಬುದ್ಧಿ ಹೇಳಿದುದು, ಬಾಹುಬಲಿಯ ಜಗ್ಗದಿರುವಿಕೆ, ಇದನ್ನರಿತ ಭರತ 'ಚಕ್ರ ನಡೆವ ಪರಿ ಯಾವುದು? ತಮ್ಮನೊಡನೆ ಯುದ್ಧ ಸಲ್ಲದು' ಎಂದು ಮತ್ತೆ ನಾಲ್ವರು ದೂತರನ್ನು ಬಾಹುಬಲಿಯಲ್ಲಿಗೆ ಕಳುಹಿಸಿದುದು, ಮತ್ತೆ ಮತ್ತೆ ಕೇಳಿಕೊಂಡರೂ ಬಾಹುಬಲಿ ಹಟಹಿಡಿದುದು, ತನ್ನ ಪೌರುಷದ ಬಗೆಗೆ ಆತ್ಮಾಭಿಮಾನದಿಂದ ನುಡಿದು ಯುದ್ಧ ಸನ್ನದ್ಧನಾಗಲು ಭರತನಿಗೆ ತಿಳಿಸಿಯೆಂದು ಹೇಳಿಕಳುಹಿಸಿದುದು, ಈ ವಿಷಯ ತಿಳಿದು ಭರತ ಕೋಪಾಕುಳನಾದುದು, ಭರತನು ಯುದ್ಧಕ್ಕೆ ತೆರಳಿದುದು, ಚದುರಂಗ ಬಲದೊಂದಿಗೆ ಉಭಯ ರಾಜರು ಯುದ್ಧಕ್ಕೆ ಸಿದ್ಧರಾಗಿ ನಿಂತುದು, ಉಭಯ ಪಕ್ಷದ ರಾಯಭಾರಿಗಳು ಚರಮದೇಹಿಗಳ ಯುದ್ಧದಲ್ಲಿ ಸಾಮಾನ್ಯ ಸೈನ್ಯಕ್ಕೆ ಒದಗುವ ಹಾನಿಯನ್ನು ನೆನೆದು ಭರತಬಾಹುಬಲಿಗಳನ್ನು ದ್ವಂದ್ವಯುದ್ಧಕ್ಕೆ ಒಪ್ಪಿಸಿದುದು, ಉಭಯ ಸೈನ್ಯವು ಆಶ್ಚರ್ಯಗೊಳ್ಳುವಂತೆ ಇರ್ವರಲ್ಲಿ ಶರಸಂಗ್ರಾಮ ನಡೆದುದು, ಬೆಗೆಬಗೆಯ ಬಾಣಗಳಿಂದ ಯುದ್ಧಮಾಡಿದುದು, ಧುರಧೀರನಾದ ಬಾಹುಬಲಿಯನ್ನು ಗೆಲ್ಲಲು ಅಸಾಧ್ಯವೆಂದು ತಿಳಿದು ಮರಳಿ ಭರತ ಬಾಹುಬಲಿಗೆ ತನ್ನ ಸ್ಥಿತಿಯನ್ನು ಬಣ್ಣಿಸಿದುದು, ಬಾಹುಬಲಿ ಮಲೆತು ನಿಂತಿರಲು ಭರತನು ಮತ್ತೆ ಯುದ್ಧ ನಡೆಸಿದುದು, ಕೊನೆಗೆ ಕೋಪಗೊಂಡು

ಚಕ್ರರತ್ನವನ್ನು ಪ್ರಯೋಗಿಸಿದುದು, ಅದು ಬಲಭಾಗದಲ್ಲಿ ನಿಂತಾಗ ಪಶ್ಚಾತ್ತಾಪಗೊಂಡು ಬಾಹುಬಲಿಯನ್ನು ಮನ್ನಿಸೆಂದು ಕೇಳಿಕೊಂಡುದು, ಬಾಹುಬಲಿಯ ಪಶ್ಚಾತ್ತಾಪ, ವೈರಾಗ್ಯ, ಭರತನ ಪ್ರಾರ್ಥನೆ, ಬಾಹುಬಲಿ ಮಗನಿಗೆ ರಾಜ್ಯವಿತ್ತು ಸಮವಸರಣಕ್ಕೆ ಬಂದುದು, ವೃಷಭಸ್ವಾಮಿಯನ್ನು ಸ್ತುತಿಸಿದುದು, ಸ್ವಾಮಿಯಿಂದ ದೀಕ್ಷಿತನಾಗಿ ಉಗ್ರೋಗ್ರ ತಪವನ್ನು ಕೈಗೊಂಡುದು, ಮಾನಕಷಾಯ ನಿವಾರಣೆ, ಬಾಹುಬಲಿಯ ಜ್ಞಾನೋದಯ, ಜ್ಞಾನೋದಯದ ಪರಿ, ಗಂಧಕುಟಿಯ ರಚನೆ, ಸುರರು ಬಾಹುಬಲಿ ಮುನೀಶ್ವರನಿಗೆ ಕೇವಲಜ್ಞಾನ ನಿರ್ವಾಣ ಕಲ್ಯಾಣ ಪೂಜೆಯನ್ನು ಸಲ್ಲಿಸಿದುದು—ಈ ಅನೇಕ ಕಥಾಘಟ್ಟಗಳ ಹರವಿನಲ್ಲಿ ವಿಸ್ತಾರ ವಿವರಣೆಯೊಂದಿಗೆ ಈ ಭಾಗವು ಮೂಡಿ ಬಂದಿದೆ. ಭಾಷೆಯ ಬಿಗಿಯಾದ ಬಂಧವಿಲ್ಲದ ಕಾರಣ ಈ ಭಾಗದ ಕಾವ್ಯಾಸ್ವಾದನೆಗೆ ಅಡ್ಡಿಯಾಗಿದೆ. ಆದರೂ ಅಲ್ಲಲ್ಲಿ ಹುಡುಕಿ ನೋಡಿದರೆ ಕೆಲವು ಭಾಗಗಳು ಕಾವ್ಯಾಸ್ವಾದನೆಗೆ ಎಡೆಮಾಡಿ ಕೊಡುತ್ತವೆ. ಹಿಂದಿನ ಕಾವ್ಯಗಳಿಗಿಂತ ಕವಿ ವಿಭಿನ್ನರೀತಿಯಲ್ಲಿ ಭರತ-ಬಾಹುಬಲಿಗಳ ವ್ಯಾಯೋಗ ವರ್ಣನೆಯನ್ನು ಮಾಡಿದ್ದಾನೆ ಎಂಬುದು ಇಲ್ಲಿಯ ವಿಶೇಷತೆ.

ಇಲ್ಲಿಯ ರಚನಾ ವಿಧಾನಕ್ಕೆ ಉದಾಹರಣೆಯಾಗಿ ಕೆಲವು ಭಾಗಗಳನ್ನು ಉದಾಹರಿಸ ಬಹುದಾಗಿದೆ.

ಭರತನ ಮಂತ್ರಿಗಳು ಬಾಹುಬಲಿಯಲ್ಲಿ ಹೇಳಿದ ಕೆಲವು ಮಾತುಗಳು :

ಭರತ ಚಕ್ರೇಶ್ವರನ ದರುಶನವು ಮಾತ್ರದಲಿ
ದುರಿತವು ಕರ್ಮಕ್ಷಯವು ಪರಮಧರ್ಮವಹುದು
ನಿನ್ನಗ್ರಜನಾದ ಚಕ್ರಿಯ ಸನ್ನಿಧಿಗೆ ಪೋಪುದಕೆ ನೀವೀ
ಭಿನ್ನ ಚಿತ್ತವ ತಾಳ್ದ ಬಗೆಯಿದು ನನ್ನಿಯಹುದೆ (ಪರಿಚ್ಛೇದ-vi)

ಭರತನು ಮಂತ್ರಿಗಳೊಂದಿಗೆ ಆಡಿದ ಮಾತುಗಳು :

ಅಲ್ಲವಯ್ಯಾ ತಮ್ಮನೊಡನೆ ಸಲ್ಲ ಕಾರ್ಯಕದನ ಹೊಲ್ಲ
ಬಲ್ಲರೈದಿಪೋಗಿ ತಿಳುಹಿದಲ್ಲದಾಗದೆಮ್ಮ ಕಾರ್ಯವು (ಪರಿಚ್ಛೇದ-vi)

ಬಾಹುಬಲಿ ಮಂತ್ರಿಗಳಿಗೆ ಹೇಳಿದ ಮಾತುಗಳು :

ಚಕ್ರಿಯಾಗಲಿ ಚಕ್ರವಾಗಲಿ ಶಕ್ರನಾಗಲಿ ಬಂದುಯನ್ನಯ
ವಿಕ್ರಮವನು ವಿಚಾರಿಸಲಿ ಪರಾಕ್ರಮದೊಳು
ಎರಗಿದಲ್ಲದೆ ಬಿಡೆವುಮೆಂಬಿ ಬರಿಯ ಬಿಂಕವ ಮಾಣಿ ನಿಮ್ಮೆಂ
ಮಿರುವು ದುರದೊಳೆಕಾಣಬಪ್ಪುದು ತೆರಳಿಮೆನಲು (ಪರಿಚ್ಛೇದ -vi)

ಈ ಮಾತುಗಳಲ್ಲಿ ಅಲ್ಲಲ್ಲಿಯೇ ಮೂಡಿರುವ ಸಂಭಾಷಣಾವಿಧಾನ ಸಹಜವಾಗಿ ಕಂಡುಬರುತ್ತದೆ.

ಭರತ ಬಾಹುಬಲಿಗಳು ಯುದ್ಧಕ್ಕೆ ನಿಂತಾಗ ಬೆಕ್ಕಸಬೆರಗಾಗಿ ನಿಂತ ಸೈನ್ಯವು "ಆಶ್ರಯ ತಪ್ಪಿದರಂತೆ ಲೆಕ್ಕವ ಮರದಂತೆ ಕೊಳುಗೊಂಟೆಯೊಳು ಸಿಕ್ಕಿದರಂತೆ ಮಂಕುಗ್ರಹವೇಷ್ಟಿತ ರಂತೆ ನೋಡುತ್ತಿರಲ್" ಭರತೇಶ್ವರ ಬಾಹುಬಲಿಗಳು ಕಾದಿದರು ಎಂದು ಹೇಳುವಲ್ಲಿ ಕವಿ ಪ್ರಭಾವಕಾರಿಯಾದ ಉಪಮಾಮಾಲೆಯನ್ನು ನೀಡಿ ವರ್ಣಿಸಿದ್ದಾನೆ.

ಭರತ-ಬಾಹುಬಲಿಗಳ ಯುದ್ಧ :

ಗಿರಿಶರದ ಘಾತಕ್ಕೆ ಗಿರಿಗಳೈದುವ ಭರಕೆ
ಕಟಕ ತಳ್ಳಂಕದಲಿ ಕಂಗೆಡಲು ನಿಮಿಷದಲಿ
ಕುಲಿಶ ಬಾಣವ ತೊಟ್ಟು ಕಲಿಬಾಹುಬಲಿಬಿಟ್ಟು
ನಘ ಸಮೂಹವನೆಲ್ಲ ನುಗ್ಗು ಗುಟ್ಟಲು ಬಿಲ್ಲ
ಬಲ್ಲಹನೆ ಭಾಪೆಂದು ಬಿಡೆ ತಿಮಿರ ಶರಮೊಂದು
ಗಾಢಾಂಧಕಾರವಾವರಿಸಿ ಗಗನವೆಲ್ಲಾವರಿಸಿ
ಕತ್ತಲೆಯ ಘಾತವನು ಕಿತ್ತಿಡುವ ತಪವನ್ನು
ಮತ್ತೆಸದು ಕೆಡಿಸಿದನು ಕತ್ತಲೆಯ ಶರಗಳನು (ಪರಿಚ್ಛೇದ-vi)

ಚಕ್ರವು ಬಾಹುಬಲಿಯ ಪಕ್ಕ ಬಂದು ನಿಂತಾಗ, ಭರತನ ಮನದ ಮಾತುಗಳು :

ಕಾದಿ ಕೀರ್ತಿಯುಮಿಲ್ಲ ಕಾದಿಜಯಿಸಲಿಲ್ಲ ಮೇದಿನಿಯೊಳಗಪಕೀರ್ತಿಗೀಡಾದೆ
ಫಲವು ದಕ್ಕಿದುದಿಲ್ಲ ಗೆಲುವು ಸಾರಿದುದಿಲ್ಲ ಹೊಲಬುದಪ್ಪಿದರಂತೆ ಕಲಿಲಕೀಡಾದೆ
(ಪರಿಚ್ಛೇದ-vi)

ಎಂಬ ಮಾತುಗಳಲ್ಲಿ ಉಳಿದ ಕಾವ್ಯಗಳಲ್ಲಿ ಕಾಣದ ಭರತನ ಆಂತರ್ಯದ ಸಹಜನುಡಿಗಳು ಕಂಡುಬರುತ್ತವೆ.

ಬಾಹುಬಲಿಯ ಪಶ್ಚಾತ್ತಾಪ, ಅಣ್ಣನನ್ನು ಕುರಿತು ಆಡುವ ಮಾತುಗಳು :

ಚಿಣ್ಣನವಗುಣವನು ನೋಡದೆ ತಣ್ಣೆಸೈ ಕೋಪಾಗ್ನಿಯ ಶಾಂತರಸದಿ
ತೋರಿದೆನು ಸಾಹಸವ ಕಲಿತುದು ತೋರುವೊಲು ಬಾಲಂಗುರು ಉಪಾಧ್ಯಾಯರಿಗೆ
ನಿನ್ನನುಜನೆಂದರಿದು ಚಕ್ರಪ್ರಸನ್ನಮಾದುದು ಮಿಕ್ಕಿನಾ
ಕಿನ್ನರಾಮರರಿದಿರೆ ಸದ್ಗುಣ ರನ್ನ ಶ್ರೀ ಜಿನದೀಕ್ಷೆಗೆ ಕಳುಹಿಸೆನ್ನ (ಪರಿಚ್ಛೇದ-vi)

ಎಂಬ ಮಾತುಗಳಲ್ಲಿ ಪಂಪನ ಪ್ರಭಾವ ಕಂಡುಬಂದರೂ ಕವಿ ತನ್ನದೇ ಆದ ಉಪಮಾವಿಧಾನವನ್ನಳವಡಿಸಿದ್ದಾನೆ. ಜಾನಪದೀಯ ಧಾಟಿಯ ಈ ವಿವರಣೆಗಳಲ್ಲಿ ಆತ್ಮೀಯ ಧಾಟಿಯನ್ನು ಗುರುತಿಸಬಹುದಾಗಿದೆ.

ಮಾನಕಷಾಯ ನಿವಾರಣೆಯ ಸಂದರ್ಭದಲ್ಲಿ ಭರತನಾಡುವ ಮಾತುಗಳು :

ಹಲಬರೆಂಜಲ ಹಾಳೆ(ಯೀ)ಕ್ಷಿತಿಗೆಳಸಿ ನನ್ನದು ತನ್ನದೆಂಬೀ
ಛಲದಿ ಕಾದಿಯು ಮಡಿದರಖಿಳ ಭೂತಿಲಕರೆಲ್ಲಾ

ಇಲ್ಲಿ ಪಂಪನ "ಮಡಗೂಟ್ಸೆಲಂ" ಎಂಬ ಮಾತು "ಹಲಬರೆಂಜಲ ಹಾಳೆ(ಯೀ) ಕ್ಷಿತಿ" ಎಂಬ ಮಾರ್ಪಾಡಿನೊಂದಿಗೆ ಬಂದಿದೆ, ಆದರೆ ಭಾವ ಒಂದೇ.

ಆದಿತೀರ್ಥಂಕರ ಚರಿತ್ರೆಗಳಲ್ಲಿ ಇದುವರೆಗೆ ಕಂಡುಬಾರದ ಒಂದು ಹೊಸ ಸಂಗತಿಯನ್ನು ಭರತಬಾಹುಬಲಿಗಳ ವ್ಯಾಯೋಗ ಸಂದರ್ಭದಲ್ಲಿ ಕವಿ ಅಳವಡಿಸಿದ್ದಾನೆ. ಈ ಅಣ್ಣತಮ್ಮಂದಿರ ನಡುವೆ ಆದುದು ಶರಸಂಧಾನಯುದ್ಧವೆಂದು ಹೇಳಿದ್ದಾನೆ. ಆ ಸನ್ನಿವೇಶವನ್ನು ಸಾಕಷ್ಟು ದೀರ್ಘವಾಗಿ ವರ್ಣಿಸಿದ್ದಾನೆ. ದಿಗಂಬರ ಶ್ವೇತಾಂಬರ ಪರಂಪರೆಗಳಿಗಿಂತ ವಿಭಿನ್ನವಾಗಿರುವ ಈ ವ್ಯಾಯೋಗದ ರೀತಿ ಕವಿಯ ಸ್ವಕಲ್ಪಿತ ರಚನೆಯಂತೆ ತೋರುತ್ತದೆ. ಇಲ್ಲವೆ, ಈ ರೀತಿಯ ವ್ಯತ್ಯಾಸವನ್ನು ಮಾಡಿಕೊಳ್ಳಲು, ರತ್ನಾಕರವರ್ಣಿಯ 'ಭರತೇಶವೈಭವ'ವು ಪ್ರೇರಣೆಯನ್ನು ನೀಡಿರಲೂ ಬಹುದು. ಭರತನು ಬಾಹಬಲಿಯನ್ನು

ಮಾತಿನಿಂದಲೇ ಸೋಲಿಸಿದನೆಂದು ರತ್ನಾಕರವರ್ಣಿಯು ಹೇಳಿದ್ದಾನೆ. ರತ್ನಾಕರವರ್ಣಿ ತನ್ನ ಕಾವ್ಯದಲ್ಲಿ ಅಲ್ಲಲ್ಲಿ ಶ್ವೇತಾಂಬರ ಪರಂಪರೆಯಿಂದ ಪ್ರಭಾವಿತನಾಗಿ ಕಂಡುಬಂದರೂ, ಈ ಪ್ರಸಂಗದಲ್ಲಿ ಹಾಗೆ ಹೇಳುವಂತಿಲ್ಲ, ಏಕೆಂದರೆ ಶ್ವೇತಾಂಬರ ಪರಂಪರೆಯಲ್ಲಿ ಈ ಪ್ರಸಂಗದ ಚಿತ್ರಣವು ಇತರ ದಿಗಂಬರ ಪರಂಪರೆಯಲ್ಲಿ ಬರುವ ಚಿತ್ರಣದಲ್ಲಿರುವಂತೆಯೇ ಕಂಡುಬರುತ್ತದೆ. ರತ್ನಾಕರವರ್ಣಿಯು ಮಾಡಿಕೊಂಡಿರುವ ಈ ವ್ಯತ್ಯಾಸಕ್ಕೆ ಒಂದು ನಿರ್ದಿಷ್ಟ ಕಾರಣವು ಕಂಡುಬರುತ್ತದೆ. ಅಲ್ಲಿ ಕವಿ ಭರತನಿಗೆ ಹೆಚ್ಚಿನ ಪ್ರಾಶಸ್ತ್ಯವನ್ನು ಸಲ್ಲಿಸಬೇಕಾಗಿದೆ. ಆದರೆ, ಬೊಮ್ಮಣ್ಣ ಕವಿಯು ಮಾಡಿಕೊಂಡಿರುವ ಈ ಮಾರ್ಪಾಡಿಗೆ ನಿರ್ದಿಷ್ಟ ಕಾರಣ ತಿಳಿದುಬರುವುದಿಲ್ಲ.

ಚಿಕ್ಕಣ್ಣ ಪಂಡಿತನ (ಕ್ರಿ. ಶ. ೧೫ನೇ ಶ.) 'ಬಾಹುಬಲಿ ಚರಿತೆ', ಪಂಚಬಾಣನ (ಕ್ರಿ. ಶ. ೧೬೧೪) 'ಭುಜಬಲಿ ಚರಿತೆ', ಚದುರ ಚಂದ್ರಮನ (ಕ್ರಿ. ಶ. ೧೬೪೬) 'ಮದನಾರಿ ಗುಮ್ಮಟಸ್ವಾಮಿಯ ಚರಿತೆ'ಗಳಲ್ಲಿ ಈ ಪ್ರಸಂಗವು ವಿಸ್ತೃತವಾಗಿ ಪಂಪನ ಕಥಾಮಾರ್ಗವನ್ನು ಹಿಡಿದು ರಚನೆಗೊಂಡು ಬಂದಿರುವುದನ್ನು ಈಗಾಗಲೇ ಹಿರಿಯ ವಿದ್ವಾಂಸರು ಗುರುತಿಸಿದ್ದಾರೆ.[೬೧] ಅಲ್ಲದೆ ಇವುಗಳಲ್ಲಿ ಆದಿತೀರ್ಥಂಕರನ ಕಥೆಯು ಸಂಕ್ಷೇಪವಾಗಿ ಬರುತ್ತದೆ.

ಹದಿನಾರನೆಯ ಶತಮಾನದ ಉತ್ತರಾರ್ಧದಲ್ಲಿ ಬಾಳಿದ ಕವಿ ರತ್ನಾಕರವರ್ಣಿಯಲ್ಲಿ ಬಾಹುಬಲಿಯ ಚಿತ್ರಣ ವಿಭಿನ್ನರೀತಿಯಲ್ಲಿ ಚಿತ್ರಿತವಾಗಿದೆ. ಕಾವ್ಯ 'ಭರತೇಶವೈಭವ' ಆದುದರಿಂದ ಇಲ್ಲಿ ಭರತನಿಗೇ ಹೆಚ್ಚಿನ ಮನ್ನಣೆ. ಉಳಿದ ಕಾವ್ಯಗಳಿಗಿಂತ ಇಲ್ಲಿ ಭರತ ಬಾಹುಬಲಿಗಳ ವ್ಯಾಯೋಗ ಪ್ರಸಂಗ ವಿಭಿನ್ನವಾಗಿ ನಿಲ್ಲುವುದರಿಂದ ಅದನ್ನು ಸಂಕ್ಷೇಪವಾಗಿ ಅವಲೋಕಿಸಲಾಗಿದೆ.

ಚಕ್ರರತ್ನವನ್ನು ಪಡೆದ ಭರತನು ದಿಗ್ವಿಜಯವನ್ನು ಸಾಧಿಸಿ ಮರಳಿ ಬರುತ್ತಿರುವಾಗ ಪೌದನಪುರದ ಬಳಿ ಚಕ್ರರತ್ನ ತಡೆದು ನಿಂತಿತು. ಸೋದರರು ಬಂದು ಭರತನಿಗೆ ಆನತರಾಗಬೇಕೆಂಬುದರ ಸೂಚನೆ ಇದೆಂದು ಪುರೋಹಿತರು ತಿಳಿಸಿದರು. ಈ ಅಂಶಗಳು ಹಿಂದಿನ ಪುರಾಣಗಳಲ್ಲಿ ಚಿತ್ರಿತವಾದಂತೆಯೇ ಇವೆಯಾದರೂ ಬಾಹುಬಲಿಯನ್ನು ಚಿತ್ರಿಸುವಲ್ಲಿ ಆತನು ಆಗಿನ ಕಾಲದ ಕಾಮದೇವನಾಗಿದ್ದನೆಂಬಂಶವನ್ನೇ ವಿಶೇಷವಾಗಿ ಪರಿಗಣಿಸಲಾಗಿದೆ.

ಅಣ್ಣನೊಡನೆ ಬಾಹುಬಲಿ ಯುದ್ಧಕ್ಕೆ ನಿಲ್ಲುವನೆಂಬ ಮಾತನ್ನು ಕೇಳಿದಾಗ ಆತನ ತಾಯಿ ಸುನಂದಾದೇವಿ ಹಾಗೂ ಆತನ ಪತ್ನಿಯರು ಪರಿತಪಿಸಿದರು; ಹಾಗೆ ಮಾಡಬಾರದೆಂದು ಬುದ್ಧಿ ಹೇಳಿದರು. ಅವರನ್ನು ಸಮಾಧಾನ ಪಡಿಸಲೆಂಬಂತೆ ಬಾಹುಬಲಿ 'ಕೋಪವಿರ್ದುದು ಮೊದಲೆನಗೆ ನಿಮ್ಮೆಲ್ಲರಾಲಾಪವ ಕೇಳ್ದು ತಂಪಾಯ್ತು....ಅಣ್ಣಗೆರಗಿ ಬಂದಪೆನ್' ಎಂದು ಹುಸಿ ನುಡಿದನು. ಈ ಸಂದರ್ಭದಲ್ಲಿ ಬಾಹುಬಲಿಯ ವ್ಯಕ್ತಿತ್ವವನ್ನು ಕವಿ ತೀರಾ ಕೆಳಮಟ್ಟಕ್ಕೆ ಇಳಿಸಿದ್ದಾನೆ. 'ಮದನಗೆ ವಂಚನೆ ಸಹಜ' ಎಂದು ಕವಿ ನುಡಿದಿದ್ದಾನೆ. ಹಿಂದಿನ ಪುರಾಣಗಳಲ್ಲಿ ದೂತಪ್ರಸಂಗದಲ್ಲಿ ಕಂಡುಬರುವ ಬಾಹುಬಲಿ ಮುಚ್ಚು ಮರೆ ಅರಿಯದವನು. ತನಗನ್ನಿಸಿದುದನ್ನು ನೇರವಾಗಿ ನುಡಿಯುವ ನಿಷ್ಠುರವಾದಿ. ಆದರೆ ಇಲ್ಲಿಯ ಬಾಹುಬಲಿ ವಂಚನೆಯನ್ನು ಸಹಜವಾಗಿ ಮೈಗೂಡಿಸಿಕೊಂಡವನಾಗಿ ಕಂಡು

ಬರುತ್ತಾನೆ.

ಅರ್ಕಕೀರ್ತಿಯೇ ಮೊದಲಾದ ಭರತನ ಮಕ್ಕಳು ತಮ್ಮ ಚಿಕ್ಕಪ್ಪನನ್ನು ಕಾಣಲು ಕಾಣಿಕೆಯೊಂದಿಗೆ ಪ್ರೀತಿಯಿಂದ ಬಂದಾಗ ಬಾಹುಬಲಿ ಅವರನ್ನು ತಿರಸ್ಕರಿಸಿದನು. "ಬರಬೇಡ ಹೋಗಹೇಳೋ. ಅವರ ಹಿತ ನನಗರಸು" ಎಂದು ತಿರುಗಿ ಕಳುಹಿಸಿದನು. ಬಾಗಿಲಿಗೆ ಬಂದ ಮಕ್ಕಳು ಕಳವಳದಿಂದ ಹಿಂದಿರುಗಿದರು. ಬಾಹುಬಲಿಯ ಈ ಹೃದಯ ಹೀನ ವರ್ತನೆ ಎಂತಹವರಿಗೂ ಸರಿಬಾರದು. ಬಾಹುಬಲಿಯ ಬಗೆಗೆ ಈ ಭಾವನೆಗಳನ್ನು ಉಂಟುಮಾಡಲೆಂದೇ ಕವಿ ಇಂತಹ ಪ್ರಸಂಗಗಳನ್ನು ಜೋಡಿಸಿದಂತಿದೆ.

ಅಣ್ಣ ತಮ್ಮಂದಿರಲ್ಲಿ ಯುದ್ಧ ಪ್ರಾರಂಭವಾಗುವ ಮೊದಲು ಭರತ, ಬಾಹುಬಲಿ ಯೊಂದಿಗೆ ಓಲೈಸುವ ಮಾತುಗಳನ್ನಾಡಿದನು. 'ಈ ರೀತಿಯ ಕದನವೇಕೆ? ಒಡಹುಟ್ಟಿದವ ನೆಂಬ ಕಾರಣಕ್ಕಾಗಿ ನೋಡುವ ಅಪೇಕ್ಷೆಯಿಂದ ಬರಹೇಳಿ ಕಳಿಸಿದರೆ ಈ ರೀತಿ ಕಾಳಗಕ್ಕೆ ಬರಬೇಕೆ? ನಾನು ನಿನಗಿಂತ ಹಿರಿಯನಾದದ್ದರಿಂದ ಇಲ್ಲಿಗೆ ಬರಹೇಳಿದೆನಲ್ಲದೆ, ನೀನೇ ಹಿರಿಯನಾಗಿದ್ದರೆ ನೀನಿದ್ದಲ್ಲಿಗೆ ಬಂದು ಕಾಣದಿರುತ್ತಿದ್ದನೆ? ಈ ಕದನ ಬೇಡ. ಇಗೋ ನಿನಗೆ ಗೆಲುವಾಗಿದೆ. ನಾನು ಸೋತಿರುವೆ. ಸ್ಮರನಿಗೆ ಸೋಲದವರಾರು?' ಮುಂತಾಗಿ ಹೇಳಿ, ಬಾಹುಬಲಿಯ ಸೇವೆಗೆ ಹೋಗಲು ಚಕ್ರರತ್ನಕ್ಕೆ ಆಜ್ಞಾಪಿಸಿದನು. ಆದರೆ ಚಕ್ರರತ್ನ ಬಾಹುಬಲಿಗೆ ಸೇವೆಸಲ್ಲಿಸದೆ ನಿಂತಾಗ ಭರತ ಮತ್ತೆ ಅದನ್ನು ಬಲಾತ್ಕಾರದಿಂದ ಅಟ್ಟಿದಾಗ ಧರೆ ನಡುಗಿತು, ಧೂಮಕೇತುಗಳೆದ್ದುವು. ಈ ಅಘಟಿತ ಘಟನೆಗಳನ್ನು ನೋಡಿದ ಬಾಹುಬಲಿಯ ಮನಸ್ಸು ಪರಿವರ್ತನೆಗೊಂಡಿತು. ಪಶ್ಚಾತ್ತಾಪದ ಬೇಗೆಯಲ್ಲಿ ಬೆಂದು ನಾಚಿ ನೀರಾದನು. "ಎರಿದ ಹಡೆಯಿಳಿವಂತೆ ಮುನ್ನಿನ ಗರ್ವ ಜಾರಿತು. ಮೃದುವಾಯ್ತು ಚಿತ್ತ." ನಂತರ "ಅಣ್ಣಗಿದಿರೊಡ್ಡಿ ನಿಂದ ದೇಹ ಮಸಿಮಣ್ಣ ಮಾಳ್ಪನು ತಪಗೊಡ್ಡಿ" ಎಂದು ದೀಕ್ಷೆ ವಹಿಸಿ ತಪಸ್ಸಿಗೆ ಹೋದನು. ಮುಂದೆ ಮಾನಕಷಾಯ ನಿವಾರಣೆ ಮೊದಲಾದ ವಿಚಾರಗಳು, ಪೂರ್ವವರ್ತಿ ಪುರಾಣಗಳಲ್ಲಿ ಬರುವಂತೆಯೇ ಕಂಡುಬರು ತ್ತವೆ. "ಭರತನನ್ನು ಸರ್ವದೃಷ್ಟಿಯಿಂದಲೂ ಹಿರಿಯನನ್ನಾಗಿ ಮಾಡಬೇಕೆಂಬ ಹಂಬಲ ಕವಿ ರತ್ನಾಕರನಿಗಿದ್ದುದು ಅಕ್ಷೇಪಾರ್ಹವಲ್ಲದಿದ್ದರೂ, ಭರತನನ್ನು ಎತ್ತಲು ಹೋಗಿ ಬಾಹುಬಲಿಯನ್ನು ಕೆಳಗಿಳಿಸಿ ಬರೆದುದನ್ನು ಓದಿದಾಗ ಮನಸ್ಸಿಗೆ ಚೇಳು ಕಡಿದಂತಾಗು ತ್ತದೆ."[೨೨] ಆದಿಪುರಾಣದಲ್ಲಿ ಚಿತ್ರಿತವಾಗಿರುವ ಪಾತ್ರದ ಘನತೆಯೇ ಹಾಗಿದೆ.

ಕವಿ ರತ್ನಾಕರವರ್ಣಿಯು ತನ್ನ 'ಭರತೇಶವೈಭವದಲ್ಲಿ' ಈ ಹಲವಾರು ಪ್ರಸಂಗಗಳಲ್ಲಿ ಮಾಡಿಕೊಂಡಿರುವ ವ್ಯತ್ಯಾಸಗಳು ಸಂಪ್ರದಾಯಸ್ಥರಿಗೆ ಇಷ್ಟವಾಗದೆ ಹೋಗಬಹುದು. ಏಕೆಂದರೆ ರತ್ನಾಕರವರ್ಣಿಗಿಂತ ಪೂರ್ವಭಾವಿಯಾಗಿ ಜಿನಸೇನ-ಪಂಪರ ಕಥಾಪ್ರಸಂಗ ಗಳು ಪುರಾಣಮಾನ್ಯವಾಗಿದ್ದುವು. ಅಲ್ಲದೆ ಅಲ್ಲಿ ಬಾಹುಬಲಿಯ ವ್ಯಕ್ತಿತ್ವ ಮೇರುಸದೃಶ ವಾದುದು. ಪುರಾಣಪರಂಪರೆಯಿಂದ ವಿಭಿನ್ನವಾಗಿ ನಿಲ್ಲುವ ಕೃತಿಗಳಿಗೆ ಮಾನ್ಯತೆ ನೀಡ ಲಾಗುತ್ತಿರಲಿಲ್ಲ ಎಂಬ ಅಂಶವು ದೇವಚಂದ್ರನ (ಕಾಲ ೧೭೭೦ ರಿಂದ ೧೮೪೧) ರಾಜಾವಳೀ ಕಥಾಸಾರದಿಂದಲೂ ತಿಳಿದುಬರುತ್ತದೆ. ತಮ್ಮ ಶಿಷ್ಯ ವಿಜಯಣ್ಣನು ಬರೆದ ದ್ವಾದಶಾನುಪ್ರೇಕ್ಷೆಯನ್ನು ಆನೆಯ ಮೇಲಿಟ್ಟು ಮೆರವಣಿಗೆ ಮಾಡಿಸಲು ವಿಜಯಕೀರ್ತಿ ಪಟ್ಟಾಚಾರ್ಯರು ಅನುಮೋದನೆಯನ್ನು ನೀಡಿದರು. ಆದರೆ ರತ್ನಾಕರನು ಬರೆದ 'ಭರತೇಶ

ವೈಭವ'ದಲ್ಲಿ 'ಎರಡು ಮೂರು ವಾಕ್ಯಂ ಪುರಾಣಕ್ಕೆ ವಿರೋಧಮಿಪ್ಪುದರಿಂದ' ಅದಕ್ಕೆ ಆ ಮಾನ್ಯತೆಯನ್ನು ಅವರು ನೀಡಲು ಸಮ್ಮತಿಸಲಿಲ್ಲ ಎಂಬ ವಿಚಾರವು ದೊರೆಯುತ್ತದೆ (ರಾಜಾವಳೀ ಕಥಾಸಾರ : ಅಧಿಕಾರ xi).

ಒಟ್ಟಿನಲ್ಲಿ ಭರತ ಬಾಹುಬಲಿಗಳ ವ್ಯಾಯೋಗ ಅನೇಕ ಕವಿಜನಮನವನ್ನು ಸೆಳೆಯುವ ಭಾಗವಾಗಿದೆ, ಭಾವಕಲಾಮೇಳವಾಗಿದೆ. "ಎಂಥ ಉನ್ನತ ಭಾವ, ಎಷ್ಟು ಉದಾತ್ತರಾದ ವ್ಯಕ್ತಿಗಳು ಈ ಅಣ್ಣ ತಮ್ಮಂದಿರು! ಅಣ್ಣನ ಅಹಂಕಾರ ತಮ್ಮನಿಂದ ನಿರಸನವಾಗುತ್ತದೆ. ತಮ್ಮನ ಮಾನಕಷಾಯ ಅಣ್ಣನಿಂದ ತೊಲಗುತ್ತದೆ. ಒಬ್ಬನಿಂದ ಮತ್ತೊಬ್ಬ ಪರಿಶೋಧಿತನಾಗಿ ಇಬ್ಬರೂ ಜ್ಞಾನಿಗಳಾಗಿ ಸುಖವನ್ನು ಪಡೆಯುತ್ತಾರೆ. ಅತ್ಯಾಶ್ಚರ್ಯಕರವಾದ ಪರಿವರ್ತನೆ, ಅಮೋಘವಾದ ಕತೆ."[೭೪]

## ಭರತನ ವೈರಾಗ್ಯ, ಮುಕ್ತಿ

ವೃಷಭನಾಥನ ನಿರ್ವಾಣದ ನಂತರ ಭರತೇಶ್ವರನಿಗುಂಟಾದ ದುಃಖವನ್ನು ವೃಷಭಸೇನ ಗಣಧರನು ನಿವಾರಿಸಿದನು. ಈ ಸಂದರ್ಭದಲ್ಲಿ ಸ್ವಾಮಿಯ ಹಾಗೂ ಇನ್ನಿತರರ ಭವಾವಳಿಗಳ ವಿವರ, ಭವಪ್ರಪಂಚದ ವೈಚಿತ್ರ್ಯ ಇವುಗಳ ವರ್ಣನೆ ಬರುತ್ತದೆ. ಇಲ್ಲಿ ಬರುವ ಮಾತುಗಳನ್ನು ಪಂಪನು ಪೂರ್ವಪುರಾಣದಿಂದ ಸಂಗ್ರಹಿಸಿದ್ದಾನೆ. ಅಲ್ಲದೆ ಅಲ್ಲಲ್ಲಿಯೇ ಕೆಲವು ಶ್ಲೋಕಗಳನ್ನು ಕನ್ನಡೀಕರಿಸಿದ್ದಾನೆ. ಉದಾಹರಣೆಗೆ :

ನಿನಗೆ ವೃಷಭೇಶ್ವರಂ ಲೋಚನಗೋಚರನಿನ್ನೆವರೆಗಮೀಗಳ್ ನಿಂದಂ
ಮನುಕುಲಲಲಾಮ ನೆಟ್ಟನೆ ಮನದೊಳ್ ಕಡುಸಾರೆಯಲ್ತೆ ಮುನ್ನಿಂದೀಗಳ್

(ಆದಿಪು.xvi-೫೬)

ಇಲ್ಲಿಯವರೆಗೆ ವೃಷಭೇಶ್ವರನು ನಿನ್ನ ಕಣ್ಣುಗಳಿಗೆ ಕಾಣಿಸುತ್ತಿದ್ದನು. ಮನುಕುಲ ಶ್ರೇಷ್ಠನೇ, ಈಗ ಅವನು ನಿನ್ನ ಮನದಲ್ಲಿಯೇ ನಿಂತು ಮೊದಲಿಗಿಂತಲೂ ಹತ್ತಿರದಲ್ಲಿದ್ದಾನಷ್ಟೆ.

ಪ್ರಾಗಕ್ಷಿಗೋಚರಃ ಸಂಪ್ರತ್ಯೇಷ ಚೇತಸಿ ವರ್ತತೇ |
ಭಗವಾಂಸ್ತತ್ರ ಕಃ ಶೋಕಃ ಪಶ್ಯೈನಂ ತತ್ರ ಸರ್ವದಾ || (ಪೂರ್ವಪು. xlvii-೩೮೯)

ಪೂಜ್ಯನಾದ ವೃಷಭದೇವನು ಹಿಂದೆಲ್ಲ ಕಣ್ಣಿಗೆ ಕಾಣಿಸುತ್ತಿದ್ದನು. ಈಗ ಎಲ್ಲರ ಮನಸ್ಸಿನಲ್ಲಿ ನೆಲೆಸಿರುವನು. ಅದರಿಂದ ಚಿಂತೆ ಏಕೆ? ಈ ಸ್ವಾಮಿಯನ್ನು ಮನದಲ್ಲೇ ಸದಾ ನೋಡುತ್ತಿರು.

ಎನೆದಾವದಗ್ಧಗಿರಿ ನೂ | ತನಜಲದಜಲಂಗಳಿಂದಮಾಱುವವೋಲ್ಭೋಂ
ಕನೆ ಭರತನನಾಱಿಸಿದಂ | ಮುನಿವಿನುತ ಗಣಾದಿನಾಥವಚನಾಮೃತದಿಂ (ಆದಿಪು. xvi-೬೦-೧೬)

ಕಾಳ್ಗಿಚ್ಚಿನಿಂದ ಸುಟ್ಟುಹೋದ ಬೆಟ್ಟವು ಹೊಸ ಮೋಡಗಳ ನೀರಿನಿಂದ ಆರುವ ಹಾಗೆ, ಗಣಾಧಿನಾಥನ ವಚನಾಮೃತದಿಂದ ಭರತನು ಭೋಂಕನೆ ಶಾಂತಿಯನ್ನು ಪಡೆದನು.

ಗಣಭೃದಥ ಸ ಚಕ್ರೀ ದಾವದಗ್ಧೋ ಮಹೀಧ್ರೋ |
ನವಜಲದಜಲೈರ್ವಾ ತದ್ವಚೋಭಿಃ ಪ್ರಶಾಂತಃ || (ಪೂರ್ವಪು. xlvii-೩೯೦)

ಕಾಡುಕಿಚ್ಚಿನಂತೆ ಬೆಂದ ಪರ್ವತವು ಹೊಸ ಮೋಡದಿಂದ ಮಳೆ ಬಂದಾಗ ಶಾಂತ

ವಾಗುವಂತೆ ಗಣಧರವಚನದಿಂದ ಭರತನೂ ಶಾಂತನಾದನು.

ತನ್ನ ದುಃಖವನ್ನು ಬಿಟ್ಟು ರಾಜ್ಯಕ್ರಮದ ವೈಭವದಲ್ಲಿರುವಾಗ ಒಮ್ಮೆ ಭರತನು—

ಪರಮಪದದಿಂದಮಟ್ಟಿದ | ಪುರುಪರಮೇಶ್ವರನ ದೂತನಂ ಕಾಣ್ಬವೊಲಾ
ಭರತಂ ಕಂಡಂ ಕನ್ನೆಯ | ನೆರೆಯಂ ತಳದಳಿಸಿ ಪೊಳೆವ ಮಣಿದರ್ಪಣದೊಳ್
(ಆದಿಪು.xvi.೬೧)

ಪುರುಪರಮೇಶ್ವರನು ಪರಮಪದದಿಂದ ಅಟ್ಟಿದ ದೂತನೋ ಎಂಬಂತೆ ಇದ್ದ ತನ್ನ ಕೆನ್ನೆಯಲ್ಲಿ ನೆರೆಯನ್ನು ಹೊಳೆಯುವ ಮಣಿದರ್ಪಣದಲ್ಲಿ ಕಂಡನು. ಭರತನಿಗೆ ಇದುವರೆಗೆ ಆವರಿಸಿದ್ದ ಮೋಹ ನಾಶವಾಯಿತು.

"ಹೇಯಂ ಸಾಮ್ರಾಜ್ಯಮುಪಾದೇಯಂ ಪ್ರವ್ರಜ್ಯಂ" ಎಂದು ಬಗೆದು ಅರ್ಕಕೀರ್ತಿಗೆ ರಾಜ್ಯವನ್ನಿತ್ತು ಮುಕ್ತಿಶ್ರೀಯನ್ನು ಬಯಸಿ ನಿಂತನು.

ಪೂರ್ವಪುರಾಣದಲ್ಲಿ ಈ ಭಾಗವು ಹೀಗೆ ಬರುತ್ತದೆ : ಒಮ್ಮೆ ಭರತನು ಹೊಳಪಾದ ಕನ್ನಡಿಯಲ್ಲಿ ನೋಡಿಕೊಳ್ಳುತ್ತಿರುವಾಗ ವೃಷಭದೇವನ ಕಡೆಯಿಂದ ದೂತನಂತೆ ನರೆ ಗೂದಲು ಕಾಣಿಸಿತು. ಆಗ ಇವನ ಮೋಹರಸವೆಲ್ಲ ಬಸಿದುಹೋಯಿತು. ಆತ್ಮಜ್ಞಾನ ಕಾಣಿಸಿಕೊಂಡಿತು. ರಾಜ್ಯವನ್ನು ಕೊಳೆತ ಹುಲ್ಲೆಂದು ಭಾವಿಸಿದನು. ತನ್ನ ಮಗನಾದ ಅರ್ಕಕೀರ್ತಿಗೆ ರಾಜ್ಯವನ್ನು ವಹಿಸಿದನು. ಮೋಕ್ಷಮಾರ್ಗಕ್ಕೆ ಬುತ್ತಿಯಾಗಿ ಸಂಯಮ ಮಹಾವ್ರತವನ್ನು ಸ್ವೀಕರಿಸಿದನು. ಕೂಡಲೇ ಮನಃಪರ್ಯಾಯಜ್ಞಾನ ಆವಿರ್ಭವಿಸಿತು. ಅದರ ಹಿಂದೆಯೇ ಈತನಿಗೆ ಕೇವಲಜ್ಞಾನವೂ ಉಂಟಾಯಿತು. ಆಗ ಭರತ ಜಿನೇಂದ್ರನನ್ನು ದೇವತೆಗಳು ಪೂಜಿಸಿದರು. ಈತನು ಧರ್ಮದ ಮಳೆಗರೆಯುತ್ತಾ ವಿಹರಿಸಿದನು. ಕೆಲ ಕಾಲದ ನಂತರ ನಿರಾಕಾರನಾಗಿ ಈತನು ಮುಕ್ತನಾದನು (ಪೂರ್ವಪು. xlvii-೩೬೨ ರಿಂದ ೩೯೮).

ಪೂರ್ವಪುರಾಣದ ಈ ಭಾಗವನ್ನು ಪಂಪನು ಹಿಡಿದಿಟ್ಟಿದ್ದಾನಾದರೂ ಇಲ್ಲಿಗಿಂತ ಸ್ವಲ್ಪ ವಿಸ್ತಾರವಾಗಿ ಈ ಸನ್ನಿವೇಶವನ್ನು ಸಾವಕಾಶದಿಂದ ನಿರ್ವಹಿಸಿದ್ದಾನೆ. ಭರತನು ರಾಜ್ಯವನ್ನು ಅರ್ಕಕೀರ್ತಿಗೆ ಕೊಟ್ಟು ಧರ್ಮಾನುರಾಗಿಗಳನ್ನೆಲ್ಲ ಕರೆಸಿಕೊಂಡು ಎಂಟುದಿನಗಳವರೆಗೆ ಜಿನನಿಗೆ ಸರ್ವತೋಭದ್ರವೆಂಬ ಮಹಾಪೂಜೆಯನ್ನು ಮಾಡಿದನು. ಅನಂತರ ಕೈಲಾಸಕ್ಕೆ ಬಂದು ಅಲ್ಲಿಂದ ಚೈತ್ಯಾಲಯಗಳ ದರ್ಶನ ಮಾಡಿ ಅರ್ಚಿಸಿ ಸ್ತುತಿಸಿದನು. ಆದಿದೇವನ ನಿರ್ವಾಣಭೂಮಿಯ ಬಳಿ ಉತ್ತರಾಭಿಮುಖವಾಗಿ ಕುಳಿತು ಸಿದ್ಧಭಕ್ತಿ ಪೂರ್ವಕ ಜಿನದೀಕ್ಷೆ ಪಡೆಯುತ್ತಿದ್ದಂತೆ ಮನಃಪರ್ಯಜ್ಞಾನ ಕಾಣಿಸಿಕೊಂಡಿತು. ಮರುಕ್ಷಣವೇ ಕೇವಲಜ್ಞಾನವೂ ಕಾಣಿಸಿಕೊಂಡಿತು. ಸುರನರಲೋಕವೆಲ್ಲ ಬಂದು ಭರತನ ಪಾದಕ್ಕೆರಗಿತು. ಧರ್ಮಾಮೃತ ವನ್ನು ಕರೆಯುತ್ತ ಕೊನೆಗೆ ಭರತನು ನಿರ್ವಾಣವನ್ನು ಪಡೆದನು—ಎಂದು ಪಂಪನು ವಿವರವಾಗಿ ಚಿತ್ರಿಸಿ ಈ ಭಾಗಕ್ಕೆ ಹೆಚ್ಚಿನ ಮಹತ್ತ್ವ ನೀಡಿದ್ದಾನೆ.

## ಉತ್ತರಕಾಲೀನ ಕಾವ್ಯಗಳು

**ಚಾವುಂಡರಾಯಪುರಾಣ :** ವೃಷಭಸೇನನು ಭರತನಿಗೆ ನೀಡುವ ಉಪದೇಶದಲ್ಲಿ ಕವಿ ಸಂಕ್ಷಿಪ್ತತೆಯಲ್ಲಿ ಪೂರ್ವಪುರಾಣಗಳಲ್ಲಿಯ ನಾಟಕೀಯತೆಯನ್ನು ಸೂಚಿಸಿದ್ದಾನೆ.

"ಶೋಕಾಕುಲಿತನಾಗಲ್ವೇಡ, ನಮಗವರಿರ್ದುದೇ ನೆಲೆಯಕ್ಕುಂ" ಎಂಬ ಮಾತು ಚಿಕ್ಕ ದಾದರೂ ಪ್ರಭಾವಕಾರಿಯಾಗಿದೆ. ಭರತನು ವೈರಾಗ್ಯಪರನಾದ ವಿಷಯ, ಕೈವಲ್ಯಪ್ರಾಪ್ತಿ ಮತ್ತು ಮುಕ್ತಿಗೆ ಸಂದ ವಿಚಾರಗಳು ರೇಖಾಮಾತ್ರವಾಗಿ ಮೂಲವನ್ನನುಸರಿಸಿ ಬಂದಿವೆ.

**ಹಸ್ತಿಮಲ್ಲನ ಪೂರ್ವಪುರಾಣ** : ಭರತನಿಗೆ ಗಣಧರರು ಬೋಧನೆಯನ್ನು ನೀಡಿದ ರೆಂಬ ಉಲ್ಲೇಖವಿದೆಯೇ ಹೊರತು ವಿವರವಿಲ್ಲ. ಗಣಧರರ ಬೋಧನೆಯ ಪರಿಣಾಮ ವಾಗಿ ಭರತನು "ಭೋಗಾಕಾಂಕ್ಷೆಯೊಳ್ ಸಿಕ್ಕಿದೆನಲಾಯೆಂದು ತನ್ನ ತಾನೆ ನಿಂದಿಸುತ್ತಂ" ಅಯೋಧ್ಯೆಗೆ ತೆರಳಿದನೆಂಬ ಭಾಗದಲ್ಲಿ ಪೂರ್ವಪುರಾಣ, ಆದಿಪುರಾಣಗಳ ಮಾತುಗಳು ನೆನಪಿಗೆ ಬರುತ್ತವೆ. "ನಿಂದನ್ನಿತಾಂತವಿರಸಾಂ ನಿಜಭೋಗತೃಷ್ಣಾಂ" (ಪೂರ್ವಪು. xlvii-೩೯೧),"ತನ್ನ ಭೋಗ ತೃಷ್ಣೆಯಂ ತಾನೆ ತನ್ನ ಮನದೊಳ್ ನಿಂದಿಸುತ್ತುಂ"(ಆದಿಪು. ಅಧ್ಯಾಯ xiv) ಎಂಬ ಮಾತಿಗೆ ಅನುಸಾರವಾಗಿ ಕವಿಯ ಮಾತುಗಳು ಕಂಡುಬರುತ್ತವೆ. ವೈರಾಗ್ಯಸನ್ನಿವೇಶವು ಪೂರ್ವೋಕ್ತ ಕಾವ್ಯಗಳಂತೆ ಚಿತ್ರಿತವಾಗಿದೆ.

**ಪುಣ್ಯಾಸ್ರವದ ಆದೀಶ್ವರರ ಕಥೆ** : ಭರತನಿಗೆ ವೃಷಭಸೇನಗಣಧರರು ಬೋಧಿಸಿದ ಉಲ್ಲೇಖವಿದೆ. ನಾಟಕೀಯತೆ ಇಲ್ಲ. ಅನ್ಯತ್ರ ದೊರೆಯದ ಭರತನ ಕುಮಾರಾವಸ್ಥೆ, ದಿಗ್ವಿಜಯ, ರಾಜ್ಯಭಾರಕ್ರಮಗಳ ಕಾಲಗಣತಿಯನ್ನು ಕವಿ ಇಲ್ಲಿ ನೀಡಿದ್ದಾನೆ. ವೈರಾಗ್ಯ ಸನ್ನಿವೇಶದ ನಿರೂಪಣೆಯ ಅಂಶ ಪೂರ್ವೋಕ್ತ ಕಾವ್ಯಗಳಂತೆಯೇ ಕಂಡುಬರುತ್ತದೆ. ಉಳಿದ ಕಾವ್ಯಗಳಂತೆ ಕಾವ್ಯಾಂಶಕ್ಕಿಂತಲೂ ಸಂಗತಿಗಳ ನಿರೂಪಣಾಂಶಗಳೇ ಇಲ್ಲಿಯೂ ಕಂಡುಬರುತ್ತವೆ.

**ಪುರುದೇವಚರಿತ** : ಭರತನ ಶೋಕ, ವೃಷಭಸೇನ ಗಣಧರರ ಉಪದೇಶದ ವಿವರಗಳು ಸಂಕ್ಷೇಪವಾಗಿ ಬಂದಿವೆ. ಉದಾಹರಣೆಗೆ :

ಈ ಪರಿ ಸಂಸಾರ ಭ್ರಮಣ ಕಾರಣಮಪ್ಪ | ಪಾಪ ಪುಣ್ಯವ ನೆರೆಕಿಡಿಸಿ
ತಾ ಪರಮಾತ್ಮನಾದವರ್ಗೆ (ಶೋಕಿಸೆ) | ಭೂಪತಿ ನಿನಗನುಚಿತವು (ಪುರುಚ. xi-೭೨)

ಚಾವುಂಡರಾಯಪುರಾಣ ಮೊದಲಾದ ಉತ್ತರಕಾಲೀನ ಕಾವ್ಯಗಳಿಗಿಂತ ಹೆಚ್ಚಿನ ವಿವರ ಗಳನ್ನು ಕವಿ ನೀಡಿದ್ದಾನೆ. ಭರತನ ವೈರಾಗ್ಯ, ಕೇವಲಜ್ಞಾನ, ಮುಕ್ತಿಯ ವಿಚಾರಗಳು ಚಾವುಂಡರಾಯಪುರಾಣದ ಜಾಡಿನಲ್ಲಿ ಉಲ್ಲೇಖಗೊಂಡಿವೆ.

**ಆದಿಪರಮೇಶ್ವರನ ಯಕ್ಷಗಾನ** : ಭರತನ ಶೋಕ, ಗಣಧರರ ಉಪದೇಶ ಈ ವಿಚಾರಗಳು ಇಲ್ಲಿ ಕಂಡುಬರುವುದಿಲ್ಲ. ಭರತನ ವೈರಾಗ್ಯ ಸನ್ನಿವೇಶ ನೆರೆಗೂದಲು ನಿಮಿತ್ತವಾಗಿ ಬಂದಿತೆಂಬುದರ ಉಲ್ಲೇಖ ಇಲ್ಲಿ ಕಂಡುಬರುವುದಿಲ್ಲ. ಇದ್ದಕ್ಕಿದ್ದಂತೆ ಭರತನು ವೈರಾಗ್ಯಪರನಾಗಿ ದೀಕ್ಷಿತನಾದನೆಂದು ಇಲ್ಲಿ ಚಿತ್ರಿತವಾಗಿದೆ.

ಭರತನ ಲೌಕಿಕ ಸಾಧನೆಗಳ ಅನಂತರ ಆಧ್ಯಾತ್ಮಿಕ ಸಾಧನೆಯನ್ನು ತೋರಿಸಿಕೊಡುವ ಭಾಗವದು. ಪುರುಪರಮೇಶ್ವರನ ಪುತ್ರ ತಂದೆ ಹಾಕಿಕೊಟ್ಟ ಆದರ್ಶದಲ್ಲಿ ನಡೆದವನು, ಸಿದ್ಧಿಗಳಿಸಿದವನು. ಆದಿತೀರ್ಥಂಕರನ ಚರಿತ್ರೆ ಹೆಜ್ಜೆ ಹೆಜ್ಜೆಗೂ ಆಧ್ಯಾತ್ಮಿಕತೆಯ ಸಾರ ವನ್ನು ಪ್ರಚುರಪಡಿಸುವ ಕತೆಯಾಗಿದೆ. ಪ್ರತಿಯೊಬ್ಬ ತೀರ್ಥಂಕರನ ಚರಿತ್ರೆಯೂ ಸಂಸಾರದ ಅಸಾರತೆಯನ್ನು, ಸಂನ್ಯಾಸದ ಮಹತ್ತ್ವವನ್ನು ಬೋಧಿಸುತ್ತದೆಯಾದರೂ ಉಳಿದೆಡೆಗಳಿಗಿಂತ ಈ ತತ್ತ್ವ ಆದಿತೀರ್ಥಂಕರನ ಕಥೆಯಲ್ಲಿ ಸುಂದರವಾಗಿ ಹೆಣೆದು

ಕೊಂಡಿದೆ. ಆದಿನಾಥನು ತಪಸ್ಸಿನಿಂದ ಧರ್ಮಾಮೃತವನ್ನು ಸಾಧಿಸಿ ಲೋಕಕ್ಕೆಲ್ಲ ಮಳೆಗರೆದ ವೈರಾಗ್ಯಮೂರ್ತಿ. ಈ ಪರಿಪಾಕವನ್ನು ಪಡೆಯುವುದಕ್ಕೆ ಅವನ ಜೀವ ಎಷ್ಟೋ ಜನ್ಮಗಳನ್ನು ಎತ್ತಬೇಕಾಯಿತು. ಹಿಂದೆ ಜಯವರ್ಮನೆಂಬುವನು ರಾಜಪುತ್ರನಾಗಿ ಹುಟ್ಟಿದಾಗ ಈ ಜೀವನಿಗೆ ತೀವ್ರವಾದ ಭೋಗಾಸಕ್ತಿ ಹೇಗೆ ಉಂಟಾಯಿತು, ಅದರ ವಾಸನೆ ಜನ್ಮಜನ್ಮಕ್ಕೂ ಹೇಗೆ ಬೆನ್ನುಹತ್ತಿತು, ಧರ್ಮಶ್ರದ್ಧೆ ಹೇಗೆ ಹುಟ್ಟಿತು, ವಿಷಯಾಸಕ್ತಿ ಹೇಗೆ ಸಡಿಲಿತು, ವೈರಾಗ್ಯ ಹೇಗ ಬಲಿಯಿತು—ಎಂಬ ಸೂತ್ರ ಈ ಕಥೆಗಳಿಗೆಲ್ಲಾ ಏಕಮುಖವಾದ ಹೊಂದಿಕೆಯನ್ನು ಕೊಡುತ್ತದೆ.[೭೫] ಇಲ್ಲಿ ನಿರೂಪಿತವಾಗಿರುವ ಇತರರ ಭವಾವಳಿ ಕತೆಗಳಾದರೂ ಅಷ್ಟೇ. ಕಥೆಯ ಅಲೌಕಿಕ ಸ್ವರದೊಡನೆ ಲೀನವಾಗಿ ಬರುತ್ತದೆ. ಭರತ ಬಾಹುಬಲಿಗಳ ವೃತ್ತಾಂತವು ಅವುಗಳಲ್ಲಿ ಅಗ್ರಮಾನ್ಯವಾಗಿ ನಿಲ್ಲುತ್ತದೆ. ಇಲ್ಲಿ ಬರುವ ಬೇರೆ ಬೇರೆ ಕತೆಗಳೆಲ್ಲ ಒಂದು ಮುಖ್ಯೋದ್ದೇಶಕ್ಕೆ ಅಧೀನವಾಗಿ ಹೆಣೆದುಕೊಂಡು ಕಾವ್ಯದ ಜೀವವಾದ ರಸೈಕ್ಯವನ್ನು ಸಾಧಿಸುತ್ತವೆ.[೭೬] ಧರ್ಮಾಮೃತಸಾರವನ್ನು ನೀಡುವುದೇ ಆದಿತೀರ್ಥಂಕರ ಚರಿತ್ರೆಯ ಜೀವನಾಡಿಯಾಗಿದೆ.

## ಟಿಪ್ಪಣಿಗಳು

೧. ರಂ. ಶ್ರೀ. ಮುಗಳಿ, 'ಕನ್ನಡ ಸಾಹಿತ್ಯದ ಇತಿಹಾಸ', ಸಾಹಿತ್ಯ ಅಕಾಡೆಮಿ, ನವದೆಹಲಿ, ೧೯೬೩-೧೯೬೮, ಪು. ೩೮.

೨. ವಿ. ಸೀತಾರಾಮಯ್ಯ, 'ಮಹಾಕವಿ ಪಂಪ', ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೭೫. ಪು. ೪೧.

೩. ಜಿ. ಎಸ್. ಶಿವರುದ್ರಪ್ಪ (ಸಂ.), 'ಪಂಪ' ಒಂದು ಅಧ್ಯಯನ', ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು ೧೯೭೪, ಲೇ. ಜಿ. ವರದರಾಜರಾವ್, ಧಾರ್ಮಿಕ ಕವಿಯಾಗಿ ಪಂಪ, ಪು. ೮೯-೯೦.

೪. ವಿ. ಸೀ. ಪೂರ್ವೋಕ್ತ, ಪು. ೪೬.

೫. ಜಿ. ಎಸ್. ಶಿವರುದ್ರಪ್ಪ, ಪೂರ್ವೋಕ್ತ, ಲೇ. ಕೆ. ವಿ. ಸುಬ್ಬಣ್ಣ, 'ಪಂಪನ ಕವಿತೆ, ಅನುಸಂಧಾನಕ್ಕೆ ಒಂದು ಹೊಸಮಾರ್ಗ' ಪು. ೩೦೬.

೬. ಟಿ. ವಿ. ವೆಂಕಟಾಚಲ ಶಾಸ್ತ್ರೀ, 'ಪಂಪ', ಸಾಹಿತ್ಯ ಅಕಾಡೆಮಿ, ನವದೆಹಲಿ, ೧೯೮೭, ಪು. ೩೨

೭. ಪುನಃ ಪುನಃ ಚಿಂತನೆ ಮಾಡುವುದು; ಶರೀರಾದಿ ಪರದ್ರವ್ಯಗಳು ಧರ್ಮಾದಿಗಳು ಇವುಗಳನ್ನು ಮೇಲೆ ಮೇಲೆ ಚಿಂತಿಸುವುದು ಅನುಪ್ರೇಕ್ಷೆ. ಇದು ಹನ್ನೆರಡು ಬಗೆಯಾಗಿದೆ. ೧.ಅನಿತ್ಯ ೨ ಅಶರಣ ೩. ಸಂಸಾರ ೪. ಏಕತ್ವ, ೫. ಅನ್ಯತ್ವ, ೬. ಅಶುಚಿತ್ವ, ೭. ಆಸ್ರವ ೮. ಸಂವರ ೯. ನಿರ್ಜರ ೧೦. ಲೋಕ ೧೧ ಬೋಧಿದುರ್ಲಭ ೧೨. ಧರ್ಮ.

೮. ಸಮ್ಯಕ್ತ್ವ ಎಂದರೆ ಜಿನಮತದಲ್ಲಿ ಸಂಪೂರ್ಣವಾದ ನಂಬಿಕೆ, ಶ್ರದ್ಧೆ. ಇದಕ್ಕೆ ಎಂಟು ಅಂಗಗಳಿವೆ. ೧. ನಿಃಶಂಕಿತ ೨ . ನಿಃಕಾಂಕ್ಷಿತ ೩. ನಿರ್ವಿಚಿಕಿತ್ಸ ೪. ಅಮೂಢದೃಷ್ಟಿ ೫. ಉಪಗೂಹನ ೬. ಸ್ಥಿತಿಕರಣ ೭ ವಾತ್ಸಲ್ಯ ೮. ಪ್ರಭಾವನಾ.

೯. ತತ್ವಾರ್ಥ ಸೂತ್ರ, V-೨೧.

೧೦. ಪಂಪ, ಐ. ಬಿ. ಎಚ್. ಪ್ರಕಾಶನ, ಬೆಂಗಳೂರು, ೧೯೭೭, ವಿ. ಸೀ. ಸಮೀಕ್ಷೆ, ಪು. ೨೨೯.

೧೧. ಸಿ. ಪಿ. ಕೃಷ್ಣಕುಮಾರ್, 'ಪಂಪ–ಕೆಲವು ಮುಖಗಳು', ಮೈಸೂರು, ೧೯೮೭, ಪು. ೧೩.

೧೨. ಟಿ. ವಿ. ವೆಂಕಟಾಚ್ಚಲ ಶಾಸ್ತ್ರೀ, ಪೂರ್ವೋಕ್ತ, ಪು. ೨೨.

೧೩. ಎಲ್. ಬಸವರಾಜು (ಸಂ), ಪಂಪನ ಆದಿಪುರಾಣ, ಮೈಸೂರು, ೧೯೭೭, ಪು. ೭೪.

೧೪. ರಂ. ಶ್ರೀ. ಮುಗಳಿ, 'ಕನ್ನಡ ಸಾಹಿತ್ಯದ ಇತಿಹಾಸ', ಪು. ೪೦.

೧೫. ಮುಳಿಯ ತಿಮ್ಮಪ್ಪಯ್ಯ, 'ನಾಡೋಜ ಪಂಪ', ಮೈಸೂರು ಪ್ರ. ಮು. ೧೯೩೮, ದ್ವಿ. ಮು. ೧೯೭೭, ಪು. ೩೪೭.

೧೬. ಕನಕದಾಸರ 'ನಳಚರಿತ್ರೆ'ಯಲ್ಲಿ ಬರುವ ಈ ಪದ್ಯದೊಂದಿಗೆ ಇದನ್ನು ಹೋಲಿಸಬಹುದಾಗಿದೆ :

ದೊಡ್ಡ ಹೊಟ್ಟೆಯ ಗೂನು ಬೆನ್ನಿನ | ಅಡ್ಡ ಮೋರೆಯ ಗಂಟುಮೂಗಿನ
ದೊಡ್ಡ ಕೈಕಾಲುಗಳ ಉದುರಿದ ರೋಮ ಮೀಸೆಗಳ
ಜೆಡ್ಡುದೇಹದ ಗುಜ್ಜುಗೊರಲಿನ | ಗಿಡ್ಡು ರೂಪಿನ ಹರಕು
ಗಡ್ಡದ ಹೆಡ್ಡನಾದ ಕುರೂಪಿನಲಿ ನೃಪತಿ ವಿಷದಿಂದ

೧೭. ಟಿ. ವಿ. ವೆಂಕಟಾಚಲ ಶಾಸ್ತ್ರೀ, ಪೂರ್ವೋಕ್ತ, ಪು. ೩೬.

೧೮. ಎಲ್. ಬಸವರಾಜು, ಪೂರ್ವೋಕ್ತ, ಪು. ೭೯.

೧೯. ಮುಳಿಯ ತಿಮ್ಮಪ್ಪಯ್ಯ, ಪೂರ್ವೋಕ್ತ, ಪು. ೩೪೭.

೨೦. ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ, ೩, ಮೈಸೂರು, ೧೯೭೬, ಪು. ೪೩೨.

೨೧. ಜಿ. ಎಸ್. ಶಿವರುದ್ರಪ್ಪ, (ಸಂ.), ಪೂರ್ವೋಕ್ತ, ಎಂ. ವಿ. ಶ್ರೀನಿವಾಸಮೂರ್ತಿ, 'ಆದಿ ಪುರಾಣದ ವಸ್ತು ವಿನ್ಯಾಸ', ಪು. ೧೮೯.

೨೨. ಸಿ. ಪಿ. ಕೆ., ಪೂರ್ವೋಕ್ತ, ಪು. ೧೬-೧೭.

೨೩. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ೨. ಬೆಂಗಳೂರು ವಿಶ್ವವಿದ್ಯಾಲಯ, ಲೇ. ಕ. ವೆಂ. ರಾಜಗೋಪಾಲ್, 'ಆದಿಪುರಾಣದ ಪಾತ್ರಗಳು', ೧೯೭೫, ಪು. ೧೧೫.

೨೪. ಸಿ. ಪಿ. ಕೆ., ಪೂರ್ವೋಕ್ತ, ಪು. ೧೬-೧೭.

೨೫. ಪರಿಸ್ಥಿತಿ, ಅನುಕೂಲ, ಶಾರೀರಿಕ ಮತ್ತು ಮಾನಸಿಕ ವೃತ್ತಿಗಳಿಗೆ ಅನುಸರಿಸಿ ಶ್ರಾವಕ ಧರ್ಮದಲ್ಲಿ ರೂಪಿಸಿರುವ ಹನ್ನೊಂದು ನೆಲೆಗಳು, ಶ್ರಾವಕನ ಪ್ರತಿಮೆಗಳೆನಿಸುತ್ತವೆ. ಶ್ರಾವಕನು ಧರ್ಮಮಾರ್ಗದಲ್ಲಿ ಉನ್ನತಿಯನ್ನು ಹೊಂದುವಾಗ ಒಂದನೇ ಪ್ರತಿಮೆಯಿಂದ ಮುಂದು ಮುಂದಿನದನ್ನು ಹೊಂದುತ್ತ ಹೋಗುವನು. ಮುಂದು ಮುಂದಿನ ನೆಲೆಗಳನ್ನು, ಪ್ರತಿಮೆಗಳನ್ನು ಹೊಂದಿದ ಹಾಗೆ ಹಿಂದಿನ ನೆಲೆಗಳ ಕ್ರಿಯೆಗಳ ಸಂಬಂಧವೂ ಇರಬೇಕಾಗುವುದು. ಐದನೆಯ ಗುಣಸ್ಥಾನದಲ್ಲಿರುವ ಶ್ರಾವಕರಲ್ಲಿ ಈ ಹನ್ನೊಂದು ಪ್ರಕಾರಗಳು ಆಗುತ್ತವೆ. ಹನ್ನೊಂದನೆಯ ಪ್ರತಿಮೆ-ನೆಲೆಗಳನ್ನು ಹೊಂದಿದ ಬಳಿಕ ಆತನು 'ಸಾಧು' ಎನಿಸಿಕೊಳ್ಳುವನು. ಇದರಲ್ಲಿ ಹನ್ನೊಂದು ಪ್ರಕಾರಗಳು : ೧. ದಾರ್ಶನಿಕ ೨. ವ್ರತಿಕ ೩.

ಸಾಮಾಯಿಕ ೪. ಪ್ರೋಷಧೋಪವಾಸಿ ೫. ಸಚಿತ್ತವಿರತ ೬. ದಿವಾಮೈಥುನವಿರತ ೭. ಬ್ರಹ್ಮಚಾರಿ ೮. ಆರಂಭವಿರತ ೯. ಪರಿಗ್ರಹವಿರತ ೧೦. ಅನುಮತಿವಿರತ ೧೧. ಉದ್ದಿಷ್ಟ ವಿರತ (ರತ್ನಕರಂಡಕ ಶ್ರಾವಕಾಚಾರ).

೨೬. D. L. Narasimhachar, 'Old Kannada Literature', Bombay, 1955.

೨೭. ಟಿ. ವಿ. ವೆಂಕಟಾಚಲ ಶಾಸ್ತ್ರೀ, ಪೂರ್ವೋಕ್ತ, ಪು. ೪೦-೪೧.

೨೮. ಕುವೆಂಪು, 'ಪಂಪನಲ್ಲಿ ಭವ್ಯತೆ', ವಿಶ್ವಕನ್ನಡ ಸಮ್ಮೇಳನ, ಬೆಂಗಳೂರು, ೧೯೮೩, ಪು. ೧೭೧.

೨೯. ಅದೇ, ಪು. ೧೭೫.

೩೦. ಟಿ. ವಿ. ವೆಂಕಟಾಚಲ ಶಾಸ್ತ್ರೀ, ಪೂರ್ವೋಕ್ತ, ಪು. ೪೧-೪೨.

೩೧. ಪಂಪ : ಲೇ. ವಿ. ಸೀತಾರಾಮಯ್ಯ, 'ಸಮೀಕ್ಷೆ', ಐ. ಬಿ. ಎಚ್ ಪ್ರಕಾಶನ, ಗಾಂಧಿನಗರ, ಬೆಂಗಳೂರು, ೧೯೭೭, ಪು. ೨೨೯.

೩೨. ಮುಳಿಯ ತಿಮ್ಮಪ್ಪಯ್ಯ, ಪೂರ್ವೋಕ್ತ, ಪು. ೩೫೪.

೩೩. ಟಿ. ವಿ. ವೆಂಕಟಾಚಲ ಶಾಸ್ತ್ರೀ, ಪೂರ್ವೋಕ್ತ, ಪು. ೪೩.

೩೪. ಜಿ. ಪಿ. ರಾಜರತ್ನಂ, 'ಶ್ರೀಕವಿ ಪಂಪ' ಬೆಂಗಳೂರು, ೧೯೫೧, ಪು. ೧೨.

೩೫. ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ, ೩, ಮೈಸೂರು, ೧೯೭೬, ಪು. ೪೩೬

೩೬. ಜಿ. ಎಸ್. ಶಿವರುದ್ರಪ್ಪ, ಪೂರ್ವೋಕ್ತ, ಲೇ. ಎಂ. ವಿ. ಶ್ರೀನಿವಾಸಮೂರ್ತಿ, 'ಆದಿಪುರಾಣದ ವಸ್ತುವಿನ್ಯಾಸ' ಪು. ೧೯೨.

೩೭. ಮುಳಿಯ ತಿಮ್ಮಪ್ಪಯ್ಯ, ಪೂರ್ವೋಕ್ತ, ಪು. ೩೫೫-೩೫೬.

೩೮. ತೀನಂಶ್ರೀ., 'ಪಂಪ', ಪ್ರಸಾರಾಂಗ, ಮೈಸೂರು, ಪ್ರ. ಮು. ೧೯೫೩.

೩೯. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೭೭.

೪೦. ಟಿ. ವಿ. ವೆಂಕಟಾಚಲ ಶಾಸ್ತ್ರೀ, ಪೂರ್ವೋಕ್ತ, ಪು. ೪೪.

೪೧. ಪಂಪ, ಲೇ. ವಿ. ಸೀ. 'ಸಮೀಕ್ಷೆ', ಐ. ಬಿ. ಎಚ್. ಪ್ರಕಾಶನ,

೪೨. ಸಿ. ಪಿ. ಕೆ., ಪೂರ್ವೋಕ್ತ, ಪು. ೩೬.

೪೩. ಜಿ. ಎಸ್. ಶಿವರುದ್ರಪ್ಪ, ಪೂರ್ವೋಕ್ತ, ಲೇ. ಜಿ. ವರದರಾಜರಾವ್, 'ಧಾರ್ಮಿಕ ಕವಿಯಾಗಿ ಪಂಪ', ಪು. ೧೦೩-೧೦೪.

೪೪. ರಂ. ಶ್ರೀ. ಮುಗಳಿ, 'ಕನ್ನಡಸಾಹಿತ್ಯ ಚರಿತ್ರೆ' ಮೈಸೂರು, ೧೯೬೮, ಪು. ೯೧.

೪೫. ಟಿ. ವಿ. ವೆಂಕಟಾಚಲ ಶಾಸ್ತ್ರೀ, ಪೂರ್ವೋಕ್ತ, ಪು. ೪೫.

೪೬. ಅದೇ, ಪು. ೪೬.

೪೭. ಅದೇ, ಪು. ೪೬.

೪೮. ಎಲ್. ಬಸವರಾಜು (ಸಂ.) ಪೂರ್ವೋಕ್ತ, ಪು. ೩೪೩.

೪೯. ಟಿ. ವಿ. ವೆಂಕಟಾಚಲ ಶಾಸ್ತ್ರೀ, ಪೂರ್ವೋಕ್ತ.

೫೦. ಎಲ್. ಬಸವರಾಜು (ಸಂ.) ಪೂರ್ವೋಕ್ತ, ಪು. ೩೪೭.

೫೧. ವೃಷಭಸ್ವಾಮಿಯ ದೇಹವನ್ನು ಅಗ್ನಿಗೀಡುಮಾಡಿದ ಅಂಶವು ಆದಿಪುರಾಣದ ಪ್ರಕ್ಷಿಪ್ತ ಭಾಗವೆಂದು ಎಲ್. ಬಸವರಾಜು ಅವರು ಅಭಿಪ್ರಾಯಪಟ್ಟಿದ್ದಾರೆ. ಪೂರ್ವೋಕ್ತ ನೋ. ಪು. ೫೨೦.

೫೨. ರಂ. ಶ್ರೀ. ಮುಗಳಿ, 'ಕನ್ನಡ ಸಾಹಿತ್ಯ ಚರಿತ್ರೆ', ಪು. ೯೨.

೫೩. ತೀ. ನಂ. ಶ್ರೀ., ಪೂರ್ವೋಕ್ತ, ಪು. ೨೫.

೫೪. The voice of Ahinsa—Kamta Prasad Jain, Risabha, Bharata & Bahubali-Vol. XVI, No.12, 1966, December. P. 112-113.

೫೫. ಮಹಾಕವಿ ಪಂಪ ಹಾಗೂ ಅವನ ಕೃತಿಗಳು (ಆರು ಉಪನ್ಯಾಸಗಳು), ಲೇ. ಬಿ. ಜಿ. ಕುಲಕರ್ಣಿ,'ಪಂಪನ ಪ್ರಕೃತಿ ವರ್ಣನೆಗಳು', ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪು. ೪೫.

೫೬. ಜಿ. ಎಸ್. ಶಿವರುದ್ರಪ್ಪ, 'ಪರಿಶೀಲನ ' ಮೈಸೂರು, ೧೯೬೭, ಪು. ೩.

೫೭. ವಿ. ಸೀ., ಪೂರ್ವೋಕ್ತ, ಪು. ೮೮.

೫೮. ಟಿ. ವಿ. ವೆಂಕಟಾಚಲ ಶಾಸ್ತ್ರೀ, ಪೂರ್ವೋಕ್ತ, ಪು. ೪೭.

೫೯. ಅದೇ, ಪು. ೪೮.

೬೦. ತೀ. ನಂ ಶ್ರೀ., ಪೂರ್ವೋಕ್ತ, ಪು. ೨೬.

೬೧. ಪಂಪ—ಐ. ಬಿ. ಹಚ್. ಪ್ರಕಾಶನ, ಲೇ. ಜಿ. ಪಿ. ರಾಜರತ್ನಂ, 'ಭರತೇಶ್ವರ ಚರಿತ' ಪು. ೬೯.

೬೨. ಮುಳಿಯ ತಿಮ್ಮಪ್ಪಯ್ಯ, ಪೂರ್ವೋಕ್ತ, ಪು. ೩೭೧.

೬೩. ವಿ. ಸೀ., ಪೂರ್ವೋಕ್ತ, ಪು. ೯೯.

೬೪. ಟಿ. ವಿ. ವೆಂಕಟಾಚಲ ಶಾಸ್ತ್ರೀ, 'ಕನ್ನಡ ಕವಿಗಳು ಕಂಡ ಗೊಮ್ಮಟೇಶ್ವರ' ಕಾರ್ಕಳ, ೧೯೯೦, ಪು. ೨೩.

೬೫. ಟಿ. ವಿ. ವೆಂಕಟಾಚಲ ಶಾಸ್ತ್ರೀ, 'ಪಂಪ', ಪು. ೫೧.

೬೬. ಟಿ. ವಿ. ವೆಂಕಟಾಚಲ ಶಾಸ್ತ್ರೀ, ಪೂರ್ವೋಕ್ತ, ಪು. ೯೯.

೬೭. ಸಿ. ಪಿ. ಕೆ., ಪೂರ್ವೋಕ್ತ, ಪು. ೪೭.

೬೮. ಪ್ರಬುದ್ಧ ಕರ್ಣಾಟಕ ೩೮-೧, ಜಿ. ಎಸ್. ಶಿವರುದ್ರಪ್ಪ, 'ಪಂಪನ ಸಮರಸ ದೃಷ್ಟಿ'.

೬೯. ಎಲ್. ಗುಂಡಪ್ಪ (ಸಂ.) ' ಆದಿಪುರಾಣ ಸಂಗ್ರಹ', ಕೆ. ವಿ. ಪುಟ್ಟಪ್ಪ, ಮುನ್ನುಡಿ, ಮೈಸೂರು, ೧೯೫೫, ಪು.iv.

೭೦. ಜೀವನ, ನವೆಂಬರ್ ೧೯೬೪, ಮಾಸ್ತಿ ವೆಂಕಟೇಶ ಅಯ್ಯಂಗಾರ್, 'ಮಹಾಕವಿ ಪಂಪನ ಆದಿಪುರಾಣ'.

೭೧. ಟಿ. ವಿ. ವೆಂಕಟಾಚಲ ಶಾಸ್ತ್ರೀ, 'ಪಂಪ' ಪು. ೫೨.

೭೨. ಟಿ. ವಿ. ವೆಂಕಟಾಚಲ ಶಾಸ್ತ್ರೀ, 'ಕನ್ನಡ ಕವಿಗಳು ಕಂಡ ಗೊಮ್ಮಟೇಶ್ವರ,' ಓೀರಿಕೆ.

೭೩. ಸನ್ಮತಿ ವಿಶೇಷಾಂಕ, 'ಗೊಮ್ಮಟಸ್ಮೃತಿ' ಫೆಬ್ರುವರಿ, ಮಾರ್ಚ್ ೧೯೬೭, ಬಿ. ಎಸ್. ಕುಲಕರ್ಣಿ,'ಬಾಹುಬಲಿ' ಪು. ೧೧.

೭೪. ಪು. ತಿ. ನ., 'ದೀಪರೇಖೆ' ಧರ್ಮಸ್ಥಳ, ೧೯೮೦, ಪು. ೧೦೯.

೭೫. ತೀ. ನಂ. ಶ್ರೀ., ಪೂರ್ವೋಕ್ತ, ಪು. ೧೬-೧೭.

೭೬. ಅದೇ, ಪು. ೧೫.

## ಅಧ್ಯಾಯ ೭

# ಕನ್ನಡ ಆದಿತೀರ್ಥಂಕರ ಚರಿತೆಗಳು : ಭಾಷೆ, ಶೈಲಿ, ಛಂದಸ್ಸು

### ಪಂಪನ ಆದಿಪುರಾಣ

ಪಂಪನು ಕಥಾವಸ್ತುವಿಗೆ ಜಿನಸೇನಾಚಾರ್ಯರಿಗೆ ಋಣಿಯಾಗಿದ್ದರೂ, ಅದನ್ನು ಕನ್ನಡ ನಡೆಗೆ ಹೊಂದುವಂತೆ ಮಾಡುವಲ್ಲಿ ಸ್ವೋಪಜ್ಞತೆಯನ್ನು ತೋರಿದ್ದಾನೆ. ಪಂಪನು ಜಿನಸೇನರ ಪೂರ್ವಪುರಾಣವನ್ನು ಓದಿ ಅವರ ಕಥೆಯನ್ನು ಕನ್ನಡದಲ್ಲಿ ಅಳವಡಿಸುವಾಗ ಎಷ್ಟೋ ಶಬ್ದಸಾಮಗ್ರಿ, ಅಲಂಕಾರ, ಕಲ್ಪನೆ, ಚಿತ್ರಶೈಲಿ, ನಾಟಕೀಯತೆ ಮೊದಲಾದುವುಗಳನ್ನು ಅರ್ಥ ಭಾವ ಕೆಡದಂತೆ ಬಳಸಿಕೊಂಡಿದ್ದರೂ ಕೇವಲ ಅನುವಾದಕನಾಗಿ ಮಾತ್ರ ಉಳಿದಿಲ್ಲ. ಕೆಲವೆಡೆ ಮೂಲದ ಭಾವಕ್ಕೆ ಮತ್ತಷ್ಟು ಕುಸುರಿ ಕೆಲಸವನ್ನು ಮಾಡಿ ಸೊಗಸನ್ನು ಹೆಚ್ಚಿಸಿದ್ದಾನೆ. (ಈ ಬಗೆಗೆ ಹಿಂದಿನ ಅಧ್ಯಾಯದಲ್ಲಿ ನಿದರ್ಶನಗಳನ್ನು ನೀಡಲಾಗಿದೆ.)

"ವಿಸ್ತಾರವಾಗಿದ್ದ ಪೂರ್ವಪುರಾಣವನ್ನು ಸಂಗ್ರಹಿಸುವಲ್ಲಿ, ಆ ಮೂಲಕ ಅದರ ತಿರುಳನ್ನು ಕನ್ನಡಿಸುವಲ್ಲಿ, ಆತ ತೋರುವ ಔಚಿತ್ಯಪ್ರಜ್ಞೆ ಮತ್ತು ರಸಗ್ರಹಣವಿವೇಕ ಅತ್ಯುತ್ತಮ ಮಟ್ಟದ್ದಾಗಿದೆ. ಈ ತಿರುಳನ್ನು ಹಿಡಿದುಕೊಡುವಲ್ಲಿಯೂ ಆತನ ಲೋಕಾನುಭವ ವ್ಯುತ್ಪತ್ತಿ ಮತ್ತು ಜೈನಧರ್ಮದ ಧಾರ್ಮಿಕ ಮತ್ತು ಸೈದ್ಧಾಂತಿಕ ಆಚಾರವಿಚಾರಗಳನ್ನು ಗತಿಗಮ್ಯಗಳನ್ನು ಕುರಿತ ಸೂಕ್ಷ್ಮಪ್ರಜ್ಞೆ, ಇವುಗಳನ್ನು ಗುರುತಿಸಬಹುದಾಗಿದೆ. ಅವನು ತನ್ನ ಕಾವ್ಯವಸ್ತುವನ್ನು ತನ್ನ ಅಧಿಕಾರದಿಂದ ನಡೆಸಿಕೊಂಡು ಹೋಗುವುದನ್ನು ಕಾಣಬಹುದು. ಅಲ್ಲಲ್ಲಿ ಕೆಲವು ಸಂದರ್ಭ ಸನ್ನಿವೇಶಗಳಲ್ಲಿ ಒಟ್ಟು ಕಾವ್ಯೋದ್ದೇಶದ ಪರಿಮಿತಿಯಲ್ಲಿ ಚೌಕಟ್ಟಿನಲ್ಲಿ ತೋರಬಹುದಾದ ಪ್ರತಿಭಾಸ್ವಾತಂತ್ರವನ್ನು ಪ್ರಕಟಿಸಿದ್ದಾನೆ. ಅಂಥ ಕಡೆಗಳಲ್ಲಿ ಕುಸುರಿ ಬಿಡಿಸುವ, ಮಿಂಚು ಹಾಯಿಸುವ ಅನುಭವದ ವಿವರದಲ್ಲಿ ಸೂಕ್ಷ್ಮಸುಳಿ-ಸುಳಿವುಗಳನ್ನು ಗುರುತಿಸುವ ಉನ್ನತ ಮಟ್ಟದ ಲೋಕಾನುಭವ ವಿವೇಕವನ್ನು ಹೊರೆಸುವ ಕವಿಯ ಸದಭಿರುಚಿಯ ಸಂಸ್ಕಾರವನ್ನು ಅನುಭವಿಸಿದಂತಾಗುತ್ತದೆ."[೧]

ಪಂಪನು ಆಶಿಸುವ ಕಾವ್ಯಸ್ವರೂಪದ ರೀತಿಯು ಜಿನಸೇನರ ರೀತಿಯದೇ ಆಗಿದೆ. ಪದಲಾಲಿತ್ಯ, ಉತ್ತಮವಾದ ಪದರಚನೆ, ಆನಂದವನ್ನುಂಟುಮಾಡುವ ಅರ್ಥ, ಅಲಂಕಾರ, ಶೃಂಗಾರಾದಿಗಳಿಂದ ಕೂಡಿದ ಕಾವ್ಯವು ಮಹಾಕಾವ್ಯವೆನಿಸುವುದೆಂಬ ಜಿನಸೇನರ ಅಭಿಪ್ರಾಯವನ್ನು ಪಂಪನು ಅನುಮೋದಿಸಿರುವುದನ್ನು ಅನುಕರಿಸಿರುವುದನ್ನು ಕಾವ್ಯದ ಉದ್ದಕ್ಕೂ ನೋಡುತ್ತೇವೆ. ಅಲ್ಲದೆ ಪಂಪನೇ ಹೇಳಿಕೊಂಡಿರುವಂತೆ ಕಾವ್ಯವು 'ಮೃದು ಪದಗತಿಯಿಂದಲೂ ರಸಭಾವದ ಪೆರ್ಚಿನಿಂದಲೂ ಸೌಂದರ್ಯ ಚಾತುರ್ಯಗಳಿಗೆ ಗಣೆಯಾಗಿರಬೇಕು (ಆದಿಪು.i-೧೭). 'ಕೊಂಕುವೆತ್ತ ಪೊಸನುಡಿಗಳು ಮಾತ್ರ ಕಿವಿಯ ಮೂಲಕ ಮನಸ್ಸನ್ನು ಮುಟ್ಟುವಂತಹವಾಗಿವೆ (ಆದಿಪು.i-೧೮). ಕಾವ್ಯವು ಸಹೃದಯರಿಗೆ ಮುಟ್ಟಬೇಕಾದರೆ ಅದು 'ಮೃದು ಮಧುರ ವಚನ ರಚನೆಯಲ್ಲಿ ಉದಾತ್ತವಾದ ಅರ್ಥ

ಪ್ರತೀತಿಯನ್ನು ಉಂಟುಮಾಡುವಂತಿರಬೇಕು' (ಆದಿಪು. i-೧೮).

ಆದಿಪುರಾಣವು ಎಲ್ಲರಿಗೂ ತಿಳಿದುದು ; ಪ್ರಸಿದ್ಧಿ ಪಡೆದುದು ; ಕೋಮಲವೂ ಸುಭಗವೂ ಆದುದು ; ಸುಂದರವಾದ ಸೂಕ್ತಿಗಳಿಂದಲೂ ಮೃದು ಸಂದರ್ಭಗಳಿಂದಲೂ ಸಂಗತವಾದುದು ; ವಿಮರ್ಶನೀಯವಾದುದು. ಉಚಿತಪದಗಳಿಂದ ಕೂಡಿ ಶ್ರವ್ಯವೂ ಮಧುರಪ್ರಸಾದಿಗುಣಯುಕ್ತವೂ ಆದದ್ದು; ದೋಷರಹಿತವಾದದ್ದು. ಇದರ ಕೀರ್ತಿ ದಿಗಂತ ಮುಟ್ಟಿದೆ (ಆದಿಪು. i-೨೬). ಪಂಪನ ಈ ಹೆಗ್ಗಳಿಕೆ ನಿಂತಿರುವುದು ಈತನ ಕಾವ್ಯಗುಣಗಳಿಂದಲೇ.

ತಾನು ಕಾವ್ಯವನ್ನು ನಡೆಸಿಕೊಂಡು ಹೋಗಿರುವ ವಿಧಾನಕ್ಕೆ ಕನ್ನಡಿ ಹಿಡಿಯುವಂತೆ ಪಂಪಭಾರತದಲ್ಲಿ ಹೀಗೆ ಹೇಳಿದ್ದಾನೆ. 'ಬಗೆ ಪೊಸತಪ್ಪುದಾಗಿ ಮೃದು ಬಂಧದೊಳೊಂದುವುದು', 'ಒಂದಿ ದೇಸಿಯೊಳ್ಪುಗುವುದು', 'ಪೊಕ್ಕ ಮಾರ್ಗದೊಳ್ ತಳ್ಪುದು' (ಪಂಪಭಾರತ i ೮) ಎಂದೂ ಹಾಗೆ ಆದಾಗ ಕಾವ್ಯದ ಶೋಭೆ ಹೆಚ್ಚುವುದೆಂದೂ ಹೇಳಿದ್ದಾನೆ. ಕಾವ್ಯಬಂಧವು ಮಾರ್ಗ-ದೇಶೀ ಶೈಲಿಗಳ ಹದವಾದ ಸಂಮಿಶ್ರಣವಾಗಿದ್ದರೆ ಚೆಲುವೆಂದು ಕವಿಯ ಆಶಯ.

ನಮ್ಮ ಹಿಂದಿನ ಕವಿಗಳು ಪಂಪನ ಕವಿತಾಶಕ್ತಿಗೆ ಮಾರುಹೋಗಿ, ತಮಗೆ ಅತ್ಯಂತ ಪ್ರಿಯವೆನಿಸುವ ಆತನ ಕವಿತಾಶಕ್ತಿಯ ಗುಣಗಳನ್ನು ಹಾಡಿಹೊಗಳಿದ್ದಾರೆ. ಪಂಪನ ಶೈಲಿ ರನ್ನನಿಗೆ (ಕ್ರಿ. ಶ. ೯೯೩) 'ಸುಭಗತ್ವ' (ಅಜಿತಪುರಾಣ xii-೩೮); ನಾಗಚಂದ್ರನಿಗೆ (ಸು.೧೧೦೦) 'ಸುಕವಿತ್ವ' (ಮಲ್ಲಿನಾಥ ಪುರಾಣ i-೨೫); ದುರ್ಗಸಿಂಹನಿಗೆ (ಸು.೧೦೨೫) 'ಗೀರ್ಗುಂಫದ ಪೆಂಪು' (ಪಂಚತಂತ್ರ i-೨೫); ನಯಸೇನನಿಗೆ (ಕ್ರಿ. ಶ. ೧೧೧೨) 'ಅಪೂರ್ವ ರಸ' (ಧರ್ಮಾಮೃತ i-೩೯); ಕರ್ಣಪಾರ್ಯನಿಗೆ (ಸು. ೧೧೪೦) 'ಸನ್ನುತ ಕವಿತ್ವ' (ನೇಮಿನಾಥ ಪುರಾಣಂ i-೧೯); ರುದ್ರಭಟ್ಟನಿಗೆ (ಸು. ೧೧೮೫) 'ರೀತಿ' (ಜಗನ್ನಾಥವಿಜಯ i-೧೦); ಅಗ್ಗಳನಿಗೆ (ಕ್ರಿ. ಶ. ೧೧೮೯) 'ನಯ' (ಚಂದ್ರಪ್ರಭಪುರಾಣ i-೬೬); ಆಚಣ್ಣನಿಗೆ (ಸು. ೧೧೯೫) 'ರಸಿಕತ್ವ' (ವರ್ಧಮಾನಪುರಾಣ i-೧೮); ಪಾರ್ಶ್ವಪಂಡಿತನಿಗೆ (ಕ್ರಿ. ಶ. ೧೨೦೫) 'ನುಣ್ಪುವೆತ್ತ ನುಡಿ' (ಪಾರ್ಶ್ವನಾಥಪುರಾಣ i-೭೨); ಜನ್ನನಿಗೆ (ಕ್ರಿ. ಶ. ೧೨೦೯) 'ಇಂಪು' (ಅನಂತನಾಥಪುರಾಣ i-೩೫); ಗುಣವರ್ಮನಿಗೆ (ಸು. ೧೨೩೫) 'ಓಜೆ' (ಪುಷ್ಪದಂತಪುರಾಣ); ಕಮಲಭವನಿಗೆ (ಸು. ೧೨೩೫) 'ಸೌಂದರೀ ಸುಭಗತ್ವ' (ಶಾಂತೀಶ್ವರ ಪುರಾಣಂ i-೬೨); ಮಲ್ಲಿಕಾರ್ಜುನನಿಗೆ (ಸು. ೧೨೪೫) 'ಗುಣ' (ಸೂಕ್ತಿಸುಧಾರ್ಣವ); ಕೇಶಿರಾಜನಿಗೆ (ಸು. ೧೨೬೦) 'ಸುಮಾರ್ಗ' (ಶಬ್ದಮಣಿದರ್ಪಣ i-೫); ಚೌಂಡರಸನಿಗೆ (ಸು. ೧೩೦೦) 'ಲಕ್ಷಣ ಲಕ್ಷಿತಾನ್ವಿತ ವಚನ' (ಅಭಿನವ ದಶಕುಮಾರಚರಿತೆ i-೧೨); ನಾಗರಾಜನಿಗೆ (ಕ್ರಿ. ಶ. ೧೩೩೧) 'ವಚೋವಿಳಾಸ' (ಪುಣ್ಯಾಸ್ರವ i-೧೫)—ಹೀಗೆ ಅನೇಕ ಕವಿಗಳು ಪಂಪನ ಕವಿತಾ ಸಾಮರ್ಥ್ಯದ ಹಲವಾರು ಗುಣಗಳು ಪ್ರಕಟಗೊಳ್ಳುವಂತೆ ಆತನ ಕಾವ್ಯಗುಣಗಳನ್ನು ಸ್ಮರಿಸಿದ್ದಾರೆ. ಇವೆಲ್ಲ ಪಂಪನ ಕಾವ್ಯಶೈಲಿಯ ವೈವಿಧ್ಯವನ್ನು ಮಾರ್ದನಿಸುತ್ತವೆ.

ಪಂಪನ ಈ ಕೃತಿ ಮುಂದಿನ ಶಾಸ್ತ್ರಕಾರರಿಗೆ, ಆಲಂಕಾರಿಕರಿಗೆ, ವೈಯಾಕರಣಿಗಳಿಗೆ ಹಾಗೂ ಕವಿಗಳಿಗೆ ಮಾದರಿಯಾಗಿ ನಿಲ್ಲುವ ಶಾಸ್ತ್ರೀಯ ಮೌಲ್ಯವನ್ನು ಗಳಿಸಿಕೊಂಡಿದೆ

ಎಂಬುದು ಗಮನಾರ್ಹ. ಈ ಬಗೆಗೆ ಎಸ್. ಜಿ. ನರಸಿಂಹಾಚಾರ್ಯರು, ಕೆ. ಜಿ. ಕುಂದಣಗಾರರು, ಎ. ಪಿ. ಚೌಗುಲೆ ಅವರು ಬೆಳಕನ್ನು ಚೆಲ್ಲಿದ್ದಾರೆ.

“ಪಂಪನು ತನ್ನ ಭಾಷೆ ಪುಟವಹ ಸಾಜದ ಪುಲಿಗೆರೆಯ ತಿರುಳ ಕನ್ನಡವೆಂದು ಹೇಳಿದ್ದಾನೆ. ಇದು ವ್ಯಾಕರಣಶುದ್ಧವಾದುದೆಂಬ ವಿಷಯದಲ್ಲಿ ಶಬ್ದಮಣಿದರ್ಪಣಕಾರನ . . .‘ಸುಮಾರ್ಗಮಿದಱೊಳೆ ಲಕ್ಷ್ಯಂ’ ಎಂಬ ಮಾತೇ ಸಾಕಾಗಿರುತ್ತದೆ. ಈತನು ಆದಿಪುರಾಣವೊಂದರಿಂದಲೇ ಹತ್ತೊಂಬತ್ತು ಕಡೆಗಳಲ್ಲಿ ಪದ್ಯಗಳನ್ನು ಉದ್ಧರಿಸಿ ಬರೆದಿದ್ದಾನೆ”[೨].

‘ನಾಗವರ್ಮನು ಭಾಷಾಭೂಷಣದಲ್ಲಿ ಗುರು ಹಂಪದೇವನಿಂದ ಉದಾಹರಣೆಗಳನ್ನು ನೆನೆದಿದ್ದಾನೆ. ಶಬ್ದಾನುಶಾಸನದಲ್ಲೂ ಇವನ ಗ್ರಂಥದಿಂದ ಪದ್ಯಗಳು ಉದ್ಧೃತವಾಗಿವೆ. ಇವನ ಗ್ರಂಥದ ಕಾವ್ಯಧರ್ಮ ಸಮೃದ್ಧಿಯನ್ನು ದೃಢೀಕರಿಸುವಂತೆ ಕಾವ್ಯಾವಲೋಕನದಲ್ಲಿ ನಾಗವರ್ಮನೂ, ರಸರತ್ನಾಕರದಲ್ಲಿ ಕವಿಸಾಳ್ವನೂ ಅನೇಕ ಪದ್ಯಗಳನ್ನು ತೆಗೆದು ಉದಾಹರಿಸಿದ್ದಾರೆ. ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವದಲ್ಲೂ ಅಭಿನವವಾದಿ ವಿದ್ಯಾನಂದನ ಕಾವ್ಯಸಾರದಲ್ಲೂ ಏತತ್ಕೃತವಾದ ಅನೇಕ ಪದ್ಯಗಳು ದೊರೆಯುತ್ತವೆ.’[೩]

ಪಂಪನು ಜಿನಧರ್ಮತತ್ತ್ವವನ್ನು ಕೂಲಂಕಷವಾಗಿ ಅಭ್ಯಾಸ ಮಾಡಿದವನು; ಅಪಾರವಾದ ಶ್ರದ್ಧೆಯನ್ನಿಟ್ಟವನು. ಅವನ ಕಾಲಕ್ಕೆ ಈ ವಿಚಾರದಲ್ಲಿ ಈತನನ್ನು ಸರಿಗಟ್ಟುವವರು ಯಾರೂ ಇದ್ದಿರಲಿಕ್ಕಿಲ್ಲ. “ಈ ಕಾರಣದಿಂದಲೇ ಮಾಘಣಂದ್ಯಾಚಾರ್ಯರು ತಮ್ಮ ಶಾಸ್ತ್ರ ಸಮುಚ್ಚಯದಲ್ಲಿ ಆದಿಪುರಾಣದೊಳಗಿನ ಅನೇಕ ಭಾಗಗಳನ್ನು ಉದಾಹರಿಸಿದ್ದಾರೆ.”[೪] “ಮಾಘಣಂದ್ಯಾಚಾರ್ಯರು ಸಿದ್ಧಾಂತ ಚಕ್ರೇಶ್ವರರು. ಇಂತಹ ಘನವಿದ್ವಾಂಸರು ಆದಿಪುರಾಣದೊಳಗಿನ ಭಾಗಗಳನ್ನು ಉದಾಹರಿಸಬೇಕಾದರೆ ಪಂಪನು ನಿಜಕ್ಕೂ ಕೃತಕೃತ್ಯನು”[೫].

ಕನ್ನಡ ಕವಿಗಳಲ್ಲಿ ಪೊನ್ನ, ರನ್ನ, ನಾಗಚಂದ್ರ, ಅಗ್ಗಳ, ಜನ್ನ, ಷಡಕ್ಷರದೇವ ಮುಂತಾದ ಕವಿಗಳು ಪಂಪನನ್ನು ಅನುಕರಿಸಿರುವುದನ್ನು ವಿದ್ವಾಂಸರು ಗುರುತಿಸಿದ್ದಾರೆ. ಇವೆಲ್ಲವುಗಳಿಂದ ಪಂಪನ ಘನಶೈಲಿಯ ಹಿರಿಮೆ ವೇದ್ಯವಾಗುತ್ತದೆ. ಉತ್ತರಕಾಲೀನ ಆದಿಪುರಾಣದ ಕರ್ತೃಗಳಾದ ಚಾಮುಂಡರಾಯ, ಹಸ್ತಿಮಲ್ಲ, ನಾಗರಾಜ, ಶಾಂತಕೀರ್ತಿ ಹಾಗೂ ಬೊಮ್ಮಣ್ಣ ಇವರು ಒಂದಲ್ಲ ಒಂದು ರೀತಿಯಲ್ಲಿ ಪಂಪನ ಪ್ರಭಾವಕ್ಕೆ ಒಳಗಾದವರೆ.

ಭಾಷೆ ಭಾವಸ್ಪಂದಿಯಾಗಿ ಅನನ್ಯ ಪ್ರೌಢಿಮೆಯ ರೀತಿಯನ್ನು ನೋಡಬೇಕಾದರೆ ನಾವು ಪಂಪನನ್ನು ಮೊರೆಹೊಗಬೇಕು. ಭಾಷೆಯ ನಾನಾ ವಿಧದ ವಾಗ್ವಿಳಾಸವನ್ನು ಪಂಪನ ಕಾವ್ಯದುದ್ದಕ್ಕೂ ಕಾಣಬಹುದಾಗಿದೆ. ಒಮ್ಮೆ ಜಲಪಾತದಂತೆ ಅದು ಧುಮ್ಮಿಕ್ಕಿದರೆ, ಮತ್ತೊಮ್ಮೆ ಶಾಂತಝರಿಯಾಗಿ ಹರಿಯುತ್ತದೆ. ಒಮ್ಮೆ ಪ್ರೌಢಿಮೆಯ ಉತ್ತುಂಗ ಶಿಖರವನ್ನೇರಿ ಪಂಪನು ಕಾವ್ಯಲೋಕದಲ್ಲಿ ವಿಹರಿಸಿದರೆ ಮಗದೊಮ್ಮೆ ಸರಳಸುಂದರ ಲಲಿತಮಾಧುರ್ಯ ಪ್ರಪಂಚದಲ್ಲಿ ನಲಿಯುತ್ತಾನೆ. ಇಲ್ಲೆಲ್ಲ ವಿದಗ್ಧರ ಚತುರೋಕ್ತಿಯ ವಿನ್ಯಾಸ, ಆಡುಮಾತಿನ ಧಾಟಿ ಕಂಡುಬರುತ್ತದೆ. ಇವೆಲ್ಲವುಗಳಿಂದ ಭಾವಕ್ಕೆ ತಕ್ಕಂತೆ ಕಥೆಯ ಜೀವನಾಡಿ ಮಿಡಿದು ಈತನ ಶೈಲಿಯಲ್ಲಿ ಸುಂದರ ಸನ್ನಿವೇಶಗಳು, ನಾಟಕೀಯ ದೃಶ್ಯಾವಳಿಗಳು, ಕಣ್ಣಿಗೆ ಕಟ್ಟುವ ವರ್ಣನಾವಿಧಾನಗಳು ಮೂಡಿಬರುತ್ತವೆ.

ದೊಡ್ಡದೊಡ್ಡ ಸಮಾಸಪದಗಳನ್ನು ಹೆಣೆಯುವ ಪ್ರೌಢಿಮೆ ಒಂದೆರಡು ಪದಗಳ ಸಮಾಸೋಕ್ತಿಗೆ, ವಾಕ್ಯಸರಣಿಗೆ ಸೀಮಿತವಾಗದೆ ಇಡೀ ಪದ್ಯಗದ್ಯಗಳ ಹರವಿಗೆ, ಪದ್ಯ ಮಾಲೆಗಳಿಗೆ ಕೈಚಾಚಿ ನಿಲ್ಲುತ್ತದೆ. ಸುಭಗತೆಯ ರಚನೆ ಕೂಡ ಅದೇ ಧಾಟಿಯದು. ಒಂದೇ ಆಶಯವನ್ನು, ಭಾವವನ್ನು ಕವಿ ಎರಡೂ ಮಾರ್ಗಗಳಲ್ಲಿ ಸಮರ್ಥವಾಗಿ ಹೇಳಬಲ್ಲ ಎಂಬುದಕ್ಕೆ ಒಂದೊಂದು ಉದಾಹರಣೆಯನ್ನು ನೋಡಬಹುದು.

ಹೇಯಂಗಳ್ ಖಿಳ ಕರ್ಮ್ಮಬಂಧನಕರಕ್ರೋಧಾದಿಗಳ್ ಮತ್ತುಪಾ
ದೇಯಂಗಳ್ ದುರಿತೇಂಧನಾನಳಲಸದ್ರತ್ನತ್ರಯಂಗಳ್ (ಆದಿಪು. i-೪)

ಎಂಬ ರಚನೆಯಲ್ಲಿ ಕ್ರೋಧಾದಿ ಭಾವಗಳ ವಿಸ್ಫುರಣೆಗೆ ತಕ್ಕ ಮಹಾಪ್ರಾಣಾಕ್ಷರಗಳನ್ನೊಳ ಗೊಂಡ ತೀವ್ರಗತಿಯನ್ನು ಶಾಂತಭಾವನಿರೂಪಣೆಗೆ ತಕ್ಕ ಮೃದುಶಬ್ದಗಳನ್ನೊಳಗೊಂಡ ಮಂದಗತಿಯನ್ನು ತಂದಿರುವ ಸೂಕ್ಷ್ಮತೆ ಗಮನಾರ್ಹ.

ಇದೇ ಭಾವವನ್ನು ಕವಿ ದೇಸೀ ಚೆಲುವಿನಲ್ಲಿಯೂ ನಿವೇದಿಸಬಲ್ಲನೆಂಬುದಕ್ಕೆ :

ಪುಸಿಯದುದು ಪರಾಂಗನೆಗಾ | ಟಿಸದುದು ಕೊಲ್ಲದುದು ಮೋಹಮಿಲ್ಲದುದರಿವಂ
ಪೊಸಯಿಸುವುದು ವೈರಾಗ್ಯದ | ದೆಸೆಗೆಸಪುದು ಧರ್ಮ್ಮಮದಱ ತಡೆವುದಧರ್ಮಂ
(ಆದಿಪು. v-೭೯)

ಧರ್ಮಾಚರಣೆಯ ಸ್ವರೂಪವನ್ನು ಬಿಡಿಬಿಡಿಯಾಗಿ ಸುಲಭಶೈಲಿಯಲ್ಲಿ ವರ್ಣಿಸುವ ಕಲೆ ಈ ಪಂಡಿತ ಕವಿಗೊಂದು ಲೀಲೆ. ಸಂಸ್ಕೃತ ಸಮಾಸೋಪೇತವಾದ ಮೊದಲ ಪದ್ಯ ಬಂದಿರುವ ಸಂದರ್ಭ ಪಂಚಪರಮೇಷ್ಠಿಗಳ ಸ್ತುತಿಯ ಸಂದರ್ಭವಾದರೆ ಮತ್ತೊಂದು ಪ್ರೀತಿಂಕರಾಚಾರ್ಯರು ಶ್ರೀಧರದೇವನಿಗೆ ಪ್ರಕಟಿಸುವ ಧರ್ಮನಿರೂಪಣೆಯ ಸಂದರ್ಭ ದಲ್ಲಿ ಬಂದಿರುವ ಪದ್ಯವಾಗಿದೆ. ಕವಿಯ ಸಮಯಪ್ರಜ್ಞೆ ಔಚಿತ್ಯಪೂರ್ಣವಾದುದು. ಕೇವಲ ಬಂಧವೈವಿಧ್ಯ ಪ್ರದರ್ಶನಮಾತ್ರವೇ ಪಂಪನ ಗುರಿಯಲ್ಲ. ಅದು ಭಾವವ್ಯಂಜನೆಯಲ್ಲಿ ಸಮಾವೇಶಗೊಳ್ಳುತ್ತದೆ. ಆದ್ದರಿಂದಲೇ ಪಂಪನದು'ಉಚಿತಪದಂ'. ಕನ್ನಡದ ನಡೆಗೆ ಸರಿಹೊಂದುವ ಗಾದೆಗಳು, ನುಡಿಗಟ್ಟುಗಳು, ಆಡುಮಾತುಗಳು, ಅಲಂಕಾರಾದಿಗಳು ಕಾವ್ಯದ ಸೊಬಗನ್ನು ಹೆಚ್ಚಿಸುತ್ತವೆ; ಹೆಚ್ಚು ಭಾವಪ್ರದಗೊಳಿಸುತ್ತವೆ. "ಪಂಪ ಕನ್ನಡ ಭಾಷೆಯ ಅಂತಸ್ಸತ್ವಶಕ್ತಿಗಳನ್ನು ಬಹಳ ಚೆನ್ನಾಗಿ ಅರಿತವನು. ಕನ್ನಡದ ಮುರುಮುರಿ ಯಾದ ವಾಕ್ಯರಚನೆಯ ಸೊಗಸು ಆತನಿಗೆ ಚೆನ್ನಾಗಿಯೇ ಗೊತ್ತು."[೬]

ಈ ಕೃತಿಯಲ್ಲಿ 'ವಾಕ್ಯಮಾಣಿಕ್ಯಕೋಶ'ವು ವಾಗ್ವಧೂಮುದ್ರೆಯಿಂದ ಮುದ್ರಿತವಾಗಿದೆ. ಈತನ ರಚನಾಕ್ರಮ ವಿಶಿಷ್ಟವಾದುದು, ಆಕರ್ಷಕವಾದುದು. ಭಾಷೆ-ಶೈಲಿಗಳ ದೃಷ್ಟಿಯಿಂದ ಅದನ್ನು ಇಲ್ಲಿ ಗಮನಿಸಬಹುದಾಗಿದೆ.

ಕೆಲವು ವಿಶೇಷ ಪದಪ್ರಯೋಗಗಳಿಗೆ—

ಬಹುವಚನ ಸಂಬೋಧನಪ್ರತ್ಯಯವಾಗಿ 'ಇರ' ಪ್ರತ್ಯಯವನ್ನು ಬಳಸಿದ್ದಾನೆ. ಉದಾ ಹರಣೆಗೆ 'ನಂದನಂಗಳಿರ', 'ಆಲಯಂಗಳಿರ', 'ದೇವಿಯರಿರ' (iii-೪)[೭].

ಸಾಮಾನ್ಯವಾಗಿ ನಿಷೇಧರೂಪದಲ್ಲಿ 'ಅದೆ' ಪ್ರತ್ಯಯ ಬಳಕೆಯಾಗುತ್ತದೆ. ಪಂಪನು 'ಅ' ಪ್ರತ್ಯಯವನ್ನು ಈ ಅರ್ಥದಲ್ಲಿ ಬಳಸಿ ಅಪರೂಪ ಪ್ರಯೋಗವನ್ನು ಮಾಡಿದ್ದಾನೆ. ಉದಾಹರಣೆಗೆ'ಪಸಿದುಣ್ಣಪಟ್ಟು ಬಿರ್ದಿರ್ದು' (xiv-೭೮) (ಹಸಿದರೂ ಊಟ ಮಾಡದೆ

ಮಲಗಿದ್ದು) ಎಂಬಲ್ಲಿ ಬರುವ'ಉಣ್ಣ' ಎಂಬ ಪದವು ನಿಷೇಧಾರ್ಥಕದ್ದಾಗಿದೆ.[೮]

ಗುಣವಾಚಕರೂಪದ ಅನುಕರಣಶಬ್ದಗಳಿಗೆ ಉದಾಹರಣೆ : 'ಗಟ್ಟಿನೆ ಕೊಳೆ' (xi-೧೧೭); 'ಘಳಿಲನೆ ಕೊಳೆ' (xiv-೧೦೨); 'ಘಳುಮ್ಮ ನಿಳಿಗುಂ' (v-೮೧); 'ಪೆಳ್ಳನೆ ಬಾರಿಸಿದುವು' (ix-೯೩)[೯].

ಒತ್ತನ್ನು ಸೂಚಿಸುವ 'ಎ' ಪ್ರತ್ಯಯವನ್ನೊಳಗೊಂಡ ವಿಶೇಷ ಪದಕ್ಕೆ : 'ಇವುವೆ' (v-೬೦)[೧೦].

ಕೆಲವು ಪದಗಳ ಸ್ತ್ರೀಲಿಂಗ ಬಹುವಚನರೂಪಗಳಿಗೆ : 'ಆಕೆಗಳ್' (i-೭೫); 'ಅವಳ್ದಿರ್' (ii-೬೫); 'ಈಕೆಗಳ್' (xii-೧೨)

ವಿಭಕ್ತಿಪಲ್ಲಟಕ್ಕೆ : 'ಪೆಱರ ಮಾಡುವುದೇಂ'(i-೩೬); 'ತನ್ನುಂಡುದು ತಪ್ಪದು'(ii-೧೫); 'ತನ್ನ ಕಂಡ ಕನಸು'(ಆಶ್ವಾಸ ii); 'ಮಹಾನುಭಾವನ ಪೇಳ್ದಮಾಳ್ಕೆಯೊಳ್'(ಆಶ್ವಾಸ ii); 'ಮುನ್ನಿನ ಗೆಯ್ದ ದೋಷಂ' (iii-೪೦); 'ಎನ್ನ ಬರೆದ ಪಟ' (ಆಶ್ವಾಸ iii)

ಕೆಲವು ನುಡಿಗಟ್ಟುಗಳಿಗೆ : 'ಕಂಠಗ್ರಹಂಗೈ' (i-೭೯); 'ಅರಣ್ಯರುದಿತ' (i-೨೩); 'ಕಣ್ಗೆತ್ತಿದಂತೆ' (i-೫೫); 'ಸೆರಗಿಲ್ಲದಗಂಡ' (i-೭೯); 'ಅವಸ್ತುಮಾಡಿ' (ii-೩೯); 'ಹಸ್ತಾವಲಂಬಂ' (ii-೪೯); 'ಅಳ್ಳೆಜೊಳ್ಳೆತನ' (ii-೪೫); 'ಮಾತುಗಳ್ ಕೀಲಿಸಿದಂತೆ' (iii-೨೩); 'ಮೂಗುವಟ್ಟು'(iii-೨೬); 'ಶಾಸನಂಬರೆ'(iii-೪೩); 'ಬೇರ್ವರಿದುದು'(iii-೪೩); 'ಕೈಮಿಕ್ಕಿರ್ದರಾಗಂ' (viii-೭೯); 'ನುಣ್ಣನೆ ನುಂಗು' (ix-೬೦); 'ಕಟ್ಟಿಕೊಳ್ವ ಕಣೆ' (ix-೯೦); 'ಜೀವನ್ಮೃತಕ' (xii-೯೭); 'ಪಗರಣದರಸ' (xii-೯೮); 'ಬೆಂಗೆವಂದು' (ಆಶ್ವಾಸ xiv); 'ಸಮರಿಕೊಂಡ ನುಡಿಗಳ್' (xiv-೬೪); 'ಗೂಡುಗೊಳುತಿರ್ದ ಶೌರ್ಯ' (xiv-೧೪೪).

## ಗಾದೆಗಳು – ಹೇಳಿಕೆಗಳು

'ವಂಧ್ಯಾಸ್ತನಂಧಯ ಸಮಾಗಮಸಮಾನಂ'(ಆಶ್ವಾಸ iii); 'ಶಕ್ತಿಯೊಳ್ ಮುಕ್ತಿಯಂ ಸಾಧಿಸಲಕ್ಕುಂ' (iii-೪೪); 'ನಿಧಾನಮಂ ತೋರಿ ಕಣ್ಣಂ ಕಳೆವಂತೆ' (ಆಶ್ವಾಸ iii); 'ಕಟ್ಟಿದುದೆ ಸುರಿಗೆ ಮೆಟ್ಟಿದುದೆ ಕಳಂ' (iii-೭೨); 'ಇರುಳ್ ಕಂಡ ಕನಸಂ ಮರುದೆವಸಂ ನೆನೆವಂತೆ' (ಆಶ್ವಾಸ iv); 'ನೂಕೆ ಪಾಸೆಂಬ ಮಾತಿನ ಪಾಂಗಿನಿಂ' (v-೭೦); 'ಇಕ್ಷುಯಂತ್ರದೊಳ್ ಕಬ್ಬಂ ಪಿಳಿವಂತೆ'(ಆಶ್ವಾಸ v); 'ಪಡೆಯಲ್ಕಾಗದ ನಿಧಿಯಂ ಬಡವಂ ಪಡೆವಂತೆ' (vii-೪೬); 'ಸುತಂಗೆ ಕಥೆವೇೞ್ದರೆಂಬಂತೆ' (viii-೧೪); 'ನರಭೋಗಮೆಂಬೀ ಪನಿಪುಲ್ಲಂ ನಕ್ಕೆ ತೃಷ್ಣೆ ಪೇಳ್ ಪೋದಪುದೇ' (ix-೫೭); 'ಅಕ್ಕಿಗೊಟ್ಟು ಮಡಗೂೞುಣ್ಬಂದಮಂ ಪೋಲದೆ' (xiv-೩೨); 'ಎರಲೆಗೆ ಪಾಡುವ ಹೋರಿಯನರಣ್ಯದೊಳ್ ಮೃಗವಿರೋಧಿಗಂ ಪಾಡುವುದೇ' (xiv-೮೦); 'ಯಥಾ ರಾಜಾ ತಥಾ ಪ್ರಜಾಃ' (xv-೪೦); 'ಜಿನಧರ್ಮಂ ಪ್ರಾಣಿಗಾರ್ಮಂ' (ii-೨೦); 'ಸಂಸೃತಿ ಭೋಗಂಗಳ್ ಭೋಗಿ ಭೋಗದಿಂ ವಿಷಮಂಗಳ್' (v-೨೫); 'ಕರ್ಮಮೆ ಕಡು ಬಲ್ಲಿತ್ತದಱ ತಿರಿವದೇಂ ಬಹುವಿಧಮೋ'(v-೯೭); 'ಉಪಕಾರಮನಱಿಯದಾತನುಂ ಮಾನಸನೇ' (v-೯೮); 'ನಿಡಿಯರ್ಗಂ ನಿಡಿಯರೊಳರ್' (xii-೧೦೪); 'ಹೇಯಂ ಸಾಮ್ರಾಜ್ಯಮುಪಾದೇಯಂ ಪ್ರವ್ರಜ್ಯಂ' (xvi-೬೨).

ಇವುಗಳಲ್ಲಿ ಕೆಲವನ್ನು ಪಂಪನು ನೇರವಾಗಿ ಜಿನಸೇನರಿಂದ ತೆಗೆದುಕೊಂಡಿದ್ದರೆ

ಕೆಲವನ್ನು ಪ್ರಚಲಿತ ಭಾಷೆಯಿಂದ ಆಯ್ದುಕೊಂಡಿದ್ದಾನೆ. ಇನ್ನು ಕೆಲವು ಆತನ ಸ್ವಂತ ಸೃಷ್ಟಿಗಳಂತೆ ಕಂಡುಬರುತ್ತವೆ. ಜಿನಸೇನರಿಂದ ತೆಗೆದುಕೊಂಡವುಗಳಿಗೆ : 'ಇರುಳ್ಕಂಡ ಕನಸಂ ಮಱುದಿವಸಂ ನೆನೆವಂತೆ'; 'ವಂಧ್ಯಾಸ್ತನಂಧೆಯ ಸಮಾಗಮ ಸಮಾನಂ'— ಇಂತಹ ಕೆಲವು ಎಡೆಗಳಲ್ಲಿ ಪಂಪನು ಜಿನಸೇನರಿಗೆ ಋಣಿಯಾಗಿದ್ದಾನೆ.

ಪಂಪನ ಆಡುಮಾತಿನ ಧಾಟಿಯು ಮೋಹಕವಾದುದು. ಇಡೀ ಸನ್ನಿವೇಶದ ಸ್ಪಷ್ಟ ಚಿತ್ರಣದ ಉತ್ಕಟ ಪ್ರಭಾವವನ್ನು ಪಂಪ ಆಡುಮಾತಿನ ಧಾಟಿಯಲ್ಲಿ ನಿರ್ವಹಿಸಬಲ್ಲ. ವ್ಯಕ್ತಿಗಳ ಮನೋಭಾವವನ್ನೇ ಅಲ್ಲದೆ ಸನ್ನಿವೇಶದ ವಿಶಿಷ್ಟ ಸೂತ್ರವನ್ನೇ ಎತ್ತಿ ಹಿಡಿಯುವ ಮಾತುಗಳಾಗಿ ಅವು ಕಂಡುಬರುತ್ತವೆ. ಉದಾಹರಣೆಗೆ ಬಾಹುಬಲಿ ಭರತನಿಗೆ ರಾಜ್ಯ ವೊಪ್ಪಿಸುವ ಸಂದರ್ಭದಲ್ಲಿ ಹೇಳುವ ಮಾತುಗಳನ್ನು ಗಮನಿಸೋಣ (xiv-೧೩೦) :

ಬಾಹುಬಲಿಯ ದೃಢನಿರ್ಧಾರ ತಾನು ಮಾಡಿದ ತಪ್ಪಿನ ಅರಿವಿನಿಂದ ಮೂಡಿ ಬಂದದ್ದು. ಆತನಿಗೆ ಅರಿವು ಮೂಡಿದಾಗ ಅಣ್ಣನ ಆಸೆ ಆಕಾಂಕ್ಷೆಗಳನ್ನು ಈಡೇರಿಸುವ ಕರ್ತವ್ಯ ಕರ್ಮದ ಅರಿವು ಒಂದೇ ಅಲ್ಲದೆ, ಅದಕ್ಕಿಂತ ಮಿಗಿಲಾದ ಆತ್ಮೋದ್ಧಾರದ ಭಾವ ಮೈಗೂಡಿಬಂದಿತು. ಅಣ್ಣ ಆಶಿಸಿದ ರಾಜ್ಯವನ್ನು ಎಂತಹ ಉದಾತ್ತ ರೀತಿಯಲ್ಲಿ ನೀಡುತ್ತಿದ್ದಾನೆ. ಇದು ಮಣ್ಣಿಗೆ ಸಮಾನ, ನನಗೆ ಇದು ಬೇಡವೆಂಬ ತಾತ್ಸಾರ ಮನೋ ಭಾವದಿಂದಲ್ಲ. ಆ ರಾಜ್ಯಲಕ್ಷ್ಮಿ ಆತನಿಗೆ ಬೇಡದಿದ್ದರೂ ಅದರ ಬಗೆಗೆ ಗೌರವಭಾವವನ್ನೇ ಸೂಸುವಂತಹ ಮಾತುಗಳನ್ನಾಡುತ್ತಾನೆ. 'ಮನೋಹರಿ ರಾಜ್ಯಲಕ್ಷ್ಮಿ' ಎನ್ನುತ್ತಾನೆ. (ಆದರೂ 'ವಿಭ್ರಮ-ಭ್ರಮರಿಯಪ್ಪ' ಎಂಬೆಡೆ ಪಂಪ ಧ್ವನಿಸುವುದು ರಾಜ್ಯದ ಅಸ್ಥಿರ ತೆಯ ಭಾವ ಎಂಬುದನ್ನು ಕಡೆಗಣಿಸುವಂತಿಲ್ಲ.) 'ನೆಲಸುಗೆ ನಿನ್ನ ವಕ್ಷದೊಳ್' ಎಂಬಲ್ಲಿ ಕ್ರಿಯಾಪದವು ಮೊದಲಿಗೆ ಬಂದು, ಮೊದಲು ಅಣ್ಣ ಭರತ ಬಯಸಿದ ರಾಜ್ಯಲಕ್ಷ್ಮಿ ಆತನದಾಗಬೇಕೆಂಬ ಉತ್ಕಟಾಭಿಲಾಷೆಯ ಮೊರೆತ, ಆತುರ ಕೇಳಿ ಬರುತ್ತದೆ. ಆಡು ಮಾತಿನ ಭಾವುಕ ಶೈಲಿಯಲ್ಲಿ ಹಾಗೆಯೇ ಅಲ್ಲವೇ? ಭಾವದೆದುರು ವ್ಯಾಕರಣವೇ? ಮುಂದುವರಿದು ಬಾಹುಬಲಿ ಭರತನಿಗೆ ಹೇಳುವ ಮಾತು : 'ಇದೇವುದಣ್ಣ, ನೀನೊಲಿದ ಲತಾಂಗಿಗಂ ಧರೆಗಮಾಟಿಸಿದಂದು ನೆಗಟ್ತೆ ಮಾಸದೇ?' ಎಂಬುದು ಮತ್ತೂ ಆಡು ಮಾತಿನ ಬಳುಕನ್ನು ಹಿಡಿಯುತ್ತದೆ. ಇಲ್ಲಿ ಲೋಕರೂಢಿಯ ಸಂಸ್ಕೃತಿ, ಮೌಲ್ಯಗಳು ಧ್ವನಿತವಾಗುತ್ತವೆ. ಪಂಪನ ಆಡುಮಾತಿನ ವಿನ್ಯಾಸ ಏನೆಲ್ಲ ಕಾವ್ಯಕ್ರಿಯೆಯನ್ನು ನಡೆಸು ತ್ತದೆ ಎಂಬುದಕ್ಕೆ ಇದೊಂದು ನಿದರ್ಶನ.

ಹೀಗೆಯೇ ಹಲವಾರು ಆಡುಮಾತುಗಳು ಇಲ್ಲಿ ದೊರೆಯುತ್ತವೆ. ಉದಾಹರಣೆಗೆ : 'ಒಡಲೊಳ್ ಜೀವಮಿರ್ದುಗಡ ಸಂಚರಿಸುತಿರ್ಪುದು ಪುಣ್ಯ ಪಾಪಂಗಡ' (ii-೮); 'ಖೇಚರ ನೀನಿದನೆಂತು ನಂಬಿದೊ' (ii-೮); 'ಚೀಃ ಕರಮೆಗ್ಗನಾಗೆನೆ' (ii-೭೪); 'ಚೀಃ ಗಾಂಪು' (iii-೧೬); 'ಸಮ್ಯಕ್ತ್ವದ ದೆಸೆಯಿನಿತಿಲ್ಲ ದಲಮ್ಮ ಕೈಕೊಳ್ಳಲ್ಕಿದು ಕಾಲಂ' (v-೫೧); 'ಏಂ ದುಃಖ ಕ್ಕವರ್ ನೋಂತರೊ' (v-೯೩); 'ಕಟ್ಟಿಕೊಟ್ಟಿ ಕಣೆಯೇಂ ಪೇಟಿಂ' (ix-೯೦); 'ಲೋಕಮಂ ನಗಿಸುವೆನೇ' (xiv-೭೬). ಕ್ರಿಯಾಪದಗಳು ವಾಕ್ಯದಲ್ಲಿ ಮೊದಲಸ್ಥಾನ ಪಡೆದಿರುವುದಕ್ಕೆ : 'ಉಸಿರ್ದಾ ನೀಂ ನಿನ್ನ ನಿರ್ಬೇಗಮನ್' (ii-೪೪); 'ತಣಿಯೆಯಾ ದೇವಲೋಕ ಸುಖ ಸಾಗರಮಂ' (iii-೭೧); 'ಕುಡಿವೆನೊ ಲವಣಾಬ್ಧಿಯನ್' (xii-೮೬); 'ಬಿಸುಡುವು

ದಸದಾಗ್ರಹಮಂ' (xiv-೧೦೪).

'ಉಪಮಾ ಕಾಳಿದಾಸಸ್ಯ ಭಾರವೇರರ್ಥಗೌರವಂ' ಎಂದು ರೂಢಿಯಲ್ಲಿರುವ ಕಾವ್ಯ ಗುಣಗಳು ಪಂಪನ ಕಾವ್ಯಗಳಲ್ಲಿ ಪ್ರಕಾಶಗೊಂಡಿವೆ. ಈತನ ಉಪಮೆಗಳು ಹೆಚ್ಚು ಹೃದಯಂಗಮ. ಜಿನಸೇನರಂತೆಯೇ ಪಂಪನು ಉಪಮಾಲಂಕಾರಕ್ಕೆ ಹೆಚ್ಚು ಒಲಿದಿದ್ದಾನೆ. ಆಡಂಬರಕ್ಕಾಗಿ ಉಪಯೋಗಿಸುವ ಶ್ಲೇಷೆ, ವಿರೋಧಾಭಾಸ ಮೊದಲಾದ ಅರ್ಥಾಲಂಕಾರಗಳು ಇಲ್ಲಿ ಇಲ್ಲವೆಂದೇ ಹೇಳಬೇಕು. ಅಲಂಕಾರವಿನ್ಯಾಸಗಳು ಕೆಲವೆಡೆ ಅರ್ಥಪೂರ್ಣವಾಗಿ ವಿಷಯಪುಷ್ಟಿಯನ್ನು ಕೊಡುವಲ್ಲಿ, ಭಾವನೆಯನ್ನು ಸುಂದರಗೊಳಿಸುವಲ್ಲಿ ಸಹವರ್ತಿಗಳಾಗಿವೆ. ಉದಾಹರಣೆಗೆ : 'ಪಳಿಕಿನ ಕೊಡದೊಳ್ ಸೊಡರ್ಗುಡಿ ಬೆಳಗುವವೋಲ್ ಶುದ್ಧಗರ್ಭಗೃಹದೊಳ್ ತೇಜೋನಿಳಯಂ ಬೆಳಗಿದನ್' (vii-೩೩) ಎಂಬಲ್ಲಿ ಕವಿ ಶುದ್ಧ ಗರ್ಭಗೃಹದ ಸ್ಪಷ್ಟ ಚಿತ್ರಣವನ್ನು ಸ್ಫಟಿಕದ ಕೊಡಕ್ಕೆ ಹೋಲಿಸಿ ತಂದಿದ್ದಾನೆ. ಮುಂದೆ ಮಹಾಜ್ಞಾನಜ್ಯೋತಿಯಾಗುವ ಶಿಶು ಈಗ 'ಸೊಡರ್ಗುಡಿ'. ಅರ್ಥಪೂರ್ಣವಾದ ಸುಂದರ ಹೋಲಿಕೆ ಇಲ್ಲಿ ಕಂಡುಬರುತ್ತದೆ. 'ಕೊಂದುದು ಕೃಷ್ಣಾಗರು ಧೂಪಧೂಮನಿವಹಂ ಕೃಷ್ಣೋರಗಂ ಕೊಲ್ವವೋಲ್' ಎಂಬಲ್ಲಿಯ ಉಪಮಾಲಂಕಾರದ ಸೌಂದರ್ಯ ಸಾರ್ಥಕ್ಯಗಳನ್ನು ಗಮನಿಸೋಣ : ಘ್ರಾಣೇಂದ್ರಿಯ ಸುಖವನ್ನೀಯುವ ಕೃಷ್ಣಾಗರು ಧೂಪ ಧೂಮದ ಸುಖ ಕ್ಷಣಿಕವಾದುದು. ಕ್ಷಣಮಾತ್ರ ಸುತ್ತಿ ಆವರಿಸುವ ಈ ಧೂಮಮಾಧುರ್ಯದ ಮೋಹಕತೆಯೇ ವಜ್ರಜಂಘ-ಶ್ರೀಮತಿಯರ ಚಿರನಿದ್ರೆಗೆ ಕಾರಣವಾಯಿತು. ಅದು ಅವರನ್ನು ಕೃಷ್ಣೋರಗಂ ಕೊಲ್ವವೋಲ್ ಕೊಂದುದು. ಕೃಷ್ಣೋರಗದ ಹೆಡೆ ಮೋಹಕ, ಆದರೆ ವಿಷ ಭಯಂಕರ. ಈ ಉಪಮೆಯಲ್ಲಿ ಪಂಪ ಒಂದೆಡೆ ಇಂದ್ರಿಯಭೋಗದ ಆಕರ್ಷಣೆಯನ್ನು ಚಿತ್ರಿಸಿದ್ದರೆ ಮತ್ತೊಂದೆಡೆ ಅದರಿಂದುಂಟಾಗುವ ಅನರ್ಥವನ್ನು ಧ್ವನಿಸಿದ್ದಾನೆ. ಹೀಗೆ ಈ ಕಾವ್ಯದಲ್ಲಿ ಅನೇಕ ಅಲಂಕಾರ ವಿನ್ಯಾಸಗಳು ಮೈದೋರಿವೆ.

ಕೆಲವು ಉಪಮೆಗಳಿಗೆ ಉದಾಹರಣೆಗಳು : 'ಬಸಂತದೊಳ್ ಕಳಿಕೆಗರ್ಚಿದ ಕೋಗಿಲೆಯಂತೆ ಬಿಚ್ಚತಂ ನಲಿವುದು' (ii-೯); 'ಉರಿಯಳುರ್ವಂತೆ ದಾಹಜ್ವರಮಳುರೆ' (ii-೧೨); 'ಕೊಳದಿಂದಂ ಕರಿಪತಿ ಕಿಱ್ತಿಕ್ಕೆ ಕೊರಗಿದರವಿಂದದವೋಲ್ ಕೊರಗಿದನರವಿಂದಂ' (ii-೧೨); 'ನಿಗಳಂಬೊಲ್ ತೊಡರ್ದೊಂದು ಮೋಹನಿಗಳಂ' (vi-೨೨); 'ಬೆಳಗುವ ಸೊಡರ್ಗುಡಿ ಕಿಡೆ ಮನೆಯೊಳಗೆ ತಮಂ ಪರ್ಬುವಂತೆ ಜೀವಂ ತನುವಿಂ ತಳರಲೊಡಂ' (v-೨೭); 'ಒರೆಯಿಂದುರ್ಚಿದ ಬಾಳ್ವೊಲಾದುದೊ ಪರಿಚ್ಛೇದಂ' (vi-೨೬); 'ಕರ್ಮದ ತೊಡರಂ ಪಱಿವಂತೆ ಕೇಶಪಾಶಮನಂತಾಗಡೆಪಱಿದು' (vi-೨೪); 'ಕಳಭಂ ವನಪಥಮಂ ಯೂಥಪತಿಗೆ ತೋರ್ಪಂತಕ್ಕುಂ' (viii-೧೨); 'ಚಕ್ರಧರಂ ದುಗ್ಧವಾರ್ಧಿಯೊಳ್ ನಿಂದ ಕನಕಗಿರಿಯನೆ ಪೋಲ್ತಂ' (xi-೧೩೮); 'ಜರಾತೃಣಾನುಗುಣಂ ವಲಮೆಂದೆಪೇಸಿದಂ' (iii-೭೮).

ಇವುಗಳಲ್ಲಿ 'ಕರ್ಮದ ತೊಡರಂ ಪಱಿವಂತೆ ಕೇಶಪಾಶಮನಂತಾಗಡೆಪಱಿದು' ಎಂಬುದು ಮುಂದಿನ ಕೆಲವು ಆದಿತೀರ್ಥಂಕರ ಕಾವ್ಯಗಳಲ್ಲಿ ಕಂಡುಬರುತ್ತದೆ. 'ಜರತೃಣಮಿವಾಶೇಷಂ ಸಾಮ್ರಾಜ್ಯಮವತ್ಯಸಃ' ಎಂಬ ಪೂರ್ವಪುರಾಣದ ಉಪಮೆ ಪಂಪನಲ್ಲಿಯೂ ಕಂಡುಬರುತ್ತದೆ. ಹಸ್ತಿಮಲ್ಲ, ಬೊಮ್ಮಣ್ಣ ಕವಿಗಳೂ ಇದನ್ನು ಅನುಕರಿಸಿದ್ದಾರೆ.

ಅನನ್ವಯಕ್ಕೆ : 'ತಳಿರೊಳ್ ನೀನೆ ಬೆಡಂಗನನ್ನೆ ನನೆಯೊಳ್ ನೀಂ ನೀಱನ್ನೆ ಪುಷ್ಪ ಸಂ | ಕುಳದೊಳ್ ನೀನೆ ವಿಲಾಸಿಯ್ಯೆ . . . . ಚೂತರಾಜ ತರುಗಳ್ ನಿನ್ನಂತೆ ಚೆನ್ನಂಗಳೇ' (xi-೯೮); ಪ್ರತೀಪಕ್ಕೆ : 'ಮೊಗಮಂ ತಾವರೆ ಕಣ್ಣನುತ್ಪಳದಳಂ ಧಮ್ಮಿಲ್ಲಮಂ ಸೋಗೆ . . . ಸೆ | ಳ್ಳುಗುರಂ ಕೇದಗೆ ಪುರ್ಬನಂಗಜನ ಬಿಲ್ ದಂತಾಳಿಯಂ ಮುತ್ತು ಕೈಮುಗಿದಾರಾಧಿಸಿ ಪೋಲ್ತುವೆನ್ನದೆ ಸರೋಜಾತಾದಿ ನಿಸ್ಸಾರವ | ಸ್ತುಗಳೊಳ್ ಪೋಲಿಸು ವಂತುಟೇಮ್ಮರುಳನೇರೂಪಂ ವಿಚಿತ್ರಾಂಗಿಯಾ' (vi-೮೫); ಸಂದೇಹಕ್ಕೆ : 'ಕಾಮನ ಮಂತ್ರದೇವತೆಯೊ ಕಾಮನ ವಿದ್ಯೆಯೊ . . . ವಿಸ್ಮಯಮಾದಪುದೆಂಬಿನಂ | ಮಗಳ್ ಶ್ರೀಮತಿಯೆಂಬಳಾಗಿ ನವಯೌವನಲಕ್ಷ್ಮಿಯನ್ನೆದೆ ತಾಳ್ದಿದಳ್' (iii-೧೮).

ಶಬ್ದಾಲಂಕಾರಗಳಲ್ಲಿ ಕವಿಗೆ ಅತ್ಯಂತ ಪ್ರಿಯವಾದುದು ವೃತ್ತ್ಯನುಪ್ರಾಸ. ಕಾವ್ಯದ ಉದ್ದಕ್ಕೂ ಪ್ರಾಸವಿನ್ಯಾಸವನ್ನು ಕಾಣಬಹುದಾಗಿದೆ.

ಅನುಪ್ರಾಸಕ್ಕೆ : 'ಏಲಾಲವಂಗಲವಲೀ ವೇಲಾವನ ಭೂಮಿಯೊಳ್' (xii-೨); 'ಅನುವ ದಿಸಿದಪುದು ನುಡಿ ನುಡಿ | ದನಿತುಮನೆನೆ ತೊದಳ್ ತೊದಳದೆಸೆಯಿಲ್ಲೆನೆ ಮಾತಿ | ನ ಪಸುಗೆ ಪಸುಗೆವಡೆದತ್ತೆನೆ . . .' (ii-೧೦); 'ಸಮಲಾವಣ್ಯಪ್ರಸರದ | ಸಮವಿಭವದ ಸಮವಿಳಾಸ ದಗ್ಗಳಿಕೆಯೊಳಾರ್ | ಸಮನಿವರ್ಗೆನೆ ಸಮರಸದೊಳ್ | ಸಮಸಂದತ್ತವರ್ಗೆ ಸಮಸಮಾ ಯೋಗಸುಖಂ' (viii-೨೪); 'ಹಿಮಶಿಖರಿ ಶಿಖರಸಮವಿಗ್ರಹ ಸನಾಥನಂ | ಕುಮುದದಳ ಧವಳರುಚಿರಚಿರವೃಷಭ ನಾಥನಂ' (vii-೪).

ಯಮಕಕ್ಕೆ : 'ವಿಷಯಾಮಿಷಲಂಪಟತೆಯೆ | ವಿಷಧರನೆನಿಸಿದುದು ನಿನ್ನ ನೆಲೆ ವಿಷಧರ ನೀಂ | ವಿಷಧರನಾಗದೆ ಬೇಗಂ | ವಿಷಯಾಮಿಷಮನುಗುಳ್ದು ನಿರ್ವಿಷನಾಗಾ' (ii-೧೭). ಪಂಪನಲ್ಲಿ ಯಮಕಗಳ ಪ್ರಯೋಗ ಬೆರಳೆಣಿಕೆಯವು.

## ವರ್ಣನೆ ರಸಭಾವಗಳು

ಮಹಾಕಾವ್ಯದ ಅಂಗಗಳು ಎಂದು ಪ್ರಸಿದ್ಧವಾಗಿರುವ ನಗರ, ಸಮುದ್ರ, ಪರ್ವತ, ಋತು, ಚಂದ್ರೋದಯ, ಸೂರ್ಯೋದಯ, ವನವಿಹಾರ, ಜಲಕ್ರೀಡೆ, ಮಧುಪಾನ, ವಿನೋದ, ಸುರತೋತ್ಸವ, ವಿರಹ, ವಿವಾಹ, ಕುಮಾರಜನನ, ಮಂತ್ರಾಲೋಚನೆ, ದೂತ ಕಾರ್ಯ, ವಿಜಯಯಾತ್ರೆ, ಯುದ್ಧ, ನಾಯಕನ ವಿಜಯ ಎಂಬ ವರ್ಣನೆಗಳೆಲ್ಲ (ಮಧು ಪಾನ ವಿನೋದವನ್ನುಳಿದು) ಇಲ್ಲಿ ಪ್ರಾಸಂಗಿಕವಾಗಿ ಕಂಡುಬರುತ್ತವೆ. ದಂಡಿಯು ಮಹಾಕಾವ್ಯದ ಲಕ್ಷಣವನ್ನು ಹೇಳುತ್ತ "ಒಂದಕ್ಕಿಂತ ಹೆಚ್ಚು ಸರ್ಗಗಳು ಸೇರಿ ಆಗುವ ಪ್ರಬಂಧ ಮಹಾಕಾವ್ಯವೆನಿಸುವುದೆಂದೂ ಅದರ ಆದಿಯಲ್ಲಿ ನಮಸ್ಕಾರ ಇಲ್ಲವೆ ಕಥಾ ನಿರ್ದೇಶವು ಬರುತ್ತದೆಯೆಂದೂ ಇತಿಹಾಸವಾಗಲಿ, ಬೃಹತ್ಕಥೆಯೇ ಮುಂತಾದ ಕಥೆ ಯಾಗಲಿ ಅದಕ್ಕೆ ಮೂಲವಾಗಿ ಬರುತ್ತದೆಯೆಂದೂ ಹೇಳಿ ಅದು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥಗಳ ಫಲಪ್ರಾಪ್ತಿಗೆ ಆಧೀನವಾಗಿರುತ್ತದೆ"–ಎಂದು ಮಹಾ ಕಾವ್ಯದ ವಸ್ತುವನ್ನು, ಚೌಕಟ್ಟನ್ನು ನಿರ್ದೇಶಿಸಿದ್ದಾನೆ. ಅಲ್ಲದೆ ಮೇಲೆ ಹೇಳಿರುವ ಹದಿ ನೆಂಟು ವರ್ಣನೆಗಳಿಂದ ಅದು ಕೂಡಿದ್ದು ಸಂಕ್ಷೇಪವಾಗಿರದೆ ರಸಭಾವಗಳಿಂದ ನಿಬಿಡವಾ ಗಿರುವ ಕಾವ್ಯಗಳು ಲೋಕರಂಜನೆಯನ್ನು ಮಾಡುವುದಲ್ಲದೆ ಕಲ್ಪಾಂತದವರೆಗೂ ಚಿರ

ಸ್ಥಾಯಿಯಾಗಿ ನಿಲ್ಲುವುದೆಂದು ಹೇಳಿದ್ದಾನೆ[೨]. ಪಂಪನು ಮೇಲಿನ ವರ್ಣನೆಗಳಲ್ಲಿ ಮಧುಪಾನಪ್ರಸಂಗವನ್ನು ಕೈಬಿಟ್ಟಿದ್ದಾನೆ. ಅಲ್ಲದೆ ವನವಿಹಾರ ಪ್ರಸಂಗದಲ್ಲಿ ಸಾಮಾನ್ಯವಾಗಿ ತಲೆದೋರುವ ಮೃಗಯಾ ವಿನೋದಕ್ಕೆ ಇಲ್ಲಿ ಆಸ್ಪದವಿಲ್ಲ. ಬದಲಾಗಿ ಕವಿ ಪುಷ್ಪಾಪಚಯದ ಪ್ರಸಂಗವನ್ನು ಕಲ್ಪಿಸಿಕೊಂಡಿರುವುದಾಗಲಿ, ಯುದ್ಧಪ್ರಸಂಗದಲ್ಲಿ ಸಾವು ನೋವುಗಳಿಲ್ಲದ ವರ್ಣನೆಯಾಗಲಿ ಕವಿಗಿರುವ ಧಾರ್ಮಿಕ ಸೂಕ್ಷ್ಮಪ್ರಜ್ಞೆಯನ್ನು ಸಾರುತ್ತವೆ.

ಆದಿಪುರಾಣ ಒಂದು 'ವಸ್ತುಕೃತಿ'. ಅಗ್ಗಳನೂ ಸಹ ಚಂದ್ರಪ್ರಭಪುರಾಣವನ್ನು ವಸ್ತುಕೃತಿಯೆಂದು ಕರೆದುಕೊಂಡಿದ್ದಾನೆ. 'ನಾನಾರಸಮಿರ್ಪವಸ್ತುಕೃತಿಯಂ ಪೇಳ್ದಗ್ಗಳಂ ಮೆಚ್ಚಿಪಂ' (i-೫೧) ಎಂದು ಹೇಳಿದ್ದಾನೆ. ತೀರ್ಥಂಕರ ಮಹಾಪುರುಷರನ್ನು ವಸ್ತುವನ್ನಾಗಿ ಮಾಡಿಕೊಂಡು ರಸಭಾವವನ್ನೊಸರುವ ಕಾವ್ಯರಚನೆಯನ್ನು ವಸ್ತುಕೃತಿ ಎಂದು ಕರೆದಿರುವಂತೆ ಕಂಡುಬರುತ್ತದೆ. ಸಂಪ್ರದಾಯನಿಷ್ಠೆಯ ಮಾರ್ಗಶೈಲಿಯಲ್ಲಿ ರಚಿಸಿದ ವಸ್ತುಪ್ರಧಾನವಾದ ಆದಿಪುರಾಣದ ನಾಯಕ ಆದಿತೀರ್ಥಂಕರ. ಆದುದರಿಂದ ಮೃಗಯಾ ವಿನೋದದ ವರ್ಣನೆಗಾಗಲಿ, ಮಧುಪಾನವಿನೋದದ ವರ್ಣನೆಗಾಗಲಿ ಇಲ್ಲಿ ಅವಕಾಶವಿಲ್ಲ.

ಪಂಪನ ವರ್ಣನೆಗಳಲ್ಲಿ ಪುಷ್ಪಾಪಚಯದ ವರ್ಣನೆ ಮೃದುವಾದ ಆತ್ಮೀಯ ವಾತಾವರಣದಲ್ಲಿ ಮೂಡಿಬಂದಿದೆ. ಭರತನ ಅಂತಃಪುರದ ಕೋಮಲಾಂಗಿಯರು ಉದ್ಯಾನವನದಲ್ಲಿ ಹೂಗಳನ್ನು ಕಿತ್ತು ಮುಡಿದು, ನೋಡಿ, ಹಾಡಿ, ಸುಖಿಸಿ ಹೂಗಳನ್ನು ಹರಿದು ನೋಯಿಸಿದೆವಲ್ಲಾ, ಎಂದು ಕೊರಗುವ ಸಂದರ್ಭ ಅತ್ಯಂತ ಆಕರ್ಷಕವಾದ ಮನ ಮುಟ್ಟುವ ಪ್ರಸಂಗವಾಗಿದೆ. ಇದೇ ಸನ್ನಿವೇಶದಲ್ಲಿ ಒಂದು ಅಪೂರ್ವವಾದ ನವಿರಾದ ಭಾವವು ಬೆರೆತುಕೊಂಡಿದೆ. "ಈ ಜೀವಹಿಂಸೆಯ ಭಾವ ಇದು (ಆದಿಪುರಾಣ) ಜೈನ ಗ್ರಂಥವಾದುದರಿಂದ ಬಂದಿರಬಹುದೆಂದು ಊಹಿಸಲು ಅವಕಾಶವಿರುವುದಾದರೂ ಇದು ಪಂಪ ಕವಿಯ ವೈಯಕ್ತಿಕ ಸೌಂದರ್ಯಧರ್ಮವೆಂದು ಭಾವಿಸುವುದರಲ್ಲಿ ಆತಂಕವೇನೂ ಇಲ್ಲ. ಈ ಮನೋಧರ್ಮ ಎಲ್ಲ ದೊಡ್ಡ ಕವಿ ಚೇತನಗಳ ಸೌಂದರ್ಯಧರ್ಮ"[೩].

ಕವಿ ಎಡೆ ದೊರೆತಾಗಲೆಲ್ಲ ಸಂದರ್ಭೋಚಿತವಾಗಿ ಇಮ್ಮಾವಿನ ಬಗೆಗೆ ವರ್ಣಿಸಿ ಅದರ ಮೇಲೆ ತನಗಿರುವ ಮಿಗಿಲಾದ ಪ್ರೀತಿ-ಗೌರವಗಳನ್ನು ಸೂಚಿಸಿ ಕೃತಕೃತ್ಯನಾಗಿದ್ದಾನೆ. ಗಿಡ-ಬಳ್ಳಿ ಮೊದಲಾದವುಗಳನ್ನು ಬಣ್ಣಿಸುವಾಗ ಮೈಮರೆಯುವಾಗಿನ ರೀತಿ ಪಂಪನ ಪ್ರಕೃತಿಪ್ರಿಯತೆಯ ಭಾವುಕ ಮನದ ಪರಿಚಯವನ್ನು ಮಾಡಿಕೊಡುತ್ತದೆ.

ಅಷ್ಟಾದಶವರ್ಣನೆಗಳಲ್ಲಿ ಪಂಪನು ನಿರ್ವಹಿಸಿರುವ ದೂತಕಾರ್ಯದ ವರ್ಣನೆಯು ರೋಚಕವಾದುದು. ಭರತ-ಬಾಹುಬಲಿ ವ್ಯಾಯೋಗ ಸಂದರ್ಭದಲ್ಲಿ ಬರುವ ದೂತ ಪ್ರಸಂಗ, ಮಂತ್ರಾಲೋಚನೆಗಳು (ಆಶ್ವಾಸ-xiv) ರಾಜಕಾರಣ ಪ್ರಪಂಚದ ಆಗುಹೋಗುಗಳ, ಮಾನವ ಸಹಜ ಕ್ರಿಯೆ ಪ್ರಕ್ರಿಯೆಗಳ ಕೈಗನ್ನಡಿಯಾಗಿ ತೋರುತ್ತವೆ. ಇಲ್ಲಿ ಬರುವ ಇತರ ವರ್ಣನೆಗಳು ಹೀಗಿವೆ : ನಗರ ವರ್ಣನೆ—ಗಂಧಿಲವಿಷಯದ ವರ್ಣನೆ (i-೫೧ ರಿಂದ ೭೧); ಪರ್ವತದ ವರ್ಣನೆ—ವಿಜಯಾರ್ಧಪರ್ವತದ ವರ್ಣನೆ (ix-೧೧೩ ರಿಂದ ೧೨೧); ಸಮುದ್ರದ ವರ್ಣನೆ (xii-೭೦, ೭೬ ರಿಂದ ೭೯); ಋತುವರ್ಣನೆ (ix-೫; xi-೮೫

ರಿಂದ ೯೧); ಸೂರ್ಯೋದಯ ವರ್ಣನೆ (xii-೪೮); ಚಂದ್ರೋದಯ ವರ್ಣನೆ (xii-೫ ರಿಂದ ೯); ಜಲಕ್ರೀಡೆಯ ವರ್ಣನೆ (x-೧೩೮ ರಿಂದ ೧೪೯); ಸುರತೋತ್ಸವ ಮತ್ತು ವಿರಹ ವರ್ಣನೆ (xi-೧೩೮ ರಿಂದ ೧೪೯); ವಿವಾಹ ವರ್ಣನೆ (vi-೩೧ ರಿಂದ ೫೧, viii-೧೬ ರಿಂದ ೨೩); ಕುಮಾರಜನನ (vii-೨೬ ರಿಂದ ೩೪); ವಿಜಯಯಾತ್ರೆ-ಯುದ್ಧ ಮತ್ತು ನಾಯಕವಿಜಯ (ಆಶ್ವಾಸ xii, xiii, xiv); ವೃಷಭನು ಕರ್ಮಾರಿಯನ್ನು ಗೆದ್ದ ಅಲೌಕಿಕ ದಿಗ್ವಿಜಯದ ವರ್ಣನೆ (ಆಶ್ವಾಸ xvi).

ಮಹಾಕಾವ್ಯಗಳಲ್ಲಿ ಬರುವ ಈ ಮೇಲಿನ ವರ್ಣನೆಗಳಲ್ಲಿ ಪಂಪನು ಸಂದರ್ಭೋಚಿತವಾದ ಸಮಯಪ್ರಜ್ಞೆಯನ್ನು ತೋರಿರುವನಾದರೂ ರತಿಕ್ರೀಡೆಯ ವರ್ಣನೆಯನ್ನು ತಂದಿರುವ ಭಾಗ ಅಷ್ಟಾಗಿ ಸಮಂಜಸವೆನಿಸುವ ಸಂದರ್ಭವಾಗಿ ತೋರುವುದಿಲ್ಲ. ಗಂಭೀರತರವಾದ ವೃಷಭನ ಆಧ್ಯಾತ್ಮಿಕ ದಿಗ್ವಿಜಯೋನ್ಮುಖ ಯಾತ್ರೆಯಲ್ಲಿ ಹಾಗೂ ಭರತನ ಷಟ್ಖಂಡಮಂಡಲದ ದಿಗ್ವಿಜಯ ಯಾತ್ರೆಯಲ್ಲಿ ಈ ಭಾಗವು ಎಡೆತಪ್ಪಿ ಬಂದಂತೆ ತೋರುತ್ತದೆ.

ಪಂಪನು ಒಂದೆಡೆ ಮಹಾಕಾವ್ಯದ ವರ್ಣನೆಯನ್ನು ತನ್ನ ಕಾವ್ಯದಲ್ಲಿ ಅಳವಡಿಸಿದ್ದರೆ, ಮತ್ತೊಂದೆಡೆ ಸಾಂಪ್ರದಾಯಿಕವಾದ ಪುರಾಣಕಾವ್ಯಕ್ಕೆ ಯೋಗ್ಯವಾದ ಎಂಟು ಅಂಗಗಳನ್ನು ಇದರಲ್ಲಿ ಸಮಾವೇಶಗೊಳಿಸಿದ್ದಾನೆ. ಲೋಕಾಕಾರ ಕಥನ, ದೇಶ ನಿವೇಶನಗಳ ನಿರೂಪಣೆ, ನಗರಸಂಪತ್ತಿನ ವರ್ಣನೆ, ರಾಜ್ಯಸೌಂದರ್ಯ ಕಥನ, ತೀರ್ಥಮಹಿಮಾ ನಿರೂಪಣೆ, ಚತುರ್ಗತಿ ಸ್ವರೂಪ, ತಪೋದಾನ ವರ್ಣನೆ, ತತ್ಫಲಪ್ರಾಪ್ತಿಕಥನವೆಂಬ ವರ್ಣನೆಗಳು ಬರುತ್ತವೆ. ಇವುಗಳಲ್ಲಿ ಸಮಾವೇಶಗೊಂಡಿರುವ ದೇಶನಿವೇಶನಗಳ ವರ್ಣನೆ ಮಹಾಕಾವ್ಯದ ಲಕ್ಷಣದಲ್ಲಿಯೂ ಬರುತ್ತದೆ. ಉತ್ತರಕಾಲೀನ ಕಾವ್ಯಗಳು ತಮ್ಮ ಕಾವ್ಯಗಳನ್ನು ಆದಷ್ಟು ಪುರಾಣಲಕ್ಷಣಾಂತರ್ಗತವನ್ನಾಗಿ ಮಾಡಿಕೊಂಡಿವೆ.

ಆದಿಪುರಾಣದಲ್ಲಿ ಮಡುಗಟ್ಟಿ ನಿಲ್ಲುವ ರಸವೆಂದರೆ ಶಾಂತರಸ. ಇತರ ರಸಗಳಿಗೂ ಸಹ ಇಲ್ಲಿ ಸಂದರ್ಭೋಚಿತವಾಗಿ ಎಡೆ ದೊರೆತಿದೆ. ಲಲಿತಾಂಗ-ಸ್ವಯಂಪ್ರಭೆ, ಶ್ರೀಮತಿ ವಜ್ರಜಂಘ ಹಾಗೂ ಭರತನ ದಿಗ್ವಿಜಯ ಪ್ರಸಂಗಗಳಲ್ಲಿ ಶೃಂಗಾರವೂ ನಮಿವಿನಮಿ ಪ್ರಸಂಗದಲ್ಲಿ ತಿಳಿ ಹಾಸ್ಯವೂ ನರಕವರ್ಣನೆಯಲ್ಲಿ ಭೀಭತ್ಸ, ರೌದ್ರ, ಭಯಾನಕವೂ ಯುದ್ಧ ವರ್ಣನೆಯಲ್ಲಿ ವೀರವೂ ಲಲಿತಾಂಗ-ಸ್ವಯಂಪ್ರಭೆಯ ಪ್ರಲಾಪದಲ್ಲಿ ಕರುಣ ರಸವೂ ಪ್ರಕಟಗೊಳ್ಳುತ್ತವೆ. ಆದರೂ ಕವಿ ಮುಖ್ಯವಾಗಿ ನಿಲುಗಡೆಯಾಗುವುದು ಶಾಂತ ರಸದಲ್ಲಿ. "ಶಾಂತರಸಕ್ಕೆ ಪೋಷಕವಾಗುವಂತೆ ಅಲ್ಲಲ್ಲಿ ಶೃಂಗಾರ, ವೀರ, ಹಾಸ್ಯ, ಭೀಭತ್ಸ ರಸಗಳನ್ನು ಅಳವಡಿಸಿಕೊಂಡಿದ್ದಾನೆ. ಆತನ ಹಾಸ್ಯರಸವು ಸ್ಮಿತ ಮತ್ತು ದರಹಸಿತ"[೧೪].

ಶಾಂತರಸವೇ ಈ ಕೃತಿಯ ಆದರ್ಶಧ್ಯೇಯ. ಆದಿಪುರಾಣದ ನಾಯಕ ಅಲೌಕಿಕ ನಾಯಕ. ಶಾಂತರಸ ಇಲ್ಲಿ ಅಲೌಕಿಕ ರಸ. ಅಲೌಕಿಕ ರಸಗಳಾದ ಶೃಂಗಾರಾದಿ ರಸಗಳೆಲ್ಲವೂ ಕ್ರಮೇಣ ನಿರ್ಜರೆಗೊಂಡು ಶಾಂತರಸದ ನೆಲೆಗೆ ನಿಲ್ಲುತ್ತವೆ. ಭರತಚಕ್ರಿಯ ದಿಗ್ವಿಜಯ ಯಾತ್ರೆಯಲ್ಲಿ ಭರತಬಾಹುಬಲಿ ವ್ಯಾಯೋಗ ಸಂದರ್ಭದಲ್ಲಿ ವೀರರಸವು ಶಾಂತವಾಗಿ ಮಾರ್ಪಡುವ ಅತ್ಯಪೂರ್ವ ಸಂವಿಧಾನವು ಕೂಡಿ ಬಂದಿದೆ. ಇಲ್ಲಿ ಬರುವ ಪ್ರತಿಯೊಂದು ಪಾತ್ರವೂ ಅಲೌಕಿಕ ರಸಕ್ಕೆ ಒಲಿದು ಬರುವ ಪಾತ್ರಗಳಾಗಿವೆ. "ಮಹಾಬಲ

ನಿಗಿಂತ ಹಿಂದಣ ಜಯವರ್ಮಭವವು ಲೌಕಿಕ ರಸಮಯವಾಗಿತ್ತೆಂಬುದನ್ನು ಆದಿ ಪುರಾಣದ ಕಥಾಂತರದಿಂದಲೂ ತಿಳಿದುಕೊಳ್ಳಬಹುದು. ಮಹಾಬಲಭವಾವಸ್ಥೆಯನ್ನು ಅವಧರಿಸಿದಲ್ಲಿಯೂ ಅದು ಸೂಚಿತವಾಗುತ್ತದೆ. ಅದು ಮೊದಲ್ಗೊಂಡು ಅಲ್ಪಾಲ್ಪವಾದ ಮಾರ್ಪಾಡಿನಿಂದ ಏರುತ್ತಾ ಹೋದ ಮಿಶ್ರರಸವದು ಪುರುದೇವ ಭವದಲ್ಲಿ ಅಲೌಕಿಕ ಭಾವತೆಯನ್ನೈದಿತು. ಅದೇ ಮುಂದೆ ತರತಮಾವಸ್ಥೆಗೊಳಗಾಗಿ ಕೇವಲಜ್ಞಾನೋದಯ ದಲ್ಲಿ ಅಲೌಕಿಕ ರಸವೆನ್ನಿಸಿತು."[೧೫] ಪಂಪನೇ ಹೇಳಿರುವಂತೆ ಆದಿಪುರಾಣ 'ರಸಭಾವೋ ಪೇತ ಧರ್ಮಾಮೃತರಸಮಯಸ್ಯಂದಿ'ಯಾದುದು (xvi-೭೯). ಈ ರಸಮಡುಗಳು ಉತ್ತರ ಕಾಲೀನ ಕಾವ್ಯಗಳಲ್ಲಿ ಕಂಡುಬರುವುದಿಲ್ಲ.

ಪಂಪ ತಾನು ಆರಿಸಿಕೊಂಡಿರುವ ವಸ್ತುವಿಗೆ ತಕ್ಕಂತೆ ವ್ಯಕ್ತಿತ್ವವನ್ನುಳ್ಳವನು. ಈ ಕಾವ್ಯವನ್ನು'ಭಕ್ತಿಯಿಂ ವಿರಚಿಸುವೆಂ' ಎಂದು ಹೇಳಿಕೊಂಡಿದ್ದಾನೆ. ಎಡೆದೊರೆತಲ್ಲೆಲ್ಲ ಧಾರ್ಮಿಕ ನಿಲುವನ್ನು ಸಾರಲು ಉತ್ಸುಕನಾಗಿದ್ದಾನೆ.

ಪ್ರಾಣಿಹಿತಮಂ ವಿನೇಯ | ಪ್ರೀಣನ ಕರಮಂ ಜಗತ್ತ್ರಯ ಪ್ರಕಟಿತ ಕ
ಲ್ಯಾಣಮನೀನೆಗೆಟ್ಟಾದಿ ಪು | ರಾಣ ಮನಪರಿಮಿತ ಭಕ್ತಿಯಿಂ ವಿರಚಿಸುವೆಂ

(ಆದಿಪು. i-೪೨)

ಎಂಬ ಮಾತನ್ನು ಸತ್ಯಗೊಳಿಸಿದ್ದಾನೆ. ಆದಿದೇವನ ಕಥೆಯ ಪ್ರತಿಯೊಂದು ಹಂತ ದಲ್ಲಿಯೂ ಇದನ್ನು ಒಂದಲ್ಲ ಒಂದು ರೀತಿಯಲ್ಲಿ ಗುರುತಿಸಬಹುದಾಗಿದೆ. ಸ್ವಯಂಬುದ್ಧ ಮಹಾಬಲನಿಗೆ, ಪ್ರೀತಿಂಕರಾಚಾರ್ಯರು ಶ್ರೀಧರದೇವನಿಗೆ, ಮಣಿಮಾಲಿ ದಂಡಕನಿಗೆ, ಚಾರಣಮುನಿಗಳು ವಜ್ರಜಂಘಶ್ರೀಮತಿ ಆರ್ಯೆಯರಿಗೆ ನೀಡುವ ಉಪದೇಶದ ಮಾತು ಗಳಲ್ಲಿಯೇ ಆಗಲಿ, ವಜ್ರದಂತ, ವಜ್ರಬಾಹು, ಬಾಹುಬಲಿ, ವೃಷಭರ ವೈರಾಗ್ಯಸನ್ನಿವೇಶ ಗಳಲ್ಲಿಯೇ ಆಗಲಿ ಇದನ್ನು ಗುರುತಿಸಬಹುದಾಗಿದೆ. "ಅವನ ಕವಿತಾಶಕ್ತಿ ಇಬ್ಬಗೆಯಾಗಿ ಕವಲೊಡೆದುದಕ್ಕೆ ಕಾರಣವನ್ನು ಅವನ ದ್ವಿಮುಖ ವ್ಯಕ್ತಿತ್ವದಲ್ಲಿ ಅರಸಬೇಕಾಗುತ್ತದೆ. ಲೌಕಿಕ ಧಾರ್ಮಿಕಗಳೆರಡನ್ನೂ ಪುರಸ್ಕರಿಸುವ ಸಮನ್ವಯ ಮನೋಧರ್ಮ ಪಂಪ ನದು."[೧೬] ಇಲ್ಲಿ ಬರುವ ವೈರಾಗ್ಯ ಸನ್ನಿವೇಶಗಳಲ್ಲಿ, ಬೋಧನಾ ಸಂದರ್ಭಗಳಲ್ಲಿ ಪಂಪನು ಸಂಸಾರದ ಅಸಾರತೆಯನ್ನು ಪ್ರಭಾವಕಾರಿಯಾಗಿ ಚಿತ್ರಿಸಿಕೊಂಡು ಹೋಗಿ ದ್ದಾನೆ. ಸಾಹಿತ್ಯ-ಕಲೆಗಳು ಕೇವಲ ತಮ್ಮಷ್ಟಕ್ಕೇ ಸೀಮಿತವಾದುವಲ್ಲ. ಕೇವಲ ಮನೋ ರಂಜಕ ಆಸ್ವಾದನೆಯೇ ಅವುಗಳ ಗುರಿಯಲ್ಲ. ಅವುಗಳ ಉತ್ಕೃಷ್ಟ ಲಾಭ ಧರ್ಮಲಾಭ. "ಇಂತಹ ಸಾರ್ಥಕವಾದ ಕಲೆಯನ್ನು ಪಂಪನ 'ಆದಿಪುರಾಣ'ದಲ್ಲಿ ದರ್ಶಿಸುತ್ತೇವೆ. ಇದು ಜೈನಧರ್ಮೀಯ ಕೃತಿಯಾದರೂ ಒಟ್ಟಿನಲ್ಲಿ ಭಾರತೀಯ ಮನೋಭಾವವನ್ನೇ ಎತ್ತಿ ಹಿಡಿಯುತ್ತದೆ. ಬಾಳಿನ ವರಿಷ್ಠ ಪುರುಷಾರ್ಥಗಳಾದ ಧರ್ಮ ಮೋಕ್ಷಗಳನ್ನು ಪ್ರತಿ ಪಾದಿಸುತ್ತದೆ."[೧೭]

"ಪಂಪನು ಜೈನಧರ್ಮದ ತತ್ತ್ವಗಳನ್ನು ಸಾರಿಹೇಳುವ ಪ್ರಚಾರಕನಾಗದೆ, ಕಡೆಯ ವರೆಗೂ ಅವುಗಳನ್ನು ಸಹಜಸುಂದರವಾಗಿ ಇತರ ಮತೀಯರಿಗೂ ಪ್ರಿಯವಾಗುವಂತೆ ತಿಳಿಯಹೇಳುವ ಕುಶಲ ಕವಿಯಾಗಿರುವುದು ಗಮನಾರ್ಹವಾದ ಸಂಗತಿ"[೧೮] ಎಂಬ ಮಾತುಗಳು ಆತನ ಧರ್ಮ-ಕಾವ್ಯಧರ್ಮದ ಮನೋಭಾವದ ಹಿನ್ನೆಲೆಯಲ್ಲಿ ಪರಿಶೀಲಿ

ಸಿರುವ ಮಾತುಗಳಾಗಿವೆ. "ಪಂಪನು ಕೆಲವೊಮ್ಮೆ ಶಾಸ್ತ್ರಕಾರನಾಗಿ ಶುಷ್ಕ ನಿರೂಪಣೆ ನೀಡಿರುವನೇ ಹೊರತು...ಆತ್ಮೀಯ ನಿರೂಪಣೆಯನ್ನು ನೀಡಿಲ್ಲ"[೮] ಎಂಬ ಮಾತುಗಳು ಆದಿಪುರಾಣದಲ್ಲಿ ಅನಿವಾರ್ಯವೆಂಬಂತೆ ಕಂಡುಬರುವ ಸಮವಸರಣ, ಮನುಕುಲೋತ್ಪತ್ತಿ ಮೊದಲಾದ ವರ್ಣನಾಭಾಗಗಳಿಗೆ ಮಾತ್ರ ಅನ್ವಯಿಸುತ್ತವೆಯೇ ಹೊರತು ಧಾರ್ಮಿಕ ಉಪದೇಶಗಳನ್ನು ಕುರಿತವುಗಳಿಗಲ್ಲ. ಪುರಾಣ ಚೌಕಟ್ಟಿನಲ್ಲಿ ಪಂಪನು ಅನಿವಾರ್ಯವಾಗಿ ಇವುಗಳನ್ನು ಅಳವಡಿಸಿಕೊಳ್ಳಲೇ ಬೇಕು. ಆದರೂ ಜಿನಸೇನರಂತೆ ಸಮವಸರಣಾದಿಗಳ ವರ್ಣನೆಯನ್ನು ಲಂಬಿಸದೆ ಮೊಟಕುಗೊಳಿಸಿರುವುದರಲ್ಲಿ ಔಚಿತ್ಯಪ್ರಜ್ಞೆ ತೋರಿದ್ದಾನೆ. "ಆದಿಪುರಾಣ ರಚನೆಯಲ್ಲಿ ಪಂಪನು ಕೈಕಟ್ಟಿಕೊಂಡು ಪಟ್ಟುಗಳನ್ನು ತೋರಿಸುವ ಗರುಡಿ ಯಾಳಿನಂತೆ ಕಾಣಿಸುತ್ತಾನೆ"[೨೦] ಎಂಬ ಮಾತುಗಳು ಪೌರಾಣಿಕ ನಿರೂಪಣಾ ಭಾಗಗಳು ಬರುವಲ್ಲಿ ಅಲ್ಲಲ್ಲಿ ಅನ್ವಯಿಸುತ್ತವೆ. ಈ ಜಗತ್ತು ನಶ್ವರವಾದುದು, ಮುಕ್ತಿಸ್ಥಾನವೊಂದೇ ಶಾಶ್ವತವಾದುದೆಂಬ ತತ್ವವನ್ನು ಕವಿ ಹೆಜ್ಜೆ ಹೆಜ್ಜೆಗೂ ಪ್ರತಿಪಾದಿಸಬೇಕಾಗಿದೆ. "ಒಂದೇ ಒಂದು ಮುಖ್ಯತತ್ವವನ್ನು ಪಲ್ಲವಿಯಾಗಿಟ್ಟುಕೊಂಡು, ಎಲ್ಲ ಉಪಾಖ್ಯಾನಗಳನ್ನೂ ಅದನ್ನು ಸಮರ್ಥಿಸಲೋಸುಗ ಸಂವಿಧಾನ ಮಾಡುವ ನಿರ್ಬಂಧಕ್ಕೆ ಕವಿ ತಲೆತಗ್ಗಿಸ ಬೇಕಾಗಿದೆ ಪುರಾಣದಲ್ಲಿ."[೨೧] ಹಾಗಿದ್ದರೂ ಅಲ್ಲಲ್ಲಿ ಕವಿ ಚಿತ್ರಿಸಿರುವ ಹಲವಾರು ಚಿತ್ರಣಗಳು ಇಡೀ ಕಾವ್ಯಪ್ರಪಂಚದಲ್ಲಿಯೇ ಅಮೋಘವಾದುದಾಗಿವೆ. "ಪುರಾಣದಲ್ಲಿ ವಿಷಯಸಂಕೋಚ ಪಂಪನನ್ನು ಸಂಕಲೆಹಾಕಿ ತಡೆದಿದೆ. ಆದಿಪುರಾಣದಲ್ಲಿ ಪಂಪನ ಧರ್ಮೋದ್ದೇಶದ ವಿಧಿಯನ್ನು ಉಲ್ಲಂಘಿಸಿ ಸಂಸಾರದ ಸೊಬಗು ಅಲ್ಲಲ್ಲಿ ತಲೆ ದೋರಿಯೇ ಇದೆ. ಕಾವ್ಯದೃಷ್ಟಿಯಿಂದ ಬಹುಪ್ರಿಯವಾದ ಅದರ ಕೆಲವು ಪ್ರಸಂಗಗಳನ್ನು ಎಣಿಸಿ. ವಜ್ರಜಂಘ ಶ್ರೀಮತಿಯರ ಕೂಡುಸಾವು; ನೀಲಾಂಜನೆಯ ನರ್ತನ; ಭರತ ಬಾಹುಬಲಿಗಳ ಹೋರಾಟ ಅವೆಷ್ಟು ರಮ್ಯವಾಗಿವೆ; ಕಾವ್ಯದ ಜೀವಾಳವೇ ಅಷ್ಟು. ಬಾಳಿಕೆಗೆ ಬೆನ್ನು ತಿರುಗಿಸಿ ಅದು ಬಾಳಲಾರದು ಬೆಳೆಯಲಾರದು."[೨೨] ಮತೀಯತೆಯ ಹಿನ್ನೆಲೆ ಯಲ್ಲಿಯೂ ಆತ್ಮೀಯ ವಾತಾವರಣ ಮೂಡಿಸಿರುವುದಕ್ಕೆ ಗ್ರಂಥದ ಉದ್ದಕ್ಕೂ ಸಾಕ್ಷಿ ಗಳಿವೆ.

ಸನ್ನಿವೇಶ ರಚನೆಯಲ್ಲಿಯೇ ಆಗಲಿ, ಪಾತ್ರನಿರ್ವಹಣೆಯಲ್ಲಿಯೇ ಆಗಲಿ, ರಸಭಾವ ಗಳನ್ನೊಸರುವ ಪ್ರಸಂಗಗಳಲ್ಲಿಯೇ ಆಗಲಿ ಪಂಪನ ಕವಿತಾಶಕ್ತಿ ಸದಾ ಜಾಗ್ರತವಾಗಿರು ತ್ತದೆ. ಉದಾಹರಣೆಗೆ, ಬ್ರಾಹ್ಮಿ-ಸೌಂದರಿಯರ ವಿದ್ಯಾಭ್ಯಾಸ ನಿರೂಪಣೆಯಲ್ಲಿ, ವೈರಾಗ್ಯ ಸನ್ನಿವೇಶಗಳಲ್ಲಿ, ಜಯವರ್ಮ ಸ್ವಯಂಬುದ್ಧಾದಿಗಳ ಪಾತ್ರ ನಿರ್ವಹಣೆಯಲ್ಲಿ, ಶಾಂತ ರಸಾದಿ ಪ್ರತಿಪಾದನೆಯಲ್ಲಿ ಇದನ್ನು ಗಮನಿಸಬಹುದಾಗಿದೆ. "ಕವಿತಾ ಚಾತುರ್ಯ, ವರ್ಣನಾ ಸಾಮರ್ಥ್ಯ, ಪಾತ್ರನಿರ್ವಹಣೆ, ರಸಪುಷ್ಟಿ, ಹಿತಮಿತ ಮೃದುವಚನ ಪೂರ್ವವಾದ ಶೈಲಿ, ಪ್ರೌಢವಾದರೂ ಅಲ್ಲಲ್ಲಿ 'ದೇಸಿವೆತ್ತ ದೇಶೀ' ಪ್ರಕಾರಗಳು. ಅಂದವೂ ಮಾರ್ಮಿ ಕವೂ ಆದ ನಾಣ್ನುಡಿಗಳು, ದೇಶಾಭಿಮಾನ ವಾಗ್ಗುಂಫನಗಳು ಪಂಪನನ್ನು ಕರ್ನಾಟಕ ಕವಿತಾ ಸಾರ್ವಭೌಮನನ್ನಾಗಿ ಮಾಡಿರುವುವು."[೨೩]

ಈಗ ಪಂಪನ ಒಂದು ಪದ್ಯದ ಸ್ವಾರಸ್ಯವನ್ನು ಗಮನಿಸಬಹುದಾಗಿದೆ. ಉದಾಹರಣೆಗೆ, ವೈರಾಗ್ಯದ ಕಡೆಗೆ ಮನತಿರುಗಿ ತಪೋನಿರತನಾಗಲಿರುವ ಬಾಹುಬಲಿಯೊಂದಿಗೆ ಭರತ

ಆಡುವ ಮಾತುಗಳು ಆತನ ಮನಸ್ಥಿತಿಯ ಚಿತ್ರಣವನ್ನು ಪ್ರಭಾವಕಾರಿಯಾಗಿ ಮೂಡಿಸುತ್ತವೆ. ಆ ಪದ್ಯ ಹೀಗಿದೆ :

ಮನದೊಳ್ ಮುಂ ಪುದಿದಿರ್ದ್ದ ಕೋಪಮನಿತುಂ ತೂಳ್ದಾಗಳೆತ್ತೆತ್ತಗೆ
ಯ್ದೆನಿದಂ ತಮ್ಮನೊಳೆಂಬುದೊಂದುಪಶಮಂ ಕೈಗಣ್ಮೆ ನೀನೊರ್ಬ್ಬನ್ಮೆ
ಮನುವಂಶಕ್ಕೆ ಲಲಾಮನಪ್ಪನುಜನ್ಮೆ ಬೇಡಮ್ಮ ನೀನುಂ ತಪೋ
ವನಮಂ ಸಾರ್ವುದುಮಾನದಾರ್ಗೆ ಮೆಱೆವೆಂ ಮತ್ರಾಜ್ಯಸಾಮ್ರಾಜ್ಯಮಂ

(ಆದಿಪು. xiv-೧೩೨)

ತಮ್ಮನ ವೈರಾಗ್ಯ ಅಣ್ಣನ ಕಣ್ಣನ್ನು ತೆರೆಸಿತು; ಪಶ್ಚಾತ್ತಾಪದ ಬೇಗುದಿಯಲ್ಲಿ ಮನವನ್ನು ಪುಟವಿಟ್ಟಂತೆ ಪರಿಶುದ್ಧಗೊಳಿಸಿತು. ಭರತನು ಕೋಪವೆಲ್ಲವನ್ನೂ ಬಿಸುಟನು. ತಮ್ಮನೊಡನೆಸಗಿದ ವ್ಯವಹಾರಕ್ಕಾಗಿ ಪರಿತಪಿಸಿದನು. ಪಂಪನು ಇಲ್ಲಿ ಮಾನವಸಹಜವಾದ ಭಾವಸ್ಪಂದನಗಳನ್ನು ಪ್ರತಿಕ್ರಿಯೆಗಳನ್ನು ಹಂತಹಂತವಾಗಿ ಸುಂದರವಾಗಿ ಬಿಡಿಸಿದ್ದಾನೆ. ಕೋಪದ ತಾಮಸದಿಂದ ಹೊರಬಂದ ಭರತ, ವಿವೇಕವುಳ್ಳವನಾಗಿ ತನ್ನ ಕಾರ್ಯಕ್ಕಾಗಿ ಪಶ್ಚಾತ್ತಾಪಗೊಂಡು ವ್ಯವಹರಿಸಿದ ಬಗೆ ಸಹಜವಾಗಿಯೇ ಕಂಡುಬರುತ್ತದೆ. ಆತನಾಡುವ ಮಾತು ಮನಕರಗುವಂತಹದು. 'ನೀನೊಬ್ಬನೇ ಮನುವಂಶಕ್ಕೆ ತಿಲಕಪ್ರಾಯನಾದ ತಮ್ಮ, ನೀನು ತಪೋವನವನ್ನು ಹೊಗಬೇಡ. ಯಾರಿಗಾಗಿ ಈ ದೊಡ್ಡ ಸಾಮ್ರಾಜ್ಯವನ್ನು ಮೆರೆಯಲಿ?'ಎಂದು ಹೇಳುವಲ್ಲಿ ಭರತನಿಗೆ ತಮ್ಮನಲ್ಲಿರುವ ಆತ್ಮೀಯತೆ, ಅಭಿಮಾನಗಳು ಸ್ಫುರಿತಗೊಳ್ಳುತ್ತವೆ. ಇಲ್ಲಿ ಬರುವ 'ಬೇಡಮ್ಮ' ಎಂಬ ಆತ್ಮೀಯ ಸಂಬೋಧನೆಯೊಂದೇ ಇಡೀ ಸನ್ನಿವೇಶವನ್ನು ಮಾರ್ದವತೆಯಿಂದ ಮೈದುಂಬಿಸುತ್ತದೆ. ಅಷ್ಟೊಂದು ಪ್ರಭಾವಕಾರಿಯಾಗಿದೆ ಈ ಕಿರುನುಡಿ. ಇಲ್ಲಿ ಮೂಡಿ ಬಂದಿರುವ ಆಡುಮಾತಿನ ಸೊಗಸು, ಪಡೆನುಡಿಯ ಸೊಬಗು ಇವೆಲ್ಲವೂ ಪದ್ಯಕ್ಕೆ ಒಂದು ವಿಶೇಷ ಕಳೆಯನ್ನು ತಂದುಕೊಟ್ಟಿದೆ. ಈ ಇಡೀ ಪದ್ಯವು ಭರತನ ವ್ಯಕ್ತಿತ್ವದ ಹಿರಿಮೆಯನ್ನು ಹೆಚ್ಚು ಆಡಂಬರವಿಲ್ಲದೆ ಆತ್ಮೀಯವಾಗಿ ಸ್ನಿಗ್ಧವಾಗಿ ಮೂಡಿಸಿದೆ.

"ಚಂಪೂಕಾವ್ಯಗಳಿಗೆ ಅಂದರೆ ಮಾರ್ಗಕಾವ್ಯಗಳಿಗೆ ಅವುಗಳದೇ ಆದ ಬಂಧವಿರುತ್ತದೆ. ಆ ಬಂಧ ಪಂಪನ ಕೊಡುಗೆಯೆಂದೇ ಹೇಳಬೇಕು. ಆಶ್ವಾಸಗಳಲ್ಲಿ ಕಾವ್ಯದ ವಿಭಜನೆ ; ಆಶ್ವಾಸ ಆಶ್ವಾಸದಲ್ಲಿ ಕಂದಪದ್ಯಗಳ ಹಾಗೂ ವಿವಿಧ ವೃತ್ತಗಳ ನೆಯ್ಗೆ ; ನಡುನಡುವೆ ಕಳಿಗೆ ಕಳಿಗೆಯಂತೆ ಅಲ್ಲಲ್ಲಿ ಆವಶ್ಯಕವಾದಂತೆ ಗದ್ಯದ (ವಚನ) ಸೇತುವೆ ; ಆಶ್ವಾಸದ ಕೊನೆಗೆ ಗದ್ಯ, ಇದು ಮಾರ್ಗಕಾವ್ಯದ ಬಂಧವಿನ್ಯಾಸದ ಸ್ಥೂಲಸ್ವರೂಪ."[೨೪]

ಪದ್ಯಗಳ ಮಧ್ಯೆ ಬೆಸೆದಿರುವ ಗದ್ಯಗಳು ಪಂಪನಲ್ಲಿ ಯಾವ ಸಂದರ್ಭದಲ್ಲಿ ಬರುತ್ತವೆ? ಅವುಗಳ ಸ್ವರೂಪವೇನು? ಗುರಿಯೇನು? ಎಂಬುದನ್ನು ಈಗ ಗಮನಿಸಬಹುದಾಗಿದೆ.

ಇಂತಿಷ್ಟೇ ಪದ್ಯಗಳ ನಂತರ ಗದ್ಯವಿರಬೇಕೆಂಬ ನಿಯಮವು ಇಲ್ಲಿ ಕಂಡುಬರುವುದಿಲ್ಲ. ಅಲ್ಲದೆ ಇಂತಿಷ್ಟೇ ಸಾಲುಗಳಿರಬೇಕೆಂಬ ನಿಯಮವೂ ಇಲ್ಲ. ಒಂದು ಪದದಿಂದಲೋ ಪದಸಮುಚ್ಚಯದಿಂದಲೋ ಕೂಡಿದ ಕೊಂಡಿರೂಪದ ಗದ್ಯದಿಂದ ಹಿಡಿದು ದೀರ್ಘವಾಗಿ ಹರಿಯುವ ಗದ್ಯಖಂಡದವರೆಗೆ ವಿವಿಧ ಅಳತೆಮಾನದ ಗದ್ಯಖಂಡಗಳಿವೆ. ಸುಮಾರು ೨೩೫೦ ಸಾಲುಗಳಷ್ಟು ಗದ್ಯಭಾಗವಿದೆ (ಪದ್ಯಪ್ರಮಾಣ ೧೬೩೦). ಈ ಗದ್ಯದ

ನಡೆಯಲ್ಲಿಯೂ ಅಲ್ಲಲ್ಲಿ ಪ್ರಾಸಬದ್ಧಪದಗಳು ಬಂದು ಒಂದು ರೀತಿಯ ಲಯ ಮಾಧುರ್ಯವನ್ನು ಸಮಾವೇಶಮಾಡುತ್ತವೆ. ಉದಾಹರಣೆಗೆ :"ದಂಡಿಕಾರಾತಿ ಮಂಡಳಂ ದಂಡಕನೆಂಬಾತನ ಮನೋನಯನ ಸೌಂದರಿ ಸೌಂದರಿಯೆಂಬಳವರ್ಗೆ ಉಗ್ರ ಪ್ರತಾಪ ವಿಜಿತಾಂಶುಮಾಳಿ ಮಣಿಮಾಳಿ" (ಆಶ್ವಾಸ ii), "ಭೃಂಗಿ ಭೃಂಗಾರ ಕನಕಕಳಶ ಚಾರು ಚಾಮರ ಆತಪತ್ರಪವಿತ್ರ"(ಆಶ್ವಾಸ ii) ಮೊದಲಾದ ಭಾಗಗಳನ್ನು ಗಮನಿಸಬಹುದಾಗಿದೆ. ಅಲಂಕಾರಾದಿ ಕಾವ್ಯಸೌಂದರ್ಯಗಳ ಲಕ್ಷಣವು ಇಲ್ಲಿಯೂ ಕಂಡುಬರುತ್ತದೆ. ಆದಿ ಪುರಾಣದ ಗದ್ಯಭಾಗಗಳು ಪದ್ಯಭಾಗದಂತೆ ಭಾವವ್ಯಂಜಕವಾದುವಲ್ಲವೆಂದೇ ಹೇಳ ಬೇಕು; ಇದಕ್ಕೆ ಕಾರಣವಿಲ್ಲದಿಲ್ಲ. ಈ ಕೃತಿಯ ಗದ್ಯಖಂಡಗಳಲ್ಲಿ ಬರುವ ವಿಷಯಗಳನ್ನು ಗಮನಿಸಿದರೆ ಅದು ಸ್ವಯಂವೇದ್ಯವಾಗುತ್ತದೆ. ಇಲ್ಲಿ ಕೆಲವು ಗದ್ಯಖಂಡಗಳ ವಿಷಯ ಗಳನ್ನು ಪರಿಶೀಲಿಸಲಾಗಿದೆ.

ಜೀವತತ್ತ್ವ ನಿರೂಪಣೆ (ಆ-ii); ಭದ್ರಶಾಲಾದಿ ವನಗಳಲ್ಲಿಯ ದೇವಾಲಯಗಳ ವರ್ಣನೆ (ಆ-iii); ವಜ್ರದಂತನ ಜನ್ಮಾಂತರ ಸರಣಿ (ಆ-iii); ಶ್ರೀಮತಿಯ ರೂಪಾ ಲಂಕಾರ ವರ್ಣನೆ (ಆ-iii); ಶ್ರೀಮತಿ ವಜ್ರಜಂಘರ ಮಧುವಿಹಾರ (ಆ-iv); ಹುಲಿ, ಪ್ರೀತಿವರ್ಧನ, ಸೇನಾಪತಿ ಮೊದಲಾದವರ ಭವನಿರೂಪಣೆ (ಆ-v); ಶ್ರೀಮತಿ ವಜ್ರ ಜಂಘರು ಹುಟ್ಟಿದ ಭೋಗಭೂಮಿಯ ವರ್ಣನೆ (ಆ-v); ನರಕಲೋಕದ ವಿವರ (ಆ-v); ವಜ್ರಸೇನನ ತಪೋನುಷ್ಠಾನ ಮತ್ತು ವಜ್ರನಾಭಿಯ ರಾಜ್ಯಭಾರದ ವರ್ಣನೆ (ಆ-vi); ಕಾಲಚಕ್ರದ ವರ್ಣನೆ (ಆ-vi); ಶ್ರೀ, ಹ್ರೀ ಮೊದಲಾದ ದಿಗ್ವನಿತೆಯರಿಗೆ ಕುಬೇರನು ನೀಡಿದ ಆಜ್ಞೆ (ಆ-vii); ಸುರಮಹತ್ತರಿಯರು ಪುರುದೇವನಿಗೆ ಸೇವೆ ಸಲ್ಲಿಸಿದ್ದು (ಆ-vii); ವೃಷಭನ ವಿವಾಹ ಮಂಟಪದ ವರ್ಣನೆ (ಆ-viii); ವೃಷಭ, ಯಶಸ್ವತಿ, ಸುನಂದೆಯರ ರೂಪಾತಿಶಯದ ವರ್ಣನೆ (ಆ-viii); ದಂಪತಿಗಳ ರತಿಕ್ರೀಡೆ (ಆ-viii); ಭರತನ ಬಾಲಲೀಲೆಯ ವರ್ಣನೆ (ಆ-viii); ವೃಷಭಸೇನಾದಿ ಮಕ್ಕಳ ಜನನವೃತ್ತಾಂತ (ಆ-viii); ದೇವೇಂದ್ರನಿಂದ ಪಟ್ಟಣ ನಿರ್ಮಾಣವಾದ ವೃತ್ತಾಂತ (ಆ-viii); ವೃಷಭನ ರಾಜ್ಯಾಭಿ ಷೇಕೋತ್ಸವ (ಆ-viii); ಪರಿನಿಷ್ಕ್ರಮಣ ಕಲ್ಯಾಣದ ವಿವರ (ಆ-ix); ಕಚ್ಛ ಮಹಾಕಚ್ಛರು ವ್ರತಭ್ರಷ್ಟರಾದುದು (ಆ-ix); ವೃಷಭನ ತಪಸ್ಸಾಧನೆ (ಆ-x); ತತ್ತ್ವನಿರೂಪಣೆ (ಆ-x); ಭರತಚಕ್ರಿಯ ದಿಗ್ವಿಜಯ ಸೂಚಕಾರ್ಥವಾದ ಜೀವಾಜೀವರತ್ನಗಳ ಉದ್ಭವ ವಿವರ (ಆ-xi); ಭರತಚಕ್ರಿಯು ಸೇವಿಸಿದ ವಿವಿಧ ಭಕ್ಷ್ಯಭೋಜ್ಯಗಳ ವಿವರ (ಆ-xi); ಭರತನ ದಿಗ್ವಿಜಯ ಪ್ರಯಾಣ (ಆ-xiii); ಸಾರಥಿ ವಿವಿಧ ದೇಶಾಧೀಶರ ಸೇನೆಯನ್ನು ಭರತನಿಗೆ ಪರಿಚಯಿಸಿದುದು (ಆ-xiii); ದುರ್ಗಮ ದುರ್ಗಗಳ ವರ್ಣನೆ (ಆ-xiii); ಭರತನು ದಕ್ಷಿಣಾಭಿಮುಖವಾಗಿ ಪ್ರಯಾಣ ಬೆಳೆಸಿದುದು (ಆ-xiii); ಭರತನು ಕಳಿಸಿದ ದೂತ ಮತ್ತು ಪೌದನಪುರದ ವಿವರ (ಆ-xiv); ಭರತಚಕ್ರಿಯು 'ಆದಿರಾಜ'ನೆಂದು ಖ್ಯಾತಿ ಗೊಂಡ ವೈಭವ (ಆ-xv); ದ್ವಿಜರ ಕರ್ತವ್ಯ ಪರಿಪಾಲನೆಯ ವಿವರ (ಆ-xv); ಗರ್ಭಾ ಧಾನಾದಿ ಆಚರಣೆಗಳ ವಿವರ (ಆ-xv); ಗಣಧರಾದಿಗಳ ಪಟ್ಟಿ (ಆ-xv); ವೃಷಭನ ಕರ್ಮನಿರ್ಜರೆಯ ವರ್ಣನೆ (ಆ-xvi); ಶ್ರೇಯಾಂಸ, ಭರತಾದಿಗಳ ಭವಾವಳಿಗಳ ಸರಣಿ (ಆ-xvi); ಇವು—ಇಲ್ಲಿ ಬಂದಿರುವ ಗಮನಾರ್ಹ ಗದ್ಯಭಾಗದ ಸಂದರ್ಭಗಳಾಗಿವೆ.

ಈ ಮೇಲಿನ ವಿಷಯಗಳಲ್ಲಿ ಪೌರಾಣಿಕಾಂಶವೇ ಹೆಚ್ಚು. ಹೀಗಾಗಿ ಪದ್ಯಗಳಲ್ಲಿ ಕಂಡುಬರುವ ಲಾಲಿತ್ಯ ಇಲ್ಲಿ ಕಡಮೆಯೆಂದೇ ಹೇಳಬೇಕು. "ಪಂಪನ ಗದ್ಯ ಪೆಡಸು, ಅಷ್ಟು ಪೆಡಸಿಗೆ, ಜಟಿಲತೆಗೆ ಕಾರಣ ಅಲ್ಲಿ ಮತಧರ್ಮ ಪ್ರಕ್ರಿಯೆಗೆ ಸಂಬಂಧಪಟ್ಟ ಭಾಗ ಹೆಚ್ಚಾದ್ದರಿಂದ."[೨೫]

**ಛಂದಸ್ಸು :** ಭಾಷೆ ಶೈಲಿಗಳಲ್ಲಿ ಮೈದೋರಿರುವ ಮಾರ್ಗದೇಶಿಗಳು ಪಂಪನ ಆದಿಪುರಾಣದ ಛಂದೋಪ್ರಕಾರಗಳಲ್ಲಿಯೂ ಕಂಡುಬರುತ್ತವೆ. ಪರಂಪರಾನುಗತವಾಗಿ ಬಂದ ಮಾರ್ಗಪ್ರಕಾರಗಳ ಪ್ರೌಢಿಮೆಯ ಜೊತೆಗೆ, ಕನ್ನಡಕ್ಕೆ ಒಗ್ಗುವ ದೇಶೀ ಛಂದಸ್ಸಿನ ಸೊಬಗೂ ಸಹ ಮಿಳಿತವಾಗಿದೆ.

ಕರ್ನಾಟಕ ವಿಷಯಜಾತಿಯ ಛಂದಸ್ಸುಗಳಾದ ತ್ರಿಪದಿ ಅಕ್ಕರಗಳ ಪ್ರಯೋಗವು ಇಲ್ಲಿ ಕಂಡುಬರುತ್ತದೆ. "ಇಲ್ಲಿಯ ಎರಡೂ ತ್ರಿಪದಿಗಳೂ ಹೆಚ್ಚಾಗಿ ಅಂಶಗಣ ನಿಯತವಾದವು. ಮೂರು ಅಕ್ಕರಗಳೂ ಪೂರ್ಣ ಅಂಶಗಣ ನಿಯತವಾದವು. ತ್ರಿಪದಿಗಳಲ್ಲಿ ಎರಡಂಶ ಮೂರಂಶದ ಗಣಗಳು (ಎಂದರೆ ಬ್ರಹ್ಮ ವಿಷ್ಣುಗಳು) ಬೆರೆತಿವೆ."[೨೬] "ನಾದಗುಣವೇ ಮೇಲಾಗಿ ಅರ್ಥದ ಸೊಗಸನ್ನು ನುಂಗಿಹಾಕಿವೆ."[೨೭] ಪಂಪನು ಅಕ್ಕರಗಳೆಂದು ಕರೆದಿರುವ ಪದ್ಯಗಳು ಪಿರಿಯಕ್ಕರಗಳಾಗಿವೆ.

ಈ ಅಂಶಗಣನಿಯತವಾದ ಪದ್ಯಗಳ ಜೊತೆಗೆ ಮಾತ್ರಾನಿಯತವಾದ ರಗಳೆಯ ಪ್ರಕಾರಗಳಾದ ಮಂದಾನಿಲ ರಗಳೆ ಹಾಗೂ ಲಲಿತ ರಗಳೆಗಳು ಕ್ರಮವಾಗಿ ಒಂದೊಂದ ರಂತೆ ಪ್ರಯೋಗವಾಗಿವೆ. "ಮಾತ್ರಾ ನಿಯತ ಲಯ, ಅನಿರ್ಬಂಧ ಪಾದಗಳಿಂದುಂಟಾದ ಅಪ್ರತಿಹತಗತಿ, ಇವನ್ನು ಪಂಪನಂಥ ಕವಿಗಳು ಸರಿಯಾಗಿ ಬಳಸಿಕೊಂಡು ರಗಳೆಯನ್ನು ಸಾರ್ಥಕಗೊಳಿಸಿದ್ದಾರೆ. ಕಿವಿಗೆ ಮಂಜುಳವಾದ ಲಯನಾದ, ಪ್ರಾಸಗಳಿಂದ ನಿನದಿಸುವಂಥ ನುಡಿಮುತ್ತುಗಳನ್ನು ಪವಣಿಸಿದ್ದಾನೆ."[೨೮] ಈ ರಗಳೆ ಪಜ್ಝಟಿಕೆಯ ರೂಪದಲ್ಲಿದೆ ಎಂದು ವಿದ್ವಾಂಸರು ಗುರುತಿಸಿದ್ದಾರೆ.[೨೯]

ಇಲ್ಲಿ ಕಂದಪದ್ಯಗಳದ್ದೇ ಮೇಲುಗೈ. ಪಂಪನು ೯೮೯ ಕಂದಪದ್ಯಗಳನ್ನು ಬಳಸಿದ್ದಾನೆ. "ಸಂಸ್ಕೃತದಲ್ಲಿ ಒಳ್ಳೆಯ ಅನುಷ್ಟುಪ್ ರಚನೆ ಎಷ್ಟು ಕಷ್ಟವೋ ಕನ್ನಡದಲ್ಲಿ ಒಳ್ಳೆಯ ಕಂದದ ರಚನೆಯೂ ಅಷ್ಟೇ ಕಷ್ಟ. ಅನುಷ್ಟುಪ್ ವಿಷಯದಲ್ಲಿ ಕ್ಷೇಮೇಂದ್ರ ತಿಳಿಸುವ ಹಾಗೆಯೇ, ಕಂದ ಸಹ ತನ್ನಲ್ಲಿ ಆಸಕ್ತನಾದ ಕವಿಯ ಮುಖದಿಂದ ಅತ್ಯಂತ ಶಕ್ತವಾಗಿ ಪ್ರಕಟವಾಗುವುದು ನಿಶ್ಚಯ. ಅಡಕವಾದ ಭಾವನೆ, ಕಲ್ಪನೆ, ವರ್ಣನೆಗಳಿಗೆ, ಗುಣಶೀಲಗಳ ಚಿತ್ರಣಗಳಿಗೆ, ಸಂವಾದಕ್ಕೆ, ನೀತಿಗೆ, ಇನ್ನು ಅನೇಕ ವಿಧದ ಅಭಿವ್ಯಕ್ತಿಗೆ ಕಂದ ಸ್ನಿಗ್ಧವಾಗಿ ಹೊಂದಿಕೊಳ್ಳಬಲ್ಲದು."[೩೦] ಕಂದಪದ್ಯಗಳು ವೃತ್ತಗಳ ಹಾಗೂ ಗದ್ಯಗಳ ನಡುವೆ ಒಂದೊಂದರಂತೆ ಒಂಟಿಯಾಗಿಯೂ ಕೆಲವೆಡೆ ಎದ್ದುಕಾಣುವಂತೆ ಎರಡು ಮೂರ ರಂತೆಯೂ ಇನ್ನು ಕೆಲವೆಡೆ ಇಡೀ ಸನ್ನಿವೇಶವನ್ನು ರೂಪಿಸುವಂತೆ ಒಂದಾದ ಮೇಲೊಂದಾಗಿ ಸಾಲುಗಟ್ಟಿಯೂ ಬರಬಹುದು. ದೇವೇಂದ್ರನ ನಗರನಿರ್ಮಾಣ ಪ್ರಸಂಗ (vi-೯೦ ರಿಂದ ೯೯); ಜಿನಜನನಿಯ ಶುಶ್ರೂಷೆಯ ಸಂದರ್ಭ (vii-೫ ರಿಂದ ೨೧); ನೀಲಾಂಜನೆಯ ನೃತ್ಯ ಪ್ರಸಂಗ (ix-೧೩ ರಿಂದ ೫೭); ಭರತನ ರಾಣಿಯರ ವನವಿಹಾರ ಸಂದರ್ಭ (xi-೭೩ ರಿಂದ ೭೯); ಭರತನ ಸ್ವಪ್ನಫಲಗಳ ನಿರೂಪಣೆ (xi-೭೩ ರಿಂದ ೭೯)—ಈ

ಮೊದಲಾದ ಎಡೆಗಳಲ್ಲಿ ಕಂದಗಳು ಮೇಲ್ಮೆಯಾಗಿ ನಿಲ್ಲುತ್ತವೆ.

ಕಂದಗಳ ಮೋಹಕ ಬಂಧವಿನ್ಯಾಸಕ್ಕೆ ಒಂದೆರಡು ಉದಾಹರಣೆಗಳನ್ನು ಗಮನಿಸ ಬಹುದಾಗಿದೆ.

ಇದು ರಾಜ್ಯವಿದ್ಯೆಯೊಳಗಾ | ವುದು ವಿದ್ಯೆಯೊ ಷಡ್ಗುಣಂಗಳೊಳಾವ ಗುಣಂ
ಪುದಿದೊದವಿದ ಮೆಯ್ಯಾಪಿ | ಲ್ಲದರಣ್ಯದೊಳಿಪ್ಪುದಾವ ನೀತಿಗಳೊಳಗೋ

(ಆದಿಪು. ix-೯೧)

ಪರೀಷಹಗಳನ್ನು ಜಯಿಸಲಾಗದ ವ್ರತಹೀನರು ವೃಷಭನ ಅಚಲವಾದ ತಪೋನಿಷ್ಠೆ ಯನ್ನು ಕುರಿತು ಅಸಮಾಧಾನ ವ್ಯಕ್ತಪಡಿಸುವ ಮಾತುಗಳಿವು. ಈ ತಪಸ್ಸಿನಿಂದಾಗುವ ಉಪಯೋಗವಾದರೂ ಏನು? ಎಂಬ ಭಾವವನ್ನು ಚಿಕ್ಕ ಚಿಕ್ಕ ವಾಕ್ಯಖಂಡಗಳಲ್ಲಿ ಮೂರು ನಿಲುಗಡೆಗಳನ್ನು ತಂದು ಹೇಳಿದ್ದಾನೆ. ಅವರ ಉದಾಸೀನ ನಿರುತ್ಸಾಹ ಮನೋಭಾವವನ್ನು ಅಲ್ಪಪ್ರಾಣಾಕ್ಷರಗಳ ಸಂಯೋಜನೆಯಿಂದಲೇ ನಡೆಸಿಕೊಂಡು ಹೋಗುವ ರೀತಿ ಭಾವ ಪುಷ್ಟಿಗೆ ಸಹಕಾರಿಯಾಗಿ ನಿಲ್ಲುತ್ತದೆ.

ಮತ್ತೊಂದು ಕಂದ ಪದ್ಯ :

ಬರೆ ಬಂದು ನಡೆಯ ನಡೆದಿ | ರ್ದ್ದಿರೆ ಕುಳ್ಳಿರ್ದೆಟ್ಟೊಡೆಟ್ಟು ನಿಂದೊಡೆ ನಿಂದಾ
ಳರಸೆನಿಸೆ ನೆಗಟ್ಟು ಬನದೊಳ | ಗರಸಂ ನಿಲೆ ನಿಂದೆವಿನಿತು ದಿವಸಂಬರೆಗಂ

(ಆದಿಪು. ix-೯೨)

ಇಲ್ಲಿ ನಿಯತವಾದ ಗಣವಿನ್ಯಾಸವನ್ನು ವಿಶೇಷ ಪ್ರಯೋಜನಕ್ಕಾಗಿ ಬಳಸಿರುವುದು ಕಂಡುಬರುತ್ತದೆ. ಕಚ್ಛಾದಿಗಳು ರಾಜನಾದ ವೃಷಭನಲ್ಲಿ ತೋರುತ್ತಿದ್ದ ವಿನಯಪೂರ್ವಕ ವಾದ ಭರ್ತೃಭಾವ ಕ್ರಿಯಾವಳಿಗಳು ನಿಯತಗತಿಯಲ್ಲಿ ಸಾಗುತ್ತಿದ್ದ ಪರಿಯನ್ನು ಅಷ್ಟೇ ನಿಯತಗತಿಯಲ್ಲಿ ಹೇಳಲಾಗಿದೆ. ಅನುಪ್ರಾಸದ ಜೋಡಣೆಯೂ ಈ ನಿಯತಗತಿಯನ್ನು ಮಾರ್ದನಿಸುತ್ತದೆ.

ಎರಡು ಪುಷ್ಪಿತಾಗ್ರ ಮತ್ತು ೨೪ ಅನುಷ್ಟುಪ್‌ಗಳನ್ನು ಪಂಪನು ಸಂಸ್ಕೃತ ಬಂಧದಲ್ಲಿ ಬಳಸಿದ್ದಾನೆ.

ಖ್ಯಾತ ಕರ್ನಾಟಕಗಳಾದ ಚಂಪಕ ಮಾಲೆ, ಉತ್ಪಲಮಾಲೆ, ಶಾರ್ದೂಲವಿಕ್ರೀಡಿತ, ಮತ್ತೇಭವಿಕ್ರೀಡಿತ, ಸ್ರಗ್ಧರೆ, ಮಹಾಸ್ರಗ್ಧರೆಗಳನ್ನು ಇಲ್ಲಿ ಹೆಚ್ಚಾಗಿ ಬಳಸಲಾಗಿದೆ. ಮತ್ತೇಭವಿಕ್ರೀಡಿತಕ್ಕೆ ಅಗ್ರಸ್ಥಾನವನ್ನು ನೀಡಲಾಗಿದೆ. ಆದಿಪುರಾಣದಲ್ಲಿ ಇವುಗಳ ಸಂಖ್ಯೆ ಹೀಗಿದೆ. ಮತ್ತೇಭವಿಕ್ರೀಡಿತ ೨೧೮, ಚಂಪಕಮಾಲೆ ೧೭೪, ಮಹಾಸ್ರಗ್ಧರೆ ೧೦೮, ಉತ್ಪಲ ಮಾಲೆ ೩೬, ಶಾರ್ದೂಲವಿಕ್ರೀಡಿತ ೨೦, ಸ್ರಗ್ಧರೆ ೧೧. ಪಂಪನು ಈ ಆರು ವೃತ್ತಗಳಿಗೇ ತೃಪ್ತನಾಗದೆ ಛಂದೋವೈವಿಧ್ಯಕ್ಕಾಗಿ ಇನ್ನೂ ಹಲವಾರು ವೃತ್ತಗಳನ್ನು ಸಮರ್ಥನೀಯ ವಾಗಿ ಅಳವಡಿಸಿಕೊಂಡಿದ್ದಾನೆ. ಅವುಗಳಲ್ಲಿ ಸಮವೃತ್ತಗಳಾದ ಅಕ್ಷರಗಣ, ಮಾತ್ರಾಗಣ, ಎರಡಕ್ಕೂ ಸರಿಹೋಗುವ ಉತ್ಸವ, ತರಳೆಗಳನ್ನೂ ಅಕ್ಷರಗಣಮಾತ್ರ ನಿಯತವಾದ ಪೃಥ್ವಿ, ಹರಿಣಿ, ಮಾಲಿನಿ, ಶಾರ್ಙ್ಗ (ಖಚರಪ್ಲುತ), ಉಜ್ವಳ(ಅನವದ್ಯ)ಗಳಾದ ಸಮವೃತ್ತ ಗಳನ್ನೂ ಬಳಸಿದ್ದಾನೆ. ಇವುಗಳ ಸಂಖ್ಯೆ ಹೀಗಿದೆ : ಪೃಥ್ವಿ ೨೪, ಮಾಲಿನಿ ೮, ಉಜ್ವಳ ೪, ಹರಿಣಿ ೨, ಶಾರ್ಙ್ಗ ೧, ತರಳ ೧, ಉತ್ಸವ ೧. ಪಂಪನು ಶಾರ್ದೂಲ ವಿಕ್ರೀಡಿತ, ಸ್ರಗ್ಧರಾ

ವೃತ್ತಗಳಿಗಿಂತ ಪೃಥ್ವಿಗೆ ಹೆಚ್ಚು ಪ್ರಾಶಸ್ತ್ಯವನ್ನು ನೀಡಿದ್ದಾನೆ.

ವೃತ್ತಗಳು ನಡೆಸುವ ಕಾರ್ಯವಿಶೇಷಗಳ ದೃಷ್ಟಿಯಿಂದ ಇಲ್ಲಿ ಕೆಲವನ್ನು ಗಮನಿಸಲಾಗಿದೆ.

ಉತ್ಪಲ ವೃತ್ತವು (xii-೫೫) ಸೂರ್ಯೋದಯದ ವರ್ಣನೆಯನ್ನು ಚಮತ್ಕಾರಯುತವಾಗಿ ಮಾಡಿರುವಲ್ಲಿ ಬಳಕೆಯಾಗಿದೆ. ಚಕ್ರ ಎಂಬ ಪದದ ಯಮಕಾಲಂಕಾರದ ವೈಶಿಷ್ಟ್ಯವು ಇಲ್ಲಿ ಬಂದಿದೆ.

ನನಮಯಯ ಎಂಬ ಗಣವಿನ್ಯಾಸದ ಮಾಲಿನೀ ವೃತ್ತದಲ್ಲಿ ಸಂಸ್ಕೃತಭೂಯಿಷ್ಠ ದ್ವಿತ್ವಪದಗಳ ಆಡಂಬರದಿಂದ ಕೂಡಿದ ಪದರಚನೆ ಕಂಡುಬರುತ್ತದೆ. ನರಕ ವರ್ಣನೆ, ಜನ್ಮಾಭಿಷೇಕೋತ್ಸವದ ಮೆರವಣಿಗೆಯಲ್ಲಿ ನಿಂತ ದೇವತೆಗಳ ವರ್ಣನೆ, ಚಕ್ರವರ್ತಿಯ ಜನ್ಮೋತ್ಸವ, ಹೀಗೆ ವೈವಿಧ್ಯಮಯವಾದ ವರ್ಣನಾಭಾಗಗಳಲ್ಲಿ ಅರ್ಥಗೌರವದಿಂದೊಡಗೂಡಿ ಬಂದಿದೆ. ಹೆಸರು ಮಾಲಿನಿಯಾದರೂ ಕೆಲವೆಡೆ ಭಾವಲಾಲಿತ್ಯ ಇದರಲ್ಲಿ ಕಂಡುಬರುವುದಿಲ್ಲ. ಉದಾಹರಣೆಗೆ, ನರಕವರ್ಣನೆಯನ್ನೊಳಗೊಂಡ ಪದ್ಯ. ಇದಕ್ಕೆ ಅಪವಾದವೋ ಎಂಬಂತೆ ಏಳನೇ ಆಶ್ವಾಸದ ಒಂದು ಪದ್ಯ ಕಂಡುಬರುತ್ತದೆ (vii-೫೬). ಈ ಪದ್ಯವು ಮಾರ್ಗಶೈಲಿಯ ಬಿರುಸನ್ನು ಕಳೆದುಕೊಂಡು ಭಾವಕ್ಕೆ ತಕ್ಕಂತೆ ಬಳುಕಿದೆ. "ಎಸಳನವಳ್ದಿರ್ ಮೆಟ್ಟಿದರ್ ಮೆಟ್ಟದೆಂಬಂತವಯವದೊಳ್. . . " ಎಂಬಲ್ಲಿ ಅದನ್ನು ಗಮನಿಸಬಹುದಾಗಿದೆ.

ಹರಿಣೀವೃತ್ತದಲ್ಲಿ 'ನಸಮರಸಲಗ' ಎಂಬ ಗಣವಿನ್ಯಾಸವಿರುತ್ತದೆ. ಸಂಪೂರ್ಣ ಮಾರ್ಗಕ್ಕೆ ಸಲ್ಲದೆ ಅಲ್ಲಲ್ಲಿ ದೇಸಿಯನ್ನು ಮಿಂಚಿಸುವ ವಿಧಾನವು ಕಂಡುಬರುತ್ತದೆ. ಇದಕ್ಕೆ ಕಾರಣ ಇದರ ಮೂರು ಪಾದಗಳಲ್ಲಿ ಮಂಥರಗತಿ, ಕೊನೆಯಲ್ಲಿ ಲಲಿತಗತಿಯಿರುವುದೂ ಆಗಿದೆ. ಪದ್ಯ iv-೯೦ ರಲ್ಲಿ ವಜ್ರಜಂಘನಿಗೆ ಬಂದ ಪತ್ರಸಂದೇಶವನ್ನು ನಿರೂಪಿಸುವಾಗ ಇರುವ ಬಿಗಿಯಾದ ಬಂಧನವನ್ನು ಗಮನಿಸಬಹುದಾಗಿದೆ. ಉದಾಹರಣೆಗೆ, "ಸೆಣಸುವ ರಹಿತರ್ ಮೇಲೇಟ್ಟುದ್ಯೋಗಮಂ ಬಗೆದಿರ್ದರೆ | ನ್ನುಣುಗಿನಳಿಯಂಗೆನ್ನಿಂ ಮೇಗಿಲ್ಲ..." ಮುಂದುವರಿದು "ಕೂರ್ಪವರಿಂತಿದೇಂ | ಗಣಿದದೆಡೆಯೇ ಪೋಪೆಂ ಎಂಬಲ್ಲಿ ಆಡುಮಾತಿನ ಧಾಟಿಯನ್ನು ಗಮನಿಸಬಹುದಾಗಿದೆ. 'ಏರಿ ಗಣಿದಡೆಯೇ' ಎಂಬಲ್ಲಿಗೆ ದೀರ್ಘ ಯತಿಯು ಬಂದು ಅನಂತರ ಸೂಚ್ಯವಾಗುವ ನಿರ್ಧಾರಯುತವಾದ 'ಪೋಪೆಂ' ಎಂಬ ಪದದಲ್ಲಿ ನಿಲುಗಡೆಯಾಗುವ ಬಗೆ ಸಹಜಸುಂದರವಾಗಿ ಬಂದಿದೆ.

'ಜಸಜಸಯಲಗ' ವಿನ್ಯಾಸದ ಪೃಥ್ವಿ ವೃತ್ತದಲ್ಲಿ ಪಂಪನಿಗೆ ವಿಶೇಷ ಒಲವಿದ್ದಂತೆ ತೋರುತ್ತದೆ. "ಗುಣ, ಸಾಕ್ಷೇಪ, ಕ್ರೋಧ, ಧಿಕ್ಕಾರಗಳನ್ನು ಸೂಚಿಸುವಲ್ಲಿ ಪೃಥ್ವಿಯು ಬಳಕೆಯಾಗುತ್ತದೆ. ಇಲ್ಲಿ ವ್ಯಸ್ತಪದಗಳು ಅಸಮಸ್ತವಾಗಿ ಬರುತ್ತದೆಂದು ಹೇಳಲಾಗಿದೆ."[೩೧] ಪಂಪನ ಪೃಥ್ವೀವೃತ್ತಗಳು ಆದಷ್ಟುಮಟ್ಟಿಗೂ ಮೇಲಿನ ಗುಣಗಳನ್ನು ಪಡೆದುಕೊಳ್ಳುತ್ತವೆಯಲ್ಲದೆ ಹರ್ಷಾದಿ ವಿವಿಧ ಭಾವಗಳೂ ಸಹ ಪ್ರಕಟಗೊಳ್ಳುತ್ತವೆ. ಉದಾಹರಣೆಗೆ ಒಂದನ್ನು ಇಲ್ಲಿ ಪರಿಶೀಲಿಸಲಾಗಿದೆ :

ಅದೊಂದೆಡೆ ಸುರಾನಕಪ್ರಕಟಘೋಷದಿಂದ ಚೆಲ್ವುವೆ
ತ್ತದೊಂದೆಡೆ ಸುರಾಂಗನಾಮಧುರಗೀತದಿಂದೊಳ್ಪುವೆ

ತ್ತದೊಂದೆಡೆ ಸುರೇಂದ್ರಸೌಂದರಿಯರಾಟದಿಂ ಗಾಡಿವೆ
ತ್ತದೇಂ ಗಗನಮಂಡಲಂ ನೆಱೆಯೆ ಶೋಭೆಯಂ ಪೆತ್ತುದೊ (ಆದಿಪು. vii-೫೯)

ಇಲ್ಲಿ ಮೊದಲ ಮೂರು ಸಾಲುಗಳಲ್ಲಿ ಪ್ರಥಮ ಜಗಣದ ನಂತರ ಬರುವ ಸಗಣದ ಮೊದಲ ಲಘುತ್ವಕ್ಕೆ ನಿಯತವಾಗಿ ಯತಿಯು ಬಂದು ಪಂಚಮಾತ್ರ ವಿನ್ಯಾಸವು ರೂಪುಗೊಳ್ಳುತ್ತದೆ. 'ಅದೊಂದೆಡೆ' ಎಂಬ ಲಾಟಾನುಪ್ರಾಸವೂ ಸಹ ಇಲ್ಲಿ ಅಳವಟ್ಟಿದೆ. ಹರ್ಷಾಶ್ಚರ್ಯ ಭಾವಗಳು ಪ್ರಕಟಗೊಂಡಿವೆ. ನಿಯತವಾಗಿ ಬರುವ ಜಸಜಜನ ಗಣವಿನ್ಯಾಸ ಒಂದು ರೀತಿಯ ನಾದಮಾಧುರ್ಯವನ್ನು ತರುತ್ತದೆ.

ಶಾರ್ದೂಲಾದಿ ವೃತ್ತಗಳಿಗೆ ಆಲಂಕಾರಿಕರು ನಿರ್ದಿಷ್ಟವಾದ ಸ್ಥಾನಗಳನ್ನು ಲಕ್ಷಣಿಸಿದ್ದರೂ ಪಂಪನಲ್ಲಿ ಕೆಲವೆಡೆ ಅವು ತಮ್ಮವೇ ಆದ ವ್ಯತ್ಯಯಕ್ಕೆ ಗುರಿಯಾಗಿವೆ. "ಈ ವೃತ್ತಗಳು ಪಂಪನಲ್ಲಿ ಯಾವ ಭಾವವನ್ನು ಕ್ರಿಯೆಯನ್ನು ಪ್ರಕಟಪಡಿಸಲು ಹೆಚ್ಚಾಗಿ ಬಳಸಲಾಗಿದೆ ಎಂಬುದನ್ನು ಗಮನಿಸಿದರೆ ಶಾರ್ದೂಲ-ವಿಕ್ರೀಡಿತವು ಸ್ತುತಿಪದ್ಯಗಳಲ್ಲಿ; ಮತ್ತೇಭವಿಕ್ರೀಡಿತವು ಭಯ, ಶೋಕ, ಕ್ರೋಧ, ರೌದ್ರಾದಿ ಭಾವಸ್ಫುರಣೆಯಲ್ಲಿ; ಉತ್ಪಲಮಾಲೆಯು ವೀರ ರೌದ್ರಗಳೇ ಅಲ್ಲದೆ ಇತರ ಭಾವಲಾಲಿತ್ಯದ ಸಂದರ್ಭಗಳಲ್ಲಿ; ಚಂಪಕಮಾಲೆಯು ರೌದ್ರ, ವೀರಾದಿ ಭಾವ ಮತ್ತು ಸುಕುಮಾರ ಭಾವಗಳಾದ ಶೃಂಗಾರ ಕರುಣಾದಿ ಭಾವ ಪ್ರಕಟಣೆಯಲ್ಲಿ; ಸ್ರಗ್ಧರೆ-ಮಹಾಸ್ರಗ್ಧರೆಗಳು ರೌದ್ರ, ಕರುಣ, ಭೀಭತ್ಸಗಳಲ್ಲಿ ಬಳಕೆಯಾಗಿರುವುದು ಕಂಡುಬರುತ್ತದೆ."[೩೨]

ಈ ವೃತ್ತಗಳ ಕ್ರಿಯಾಶಕ್ತಿಯ ವಿನ್ಯಾಸಕ್ಕೆ ಒಂದು ಉದಾಹರಣೆ :

ಅಮರೇಂದ್ರೋನ್ನತಿ ಖೇಚರೇಂದ್ರವಿಭವಂ ಭೋಗೀಂದ್ರಭೋಗಂ ಮಹೇಂ
ದ್ರಮಹೈಶ್ವರ್ಯಮಿವೆಲ್ಲಮಧ್ರುವಮಿವಂ ಬೇಚ್ಚಿಂತು ಬೇಳಲ್ಕೆನು
ತ್ತಮದೀಕ್ಷಾವಿಧಿಯಂ ಸಮಾಧಿಮರಣಂ ಕರ್ಮಕ್ಷಯಂ ಬೋಧಿಲಾ
ಭಮಮೋಘಂ ದೊರೆಕೊಳ್ವುದಕ್ಕೆಮಗೆ ಮುಕ್ತಿಶ್ರೀಮನೋವಲ್ಲಭಾ (ಆದಿಪು. x-೬೧)

ಈ ಮತ್ತೇಭವಿಕ್ರೀಡಿತದ ಪದ್ಯಾರ್ಧದಲ್ಲಿ ಕವಿ ತಂದಿರುವ ಏರುಧ್ವನಿ ರಕಾರಸಮನ್ವಿತ ಸಂಯುಕ್ತಾಕ್ಷರಗಳ ಆರ್ಭಟ ಲೌಕಿಕತೆಯ ಆಡಂಬರವನ್ನು ರಿಂಗಣಿಸುವಂತೆ ಮಾಡುತ್ತದೆ. ಉಳಿದ ಅರ್ಧ ಪದ್ಯದಲ್ಲಿ ಆ ಏರುಧ್ವನಿ ಇಳಿದು, ಲಲಿತಪದವಿನ್ಯಾಸದಲ್ಲಿ ಸಮಭಾವದಿಂದ ಹರಿಯುವ ವಿನ್ಯಾಸ ಕಂಡುಬರುತ್ತದೆ. ಭಾವಮಾಧುರ್ಯದೊಂದಿಗೆ ಇಲ್ಲಿ ಲಯಮಾಧುರ್ಯವೂ ಮೇಳಯಿಸಿದೆ.

ಪಂಪನ ರಚನೆಯಲ್ಲಿ ಬಾಹ್ಯಾಂತರಂಗಗಳೆರಡೂ ಸುಂದರವಾದವು. ಛಂದೋವೈವಿಧ್ಯಗಳು ಇಲ್ಲಿ ಯಾಂತ್ರಿಕತೆಯನ್ನು ನೀಗುವುದಷ್ಟೇ ಅಲ್ಲದೆ ಕಾವ್ಯಕ್ಕೆ ಒಂದು ಸೊಬಗನ್ನು ತಂದಿವೆ. ಗಾಂಭೀರ್ಯದ ಆಳದಲ್ಲಿ ಲಲಿತ ಮಾಧುರ್ಯವನ್ನು ತರುವ ಸಮ್ಮೋಹಕಶಕ್ತಿ ಪಂಪನಿಗೆ ಹೇಳಿಮಾಡಿಸಿದ್ದು.

## ಚಾಮುಂಡರಾಯನ ಆದಿಪುರಾಣಭಾಗದ ಭಾಷೆ, ಶೈಲಿ, ಛಂದಸ್ಸು

ಚಾವುಂಡರಾಯಪುರಾಣದಲ್ಲಿ ಬರುವ ಆದಿಪುರಾಣದ ಕಥೆಗೆ ಮುಖ್ಯ ಆಕರ ಜಿನಸೇನರ ಪೂರ್ವಪುರಾಣ ಮತ್ತು ಪಂಪನ ಆದಿಪುರಾಣಗಳಾಗಿವೆ. ಕವಿ ಅಲ್ಲಿಯ ಕಥಾವಸ್ತು

ವನ್ನು ಗದ್ಯದಲ್ಲಿ ಸಂಗ್ರಹಿಸಿದ್ದಾನೆ. ಹಾಗೆ ಸಂಗ್ರಹಿಸುವಾಗ ಚಾಮುಂಡರಾಯನು ಒಬ್ಬ ನಿಷ್ಠಾವಂತ ಸಂಗ್ರಾಹಕನಾಗಿ ಕಂಡುಬರುತ್ತಾನೆ; ತ್ವರಿತಗತಿಯನ್ನು ತೋರಿದ್ದಾನೆ. ಹೀಗಾಗಿ ಇಲ್ಲಿ ವರ್ಣನಾಂಶಕ್ಕೆ ಹೆಚ್ಚು ಅವಕಾಶವಿಲ್ಲ. ಹೆಚ್ಚು ವಿವರಣೆಗಳಿಲ್ಲ. ಕವಿಯ ಗುರಿ ತತ್ತ್ವೋಪದೇಶ, ಪುರಾಣ ಕಥನ. ಹೀಗಾಗಿ "ಶಾಸ್ತ್ರದೃಷ್ಟಿ, ಪುರಾಣದೃಷ್ಟಿ, ಕಥಾ ಸಂಗ್ರಹ ದೃಷ್ಟಿ ಇಲ್ಲಿ ಪ್ರಧಾನವಾಗಿರುವುದರಿಂದ ಕಾವ್ಯದೃಷ್ಟಿ ಗೌಣವಾಗಿದೆ."[೩೩]

ಪದ್ಯದಲ್ಲಿರುವ ಕಥಾವಸ್ತುವನ್ನು ಗದ್ಯದಲ್ಲಿ ಹೇಳಿರುವುದು ಈತನ ಸ್ವತಂತ್ರ ದೃಷ್ಟಿಗೆ ದ್ಯೋತಕವಾಗಿದೆ. (ಬಹುಶಃ ಗದ್ಯಕಥೆಯಾಗಿದ್ದ ಕವಿಪರಮೇಷ್ಠಿಗಳ ವಾಗರ್ಥಸಂಗ್ರಹದ ಪ್ರೇರಣೆ ಇದ್ದಿರಬಹುದು.) ಕನ್ನಡ ಸಾಹಿತ್ಯದ ಗದ್ಯಪರಂಪರೆಯ ಹಿರಿಮೆಯನ್ನು ಇದು ಸೂಚಿಸುತ್ತದೆ.

"ಧರ್ಮದೊಳಪ್ಪನುರಾಗದಿಂ ಪೆರ್ಚುಗುಮಣ್ಣನು ಬರೆದ ಮಹಾಪುರಾಣಮಂ ಕೇಳ ಲೊಡಂ" (ಚಾವುಂಪು. ಪು. ೪೪೦). ಧರ್ಮಶ್ರದ್ಧೆಯನ್ನು ಓದುಗರಲ್ಲಿ ಬೆಳೆಸುವುದೇ ಈತನ ಮುಖ್ಯ ಕಾವ್ಯೋದ್ದೇಶ. ಪ್ರಥಮಾನುಯೋಗ ಸಂಬಂಧಿಯಾದ ಪರಮ ಜಿನಾ ಗಮ ಪ್ರಕಟ ರತ್ನಗುಣಗಳನ್ನು ಅರಿಯದೆ ಚಿತ್ತಶುದ್ಧಿ ಸಾಧ್ಯವಿಲ್ಲ. ಆದ್ದರಿಂದ ಮರೆಯದೆ ಇದನ್ನು ಓದಿಸುತ್ತಿರಬೇಕೆಂದು ನಿರ್ದೇಶಿಸಿದ್ದಾನೆ (ಪು. ೪೪೦). ಈತನ ಕಾವ್ಯೋದ್ದೇಶ ಈ ಮಾತುಗಳಲ್ಲಿ ಸ್ಪಷ್ಟವಾಗಿದೆ.

ಚಾಮುಂಡರಾಯನು ಓರ್ವ ನಿಷ್ಠಾವಂತ ಪುರಾಣಪ್ರತಿಪಾದಕನಾಗಿದ್ದಾನೆ. ಈತನ ಶೈಲಿಯೂ ಸಹ ಮುಖ್ಯವಾಗಿ ಪುರಾಣಶೈಲಿ. ಅಲ್ಲಲ್ಲಿ ಮಾತ್ರ ಕಾವ್ಯದ ಮಿಂಚು ಹೊಳೆದು ಮಾಯವಾಗುತ್ತದೆ. "ಚಾವುಂಡರಾಯಪುರಾಣದ ಗದ್ಯಮಾರ್ಗ ಪ್ರವಣ ಶೈಲಿಯ ನಯ ನಾಜೂಕುಗಳನ್ನೂ ಘನತೆ ಗಾಂಭೀರ್ಯಗಳನ್ನೂ ಒಳಗೊಂಡ, ಆದರೆ ಕಥಾಕಲಾವಿ ಮುಖವೂ ರಸದೃಷ್ಟಿದೂರವೂ ಆದ ಸಂಗ್ರಹಶೀಲ ಶಾಸ್ತ್ರಗದ್ಯ. ಇದೇ ಅದರ ವೈಯಕ್ತಿಕತೆ. ಧರ್ಮನಿಷ್ಠವಾದ ವಿಷಯನಿರೂಪಣೆಯಲ್ಲಿ ತಾತ್ತ್ವಿಕ ವಿಚಾರಗಳಲ್ಲಿ ಚಾಮುಂಡ ರಾಯನು ಪರಿಭಾಷಾಶಿಷ್ಟವಾದ ಪ್ರೌಢಗದ್ಯವನ್ನು ಬಳಸುತ್ತಾನೆ. ಇದಕ್ಕೆ ಗ್ರಂಥದ ತುಂಬ ನಿದರ್ಶನಗಳು ದೊರೆಯುತ್ತವೆ. ತೀರ್ಥಂಕರ ಚರಿತೆಯ ವಿಷಯವಿನ್ಯಾಸದಲ್ಲಿ ದೇಶ್ಯ ಪ್ರಚುರವೂ ನಿರಾಡಂಬರವೂ ಆದ ಸುಲಭ ಗದ್ಯ ಕೆಲಮಟ್ಟಿಗೆ ಉಂಟು. 'ವಡ್ಡಾ ರಾಧನೆ'ಯಲ್ಲಿ ತೋರುವಷ್ಟು ಪ್ರಮಾಣದಲ್ಲಿ ಅಲ್ಲವಾದರೂ, ಆಗಾಗ ವಿರಳವಾಗಿ ಯಾದರೂ ಕಥನಕಲೆಯ ಸೊಗಸು, ದೇಸಿಯ ನುಡಿನಿರಿಗೆ, ಶೈಲಿಯ ನಾಟಕೀಯತೆ, ರಸಲೇಪ, ಲೋಕಾನುಭವ, ವಿಶೇಷದ ಉಕ್ತಿಗಳು, ಇವುಗಳನ್ನು ಮೈಗೂಡಿಸಿಕೊಂಡ ಸುಂದರವಾದ ಗದ್ಯವು ಕಾಣಿಸಿಕೊಂಡು ನಮ್ಮ ಮನಸ್ಸನ್ನು ರಂಜಿಸುತ್ತದೆ"[೩೪] ಎಂಬ ಈ ಮಾತುಗಳು ಚಾವುಂಡರಾಯಪುರಾಣದ ಶೈಲಿಯ ಬಗೆಗೆ ಹೇಳಿರುವ ನಿರ್ದಿಷ್ಟವಾದ ಮಾತುಗಳಾಗಿವೆ.

ಆದಿಪುರಾಣವನ್ನು ಕಥಾವಸ್ತುವಿನಲ್ಲಷ್ಟೇ ಅಲ್ಲದೆ ಶಾಬ್ದಿಕವಾಗಿಯೂ ಅನುಸರಿಸಿರು ವುದು ಕಂಡುಬರುತ್ತದೆ. ಹಾಗೆ ಮಾಡುವಾಗ ಅಲ್ಲಿಯ ಪದಪುಂಜಗಳನ್ನು ಅಲಂಕಾರಾದಿ ಸಾಮಗ್ರಿಗಳನ್ನು ಇಡಿಇಡಿಯಾಗಿ ಸೇರಿಸಿಕೊಂಡಿದ್ದಾನೆ. ಅನಿವಾರ್ಯವಾಗಿ ಈ ಎಡೆಗಳಲ್ಲಿ ಅಲ್ಲಿಯ ಭಾಷಾಶೈಲಿಯ ತದ್ರೂಪು ಕಂಡುಬರುತ್ತದೆ (ಹಿಂದಿನ ಅಧ್ಯಾಯದಲ್ಲಿ ವಿವರ

ಗಳನ್ನು ನೀಡಲಾಗಿದೆ). ಕೆಲವೆಡೆ ವರ್ಣನೆಗಳನ್ನು ಲೋಪಮಾಡುವ, ಕಥೆಯ ಸಾರವನ್ನಷ್ಟೇ ಗ್ರಹಿಸುವ, ಅಲ್ಲಲ್ಲಿ ಮಾರ್ಗದೆಡೆಗೆ ದೇಸಿಯನ್ನು ಬಳಸುವ ರೀತಿಯನ್ನು ಈತನಲ್ಲಿ ಕಾಣಬಹುದಾಗಿದೆ. ಕಥಾವಿಷಯಕ್ಕೆ ಹೆಚ್ಚು ಗಮನ ಕೊಟ್ಟು ಕಥೆಯನ್ನು ಹಿಡಿದಿಟ್ಟಿದ್ದಾನೆಯೆ ಹೊರತು ಕಥಾ ವಿವರಗಳನ್ನಲ್ಲ. ವಿವರವಾದ ವರ್ಣನೆಗಾಗಲಿ, ಧಾರ್ಮಿಕ ಪ್ರಕ್ರಿಯಾ ವಿವರಗಳಿಗಾಗಲಿ ಇಲ್ಲಿ ಅವಕಾಶವಿಲ್ಲ.

ಪೌರಾಣಿಕಾಂಶದ ನಿರೂಪಣೆಯಲ್ಲಿ ಚಾಮುಂಡರಾಯನು ಪರಿಭಾಷಾತ್ಮಕವಾದ ಪ್ರೌಢ ಗದ್ಯವನ್ನು ಬಳಸಿದ್ದಾನೆ. ಇದಕ್ಕೆ ನಿದರ್ಶನಗಳು ಹಲವಾರು. ಇಂತಹ ಕಡೆ ಸಂಸ್ಕೃತಭೂಯಿಷ್ಠ ಸಮಾಸಪ್ರೇರಿತ ವಾಕ್ಯಗಳನ್ನು ಕಾಣಬಹುದು. ಉದಾಹರಣೆಗೆ :

> ಕ್ಷಣವಂತನೆಂಬೊಂ ಧರ್ಮಶ್ರವಣ ಸಮಯದೊಳ್ ಪರಿತ್ಯಕ್ತಸಕಲವ್ಯಾಪಾರಮನನ್ಯಮನಸ್ಕನೆಂಬೊಂ ಶ್ರವಣೇಂದ್ರಿಯ ವಿಷಯದೊಳ್ ನಿವರ್ತಿತ ಮನಸ್ಕಂ ಅನುಕೂಲಿತನೆಂಬೊಂ ಹಿಂಸಾನೃತಸ್ತೇಯಾಬ್ರಹ್ಮ ಪರಿಗ್ರಹ ಕ್ರೋಧಮಾನಮಾಯಲೋಭದ್ವೇಷರಹಿತಂ ಅನಾಲಸ್ಯನೆಂಬೊಂ ನಾಸ್ತಿಕ್ಯ ದೈನ್ಯನಿದ್ರಾದಿನಿರೀಕ್ಷಣಜೃಂಭಣವಿವರ್ಜಿತಂ ಶ್ರದ್ಧಾಳುವೆಂಬೊಂ ಧರ್ಮಶ್ರವಣಾನುರಾಗದಿಂ ರೋಮಾಂಚ ಕಂಚುಕಿತ ಶರೀರನುಂ ವಿಗಳದಾನಂದಾಶ್ರುಜಲಮಂ ಲಲಾಟತಟಘಟಿತ ಮುಕುಳಿತ ಕರತಳನುಂ ಪ್ರವಕ್ತೃವಚನ ಪಾರಾವಾರಾವಗಾಹನ ಪರಿಣತಮತಿ ವಿಶೇಷನುಂ ಕಥಕಮುಖವನಜವಿಹಿತವಿಲೋಲವಿಲೋಚನನಪ್ಪೊಂ. ಅವಿಕಾರಿಯೆಂಬೊಂ ಭ್ರೂಲಲಾಟನಯನನಾಸಾಪುಟೋಷ್ಠ ಶಿರಶಿರೋಧರಕರಚರಣೋದರ ವಿಕಾರವಿರಹಿತನುಂ ಸಭಾಹೃದಯಹಾರಿ ಪ್ರಶ್ನನುಂ ಪ್ರವಕ್ತೃಮನೋಗತಾಭಿಪ್ರಾಯಪ್ರಜ್ಞನುಮಪ್ಪೊಂ (ಪು. ೯).

ಕೆಲವೆಡೆ ಓಟ ತ್ವರಿತಗತಿಯದಾದರೂ ಅಲ್ಲಲ್ಲಿ ಕಾವ್ಯೋಚಿತ ಜೀವಕಳೆಯನ್ನು ತುಂಬುವುದನ್ನು ನೋಡಬಹುದು. ಉದಾಹರಣೆಗೆ :

> ದೇವ ನಿನಗೆ ರಾಜಕಮೆಲ್ಲಮೆಱಗಿದುದಿದೊಂದೆ ಬಾಹುಬಲಿಕುಮಾರಂ ಮೊದಲಾಗೆ ನಿನ್ನ ತಮ್ಮಂದಿರೆಲ್ಲಂ ನಿನಗೆಱಗೆವೆಂಬ ಮದದೊಳಿರ್ದರದಱಿಂದಲ್ಲಿ ಚಕ್ರಂ ಪುಗದೆ ಮಾಣ್ಬುದೆನೆ ಕುಮಾರರಲ್ಲಿಗೆ ಶಾಸನ ಹರರ ನಟ್ಟಿದೊಡಭಿಮಾನಧನರಪ್ಪನಿಬರುಮೆಱಗಲೊಲ್ಲದೆ ಪರಿಚ್ಛೇದಿಸಿ ನಿಜಗುರುಚರಣಮೂಲದೊಳ್ ತಪಮಂ ಕೈಕೊಳ್ವುದುಮದಂ ಕೇಳ್ದು ಭರತನಾಶ್ಚರ್ಯಂಬಟ್ಟು ಮನದೊಳೆ ಮೆಚ್ಚಿ ಬಾಹುಬಲಿಕುಮಾರನಲ್ಲಿಗಾ ಸ್ಥಿತಿಯೊಳೋಲೆಯುಮಂ ದೂತರುಮನಟ್ಟಿದೊಡೆ ರೇಖಾವಾರ್ತಾಕರ್ಣನದೊಳತಿಕುಪಿತನುಂ ಸಮರಸನ್ನದ್ಧನುಮಾಗಿ ಬಂದು ದೂತರಂ ಕಳಿಪೆ ಭರತೇಶ್ವರಂ ಮುಳಿದು ನಡೆದೆರಡುಂ ಪಡೆಯುಮೊಡ್ಡಿಕಾದುವಾಗಳುಭಯಬಲದಿ ಮಂತ್ರಿಗಳಿರ್ವರುಮರಸುಗಳ್ಪೊಡೆ ಚರಮದೇಹಾದಿ ದೇಹಧಾರಿಗಳಿರ್ವರ ತಮ್ಮೊಳೋರೋರ್ವರಂ ನೋಯಿಸಲುಂ ಕೊಲಲುಮಾಱರದರಿಂದಿವರ ಯುದ್ಧವೆಂಬುದು ಕ್ರೂರಗ್ರಹಯುದ್ಧದಂತೆ ಸಕಲ ಜನಕ್ಷಯಕರಮದರೊಳೇವಂದಪುದೆಂದು ತಮ್ಮೊಳೆ ಸಮಕಟ್ಟೆ ಧರ್ಮಯುದ್ಧಕ್ಕೆ ಭರತಬಾಹುಬಲಿಗಳನ್ನೊಡಂಬಡಿಸಿ ಬಲಮೆರಡುಮಿಡುಕದೆ ನೋಡುವಂತು ನಿಯಮಿಸಿದಾಗಳ್ ಬಾಹುಬಲಿ ಭರತನಂ ದೃಷ್ಟಿಯುದ್ಧ ಜಲಯುದ್ಧದೊಳ್ ಗೆಲ್ದು ಮಲ್ಲಯುದ್ಧದೊಳ್ ಪೊಣರ್ದು ಪಲವಾಯಂಗಳೊಳ್ ಪೊಣರ್ದು ಶ್ರಾಂತವಾದಾಗಳ್ ಭರತನುಂ ಪಿಡಿದೆತ್ತಿ ನೆಲಕ್ಕಿಕ್ಕುವುದುಂ ಭರತನುಂ ಸಿಗ್ಗಾಗಿ ಚಕ್ರರತ್ನಮಂ ಬೆಸಸಿದೊಡದು ಬಂದು ಬಾಹುಬಲಿಯಂ ಬಲಗೊಂಡು ನಿಲೆ ತಮ್ಮಣ್ಣನ ರಾಜ್ಯಮೋಹದೊ

ಳಾದ ಅಜ್ಞತೆಗಂ ಸಂಸಾರದ ಅಸಾರತೆಗಂ ಪೇಸಿ ಭರತನಲ್ಲಿಗೆ ಬಂದು ಅಣ್ಣ ಸಿಗ್ಗನುಳಿವುದು ನೀನೀ ಸಾಮ್ರಾಜ್ಯಮನಾವಗಂ ಕೈಕೊಳ್ವುದೆನಗಿದೇನುಂ ಬಾರ್ತೆಯಲ್ಲೆಂದು ತಪಶ್ಚರಣನಿರತ ಮನನಾದಂ (ಪು. ೫೮).

ಪೂರ್ವಪುರಾಣದಲ್ಲಿ ೩೨೫ ಶ್ಲೋಕವಿಸ್ತಾರದಲ್ಲಿಯೂ ಆದಿಪುರಾಣದಲ್ಲಿ ೧೩೩ ಪದ್ಯ ಹಾಗೂ ಕೆಲವು ಗದ್ಯಭಾಗಗಳಿಂದಲೂ ವಿಸ್ತಾರವಾಗಿ ಭಾವರಸಸ್ಯಂದಿಯಾಗಿ ವೈವಿಧ್ಯತೆ ಯಿಂದ ತುಂಬಿ ಬಂದಿರುವ ಈ ಭಾಗ ಇಲ್ಲಿ ಅತ್ಯಂತ ಅಡಕಗೊಂಡು ಬಂದಿದೆ. ನಿರೂಪಣೆಯಲ್ಲಿ ಒಂದು ಬಗೆಯ ಧಾವಂತವನ್ನು, ನಿಲುಗಡೆಯಿಲ್ಲದ ಒಂದೇ ಉಸಿರಿನ ಓಟವನ್ನು ಗಮನಿಸಬಹುದಾಗಿದೆ. ಈ ಗದ್ಯಭಾಗದಲ್ಲಿ ಕವಿ ಅಲ್ಲಲ್ಲಿ ಅಳವಡಿಸಿರುವ ಕೆಲವು ನುಡಿಗಟ್ಟುಗಳು—ದೃಷ್ಟಾಂತಾಲಂಕಾರಗಳು ಈ ಕಥಾ ಸನ್ನಿವೇಶಕ್ಕೆ ಸ್ವಲ್ಪವಾದರೂ ಜೀವಕಳೆ ತುಂಬಿರುವುದನ್ನು ಅಲ್ಲಗಳೆಯುವಂತಿಲ್ಲ.

ಈಗ ಇಲ್ಲಿ ಬಂದಿರುವ ಕೆಲವು ಪದಪ್ರಯೋಗಗಳನ್ನು, ವಾಕ್ಯಗಳನ್ನು ಗಮನಿಸಬಹು ದಾಗಿದೆ.

ವಕಾರವು ಬಕಾರದಲ್ಲಿ ಪ್ರಯೋಗವಾಗಿರುವುದಕ್ಕೆ : 'ಬಂಚಿಸಿ' (ಪು. ೩೨); 'ಬರಿಸ' (ಪು. ೪೭); 'ಬಾರ್ತೆ' (ಪು. ೫೮); 'ಬಂದಿಸು' (ಪು. ೨೨).

ವಿಭಕ್ತಿ ಪಲ್ಲಟ : 'ನಿನ್ನ ಬರೆದ ಪಟಮಂ' (ಪು. ೨೯); 'ತನ್ನ ಮುನ್ನಿನ ಬೈತ ಕೆಲದೊಳ್' (ಪು.೩೧); 'ತನ್ನ ಮುನ್ನ ಪಡೆದ ವರ್ಣತ್ರಯಕ್ಕಂ' (ಪು. ೪೪); 'ತನ್ನ ಮಾಡಿದ ಕಾಪಿಳ ಸಿದ್ಧಾಂತಮುಂ' (ಪು. ೪೬).

ಕೆಲವು ನುಡಿಗಟ್ಟುಗಳು : 'ಪರರ ಕೀೞಿಲೊಳ್ ಸಾರ್ದು' (ಪು. ೨೩); 'ಧರಾಭಾರಮಂ ಕೊಟ್ಟು' (ಪು. ೨೭); 'ಹತಪ್ರತಿಭನಾಗು' (ಪು. ೨೮); 'ನಿಷ್ಕಂಟಕಂ ಮಾಡಿಕೊಟ್ಟು' (ಪು. ೩೩); 'ಮತ್ಸ್ಯ ನ್ಯಾಯಂ' (ಪು. ೪೪).

ಕೆಲವೆಡೆ ವಿರಳವಾಗಿ ಕಥನಕಲೆಯ ಸೊಗಸು, ದೇಸಿಯ ಚೆಲುವು ಶೈಲಿಯ ನಾಟ ಕೀಯತೆ ಲೋಕಾನುಭವೋಕ್ತಿಗಳೂ ಕಂಡುಬರುತ್ತವೆ. ಕೆಲವೆಡೆ ಪ್ರಭಾವಯುತ ಪದ-ವಾಕ್ಯ ಪ್ರಯೋಗಗಳು ಕಂಡುಬರುತ್ತವೆ. ಉದಾಹರಣೆಗೆ :

'ನಿಸ್ತ್ರಂಶ ಕರ್ಮಕ್ಕವಂ ಕೊಕ್ಕರಿಸಿ' (ಪು. ೧೯)

'ಜೀರ್ಣಶೀರ್ಣ ಚೀರಂಗಳ್' (ಪಂಪನ ಅನುಕರಣೆ) (ಪು. ೨೪)

'ದಂಡಧರರಿಲ್ಲದಂದು ಮತ್ಸ್ಯನ್ಯಾಯಮಕ್ಕುಮೆಂದು' (ಪು. ೪೪)

'ಕರ್ಮದ ಬೇಱಂ ಪರಿವಂತೆ ಪಂಚಮುಷ್ಟಿಯಿಂ ಕೇಶಪಾಶಮಂ ಪಱಿದು' (ಪಂಪನ ಅನುಕರಣೆ) (ಪು. ೪೬)

'ಗುಂಜದ್ಗುಹಾಮಹೀಧರಕ್ಕೆಣೆಯಾದೊಡೆ' (ಪೂರ್ವಪು. ಆದಿಪು. ಗಳಲ್ಲಿ ಬರುವ ಪ್ರಯೋಗ) (ಪು. ೧೬)

'ಕೊಟ್ಟಂ ಕೆಟ್ಟಂ' (ಪು. ೧೮)

ಸಂಗ್ರಾಹಕತೆಯಲ್ಲಿಯೂ ಚಿತ್ರ ಮೂಡಿಸುವ ಗದ್ಯಶೈಲಿಗೆ ಉದಾಹರಣೆ :

'ಲಾಕ್ಷದ್ರವದೊಳ್ ದೊಡ್ಡ ವಾಪಿಯಂ ತೀವಿದೊಡದಱೊಳ್ ಪೊಕ್ಕು ಮುಳುಗಾಡಿ ಮುಕ್ಕುಳಿಸಿ ನೋಡಿ ಕೃತಕರುಧಿರಮಪ್ಪುದನರಿದಿವನೆನ್ನಂ ವಂಚಿಸಿದನೆಂದು ಮುಳಿದು

ಸುರಗಿಯಂ ಕಿೞ್ತು ತಡತಡವರಿಸುತ್ತುಮಿೞಿಯಲ್ ಪೋಪಾತಂ ಬಾವಿಯ ಸೋಪಾನಮ ನಡರುತ್ತುಂ ಜಾಱುವಂದುರದೊಳ್ ನಟ್ಟಸುರಗಿ ಬೆನ್ನೊಳ್ ಮೂಡಿ ಸತ್ತು ನರಕಕ್ಕಿೞಿದನ್' (ಪು. ೧೯).

ಈ ಚಿಕ್ಕ ಗದ್ಯಖಂಡದಲ್ಲಿ ಕವಿ ಅರವಿಂದರಾಜನ ಕ್ರೋಧಕಷಾಯದ ತೀವ್ರತೆಯನ್ನು ಚಿತ್ರೀಕರಿಸುವಲ್ಲಿ ಯಶಸ್ವಿಯಾಗಿದ್ದಾನೆ.

ಕೆಲವೆಡೆ ಸಾರ್ವತ್ರಿಕವಾಗುಳಿಯುವ ಧರ್ಮನಿರೂಪಣೆಯನ್ನು, ಅಲ್ಲಿ ಕಂಡುಬರುವ ಸರಳತೆಯನ್ನು ಗಮನಿಸಬಹುದಾಗಿದೆ :

'ಸಮಾನಮೆಂಬುದು ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಪಶು ಮೃಗ ಪಕ್ಷಿ ಸರೀಸೃಪಂಗಳುಮಂ ಸಮಂಗಾಣ್ಬ ಧರ್ಮಂ' (ಪು. ೧೦)

ಧಾರ್ಮಿಕ ನಿರೂಪಣೆಯಲ್ಲಿ ಸರಳತೆಯನ್ನು ತಂದಿರುವುದಕ್ಕೆ ಉದಾಹರಣೆ :

'ಎಲ್ಲಾ ಪ್ರಾಣಿಗಳುಮಾತ್ಯಂತಿಕ ಸುಖಮನಿಚ್ಛೈಸುವರಾ ಸುಖಂ ಕರ್ಮಕ್ಷಯದಿನಲ್ಲದಾಗದು. ಕರ್ಮಕ್ಷಯಕ್ಕೆ ಪೆಱವು ಕಾರಣಮೊಳವಾಗಿಯುಂ ಮುಖ್ಯಕಾರಣಂ ಸಮ್ಯಕ್ತ್ವಂ' (ಪು. ೧೦-೧೧)

ಪುರಾಣಗಳಲ್ಲಿ ಅಷ್ಟಾದಶ ವರ್ಣನೆಗಳು ಅನಿವಾರ್ಯ ಅಂಗಗಳಾದರೂ ಚಾವುಂಡರಾಯಪುರಾಣದಲ್ಲಿ ಇಂತಹ ವರ್ಣನೆಗಳಿಗೆ ಅವಕಾಶವಿಲ್ಲವೆಂದೇ ಹೇಳಬೇಕು. ಅವಕಾಶವಿರುವೆಡೆಯಲ್ಲಿಯೂ ಅದರಿಂದ ನುಸುಳಿ ಬರುತ್ತಾನೆ. ಕೆಲವೆಡೆ ಅದರ ಪ್ರಸ್ತಾಪ ಬಂದರೂ ಅವು ಪೂರ್ಣವಾಗಿರದೆ ನಾಮಮಾತ್ರವಾಗಿ ಬರುತ್ತವೆ. 'ಕಣ್ಣು ಪಟ್ಟಿಕಟ್ಟಿದ ಕುದುರೆಯಂತೆ ಕಥೆಯ ಹಾದಿಯನ್ನು ಸ್ವಲ್ಪವೂ ತಪ್ಪದೆ, ಅತ್ತಿತ್ತ ನೋಡದೆ ಒಂದೇ ಸಮನೆ ವೇಗವಾಗಿ ಕ್ರಮಿಸುತ್ತಾನೆ.'[೩೩]

ಕಥೆಯ ಆರಂಭ ಪುರಾಣಶೈಲಿಯದೇ. ಅಷ್ಟಾದಶವರ್ಣನೆಗಳಿಗೆ ಇಲ್ಲಿ ಅವಕಾಶವಿಲ್ಲದಿದ್ದರೂ ಪುರಾಣಶೈಲಿಯನ್ನು ಇಲ್ಲಿ ಬಿಟ್ಟಿಲ್ಲ. ವಕ್ತೃ, ಕಥೆ, ಶ್ರೋತೃ, ದ್ರವ್ಯ, ಕ್ಷೇತ್ರ, ಕಾಲ, ಭಾವಾದಿಗಳ ಸಂಕ್ಷಿಪ್ತ ನಿರೂಪಣೆಯ ಪೀಠಿಕಾರೂಪದೊಂದಿಗೆ ಕಥಾಪ್ರವೇಶವಾಗಿದೆ. ಈ ವರ್ಣನೆಗಳನ್ನು ಕವಿ "ಮಹಾಪುರಾಣ"ದ 'ಪೀಠಿಕಾ ಮುಖ'ವೆಂದೇ ಕರೆದಿದ್ದಾನೆ. ಅನಂತರ ಬರುವುದು ಕಥಾಮುಖ.

ಈತನ ನಿಷ್ಠುರ ಸಂಗ್ರಾಹಕತೆ ಎಷ್ಟೋ ಪ್ರಸಂಗಗಳಲ್ಲಿ ತನ್ನ ಪರಿಣಾಮತೀವ್ರತೆಯನ್ನು ಕಳೆದುಕೊಂಡಿದೆ. ನೀಲಾಂಜನೆಯ ನೃತ್ಯಪ್ರಸಂಗ, ಲಲಿತಾಂಗ-ಸ್ವಯಂಪ್ರಭೆ ಹಾಗೂ ವಜ್ರಜಂಘ-ಶ್ರೀಮತಿಯರ ಭವನಿರೂಪಣೆಯ ರಸಪ್ರಸಂಗಗಳೂ ಸಹ ಸಾಮಾನ್ಯವಾಗಿ ಹೋಗುತ್ತವೆ. ಕಥಾವಸ್ತುವಿಗೆ ತೋರಿರುವ ಶ್ರದ್ಧೆಯನ್ನು ರಸಪ್ರತಿಪಾದನೆಗೆ ನೀಡಿಲ್ಲ.

ಚಾವುಂಡರಾಯಪುರಾಣವು ಹಳಗನ್ನಡ ಗದ್ಯಶೈಲಿಯ ವಿಶಿಷ್ಟ ಮಾದರಿಯಾಗಿದೆ. ಇದು ಒಂದು ಪುರಾಣಗ್ರಂಥವಾದರೂ ಇಲ್ಲಿನ ಗದ್ಯವು ಅತಿಯಾದ ಸಂಸ್ಕೃತ ಶಬ್ದದಿಂದಲೂ ದೀರ್ಘವಾದ ಸಮಾಸಪದಗಳಿಂದಲೂ ತುಂಬಿಕೊಂಡಿಲ್ಲ. ಶೈಲಿಯಲ್ಲಿ ಒಂದು ರೀತಿಯ ಯಾಂತ್ರಿಕತೆಯಿದ್ದರೂ ಕಥೆಯ ನಿರೂಪಣೆಯಲ್ಲಿ ವೇಗವಿರುವುದರಿಂದಲೂ ಅಲ್ಲಲ್ಲಿ ದೇಸಿಯ ಮಾತುಗಳು ಸೇರಿಕೊಂಡಿರುವುದರಿಂದಲೂ ಶುಷ್ಕತೆ

ಯಲ್ಲಿಯೂ ರಸಾರ್ದ್ರತೆಯನ್ನು ಅಲ್ಲಲ್ಲಿ ಕಾಣಬಹುದು.

"ಚಾವುಂಡರಾಯಪುರಾಣ ಶಾಸ್ತ್ರನಿಷ್ಠುರವಾದರೂ ಅಲ್ಲಲ್ಲಿ ಕಥಾಗದ್ಯದ ಸಹಜತೆಯಿದೆ. ಕಥಾಗದ್ಯದ ಸಹಜ ಓಘ, ಬಳಕೆ ಮಾತಿನ ಸೊಗಸು ಇವುಗಳೊಡನೆ ಶಾಸ್ತ್ರಗದ್ಯದ ಅಚ್ಚುಕಟ್ಟು ಇವು ಸೇರಿಕೊಂಡು ಜನಸುಲಭವಾದರೂ ಶಾಸ್ತ್ರಶುದ್ಧವಾದ ನಡಿಗೆಯ ಬೆಡಗನ್ನು ಕೊಟ್ಟಿರುತ್ತವೆ. ಹೀಗೆ ಕನ್ನಡ ಸಾಹಿತ್ಯದಲ್ಲಿ ಚಾಮುಂಡರಾಯನು ಕಥನಕವಿ ಎನ್ನುವುದಕ್ಕಿಂತ ಗದ್ಯಶೈಲಿಕಾರನೆಂದು ಕರೆಸಿಕೊಳ್ಳಲು ಯೋಗ್ಯನಾಗಿದ್ದಾನೆ."[೩೭] "ಅದರ ಗದ್ಯಸ್ವರೂಪವನ್ನು ಗಂಭೀರ, ಧಾರಾಳ, ಚೊಕ್ಕಟ ಎಂಬ ಮೂರು ಮಾತುಗಳಲ್ಲಿ ಅಡಕಗೊಳಿಸಿ ಹೇಳಬಹುದು."[೩೮]

ಇಲ್ಲಿ ಬಳಕೆಯಾಗಿರುವ ಕನ್ನಡ ಪದ್ಯಗಳು ಕೇವಲ ಪದ್ಯಗಳ ಪ್ರಸ್ತಾರರೂಪದಲ್ಲಿವೆಯೇ ಹೊರತು ವಿಶೇಷವಾದ ಕಾವ್ಯಾಂಶದಿಂದ ಕೂಡಿದವುಗಳಾಗಿಲ್ಲ. ಗದ್ಯದಲ್ಲಿಯೇ ನಿರೂಪಿಸಬಹುದಾದುದನ್ನು ಕಂದದ ಚೌಕಟ್ಟಿನಲ್ಲಿ ಬಂಧಿಸಿದ್ದಾನಷ್ಟೆ. ಉದಾಹರಣೆಗೆ :

ಹಾದಂಡಮಯ್ವರಿಂ ಹಾ | ಮಾದಂಡಂ ಮತ್ತಮಯ್ವರಿಂ ಹಾಮಾಧಿಕ್
ಭೇದಂ ಕುಲಧರರಯ್ವರಿ | ನಾದುದು ತನುದಂಡಮಾಯ್ತು ಭರತೇಶನಿಂ (ಪದ್ಯ ೨೯, ಪುಟ ೧೫೫)

ಪ್ರಾಕೃತ ಗಾಹೆ, ಸಂಸ್ಕೃತ ಶ್ಲೋಕ, ಕನ್ನಡ ಕಂದವೃತ್ತಗಳೂ ಬಳಕೆಯಾಗಿವೆ. ಅಲ್ಲಲ್ಲಿ ಅವು ತ್ವರಿತಗತಿಯ ಗದ್ಯದ ನಡೆಗೆ ಅಡ್ಡಿಗಳಾಗಿಯೇ ತೋರುತ್ತವೆ. ಇಪ್ಪತ್ತೂಮೂರು ಕಂದ ಪದ್ಯಗಳಿವೆ. ಉತ್ಪಲಮಾಲೆ (೧), ಮತ್ತೇಭವಿಕ್ರೀಡಿತ (೧), ಸ್ರಗ್ಧರೆ (೨), ಮಹಾಸ್ರಗ್ಧರೆ (೨), ಚಂಪಕಮಾಲೆ(೨)ಗಳು ಪ್ರಯೋಗವಾಗಿವೆ. ಮೂರು ವಸಂತ ತಿಲಕಗಳೂ ಹನ್ನೆರಡು ಅರ್ಧಸಮವೃತ್ತಗಳೂ ನಾಲ್ಕು ಶಾರ್ದೂಲವಿಕ್ರೀಡಿತಗಳೂ ಕ್ರಮವಾಗಿ ಒಂದೊಂದರಂತೆ ಶ್ಲೋಕ, ಉಪೇಂದ್ರವಜ್ರ, ಇಂದ್ರವಜ್ರ ಮತ್ತು ಆರ್ಯೆಗಳೂ ಸಂಸ್ಕೃತ ಪದ್ಯಬಂಧದಲ್ಲಿ ಪ್ರಯೋಗವಾಗಿವೆ.

## ಹಸ್ತಿಮಲ್ಲನ ಪೂರ್ವಪುರಾಣ

ಹಸ್ತಿಮಲ್ಲನ ಪೂರ್ವಪುರಾಣ ಕಿರುಗ್ರಂಥವಾದರೂ ಪುರಾಣಶೈಲಿಯು ಅಡಕವಾಗಿ ಗ್ರಂಥಕ್ಕೆ ಒಂದು ಸಮಗ್ರ ಸ್ವರೂಪವನ್ನು ನೀಡಿದೆ. ಕಥೆಯೇನಿದ್ದರೂ ಹಂದರರೂಪದಲ್ಲಿದೆಯೇ ಹೊರತು ಅದಕ್ಕೆ ತುಂಬುರಸಪರಿಪಾಕದ ಸತ್ತ್ವವಿಲ್ಲ; ರೇಖಾಮಾತ್ರವಾಗಿದೆಯೇ ಹೊರತು ಬಣ್ಣದುಂಬಿದ ಚಿತ್ರವಿಲ್ಲ. ಇದರ ಹೆಗ್ಗಳಿಕೆಯೇನಿದ್ದರೂ ಪುರಾಣ ಕಾವ್ಯವನ್ನು ಸರಳ ಸುಭಗವಾಗಿ ನಿರೂಪಿಸಿರುವುದರಲ್ಲಿ ಮಾತ್ರ ಕಂಡುಬರುತ್ತದೆಯಾದರೂ ಅಲ್ಲಲ್ಲಿ ಕಾವ್ಯಗುಣವನ್ನು ಮಿಂಚಿಸಿರುವುದನ್ನು ಕಡೆಗಣಿಸುವಂತಿಲ್ಲ.

ಗ್ರಂಥವು ಎಲ್ಲ ಅಧ್ಯಾಯಗಳ ಪ್ರಾರಂಭದಲ್ಲಿಯೂ ಅಡಗಿರುವ 'ಶ್ರೀಮತ್‌ಸಕಲ ಜ್ಞಾನಸಾಮ್ರಾಜ್ಯಪದಮೀಯುಷೇ . . .' ಎಂಬ ಜಿನಸೇನಾಚಾರ್ಯರ ಮಂಗಳಶ್ಲೋಕದಿಂದ ಚತುರ್ವಿಂಶತಿ ತೀರ್ಥಂಕರರ ಮಂಗಳರೂಪದ ಕಂದಪದ್ಯದಿಂದ, ಪಂಚಪರಮೇಷ್ಠಿಗಳ ವಂದನಾರೂಪವಾದ ಗದ್ಯಭಾಗದಿಂದ ಪ್ರಾರಂಭವಾಗುತ್ತದೆ.

ಗ್ರಂಥದ ಆರಂಭದಲ್ಲಿ ಕವಿ ಲೋಕಾಕಾರದ ವರ್ಣನೆ, ಕಾಲದ ವರ್ಣನೆ, ಮನುಕುಲೋತ್ಪತ್ತಿಯ ವರ್ಣನೆಯನ್ನು ಮಾಡಿ—"ಆದಿಪರಮೇಶ್ವರನ ಪೂರ್ವಪುರಾಣದ ಕಥಾ

ಪೀಠಿಕೆಯಂ ಪ್ರತಿಷ್ಠಾಪಿಸಿಯಾವೃಷಭತೀರ್ಥಕರ ಚರಿತ್ರಮಂ ಪೇಳಲ್ಪಡುಗುಂ" (ಪ್ರಥಮ ಪರ್ವ) ಎಂದು ಸೂಚಿಸಿದ್ದಾನೆ.

ಜೈನ ಪುರಾಣದ ಕಥಾಪೀಠಿಕೆ ಸಾಮಾನ್ಯವಾಗಿ ಸಂಸ್ಕೃತಭೂಯಿಷ್ಠ ವಾಕ್ಯಖಂಡಗಳಿಂದ ಬರುವುದು ಪದ್ಧತಿ. ಆದರೆ ಹಸ್ತಿಮಲ್ಲನಲ್ಲಿ ಅಂತಹ ವಿಷಯಗಳೂ ಸಹ ಸರಳಗೊಂಡು ಮೈದಾಳುತ್ತವೆ. ಉದಾಹರಣೆಗೆ : "ಈ ಪದಿಮೂರನೆಯ ಮನುವಿಂಗಾತನ ತಂದೆಯಮಿತಗತಿಯೆಂಬಾತಂ ಮದುವೆಯಂ ಮಾಡಿದಂ, ತದಾದಿಯಾಗಿ ವಿವಾಹಕ್ರಿಯೆಗಳ್ ವರ್ತಿಕುಂ ಆಕಾಲದತ್ತಣಿನಮಳ್ಗಳಪುಟ್ಟು ಮಾಣ್ದುದು. ಓರೊರ್ವರ್ ಪುಟ್ಟಲಾದಿಯಾದುದು. ಆತಂ ಸ್ನಾನಾದಿಕ್ರಿಯೆಗಳಂ ವರ್ತಿಸಿದಂ" (ಪರ್ವ ೧). ಇಲ್ಲಿ ಬಂದಿರುವುದೆಲ್ಲ ಸರಳ ವಾಕ್ಯಗಳೇ. ಕವಿ ಬಾಲಪಾಠದಂತೆ ಬಿಡಿಬಿಡಿಯಾಗಿ ಪುರಾಣನಿರೂಪಣೆಯನ್ನು ಸರಳಗೊಳಿಸಿರುವುದು ಇಲ್ಲಿಯ ವಿಶೇಷವೇ ಆಗಿದೆ. 'ಉಭಯಭಾಷಾ ಚಕ್ರವರ್ತಿ' ಎನಿಸಿದ್ದರೂ ಕವಿ ಭಾಷಾಪಾಂಡಿತ್ಯ ಮೆರೆಯುವ ಆಸೆಯನ್ನು ತೋರಿಲ್ಲ. ಇದಕ್ಕೆ ಕಾರಣ ಕವಿಯ ಕಾವ್ಯೋದ್ದೇಶವೂ ಆಗಿದೆ ಎಂದು ಹೇಳಬಹುದು.

ಶ್ರೀಪುರುದೇವನ ಕಥೆಯಂ | ಪಾಪಹರಮನಖಿಳ ಜೀವತತಿ ತಿಳಿಯಲ್ ಸಂ
ಕ್ಷೇಪದೊಳತಿ ಮೃದುವಾಕ್ಯದ | ರೂಪದೆ ಬರೆದಂ ಸುಮುಕ್ತಿಭರದಿಂಗ(ಗು)ರುವಂ (ಪರ್ವ ii)

ಕಂದಪದ್ಯದ ಈ ಪುಟ್ಟ ವಿನ್ಯಾಸದಲ್ಲಿ ಕವಿ ಕಾವ್ಯದ ವಸ್ತು, ಉದ್ದೇಶ, ಶೈಲಿ ಮತ್ತು ಕಾವ್ಯಲಾಭವನ್ನು ಕುರಿತು ಹೇಳಿದ್ದಾನೆ. ಕಾವ್ಯವಸ್ತು ಪುರುದೇವನ ಕಥೆ. ಅಖಿಳಜೀವತತಿಗೆ ಅದನ್ನು ತಿಳಿಸುವುದೇ ಕಾವ್ಯದ ಉದ್ದೇಶ. ಶೈಲಿ ಸಂಕ್ಷೇಪ ಮತ್ತು ಮೃದುವಾಕ್ಯದ ರೂಪ; ಲಾಭ ಮುಕ್ತಿ ಲಾಭ. ಈ ಆದರ್ಶಪ್ರಾಯವಾದ ಗುರಿಯನ್ನು ಕವಿ ಅಚ್ಚುಕಟ್ಟಾಗಿ ನಿರ್ವಹಿಸಿದ್ದಾನೆ.

ತನ್ನ ಕಥಾಗುರಿಯನ್ನು ತಿಳಿಸಿದ ಕವಿ ಅಷ್ಟೇ ಭರದಿಂದ ಸಾಗಿ ಅಷ್ಟೇ ಆತುರದಿಂದ ಕಥಾಮುನ್ನಡೆಗೆ ತೊಡಗಿದ್ದಾನೆ. ವಿವರಣೆಗಳ ಗೋಜಿಗೆ ಹೋಗದೆ ಕಥೆಯ ಮುಖ್ಯ ಘಟ್ಟಗಳನ್ನು ಮಾತ್ರ ಕ್ರಮವಾಗಿ ಹೇಳಿಕೊಂಡು ಹೋಗಿದ್ದಾನೆ. ಉದಾಹರಣೆಗೆ :

> ಜಂಬೂದ್ವೀಪದಪರವಿದೇಹದ ಸೀತೋದಾನದಿಯ ಬಡಗಣ ತಡಿಯ ಗಂಧಿಳವಿಷಯದ ವಿಜಯಾರ್ಧಪರ್ವತದುತ್ತರ ಶ್ರೇಣಿಯಳಕಾಪುರಾಧಿಪನಪ್ರತಿಬಳಮಹಾರಾಜನ ಸತಿ ಮನೋಹರಿಗೆ ಮಹಾಬಲನೆಂಬ ಕುಮಾರನಾಗೆ ಯತಿ ಮಹಾರಾಜನೊಂದು ದಿವಸಂ ಕೆನ್ನೆಯ ನೆರೆಯಂ ಕಂಡು ವೈರಾಗ್ಯ ಪರಾಯಣನಾಗಿ ಮಹಾಬಳಂಗೆ ರಾಜ್ಯಮಂ ಕೊಟ್ಟೈನೂರರರಸಿಯರುಂ, ಸಾಸಿರರಸುಗಳ್ವೆರಸು ಗಣಧರ ಕೇವಲಿಗಳ ಸಮೀಪದೊಳ್ದೀಕ್ಷೆಗೊಂಡು ಕೇವಲ ಜ್ಞಾನಮಂ ಪಡೆದಂ (ಪರ್ವ ii).

ಕವಿ ಕಥೆಯನ್ನು ಸಂಕ್ಷೇಪವಾಗಿ ಮೃದುವಾಕ್ಯಗಳಿಂದ ಹೇಳುವಾಗ ಅಲ್ಲಲ್ಲಿಯೇ ಕಾವ್ಯೋಚಿತವಾದ ಪದ-ವಾಕ್ಯ ವಿನ್ಯಾಸಗಳನ್ನು ಮಿನುಗಿ ಮಿಂಚುವಂತೆ ಮಾಡಿದ್ದಾನೆ. ಕಾವ್ಯದಲ್ಲಿ ಆಗೊಮ್ಮೆ ಈಗೊಮ್ಮೆ ಎಂಬಂತೆ ಯಮಳ ಶಬ್ದಗಳು, ನುಡಿಗಟ್ಟುಗಳು, ಗಾದೆಗಳು, ಅಲಂಕಾರಗಳು, ನಾಟಕೀಯತೆ—ಈ ಮೊದಲಾದವು ಗೋಚರವಾಗುತ್ತವೆ. ಉದಾಹರಣೆಗೆ :

ಕೆಲವು ನುಡಿಗಟ್ಟುಗಳು : 'ಉಬ್ಬಸದಿಂದ ಪೋಗು' (ಪರ್ವ iii); 'ಪರರಕೀಳಿಲಂ

ಸಾರ್ದು' (ಪರ್ವ iv) (ಅನುಕರಣೆ); 'ಸಂಚಕಾರಂಗೊಂಬಂತೆ' (ಪರ್ವ v); 'ಬರೆಯಲ್ ಬ್ರಹ್ಮಂಗಂತೀರದು' (ಪರ್ವ v); 'ದೃಷ್ಟಿಗಾಣದೆ' (ಪರ್ವ x); 'ಅಚಲಿತಚಿತ್ತ' (ಪರ್ವ vii); 'ಮಂದಿಜಡರ್' (ಪರ್ವ ix); 'ಕಿಡಿಕಿಡಿವೋಗಿ' (ಪರ್ವ x).

ಗಾದೆಗಳು : 'ಯುಕ್ತಿಯಿಂದ ಮುಕ್ತಿಸಾಧಿಸಲಕ್ಕುಂ' (ಪರ್ವ iv); 'ಇರುಳ್ಕಂಡ ಕನಸಂ ಪಗಲೆಳ್ಚರುವಂತೆ' (ಜಿನಸೇನ ಪಂಪರ ಪ್ರಯೋಗ) (ಪರ್ವ v).

ಉಪದೇಶಾತ್ಮಕ ಹೇಳಿಕೆಗಳು : 'ಧರ್ಮದಿಂದಲ್ಲದೆ ವೈಭವಂ ದೊರೆಕೊಳ್ಳದು' (ಪರ್ವ iv); 'ಘ್ರಾಣೇಂದ್ರಿಯದೊಂದಕ್ಕೆ ಸಿಕ್ಕಿ ಇಂತು ತುಂಬಿ ಸತ್ತುದಕ್ಕಟಾ | ಪಂಚೇಂದ್ರಿಯ ಲಂಪಟರಪ್ಪ ನಮ್ಮ ವಿಷಯ-ವಿಷಯಂಗಳ್ಕೊಲುವುದಚ್ಚರಿಯಲ್ಲ' (ಪರ್ವ vi).

ಸಮಾಸೋಕ್ತಿಗಳು : 'ನಿದ್ರಾಲಸ್ಯಾಕ್ಷಿ ನಿಮೇಷ ಜರಾಶೋಕ ವಿಷಾದ ರಹಿತಮಂ' (ಪರ್ವ v); 'ಮೋಕ್ಷಲಕ್ಷ್ಮೀಕಟಾಕ್ಷವಿಕ್ಷೇಪ ಜನಿತಾನಂದ ಸುಖನಿಳಯನಾದಂ' (ಪರ್ವ x).

ಉಪಮೆಗಳು–ಅಲಂಕಾರಗಳು : 'ಸ್ವರ್ಗಾಪವರ್ಗಮಪ್ಪ ತಪೋರತ್ನಮಂ ನರಭೋಗ ಮೆಂಬ ತೌಡಿಂಗೆ ಮುಡಿಪಿ' (ಪರ್ವ iii); 'ಕೊಳೆತ ಕಡ್ಡಿಗೆ ಸಮಾನಂ ಮಾಡಿ' (ಜಿನಸೇನ ಪಂಪರ ಪ್ರಯೋಗ) (ಪರ್ವ v); 'ಸಕಲಕಾಮಿನೀ ಜನಮೆಂಬ ಮೃಗ ಸಮೂಹಂಬಳಸಿ ನೋಡುವಲ್ಲಿ' (ಪರ್ವ v); 'ನಿಮ್ಮ ಪಟಮೆಂಬ ಬಲೆಯೊಳ್ ತಮ್ಮಂತಪ್ಪ ಮೃಗಂಗಳ್ಸಿಕ್ಕು ವುದೇನರಿದು' (ಪರ್ವ v); 'ಕೇಶಮಂ ಮೋಹಪಾಶಮಂ ಪರಿದಂತೆ ಪರಿದು' (ಅನುಕರಣೆ) (ಪರ್ವ vii); 'ಪೌರ್ಣಮಿಯ ಚಂದ್ರನಂತೆ ಸಕಲಕಲಾಪರಿಪೂರ್ಣನಾಗಿ' (ಪರ್ವ vii); 'ಭವ್ಯಜನಂಗಳ್ಗೆ ಸುಖಮನೀವ ಕಾಮಧೇನು ಕಲ್ಪವೃಕ್ಷ ಚಿಂತಾಮಣಿ ಪುಟ್ಟುವಂತೆ ಪುಟ್ಟಿ' (ಅನುಕರಣೆ) (ಪರ್ವ viii); 'ಬಡವಂ ನಿದಾನಮಂ ಕಂಡಂತೆ ಆನಂದಬಟ್ಟು' (ಅನುಕರಣೆ) (ಪರ್ವ viii); 'ಭವ್ಯಜೀವಂಗಳೆಂಬ ಸಸಿಗಳೆಲ್ಲಂ ಕೊರಗಿರ್ದಪುವು' (ಅನುಕರಣೆ) (ಪರ್ವ ix); 'ಪ್ರಳಯಕಾಲದ ಸಿಡಿಲಂತೆ' (ಪರ್ವ x).

ಹಸ್ತಿಮಲ್ಲನ ಪೂರ್ವಪುರಾಣದಲ್ಲಿ ಬಳಕೆಯಾಗಿರುವ ಅಲಂಕಾರಗಳಲ್ಲಿ ಉಪಮೆ ಯದೇ ಮೇಲುಗೈ. ರೂಪಕಾಲಂಕಾರ ಎಲ್ಲೋ ಬೆರಳೆಣಿಸುವಷ್ಟು ಮಾತ್ರ ಬಳಕೆಯಾಗಿದೆ.

ಕವಿ ಅಲ್ಲಲ್ಲೇ ಚಿತ್ರೀಕರಿಸುವಂತಹ ಮಾತುಗಳನ್ನು ಹೇಳಿದ್ದಾನೆ. ಉದಾಹರಣೆಗೆ : 'ಶ್ರೀಮತಿ ಉಂಗುಟದಿಂ ನೆಲನಂ ಬರೆವುತಿಂತೆಂದಳ್' (ಪರ್ವ iv); 'ವಾಸವಂ ಮಗುಳ್ದಾ ಪಟಮಂ ನೋಡಿ ಇದು ದೇವಲೋಕವಿದೆನ್ನ ವಿಮಾನಮವಳೆನ್ನ ಪ್ರಾಣನಾಯಕಿ ಎಲ್ಲಿ ಹುಟ್ಟಿದಳೋ ಎಂದು ಕಪಟದಿಂ ಮೂರ್ಛಿತನಾಗಿ' (ಪರ್ವ v).

ಹೆಚ್ಚು ವಿವರವನ್ನು ನೀಡದೆ ಅನೇಕ ವಿಶೇಷಣಗಳನ್ನು ಪೋಣಿಸಿ ಆ ಸನ್ನಿವೇಶದ ಭಾವವನ್ನು ಕಲ್ಪಿಸಿದ್ದಾನೆ. ಉದಾಹರಣೆಗೆ :

ನಾಭಿರಾಜಮನುವಿನ ಉತ್ಪತ್ತಿಯನ್ನು ಹೇಳುವಾಗ ಆ ಮನುವಿನ ಹೆಗ್ಗಳಿಕೆಯನ್ನು ಸೂಚಿಸಿರುವ ವಿಧಾನವಿದು—'ಮನುಕುಲ ಚರಿತನುಂ ಉಭಯಕುಲ ಪರಿಜ್ಞನುಂ ಸದ್ಧರ್ಮ ದೀಪಕನುಂ ಜಗಜ್ಜನತಾ ಚೂಡಾಮಣಿಯುಂ ಜೈನಧರ್ಮ ರಕ್ಷಾಮಣಿಯುಂ ಅಭಿನವ ಕಾಮಧೇನುಂ . . . ಅಪ್ಪ ನಾಭಿರಾಜನೆಂಬ ಪದಿನಾಲ್ಕನೆಯ ಮನುಪುಟ್ಟಿದಂ' (ಪರ್ವ i).

ನಿರೂಪಣೆ ಕಿರಿದಾದರೂ ಅಡಕಗೊಂಡಿರುವ ಶೈಲಿಯಲ್ಲೇ ನಾಟಕೀಯತೆಯ ಸೊಬಗನ್ನು ಹಿಡಿದಿರುವುದಕ್ಕೆ ಕೆಲವು ಉದಾಹರಣೆಗಳು : ಸಮಾಧಿಗುಪ್ತ-ನಿರ್ನಾಮಿಕೆಯರ ಸಂಭಾಷಣೆ—

'ಎಲೆ ಮಗಳೆ ಕೆಟ್ಟೆಯಲಾ, ಸಂಸಾರದುಃಖಮಂ ಮಾಡಿಕೊಂಡೆಯಲಾ'

'ಎಲೆ ಮುನೀಶ್ವರ, ನಾನರಿಯದೆ ಮಾಡಿದೆಂ ಕ್ಷಮಿಸು' (ಪರ್ವ iv)

ವಜ್ರಜಂಘ-ಪಂಡಿತೆಯರ ಸಂಭಾಷಣೆ—

'ಪಟಮನಿಲ್ಲಿಗಾರ್ತಂದರ್?'

'ಪಟಮನಾಂತಂದೆನ್—ಎಲೆ ವಜ್ರಜಂಘಾ ಚಿಂತೆಯಂ ಬಿಡು'.

ನಮಿವಿನಮಿಗಳ ಪ್ರಸಂಗ—

'ಎಲೆ ಸ್ವಾಮೀ, ಎಲ್ಲರ್ಗೆ ಸೀಮೆಗಳಂ ಕೊಟ್ಟೆ, ನಮಗಂ ಸೀಮೆಯಂ ಪಾಲಿಸು'

'ಆಂ ಧರಣೇಂದ್ರಂ, ಆದಿನಾಥನ ಕಿಂಕರಂ, ದೇವನೆನ್ನೊಡನೆ ನಿಮಗೆ ಬೇಕಾದ ಸೀಮೆಯಂ ಕೊಡೆಂದು ನಿರೂಪಿಸಿದಂ, ನಿಮಗೆ ಬೇಕಾದ ಸೀಮೆಯನಾಂ ಕೊಡುವೆಂ ಬನ್ನಿಂ'

'ದೇವಂ ನಮ್ಮ ಮೊಗದ ಮುಂದೆ ನಿರೂಪಂಗೊಟ್ಟಲ್ಲದೆ ಬಾರೆವು' (ಪರ್ವ viii).

ಹಸ್ತಿಮಲ್ಲನ ಪೂರ್ವಪುರಾಣ ಗದ್ಯಶೈಲಿಯಲ್ಲಿ ಸರಳವಾಕ್ಯಗಳಲ್ಲದೆ ಮಿಶ್ರವಾಕ್ಯಗಳ ಸಂಯೋಜನೆಗಳೂ ಕಂಡುಬರುತ್ತವೆ. ಪುಟಗಟ್ಟಲೆ ಓಡುವ ಇಂತಹ ಮಿಶ್ರವಾಕ್ಯಗಳೇ ಹೆಚ್ಚು. ಉದಾಹರಣೆಗೆ :

> 'ನೀನುಂ ಮೂರನೆಯ ಭವದೊಳ್ಮುಕ್ತನಪ್ಪೆಯೆಂಬುದು, ಸಂತಸಂ ಬಟ್ಟು ಮುನಿಗಳ್ಗೆರಗಿ ಬೇಗದಿಂ ಬಂದುಕನಸುಂಗಳಂ ಪೇಳ್ದು, ನೀನಾಸನ್ನಭವ್ಯನೆಂಬುದುಮಂ ನಿನಗೊಂದೆ ತಿಂಗಳಾಯುಷ್ಯಮೆಂಬುದುಮಂ ದಿವ್ಯಜ್ಞಾನಿಗಳಿಂದರಿದು ಬಂದೆನದರಿಂದಿನ್ನಾದೊಡಂ ಭೋಗಾಕಾಂಕ್ಷೆಯಂ ಬಿಟ್ಟು ತಪಂಗೊಳ್ಳಿಸೆ, ನೀಂ ಪೇಳ್ದುದೊಳ್ಳಿತೆಂದೊಡಂಬಟ್ಟು, ತನ್ನರಮನೆಯುದ್ಯಾನವನದ ಚೈತ್ಯಾಲಯದೊಳೆಂಟು ದಿನಂ ಮಹಾಮಹಿಮೆಯೆಂಬ ಜಿನಪೂಜೆಯಂ ಮಾಡಿ ಮತ್ತೆ ತನ್ನ ಮಗನಪ್ಪತಿಬಲಂಗೆ ರಾಜ್ಯಮಂ ಕೊಟ್ಟು ಸಕಲ ಜನಸಮೇತಂ ಪುರಮನರಮನೆಯಂ ಪೊರಮಟ್ಟು ಸಿದ್ಧಕೂಟ ಚೈತ್ಯಾಲಯಮಂ ತ್ರಿಪ್ರದಕ್ಷಿಣಂಗೊಂಡು ಜಿನೇಶ್ವರನಂ ಪೂಜಿಸಿ ದೀಕ್ಷೆಗೊಳಲುದ್ಯುಕ್ತನಾಗೆ ಸ್ವಯಂಬುದ್ಧನೆ ದೀಕ್ಷಾಚಾರ್ಯನಾಗೆ ಪಂಚಪರಮೇಷ್ಠಿಗಳ ಪಾದಸಮೀಪದೊಳ್ ಬಾಹ್ಯಾಭ್ಯಂತರ ಪರಿಗ್ರಹಪರಿತ್ಯಾಗ ಪೂರ್ವಕಂ ಚತುರ್ವಿಧಾಹಾರ ಶರೀರ ನಿವೃತ್ತಿಯಂ ಮಾಡಿಸಿ, ತಾನುಂ ದೀಕ್ಷೆಗೊಳೆ . . .'
>
> 'ಸ್ವರ್ಗಲೋಕಸುಖಾಮೃತಸಾಗರದೊಳೋಲಾಡುತಮಿರ್ಪಂ' (ಪರ್ವ ii)

—ಈ ಮಾದರಿಯಲ್ಲಿ ಸ್ವಯಂಬುದ್ಧನು ಮಹಾಬಲನಿಗೆ ನಿರೂಪಿಸುವ ಕನಸಿನ ವೃತ್ತಾಂತದಿಂದ ಹಿಡಿದು ಮಹಾಬಲನು ಲಲಿತಾಂಗನಾಗಿ ಜನಿಸುವ ವೃತ್ತಾಂತದವರೆಗೆ ಸಾಗುತ್ತದೆ.

ಈ ಕೃತಿಯಲ್ಲಿ ನಾಲ್ಕು ಸಂಸ್ಕೃತ ಶ್ಲೋಕಗಳೂ ಎರಡು ಕಂದಪದ್ಯ, ಒಂದು ಸ್ರಗ್ಧರಾವೃತ್ತವೂ ಬಳಕೆಯಾಗಿವೆ. ಒಂದು ಸಂಸ್ಕೃತ ಶ್ಲೋಕವು ಸ್ತುತಿರೂಪದಲ್ಲಿದ್ದು ಉಳಿದ ಮೂರು ಆದಿದೇವನ ಭವನಿರೂಪಣೆಯಲ್ಲಿ ಬಳಕೆಯಾಗಿವೆ. ಕಂದಪದ್ಯಗಳಲ್ಲಿ

ಒಂದು ಸ್ತುತಿರೂಪದ್ದು, ಮತ್ತೊಂದು ಗ್ರಂಥದ ಧ್ಯೇಯವನ್ನು ಹೇಳುವಂಥದ್ದು. ಸ್ರಗ್ಧರಾ ವೃತ್ತದಲ್ಲಿ ಭಗವಂತನ ಸ್ತುತಿಯಿದ್ದು ಅದು ಭಕ್ತಿಸ್ವರೂಪದ್ದಾಗಿದೆ.

ಹಸ್ತಿಮಲ್ಲನು ಪಂಪನ ಆದಿಪುರಾಣವನ್ನು ಅನುಸರಿಸಿದ್ದರೂ ಅಲ್ಲಿ ತೋರುವ ಕಾವ್ಯಪ್ರತಿಭೆ ಇಲ್ಲಿ ಇಲ್ಲ. ಸಂಕ್ಷೇಪವಾಗಿ ಹೇಳುವುದಷ್ಟೇ ಕವಿಯ ಉದ್ದೇಶ. ಅಲ್ಲಲ್ಲಿಯೇ ಪೂರ್ವಕವಿಗಳಲ್ಲಿ ಬರವ ಕೆಲವು ಹೇಳಿಕೆಗಳನ್ನು ದೃಷ್ಟಾಂತಗಳನ್ನು ತೆಗೆದುಕೊಂಡಿದ್ದಾನೆ. "ಹಸ್ತಿಮಲ್ಲನ ಕಥಾಗದ್ಯ ಸ್ವಲ್ಪಮಟ್ಟಿಗೆ ಚಂಪೂಗ್ರಂಥಗಳ ವಚನಗದ್ಯವನ್ನು ಹೋಲುತ್ತದೆ. ವಾಕ್ಯಗಳು ದೀರ್ಘವಾಗಿವೆ. ಅಚ್ಚುಕಟ್ಟಾಗಿ ಸರಳ ಸಂಕ್ಷಿಪ್ತವಾಗಿ ಕಥೆ ಹೇಳುವ ಪ್ರಯತ್ನ ಇಲ್ಲಿ ಕಾಣಿಸುತ್ತದೆ. ಆದರೆ ಗದ್ಯಕಾವ್ಯ ಎನ್ನುವ ಅರ್ಹತೆಯನ್ನು ಪಡೆಯುವುದಿಲ್ಲ. 'ಚಾವುಂಡರಾಯಪುರಾಣ'ದ ಗದ್ಯದಷ್ಟು ದೇಸಿತನ ಹಸ್ತಿಮಲ್ಲನ ಗದ್ಯದಲ್ಲಿ ಇಲ್ಲ. ಗ್ರಾಂಥಿಕತೆ ಹೆಚ್ಚು. ಒಮ್ಮೊಮ್ಮೆ ಭಾವವನ್ನು ಹೆಚ್ಚು ಪರಿಣಾಮಕಾರಿಯಾಗಿಸುವ ಪ್ರಯತ್ನ ಹಸ್ತಿಮಲ್ಲನಲ್ಲಿದೆ."[೩೮]

## ನಾಗರಾಜನ ಪುಣ್ಯಾಸ್ರವದ ಆದೀಶ್ವರರ ಕಥೆ

ಕಾವ್ಯದ ಪ್ರಾರಂಭದಲ್ಲಿ ಕವಿ ನಾಗರಾಜನು ಕಾವ್ಯರಚನೆಯನ್ನು ಕುರಿತು ಸಾಕಷ್ಟು ತನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾನೆ. ಪೊನ್ನನ 'ಓಜೆ', ಪಂಪನ 'ರೀತಿ', ರನ್ನನ 'ಪೊಸಮಾತು', ಗಜಾಂಕುಶನ 'ಅರ್ಥಗೌರವ', ಬಂಧುವರ್ಮ-ಗುಣವರ್ಮರ 'ಜಾಣ್ನುಡಿ', ನಾಗಚಂದ್ರನ 'ದೇಸಿ' ಇವುಗಳು ತನ್ನ ಕಥಾಪ್ರಬಂಧದಲ್ಲಿ ನೆಲಸಿರಲೆಂದು ಕವಿಯ ಆಶಯ (i-೧೮). ಆತನ ಪ್ರಕಾರ ಕವಿಯಾಗಬೇಕಾದರೆ ಮುಖ್ಯವಾಗಿ ಕಾವ್ಯದಲ್ಲಿ ಈ ಗುಣಗಳು ಇರಲೇಬೇಕು. ಹೊಸಬಗೆಯ ದೇಸಿಗಳಿಂದ ಕೂಡಿದ ಔಚಿತ್ಯಪೂರ್ಣವಾದ ಅರ್ಥಗೌರವಸಮೃದ್ಧವಾದ ರಸಭಾವಾಲಂಕಾರಗಳಿಂದ ರಂಜಿಸುವ ಕೃತಿಯೇ ಶ್ರೇಷ್ಠ ಕಾವ್ಯವೆಂಬುದು ಆತನ ಅಭಿಪ್ರಾಯ (i-೨೦). ಪದಗಳಿಗಾಗಿ ಕುದಿಕುದಿದು ಆಕಳಿಸಿ ಬಿಕ್ಕಳಿಸಿ ಕೊನೆಗೆ ಎಂಥದೋ ಎರಡು ಪದಗಳನ್ನು ಸರಿಗೊಳಿಸಿದ್ದಾದರೆ ಕಾವ್ಯ ಶೋಭಿಸುವುದಿಲ್ಲ. ಇಂತಹ ಕವಿಗಳಿಲ್ಲದಿದ್ದರೆ ಇಳೆಯೇನೂ ಶೂನ್ಯವಾಗದು ಎಂದು ನಿಷ್ಠುರವಾಗಿಯೇ ನುಡಿದಿದ್ದಾನೆ.

ನಾಗರಾಜನ ಕಾವ್ಯಲಕ್ಷಣಗಳು ಆದರ್ಶಪ್ರಾಯವಾದವು. ಈತನ ಮಾತುಗಳು ಕೇವಲ ಡಂಭಾಚಾರದ ಮಾತುಗಳಲ್ಲ. 'ಪುಣ್ಯಾಸ್ರವ' ಒಂದು ಮತೀಯ ಗ್ರಂಥವಾದರೂ ಕಾವ್ಯಸತ್ತ್ವ ಕಳೆಗುಂದದಂತೆ ಸುಂದರವಾಗಿ ರಚಿಸಿದ್ದಾನೆ. ಶಾಸ್ತ್ರ ತತ್ತ್ವಬೋಧೆಯನ್ನು ಕಥೆಗಳ ಮೂಲಕ ಚಂಪೂಶೈಲಿಯಲ್ಲಿ ಪ್ರತಿಪಾದಿಸಿದ್ದಾನೆ.

ಸಂಸ್ಕೃತ ಪುಣ್ಯಾಸ್ರವವನ್ನು ಕನ್ನಡಿಸಿರುವ ಈ ಕೃತಿಯಲ್ಲಿ ಕವಿಗೆ ಸ್ವಾಭಾವಿಕವಾಗಿಯೇ ಸ್ವಾತಂತ್ರ್ಯ ಕಡಿಮೆ. "ತನ್ನ ಕೃತಿಯನ್ನು ಕಾವ್ಯದ ಮಟ್ಟಕ್ಕೇರಿಸಬೇಕೆನ್ನುವುದು ನಾಗರಾಜನ ಹಠ. ವಸ್ತು, ಪಾತ್ರ, ಸ್ವರೂಪ, ಸ್ವಭಾವಗಳನ್ನು ಬದಲಿಸುವ ಗೋಜಿಗೆ ಕೈಹಾಕದೆ ಮೂಲಕ್ಕೆ ನಿಷ್ಠೆಯಿಂದಿದ್ದು, ಕತೆಯ ಎಲುಬು ಹಂದರದಲ್ಲಿ ಅಲಂಕಾರ ವರ್ಣನೆಗಳ ರೂಪದ ರಕ್ತಮಾಂಸಮಜ್ಜೆಗಳನ್ನು ತುಂಬಲು ಪ್ರಯತ್ನಿಸಿದ್ದಾನೆ . . . ಕತೆಯ ರಚನೆ ಏರುಪೇರಾಗದಂತೆ ಮೂಲಾಂಶಗಳನ್ನು ಕೈಬಿಡದೆ, ಕತೆಯ ಓಟಕ್ಕೆ ತೊಡರುಗಾಲಾಗ

ದಂತೆ, ಏಕತಾನತೆ ಸೋತು ಬೇಸರ ನೀಗಿ ವಾಚಕರ ಮನಸ್ಸು ಪ್ರಫುಲ್ಲವಾಗುವಂತೆ, ವಿಷಯಗಳು ಪ್ರಸ್ಫುಟಗೊಂಡು ರಮಣೀಯವಾಗುವಂತೆ, ತಾತ್ತ್ವಿಕತೆಯೊಡನೆ ಭಾವ ಬೆಸೆದು ಹೊಸ ಮೆರುಗು ಮೂಡುವಂತೆ ನಾಗರಾಜ ಶ್ರಮಿಸಿದ್ದಾನೆ."[೩೯]

ಪಾಂಡಿತ್ಯವನ್ನು ಮೆರೆಯುವ ಹೇರಾಸೆ ತೋರದೆ ಚಂಪೂಶೈಲಿಯಲ್ಲಿಯೂ ಸರಳತೆಯನ್ನು ಸಮೀಕರಿಸಿರುವುದು ಈತನ ವೈಶಿಷ್ಟ್ಯ. ದೀರ್ಘ ಸಮಾಸಗಳಾಗಲಿ, ದೀರ್ಘ ವಾಕ್ಯಗಳಾಗಲಿ ಹೆಚ್ಚಾಗಿ ಇಲ್ಲ. ಸುದೀರ್ಘವರ್ಣನೆಗೆ ಹೋಗುವುದಿಲ್ಲ. ಈ ಭಾಗದಲ್ಲಿ ಎಡೆಪಡೆದಿರುವ ವರ್ಣನಾಭಾಗವೆಂದರೆ ಕಾಲವರ್ಣನಾ ಭಾಗ ಮತ್ತು ಸಮವಸರಣ ವರ್ಣನಾ ಭಾಗಗಳು, ಅಷ್ಟೇ. ಅವನ್ನು ಸಹ ಕವಿ ಹೆಚ್ಚು ಲಂಬಿಸಲು ಹೋಗಿಲ್ಲ.

ದಾನದ ಮಹಿಮೆಯನ್ನು ವರ್ಣಿಸುವಾಗ, ದಾನದಿಂದುಂಟಾಗುವ ಅನೇಕ ಫಲಪ್ರಾಪ್ತಿಗಳನ್ನು ವಿವರಿಸುವಾಗ ಕವಿ ಆದೀಶ್ವರರ ದಾನಮಹಿಮೆಯ ಕೊಂಡಾಟದಿಂದಲೇ ಕಥೆಯನ್ನು ಪ್ರಾರಂಭಿಸುತ್ತಾನೆ. ದಾನವು 'ಸತ್ಕುಲಸಂಭವವಾದುದು' ; 'ನುತಗುಣಾಳಂಕಾರ ಸಾರೋದಯವಾದುದು'; 'ಯಶೋವಲ್ಲೀ ವಿತಾನಾಸ್ಪದವಾದುದು'; ಅಲ್ಲದೆ ಅದು 'ಮುಕ್ತಿವಧೂಸ್ವಯಂವರಗೃಹ'ವೂ, 'ಸುಖಾಶ್ರಯ'ವೂ ಆದುದಾಗಿದೆ. ಆದ್ದರಿಂದ ಈ ವಿಶ್ವದಲ್ಲಿ'ದಾನಿಯಿಂದಧಿಕರ್ ಯಾರ್?' ಎಂದು ದಾನಿಯನ್ನು ಹಾಗೂ ದಾನದ ಹಿರಿಮೆಯನ್ನು ಅತ್ಯಂತ ಉತ್ಸಾಹದಿಂದ ಕೀರ್ತಿಸಿದ್ದಾನೆ. ಕಥೆ ಪ್ರಾರಂಭವಾಗುವುದೂ ಕೂಡ ಶ್ರೀಮತಿ ವಜ್ರಜಂಘರು ಮುನಿಗಳಿಗೆ ದಾನವನ್ನು ನೀಡಿದ ಸನ್ನಿವೇಶದಿಂದ; ಅದಾದರೂ ತೀರ್ಥಂಕರರನ ಕಥೆಯಲ್ಲಿ ಬರುವ ಪ್ರಥಮ ಆಹಾರದಾನದ ಸನ್ನಿವೇಶವಾಗಿದೆ. ಉಳಿದ ಆದಿತೀರ್ಥಂಕರನನ್ನು ಕುರಿತ ಚರಿತ್ರೆಗಳಲ್ಲಿ ಕಥೆ ಪುರಾಣ ಪೀಠಿಕೆಯಿಂದ ಪ್ರಾರಂಭವಾದರೆ ಇಲ್ಲಿ ದಾನದ ಮಹಿಮೆಯನ್ನು ನಿರೂಪಿಸುವುದರಿಂದ ಪ್ರಾರಂಭವಾಗುತ್ತದೆ.

. . . . . ವಜ್ರಜಂಘ ಭೂ
ತಳಪತಿ ದಾನದೊಂದು ಫಲದಿಂ ಧರಣೀವರನಾಗಿ ತನ್ನನ
ಲ್ಲಳುವೆರಸಿಂದ್ರಲೋಕಸುಖಮಂ ಪಡೆದಕ್ಷಯಸೌಖ್ಯಲಕ್ಷ್ಮಿಯೊಳ್
ನೆಲಸಿದನೆಂದಡೆನ್ನಳವೆ ಪೇಳ್ವಡೆ ದಾನಗುಣೋನ್ನತಿಯಂ (X-೩೫)

ಎಂದು ಹೇಳಿ ಕಥೆಯನ್ನು ಪ್ರಾರಂಭಿಸಿದ್ದಾನೆ. ಕಥೆ ಪೂರ್ವಪೀಠಿಕೆಯನ್ನು ನೀಡಿರುವ ರೀತಿ ಉಳಿದ ಆದಿತೀರ್ಥಂಕರರನ ಕಾವ್ಯಗಳಿಗಿಂತ ಭಿನ್ನವಾಗಿದೆ. ಪುರಾಣದ ಚೌಕಟ್ಟಿನಲ್ಲೇ ಕಥೆಯನ್ನು ಹೇಳುವ ನಿರ್ಬಂಧವನ್ನು ಹಾಕಿಕೊಂಡಿಲ್ಲ.

ದಾನಮಹಿಮೆಯಿಂದ ಪ್ರಾರಂಭಿಸಿದಾತ ಮುಖ್ಯ ಕಥೆಯತ್ತ ತ್ವರಿತಗತಿಯಲ್ಲಿ ಧಾವಿಸಿದ್ದಾನೆ :

ಜಂಬೂದ್ವೀಪದಪರವಿದೇಹದ ಗಂಧಿಳವಿಷಯದ ವಿಜಯಾರ್ಧಪರ್ವತದುತ್ತರ ಶ್ರೇಢಿಯಳಕಾಪುರಾಧಿನಾಥಂ ವಿದ್ಯಾಧರನತಿಬಳನಾತನ ಮನೋರಮೆ ಮನೋಹರಿಯವರಿಗೆ ಮಹಾಬಳನೆಂಬ ಮಗಂ ಪುಟ್ಟಲಾತಂಗತಿಬಳಂ ರಾಜ್ಯಮಂ ಕೊಟ್ಟು ತಪಂಗೊಂಡು ಕೇವಳಿಯಾಗಿ ಮೋಕ್ಷಲಕ್ಷ್ಮೀವಲ್ಲಭನಾದಂ ಇತ್ತಲ್ ಮಹಾಬಳಂ . . .

ಎಂದು ಶೀಘ್ರಗತಿಯಲ್ಲಿ ಯಾವ ವರ್ಣನಾಂಶವನ್ನೂ ನೀಡದೆ ಸಾಗಿದ್ದಾನೆ. ಮುಖ್ಯ ಕಥೆಯ ಮುಂದೆ ಉಳಿದ ಅಂಶಗಳು ಕವಿಗೆ ಗೌಣವಾಗುತ್ತವೆ. ಆದರೆ ಮುಖ್ಯಾಂಶಗಳನ್ನು

ಹೇಳುವಾಗ ಚಾಮುಂಡರಾಯ ಮತ್ತು ಹಸ್ತಿಮಲ್ಲರಂತೆ ಆತುರವನ್ನು ತೋರದೆ ವರದಿ ರೂಪದ ಶೈಲಿಯನ್ನು ಬಿಟ್ಟು ಸ್ವಲ್ಪ ವಿವರಣೆಗಳನ್ನು ನೀಡಿದ್ದಾನೆ. ಪುಣ್ಯಾಸ್ರವದ ಆದೀಶ್ವರರ ಕಥಾಭಾಗದಲ್ಲಿ ಈತನ ಭಾಷಾ-ಶೈಲಿಗಳಲ್ಲಿ ಕಂಡುಬರುವ ಮುಖ್ಯಾಂಶಗಳನ್ನು ಗಮನಿಸಿದರೆ ಈ ಕೆಳಗಿನ ಕೆಲವು ಅಂಶಗಳು ಗೋಚರವಾಗುತ್ತವೆ. ಇಲ್ಲಿ ಕೆಲವು ಉದಾಹರಣೆಗಳನ್ನು ಗಮನಿಸಬಹುದು.

ಕವಿ ಆರಿಸಿಕೊಂಡಿರುವ ಮಾಧ್ಯಮ ಹಳಗನ್ನಡವಾದರೂ ಆ ಕಾಲದ ಭಾಷಾಪ್ರಭಾವದಿಂದ ತಪ್ಪಿಸಿಕೊಳ್ಳಲಾಗಿಲ್ಲ. ವ್ಯಂಜನಾಂತವಿರಬೇಕಾದ ಎಷ್ಟೋ ಎಡೆಗಳಲ್ಲಿ ಸ್ವರಾಂತವಿದೆ. ಉದಾಹರಣೆಗೆ : 'ಸಮಯದಲ್ಲಿ' (ಅಧಿಕಾರ ix); 'ರಾತ್ರಿಯೊಳು' (ಅ. ix); 'ಇಂತೆಂದಳು' (ಅ.ix); 'ಪರಿಗ್ರೈಯುತ್ತಿರಲು' (ಅ. ix); 'ಅವಸರದಲ್ಲಿ' (ಅ. ix); 'ನೆಗಳಲು' (ಅ. ix); 'ಆ ಕಾಲದಲ್ಲಿ' (ಅ. ix); 'ಎನಲು' (ಅ. ix); 'ಸಮಯದೊಳು' (ಅ. x); 'ಕಾಲದೊಳು' (ಅ. x); 'ಸಮಕ್ಷದೊಳು' (ಅ. x); 'ಸರ್ವಾರ್ಥಸಿದ್ಧಿಯೊಳು' (ಅ. x); 'ಗರ್ಭದೊಳು' (ಅ. x); 'ಪೋದರು' (ಅ. x); 'ಇತ್ತಲು' (ಅ. x); 'ಉದ್ಯಾನದಲ್ಲಿ' (ಅ. x).

ದೇಸೀ ಪದಗಳು : 'ತೂಗೆಗಂಪಲ್' (ಅ. ix); 'ಖೇಡಕುಳಿ' (ಅ. ix); 'ಪಾಸುವಲೆ' (ಅ. ix); 'ಗೂಂಟವಲೆ' (ಅ. ix); 'ಪೆಣ್ಗೂಸು' (ಅ. ix).

ನಾಗರಾಜನಲ್ಲಿ ಸಂಸ್ಕೃತಭೂಯಿಷ್ಠವಾದ ಭಾಷೆಯ ಹೊನಲು ಕಡಿಮೆಯೆಂದೇ ಹೇಳಬೇಕು. ಅಲ್ಲಲ್ಲಿ ಆತ ತೋರಿರುವ ಸಂಸ್ಕೃತಭೂಯಿಷ್ಠ ಶೈಲಿಗೆ ಕೆಲವು ಉದಾಹರಣೆಗಳು :

> 'ಸ್ವಸ್ತಿಕಚ್ಛತ್ರ ಚಾಮರ ವೃಷಭಮೀನವಾನರ ಚಿಹ್ನಾಂಕಿತಂಗಳಪ್ಪ ಧ್ವಜಂಗಳಲ್ಲಿಂದತ್ತ ರಜತಮಯಶಾಲದಿಂದೊಳಗೆ . . . ' (ಅ. x); 'ನಿಟಿಳತಟಘಟಿತಕರಕಿಸಲಯದಧರಪಲ್ಲವಕ್ಕೆ ಹಸ್ತಾಂಬುಜಮನಡ್ಡಮಿಕ್ಕಿ . . .' (ಅ. x).

ಹೀಗೆ ಕ್ವಚಿತ್ತಾಗಿ ಸಂಸ್ಕೃತಪದಗಳು ಕೆಲವೆಡೆ ಮೇಲ್ಸೈಯಾಗಿ ಕಂಡುಬಂದರೂ ಅವು ಈಗಾಗಲೇ ಕನ್ನಡಕ್ಕೆ ರೂಢಿಯಾಗಿರುವ ಪದಗಳೇ ಆಗಿವೆ.

ಕೆಲವು ನುಡಿಗಟ್ಟುಗಳು : 'ಕಂಠಗತಪ್ರಾಣನಾಗುತ್ತಲ್' (ಅ. ix); 'ತಾಗೆ ತನ್ನ ಕಿವಿಯಂ' (ix-೪೨); 'ಜವನ ಬಾಯ್ಗೆ ಪಕ್ಕಾಗು' (ಅ. ix); 'ಪಾಡಳಿ' (ix-೪೫); 'ಕಾಲನ ಬಾಯ್ದುಡುಕಿಂಗೊಳಗಾಗು' (ix-೪೬); 'ಗುಡಿಗಟ್ಟಿಕೊಂಡು ಬಂದು' (ಅ-ix); 'ನಾಡುಂ ಬೀಡುಂ ಪೋಗಲು' (ಅ-ix); 'ನಡುಗಿದತ್ತು ಲೋಕಂ' (x-೧೩).

ಇಲ್ಲಿ ಬಳಕೆಯಾಗಿರುವ ಅರ್ಥಾಲಂಕಾರಗಳಲ್ಲಿ ಉಪಮೆಯದೇ ಮೇಲುಗೈ. ಅಲ್ಲೊಂದು ಇಲ್ಲೊಂದು ಎಂಬಂತೆ ಕವಿಸಮಯ ಮಾದರಿಯ ರೂಪಕಾಲಂಕಾರಗಳು ಇವೆ. ಪರ್ಯಾಯೋಕ್ತಿ ಮೊದಲಾದ ಅಲಂಕಾರಗಳ ಬಳಕೆಯೂ ಬೆರಳೆಣಿಕೆಯವು.

ಉಪಮೆ : 'ಪಿರಿದೆನಿಸದಿರ್ದ ದಾಹಮೊಡಲಂ ಸುಡೆ ಬೇಸಗೆಕಾಲದಲ್ಲಿ ದಳ್ಳುರಿವೆರಸಿರ್ದ ದಾವಶಿಖಿಯಂತಿರಲ್' (ix-೩೬); 'ವಿಷಮಾರಿಸಲ್ ಪಸುರೇಱಿದ ಪೊನ್ನ ಕರುವಿನಿರವಂ ಪೋಲ್ತಂ' (ix-೩೯); 'ಚಾರಣಮುನೀಂದ್ರರ ಮಧ್ಯದೊಳು ತಾರಾಗಣದ ನಡುವಣ ಕೈರವ ಬಂಧು ವಿರ್ಪಂತಿರ್ದ ಪಿಹಿತಾಸ್ರವ ಭಟಾರಕರಂ' (ಅ-ix); 'ಮಲೀಮಸ

ಫಲಮಂ ಬೆಳಸಲ್ಕೆ ಬೀಜಮಿಕ್ಕುವ ತೆಱದಿಂ' (ix-೪೪); 'ನಿನ್ನ ವದನಾಂಬುಜಮಿಂದು ವಿನೂತ ಚಂದ್ರಿಕಾಳೋಕಮನಾಂತವೊಲ್ ಕರಗಿ ಪಾಡಳಿದಿರ್ದಪುದು' (ix-೪೫); 'ಅಂಗ ವಲ್ಲಿ ನಿಬ್ಬಾಕುಳಿತೋಗ್ರಚಂಡಕರತಾಪಮನಾಂತವೊಲಿರ್ದುದು' (ix-೪೫); 'ಕಲಿಯಂ ಮೂದಲಿಸಿದಂತಾಗಿ' (ಅ-x); 'ಮಿಂಚುಸಂಚಳಿಸಿದಂತದೃಶ್ಯಮಾಗಲ್' (ಅ-x); 'ಮೃತ್ತಿಕೆ ಗಳೆದಿರ್ದ ಪೊನ್ನ ಕರುವೆನಲೆಸೆದಂ' (x-೩೨).

ಕೆಲವು ರೂಪಕಗಳು : 'ವಚನವಜ್ರಘಾತದಿಂ ನುಚ್ಚುನೂಱುಮಾಡಿ' (ಅ. ix); 'ಸುರಸೌಖ್ಯಸಾರಾಮೃತಶರನಿಧಿ' (ix-೪೨); 'ಮಧುಕರ ಕುಂತಳೆ' (ix-೪೩).

ಪರ್ಯಾಯೋಕ್ತಿ :

'ಪಂಡಿತೆಯ ಹೃದಯ ರತ್ನಕ | ರಂಡದೊಳ್ ಕನ್ನೆ ಬಯ್ತ ಕುಱುಪಿನ ತೊಡವಂ
ಪಂಡಿತೆಯ ಕಿವಿಗೆ ನವಮಣಿ | ಮಂಡನಮಂ ಮಾಡಿದಂ ಕುಮಾರನಾಗಳ್' (ix-೪೯)

ಶಬ್ದಾಲಂಕಾರಗಳಲ್ಲಿ ಅನುಪ್ರಾಸಕ್ಕೆ ಹೆಚ್ಚು ಎಡೆ ದೊರೆತಿದೆ. ಪದ್ಯಗಳಲ್ಲಿ ಕಂಡುಬರು ವಂತೆಯೇ ಗದ್ಯದ ನಡೆಯಲ್ಲಿಯೂ ಅಲ್ಲಲ್ಲಿ ವೃತ್ತ್ಯನುಪ್ರಾಸ ಕಂಡುಬರುತ್ತದೆ.

ವೃತ್ತ್ಯನುಪ್ರಾಸ : 'ರಸಮಂ ತುಂಬಿ ಒಡಗೊಂಡು ಪೋಗಿಯೋಲಾಡಿಸಲವನಾನಂದ ದಿಂದೀಸಿದುಡುಂಬಿರಿದು ಕುಡಿದು ನೋಡಿ' (ಅ. ix); 'ಆತ್ಮೀಯ ಮಕುಟಮಣಿಗಣ ಮಯೂಖಿ' (ಅ. x); 'ಕಳ್ಳರೊಡನಾಡಿ ನಾಡೊಳ | ಗುಳ್ಳೊಡವೆಯನೆಯ್ದೆ ಕಳ್ವ' (ಅ. ix-೫೧); 'ಭೋರೆಂದವತರಿಸೆ ಕಂಡು ದಂಪತಿಗಳು ಬಂ | ದೋರಂತಿರೆ ವಂದಿಸಿ . . .' (ಅ. x-೨)

ಲಾಟಾನುಪ್ರಾಸ : ' ಪಾಸುವಲೆ ಗೂಂಟವಲೆಮ | ತ್ತಾಸೆಯಬಲೆ ತಡಿಕೆವಲೆಗಳೆಂಬವ ನವನ' (ix-೩೭) ನೀನೆಕೃತಾರ್ಥಂ ಜನದೊಳು | ನೀನೆಮಹಾಪುಣ್ಯಮೂರ್ತಿಯೆನುತವ ನೀಶಂ | ದಾನಶ್ರೇಯಾಂಸಂದಿಟ | ನೀನೆಂದು' (x-೨೨)

ನಾಟಕೀಯತೆ : ಹರಿಶ್ಚಂದ್ರ ಮತ್ತು ಮುನಿಗಳ ಸಂಭಾಷಣೆ :

'ಎಲೆ, ಪಾಪಿ, ನಿಮ್ಮ ತಂದೆ ಅಲ್ಪಾಯುಷ್ಯಂ ಸತ್ತು ನರಕಕ್ಕೆ ಪೋದಪಂ, ನೀಂ ವೃಥಾ ಪಾಪಸಂಗ್ರಹಂಗೆಯ್ಯದಿರ್'

'ನಮ್ಮ ತಂದೆ ಜ್ಞಾನವಂತಂ ನರಕಕ್ಕೆಂತು ಪೋಪನ್?'

'ನಿಮ್ಮಯ್ಯಂ ಪಾಪಹೇತುವಂ ಕಾಣ್ಬನಲ್ಲದೆ ಪುಣ್ಯಹೇತುವಂ ಕಾಣ್ಬನಲ್ಲ' (ಅ. ix)

ನಮಿವಿನಮಿಪ್ರಸಂಗ :

'ಎಲ್ಲರ್ಗೆ ಪಲವುದೇಶಂಗಳಂ ಕೊಟ್ಟಿರಿ, ನಮಗೆ ಕಿಱಿದು ನಾಡಂ ಕೊಡಿಂ '

'ಎನಗೆ ತೀರ್ಥಂಕರರು ವಿಜಯಾರ್ಧದ ರಾಜ್ಯಮಂ ನಿಮಗೆ ಕುಡುವೇಳ್ದು ನಿರೂಪ ಮಂಗೊಟ್ಟರ್, ನೀವಿಬ್ಬರಲ್ಲಿಗೆ ನಡೆವುದು' (ಅ. x).

ಭರತನ ದೂತ ಮತ್ತು ಬಾಹುಬಲಿಯರ ಸಂಭಾಷಣೆ :

'ದೇವ ನೀನಲ್ಲದುಳಿದ ಕುಮಾರರೆಲ್ಲಂ ನಿಮ್ಮ ತಂದೆಗೆಱಗಿ ದೀಕ್ಷೆಯಂ ಕೊಂಡರ್ನಿ ಮ್ಮಡಿಯ ಸ್ವಾಮಿಗೆಱಗಿ ಸುಖದಿಂದಿರ್ಪುದು'.

'ನಿಮ್ಮೊಡೆಯನೆನ್ನ ಬಾಣಜಾಳದ ದರ್ಭಶಯನಸ್ಥನಾದೊಡೆ ಕರುಣಿಸಿ ತನಗೆ ಕಿಱಿದ ನೀವೆ(ರಗಿದನಿತೆ) ನಲ್ಲದೊಡೆ ಈಯೆ(ರಗೆ)'.

ವರ್ಣನೆ ಚಿತ್ರಗತ ಶೈಲಿಯಲ್ಲಿ ಬಂದಿರುವುದಕ್ಕೆ ಉದಾಹರಣೆಗಳು : ಅರವಿಂದನ ಸಾವಿನ ರೀತಿ :

'ಸುರಗಿಯಂ ಕಿತ್ತು ಕೊಲ್ಲಲ್ಪರಿತರುತಂ ತಡವಡಿಸಿ ಕೆಡೆವಲ್ಲಿ ತನ್ನ ಕೈಯೊಳಿರ್ದ ಸುರಗಿ ಪೊಟ್ಟೆಯಂ ನಟ್ಟು ಬೆನ್ನೊಳ್ ಪೊಱಮಡೆ ಸತ್ತು' (ಅ.x)

ತಪಸ್ಸಿಗೆ ನಿಂತ ಬಾಹುಬಲಿಯ ರೀತಿ :

ಪುತ್ತಡರ್ದು ಬಳ್ಳಿಗಳ್ ನೆಱೆ | ಸುತ್ತಿರೆ ಮೈಯ್ಯಲ್ಲಿ ಕಂಡು ಖೇಚರಿಯೊರ್ವಳ್
ಮತ್ತವತೊಲಗಿಸೆ ಮುನಿಪತಿ | ಮೃತ್ತಿಕೆಗಳೆದಿರ್ದಪೊನ್ನ ಕರುವೆನಲೆಸೆದಂ (x-೩೨)

ಧರ್ಮೋಪದೇಶಕ ಮಾತಿಗೆ ಉದಾಹರಣೆ : 'ಸುಕೃತದುಃಕೃತಮೆರಡುಂ | ನಾನಾ ಯೋನಿಯ ಬಟ್ಟೆಗೆ ತಾನವುಮುಂದಾಗಿ ನಡೆದ ಮಾರ್ಗಿಗಳಲ್ತೇ' (x-೩)

ಚಾವುಂಡರಾಯಪುರಾಣ ಮತ್ತು ಪೂರ್ವಪುರಾಣಗಳಲ್ಲಿ ತೋರದ ವರ್ಣನಾ ವಿಭಾಗ ಗಳು ಕಥೆಯಲ್ಲಿ ಸಮಾವೇಶಗೊಂಡಿವೆ. ಪೂರ್ವಪುರಾಣ ಮತ್ತು ಆದಿಪುರಾಣಗಳಂತೆ ವಿಸ್ತೃತವಾದ ವರ್ಣನೆ ಕಂಡುಬಾರದಿದ್ದರೂ ಹಿತಮಿತವಾದ ವರ್ಣನಾಭಾಗಗಳಿವೆ. ಈ ವರ್ಣನೆಗಳಲ್ಲಿ ಆಯಾ ಭಾವ-ರಸಗಳನ್ನು ಒಸರುವ ಸತ್ತ್ವವಿದೆ. ಮರುದೇವಿಯನ್ನು ವರ್ಣಿಸುವಾಗ ಕವಿಯು ನವಿರಾದ ವರ್ಣನೆಯನ್ನು ನೀಡಿದ್ದಾನೆ :

ಚಂದನದಂಪನಿಕ್ಕಿ ಪೊಸಮಲ್ಲಿಗೆಯಂ ಮುಡಿದುಟ್ಟು ಚೀನಮಂ
ಸೌಂದರವೆತ್ತ ಮುತ್ತಿನ ಸರಂ ಕೊರಳೊಳ್ಪೊಗಸಲ್ಕೆ ಲೀಲೆಯಿಂ
ಬಂದು ಸುಧಾಂಶುವಕ್ತ್ರೆ ಮರುದೇವಿ ತದೀಯ ಮನಃಪ್ರಿಯಂಗೆ ಸಾ
ನಂದಮನಿತ್ತು ತಳ್ಪತಳದೊಳ್ತಳೆದಳ್ಮತಿಗೆಟ್ಟನಲ್ಮೆಯಂ (x-೧೫)

ಕವಿ ಮೃದುಪದಗತಿಯಿಂದ ಮರುದೇವಿಯ ಲಲಿತಸೌಂದರ್ಯಾಲಂಕಾರವನ್ನು ವರ್ಣಿಸಿರುವ ಧಾಟಿ ಮನೋಹರವಾದುದು. ಮಂದಗತಿಯಲ್ಲಿ ನವಿರಾಗಿ ಸಾಗಿದೆ ಇಲ್ಲಿಯ ವರ್ಣನೆಯ ನಡೆ.

ಭರತನ ದಿಗ್ವಿಜಯ ಸಂದರ್ಭದಲ್ಲಿ ಬರುವ ಒಂದು ಪದ್ಯ ಹೀಗಿದೆ :

ಮಡದಲವುಂಕಿ ಚಮ್ಮಟಿಗೆಯಂ ತೆಗೆದೊತ್ತದ ಮುನ್ನಮಾ ಹಯಂ
ಮಿಡಿದವೊಲಾರ್ಭಿನಿಂ ನೆಗೆದು ಪಶ್ಚಿಮ ದಿಕ್ಕಿಗೆ ಪಾಯ್ದು ತನ್ನ ಪೆ
ರ್ವಡೆಯನದಾವಗಂ ಬಿಡದೆಕೂಡೆ ಗುಹಾನನದಿಂದ ಪೊಣ್ಮಿದ
ತ್ತಿಡಿದ ಕೃಶಾನು ನೋಡೆ ಲಯಕಾಲದ ಪೆರ್ಚಿದ ಕಿರ್ಚಿದೆಂಬಿನಂ (x-೩೦)

ಇಲ್ಲಿ 'ಮಡದಲವುಂಕಿ' ಎಂಬ ಪದಪ್ರಯೋಗದಲ್ಲಿ ಕಂಡುಬರುವ ದೇಸೀಯ ಧಾಟಿ ಮೋಹಕವಾಗಿದೆ. ಚಮ್ಮಟಿಗೆಯನ್ನು ತೆಗೆದೊತ್ತದೆಯೇ ಆ ಹಯವು ನೆಗೆದು ಓಡಿದ ಪರಿಯನ್ನು ವರ್ಣಿಸುವಲ್ಲಿ ಭರತನ ಸೇನಾಪತಿಯೇರಿದ ಕುದುರೆಯ ಚುರುಕುತನವು ವ್ಯಕ್ತವಾಗುತ್ತದೆ. ಮುಂದೆ ತಮಿಸ್ರಗುಹೆಯಲ್ಲಿ ಹಬ್ಬಿದ ಅಗ್ನಿಯನ್ನು ಪ್ರಳಯಕಾಲದ ಅಗ್ನಿಗೆ ಹೋಲಿಸಿ, (ಕವಿಸಮಯಮಾದರಿಯ ಹೋಲಿಕೆಯಾದರೂ) ಅಂದಗೆಡೆದಂತೆ ಅದರ ಪ್ರಖರತೆಯನ್ನು ಕವಿ ಓದುಗರಿಗೆ ಮನದಟ್ಟು ಮಾಡಿಸಿದ್ದಾನೆ. ದೇಸೀ ನುಡಿ ಉಪಮಾಲಂಕಾರ ಸಂವಿಧಾನ ಇವೆಲ್ಲವೂ ಗಣನೀಯ. ಭರತನ ದಿಗ್ವಿಜಯಯಾತ್ರೆಯ ಉತ್ಸಾಹದ ನಡೆಗೆ ತಕ್ಕಂತೆ ಈ ಪದ್ಯವು ಪೋಷಕವೆಂಬಂತೆ ವರ್ಣಿತವಾಗಿದೆ.

ಈ ಕೃತಿಯಲ್ಲಿ ಗದ್ಯಭಾಗದ್ದೇ ಮೇಲ್ಗೈಯಾಗಿದೆ. ಗದ್ಯಪದ್ಯಗಳ ನಡುವೆ ಒಂದು ನಿಯತ ಸ್ಥಾನವನ್ನು ಗುರುತಿಸಬಹುದಾಗಿದೆ. ಇದು ಚಂಪೂಕಾವ್ಯಗಳಲ್ಲಿ ವಿರಳ. ಪದ್ಯಗಳು ಸಾಮಾನ್ಯವಾಗಿ ಒಂದು ಪುಟ, ಅರ್ಧಪುಟದ ನಂತರ ಒಂದೊಂದರಂತೆ ಬರುತ್ತವೆ. ಒಂದೆಡೆ ಮಾತ್ರ ಎರಡು ಪದ್ಯಗಳು ಒಟ್ಟಿಗೆ ಬಂದು ಅನಂತರ ಒಂದು ತುಣುಕು ಕೊಂಡಿರೂಪದ ಗದ್ಯಾಂಶ ಬಂದು ಮತ್ತೂ ಒಂದು ಪದ್ಯವು ತಲೆದೋರಿದೆ. ಕಥಾನಡಿಗೆ, ವರ್ಣನಾಭಾಗಗಳೆರಡನ್ನೂ ಪದ್ಯಗಳು ನಿರ್ವಹಿಸಿವೆ. ಇಲ್ಲಿ ಒಟ್ಟು ೫೮ ಪದ್ಯಗಳಿವೆ. ಏಳು ಉತ್ಪಲಮಾಲೆಗಳು, ಮೂರು ಚಂಪಕಮಾಲೆಗಳು, ಎರಡು ಮತ್ತೇಭವಿಕ್ರೀಡಿತಗಳು, ಒಂದು ಶಾರ್ದೂಲವಿಕ್ರೀಡಿತ, ನಲವತ್ತೈದು ಕಂದಪದ್ಯಗಳು ಇವೆ.

ಕವಿ ಸರಳತೆಯನ್ನು ಕಾಯ್ದಿರಿಸಿಕೊಂಡು ಗಂಭೀರವಾದ ಪ್ರತಿಪಾದನೆಯನ್ನು ಯಶಸ್ವಿಯಾಗಿ ಮಾಡಬಲ್ಲನೆಂಬುದನ್ನು ಕಾವ್ಯದುದ್ದಕ್ಕೂ ಕಾಣಬಹುದಾಗಿದೆ. 'ನಾಗಂ ಕಲಾವಲ್ಲಭಂ' ಎಂಬ ಮಾತಿಗೆ ತಕ್ಕಂತೆ ನಿರೂಪಣೆಯನ್ನು ಮೋಹಕಗೊಳಿಸಿದ್ದಾನೆ. ಅನೇಕ ಕಡೆ ಅನಾಯಾಸವಾಗಿ ಬಳಸುವ ಮಾತುಗಳು ಪ್ರಸಂಗದ ಚೌಕಟ್ಟಿನಲ್ಲಿ ಸಕ್ರಿಯ ಅಂಗಗಳಾಗಿ ಹೊಸತನವನ್ನು ತೋರುತ್ತವೆ. ಒಟ್ಟಿನಲ್ಲಿ ಹೇಳುವುದಾದರೆ ಶೈಥಿಲ್ಯವಿಲ್ಲದ ಸರಳತೆ ನಾಗರಾಜನ ಶೈಲಿಯ ವಿಶೇಷಾಂಶವಾಗಿದೆ.

## ಶಾಂತಿಕೀರ್ತಿಯ ಪುರುದೇವ ಚರಿತೆ

ಸಾಂಗತ್ಯ, ಕಥಾನಿರೂಪಣೆಗೆ ಒಗ್ಗಿ ಬಂದಿರುವ ಧಾಟಿ; ಕವಿ ಅದನ್ನು ಸಾಕಷ್ಟು ಯಶಸ್ವಿಯಾಗಿಸಿದ್ದಾನೆ. ಕೆಲವೆಡೆ ವರ್ಣನಾವಿಧಾನದ ಸಾವಕಾಶತೆಯಿಂದಲೂ ಮತ್ತೆ ಕೆಲವೆಡೆ ನೇರ ಕಥಾಂಶದ ರೇಖೆಯ ತ್ವರಿತಗತಿಯಿಂದಲೂ ನಿರರ್ಗಳವಾಗಿ ಕಥೆ ಸಾಗುತ್ತದೆ.

ಕವಿ ಆದಿಪುರಾಣ, ಚಾವುಂಡರಾಯಪುರಾಣ, ಹಸ್ತಿಮಲ್ಲನ ಪೂರ್ವಪುರಾಣಗಳನ್ನು ಸಾಕಷ್ಟು ಅನುಸರಿಸಿದ್ದಾನೆ. ಈ ಅನುಕರಣೆ ಕೇವಲ ಕಥಾವಸ್ತುವಿಗಷ್ಟೇ ಸೀಮಿತವಾಗದೆ, ಆತನ ಶೈಲಿಯಲ್ಲಿಯೂ ಕಂಡುಬರುತ್ತದೆ. ದೃಷ್ಟಾಂತಾದಿ ಅಲಂಕಾರಗಳಲ್ಲಿಯೂ, ಚಿತ್ರಗತ ಹಾಗೂ ನಾಟಕೀಯ ಶೈಲಿಯಲ್ಲಿಯೂ ಕೆಲವು ಪದಗಳ ಬಳಕೆಯಲ್ಲಿಯೂ ಅದನ್ನು ಕಾಣಬಹುದಾಗಿದೆ.

ಜಿನೇಶ್ವರರ, ಪಂಚಪರಮೇಷ್ಠಿಗಳ, ಸರಸ್ವತಿಯ ಹಾಗೂ ಆದಿತೀರ್ಥಂಕರರ ಸ್ತುತಿಯೊಂದಿಗೆ ಪುರಾಣಮಾದರಿಯಲ್ಲಿ ಕಥೆಯನ್ನು ಆರಂಭಿಸಿದ್ದಾನೆ. ಕವಿ ಗ್ರಂಥದ ಆದಿಯಲ್ಲಿ ಕೃತಿಯ ಕಥಾವಸ್ತುವನ್ನು ಹಾಗೂ ಅದರ ಚೌಕಟ್ಟನ್ನು ನಿರ್ದೇಶಿಸಿ ಹೀಗೆ ನುಡಿದಿದ್ದಾನೆ :

> ಪರಿವ ಕೂದಲ ತೆಗೆವಷ್ಟರ ತಪದೊಳು | ನರಸುರಪತಿಯಾಗಿ ಕಡೆಗೆ
> ಪುರುಜಿನನಾಗಿ ಮೋಕ್ಷಕೆ ಸಂದ ಕಥೆಯನು | ಕಿರಿದ ಪೇಳುವೆ ಕೇಳಿ ಜನರು (i-೮)

ಜಯವರ್ಮ ಭವದಿಂದ ಹಿಡಿದು ಪುರುಜಿನನವರೆಗಿನ ಕಥೆಯೇ ಇಲ್ಲಿಯ ವಸ್ತು. ಸಂಕ್ಷಿಪ್ತತೆ ಇದರ ಲಕ್ಷಣ.

'ಜಿನಧರ್ಮ'ವೇ ಕಾವ್ಯದ ಚೆಂದವೆಂದೂ, 'ವಂದಿತವ್ರತ'ವೇ ಅದರ ಅಲಂಕಾರ

ವೆಂದೂ (i-೧೨) ಕವಿ ಈ ಕಾವ್ಯದ ಮೈಯಾಗಿರುವ ಧಾರ್ಮಿಕತ್ತ್ವವನ್ನು ಪ್ರಕಟಪಡಿಸಿದ್ದಾನೆ. ಹಾಗೆಯೆ ಕವಿ ಧಾರ್ಮಿಕ ಕಥೆಯನ್ನು ವರದಿಮಾತ್ರವಾಗಿ ಹೇಳಿ ಮುಗಿಸಿಲ್ಲ. ಅಲ್ಲಲ್ಲಿಯೇ ವರ್ಣನೆಗಳನ್ನು ಬೆಸೆದು ಕೆಲವು ಪ್ರಸಂಗಗಳನ್ನು ರೋಚಕಗೊಳಿಸಿದ್ದಾನೆ. ಚಾವುಂಡರಾಯಪುರಾಣ ಮತ್ತು ಹಸ್ತಿಮಲ್ಲನ ಪುರಾಣಗಳಂತೆ ಕವಿ ತ್ವರಿತಗತಿಯನ್ನು ಎಲ್ಲೆಡೆಯಲ್ಲಿಯೂ ತೋರಿಲ್ಲ.

ಲೋಕಾಕಾರದ ವರ್ಣನೆಯಿಂದ ಕಥೆ ಪ್ರಾರಂಭವಾಗುತ್ತದೆ. ಪೀಠಿಕಾಭಾಗದಿಂದ ಕಥಾಮುಖಿಕ್ಕೆ ಬಂದ ಕವಿ ತ್ವರಿತಗತಿಯಿಂದ ಕಥೆಯನ್ನು ನಡೆಸಿಕೊಂಡು ಹೋಗುತ್ತಾನೆ.

ಅಳಕಾಪುರವೆಂಬ ಪುರಮದನಾಳ್ವತಿ | ಬಲವಿದ್ಯಾಧರರಾಜನವಗೆ
ಲಲನೆ ಮನೋಹರಿಯವರೀರ್ವರಿಗೆ ಮಹಾ | ಬಲನೆಂಬ ಸುತನಾಗಲವಗೆ
ಯುವರಾಜಪದವಿಯ ಕೊಟ್ಟಿರುತಿರಲೊಂದು | ದಿವಸ ಕೆನ್ನೆಯ ನರೆಗಂಡು
ಕುವರಗೆ ಖೇಚರ ಪದವಿಯನಿತ್ತು ತಾ | ಭವವಿನಾಶವ ಮಾಡಬಗೆದು
ಸಾವಿರರಾಜಕುಮಾರರು ನೂರ್ವರು | ದೇವಿಯರ ಗಣಧರರೆಂಬ
ಕೇವಲಿಗಳ ಮೂಲದೊಳು | ಜಿನದೀಕ್ಷೆಯ ತಾವೆಲ್ಲ ಧರಿಸಿದರಿತ್ತ (i-೪೦ ರಿಂದ ೪೨)

ಈ ಕಾವ್ಯದಲ್ಲಿ ಅಲ್ಲಲ್ಲಿ ಕಂಡುಬರುವ ಕೆಲವು ವಿಶಿಷ್ಟಪದಗಳನ್ನು ಅಲಂಕಾರಾದಿಗಳನ್ನು ಹೀಗೆ ಗುರುತಿಸಬಹುದಾಗಿದೆ.

ಕವಿ ನಡುಗನ್ನಡದಲ್ಲಿ ಕಾವ್ಯವನ್ನು ಬರೆದಿದ್ದರೂ ಅಲ್ಲಲ್ಲಿ ಹಳಗನ್ನಡ ರೂಪಗಳು ಕಂಡುಬರುತ್ತವೆ. ಕೆಲವು ಹಳಗನ್ನಡ ರೂಪಗಳು :

'ಜೀವಿತಾಂತ್ಯದೊಳ್' (ii-೩೮); 'ಶುಭಪರಿಣಾಮದಿಂ' (ii-೮೫); 'ಇರುತಿರ್ದು' (ii-೮೭); 'ರಾಜಿಸುತಿರ್ಪ' (ii-೯೦); 'ರಾಜ್ಯದೊಳ್' (iv-೨೩); 'ಸ್ತ್ರೀಯರ್' (iv-೨೫); 'ಬೆಡಂಗು' (v-೮).

ನಾಡಿನ ಸಂಸ್ಕೃತಿ ಸೂಚಕ ಪದಗಳು :

ಆಭರಣ ವಿಶೇಷಗಳು : 'ಅರಳೆಲೆ' (v-೬೭); 'ಮಾಂಗಾಯಿ' (v-೬೭); 'ಬೆರಳುಂಗುರ' (v-೬೭); 'ಕಡಗ' (v-೬೭); 'ಹಾರ' (v-೮೦); 'ಕೇಯೂರ' (v-೮೦); 'ಹೊನ್ನನೂಪುರ' (v-೮೦); 'ಕಟಿಸೂತ್ರ' (v-೮೦); 'ಮುದ್ರಿಕೆ' (v-೮೦); 'ಮಣಿಮುಕುತಿ' (vi-೬೦); 'ರನ್ನದೋಲೆ' (vi-೬೦); 'ಕುಂಡಲ' (vi-೬೦); 'ಕರ್ಣಪೂರ' (vi-೬೦); 'ಕಟಿಕ' (vi-೬೦).

ಓಷಧಿಗಳು: 'ಯವನಾಳಿ'; 'ಕೌಂಗು'; 'ಕೋದ್ರವ'; 'ತಿಲ'; 'ಕುಸುಂಬೆ'; 'ಗೋಧೂಮ'; 'ಶಾಲಿ' (vi-೬೫, ೬೬); 'ಚಂದನ'; 'ಕಾಲಾಗರು'; 'ಗೋಶೀರ್ಷ'; 'ದೇವದಾರು' (xi-೫೨)

ಕೆಲವು ನುಡಿಗಟ್ಟುಗಳು : 'ಸಂತಾಪವನಾರಿಸು' (i-೫೧); 'ಸ್ವರ್ಗವಸೂರೆಗೊಳ್' (i-೯೨); 'ಧರೆಯಭಾರವನಪ್ಪೈಸು' (iv-೧೭); 'ಸೂರೆಗೊಂಬ ಬೆಡಂಗು' (v-೧೧); 'ಮೈಜುಮ್ಮೇರು' (v-೫೫); 'ಮತ್ಸ್ಯನ್ಯಾಯ' (vi-೭೪); 'ಮಲತರಮುರಿದು ' (vi-೧೨೪).

ಅರ್ಥಾಲಂಕಾರಗಳಲ್ಲಿ ಕವಿ ಹೆಚ್ಚಾಗಿ ಉಪಮೆಗಳನ್ನು ಬಳಿಸಿದ್ದಾನೆ. ಕೆಲವು ಅಲಂಕಾರಗಳು ಕವಿಸಮಯದದವು. ಉಪಮಾಲಂಕಾರಗಳಲ್ಲಿ ಕೆಲವು ಚೆಲುವಾಗಿ ಮೂಡಿ ಬಂದಿವೆ.

ಉಪಮೆ : ಕಾಣದವರಿಗೆ ಕನ್ನಡಿವಿಡಿವಂದದಿ | ನೇನುಗುಣಗಳಿಲ್ಲದವರ ನಾನಾ

ಪರಿಯಲಿ ವರ್ಣಿಸಿ (i-೯); 'ಸುರಲೋಕಸುಖವ ಕೊಳತಪುಲ್ಲ ತೊರೆವಂತೆ' (ಅನುಕರಣೆ) (iv-೬); 'ರಾಟಾಣದ ಮೊಗಪಿನವೊಲು ಕುಂದದೆ ಬರ್ಪವು' (ಅನುಕರಣೆ) (iv-೪೫); 'ಭವನವ ಬಲಗೊಂಡಳ್ ಮೇರು ತಾರಾಳಿ ಬಳಸಿ ಬರ್ಪಂತೆ' (v-೧೦); 'ಬಡವಗರಸರ ತೊಡವ ತೊಟ್ಟನೆ ಕಂಡು ಪಡಿಯಲಮ್ಮದೆ ಬೆರಗಾಗಿ' (v-೧೩); 'ರಕ್ಕಸಕಾಲಕೈಯೊಳು ಕಬಳವ ಸಿಕ್ಕಿದಂದಲ್ತೆ ಶರೀರ' (vi-೯೧); 'ದುರಿತಾಂಕುರವ ಕೀಳ್ವಂತೆ ಕುಂತಳಗಳ ಪರಿದಿಟ್ಟು' (ಅನುಕರಣೆ) (vi-೧೩೪); 'ಕುಡಿಮಿಂಚು ಚಂಚಲತ್ವವ ಬಿಟ್ಟುಸರ್ವಜ್ಞನಡಿ ಗೆರಗಿತೊಯೆಂಬಂತೆ ದೇವೇಂದ್ರನಿಗೆ ಸುರರಾಜರು ಪೊಡೆವಟ್ಟು' (vii-೧೧೦).

ಉಪಮಾಮಾಲೆ : 'ಸುರಪನಮನದುಲ್ಲಸದಂತೆ . . . ಶುಕ್ಲಲೇಶ್ಯೆಯಂತೆ . . . ನಗುವಕ್ಷತೆಯನು ಪರಮನ ಪಾದಕರ್ಚಿಸಿದರು' (v-೫೭)

'ಬಡವ ನಿಧಿಯ ಬಂಜೆ ಸುತನ ಕುರುಡ ಕಣ್ಣ ಪಡೆದಂತೆ ರಾಗಿಸಿಯವನೆ' (vii-೩೭).

ದೃಷ್ಟಾಂತ :

'ಲೋಕವ ಬೆಳಗುತಿರಲು ಸೂರ್ಯ ಗ್ರಹಗಳೊಳು | ಬೇಕಾಗವೆ ಸೊಡರು' (i-೧೭);

'ಕಡಲತಡಿಯೊಳಿರ್ದ ಬಾವಿಯೊಳಲ್ಲದೆ ಕುಡಿವರೆ ಬುಧರುಪ್ಪುನೀರ' (vi-೧೭).

ದೃಷ್ಟಾಂತಮಾಲೆ :

ಅರ್ಥವರಿಯದೋದು ಕರ್ತೃವಿಲ್ಲದ ರಾಜ್ಯ | ಭರ್ತಾರನಿಲ್ಲದ ವನಿತೆ
ಅರ್ತಿಯೊಳಾತ್ಮನಭಾವಿಸದವನ ತಪ | ವ್ಯರ್ಥ. . . (i-೧೩)

ಶಬ್ದಾಲಂಕಾರಗಳಲ್ಲಿ ಅನುಪ್ರಾಸಕ್ಕೆ ಹೆಚ್ಚು ಪ್ರಾಶಸ್ತ್ಯವನ್ನು ನೀಡಿದ್ದಾನೆ. ವೃತ್ತ್ಯನು ಪ್ರಾಸ, ಲಾಟಾನುಪ್ರಾಸಗಳು ಹೆಚ್ಚು ಬಳಕೆಯಾಗಿವೆ.

ವೃತ್ತ್ಯನುಪ್ರಾಸ :

ಠಕ್ಕಮಾಡಿದ ನಿವನಿಕ್ಕುವೆನೆನುತಾಗ | ದೊಕ್ಕನೆ ಸುರಗಿಯ ಕಿಳ್ತು
ಪೊಕ್ಕ ಬಾವಿಯ ನೇರುವಲ್ಲಿ ಬೀಳಲು ತನ್ನ | ದೊಕ್ಕೆಯೊಳ್ ಕೂಡೆ ಸುರಗಿಯುಂ'(i-೫೭);
'ಇಕ್ಷ್ವಾಕುವಂಶರಕ್ಷಾಮಣಿಯಷ್ಟಕ | ಮಕ್ಷಯದಕ್ಷಕಟಾಕ್ಷ
ಅಕ್ಷಯಲಕ್ಷ್ಮಿನಿರೀಕ್ಷ ಪ್ರಥಮಜಿನ | ರಕ್ಷಿಸೆಮ್ಮನು ಸುಕ್ಷೇಮದೊಳು (vi-೧).

ಲಾಟಾನುಪ್ರಾಸ :

'ಅಂಗವರ್ಧನ ಧೈರ್ಯ ವರ್ಧನ ಸ್ತುತಿವರ್ಧ | ನಂಗಳ ಮನೋವರ್ಧನವ
ಅಂಗನೆ ಪ್ರಾಸಾದ ವರ್ಧನ ಸೌಭಾ | ಗ್ಯಂಗಳೊರ್ಧನೆಯಮಾಡಿಂದು' (iv-೯೨).

ಕವಿ ಅಲ್ಲಲ್ಲಿಯೇ ಸಾವಧಾನದಿಂದ ವರ್ಣನೆಗೆ ಎಡೆಮಾಡಿಕೊಂಡಿದ್ದಾನೆ. ಪುರಾಣಾಂ ತರ್ಗತವಾಗುವ ಯಾವ ವರ್ಣನಾಭಾಗವನ್ನೂ ಕವಿ ಕಡೆಗಣಿಸಿಲ್ಲ. ಕಾಲನಿರೂಪಣೆ, ಮನುಕುಲೋತ್ಪತ್ತಿ, ಜನ್ಮಾಭಿಷೇಕಾದಿ ಪಂಚಕಲ್ಯಾಣ ವರ್ಣನೆ, ಸಮವಸರಣವರ್ಣನೆ, ತತ್ತ್ವೋಪದೇಶವೇ ಮೊದಲಾದ ಭಾಗಗಳನ್ನು ಸಾಕಷ್ಟು ಲಂಬಿಸಿ ಬರೆದಿದ್ದಾನೆ. ಇಂತಹ ಕಡೆ ಅನಿವಾರ್ಯವಾಗಿ ಪಾರಿಭಾಷಿಕ ಪದಗಳು ತಲೆದೋರುತ್ತವೆ. ಉಳಿದಂತೆ ಕವಿ ಸುಭಗ ನಾಗಿದ್ದಾನೆ. ಶ್ರೀಮತಿ ಪಂಡಿತೆಯರ ಪ್ರಸಂಗ, ನಮಿವಿನಮಿಗಳ ಪ್ರಸಂಗ, ವೃಷಭನ ಬಾಲ್ಯಾವಸ್ಥೆ, ಆಟಪಾಠಗಳು, ತಪಸ್ಸಿನ ರೀತಿ, ಮೊದಲಾದುವುಗಳನ್ನು ಸಾಕಷ್ಟು ಚಿತ್ರಗತ ಶೈಲಿಯಲ್ಲಿ ಚಿತ್ರೀಕರಿಸಿದ್ದಾನೆ.

ಜಿನಸ್ತುತಿಯನ್ನು, ಅಷ್ಟವಿಧಾರ್ಚನೆಯ ವರ್ಣನೆಯನ್ನು ಕವಿ ಭರತಾದಿಗಳು ಆದಿದೇವನಿಗೆ ಸಲ್ಲಿಸುವ ಪೂಜಾಪ್ರಸಂಗಗಳಲ್ಲಿ ತಂದಿದ್ದಾನೆ. ಜಿನಭಕ್ತಿಯ ಹಿರಿಮೆಯನ್ನು ಕುರಿತು ಕವಿ ಹೀಗೆ ನುಡಿದಿದ್ದಾನೆ :

ದರಿದ್ರ ಹೊದ್ದದು ಧೈರ್ಯವಪ್ಪುದು | ಸ್ಮರನ ಬಾಧೆಯು ಸಾರಲಮ್ಮದು
ಪುರುಜಿನೇಶನ ಪಾದಪದ್ಮಕೆ ಬೆಳಗಲಾರತಿಯ || ಜಯ || (v-೮೬)

ಅಲ್ಲಲ್ಲೇ ಧರ್ಮೋಪದೇಶದ ಮಾತುಗಳು ಕಂಡುಬರುತ್ತವೆ. ಉದಾಹರಣೆಗೆ :

ಒಂದಿಂದ್ರಿಯ ವ್ಯಸನದಿನಿಂತಾದುದೈ | ದಿಂದ್ರಿಯಾಸಕ್ತರಾದವರು
ಮುಂದೇನೇನಾಗರಕಟ ಹಾಹಾದಿಟಮೆಂದು | ಜನರೆಲ್ಲ ಬರಸಿ (ಅನುಕರಣೆ) (ii-೧೧೭)

'ಶರಣ್ ಧರ್ಮದಿಂದನ್ಯಮುಂಟೆ (iv-೮)

'ಶೀಲತನ್ನಾತ್ಮಗುಣವ ರಕ್ಷಿಸುವುದೆ' (iv-೩೦)

'ಭೋಗಶರೀರ ಸಂಸೃತಿಗೆ ಬೆಚ್ಚುವುದೆ ಸಂವೇಗ' (iv-೩೧)

'ತನ್ನಂತರಂಗದೊಳು ರಾಗ ದ್ವೇಷಾದಿಯ ಬಿಡುವುದೆ ಶಕ್ತಿ' (iv-೩೧)

ಸಂಸ್ಕೃತ ಸಮಾಸೋಕ್ತ ಪದಗಳು, ದೀರ್ಘಸಮಾಸೋಕ್ತ ಪದಗಳು ಸಾಂಗತ್ಯದ ನಡೆಗೆ ಹೊಂದುವಂತಹವುಗಳಲ್ಲ. ಕವಿ ಅದನ್ನು ಅರಿತವನಾಗಿದ್ದಾನೆ. ಆದರೆ ಒಂದೆರಡು ಕಡೆ ಮಾತ್ರ ಆ ಧಾಟಿಯನ್ನು ಅಪರೂಪವಾಗಿ ತೋರಿದ್ದಾನೆ.

ಸ್ವಸ್ತಿಶ್ರೀ ಪುರುಜಿನನಂದನನರಿಯ | ಮಸ್ತಕಮಣಿಧೌತ ಚರಣ
ಸ್ವಸ್ತದಿಂ ದಿಗ್ವಿಜಯಂಗೈದು ಪೋದಪ್ರ | ಶಸ್ತಿಗೆ ಭದ್ರಭೂಯಾತು (viii-೪೨)

ಭರತನು ಬರೆಸಿದ ಪ್ರಶಸ್ತಿಯಿದೆಂದು ಕವಿ ಸಂಸ್ಕೃತಭೂಯಿಷ್ಠ ಪದಗಳಿಂದ ಈ ಸಾಂಗತ್ಯದ ರಚನೆಯನ್ನು ಮಾಡಿದಂತೆ ತೋರುತ್ತದೆ. ಈ ಕಾವ್ಯದ ಪ್ರತಿ ಸಂಧಿಯ ಕೊನೆಯ ಭಾಗದಲ್ಲಿ ಬರುವ ಗದ್ಯಭಾಗವು ಸಂಸ್ಕೃತಭೂಯಿಷ್ಠವಾಗಿದೆ.

ಸಾಂಗತ್ಯ ಛಂದಸ್ಸಿನಲ್ಲಿರುವ ಈ ಕೃತಿಯಲ್ಲಿ ಒಂದು ಮಹಾಸ್ರಗ್ಧರಾವೃತ್ತವೂ ಐದು ಭಾಮಿನೀ ಷಟ್ಪದಿಗಳೂ (v-೮೨ ರಿಂದ ೮೬) ಮೂರು ಪದಗಳೂ (v-೮೭ ರಿಂದ ೮೯) ಇವೆ. ಷಟ್ಪದಿಗಳನ್ನು ನಾಲ್ಕು ಸಾಲುಗಳಲ್ಲಿ ಬರೆಯಲಾಗಿದೆ. ದ್ವಿತೀಯ ಸಂಧಿಯ ಕೊನೆಯಲ್ಲಿ ಬರುವ ಮಹಾಸ್ರಗ್ಧರಾ ವೃತ್ತವು ಪುರುದೇವನ ಹೆಗ್ಗಳಿಕೆಯನ್ನು ಸಾರುತ್ತದೆ. ಇಲ್ಲಿ ಇತರ ಕೆಲವು ತೀರ್ಥಂಕರರ ನಾಮಾವಳಿಗಳನ್ನು ಅಳವಡಿಸಿ ಪುರುದೇವನನ್ನು ಹೊಗಳಲಾಗಿದೆ. ಉದಾಹರಣೆಗೆ :

ವದನಂ ಚಂದ್ರಪ್ರಭಂ ನಿರ್ಜಿತ ಭುಜಮಜಿತಂ ಪಾಣಿಪದ್ಮಪ್ರಭಂ ಸಂ
ಪದಮೆಂದುಂ ವರ್ಧಮಾನಂ ಗುಣಗಣವಿಮಲಂ ತನ್ನ ಪೆಂಪೊಂದನಂತಂ
ಹೃದಯಂ ಶಾಂತಿಂ ವಚಶ್ಶೀತಲ ಪುರುಚರಿತಂ ಸುವ್ರತಂ ಶೀಲತಾನಿಂ
ತದರಿಂ ಪ್ರತ್ಯಕ್ಷ ತೀರ್ಥಂಕರನನೆ ನೆಗಳ್ದಂ ವಿಶ್ವವಿದ್ಯಾವಿನೋದಂ (ii-೧೨೩)

ಕವಿ ಉನ್ನತ ಮಟ್ಟದ ಕವಿಯಾಗದಿದ್ದರೂ ಕಡೆಗಣಿಸುವಂಥವನಲ್ಲ. ಅಲ್ಲಲ್ಲಿ ಕಾವ್ಯ ಲೇಪನವನ್ನು ಕೊಟ್ಟು ಭಕ್ತಿಭಾವದಿಂದ ಪುರಾಣವಸ್ತುವನ್ನು ನಿರೂಪಿಸಿದ್ದಾನೆ.

## ಬೊಮ್ಮಣ್ಣನ ಆದಿಪರಮೇಶ್ವರನ ಯಕ್ಷಗಾನ

ಹೆಸರೇ ಸೂಚಿಸುವಂತೆ 'ಆದಿಪರಮೇಶ್ವರನ ಯಕ್ಷಗಾನ'ವು ಯಕ್ಷಗಾನ ಪ್ರಕಾರಕ್ಕೆ ಸೇರಿದ ಪ್ರೌಢಕಾವ್ಯಗಳಿಗಿಂತ ವಿಭಿನ್ನವಾದ 'ದೇಸಿ' ಕಾವ್ಯಪ್ರಕಾರವಾಗಿದೆ. ಯಕ್ಷಗಾನವು ಒಂದು ಜಾನಪದ ನೃತ್ಯನಾಟಕ. "ಇದರ ಗಾನ ತನ್ನ ಆಲಾಪನೆ, ಆರೋಹಣ ಅವರೋಹಣ ಗಳಲ್ಲಿ ಕರ್ನಾಟಕ ಸಂಗೀತದಿಂದ ಭಿನ್ನವಾಗಿದೆ. ಏಕೆಂದರೆ ಅದು ಆದ್ಯಂತವಾಗಿ ನರ್ತನದ ಹೆಜ್ಜೆಗಳಿಗೆ ಅಧೀನ ಅಥವಾ ಪ್ರೇರಕವಾಗಿರವಂತೆಯೇ ರಚಿತವಾಗಿರುತ್ತದೆ" ಎಂಬ ಯಕ್ಷಗಾನಗಳನ್ನು ಕುರಿತ ಈ ಮಾತುಗಳನ್ನು ಈ ಕೃತಿಗೂ ಅನ್ವಯಿಸಿಕೊಳ್ಳಬಹು ದಾಗಿದೆ.[೪೦] ವಿವಿಧ ಛಂದಸ್ಸುಗಳನ್ನು ಅಳವಡಿಸಿಕೊಂಡ ಗೇಯಪ್ರಬಂಧವಾಗಿ ಯಕ್ಷ ಗಾನವು ಕಂಡುಬರುತ್ತದೆ.

'ಆದಿಪರಮೇಶ್ವರನ ಯಕ್ಷಗಾನ'ವು ಶುದ್ಧ ಧಾರ್ಮಿಕ ಕಥೆಯನ್ನು ನಿರೂಪಿಸುವು ದಾಗಿದೆ ಎಂದು ಕವಿ ಸ್ಪಷ್ಟಪಡಿಸಿದ್ದಾನೆ. 'ನಾರಿರಾಕಥೆಯಲ್ಲ ಚೋರರಾ ಕಥೆಯಲ್ಲ; ಕಾರುಣ್ಯನಿಧಿಯ ವಿಸ್ತಾರದ ಕಥೆಯೂ'; 'ದೋಷರಾ ಕಥೆಯಲ್ಲ ದೂಷಣೆಕ ಕಥೆಯಲ್ಲ ಭಾಸುರೋಜ್ವಲ ಜಗದೀಶನಾ ಕಥೆಯೂ'; 'ಕಾಳಗದ ಕಥೆಯಲ್ಲ ಕೋಳಿನಾ ಕಥೆಯಲ್ಲ ಮೂಲೋಕದೊಡೆಯನಾ ಲೀಲೆಯಾ ಕಥೆಯೂ' ಎಂದು ಹೇಳುವಲ್ಲಿ ಕವಿಯ ಆಶಯ ವನ್ನು ಗಮನಿಸಬಹುದಾಗಿದೆ. ಆದಿತೀರ್ಥಂಕರನ ಕಥೆಯನ್ನು ಕವಿ ಸಾಕಷ್ಟು ವಿಸ್ತಾರ ವಾಗಿಯೇ ವರ್ಣಿಸಿದ್ದಾನೆ. ಹಾಗೆ ವರ್ಣಿಸುವಾಗ ಮೃದುಮಧುರ ವಚನವಿರಲಿ ಎಂಬುದು ಆತನ ಆಶಯ. "ಸುಧೆಗಡಲರಸಂಗರೆವವೊಲು ಮೃದುಮಧುರ ನುಡಿಗಳ ತೋರಿಮಿ (ಮೀ)ಕೃತಿಗಧಿಪತಿಯು ನೀನಾಗಿ ನಡಸುವುದಾದಿನಾಥ" (ಪರಿಚ್ಛೇದ i) ಎಂದು ಬೇಡಿ ಕೊಂಡಿದ್ದಾನೆ. ಪಂಪನೇ ಮೊದಲಾದವರ ಆಶಯವನ್ನೇ ಹಿಡಿದು ಹೊರಟ ಕವಿಯ ಆಶಯವೇನೋ ಮಹತ್ತರವಾದುದೇ; ಅನುಕರಣೀಯವಾದುದೇ. ಆದರೆ ಆ ಹಂತಕ್ಕೆ ಏರುವ ಪ್ರತಿಭಾಶಕ್ತಿ ಬೇಡವೇ? ಪ್ರಯತ್ನ ಆತನ ಸೀಮಿತ ಮಿತಿಯಲ್ಲಿಯೇ ಇದೆ. ಅನೇಕ ವಿಸಂಧಿಗಳು, ಅಶುದ್ಧ ಪಾಠಗಳು ತುಂಬಿ ಕಾವ್ಯದ ಓಘ ತಪ್ಪುತ್ತದೆ. ಭಾಷೆಯಲ್ಲಿ ಶೈಥಿಲ್ಯವಿದೆ. ಅಲ್ಪಪ್ರಾಣ ಮಹಾಪ್ರಾಣಗಳ ಬಳಕೆಯಲ್ಲಿ ಹದ ತಪ್ಪಿದೆ, ಮಕಾರ ಬೆರಸಿದ ಸಮಾಸೋಕ್ತಿಗಳು ಹೇರಳವಾಗಿವೆ (ದೋಷಗಳಲ್ಲಿ ಕೆಲವನ್ನು ಪ್ರತಿಕಾರನ ದೋಷವೆಂದೂ ಪರಿಗಣಿಸಬಹುದು). ಹೀಗಾಗಿ ರಸಾಸ್ವಾದನೆಗೆ ಅದು ಅಡಚಣೆಯಾಗುತ್ತದೆ. ಕವಿ ಭಾವುಕ ನೆಂಬುದು ನಿಸ್ಸಂಶಯವಾದರೂ ಭಾಷೆಯಲ್ಲಿ ಪರಿಶುದ್ಧತೆಯನ್ನು ಉಳಿಸಿಕೊಂಡಿಲ್ಲ. ಆದರೂ ಈ ಕೃತಿಯಲ್ಲಿ ಮೂಡಿ ಬಂದಿರುವ ಕೆಲವು ಉತ್ತಮ ಭಾಗಗಳನ್ನು ಕಡೆಗಣಿಸು ವಂತಿಲ್ಲ.

ಪುರಾಣಲಕ್ಷಣಾನ್ವಿತವಾಗಿ ಬರುವ ಅಂಶಗಳಲ್ಲಿ ಮನ್ವಂತರದ ವರ್ಣನೆಯನ್ನುಳಿದು ಉಳಿದ ಭಾಗಗಳನ್ನು ಈ ಕೃತಿಯು ಅಳವಡಿಸಿಕೊಂಡಿದೆ.

ಪ್ರಾರಂಭ ಭಾಗ ಪುರಾಣ ಪೀಠಿಕೆಯ ವಿಷಯವಾದ ಲೋಕಾಕಾರದಿಂದ ಪ್ರಾರಂಭ ವಾಗುತ್ತದೆ. ಕೌಶಲದೇಶದ ವಿಸ್ತೃತ ವರ್ಣನೆ ಇದೆ. ಅಲ್ಲಿಯ ವನ, ಮೃಗ, ಹೂವು, ಹರ್ಮ್ಯಾದಿಗಳ ಸೌಂದರ್ಯವನ್ನು ಪ್ರಕಟಿಸುತ್ತ, ಸಾವಕಾಶವಾಗಿ ಮುಂದುವರಿಯುತ್ತಾನೆ.

ಉದಾಹರಣೆಗೆ :

ಪೊಳಲಶೋಭಾಲಕ್ಷ್ಮಿ ನಿಳಯಮಿದೆಂಬೊಲು
ಥಳಥಳಿಸುವ ರಾಜಧಾನಿ ಶೋಭಿಪುದು (ಪ-i)
ಮಾರನಿಕ್ಕೆವನೆಯೆಂಬ ಭೂರಿಯುದ್ಯಾನವನದಿ ಖಗವು
ಕೀರಿಪಾರಿವಾಳ ಪರಮೆ ಸಾರಿ ಝೇಂಕರಿಸುವ ನಂದನಾ (ಪ-ii)

ಕವಿ ಸನ್ನಿವೇಶಕ್ಕನುಗುಣವಾಗಿ ಕತೆಯ ಪಾತ್ರಗಳನ್ನು ನಮ್ಮೆದುರು ತಂದು ನಿಲ್ಲಿಸಿ ಪ್ರತಿ ಸನ್ನಿವೇಶವನ್ನೂ ನಾಟಕೀಯ ದೃಶ್ಯವಾಗಿ ಮಾರ್ಪಡಿಸಿಕೊಳ್ಳುತ್ತ ಕಥೆಯನ್ನು ಮುಂದುವರಿಸುವುದನ್ನು ಕಾಣಬಹುದು.

ಒಂದು ಕಡೆ ಸಂಸ್ಕೃತದ ನಡೆ, ಮತ್ತೊಂದೆಡೆ ದೇಸೀ ಧಾಟಿ, ನುಡಿಗಟ್ಟುಗಳು, ಆಗಿನ ಕಾಲದ ಪ್ರಚಲಿತ ಪದಗಳು, ಅಲಂಕಾರಾದಿಗಳು ಇಲ್ಲಿ ಕಂಡುಬರುತ್ತವೆ. ಕೆಲವು ಶಬ್ದ ಗಳನ್ನು, ವಾಕ್ಯಗಳನ್ನು ಈಗ ಗಮನಿಸಬಹುದಾಗಿದೆ.

ವೃತ್ತ-ಕಂದಾದಿಗಳಲ್ಲಿ ಹಳಗನ್ನಡ ಪ್ರಯೋಗವಿದೆಯಾದರೂ ಅಲ್ಲಿಯೂ ಪ್ರಚಲಿತ ಭಾಷೆಯ ಸಮ್ಮಿಶ್ರಣವಿದೆ. ಸಾಮಾನ್ಯವಾಗಿ ಗದ್ಯಭಾಗವು ಹಳಗನ್ನಡ ರೂಪದ್ದಾಗಿದೆ.

ಕೆಲವು ನುಡಿಗಟ್ಟುಗಳಿಗೆ : 'ಪರರಪಟ್ಟಸಾಲೆಯನು ಸಾರಿ'(ಪ-iii); 'ತೃಣಗಳ್'(ಪ-iv); 'ಶಿರವತಿರಿಕಲ್ಲಾಡು' (ಪ-vi); 'ಬಲಚೂರ್ಣೀಕೃತಮಪ್ಪುದು' (ಪ-vi); 'ಬಿತ್ತಿದ ಬೀಜ' (ಪ-v); 'ನುಗ್ಗಾಗು' (ಪ-vi); 'ಮಂಕುಗ್ರಹವೇಷ್ಟಿತ' (ಪ-vi); 'ಛಿಂದಬಿಂದವ ಮಾಡು' (ಪ-vi); 'ಪಾಡುಂಗೆಟ್ಟು' (ಪ-vi); 'ಮಕ್ಕಳಾಟಿಕೆ' (ಪ-vi); 'ಬಣ್ಣಗೆಟ್ಟ ವಿಚಾರ' (ಪ-vi).

ಕೆಲವು ಅಲಂಕಾರಗಳನ್ನು ಗಾದೆಯಂತಹ ಮಾತುಗಳನ್ನು ಕವಿ ತನ್ನ ಪೂರ್ವಕವಿಗಳಿಂದ ತೆಗೆದುಕೊಂಡಿದ್ದಾನೆ. ಉದಾಹರಣೆಗೆ :

'ತಪೋರತ್ನಮಂ ನರಭೋಗವೆಂತಾಂಡಿಗೆ ಮಾರಿದಂತೆ' (ಪ-ii)

'ಇರುಳುಕಂಡ ಸ್ವಪ್ನವಾ ಎಚ್ಚತ್ತುಮರಿವಂತೆ' (ಪ-iii)

'ಮೋಹಪಾಶಮಂ ಪರಿದಿಡುವಂತೆ ಕೇಶಮಂಕಿಳ್ತು' (ಪ-iv)

'ಮಾಯಾಶಿಶುವನು ತನ್ನೊಲ್ಲಭನ ಹಸ್ತಕೆ ಕೊಡಲು ಬಡವ ನಿಧಾನವ ಕಂಡ ತೆರದಿ' (ಪ-vi)

'ಫಳುಕಿನ ಘಟ(ಟ)ದೊಳು ದೀಪಿಕೆ ವ್ಯ(ಬೆ)ಳಗುಂ ವ್ಯಾಪಿಸುವ ತೆರದಿಂ' (ಪ-vii)

ಮೊದಲಾದ ಎಡೆಗಳಲ್ಲಿ ಅದನ್ನು ಗಮನಿಸಬಹುದಾಗಿದೆ. ಕವಿ ಬಳಸಿರುವ ಅಲಂಕಾರ ಗಳಲ್ಲಿ ಉಪಮಾಲಂಕಾರವೇ ಹೆಚ್ಚಾಗಿ ಕಂಡುಬರುತ್ತದೆ. ಉಳಿದವು ಅತ್ಯಲ್ಪ.

ಉಪಮೆ :

'ವೀಣಾಭ್ಯಾಸವ ಕಲಿಸಿದಳು ಮಿಂಚಿನ ಮಾಲೆಗೆ ಸ್ವರವು ಬಂದ ಭಾವದಿ' (ಪ-iii)

'ಪರುಷಸೋಂಕಿದ ಲೋಹವು ಮಿರುಗುವಪರಂಜಿಯ ಪೋಲರುಹದೇವಾ ದರುಷನ ಮಾತ್ರ ಪಾಪವು ಪರಿಹರಿಸುವುದು' (ಪ-iv)

ಉಪಮಾಮಾಲೆ :

'ಪಿರಿದು ರಾಜ್ಯ ಸುರಧನುವೊಲ್ ಸಿರಿಯು ಸಂಜೆಗೆಂಪು ಸೇನೆಯಿರವು ಬಯಲ ದೊರೆಯು' (ಪ-iii)

ರಾಜ್ಯಲಕ್ಷ್ಮಿ ತೊಲಗಿದಂತೆ ನವನಿಧಿಬರಿದಾದಂತೆ ಕಾಂತಾಮಣಿಪೆರರ
ನಚ್ಚಿದಂತೆ ಶಕ್ತಿಕ್ಷಯಮಾದಂತೆ ಭರತೇಶ್ವರ ನಿರಾಯುಧಸ್ಥನಾಗಿ (ಪ-vi)

ದೃಷ್ಟಾಂತ :

'ಕಂಟಕದ ಬಬ್ಬುಲಿ ದಹಿಸದೆ ಮಾಣ್ದಪುದೆ ಅಗ್ನಿಕುವರನೊಳ್(ಳ್ಸ)ಣಸಿಯುಂ'(ಪ.-i)

'ಕ್ರೂರ ಕಾಲನಿಗಿಟ್ಟ ಕಬಳಾಹಾರವು ನರಸುರನಾಗಲೋಕವು' (ಪ.-ii)

'ಕುಂದಣದ ಜಿನಬಿಂಬ ಕಿರಿದೆಂದು ಭಕ್ತಿ ಕಿರಿದೆ' (ಪ.-vii)

ಪ್ರಾಸಾನುಪ್ರಾಸಗಳು ಅಲ್ಲಲ್ಲೇ ಜೀವನಾಡಿಯಂತೆ ಕಾವ್ಯದ ತುಂಬಾ ತುಂಬಿಕೊಂಡಿವೆ.

ವೃತ್ತ್ಯನುಪ್ರಾಸ :

ನೀರಕ್ಷೀರ ನೆಲನು ಮಧುರ | ಸಾರಪೂರ ವೃಕ್ಷಸಾರ
ಸಾರ ಫಲವಿಹಾರ ಮಾರ | ಶೂರರತಿವಿಲಾಸರೆಲ್ಲರು (ಪ.-i)
ನೋಡುತಿರೆ ಚಕ್ರೇಶ ನೆಚ್ಚ ಕಣೆಗಳ ಕೋಶ
ಕೊಚ್ಚಿ ಕಳೆವುದ ಕಂಡು ಮೆಚ್ಚಿತಾಮುಂ ಕೊಂಡು (ಪ.-vi)

ಛೇಕಾನುಪ್ರಾಸ :

ಬಿಡುಬಿಡುಲೋಭತ್ವಚಿತ್ತವ
ತೊಡುತೊಡುತ್ತಮ ಗುಣವ (ಪ.-ii)

ಲಾಟಾನುಪ್ರಾಸ :

ಶರಣಾಗುದೇವ ಪುರುಜಿನಾ
ಶರಣಾಗಮರೇಂದ್ರ ವೃಂದ ವಂದಿತ ಚರಣಾ
ಶರಣಾಗನಂತ ಬೋಧನೆ
ಶರಣಾಗಾವಾವ ಭವದೊಳಾದಿ ಜಿನೇಂದ್ರಾ (ಪ .-i)

ಕಥೆ ಹೇಳುವಾಗ ಕವಿಗೆ ತ್ವರಿತವಾಗಿ ಕಥಾಭಾಗವನ್ನಷ್ಟೇ ಹೇಳಬೇಕೆಂಬ ಆತುರವಿಲ್ಲ. ಅಲ್ಲಲ್ಲೇ ಕವಿ ಸಣ್ಣಪುಟ್ಟ ವರ್ಣನೆಗಳೊಂದಿಗೂ ದೀರ್ಘ ವರ್ಣನೆಗಳೊಂದಿಗೂ ಮುಂದುವರಿದಿದ್ದಾನೆ. ಬಾಹುಬಲಿಯ ತಪಸ್ಸು, ಭರತಬಾಹುಬಲಿಗಳ ಶರಸಂಧಾನ, ಸಮವಸರಣದ ವರ್ಣನೆಗಳು ಈ ಕೃತಿಯಲ್ಲಿ ವಿಸ್ತಾರವಾಗಿ ಬಂದಿವೆ. ಅಲ್ಲಲ್ಲಿಯೇ ಬರುವ ತುಣುಕು ವರ್ಣನಾಭಾಗಕ್ಕೆ :

ಸುರಸತಿಯರ ವೇಷಭೂಷಣಗಳ ವಿವರ :

ತನ್ನರಸಿ ಶಚಿದೇವಿ ಲೋಕದ ಕನ್ನೆಯರ ಕುಲರನ್ನೆಯು
ರನ್ನದೊಡವನು ತೊಟ್ಟು ಮಿಸುನಿಯ ಚನ್ನಪುತ್ಥಳಿಯಂದದಿ ಸುರಸತಿಯರ
ಪರಲೋಲೆಯು ಸೂಕ್ತಿಜದ ಮೂಗುತಿ ಕೊರಳ ಮೌಕ್ತಿಕ ಹಾರವು
ತೊಳಪ ಮಣಿಮಯ ಭಾಪುರಿಯ ಕಳಕಳಿಪ ಘನ ಭುಜಕೀರ್ತಿಯರ್ದ

'ಕಳೆಗದಿರ ಪಸುರ್ವಚ್ಚೆಗಡಗವು ತಿಳುವೆಳಗ ಪಸರಿಸುತಲಿ ಧರಣಿಗೆಳಿದು' (ಪ. -iv)

ಮೂರ್ತೀಕರಿಸುವ ರೂಪಿನ ವರ್ಣನೆಗೆ : ನಿರ್ನಾಮಿಕೆಯ ವರ್ಣನೆ—ಗಂಟುಮೂಗಿನ ಮೆಳ್ಳೆಗಣ್ಣಿನ ಅಂಟುಪುರ್ಬಿನ... ಎಂಬ ಪದ್ಯವನ್ನು ಗಮನಿಸಬಹುದು.

ಕೆಲವೆಡೆ ಕವಿ ಆಯಾ ಕಥಾಸನ್ನಿವೇಶಗಳನ್ನು ಪರಿಶೀಲಿಸಿ ತನ್ನದೇ ಆದ ಅಭಿಪ್ರಾಯಗಳನ್ನು ಮಂಡಿಸುವವನಂತೆ ವಿವರಣೆಯನ್ನು ನೀಡಿದ್ದಾನೆ. ಉದಾಹರಣೆಗೆ, ವಜ್ರದಂತ ಚಕ್ರಿಯು ತಾವರೆಯೊಳಗೆ ಸತ್ತು ಬಿದ್ದಿದ್ದ ದುಂಬಿಯನ್ನು ನೋಡಿ ವೈರಾಗ್ಯಪರವಶನಾಗಿ ಚಿಂತಿಸುವ ರೀತಿ :

ಒಂದಿಂದ್ರಿಯದಿಶೆಯ | ನೊಂದು ತುರಂಗಾನೆ ಮೀನುತುಂಬಿ ಪತಂ(ಗ)ಗಳ್
ನೊಂದವು ಪಂಚೇಂದ್ರಿಯ ಲಂಪಟ | ದಿಂದಂ ಸುರನರರು ನೊಯ್ಪುದೊಂದಾಶ್ಚರಿಯ (ಪ.-ii)

ವಜ್ರನಾಭಿಯ ವೈರಾಗ್ಯಭಾವ :

ನಿಲವುಮೊಂದಿನಿತಿಲ್ಲಮಂತಕ ಕೊಲಲು ತನ್ನಯ ಸುಕೃತದುಃಕೃತ
ನಿಲುವುದಲ್ಲದೆ ಮಿಕ್ಕವೆಲ್ಲವು ತೊಲಗುತಿಹವು (ಪ.-iv)

ಕವಿ ಭಕ್ತಾರ್ದ್ರಹೃದಯಿಯಾಗಿ ಎಡೆದೊರೆತಲ್ಲೆಲ್ಲಾ ಸ್ತುತಿಯನ್ನು, ಭಗವಂತನ ವಸ್ತು, ಗುಣ, ರೂಪಸ್ತವಗಳನ್ನು ಮಾಡಿದ್ದಾನೆ. ಲಲಿತಾಂಗ, ವಜ್ರದಂತ, ವಜ್ರನಾಭಿ, ದೇವೇಂದ್ರ, ಭರತ, ಬಾಹುಬಲಿಗಳಿಂದ ಭಗವಂತನ ಸ್ತುತಿಯನ್ನು ಮಾಡಿಸುವಲ್ಲಿ ಕವಿ ತನ್ನ ಭಕ್ತಿಭಾವವನ್ನು ವ್ಯಕ್ತಪಡಿಸಿದ್ದಾನೆ.

ಸಂಸ್ಕೃತಪ್ರಚುರ ಭಾಷೆ ಅಲ್ಲಲ್ಲಿಯೇ ಕಂಡುಬರುತ್ತದೆ. ಉದಾಹರಣೆಗೆ :

ಶ್ರೀಮದಮರ ಸುರಾಸುರೇಂದ್ರ ಸ್ತೋಮ ಮಣಿಗಣ ಮಕುಟ ತಾಟಿತ
ತಾಮರಸ ಪದಯುಗಳ ಚರ್ಯಾಚಾರ್ಯವರ್ಯ (ಪ.-i)

ಪಂಪಾದಿಗಳ ಪ್ರಭಾವ ಕವಿಗೆ ಸಾಕಷ್ಟು ಆಗಿದೆ. ಅಲ್ಲಲ್ಲಿಯೇ ಕವಿ ಅವರ ಪದ ಪುಂಜಗಳನ್ನು, ಅಲಂಕಾರಾದಿಗಳನ್ನು ತನ್ನ ಕೃತಿಯಲ್ಲಿ ಅಳವಡಿಸಿಕೊಂಡಿದ್ದಾನೆ.

ಕವಿ ಈ ಕೃತಿಯ ಆರಂಭದಲ್ಲಿ 'ಗದ್ಯಪದ್ಯದಿ ಪಾಡಿ ನಿಮ್ಮ ಸ್ತುತಿಸುವೆ' ಎಂದು ನುಡಿದಿದ್ದಾನೆ. ಆಯಾ ಸನ್ನಿವೇಶಗಳ ಭಾವಕ್ಕೆ ತಕ್ಕಂತೆ ವಿವಿಧ ತಾಳಲಯಗಳ ಪದ್ಯಗಳನ್ನು ಬಳಸಿದ್ದಾನೆ. ಇವುಗಳ ಜೊತೆಗೆ ಗಮಕ ಶೈಲಿಯ ಕಂದ, ಷಟ್ಪದಿ, ವೃತ್ತಗಳನ್ನು ಬಳಸಿದ್ದಾನೆ (ಭಾಷೆಯಲ್ಲಿ ಶೈಥಿಲ್ಯವಿರುವುದರಿಂದ ಅಲ್ಲಲ್ಲಿ ಛಂದಸ್ಸಿನಲ್ಲಿಯೂ ಏರು ಪೇರಾಗಿರುವುದುಂಟು). ಯಕ್ಷಗಾನದ ಪರಂಪರೆಯಲ್ಲಿರುವ ಛಂದೋವೈವಿಧ್ಯಗಳೆಲ್ಲವೂ ಇಲ್ಲಿ ಕಂಡು ಬರುತ್ತವೆ. ನೂರ ಐವತ್ತು ಕಂದ ಪದ್ಯಗಳೂ ನಾಲ್ಕು ವೃತ್ತಗಳೂ ಇವೆ. ತ್ರಿವುಡೆಗಳದ್ದು ಇಲ್ಲಿ ಮೇಲುಗೈ. ಜೊತೆಗೆ ಯಾಲಪದ, ದ್ವಿಪದೆ, ಸೀಸಪದ್ಯಗಳು, ಬಳಕೆಯಾಗಿವೆ. ಸಂಗೀತ ಛಂದಕ್ಕೆ ಸೇರುವ ಅನೇಕ ಪದ್ಯಗಳಲ್ಲಿ ಷಟ್ಪದಿ, ಸಾಂಗತ್ಯ, ರಗಳೆಗಳು ಅಡಕವಾಗಿರುವುದನ್ನು ಗಮನಿಸಬಹುದು. ಉದಾಹರಣೆಗೆ :

ಭಾಮಿನೀ ಷಟ್ಪದಿ: (ಸೌರಾಷ್ಟ್ರ ತ್ರಿವುಡೆಯಲ್ಲಿ ಎರಡೆರಡು ಸಾಲಿನ ಎರಡು ಪದ್ಯರೂಪಗಳಲ್ಲಿ ಅಡಕವಾಗಿರುವ ಷಟ್ಪದಿ)

ಸುರಪ. ನೀಲಾಂ. ಜನೆಯ. ನೃತ್ಯವ
ಪರಿಜ. ನರುಪರ. ವಶವು ಮಪ್ಪೊ ್ಪಲ್
ಒರಿದು. ಶೃಂಗರ, ರಸಸು. ಧಾಂಬುವ. ನೆರೆಯ. ಲಾಗಾ
ಒರಿದು. ಪೇಕ್ಷೆಯೊ.ಳಾದಿ. ದೇವನು

ಹರುಷ. ದಿಂದೀ. ಕ್ಷಿಸಲ. ದೃಶ್ಯಕಿ
ಯರಿದು. ವಿಸ್ಮಯ, ನಾಗಿ. ಮಾಯಾ. ತರುಣಿ. ಯಂದು (ಪ.-i)

(ತ್ರಿವುಡೆಗಳಲ್ಲಿ ಹೆಚ್ಚಾಗಿ ಷಟ್ಪದಿಗಳು ಕಂಡುಬರುತ್ತವೆ.)

ಕುರಜುಜಂಪೆಯಲ್ಲಿ ಎರಡು ಸಾಲುಗಳಲ್ಲಿ ಅಡಕವಾಗಿರುವ ಸಾಂಗತ್ಯ :

ಮತ್ತೊಂದು. ಕುರುಹುಂಟು. ನೀನೂ. ಚಿತ್ತಕು. ತ್ಸಹದವ. ಲ್ಲಭನು
ಮತ್ತಕೇ. ಳೆಲೆಯಚ್ಚು. ತೇಂದ್ರಾಬ್ರ. ಹ್ಮೇಂದ್ರ
ಬೀತರಾ. ಗವುಲಾಂತ. ವೇಂದ್ರಾ || (ಪ. -ii)

ರಗಳೆಯ ವಿವಿಧ ಪ್ರಭೇದಗಳು ಕಂಡುಬರುತ್ತವೆ.

ಲಲಿತರಗಳೆ : ತೋಡಿ ಝಂಪೆಯಲ್ಲಿದೆ. ಕೆಲವೆಡೆ ಒಂದು ಸಾಲಿನ ಪದ್ಯರೂಪದಲ್ಲಿಯೂ ಬರೆಯಲಾಗಿದೆ. ಇನ್ನು ಕೆಲವೆಡೆ ಎರಡು ಸಾಲಿನ ಪದ್ಯರೂಪದಲ್ಲಿಯೂ ಬರೆಯಲಾಗಿದೆ.

ಕ್ರೂರತರ. ವಾದಿಮದ. ವಾರಣಮ್ಮ. ಗೇಂದ್ರ ಘನ
ಸಾರವೀ. ರಾಚಾರ್ಯ, ವಿನುತಘನ, ಚರ್ಯಾ
ವೃಷಭಸೇ.ನಾಚಾರ್ಯ. ವಸುಧೆಗಪ್ರ, ತಿಚರ್ಯ
ಅಸಮಶ್ರೀ. ವೀರಸೇ, ನಾಚಾರ್ಯ, ವರ್ಯ
ಜ್ಞಾನನಿಧಿ. ವರಸಿದ್ಧಿ. ಸೇನಮುನಿ. ನಾಥಶುಭ
ಧ್ಯಾನಕರ. ಸಿಂಹ್ವಿಣಂ. ದ್ಯಾಮುನಿಪ. ಶರಣೂ
ವರಕುಂದ. ಕುಂದಮುನಿ. ವರಬಾಹು. ಬಲ್ಯದು
ರ್ಧರದೋಷ. ಹರಭೂತ. ಬಲ್ಯಮುನಿ. ಶರಣೂ (ಪ.-i)

ಉತ್ಸಾಹರಗಳೆ : (ರಚ್ಚೆ ರೂಪಕ ತಾಳದಲ್ಲಿ ಎರಡು ಸಾಲಿನ ಒಂದು ಪದ್ಯರೂಪದಲ್ಲಿ ಬರೆಯಲಾಗಿದೆ)

ಧರ್ಮ. ಚಕ್ರ. ವನ್ನು. ನಡೆಸಿ
ನಿರ್ಮ. ಲಾತ್ಮ. ಕರನ್ನು. ದ್ಧರಿಸಿ
ಧರ್ಮ. ದಾಂಧ. ರನ್ನು ತ್ಯಜಿಪ
ಕರ್ಮ. ಹರರ. ಯಕ್ಷ ರರ್ಚಿಪೆ ||
ಕಲಿಯ. ದೃಷ್ಟ. ನೃಪರ. ಮೆಟ್ಟಿ
ಕಲಿಲ. ದೋಷ. ಗಳನು. ಕಟ್ಟಿ
ಕಲಿತ. ಪುಣ್ಯ. ದೃಮವಿ. ಸಿಷ್ಟ
ಲಲಿತ. ಯಕ್ಷ. ರಡಿಗ. ಳರ್ಚಿಪೆ. (ಪ.-i)

ಮಂದಾನಿಲರಗಳೆ :

ಪನ್ನಗೇಂ. ದ್ರನರಾ. ಣೆಪನ್ನ. ಗವೇಣಿ
ಪನ್ನಂಕೆ. ಯತ್ರಾಣಿ. ಪಾಹಿಕ್ಕ. ಪಾಣಿ
ಕನಕಕಿ. ರಣಗಾ. ತ್ರೆಕಾರು. ಣ್ಯಪಾತ್ರೆ
ಘನಕೃಪಾ. ಕರದಾ. ತ್ರೆಮಿಸುಪ. ತ್ರಿಣೇತ್ರೆ (ಪ. -i)

ಕವಿಗೆ ವಿವಿಧ ಮಟ್ಟುಗಳ ತುಂಡುಪದ್ಯಗಳನ್ನು ರಚಿಸುವುದರಲ್ಲಿ ಪರಿಶ್ರಮವಿರುವುದು

ಕಂಡುಬರುತ್ತದೆಯಲ್ಲದೆ, ಧ್ವನಿಕಾವ್ಯದಲ್ಲಿ ಬರುವ ಕೆಲವು ಛಂದೋರೂಪದ ಪದ್ಯಗಳ ರಚನೆಯಲ್ಲಿಯೂ ಸಾಕಷ್ಟು ಪರಿಶ್ರಮವಿರುವುದು ಕಂಡುಬರುತ್ತದೆ.

ಭಾಷಾಶೈಲಿಯ ದೃಷ್ಟಿಯಲ್ಲಿ ಮೇಲಿನ ವಿವಿಧ ಕಾವ್ಯಗಳು ತಮ್ಮದೇ ಆದ ಸ್ವೋಪಜ್ಞತೆಯನ್ನು ತೋರಿರುವುದರ ಜೊತೆಗೆ ಕೆಲವು ಪದಪುಂಜಗಳನ್ನು ಅಲಂಕಾರದಿಂದೊಡಗೂಡಿದ ವಾಕ್ಯಪುಂಜಗಳನ್ನು ಪರಂಪರಾನುಗತವೋ ಎಂಬಂತೆ ಕಥಾವಸ್ತುವಿನೊಂದಿಗೆ ಮೈಗೂಡಿಸಿಕೊಂಡು ಬಂದಿರುವುದನ್ನು ಕಾಣಬಹುದಾಗಿದೆ.

ಮೇಲಿನ ಕೃತಿಗಳಲ್ಲಿ ಆದಿಪುರಾಣ ಮತ್ತು ಪುಣ್ಯಾಸ್ರವದ ಆದೀಶ್ವರರ ಕಥೆಗಳು ಚಂಪೂಕಾವ್ಯಗಳಾಗಿವೆ. ಅವುಗಳಲ್ಲಿ ಒಂದು ಪದ್ಯಪ್ರಧಾನ ಮತ್ತೊಂದು ಗದ್ಯಪ್ರಧಾನ. ಚಾವುಂಡರಾಯಪುರಾಣ ಮತ್ತು ಹಸ್ತಿಮಲ್ಲನ ಪೂರ್ವಪುರಾಣಗಳು ಗದ್ಯಗ್ರಂಥಗಳಾಗಿವೆ. ಪುರುದೇವಚರಿತ ಸಾಂಗತ್ಯವಾದರೆ, ಆದೀಶ್ವರರ ಯಕ್ಷಗಾನ ಜಾನಪದ ಪ್ರಕಾರದ್ದಾಗಿದೆ. ಗ್ರಂಥದ ಚೌಕಟ್ಟು, ನಿರೂಪಣೆಯ ವಿಧಾನ ಭಿನ್ನವಾದರೂ ವಸ್ತು-ಗುರಿಗಳು ಒಂದೇ ಆಗಿ ಕಾಣುತ್ತವೆ. ಆದಿಪುರಾಣ ರಸಭಾವಗಳ ಮೇರುತುಂಗ. ಉಳಿದವುಗಳಲ್ಲಿ ಈ ಪರಮಾವಧಿಯೆಂಬುದಿಲ್ಲ. ಅವು ಆಯಾ ಕಾಲದ ಅಗತ್ಯವನ್ನು ಪೂರೈಸಲೆಂಬಂತೆ ಮೂಡಿಬಂದವು. ಈ ಹಿನ್ನೆಲೆಯಲ್ಲಿ ಅವು ಉತ್ತಮ ಮಟ್ಟದವು, ಅಷ್ಟೇ.

## ಟಿಪ್ಪಣಿಗಳು

೧. ಜಿ. ಎಸ್. ಶಿವರುದ್ರಪ್ಪ (ಸಂ.) ಪಂಪ : ಒಂದು ಅಧ್ಯಯನ, ಲೇ. ಜಿ. ಎಚ್. ನಾಯಕ್,'ಪಂಪನ ಅಭಿವ್ಯಕ್ತಿ', ಪು. ೨೧೨.

೨. ಎಸ್. ಜಿ. ನರಸಿಂಹಾಚಾರ್, 'ಆದಿಪುರಾಣಂ' ಮುನ್ನುಡಿ, ಪು. ೧೩.

೩. ಅದೇ.

೪. ಕೆ. ಜಿ. ಕುಂದಣಗಾರ. ಎ. ಪಿ. ಚೌಗುಲೆ (ಸಂ.), 'ಆದಿಪುರಾಣಂ', ಉಪೋದ್ಘಾತ, ಪು. ೬.

೫. ಅದೇ.

೬. ಜಿ. ಎಸ್. ಶಿವರುದ್ರಪ್ಪ (ಸಂ.) ಪಂಪ : ಒಂದು ಅಧ್ಯಯನ, ಲೇ. ಜಿ. ಎಸ್. ಸಿದ್ಧಲಿಂಗಯ್ಯ, 'ಪಂಪ ಪರಂಪರೆಯ ನಿರ್ಮಾಪಕ', ಪು. ೨೯೧.

೭. ಬಿ. ರಾಮಚಂದ್ರರಾವ್, 'A Descriptive Grammar of Pampabharata', ಪು. ೭೯.

೮. ಅದೇ, ಪು. ೧೪೦.

೯. ಅದೇ, ಪು. ೧೭೯.

೧೦. ಅದೇ, ಪು. ೧೮೭.

೧೧. ಕಾವ್ಯಾದರ್ಶ I-೧೪-೧೫.

೧೨. ಅದೇ, I-೧೬-೨೦.

೧೩. ಜಿ. ಎಸ್. ಶಿವರುದ್ರಪ್ಪ, 'ಪರಿಶೀಲನ', ಪು. ೧೧.
೧೪. ಕೆ. ಜಿ. ಕುಂದಣಗಾರ-ಎ. ಪಿ. ಚೌಗುಲೆ (ಸಂ.) 'ಆದಿಪುರಾಣಂ', ಮುನ್ನುಡಿ, ಪು. ೨೫.
೧೫. ಮುಳಿಯ ತಿಮ್ಮಪ್ಪಯ್ಯ, 'ನಾಡೋಜ ಪಂಪ', ಪು. ૩೭೮.
೧೬. ಪ್ರಬುದ್ಧ ಕರ್ನಾಟಕ, ૩೮-i.
೧೭. ಸಿ. ಪಿ. ಕೆ. , 'ಪಂಪ-ಕೆಲವು ಮುಖಗಳು', ಪು. ೨೫.
೧೮. ಜಿ. ಎಸ್. ಶಿವರುದ್ರಪ್ಪ (ಸಂ.) 'ಪಂಪ-ಒಂದು ಅಧ್ಯಯನ', ಲೇ. ಜಿ. ವರದರಾಜ ರಾವ್, 'ಧಾರ್ಮಿಕ ಕವಿಯಾಗಿ ಪಂಪ' ಪು. ೮೬.
೧೯. ಕರ್ನಾಟಕ ಭಾರತಿ-ಸಂ. ೫ ಸಂ. ೧, ಎಂ. ಎ. ಕಲಬುರ್ಗಿ, 'ಆದಿಪುರಾಣ ಮತ್ತು ಪ್ರಭುಲಿಂಗ ಲೀಲೆ', ಪು. ೯೪.
೨೦. ತೀ. ನಂ. ಶ್ರೀ. 'ಪಂಪ', ಪು. ೧೪.
೨೧. ಎಸ್. ವಿ. ರಂಗಣ್ಣ, 'ಶೈಲಿ-೧', ಪು. ೬೪.
೨೨. ಅದೇ, ಪು. ೬೫.
೨೩. ಎಂ. ಮರಿಯಪ್ಪ ಭಟ್ಟ, 'ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ', ಪು. ૩೮.
೨೪. 'ಮಹಾಕವಿ ಪಂಪ ಹಾಗೂ ಆತನ ಕೃತಿಗಳು' ಆರು ಉಪನ್ಯಾಸಗಳು, ಕರ್ನಾಟಕ ವಿಶ್ವವಿದ್ಯಾಲಯ, ಲೇ. ಡಿ. ಎಸ್. ಕರ್ಕಿ, 'ಪಂಪನ ಶೈಲಿ : ಮಾರ್ಗ ಮತ್ತು ದೇಸಿ', ಪು. ೫೬.
೨೫. ಪಂಪ : ಐ. ಬಿ. ಎಚ್. ಪ್ರಕಾಶನ, ಪು. ೨೪೪.
೨೬. ಕನ್ನಡ ಕೈಪಿಡಿ, ಪು. ೧೨೭
೨೭. ಟಿ. ವಿ. ವೆಂಕಟಾಚಲ ಶಾಸ್ತ್ರೀ, 'ಕನ್ನಡ ಛಂದೋವಿಹಾರ', ಪು. ೮೭.
೨೮. ರಂ. ಶ್ರೀ. ಮುಗಳಿ, 'ಪ್ರಾಚೀನ ಕನ್ನಡ ಸಾಹಿತ್ಯದ ರೂಪಗಳು'. ಪು. ೫೨.
೨೯. ಟಿ. ವಿ. ವೆಂಕಟಾಚಲ ಶಾಸ್ತ್ರೀ, 'ಕನ್ನಡ ಛಂದಸ್ಸು', ಪು. ೪೮.
೩೦. ಟಿ. ವಿ. ವೆಂಕಟಾಚಲ ಶಾಸ್ತ್ರೀ, 'ಕನ್ನಡ ಛಂದೋವಿಹಾರ' ಪು. ೧೦೪-೧೦೫.
೩೧. ಟಿ. ವಿ. ವೆಂಕಟಾಚಲ ಶಾಸ್ತ್ರೀ, ಪೂರ್ವೋಕ್ತ, ಪು. ೯೮ ರಿಂದ ೧೦೮.
೩೨. ಟಿ. ವಿ. ವೆಂಕಟಾಚಲ ಶಾಸ್ತ್ರೀ, ಪೂರ್ವೋಕ್ತ, ಪು. ೮೪ ರಿಂದ ೧೦೮.
೩೩. ಕಮಲಾ ಹಂಪನಾ, ಕೆ. ಆರ್. ಶೇಷಗಿರಿ, (ಸಂ.) 'ಚಾವುಂಡರಾಯ ಪುರಾಣ', ಮುನ್ನುಡಿ, ಹಂಪ. ನಾಗರಾಜಯ್ಯ, ಪು. ೫
೩೪. ಟಿ. ವಿ. ವೆಂಕಟಾಚಲ ಶಾಸ್ತ್ರೀ, 'ಚಾಮುಂಡರಾಯ', ಪು. ૩೯.
೩೫. ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ, ૩, ಮೈಸೂರು ವಿಶ್ವವಿದ್ಯಾನಿಲಯ, ಪು. ೫೨೧.
೩೬. ರಂ. ಶ್ರೀ. ಮುಗಳಿ, 'ಕನ್ನಡ ಸಾಹಿತ್ಯದ ಇತಿಹಾಸ', ಪು. ೫೯.
೩೭. ರಂ. ಶ್ರೀ. ಮುಗಳಿ, 'ಕನ್ನಡ ಸಾಹಿತ್ಯ ಚರಿತ್ರೆ', ಪು. ೧೧೫.
೩೮. ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ-೪, ಮೈಸೂರು, ಪು. ೧೭೯.

೩೯. ದೇ. ಜವರೇಗೌಡ (ಸಂ.), 'ಪುಣ್ಯಾಸ್ರವ', ಪೀಠಿಕೆ, ಪು. ೧೪೯.

೪೦. 'ಯಕ್ಷಗಾನ (ಎಂಟು ಉಪನ್ಯಾಸಗಳು)' ಕರ್ನಾಟಕ ವಿಶ್ವವಿದ್ಯಾಲಯ, ಪ್ರಸಾರಾಂಗ, ಲೇ. ಬಿ. ಎಸ್. ಶ್ರೀಧರ, 'ಯಕ್ಷಗಾನ ಮತ್ತು ಅದರ ಉಗಮ ಹಾಗೂ ವಿಕಾಸ', ಪು. ೩.

## ಅಧ್ಯಾಯ ೮

# ಕನ್ನಡ ಆದಿತೀರ್ಥಂಕರ ಚರಿತ್ರೆಗಳ ಒಟ್ಟು ನೋಟ : ಉಪಸಂಹಾರ

ಇದುವರೆಗೆ ವಿವರವಾಗಿ ಪರಿಗಣಿಸಲಾದ ಆದಿತೀರ್ಥಂಕರ ಚರಿತ್ರೆಗಳ ಕಥಾಘಟ್ಟ ಗಳಲ್ಲಿ ಕಂಡುಬರುವ ಸಾಮ್ಯವೈಷಮ್ಯಗಳ ಒಟ್ಟುನೋಟವು ಹೀಗಿದೆ.

ಜಯವರ್ಮಭವದ ವರ್ಣನೆಯಲ್ಲಿ ಪಂಪನು ಪೂರ್ವಪುರಾಣವನ್ನನುಸರಿಸಿದ್ದರೂ ಅಲ್ಲಲ್ಲಿ ಅಲ್ಪಸ್ವಲ್ಪ ಸೇರ್ಪಡೆಗಳನ್ನು ಮಾಡಿಕೊಂಡು ಕಾವ್ಯಸೌಂದರ್ಯದ ಮೆರುಗನ್ನು ನೀಡಿದ್ದಾನೆ. ಅನಂತರದ ಕವಿಗಳು ಇಲ್ಲಿ ಬರುವ ಹರವನ್ನು ಕೈಬಿಟ್ಟು ತಮ್ಮ ಸಂಕ್ಷಿಪ್ತ ಭೂಮಿಕೆಯಲ್ಲಿ ಅಡಕಗೊಳಿಸಿ ಹೇಳುವಾಗ, ಕಾವ್ಯಾಂಶಕ್ಕಿಂತಲೂ ಕಥಾಂಶಕ್ಕೇ ಹೆಚ್ಚು ಗಮನಕೊಟ್ಟಿದ್ದಾರೆ. ಇದಕ್ಕೆ ಅಪವಾದವಾಗಿ ಪುಣ್ಯಾಸ್ರವದ ಆದೀಶ್ವರರ ಕಥೆ ಹಾಗೂ ಅದಿಪರಮೇಶ್ವರನ ಯಕ್ಷಗಾನ—ಇವುಗಳು ಅಲ್ಪಸ್ವಲ್ಪ ವಿವರಗಳನ್ನು ನೀಡಲು ಯತ್ನಿಸಿವೆಯಾದರೂ ಅಲ್ಲಿಯೂ ಕಥೆಯ ಮುಖ್ಯ ಹಂದರಕ್ಕೇ ಹೆಚ್ಚಿನ ಪ್ರಾಮುಖ್ಯವನ್ನು ನೀಡಲಾಗಿದೆ. ಪೂರ್ವಪುರಾಣದಲ್ಲಿ ಕಂಡುಬಾರದ ಆದರೆ ಆದಿಪುರಾಣದಲ್ಲಿ ಸೇರ್ಪಡೆಯಾಗಿರುವ ಹುತ್ತದ ವೃತ್ತಾಂತವು ಎಲ್ಲ ಕನ್ನಡ ಆದಿತೀರ್ಥಂಕರ ಚರಿತ್ರೆಗಳಲ್ಲಿಯೂ ಕಂಡುಬರುತ್ತದೆ. ಪ್ರಧಾನವಾಗಿ ಉತ್ತರಕಾಲೀನ ಕಾವ್ಯಗಳು ಆದಿಪುರಾಣದ ಪರಂಪರೆಗೆ ಸೇರಿದ ಕಾವ್ಯಗಳಾಗಿ ಕಂಡುಬಂದರೂ ಅವು ತಮ್ಮ ಇತರ ಕೆಲವು ಪೂರ್ವವರ್ತಿ ಕಾವ್ಯಗಳನ್ನು ಅನುಸರಿಸಿರುವುದು ಕಂಡುಬರುತ್ತದೆ. ಉದಾಹರಣೆಗೆ, ಶಾಂತಕೀರ್ತಿಯು ಪುರುದೇವಚರಿತ್ರೆಯಲ್ಲಿ ಚಾವುಂಡರಾಯಪುರಾಣವನ್ನು ಅನುಸರಿಸಿರುವ ಸಂಗತಿ, ಬೊಮ್ಮಣ್ಣನು ಹಸ್ತಿಮಲ್ಲನ ಪೂರ್ವಪುರಾಣದ ಉಪಮಾಲಂಕಾರಾದಿ ಅಂಶಗಳನ್ನು ತೆಗೆದುಕೊಂಡಿರುವ ಸಂಗತಿಗಳನ್ನು ಇಲ್ಲಿ ನೆನೆಯಬಹುದಾಗಿದೆ.

ಮಹಾಬಲನ ಭವನಿರೂಪಣೆಯಲ್ಲಿ ಆದಿಪುರಾಣವು ಪೂರ್ವಪುರಾಣವನ್ನನುಸರಿಸಿದೆಯಾದರೂ ಅಲ್ಲಲ್ಲಿ ಕಾವ್ಯೋಚಿತ ವ್ಯತ್ಯಾಸಗಳು ಕಂಡುಬರುತ್ತವೆ. ಪೂರ್ವಪೀಠಿಕಾರೂಪದಲ್ಲಿ ಬರುವ ಮಹಾಬಲನ ಜನ್ಮಸ್ಥಾನವಾದ ಅಳಕಾಪುರದ ವರ್ಣನೆಯನ್ನು ಅತ್ಯಂತ ಭಾವುಕನಾಗಿ ನೀಡುವಲ್ಲಿಯಾಗಲಿ, ಅತಿಬಳನ ವೈರಾಗ್ಯ ಸನ್ನಿವೇಶಕ್ಕೆ ಕಲ್ಪಿಸುವ ನಿಮಿತ್ತವಾಗಲಿ, ಅದರ ನಿರೂಪಣೆಯಲ್ಲಿಯಾಗಲಿ, ಮಹಾಬಲನ ವಿಷಯಲಂಪಟತೆಯ ವಿವರಗಳಾಗಲಿ, ಜೀವಾಜೀವ ಮಂಡನೆಯಲ್ಲಾಗಲಿ, ಅರವಿಂದನ ಸಾವಿನ ಚಿತ್ರಣವನ್ನು ಮೂಡಿಸುವಲ್ಲಿಯಾಗಲಿ ಪಂಪನ ಸ್ವೋಪಜ್ಞತೆ ಪ್ರಕಟವಾಗುತ್ತದೆ. ಕಾವ್ಯದ ಸೂಕ್ಷ್ಮ ನಾಡಿಯ ಮಿಡಿತವನ್ನು ನವಿರಾಗಿ ಮೀಟುವ ಕಲಾವಂತಿಕೆಯುಳ್ಳ ನಿಪುಣನಾಗಿ ಕವಿ ಕಂಡುಬರುತ್ತಾನೆ. ಚಾವುಂಡರಾಯಪುರಾಣವು ಅತಿಬಳನ ವೈರಾಗ್ಯ ಸನ್ನಿವೇಶದ ವಿವರದಲ್ಲಿ, ಅರವಿಂದನ ಸಾವಿನ ರೀತಿಯ ಚಿತ್ರಗತವಾದ ವಿವರವನ್ನು ನೀಡುವಲ್ಲಿ, ದಂಡಕನ ಕಥಾನಿರೂಪಣೆಯಲ್ಲಿ ಆಂತರಿಕವಾಗಿ ಆದಿಪುರಾಣವನ್ನು ಅನುಸರಿಸಿದೆಯಲ್ಲದೆ ಕೆಲವೆಡೆ

ಶಾಬ್ದಿಕವಾಗಿಯೂ ಅದನ್ನು ಅನುಸರಿಸಿರುವುದು ಕಂಡುಬರುತ್ತದೆ. ಹಸ್ತಿಮಲ್ಲನು ಈ ಕೆಲವು ಅಂಶಗಳಲ್ಲಿ ಕ್ವಚಿತ್ತಾಗಿ ಪೂರ್ವಪುರಾಣವನ್ನೂ, ಅಧಿಕವಾಗಿ ಚಾವುಂಡರಾಯ ಪುರಾಣವನ್ನೂ ಅನುಸರಿಸಿರುವುದು ಗೋಚರವಾಗುತ್ತದೆ. ಪುಣ್ಯಾಸ್ರವದ ಆದೀಶ್ವರರ ಕಥೆ ಈ ಭಾಗದಲ್ಲಿ ಉಳಿದ ಆದಿತೀರ್ಥಂಕರಚರಿತ್ರೆಗಳಿಗಿಂತ ವಿಭಿನ್ನವಾಗಿ ನಿಲ್ಲುತ್ತದೆ. ಅತಿಬಳನು ಇದ್ದಕ್ಕಿದ್ದಂತೆ ವಿನಾಕಾರಣ ವೈರಾಗ್ಯಪರನಾದನೆಂದು ಹೇಳುವಲ್ಲಿ ಮಾತ್ರ ಪೂರ್ವಪುರಾಣವನ್ನು ಹೋಲುತ್ತದೆಯೇ ಹೊರತು, ಉಳಿದಂತೆ ಇಲ್ಲಿಯ ನಿರೂಪಣೆ ಭಿನ್ನವಾಗಿ ನಿಲ್ಲುತ್ತದೆ. ಪರಂಪರಾನುಗತವಾಗಿ ಬಂದ ಕಥಾಚೌಕಟ್ಟಿನಲ್ಲಿ ಕೆಲವು ಹೊಸ ವಿವರಗಳನ್ನು ನೀಡಿದ್ದಾನೆ. ಕುರುವಿಂದನು ಬೇಟೆಯಾಡಲು ಸನ್ನದ್ಧನಾದ ರೀತಿ, ಆತನು ತಂದೆಯಲ್ಲಿ ತೋರುವ ಅಭಿಮಾನಾದಿ ಮಾತುಗಳಿಂದ ಈ ಅಂಶ ಸ್ಪಷ್ಟವಾಗುತ್ತದೆ. ಪುರುದೇವಚರಿತವು ಅಧಿಕವಾಗಿ ಚಾವುಂಡರಾಯಪುರಾಣವನ್ನು ಕ್ವಚಿತ್ತಾಗಿ ಆದಿಪುರಾಣ, ಹಸ್ತಿಮಲ್ಲನ ಪೂರ್ವಪುರಾಣಗಳನ್ನು ಅನುಸರಿಸಿರುವುದು ಕಂಡುಬರುತ್ತದೆ. ಆದಿ ಪುರಾಣವು ಅತಿಬಳನ ವೈರಾಗ್ಯ ಸನ್ನಿವೇಶದಲ್ಲಿ ಉಳಿದ ಆದಿತೀರ್ಥಂಕರ ಚರಿತ್ರೆಗಳಲ್ಲಿ ಕಂಡುಬಾರದ ನಾಟಕೀಯ ಸನ್ನಿವೇಶವನ್ನು ಕಲ್ಪಿಸಿ ಸ್ವೋಪಜ್ಞತೆಯನ್ನು ತೋರಿರುವುದಲ್ಲದೆ, ಜೀವಾಜೀವವಾದದ ಸರಣಿಯ ವಿವರವನ್ನು ಸಂಕ್ಷಿಪ್ತವಾಗಿಯಾದರೂ ಆದಿ ಪುರಾಣವನ್ನನುಸರಿಸಿ ಹಿಡಿದಿಟ್ಟಿದೆ. ಉತ್ತರಕಾಲೀನ ಆದಿತೀರ್ಥಂಕರ ಕಾವ್ಯಗಳಲ್ಲಿ ಈ ವಿವರ ಬಂದಿರುವುದು ಇದೊಂದೇ ಕಾವ್ಯದಲ್ಲಿ ಎಂಬ ಹಿರಿಮೆ ಇದಕ್ಕೆ ಸಲ್ಲುತ್ತದೆ. ಅರವಿಂದ ದಂಡಕರ ಕಥಾನಿರೂಪಣೆಯಲ್ಲಿಯೂ ಸಣ್ಣಪುಟ್ಟ ವ್ಯತ್ಯಾಸಗಳು ಕಂಡು ಬರುತ್ತವೆ.

ಲಲಿತಾಂಗಭವದ ವರ್ಣನೆಯಲ್ಲಿ ಆದಿಪುರಾಣವು ಕೆಲವೆಡೆ ಪೂರ್ವಪುರಾಣವನ್ನು ಕನ್ನಡಿಸಿದ್ದರೆ; ಇನ್ನು ಕೆಲವೆಡೆ ತನ್ನದೇ ಆದ ನಿರೂಪಣಾ ವಿಧಾನವನ್ನನುಸರಿಸಿ ಹೆಚ್ಚು ಭಾವಸ್ಪಂದಿಯಾಗಿದೆ. ಸ್ವಯಂಪ್ರಭೆಯ ರೂಪಾತಿಶಯದ ವರ್ಣನೆಯಲ್ಲಿ ಪಂಪ ಬಳಸುವ ಆಲಂಕಾರಿಕ ಶೈಲಿಯು ಬುಗ್ಗೆಯಂತೆ ಚಿಮ್ಮಿ ಒಂದು ರೋಚಕ ಅನುಭವವನ್ನು ತಂದು ಕೊಡುತ್ತದೆ. ಸ್ವರ್ಗಲೋಕದ ವರ್ಣನೆಯಲ್ಲಿಯೂ ಕವಿ ಇದೇ ರೀತಿಯ ತಂತ್ರವನ್ನನುಸರಿಸಿದ್ದಾನೆ. ಪೂರ್ವಪುರಾಣದಲ್ಲಿ ಈ ರೀತಿಯ ವರ್ಣನಾವಿಧಾನವಿಲ್ಲ. ಅಲ್ಲಿಯ ರೀತಿ ಪುರಾಣಶೈಲಿಯದು. ಹಾಗೆಯೇ ಪೂರ್ವಪುರಾಣದಲ್ಲಿ ಕಂಡುಬಾರದ ಲಲಿತಾಂಗ ದೇವನ ಹೃದಯ ವಿದ್ರಾವಕ ಪ್ರಲಾಪ ಪಂಪನಲ್ಲಿ ಮೂಡಿ ಬಂದಿದೆ. ಇದು ಆದಿಪುರಾಣದ ಉತ್ಕೃಷ್ಟಭಾಗಗಳಲ್ಲಿ ಒಂದಾಗಿದ್ದು ಭಾವಮಿಡಿಯುವ ಸೂಕ್ಷ್ಮಸಂವೇದನಾ ಶಕ್ತಿಯಿಂದ ಕೂಡಿದೆ, ಸಾಹಿತ್ಯಲೋಕಕ್ಕೆ ಅತ್ಯಪೂರ್ವ ಕಾಣಿಕೆಯಾಗಿ ಪರಿಣಮಿಸಿದೆ. ಚಾವುಂಡರಾಯ ಪುರಾಣ, ಹಸ್ತಿಮಲ್ಲನ ಪೂರ್ವಪುರಾಣವನ್ನು ಅನುಸರಿಸಿದ್ದರೆ, ಆದಿಪುರಾಣವನ್ನನುಸರಿಸಿ ಹಸ್ತಿಮಲ್ಲನ ಪೂರ್ವಪುರಾಣ ಮತ್ತು ಆದಿಪರಮೇಶ್ವರನ ಯಕ್ಷಗಾನಗಳು ಮೂಡಿ ಬಂದಿವೆ. ಪುಣ್ಯಾಸ್ರವದ ಆದೀಶ್ವರರ ಕಥೆಯ ಆಕರ ಇಂಥದೇ ಎಂದು ನಿರ್ದಿಷ್ಟವಾಗಿ ಗುರುತಿಸಲು ಬರುವುದಿಲ್ಲ. ಪುರುದೇವಚರಿತವು ಚಾವುಂಡರಾಯಪುರಾಣದ ಅನುವರ್ತಿಯಾಗಿದೆ. ಈ ಭವದಲ್ಲಿ ಕಥಾಘಟನೆಗಳಿಗಿಂತಲೂ ಸನ್ನಿವೇಶರಚನೆ ಪ್ರಧಾನವಾಗಿ ಕಂಡುಬರುತ್ತದೆ. ಇಲ್ಲಿ ಪಂಪನನ್ನು ಮೀರಿಸುವ ಕವಿ ಮತ್ತೊಬ್ಬನಿಲ್ಲ. ಜಿನಸೇನರನ್ನು

ಸೇರಿಯೇ ಈ ಮಾತು ಅನ್ವಯಿಸುತ್ತದೆ.

ಶ್ರೀಮತಿ ವಜ್ರಜಂಘ ಭವನಿರೂಪಣೆ ಉಳಿದ ಭವಗಳಿಗಿಂತ ಸುದೀರ್ಘವಾಗಿ ವರ್ಣಿತವಾಗಿದೆ. ಶ್ರೀಮತಿಯು ವಜ್ರಜಂಘನನ್ನು ನೆನೆದು ದುಃಖಿಸುವ ಸನ್ನಿವೇಶ, ತಂದೆತಾಯಿಗಳು ಶ್ರೀಮತಿಯನ್ನು ಸಮಾಧಾನಪಡಿಸುವಾಗಿನ ಸಂದರ್ಭಗಳಲ್ಲಿ ಪೂರ್ವ ಪುರಾಣದಲ್ಲಿಲ್ಲದ ಆರ್ದ್ರ ಭಾವವನ್ನೂ ಮಾರ್ದವತೆಯನ್ನೂ ಪಂಪನು ತಂದಿದ್ದಾನೆ. ಚಾವುಂಡರಾಯಪುರಾಣವು ಪೂರ್ವಪುರಾಣದ ಅನುವರ್ತಿಯಾಗಿದ್ದು ಬಹಳ ಸಂಕ್ಷೇಪ ವಾಗಿ ಕಥೆಯನ್ನು ನಿರೂಪಿಸಿದೆ. ತಂದೆತಾಯಿಗಳು ಶ್ರೀಮತಿಯನ್ನು ಸಮಾಧಾನಪಡಿಸುವ ಕಾರ್ಯಭಾರವನ್ನು ಪಂಡಿತೆಗೆ ಒಪ್ಪಿಸಿ ತಾವು ಹಿಂದಿರುಗಿದ ಸಂಗತಿಯ ನಿರೂಪಣೆಯಲ್ಲಿ ಚಾಮುಂಡರಾಯನು ಪೂರ್ವಪುರಾಣವನ್ನು ಅನುಸರಿಸಿದ್ದಾನೆ. ಪುರುದೇವಚರಿತವು ಚಾಮುಂಡರಾಯನ ಅನುವರ್ತಿಯಾಗಿದೆ. ಹಸ್ತಿಮಲ್ಲನ ಪೂರ್ವಪುರಾಣವು ಆದಿಪುರಾಣದ ಅನುವರ್ತಿ ಎಂಬುದನ್ನು ಮಹತ್ತರದೇವಿಯರ ಉಪದೇಶ, ಶ್ರೀಮತಿ ಜಾತಿಸ್ಮರೆಯಾದ ಸನ್ನಿವೇಶ ಮೊದಲಾದವುಗಳಿಂದ ತಿಳಿಯಬಹುದಾಗಿದೆ. ಪುಣ್ಯಾಸ್ರವದ ಆದೀಶ್ವರರ ಕಥೆ ಭಿನ್ನವಾಗಿ ನಿಲ್ಲುತ್ತದೆ. ಶ್ರೀಮತಿಯು ಮೂರ್ಛೆಗೊಂಡ ರೀತಿ, ಅನಂತರ ವಜ್ರದಂತ ಚಕ್ರವರ್ತಿಯು ಕೇವಲಜ್ಞಾನದ ಒಸಗೆಯನ್ನು ತಿಳಿದು ಶ್ರೀಮತಿಯನ್ನು ನೋಡದೆ ದಾದಿಯನ್ನು ನೇಮಿಸಿದ ಪ್ರಸಂಗ ಮೊದಲಾದ ಎಡೆಗಳಲ್ಲಿ ಇದನ್ನು ಗುರುತಿಸ ಬಹುದಾಗಿದೆ. ಆದಿಪರಮೇಶ್ವರನ ಯಕ್ಷಗಾನದಲ್ಲಿ ಉಳಿದ ಆದಿತೀರ್ಥಂಕರ ಚರಿತ್ರೆ ಗಳಲ್ಲಿ ಕಂಡುಬಾರದ ಶ್ರೀಮತಿಯ ಜನನ ವಿಚಾರವು ಕಂಡುಬರುತ್ತದೆ. ಉಳಿದಂತೆ ಆದಿಪುರಾಣದ ಅನುಸರಣೆಯಿದೆ.

ಪಂಡಿತೆ ಶ್ರೀಮತಿಯನ್ನು ಸಮಾಧಾನಗೊಳಿಸುವ ಸನ್ನಿವೇಶ ಪಂಪನಲ್ಲಿ ಹೆಚ್ಚು ಆತ್ಮೀಯ ಮತ್ತು ವಿಸ್ತೃತ. ಪೂರ್ವಪುರಾಣದಲ್ಲಿ ಈ ಸನ್ನಿವೇಶದಲ್ಲಿ ಔಪಚಾರಿಕತೆ ಕಂಡುಬರುತ್ತದೆ. ಈ ಪ್ರಸಂಗದ ಉಲ್ಲೇಖವು ಆದಿಪರಮೇಶ್ವರನ ಯಕ್ಷಗಾನವನ್ನುಳಿದು ಇತರ ಕಾವ್ಯಗಳಲ್ಲಿ ರೇಖಾಮಾತ್ರವಾಗಿ ಬಂದಿದೆ. ಆದಿಪರಮೇಶ್ವರನ ಯಕ್ಷಗಾನ ಆದಿಪುರಾಣವನ್ನನುಸರಿಸಿ ವಿವರಣೆಯನ್ನು ಸಂಕ್ಷಿಪ್ತವಾಗಿ ನೀಡಿದೆ. ಹಸ್ತಿಮಲ್ಲನು ಸಂಕ್ಷಿ ಪ್ತತೆಯಲ್ಲಿಯೂ ಆದಿಪುರಾಣವನ್ನನುಸರಿಸಿರುವನೆಂಬುದಕ್ಕೆ "ಶ್ರೀಮತಿಯುಂ ಗುಂಟದಿಂ ನೆಲನಂ ಬರೆವುತಿಂತೆಂದಳ್" ಎಂಬ ಚಿತ್ರಕಟ್ಟಿಸುವ ನಿರೂಪಣಾಂಶ ಸಾಕ್ಷಿ ಯಾಗಿದೆ. ಆದಿಪರಮೇಶ್ವರನ ಯಕ್ಷಗಾನದಲ್ಲಿ ಕವಿ ನಾಟಕೀಯತೆಯನ್ನು ಪೂರ್ವಪುರಾಣ ಆದಿಪುರಾಣಗಳಂತೆ ಉಳಿಸಿಕೊಂಡಿದ್ದಾನೆ.

ಧನಶ್ರೀ ಕಥೆಯಲ್ಲಿ ಪೂರ್ವಪುರಾಣಕ್ಕೆ ಪಂಪನು ನೇರವಾಗಿ ಋಣಿಯಾಗಿದ್ದಾನಾ ದರೂ, ನಿರ್ನಾಮಿಕೆಯ ಕಥೆಯಲ್ಲಿ ಪೂರ್ವಪುರಾಣದಲ್ಲಿಲ್ಲದ ಜನಪದ ಕಥೆಯ ಧಾಟಿ ಮೂಡಿ ಬಂದಿದೆ. ಶ್ರೀಮತಿಯ ಭವಾಂತರ ಕಥಾನಿರೂಪಣೆಯ ಸಂದರ್ಭದಲ್ಲಿ ಕೆಲವೆಡೆ ಚಾಮುಂಡರಾಯನು ಆದಿಪುರಾಣವನ್ನು ಶಾಬ್ದಿಕವಾಗಿ ಅನುಕರಿಸಿದ್ದಾನೆ. ಹಸ್ತಿಮಲ್ಲನು ಈ ಪ್ರಸಂಗವನ್ನು ಚಾವುಂಡರಾಯಪುರಾಣದಂತೆ ವರದಿ ಮಾತ್ರವನ್ನಾಗಿಸದೆ ಸಂಕ್ಷಿಪ್ತತೆ ಯಲ್ಲಿಯೂ ಜೀವಕಳೆಯನ್ನು ತಂದಿದ್ದಾನೆ. ಪುಣ್ಯಾಸ್ರವದ ಆದೀಶ್ವರರ ಕಥೆಯ ನಿರ್ನಾ ಮಿಕೆಯ ಕಥೆಯಲ್ಲಿ ಜನಪದ ಕಥೆಯ ಛಾಯೆಯಿಲ್ಲ. ಹೆಸರಿನಲ್ಲಿಯೂ ಅಲ್ಲಲ್ಲಿ ವ್ಯತ್ಯಾಸ

ಕಂಡುಬರುತ್ತದೆ. ಪೂರ್ವಪುರಾಣ, ಆದಿಪುರಾಣಗಳ ಪ್ರಭಾವ ಕಂಡುಬಂದರೂ ನೇರ ಆಕರಗಳೆಂದು ಖಚಿತವಾಗಿ ಹೇಳಲಾಗುವುದಿಲ್ಲ. ಪುರುದೇವಚರಿತವು ನಿರ್ನಾಮಿಕೆಯ ಭವ ನಿರೂಪಣೆಯಲ್ಲಿ ಪೂರ್ವಪುರಾಣದ ಅನುವರ್ತಿಯಾಗಿದ್ದರೆ, ಉಳಿದ ಅಂಶಗಳಲ್ಲಿ ಚಾವುಂಡರಾಯಪುರಾಣವನ್ನು ಹೋಲುತ್ತದೆ. ಆದಿಪರಮೇಶ್ವರನ ಯಕ್ಷಗಾನವು ಆದಿ ಪುರಾಣದ ಕಥಾ ಚೌಕಟ್ಟಿನಲ್ಲಿ ಮೂಡಿ ಬಂದು ತನ್ನದೇ ಆದ ವರ್ಣನಾಂಶವನ್ನು ಪಡೆದಿದೆ. ಹಸ್ತಿಮಲ್ಲನ ಗದ್ಯವನ್ನು ನೇರವಾಗಿ ವಚನ ಭಾಗದಲ್ಲಿ ಅಳವಡಿಸಿಕೊಂಡಿದೆ. ವಜ್ರ ದಂತನು ಹಿಂದಿರುಗಿ ಬಂದು ಶ್ರೀಮತಿಯನ್ನು ನೋಡುವ ಸನ್ನಿವೇಶದಲ್ಲಿ ಪಂಪನು ಪೂರ್ವಪುರಾಣದ ಆಶಯವನ್ನು ಸಂಗ್ರಹಿಸಿದ್ದಾನೆ. ಈ ಭಾಗದಲ್ಲಿ ಚಾವುಂಡರಾಯ ಪುರಾಣವು ಪೂರ್ವಪುರಾಣ, ಆದಿಪುರಾಣಗಳ ಅನುವರ್ತಿಯಾಗಿದೆ. ಹಸ್ತಿಮಲ್ಲನು ಆದಿ ಪುರಾಣವನ್ನು ಅನುಸರಿಸಿದಂತೆ ತೋರುತ್ತದೆ. ಪುಣ್ಯಾಸ್ರವದ ಆದೀಶ್ವರರ ಕಥೆಯು ಉತ್ತರಕಾಲೀನ ಕಾವ್ಯಗಳಿಗಿಂತ ಹೆಚ್ಚಿನ ವಿವರವನ್ನು ನೀಡುತ್ತದೆ. ಪೂರ್ವಪುರಾಣ, ಆದಿಪುರಾಣಗಳ ಆಶಯ ಕಂಡುಬಂದರೂ ನಿರ್ದಿಷ್ಟ ಅನುಕರಣೆ ಕಂಡುಬರುವುದಿಲ್ಲ. ಪುರುದೇವಚರಿತವು ಚಾವುಂಡರಾಯಪುರಾಣವನ್ನೂ ಆದಿಪರಮೇಶ್ವರನ ಯಕ್ಷಗಾನವು ಹಸ್ತಿಮಲ್ಲನ ಪೂರ್ವಪುರಾಣವನ್ನೂ ಅನುಸರಿಸಿದೆ.

ವಜ್ರದಂತನ ಭವಾಂತರ ಕಥಾನಿರೂಪಣೆಯಲ್ಲಿ ಆದಿಪುರಾಣವು ಕಥಾ ಚೌಕಟ್ಟಿನಲ್ಲಿ ಮಾತ್ರ ಪೂರ್ವಪುರಾಣಕ್ಕೆ ಋಣಿಯಾಗಿದೆಯೇ ಹೊರತು ವರ್ಣನಾವಿಧಾನದಲ್ಲಲ್ಲ. ವಿಭೀಷಣನು ಶೋಕತಪ್ತನಾಗಿದ್ದಾಗ ಮಾತೃಚರೆಯಾಗಿದ್ದ ಲಲಿತಾಂಗದೇವನು ಬಂದು ಬೋಧಿಸುವ ಆತ್ಮೀಯ ಧಾಟಿ ಮನವನ್ನು ಸೂರೆಗೊಳ್ಳುತ್ತದೆ. ಶ್ರೀವರ್ಮ ವಿಭೀಷಣರು ಬಲಸಹೋದರರೆಂದು ಹೇಳುವಲ್ಲಿ, ಕೇಶವನನ್ನು ಅರ್ಧಚಕ್ರಿಯೆಂದು ಹೇಳುವಲ್ಲಿ ಚಾವುಂಡರಾಯಪುರಾಣವು ಪೂರ್ವಪುರಾಣವನ್ನು ಅನುಸರಿಸಿದ್ದರೂ ಉಳಿದ ರೇಖಾ ಮಾತ್ರದ ಕಥಾಚೌಕಟ್ಟಿನಲ್ಲಿ ಶಾಬ್ದಿಕವಾಗಿ ಅಲ್ಲಲ್ಲಿ ಆದಿಪುರಾಣವನ್ನು ಅನುಸರಿಸಿದೆ. ಹಸ್ತಿಮಲ್ಲನೂ ಸಹ ಶಾಬ್ದಿಕವಾಗಿ ಆದಿಪುರಾಣವನ್ನು ಅನುಸರಿಸಿದ್ದಾನಲ್ಲದೆ ಆತನು ಕೊಡುವ ವಿಭೀಷಣಾದಿಗಳ ವಿವರ ಆದಿಪುರಾಣದಂತೆಯೇ ಇದೆ.ಅಂದರೆ ಹಸ್ತಿಮಲ್ಲನು ಇಲ್ಲಿಯೂ ಉದ್ದಕ್ಕೂ ಪಂಪನಿಗೆ ಋಣಿಯಾಗಿದ್ದಾನೆ. ಪುಣ್ಯಾಸ್ರವದ ಆದೀಶ್ವರರ ಕಥೆಯಲ್ಲಿ ನಾಮವ್ಯತ್ಯಾಸಗಳು ಕಂಡುಬರುತ್ತವೆ. ಉಳಿದಂತೆ ಪೂರ್ವಪುರಾಣ, ಚಾವುಂಡ ರಾಯಪುರಾಣಗಳ ಕಥಾಚೌಕಟ್ಟಿನಲ್ಲಿ ನಿರೂಪಿತವಾಗಿದ್ದರೂ ಅನುಕರಣೆ ಕಂಡುಬರುವು ದಿಲ್ಲ. ಪುರುದೇವಚರಿತವು ಚಾವುಂಡರಾಯಪುರಾಣವನ್ನೂ ಆದಿಪರಮೇಶ್ವರನ ಯಕ್ಷ ಗಾನವು ಹಸ್ತಿಮಲ್ಲನ ಪೂರ್ವಪುರಾಣವನ್ನೂ ಅನುಸರಿಸಿರುವುದು ಸ್ಪಷ್ಟವಾಗಿ ಕಂಡು ಬರುತ್ತದೆ.

ಆದಿತೀರ್ಥಂಕರ ಚರಿತ್ರೆಗಳಲ್ಲಿ ಯುಗಂಧರ ಚರಿತ್ರೆಯು ಕಥೆಗಾಗಿ ಕಥೆಯೆಂಬಂತೆ ಸಾಂಪ್ರದಾಯಿಕ ನಿರೂಪಣೆಯಾಗಿ ಕಂಡುಬರುತ್ತದೆಯೇ ಹೊರತು ಓದುಗರನ್ನು ಹಿಡಿದಿಡುವ ಕಾವ್ಯಾಂಶ ಕಂಡು ಬರುವುದಿಲ್ಲ. ಪಂಪನು ನೇರವಾಗಿ ಪೂರ್ವಪುರಾಣದಿಂದ ಈ ಭಾಗವನ್ನು ಸಂಗ್ರಹಿಸಿದ್ದಾನೆ. ಚಾವುಂಡರಾಯಪುರಾಣವು ಮತಿಸಾಗರರ ಋದ್ಧಿಯ ವಿಚಾರವನ್ನು ಹೇಳುವಲ್ಲಿ ಪೂರ್ವಪುರಾಣವನ್ನು ಅನುಸರಿಸಿದ್ದರೆ, ಉಳಿದೆಡೆ ಶಾಬ್ದಿಕವಾಗಿ

ಆದಿಪುರಾಣವನ್ನು ಅನುಸರಿಸಿದೆ. ಹಸ್ತಿಮಲ್ಲನು ಆದಿಪುರಾಣವನ್ನು ಅನುಸರಿಸಿದ್ದಾನೆ. ಪುಣ್ಯಾಸ್ರವದ ಆದೀಶ್ವರರ ಕಥೆಯ ಕಥಾಚೌಕಟ್ಟು ಒಂದೇ ಆದರೂ ಅಲ್ಲಲ್ಲಿ ಕೆಲವು ವಿವರಗಳಲ್ಲಿ, ಹೆಸರುಗಳಲ್ಲಿ ವ್ಯತ್ಯಾಸಗಳು ಕಂಡುಬರುತ್ತವೆ. ಇಲ್ಲಿ ಯುಗಂಧರ ಚರಿತ್ರೆಯನ್ನು ಲಲಿತಾಂಗಾದಿ ದೇವತೆಗಳು ನೇರವಾಗಿ ಗಣಧರರ ಮೂಲಕ ತಿಳಿದುಕೊಳ್ಳುವರೆಂದಿದೆ. ಪುರುದೇವಚರಿತವು ಹಸ್ತಿಮಲ್ಲನನ್ನು ಅನುಸರಿಸಿದೆ. ಬೊಮ್ಮಣ್ಣನು, ಆದಿಪುರಾಣ, ಹಸ್ತಿಮಲ್ಲನ ಪೂರ್ವಪುರಾಣಗಳನ್ನು ಅನುಸರಿಸಿರುವುದೇ ಅಲ್ಲದೆ ಕೆಲವೆಡೆಗಳಲ್ಲಿ ವರ್ಣನಾಭಾಗಗಳನ್ನು ಹೆಚ್ಚಾಗಿ ಸೇರಿಸಿದ್ದಾನೆ. ಜಯವರ್ಮನ ದಿಗ್ವಿಜಯ ಸಾಧನೆ, ಜಯವರ್ಮನು ಅಹಮಿಂದ್ರನಾಗಿ ಅನುಭವಿಸಿದ ಸುಖದ ವಿವರ ಬೇರೆಡೆ ವರ್ಣಿತವಾಗಿಲ್ಲ.

ಚಿತ್ರಪಟದ ವೃತ್ತಾಂತ, ವಜ್ರಜಂಘನು ನೆನೆದುಕೊಳ್ಳುವ ಪೂರ್ವ ಭವದ ಪ್ರಣಯ ಪ್ರಸಂಗಗಳು ಪಂಪನಲ್ಲಿ ಹೆಚ್ಚು ಕುಶಲತೆಯಿಂದ ಮಾರ್ದವತೆಯಿಂದ ಮೂಡಿ ಬಂದಿದೆ. ಚಾವುಂಡರಾಯಪುರಾಣವು ಇಲ್ಲಿ ಪೂರ್ವಪುರಾಣಕ್ಕೆ ಹೆಚ್ಚು ಅನುವರ್ತಿಯಾಗಿದೆ. ಚಿತ್ರಪಟವನ್ನು ನೋಡುತ್ತಿದ್ದಂತೆಯೇ ಮೂರ್ಛಿತರಾಗುವ ವಾಸವಾದಿಗಳು ಇಲ್ಲಿ ಕಂಡುಬರುತ್ತಾರೆಯೇ ಹೊರತು ಆದಿಪುರಾಣದ ಭಾವಸ್ಪಂದನದ ಚಿತ್ರಣವಿಲ್ಲ. ಹಸ್ತಿಮಲ್ಲನ ಪೂರ್ವಪುರಾಣವು ಸಂಕ್ಷಿಪ್ತವಾಗಿದ್ದರೂ ಆದಿಪುರಾಣದ ಕೆಲವು ಸನ್ನಿವೇಶಗಳನ್ನು ಹಿಡಿದಿಟ್ಟಿದೆ. ವಾಸವ ದುರ್ದಂತರನ್ನು ಶ್ರೀಮತಿ ನಿವಾರಿಸಿದ ರೀತಿ, ವಜ್ರದಂತನು ಚಿತ್ರಪಟವನ್ನು ಕಂಡಾಗಿನ ಸ್ಥಿತಿ ಇಂತಹ ಎಡೆಗಳಲ್ಲಿ ಇದನ್ನು ಗಮನಿಸಬಹುದಾಗಿದೆ. ಪುಣ್ಯಾಸ್ರವದ ಆದೀಶ್ವರರ ಕಥೆಯಲ್ಲಿ ಕಥಾಚೌಕಟ್ಟಿನಲ್ಲಿ ಯಾವ ವ್ಯತ್ಯಾಸವೂ ಇಲ್ಲದಿದ್ದರೂ ತನ್ನದೇ ಆದ ವರ್ಣನೆಗಳನ್ನು ಅದು ನೀಡಿದೆ. ಪುರುದೇವಚರಿತವು ಚಾವುಂಡರಾಯ ಪುರಾಣವನ್ನು ಅನುಸರಿಸಿದ್ದರೆ, ಆದಿ ಪರಮೇಶ್ವರನ ಯಕ್ಷಗಾನ ಹಸ್ತಿಮಲ್ಲನ ಪೂರ್ವ ಪುರಾಣವನ್ನು ಅನುಸರಿಸಿದೆ.

ಶ್ರೀಮತಿ ವಜ್ರಜಂಘರ ವಿವಾಹಪ್ರಸಂಗ, ಅವರ ಬೀಳ್ಕೊಡುಗೆಯ ಪ್ರಸಂಗಗಳು ಜಿನಸೇನರ ಪೂರ್ವಪುರಾಣಕ್ಕಿಂತ ಮಿಗಿಲಾಗಿ ಪಂಪನ ಆದಿಪುರಾಣದಲ್ಲಿ ಕಂಡುಬರುತ್ತವೆ. ಪಂಪಕವಿ ಈ ಸಂದರ್ಭಗಳಲ್ಲಿ ಲೌಕಿಕ ಕ್ರಿಯಾಭಿವ್ಯಕ್ತಿಯ ಸುಂದರ ಭಾವುಕ ಚಿತ್ರವನ್ನೇ ನಮ್ಮ ಮುಂದೆ ನಿಲ್ಲಿಸಿದ್ದಾನೆ. ಒಂದು ಸುಂದರ ಕಲಾಸೃಷ್ಟಿಯಾಗಿ ಇವು ಪರಿಣಮಿಸಿವೆ. ಉತ್ತರಕಾಲೀನ ಕಾವ್ಯಗಳು ಸಹಜವಾಗಿಯೇ ತಮ್ಮ ಸಂಕ್ಷಿಪ್ತ ಕಥಾಚೌಕಟ್ಟಿನಲ್ಲಿ ಈ ಸುಂದರ ಸನ್ನಿವೇಶಗಳನ್ನು ಹಿಡಿದಿಡಲು ಅಸಮರ್ಥವಾಗಿವೆ. ಚಾಮುಂಡರಾಯನು ಈ ಸಂದರ್ಭದಲ್ಲಿ ಪೂರ್ವಪುರಾಣವನ್ನೂ ಹಸ್ತಿಮಲ್ಲನು ಆದಿಪುರಾಣವನ್ನೂ ಅನುಸರಿಸಿದ್ದಾರೆ. ಪುಣ್ಯಾಸ್ರವದ ಆದಿಪರಮೇಶ್ವರರ ಕಥೆಯು ಕೆಲವು ಅಂಶಗಳನ್ನು ಹೆಚ್ಚಾಗಿ ಹೇಳಿದೆ. ವಜ್ರಜಂಘ ಶ್ರೀಮತಿಯರ ಮಕ್ಕಳ ವಿವಾಹಾದಿ ವಿಚಾರವು ಇಲ್ಲಿ ಮಾತ್ರ ಕಂಡುಬರುತ್ತದೆ. ಪುರುದೇವಚರಿತವು ಚಾವುಂಡರಾಯಪುರಾಣಕ್ಕೂ; ಆದಿಪರಮೇಶ್ವರ ಯಕ್ಷಗಾನವು ಆದಿಪುರಾಣ ಮತ್ತು ಪೂರ್ವಪುರಾಣಗಳಿಗೂ ಋಣಿಯಾಗಿವೆ.

ಆದಿತೀರ್ಥಂಕರ ಚರಿತ್ರೆಗಳಲ್ಲಿ ಮೈದೋರುವ ವಜ್ರಬಾಹು ಮತ್ತು ವಜ್ರದಂತರ ವೈರಾಗ್ಯ ಸನ್ನಿವೇಶಗಳು ಗಣನೀಯವಾಗಿವೆ. ಈ ಸನ್ನಿವೇಶಗಳ ಮೂಲಕ ಮೈಗೂಡಿ

ಬರುವ ವೈರಾಗ್ಯಭಾವದ ನಿರೂಪಣೆಯಲ್ಲಿ ಧಾರ್ಮಿಕ ವಾತಾವರಣ ದಟ್ಟವಾಗಿ ಆವರಿಸುತ್ತದೆ. ಇದುವರೆಗೆ ಲಲಿತಾಂಗ-ಸ್ವಯಂಪ್ರಭೆ, ಶ್ರೀಮತಿ-ವಜ್ರಜಂಘರ ಪ್ರಣಯ ಪ್ರಸಂಗದಲ್ಲಿ ತನ್ಮಯವಾಗಿದ್ದ ಓದುಗರ ಮನಸ್ಸು ಜೀವನದ ಮತ್ತೊಂದು ಮುಖದತ್ತ ಹೊರಳುತ್ತದೆ.; ಶೃಂಗಾರದಿಂದ ವೈರಾಗ್ಯದತ್ತ ಎನ್ನುವಂತೆ. ವಜ್ರಬಾಹುವಿನ ವೈರಾಗ್ಯ ಸನ್ನಿವೇಶದಲ್ಲಿ ಪೂರ್ವಪುರಾಣದಲ್ಲಿರುವ ಅಂಶಕ್ಕಿಂತ ಸ್ವಲ್ಪ ಹೆಚ್ಚಿನ ಕಥಾವಿವರಗಳನ್ನು ಸೇರಿಸಿ, ಪಂಪನು ಈ ಸನ್ನಿವೇಶವು ಮತ್ತಷ್ಟು ತೀವ್ರಗೊಳ್ಳುವಂತೆ ಮಾಡಿದ್ದಾನೆ. ಮೇಘದ ವಿನ್ಯಾಸವನ್ನು ನೋಡಿ ಆಕರ್ಷಣೆಗೊಳ್ಳುವ ವೃತ್ತಾಂತವು ಎರಡು ಕಾವ್ಯಗಳಲ್ಲಿಯೂ ಕಂಡುಬರುತ್ತದೆಯಾದರೂ ಮೇಘದಲ್ಲಿ ತೋರಿದ ಚೈತ್ಯಾಲಯದ ವಿನ್ಯಾಸವನ್ನು ಬರೆದುಕೊಳ್ಳುವ ಚೆಲುವಾದ ಸ್ವೋಪಜ್ಞ ಅಂಶ ಪೂರ್ವಪುರಾಣದಲ್ಲಿಲ್ಲ. ವಜ್ರದಂತನ ವೈರಾಗ್ಯ ಸನ್ನಿವೇಶವನ್ನು ಪಂಪನು ಪೂರ್ವಪುರಾಣದಿಂದ ಬಹುತೇಕವಾಗಿ ಕನ್ನಡೀಕರಿಸಿದ್ದಾನೆ. ಚಾಮುಂಡರಾಯ, ಹಸ್ತಿಮಲ್ಲರು ಪಂಪನನ್ನು ಅನುಕರಿಸಿದ್ದಾರೆ. ಪುರುದೇವಚರಿತವು ಚಾವುಂಡರಾಯಪುರಾಣವನ್ನು ಅನುಸರಿಸಿದೆ. ಆದಿಪರಮೇಶ್ವರನ ಯಕ್ಷಗಾನವು ಪಂಪನನ್ನು ಅನುಸರಿಸಿದೆಯಲ್ಲದೆ, ಉತ್ತರಕಾಲೀನ ಕಾವ್ಯಗಳು ಕೈಬಿಟ್ಟಿರುವ ವರ್ಣನಾಂಶಗಳನ್ನು ನೀಡುತ್ತದೆ.

ವಜ್ರಜಂಘನ ಸೇನಾಧಿಪತಿ ಮೊದಲಾದವರ ಹಾಗೂ ಹುಲಿ ಮೊದಲಾದ ತಿರ್ಯಗ್ಜಂತುಗಳ ಭವಾಂತರ ಕಥೆಯಲ್ಲಿ ಭವನಿರೂಪಣೆಯ ಅಂಶವನ್ನು ಬಿಟ್ಟರೆ ವಿಶೇಷವಾದ ಕಾವ್ಯಾಂಶವು ಕಂಡು ಬರುವುದಿಲ್ಲ. ಪುಣ್ಯಾಸ್ರವದ ಆದಿಪರಮೇಶ್ವರರ ಕಥೆಯನ್ನುಳಿದು ಉತ್ತರಕಾಲೀನ ಆದಿತೀರ್ಥಂಕರ ಚರಿತ್ರೆಗಳೆಲ್ಲವೂ ಪೂರ್ವಪುರಾಣ, ಆದಿಪುರಾಣಗಳ ಅನುವರ್ತಿಗಳಾಗಿವೆಯಲ್ಲದೆ, ಪುರುದೇವಚರಿತವು ಚಾವುಂಡರಾಯಪುರಾಣವನ್ನೂ ಆದಿಪರಮೇಶ್ವರನ ಯಕ್ಷಗಾನವು ಹಸ್ತಿಮಲ್ಲನ ಪೂರ್ವಪುರಾಣವನ್ನೂ ವಿಶೇಷವಾಗಿ ಅನುಕರಿಸಿವೆ.

ಶ್ರೀಮತಿ-ವಜ್ರಜಂಘರ ಸಹಮರಣ ವೃತ್ತಾಂತವು ಅತ್ಯಂತ ಧ್ವನಿಪೂರ್ಣವಾದ ಸನ್ನಿವೇಶವಾಗಿದೆ. ಪಂಪನು ಪೂರ್ವಪುರಾಣವನ್ನು ಅನುಕರಿಸಿದ್ದರೂ, ಕಾವ್ಯಧರ್ಮಕ್ಕನುಗುಣವಾದ ನಿರೂಪಣೆಯಲ್ಲಿ ಈ ಸನ್ನಿವೇಶವನ್ನು ಅತ್ಯಪೂರ್ವವಾಗಿ ಧ್ವನಿಸಿದ್ದಾನೆ. ಉತ್ತರಕಾಲೀನ ಕಾವ್ಯಗಳು ಈ ಸುಂದರ ಸನ್ನಿವೇಶವನ್ನು ಹಿಡಿದಿಡುವುದರಲ್ಲಿ ಸೋತಿವೆ. ಕೇವಲ ನಿರೂಪಣಾ ಮಾತ್ರವಾಗಿ ಕಥಾರೇಖೆ ಸಾಗುತ್ತದೆಯೇ ಹೊರತು ಧ್ವನಿಪೂರ್ಣತೆಯಿಲ್ಲ. ಚಾವುಂಡರಾಯಪುರಾಣವು ಆದಿಪುರಾಣವನ್ನು ಅನುಸರಿಸಿದರೆ, ಹಸ್ತಿಮಲ್ಲನ ಪೂರ್ವಪುರಾಣವು ಅಲ್ಲಲ್ಲಿ ಕಥಾಂಶದಲ್ಲಿ ಚಾವುಂಡರಾಯಪುರಾಣವನ್ನು ಅನುಕರಿಸಿದೆ. ಪುರುದೇವಚರಿತ, ಆದಿಪರಮೇಶ್ವರರ ಯಕ್ಷಗಾನಗಳ ಕಥಾಚೌಕಟ್ಟು ಚಾವುಂಡರಾಯಪುರಾಣ ಮತ್ತು ಹಸ್ತಿಮಲ್ಲನ ಪೂರ್ವಪುರಾಣಗಳಂತೆಯೇ ಇದೆ. ಪುಣ್ಯಾಸ್ರವದ ಆದೀಶ್ವರರ ಕಥೆಯಲ್ಲಿ ವಿಶೇಷವಾದ ಅಂಶಗಳೇನೂ ಕಂಡುಬರುವುದಿಲ್ಲ. ಸಂಕ್ಷಿಪ್ತ ವಿವರಣೆ ಇದೆ.

ಶ್ರೀಮತಿ ವಜ್ರಜಂಘಾರ್ಯರ ಭವ ನಿರೂಪಣೆಯಲ್ಲಿ ಪಂಪನು ಪೂರ್ವಪುರಾಣದ ಅನುವರ್ತಿಯಾಗಿ ಕಂಡುಬಂದರೂ ಆತನ ಸಂಗ್ರಾಹಕಗುಣ ಮತ್ತು ಆತ್ಮೀಯ

ನಿರೂಪಣೆಗಳು ಎದ್ದು ಕಾಣುತ್ತವೆ. ಜೀನಸೇನರಲ್ಲಿ ತಲೆದೋರುವ ದೀರ್ಘವಾದ ಧಾರ್ಮಿಕಾಂಶ ನಿರೂಪಣೆಯನ್ನು ಅಡಕಗೊಳಿಸಿ ಕಾವ್ಯದ ಓಘಕ್ಕೆ ಲೋಪವಾಗದಂತೆ ಎಚ್ಚರಿಕೆ ವಹಿಸಿದ್ದಾನೆ. ಜಿನಸೇನ ಪಂಪರನ್ನನುಸರಿಸಿದರೂ ಚಾವುಂಡರಾಯಪುರಾಣವು ನಿರೂಪಣೆಯನ್ನು ಇನ್ನೂ ಸಂಗ್ರಹಗೊಳಿಸಿದೆ. ಹಸ್ತಿಮಲ್ಲನ ಪೂರ್ವಪುರಾಣವು ಬಹುತೇಕ ವಾಗಿ ಚಾವುಂಡರಾಯಪುರಾಣವನ್ನು ಅನುಸರಿಸಿದೆ. ಪುಣ್ಯಾಸ್ರವದ ಆದಿಪರಮೇಶ್ವರರ ಕಥೆಯಲ್ಲಿ ಗಣನೀಯ ವ್ಯತ್ಯಾಸಗಳು ಕಂಡುಬರುವುದಿಲ್ಲ. ಇಲ್ಲಿಯೂ ಸಂಕ್ಷಿಪ್ತ ಕಥಾ ಚೌಕಟ್ಟು ಕಂಡು ಬರುತ್ತದೆ. ಪುರುದೇವಚರಿತವು ಚಾವುಂಡರಾಯಪುರಾಣವನ್ನು ಅನುಸರಿಸಿದೆ. ಆದಿಪುರಾಣದಲ್ಲಿ ಹಸ್ತಿಮಲ್ಲನ ಪೂರ್ವಪುರಾಣದ ಅನುಕರಣೆ ಕಂಡುಬರುತ್ತದೆ. ಅಲ್ಲದೆ ಇದು ಉತ್ತರಕಾಲೀನ ಆದಿತೀರ್ಥಂಕರ ಕಾವ್ಯಗಳು ಕೈಬಿಟ್ಟಿರುವ ಭೋಗ ಭೂಮಿಯ ವೈಭವವನ್ನು ಚಿತ್ರಿಸಿದೆ.

ಶ್ರೀಧರದೇವನ ಭವನಿರೂಪಣೆಯಲ್ಲಿಯೂ ಪಂಪನ ವರ್ಣನಾಚಾತುರ್ಯವು ಪೂರ್ವೋಕ್ತಭವದಂತೆಯೇ ಕಂಡುಬರುತ್ತದೆ. ಚಾವುಂಡರಾಯಪುರಾಣದಲ್ಲಿ ಪೂರ್ವ ಪುರಾಣದ ಅನುಕರಣೆಯಲ್ಲದೆ ಅಲ್ಲಲ್ಲಿ ಶಾಬ್ದಿಕವಾಗಿ ಆದಿಪುರಾಣದ ಅನುಕರಣೆ ಕಂಡು ಬರುತ್ತದೆ. ಶತಮತಿಗೆ ಶ್ರೀಧರದೇವನು ನೀಡುವ ಉಪದೇಶದಲ್ಲಿಯೇ ಆಗಲಿ, ಶ್ರೀಧರ ದೇವ ಪ್ರೀತಿಂಕರರ ಭೇಟಿಯ ನಿರೂಪಣೆಯಲ್ಲಿಯೇ ಆಗಲಿ ಹಸ್ತಿಮಲ್ಲನ ಪೂರ್ವ ಪುರಾಣವು ಆದಿಪುರಾಣವನ್ನು ಅನುಸರಿಸಿರುವುದು ಕಂಡುಬರುತ್ತದೆ. ಪುಣ್ಯಾಸ್ರವದ ಆದೀಶ್ವರರ ಕಥೆಯಲ್ಲಿ ಚಾವುಂಡರಾಯಪುರಾಣದಲ್ಲಿ ಹಾಗೂ ಹಸ್ತಿಮಲ್ಲನ ಪೂರ್ವ ಪುರಾಣದಲ್ಲಿಲ್ಲದ ವರ್ಣನೆಯ ಮೆರುಗಿದೆ. ಪುರುದೇವಚರಿತವು ಹಸ್ತಿಮಲ್ಲನನ್ನು ಅನುಕರಿಸಿದೆ. ಆದಿಪುರಾಣವು ಶಾರ್ದೂಲಾದಿಗಳು ದೇವಲೋಕದಲ್ಲಿ ಹುಟ್ಟುವ ವಿಚಾರ ವರ್ಣನೆಯಲ್ಲಿ ಪೂರ್ವಪುರಾಣವನ್ನೂ ಶ್ರೀಧರದೇವನು ಕೇವಲಿಗಳಲ್ಲಿ ನಿವೇದಿಸಿಕೊಳ್ಳುವ ಮಾತುಗಳಲ್ಲಿ ಆದಿಪುರಾಣವನ್ನೂ ಅನುಸರಿಸಿದೆ. ಅಲ್ಲಲ್ಲಿ ಶಾಬ್ದಿಕವಾಗಿ ಹಸ್ತಿಮಲ್ಲನ ಪೂರ್ವಪುರಾಣವನ್ನು ಅನುಕರಿಸಿದೆ. ಉತ್ತರಕಾಲೀನ ಕಾವ್ಯಗಳಲ್ಲಿ ಹೆಚ್ಚಿನ ವಿವರ ದೊರೆಯುವುದು ಇಲ್ಲಿಯೇ.

ಸುವಿಧಿಭವ ನಿರೂಪಣೆಯಲ್ಲಿ ಆದಿತೀರ್ಥಂಕರ ಚರಿತೆಗಳು ಹೆಚ್ಚಿನ ಕಾವ್ಯಸೌಂದರ್ಯವನ್ನು ನೀಡದಿದ್ದರೂ, ಆದಿಪುರಾಣ ಮತ್ತು ಪುಣ್ಯಾಸ್ರವದ ಆದೀಶ್ವರರ ಕಥೆಗಳು, ಕೇಶವನು ಸುವಿಧಿಗೆ ಮಗನಾಗಿ ಜನಿಸಿದಾಗ ಕೊಡುವ ಭವಬಾಂಧವ್ಯದ ರೀತಿಯನ್ನು ವಿವರಿಸುವಲ್ಲಿ ಶುಷ್ಕತೆಯನ್ನು ನೀಗುತ್ತವೆ. ಚಾವುಂಡರಾಯಪುರಾಣ, ಹಸ್ತಿಮಲ್ಲನ ಪೂರ್ವಪುರಾಣ, ಪುಣ್ಯಾಸ್ರವದ ಆದೀಶ್ವರರ ಕಥೆಗಳು ರೇಖಾಮಾತ್ರ ಚಿತ್ರಣವನ್ನು ನೀಡುತ್ತವೆ. ಪುರುದೇವಚರಿತದಲ್ಲಿ ಚಾವುಂಡರಾಯಪುರಾಣದ ಶಾಬ್ದಿಕ ಅನುಕರಣೆಯಿದೆ. ಆದಿಪರಮೇಶ್ವರನ ಯಕ್ಷಗಾನವು ತನ್ನ ಕಾಲದ ಜನಸಾಮಾನ್ಯರ ವಿಧಿವಿಧಾನಗಳನ್ನು ಅಲ್ಲಲ್ಲಿ ಅಳವಡಿಸಿಕೊಂಡು ಉಳಿದ ಉತ್ತರಕಾಲೀನ ಕಾವ್ಯಗಳಿಗಿಂತ ಹೆಚ್ಚಿನ ಅಂಶವನ್ನು ನಿರೂಪಿಸುತ್ತದೆ.

ಅಚ್ಯುತೇಂದ್ರ ಭವದ ವರ್ಣನೆ ಆದಿಪುರಾಣದಲ್ಲಿ ಸಂಕ್ಷೇಪರೂಪದಲ್ಲಿದ್ದರೆ, ಪುರುದೇವಚರಿತ ಮತ್ತು ಆದಿಪರಮೇಶ್ವರನ ಯಕ್ಷಗಾನಗಳನ್ನುಳಿದಂತೆ ಇತರ ಉತ್ತರ

ಕಾಲೀನ ಆದಿತೀರ್ಥಂಕರ ಚರಿತ್ರೆಗಳಲ್ಲಿ ರೇಖಾಮಾತ್ರವಾಗಿ ಕಂಡುಬರುತ್ತದೆ. ಇಲ್ಲಿ ಕಾವ್ಯಾಂಶದ ವರ್ಣನೆಗಿಂತ ಕಥಾನಿರೂಪಣಾ ಮಾರ್ಗವೇ ಕಂಡು ಬರುತ್ತದೆ.

ವಜ್ರನಾಭಿ ಭವ ಆದಿತೀರ್ಥಂಕರನ ಭವದಲ್ಲಿ ಮುಖ್ಯವಾದ ಭವ. ತೀರ್ಥಂಕರ ನಾಮಕರ್ಮ ಬಂಧವು ಇಲ್ಲಿ ಉಂಟಾಗುತ್ತದೆ. ಮೇಲಿನ ಎರಡು ಭವಗಳಿಗಿಂತ ಇಲ್ಲಿ ನಿರೂಪಣೆ ಕಾವ್ಯಾತ್ಮಕವಾಗಿ ಬಂದಿದೆ. ಜನ್ಮಾಂತರ ಭವ ಸಂಬಂಧದ ವರ್ಣನೆ, ವಜ್ರನಾಭಿಯ ವೈರಾಗ್ಯ ಭಾವಗಳಲ್ಲಿ ಪಂಪನ ಕಾವ್ಯಶಕ್ತಿ ಪೂರ್ವಪುರಾಣಕ್ಕಿಂತ ಹೆಚ್ಚಿನದಾಗುತ್ತದೆ. ಚಾವುಂಡರಾಯಪುರಾಣ, ಹಸ್ತಿಮಲ್ಲನ ಪೂರ್ವಪುರಾಣಗಳ ಮಾದರಿ ರೇಖಾಮಾತ್ರದ್ದು. ಪುಣ್ಯಾಸ್ರವದ ಆದೀಶ್ವರರ ಕಥೆಯಲ್ಲಿ ರೇಖಾಮಾತ್ರದ ನಿರೂಪಣೆಯಲ್ಲಿಯೂ ನಾಟಕೀಯತೆಯನ್ನು ಕವಿ ಅಳವಡಿಸಿದ್ದಾನೆ. ಪುರುದೇವಚರಿತದಲ್ಲಿ ಕವಿ ಚಾವುಂಡರಾಯಪುರಾಣವನ್ನು ಅನುಸರಿಸಿರುವುದೇ ಅಲ್ಲದೆ, ವಜ್ರನಾಭಿಯ ದಿಗ್ವಿಜಯ ನಿರೂಪಣೆಯನ್ನು ಹೊಸದಾಗಿ ಸೇರಿಸಿದ್ದಾನೆ. ವಜ್ರನಾಭಿಯ ತಪೋನಿರೂಪಣೆಯ ಸಂದರ್ಭದಲ್ಲಿ ಬರುವ ಸೂಕ್ತಿಪ್ರದವಾದ ಮಾತುಗಳು ಮನನೀಯವಾದವು. ಆದಿಪರಮೇಶ್ವರನ ಯಕ್ಷಗಾನದಲ್ಲಿ ಕವಿ ಅತ್ಯಂತ ಉತ್ಸಾಹಶೀಲನಾಗಿ ವರ್ಣನೆಯನ್ನು ನೀಡಿದ್ದಾನೆ. ಹಸ್ತಿಮಲ್ಲನ ಪೂರ್ವಪುರಾಣದ ಅನುಕರಣೆ ಅಲ್ಲಲ್ಲಿ ಕಂಡುಬಂದರೂ ವಿವರಣೆಗಳನ್ನು ಕೊಟ್ಟು ವರ್ಣನಾ ಭಾಗವನ್ನು ಹಿಗ್ಗಿಸುವ ಎಡೆಯಲ್ಲಿ ಸ್ವೋಪಜ್ಞತೆಯನ್ನು ತೋರಿಸಿದ್ದಾನೆ. ದಿವ್ಯಧ್ವನಿಯ ಮೊರೆತ ಕಿವಿಗೆ ಬಿದ್ದಾಗ ಅದರ ಪ್ರಭಾವದಿಂದ ವಜ್ರನಾಭಿ ವೈರಾಗ್ಯಪರನಾದನೆಂಬ ಹೊಸ ಅಂಶವನ್ನು ಸೇರಿಸಿದ್ದಾನೆ.

ಅಚ್ಯುತೇಂದ್ರ ಭವನಿರೂಪಣೆ, ಆದಿತೀರ್ಥಂಕರನ ಭವಾವಳಿ ನಿರೂಪಣೆಯಲ್ಲಿ ಕೊನೆಯದು. ಇಲ್ಲಿ ಪಂಪನು ಪೂರ್ವಪುರಾಣವನ್ನು ಹೆಚ್ಚಾಗಿ ಅನುಕರಿಸಿದ್ದಾನೆ. ಮೂಲದಿಂದ ಮನೋಹರವಾಗಿ ಅನುವಾದಿತಗೊಂಡ ಭಾಗಗಳು ಕಂಡುಬರುತ್ತವೆ. ಉತ್ತರಕಾಲೀನ ಕಾವ್ಯಗಳ ನಡೆ ರೇಖಾಮಾತ್ರದ್ದಾದರೂ ಆದಿಪರಮೇಶ್ವರನ ಯಕ್ಷಗಾನದಲ್ಲಿ ಆದಿಪುರಾಣ ಮತ್ತು ಪೂರ್ವಪುರಾಣಗಳನ್ನನುಸರಿಸಿ ವರ್ಣನಾ ಭಾಗವು ತಲೆದೋರಿದೆ. ಪುರುದೇವ ಚರಿತವು ಚಾವುಂಡರಾಯಪುರಾಣದ ಅನುವರ್ತಿಯಾಗಿದೆ. ಉಳಿದ ಆದಿತೀರ್ಥಂಕರ ಚರಿತ್ರೆಗಳು ತಮ್ಮ ಪೂರ್ವವರ್ತಿ ಕಾವ್ಯಗಳು ಕೊಡುವ ಕಥಾಚೌಕಟ್ಟನ್ನೇ ಕೊಟ್ಟರೂ ನಿರ್ದಿಷ್ಟವಾಗಿ ಅವು ಋಣಿಯಾಗಿರುವ ಕಾವ್ಯವನ್ನು ಈ ಸಂಕ್ಷಿಪ್ತ ಹರವಿನಲ್ಲಿ ಗುರುತಿಸುವುದು ಕಷ್ಟವಾಗಿದೆ.

ಮನುಕುಲೋತ್ಪತ್ತಿಯ ವರ್ಣನೆಯಲ್ಲಿ ಸಾಂಪ್ರದಾಯಿಕತೆಯ ವರ್ಣನೆಯಿದೆಯೇ ಹೊರತು ಕಾವ್ಯಾಂಶವನ್ನು ಇಲ್ಲಿ ಗಣಿಸಲಾಗುವುದಿಲ್ಲ. ಈ ವರ್ಣನೆಯಲ್ಲಿ ಪೂರ್ವಪುರಾಣ, ಆದಿಪುರಾಣ, ಚಾವುಂಡರಾಯಪುರಾಣಗಳು ಒಂದು ಗುಂಪಿನಲ್ಲಿ ನಿಂತರೆ, ಮನುಗಳ ಪತ್ನಿಯರನ್ನು ಹೆಸರಿಸುವುದೇ ಮೊದಲಾದ ಹೊಸ ಅಂಶಗಳಿಂದ ಹಸ್ತಿಮಲ್ಲನ ಪೂರ್ವಪುರಾಣ, ಪುಣ್ಯಾಸ್ರವದ ಆದೀಶ್ವರರ ಕಥೆ ಮತ್ತು ಪುರುದೇವಚರಿತಗಳು ಮತ್ತೊಂದು ಗುಂಪಿಗೆ ಸೇರುತ್ತವೆ. ಹಸ್ತಿಮಲ್ಲನ ಪೂರ್ವಪುರಾಣವನ್ನು ಬೇರೆಡೆ ಅನುಸರಿಸದಂತೆ ತೋರುವ ಪುಣ್ಯಾಸ್ರವದ ಆದೀಶ್ವರರ ಕಥೆಯು ಇಲ್ಲಿ ಮಾತ್ರ ಅನುಸರಿಸಿದಂತೆ ಕಂಡುಬರುತ್ತದೆ. ಇಲ್ಲವೇ ಇವುಗಳಿಗೆ ಬೇರೊಂದು ಮೂಲವು ಆಕರವಾಗಿರಲೂ

ಬಹುದು.

ಗರ್ಭಾವತರಣಕಲ್ಯಾಣದ ವರ್ಣನೆಯಲ್ಲಿ ಆದಿಪುರಾಣವು ಪೂರ್ವಪುರಾಣವನ್ನು ಅನುಸರಿಸಿದ್ದರೂ ಅಲ್ಲಲ್ಲಿ ಕವಿ ವರ್ಣನೆಯಲ್ಲಿ ಸೊಬಗನ್ನು ಮೈಗೂಡಿಸಿದ್ದಾನೆ. ಮರುದೇವಿಯ ವರ್ಣನೆ, ಸಾಕೇತಪುರದ ಪ್ರಕೃತಿ ವರ್ಣನೆ ಈ ಮೊದಲಾದ ಎಡೆಗಳಲ್ಲಿ ಇದನ್ನು ಗಮನಿಸಬಹುದಾಗಿದೆ. ಕೆಲವೆಡೆ ಪೌರಾಣಿಕಾಂಶಗಳಾಗಿ ತೋರುವ ದೀರ್ಘವರ್ಣನೆಗಳನ್ನು ಪಂಪ ಕೈಬಿಟ್ಟಿದ್ದಾನೆ. ದೇವತೆಗಳು ಸಲ್ಲಿಸುವ ವಿವಿಧೋಪಚಾರಗಳ ವರ್ಣನೆ ಇಲ್ಲಿ ಹಿತಮಿತವಾಗಿ ಬಂದಿದೆ. ಚಾವುಂಡರಾಯಪುರಾಣವು ಈ ಸಂದರ್ಭದಲ್ಲಿ ಮುಖ್ಯವಾಗಿ ಪೂರ್ವಪುರಾಣವನ್ನು ಅನುಸರಿಸಿರುವುದು ಕಂಡುಬರುತ್ತದೆ. ಹಸ್ತಿಮಲ್ಲನ ಪೂರ್ವಪುರಾಣದಲ್ಲಿ ಎಂಟು ಕನಸುಗಳ ಉಲ್ಲೇಖ ಮಾತ್ರ ಕಂಡುಬರುತ್ತದೆ. “ಬೆಳಗಪ್ಪ ಜಾವದೊಳ್ ಶುಭ ಸ್ವಪ್ನಂಗಳಪ್ಪ ಗಜೇಂದ್ರ, ವೃಷಭ, ಸಿಂಹ, ಕಮಲಾಲಯ, ಸುರವಿಮಾನ, ರತ್ನರಾಶಿ, ಮಾಲೆ, ಮಹಾಮೇರುವೆಂಬಿವಂ ಶುಭಸ್ವಪ್ನಂಗಳಂ ಕಂಡೆಚ್ಚತ್ತು” (ಹಸ್ತಿಮಲ್ಲನ ಪೂರ್ವಪುರಾಣ-viii) ಎಂದು ಹೇಳುವಲ್ಲಿ ಕವಿ ಉಳಿದ ಸ್ವಪ್ನಗಳ ಬಗೆಗೆ ಸೂಚ್ಯವಾಗಿಯಾದರೂ ನಿರ್ದೇಶನವನ್ನು ನೀಡಿಲ್ಲ. ಕವಿ ಇಲ್ಲಿಯೂ ವಿಭಿನ್ನ ಪರಂಪರೆಯವನಾಗಿ ನಿಲ್ಲುತ್ತಾನೆ. ಉಳಿದಂತೆ ಕವಿ ಪೂರ್ವಪುರಾಣ, ಆದಿಪುರಾಣಗಳ ಅನುವರ್ತಿಯಾಗಿ ಕಂಡುಬರುತ್ತಾನೆ. ಪುಣ್ಯಾಸ್ರವದ ಆದೀಶ್ವರರ ಕಥೆ ಅಲ್ಲಲ್ಲಿ ಆದಿಪುರಾಣದ ಅನುವರ್ತಿಯಾಗಿರುವಂತೆ ತೋರುತ್ತದೆ. ಪುರುದೇವಚರಿತವು ಚಾವುಂಡರಾಯಪುರಾಣವನ್ನನುಸರಿಸಿರುವುದೇ ಅಲ್ಲದೆ ಹೆಚ್ಚಿನ ವಿವರಣೆಗಳನ್ನು ನೀಡುವಲ್ಲಿಆದಿಪುರಾಣವನ್ನು ಅನುಸರಿಸಿದೆ. ಆದಿಪರಮೇಶ್ವರನ ಯಕ್ಷಗಾನದಲ್ಲಿ ಸ್ವಪ್ನಗಳ ಉಲ್ಲೇಖವಿಲ್ಲ. ಶಚಿದೇವಿಗೆ ಇತರೆಡೆಗಿಂತ ಹೆಚ್ಚಿನ ಪಾತ್ರ ಇಲ್ಲಿ ದೊರೆತಿದೆ. ತೀರ್ಥಂಕರನಾಗುವ ಶಿಶುವಿನ ಜನನದ ಸೂಚನೆಯನ್ನು ಮರುದೇವಿಗೆ ನೀಡುವವಳು ಇಲ್ಲಿ ಶಚಿದೇವಿಯೇ. ಅಲ್ಲದೆ ಈಕೆ ಮರುದೇವಿಯೊಡನೆ ನಡಸುವ ಸಂಭಾಷಣಾ ಭಾಗದಲ್ಲಿಯೂ ಈಕೆಗೆ ದೊರೆತಿರುವ ವಿಶೇಷ ಸ್ಥಾನ ವ್ಯಕ್ತವಾಗುತ್ತದೆ.

ಆದಿತೀರ್ಥಂಕರನ ಜನನ ವೃತ್ತಾಂತವು ಬಹುಮುಖ್ಯ ಭಾಗವೆಂಬಂತೆ ಪೂರ್ವಪುರಾಣ, ಆದಿಪುರಾಣ, ಪುರುದೇವಚರಿತ ಮತ್ತು ಆದಿಪರಮೇಶ್ವರನ ಯಕ್ಷಗಾನಗಳಲ್ಲಿ ಚಿತ್ರಿತವಾಗಿದೆ. ಆದಿಪುರಾಣವು ಮುಖ್ಯಾಂಶ ನಿರೂಪಣೆಯಲ್ಲಿ ಪೂರ್ವಪುರಾಣದ ಅನುವರ್ತಿಯಾದರೂ ಕವಿ ಅಲ್ಲಿ ಬರುವ ದೀರ್ಘ ವರ್ಣನೆಗಳನ್ನು ಕೈಬಿಟ್ಟಿದ್ದಾನೆ. ದೇವತೆಗಳೆಸಗಿದ ಜನ್ಮಾಭಿಷೇಕದ ವರ್ಣನೆ, ದೇವೇಂದ್ರನು ಮಾಡಿದ ಜಿನಸ್ತವಾದಿಗಳ ವಿವರಗಳು ಪಂಪನಲ್ಲಿ ಔಚಿತ್ಯಪೂರ್ಣವಾಗಿ ಬಂದಿವೆ. ಕೆಲವೆಡೆ ಅನಗತ್ಯವೆನಿಸುವ ಭಾಗವನ್ನು ಕೈಬಿಟ್ಟಿದ್ದಾನೆ. ಪೂರ್ವಪುರಾಣದಲ್ಲಿ ಕೇವಲಜ್ಞಾನ ಕಲ್ಯಾಣ ಸಂದರ್ಭದಲ್ಲಿ ವರ್ಣಿತವಾಗಿರುವ ಐರಾವತದ ವರ್ಣನೆಯನ್ನು ಜನ್ಮಾಭಿಷೇಕದ ಭಾಗದಲ್ಲಿ ಅಳವಡಿಸಿದ್ದಾನೆ. ಪೂರ್ವಪುರಾಣದಲ್ಲಿಲ್ಲದ ಕೆಲವು ವರ್ಣನೆಗಳು ಸುಂದರವಾಗಿ ಇಲ್ಲಿ ಮೈಗೂಡಿವೆ. ಅಯೋಧ್ಯಾಪುರದ ಜನರು ದೇವತೆಗಳ ಸಂಭ್ರಮವನ್ನು ಬೆಕ್ಕಸಬೆರಗಾಗಿ ನೋಡುವ ಚಿತ್ರ, ದೇವತೆಗಳು ಶಿಶುವಿನ ಶಕ್ತಿಸಾಮರ್ಥ್ಯವನ್ನು ಕುರಿತು ಶಂಕಿಸಿದ ವಿಚಾರ, ದೇವೇಂದ್ರನ ಆನಂದ ನೃತ್ಯ ಈ ಮೊದಲಾದ ಅಂಶಗಳು ಇಲ್ಲಿ ಸುಂದರವಾಗಿ ಮೈಗೂಡಿವೆ. ಪಂಪ ಇಲ್ಲಿ

ಒಳ್ಳೆಯ ಸಂಗ್ರಾಹಕನಾಗಿ, ಔಚಿತ್ಯವರಿತು ಕಥೆಯನ್ನು ನಡೆಸುವ ನಿರ್ದೇಶಕನಾಗಿ ಕಂಡು ಬರುತ್ತಾನೆ. ಉತ್ತರಕಾಲೀನ ಕಾವ್ಯಗಳೆಲ್ಲವೂ ಪೂರ್ವಪುರಾಣ, ಆದಿಪುರಾಣಗಳಿಗೆ ಒಂದಲ್ಲ ಒಂದು ರೀತಿಯಲ್ಲಿ ಋಣಿಗಳಾಗಿವೆ. ಇವುಗಳಲ್ಲಿ ಪುರುದೇವಚರಿತ ಮತ್ತು ಆದಿಪುರಾಣಗಳು ಚಾವುಂಡರಾಯಪುರಾಣ ಮೊದಲಾದ ಕಾವ್ಯಗಳಂತೆ ರೇಖಾಮಾತ್ರ ವಾಗಿ ವರದಿಯ ರೂಪದಲ್ಲಿ ಬಾರದೆ ಸಾಕಷ್ಟು ವಿವರಣಾಂಶಗಳನ್ನು ಪಡೆದು ಅಲ್ಲಲ್ಲಿಯೇ ಕಾವ್ಯಗುಣಗಳಿಂದ ಶೋಭಿಸಿವೆ. ಪುರುದೇವಚರಿತವು ಚಾವುಂಡರಾಯಪುರಾಣವನ್ನೂ ಆದಿಪರಮೇಶ್ವರನ ಯಕ್ಷಗಾನವು ಹಸ್ತಿಮಲ್ಲನ ಪೂರ್ವಪುರಾಣವನ್ನೂ ವಿಶೇಷವಾಗಿ ಅನುಸರಿಸಿವೆ.

ಕರ್ಮಭೂಮಿ ನಿಯೋಗ ವರ್ಣನೆಯಲ್ಲಿ ಹಲವಾರು ಮಹತ್ತ್ವಪೂರ್ಣವಾದ ಅಂಶ ಗಳು ಕಂಡುಬರುತ್ತವೆ. ಪ್ರಜೆಗಳಿಗೆ ಜೀವನೋಪಾಯ ಮಾರ್ಗವನ್ನು ನೀಡಿದ್ದು, ವಿದ್ಯಾ ಭ್ಯಾಸ ಕ್ರಮವನ್ನು ರೂಪಿಸಿದ್ದು ಈ ಮೊದಲಾದ ಮಹತ್ವಪೂರ್ಣವಾದ ಸಮಾಜೋ ದ್ಧಾರಕ ಕಾರ್ಯಗಳನ್ನು ಕೈಗೊಂಡು 'ಆದಿಬ್ರಹ್ಮ'ನೆನಿಸಿದ ವೃಷಭನ ಚಿತ್ರಣವಿದೆ. ಈ ಮಹತ್ತ್ವಪೂರ್ಣ ಅಂಶಗಳನ್ನು ಪೌರಾಣಿಕಾಂಶಮಾತ್ರವಾಗಿಸದೆ ಕಾವ್ಯದ ಚೌಕಟ್ಟಿನಲ್ಲಿ ಅಳವಡಿಸಿರುವ ವಿಧಾನ ಮೋಹಕವಾಗಿದೆ. ವೃಷಭನು ಯಶಸ್ವತಿ ಸುನಂದೆಯರೊಂದಿಗೆ ನಡೆಸಿದ ಅನ್ಯೋನ್ಯದಾಂಪತ್ಯದ ವರ್ಣನೆ, ಸ್ವಪ್ನಫಲವನ್ನು ಕೇಳಿ ಯಶಸ್ವತಿಗುಂಟಾದ ಆನಂದಾನುಭವದ ಅಭಿವ್ಯಕ್ತಿ, ಭರತನ ರೂಪವರ್ಣನೆ ಈ ಮೊದಲಾದ ಎಡೆಗಳಲ್ಲಿ ಪಂಪನ ಕಾವ್ಯಪ್ರಜ್ಞೆ ಎದ್ದು ತೋರುತ್ತದೆ. ಪುತ್ರೋತ್ಸವ, ನಾಮಕರಣ ಮೊದಲಾದ ಸಂದರ್ಭಗಳಲ್ಲಿ ಪೂರ್ವಪುರಾಣದಲ್ಲಿ ಬರುವ ಸುದೀರ್ಘ ವರ್ಣನೆಗಳನ್ನು ಪಂಪನು ಹದವರಿತು ಮೊಟಕುಗೊಳಿಸಿದ್ದಾನೆ. ಪೂರ್ವಪುರಾಣದಲ್ಲಿ ಸೂಚ್ಯವಾಗಿ ಕಂಡುಬರುವ ಸುನಂದಾದೇವಿಯ ದೋಹದ ವರ್ಣನೆಯು, ಇಲ್ಲಿ ಯಶಸ್ವತಿಯ ದೋಹದ ವರ್ಣನೆ ಯಷ್ಟೇ ಪ್ರಾಮುಖ್ಯವನ್ನು ಪಡೆದು ಬಂದಿದೆ. ಪೂರ್ವಪುರಾಣದಲ್ಲಿಲ್ಲದ ಆದಿದೇವನ ವಿವಾಹ ವರ್ಣನೆ ಪಂಪನಲ್ಲಿ ಸಂಕ್ಷಿಪ್ತವಾಗಿ ಮೈಗೂಡಿದೆ. ಹೆಜ್ಜೆಹೆಜ್ಜೆಗೂ ಕಾವ್ಯೋಚಿತ ಮಾರ್ಗವನ್ನು ಪಂಪನಲ್ಲಿ ಗಮನಿಸಬಹುದಾಗಿದೆ. ಚಾವುಂಡರಾಯಪುರಾಣ, ಹಸ್ತಿಮಲ್ಲನ ಪೂರ್ವಪುರಾಣ, ಪುಣ್ಯಾಸ್ರವದ ಆದೀಶ್ವರರ ಕಥೆಗಳ ಅತ್ಯಂತ ಸಂಕ್ಷಿಪ್ತ ಕಥಾ ಚೌಕಟ್ಟಿ ನಲ್ಲಿ ಅವು ಇಂಥವೇ ಆಕರಗಳನ್ನು ಅಳವಡಿಸಿಕೊಂಡಿವೆ ಎಂದು ಗುರುತಿಸುವುದು ಕಷ್ಟವಾದರೂ, ಪೂರ್ವಪುರಾಣ, ಆದಿಪುರಾಣಗಳ ಪರಂಪರೆಯಲ್ಲಿ ಬಂದಿರುವ ಮುಖ್ಯ ಕಥಾಂಶಗಳೇ ಇಲ್ಲಿಯೂ ಕಂಡುಬರುತ್ತವೆ. ಪುರುದೇವಚರಿತವು ಚಾವುಂಡರಾಯ ಪುರಾಣವನ್ನು, ಆದಿಪರಮೇಶ್ವರನ ಯಕ್ಷಗಾನವು ಹಸ್ತಿಮಲ್ಲನ ಪೂರ್ವಪುರಾಣವನ್ನು ಅನುಸರಿಸಿವೆ. ಇವೆರಡು ಕಾವ್ಯಗಳೂ ವರ್ಣನಾಂಶದಲ್ಲಿ ಆದಿಪುರಾಣಕ್ಕೆ ಹೆಚ್ಚು ಋಣಿ ಯಾಗಿವೆ. ಪುರುದೇವಚರಿತ, ಆದಿಪರಮೇಶ್ವರನ ಯಕ್ಷಗಾನಗಳಲ್ಲಿ ಅಲ್ಲಲ್ಲಿ ಜಾನಪದೀಯ ವರ್ಣನಾಂಶಗಳು ತಲೆದೋರಿವೆ. ಮಕ್ಕಳ ಆಟ-ಪಾಠ ಮೊದಲಾದ ವರ್ಣನೆಗಳಲ್ಲಿ ಹೆಚ್ಚು ಲೌಕಿಕವಾದ ಆತ್ಮೀಯ ಮೆರುಗನ್ನು ಕಾಣಬಹುದಾಗಿದೆ.

ಪರಿಷ್ಕ್ರಮಣ ಕಲ್ಯಾಣದಲ್ಲಿ ಬರುವ ವೈರಾಗ್ಯಸನ್ನಿವೇಶದ ವರ್ಣನೆಯು ಪಂಪನಲ್ಲಿ ರಸೋತ್ಕೃಷ್ಟತೆಯ ಔನ್ನತ್ಯದಿಂದ ಕೂಡಿದೆ. ಪೂರ್ವಪುರಾಣವನ್ನನುಸರಿಸಿ ಬರೆದಿದ್ದರೂ

ನೀಲಾಂಜನೆಯ ನೃತ್ಯಪ್ರಸಂಗದಲ್ಲಿ ಪಂಪನು ತೋರಿರುವ ಕಾವ್ಯಪ್ರತಿಭೆ ಎಂಥವರನ್ನೂ ಸೆರೆ ಹಿಡಿಯುವಂತಿದೆ. ಉಳಿದಂತೆ ವೈರಾಗ್ಯಭಾವ ನಿರೂಪಣೆಯಲ್ಲಿ ಪಂಪ ಪೂರ್ವ ಪುರಾಣದ ಅನುವರ್ತಿಯಾಗಿದ್ದರೂ ಪಂಪನ ಸ್ವೋಪಜ್ಞತೆ ಇಡೀ ಪ್ರಸಂಗವನ್ನು ಮೇಲ್ಮಟ್ಟದ್ದಾಗಿಸಿದೆ. ಇಲ್ಲಿ ಕವಿ ಸಾಹಿತ್ಯಲೋಕಕ್ಕೆ ಕಿರೀಟಪ್ರಾಯವಾಗುವ ಕಾವ್ಯಭಾಗವನ್ನು ನೀಡಿದ್ದಾನೆ. ಪಂಪನು ಪೂರ್ವಪುರಾಣಕ್ಕೆ ಕಥಾವಸ್ತುವಿನ ದೃಷ್ಟಿಯಿಂದ ಎಷ್ಟೇ ಋಣಿಯಾಗಿದ್ದರೂ ಇಂತಹ ಪ್ರಸಂಗಗಳು ಸೇರಿ ಈತನ ಕೃತಿಯನ್ನು ಸ್ವತಂತ್ರವಾಗಿ ನಿಲ್ಲಿಸುತ್ತವೆ. ಉತ್ತರಕಾಲೀನ ಕಾವ್ಯಗಳೆಲ್ಲವೂ ತಮ್ಮ ತಮ್ಮ ಹರವಿನ ಪರಿಮಿತಿಯಲ್ಲಿಯೇ ಆದಿಪುರಾಣವನ್ನು ಅನುಸರಿಸಿರುವುದು ಕಂಡುಬರುತ್ತದೆ. ಚಾವುಂಡರಾಯಪುರಾಣವು ವೈರಾಗ್ಯಸನ್ನಿವೇಶದ ನಿರೂಪಣೆಯಲ್ಲಿ ಪೂರ್ವಪುರಾಣಕ್ಕೆ ಹತ್ತಿರವಾಗಿ ಕಂಡುಬರುತ್ತದೆ. ಉಳಿದ ಭಾಗಗಳು ರೇಖಾಮಾತ್ರವಾಗಿ ಪೂರ್ವಪುರಾಣ ಆದಿಪುರಾಣಗಳಿಗನುಗುಣವಾಗಿ ಬರುತ್ತವೆ. ಯಶಸ್ವತಿ ಸುನಂದೆಯರು ದುಃಖಿಸುವ ಪ್ರಸಂಗ, ಅವರನ್ನು ಸಮಾಧಾನಗೊಳಿಸುವ ಪ್ರಸಂಗಗಳಲ್ಲಿ ಹಸ್ತಿಮಲ್ಲನ ಪೂರ್ವಪುರಾಣವು ಆದಿಪುರಾಣವನ್ನು ಅನುಸರಿಸಿದೆ; ಅಲ್ಲಲ್ಲಿ ಶಾಬ್ದಿಕವಾಗಿ ಚಾವುಂಡರಾಯಪುರಾಣವನ್ನು ಅನುಸರಿಸಿದೆ.

ಪುಣ್ಯಾಸ್ರವದ ಆದೀಶ್ವರರ ಕಥೆ, ಆದಿಪುರಾಣವನ್ನನುಸರಿಸಿದಂತೆ ಕಂಡುಬಂದರೂ ಕೆಲವು ವಿಧಾನಗಳಲ್ಲಿ ಇದು ವಿಭಿನ್ನವಾಗಿ ನಿಲ್ಲುತ್ತದೆ. ದೇವೇಂದ್ರನು ಮತ್ತೊಬ್ಬ ನೀಲಾಂಜನೆಯನ್ನು ಸೃಷ್ಟಿಸಿದನೆಂಬ ವಿಚಾರ ಇಲ್ಲಿ ಬರುವುದಿಲ್ಲ. ಯಶಸ್ವತಿ ಸುನಂದೆಯರ ಉಲ್ಲೇಖವು ಈ ಪ್ರಸಂಗದಲ್ಲಿ ಬರುವುದಿಲ್ಲ. ಪುರುದೇವಚರಿತವು ಆದಿಪುರಾಣವನ್ನನುಸರಿಸಿ ನೀಲಾಂಜನೆಯ ನೃತ್ಯಪ್ರಸಂಗವನ್ನು, ವೈರಾಗ್ಯಭಾವವನ್ನು ನಿರೂಪಿಸಿದೆ. ಯಶಸ್ವತಿ ಸುನಂದೆಯರ ಪ್ರಸಂಗದಲ್ಲಿ ಚಾವುಂಡರಾಯಪುರಾಣವನ್ನು ಅನುಸರಿಸಿದಂತೆ ಕಂಡುಬರುತ್ತದೆ. ಆದಿಪುರಾಣ, ಚಾವುಂಡರಾಯಪುರಾಣಗಳೇ ಅಲ್ಲದೆ ಹಸ್ತಿಮಲ್ಲನ ಪೂರ್ವಪುರಾಣದ ಪ್ರಭಾವವೂ ಕಂಡುಬರುತ್ತದೆ.

ಕಚ್ಛ, ಮಹಾಕಚ್ಛ, ನಮಿವಿನಮಿಯರ ಪ್ರಸಂಗ, ಆಹಾರದಾನ ಪ್ರಸಂಗಗಳಲ್ಲಿ ಪಂಪನು ಪೂರ್ವಪುರಾಣಕ್ಕೆ ಅನುವರ್ತಿಯಾಗಿ ಸಾಂಪ್ರದಾಯಿಕ ಶೈಲಿಯಲ್ಲಿ ವರ್ಣನೆಯನ್ನು ತಂದಿದ್ದಾನೆ. ಇಲ್ಲಿ ಕವಿ ಮೂಲದ ನಾಟಕೀಯತೆಯನ್ನು ಉಳಿಸಿಕೊಂಡಿದ್ದಾನೆ. ಸಂಭಾಷಣೆಯಲ್ಲಿ ಅಲ್ಲಲ್ಲಿ ದೇಸೀಯ ಸೊಬಗನ್ನು ಮೆರೆದಿರುವುದು ಇಲ್ಲಿಯ ವೈಶಿಷ್ಟ್ಯವಾಗಿದೆ. ಚಾವುಂಡರಾಯಪುರಾಣವು ಪೂರ್ವಪುರಾಣ, ಆದಿಪುರಾಣಗಳ ಅನುವರ್ತಿಯಾಗಿ ಕಂಡುಬರುತ್ತದೆ. ಹಸ್ತಿಮಲ್ಲನ ಪೂರ್ವಪುರಾಣವು ಈ ಸಂದರ್ಭದಲ್ಲಿ ಚಾವುಂಡರಾಯಪುರಾಣಕ್ಕಿಂತ ಹೆಚ್ಚು ಆಕರ್ಷಣೀಯವಾಗಿ ಕಂಡುಬರುತ್ತದೆ. ಆದಿಪುರಾಣದ ನಾಟಕೀಯ ಪ್ರಸಂಗಗಳನ್ನು ಚಿಕ್ಕದಾಗಿ, ಚೊಕ್ಕವಾಗಿ ನಿರ್ವಹಿಸಿದೆ. ಇಲ್ಲಿ ಆದಿಪುರಾಣದ ದಟ್ಟವಾದ ಅನುಕರಣೆ ಕಂಡುಬರುತ್ತದೆ. ಪುಣ್ಯಾಸ್ರವದ ಆದೀಶ್ವರರ ಕಥೆಯ ಚೌಕಟ್ಟಿನಲ್ಲಿ ಹೊಸ ಅಂಶವೊಂದು ಸೇರ್ಪಡೆಯಾಗಿದೆ. ವೃಷಭನು ಆಹಾರಕ್ಕೆ ಹೊರಟಾಗ ಭರತನು ಸಾಮಾನ್ಯ ಜನರಂತೆ ವೃಷಭನನ್ನು ರಾಜ್ಯವನ್ನು ಸ್ವೀಕರಿಸುವಂತೆ ಕೇಳಿದನೆಂದು ಇಲ್ಲಿ ಬರುತ್ತದೆ. ಪುರುದೇವಚರಿತ ಮತ್ತು ಆದಿಪರಮೇಶ್ವರನ ಯಕ್ಷಗಾನಗಳು ಪೂರ್ವಪುರಾಣ ಮತ್ತು ಆದಿಪುರಾಣಗಳ ಅನುವರ್ತಿಗಳಾದರೂ ಮೊದಲನೆಯದು ಚಾವುಂಡರಾಯ

ಪುರಾಣಕ್ಕೂ ಎರಡನೆಯದು ಹಸ್ತಿಮಲ್ಲನ ಪೂರ್ವಪುರಾಣಕ್ಕೂ ಹೆಚ್ಚು ಋಣಿಯಾಗಿರುವುದು ಕಂಡುಬರುತ್ತದೆ.

ಕೇವಲಜ್ಞಾನಕಲ್ಯಾಣದ ವರ್ಣನೆ ಪೂರ್ವಪುರಾಣದ ಸಾಂಪ್ರದಾಯಿಕತೆಯನ್ನೇ ಅನುಸರಿಸಿ ಬಂದಿದ್ದರೂ ಜಿನಸ್ತುತಿಯ ಭಾಗದಲ್ಲಿ ಆದಿಪುರಾಣವು ಮೇಲ್ಮೈಯಾಗಿ ನಿಲ್ಲುತ್ತದೆ. ಉತ್ತರಕಾಲೀನ ಕಾವ್ಯಗಳಲ್ಲಿ ಚಾವುಂಡರಾಯಪುರಾಣವು ಪೂರ್ವಪುರಾಣವನ್ನು ಹೆಚ್ಚು ಅನುಕರಿಸಿದೆ. ಭರತನು ಶುಭತ್ರಯ ಸಮಾಚಾರಗಳನ್ನು ಅರಿಯುವ ಸಂದರ್ಭದಲ್ಲಿ ಇದು ಗೋಚರವಾಗುತ್ತದೆ. ಹಸ್ತಿಮಲ್ಲನ ಪೂರ್ವಪುರಾಣವು ಆದಿಪುರಾಣವನ್ನು ಶಾಬ್ದಿಕವಾಗಿಯೂ ಅನುಸರಿಸಿರುವುದು ಕಂಡುಬರುತ್ತದೆ. ಪುಣ್ಯಾಸ್ರವದ ಆದೀಶ್ವರರ ಕಥೆಯು ಮೊದಲೆರಡು ಉತ್ತರಕಾಲೀನ ಕಾವ್ಯಗಳಂತೆ ವರದಿಮಾತ್ರವಾಗಿ ಬಾರದೆ ಹೆಚ್ಚು ಕಾವ್ಯಮಯವಾಗಿ ಬಂದಿದೆ. ಭರತನು ಮೂರು ಒಸಗೆಗಳನ್ನರಿಯುವಾಗಿನ ಸಂದರ್ಭದಲ್ಲಿ ಬಂದಿರುವ ನಾಟಕೀಯ ಸನ್ನಿವೇಶವು ಯಾಂತ್ರಿಕತೆಯನ್ನು ಕಳೆಯುತ್ತದೆ. ಪುರುದೇವ ಚರಿತದಲ್ಲಿ ಕವಿ ಕಥಾಚೌಕಟ್ಟಿಗೆ ತನ್ನದೇ ಆದ ಕೆಲವು ವರ್ಣನಾಂಶಗಳನ್ನು ಸೇರಿಸಿದ್ದಾನೆ; ಚಾವುಂಡರಾಯಪುರಾಣದ ದಟ್ಟವಾದ ಅನುಕರಣೆ ಕಂಡುಬರುತ್ತದೆ. ಆದಿಪರಮೇಶ್ವರನ ಯಕ್ಷಗಾನವು ಹಸ್ತಿಮಲ್ಲನ ಪೂರ್ವಪುರಾಣವನ್ನು ಅನುಕರಿಸಿರುವುದೇ ಅಲ್ಲದೆ, ವರ್ಣನಾಂಶಗಳನ್ನು ಹಿಗ್ಗಿಸಿದೆ. ಭಗವಂತನ ಸ್ತುತಿ, ವೃಷಭಸೇನನು ಗಣಧರನಾಗುವಾಗ ಕೈಗೊಂಡ ವಿಧಿ ಮೊದಲಾದೆಡೆಗಳಲ್ಲಿ ಇದು ಗೋಚರವಾಗುತ್ತದೆ. ಭರತ ಬಾಹುಬಲಿಗಳು ಒಟ್ಟಿಗೆ ಚಕ್ರರತ್ನ ಪೂಜೆ ಮಾಡಿದರೆಂಬ ಅಂಶ ಈ ಕಾವ್ಯದಲ್ಲಿ ಹೊಸದಾಗಿ ಕಾಣಿಸಿಕೊಳ್ಳುತ್ತದೆ.

ಮೋಕ್ಷಕಲ್ಯಾಣ ಆದಿದೇವನ ಜೀವನದ ಕೊನೆಯ ಘಟ್ಟ. ಅಮರತ್ವವನ್ನು ಪಡೆದು ಸ್ವಾಮಿ ಅನಂತಸುಖದ ಶಾಶ್ವತ ನೆಲೆಯನ್ನು ಗಳಿಸಿಕೊಂಡ ವಿವರಗಳು ಪೂರ್ವಪುರಾಣವನ್ನನುಸರಿಸಿ ಆದಿಪರಮೇಶ್ವರನ ಯಕ್ಷಗಾನದಲ್ಲಿ ಚಿತ್ರಿತವಾಗಿವೆ. ಉತ್ತರಕಾಲೀನ ಕಾವ್ಯಗಳು ಇವುಗಳಿಗೆ ಅನುವರ್ತಿಯಾಗಿ ಮೂಡಿ ಬಂದಿವೆ. ಸಾಂಪ್ರದಾಯಿಕತೆಯೇ ಮೇಲ್ಮೈಯಾಗಿ ನಿಲ್ಲುವ ಭಾಗವಿದು.

ಭರತಬಾಹುಬಲಿಗಳ ಚರಿತ್ರೆ ಆದಿತೀರ್ಥಂಕರನ ಚರಿತ್ರೆಯೊಂದಿಗೆ ಸೇರಿ ಬಂದಿರುವ ಅದ್ವಿತೀಯವಾದ ಭಾಗವಾಗಿದೆ. ಆದಿತೀರ್ಥಂಕರನ ಘನತೆಗೆ ಸರಿದೊರೆಯಾಗಿ ನಿಲ್ಲುವ ಪುತ್ರರಿವರು. ಇವರ ಚರಿತ್ರೆ ಆದಿತೀರ್ಥಂಕರ ಚರಿತ್ರೆಯಷ್ಟೇ ರೋಚಕವಾದುದು. ಒಂದೆಡೆ ಕಾಮಭೋಗಾಕಾಂಕ್ಷೆಗಳ ಕಾಳಿಮೆಯನ್ನು ಕಳೆದುಕೊಂಡು ಶುದ್ಧವಾಗಿ ನಿಲ್ಲುವ ಚೇತನ; ಮತ್ತೊಂದೆಡೆ ಮದಮಾನಗಳ ವಿಗುರ್ವಣೆಯಿಂದ ದೂರಾಗುವ ಚೇತನಗಳ ಚಿತ್ರಣಗಳು ಮನೋಹರವಾಗಿ ಮೂಡಿಬಂದಿವೆ. ಆದಿಪುರಾಣದಲ್ಲಿ ಬಂದಿರುವ ಕೌಮುದೀ ಮಹೋತ್ಸವ, ವನಕೇಳಿ ಪ್ರಸಂಗಾದಿಗಳು ಪೂರ್ವಪುರಾಣದಲ್ಲಿ ಕಂಡುಬರುವುದಿಲ್ಲ. ವನಕೇಳಿಪ್ರಸಂಗ ಅನನುಕರಣೀಯ ಭಾಗವಾಗಿ ನಿಲ್ಲುತ್ತದೆ. ಈ ಪ್ರಸಂಗ ಸಾಹಿತ್ಯ ಸುಮಧುರ ಸೌರಭವನ್ನು ಸೂಸುವ ಭಾವಗೀತಾತ್ಮಕ ಪ್ರಸಂಗವಾಗಿ ಮನವನ್ನು ಸೂರೆಗೊಳ್ಳುತ್ತದೆ. ಋತುವರ್ಣನೆ, ತತ್ತ್ವೋಪದೇಶ, ರಣೋತ್ಸಾಹದ ವರ್ಣನೆ, ಸಮವಸರಣದ ವರ್ಣನೆ ಈ ಮೊದಲಾದವು ಪೂರ್ವಪುರಾಣದಲ್ಲಿ ವಿಸ್ತೃತವಾದ ಎಡೆಯನ್ನು

ಪಡೆದುಕೊಂಡಿದ್ದರೆ, ಪಂಪನಲ್ಲಿ ಅವು ಸಾಂದ್ರ-ಸಂಕೀರ್ಣವಾಗಿವೆ. ಪ್ರಕೃತಿ ವರ್ಣನೆಯಲ್ಲಂತೂ ಪಂಪನ ಧಾಟಿಯೇ ಬೇರೆ. ಪೂರ್ವಪುರಾಣದ ಕಥಾರೇಖೆಯನ್ನನುಸರಿಸಿದ್ದರೂ ಕವಿ ಅಲ್ಲಲ್ಲಿಯೇ ಕೆಲವು ಮಾರ್ಪಾಡುಗಳನ್ನು ಉಚಿತರೀತಿಯಲ್ಲಿ ಮಾಡಿಕೊಂಡಿದ್ದಾನೆ. ಪೂರ್ವಪುರಾಣದಂತೆ ಭರತ ತಾನೇ ಪ್ರಶಸ್ತಿಯನ್ನು ಬರೆದುಕೊಂಡನೆಂದು ಹೇಳದೆ ಚಕ್ರವರ್ತಿತ್ತ್ವದ ಘನತೆಗೆ ತಕ್ಕಂತೆ ಕಾಕಿಣೀ ರತ್ನದಿಂದ ಬರೆಸಿದನೆಂಬ ವೃತ್ತಾಂತವು ಪಂಪನ ಸೂಕ್ಷ್ಮಪ್ರಜ್ಞೆಯ ಪ್ರತೀಕವಾಗಿದೆ. ಚಾವುಂಡರಾಯಪುರಾಣವು ಪೂರ್ವಪುರಾಣ, ಆದಿಪುರಾಣಗಳ ಸಾರಸಂಗ್ರಹವಾಗಿದೆ. ಹಸ್ತಿಮಲ್ಲನ ಪೂರ್ವಪುರಾಣವಂತೂ ಚಾವುಂಡರಾಯಪುರಾಣದ ಕಥಾಚೌಕಟ್ಟಿಗಿಂತಲೂ ಕಿರಿದಾಗಿ ಸಾಗಿದೆ. ಚಕ್ರವರ್ತಿಯ ಗರ್ವಭಂಗದ ವಿಚಾರ, ಮಾಗಧಾಮರರ ನಾಮೋಲ್ಲೇಖಗಳಾಗಲಿ ಇಲ್ಲಿ ಕಂಡುಬರುವುದಿಲ್ಲ. ಭರತನ ದಿಗ್ವಿಜಯ ವರ್ಣನೆಗೆ ಕವಿ ಅಷ್ಟಾಗಿ ಪ್ರಾಮುಖ್ಯವನ್ನು ನೀಡಿಲ್ಲ. ಪುಣ್ಯಾಸ್ರವದ ಆದೀಶ್ವರರ ಕಥೆಯಲ್ಲಿ ಮಾಗಧಾಮರನ ಪ್ರಸಂಗದಲ್ಲಿ ಭರತನು ಕನಸನ್ನು ಕಂಡನೆಂಬ, ಕಂಬದ ಮೇಲೆ ಭರತನ ಓಲೆಯನ್ನು ಕೆತ್ತಿಸಿದನೆಂಬ ಹೊಸ ಅಂಶಗಳು ಬರುತ್ತವೆ. ಪುರುದೇವಚರಿತವು ಪೂರ್ವಪುರಾಣ, ಆದಿಪುರಾಣಗಳ ಅನುವರ್ತಿಯಾಗಿದ್ದರೂ ಹೆಚ್ಚಾಗಿ ಚಾವುಂಡರಾಯಪುರಾಣವನ್ನು ಅನುಸರಿಸಿದೆ. ಅಲ್ಲಲ್ಲಿಯೇ ಯುದ್ಧದ ವರ್ಣನೆ, ಸೈನ್ಯದ ವರ್ಣನೆ ಮೊದಲಾದವುಗಳನ್ನು ಈ ಕಥಾಚೌಕಟ್ಟಿನಲ್ಲಿ ಅಳವಡಿಸಿಕೊಂಡಿದೆ. ಆದಿಪರಮೇಶ್ವರನ ಯಕ್ಷಗಾನವು ಪೂರ್ವಪುರಾಣ, ಆದಿಪುರಾಣಗಳ ಅನುವರ್ತಿಯಾಗಿ ಸೈನ್ಯ, ಯುದ್ಧ ಮೊದಲಾದ ವರ್ಣನೆಗಳನ್ನು ನೀಡುತ್ತದೆ. ದಿಗ್ವಿಜಯ ಸಾಧನೆಯಲ್ಲಿ ಹೆಚ್ಚಿನ ವಿವರ ನೀಡದಿದ್ದರೂ ಚಾವುಂಡರಾಯಪುರಾಣ, ಹಸ್ತಿಮಲ್ಲನ ಪೂರ್ವಪುರಾಣಗಳಿಗಿಂತ ವಿಸ್ತೃತ ವರ್ಣನೆಯನ್ನು ನೀಡಿದೆ. ದಿಗ್ವಿಜಯ ಪ್ರಶಸ್ತಿ ವೃತ್ತಾಂತ ಹಸ್ತಿಮಲ್ಲನ ಪೂರ್ವಪುರಾಣದಂತೆಯೇ ಇಲ್ಲಿಯೂ ಕಂಡುಬರುವುದಿಲ್ಲ.

ಭರತ ಬಾಹುಬಲಿಗಳ ವೈಷಮ್ಯ ಪ್ರಕರಣದಲ್ಲಿ ಪಂಪನು ಪೂರ್ವಪುರಾಣವನ್ನನುಸರಿಸಿದ್ದರೂ ನಾಟಕೀಯ ಸನ್ನಿವೇಶದಲ್ಲಿ ದೇಸೀ ಮಾತುಗಳ ನಡೆಯಲ್ಲಿ ಇದನ್ನು ಮನೋಹರವಾಗಿ ನಿರ್ವಹಿಸಿದ್ದಾನೆ. ಮೂಲಕ್ಕಿಂತ ಇಲ್ಲಿ ಸನ್ನಿವೇಶವು ತೀಕ್ಷ್ಣವಾಗಿ ಮೈದಾಳಿದೆ. ಚಾವುಂಡರಾಯಪುರಾಣವು ಉದ್ದಕ್ಕೂ ಆದಿಪುರಾಣವನ್ನು ಅನುಸರಿಸಿದ್ದರೂ, ಭರತನನ್ನು ಹಿಡಿದೆತ್ತಿ ನೆಲಕಿಕ್ಕಿದನೆಂದು ಹೇಳುವಲ್ಲಿ ಬಾಹುಬಲಿಯ ಘನತೆಗೆ ಕುಂದುಂಟುಮಾಡಿದಂತೆ ತೋರುತ್ತದೆ. ಬಾಹುಬಲಿಯ ಮೈಮೇಲಿನ ಬಳ್ಳಿಯನ್ನು ಬ್ರಾಹ್ಮೀ ಸೌಂದರಿಯರ ರೂಪದಲ್ಲಿ ಖೇಚರಿಯರು ಬಂದು ಬಿಡಿಸಿದರೆಂಬಲ್ಲಿ ಉಳಿದೆಡೆ ಕಂಡು ಬಾರದ ಆತ್ಮೀಯತೆ ಕಂಡುಬರುತ್ತದೆ. ಹಸ್ತಿಮಲ್ಲನ ಪೂರ್ವಪುರಾಣವು ಚಾವುಂಡರಾಯಪುರಾಣಕ್ಕಿಂತ ಹೆಚ್ಚಿನ ಕಥಾಘಟನೆಗಳನ್ನು ನೀಡಿ ಆದಿಪುರಾಣಕ್ಕೆ ಹತ್ತಿರವಾಗಿದೆ. ಬಾಹುಬಲಿಯ ಪಾದವನ್ನು ಕಟ್ಟಿಕೊಂಡು ಭರತ ಕಣ್ಣೀರು ಸುರಿಸುವ ನಾಟಕೀಯ ಸ್ನಿಗ್ಧ ಹೃದಯಸ್ಪರ್ಶಿ ದೃಶ್ಯವು ಉಳಿದ ಉತ್ತರಕಾಲೀನ ಕಾವ್ಯಗಳಲ್ಲಿ ಲಭಿಸುವುದಿಲ್ಲ. ಹಸ್ತಿಮಲ್ಲನ ಪೂರ್ವಪುರಾಣದಲ್ಲಿ ಭರತಬಾಹುಬಲಿಗಳ ಪ್ರಸಂಗ ಸಂಕ್ಷಿಪ್ತ ಹರವಿನಲ್ಲಿಯೂ ಸುಂದರವಾಗಿ ಮೈಗೂಡಿ ಬಂದಿದೆ. ಪುಣ್ಯಾಸ್ರವದ ಆದೀಶ್ವರರ ಕಥೆಯಲ್ಲಿ ಈ ಸಂದರ್ಭದಲ್ಲಿ ಹೆಚ್ಚಿನ ವಿವರಗಳು ಬಂದಿಲ್ಲ. 'ಯುದ್ಧವನ್ನು ಮಾಡಿ, ಬಾಹುಬಲಿ

ಗೆದ್ದು ಮಗನನ್ನು ಭರತನಿಗೆ ಒಪ್ಪಿಸಿ ಅನಂತರ ಯಾರು ಎಷ್ಟೇ ಹೇಳಿದರೂ ನಿಲ್ಲದೆ ದೀಕ್ಷೆಯನ್ನು ಕೈಗೊಂಡ'ನೆಂಬ ವೃತ್ತಾಂತ ಮಾತ್ರ ಬರುತ್ತದೆ. ದಾನಾನುಮೋದದ ಪ್ರಭಾವನೆಗೆ ಸಂಬಂಧಿಸಿದ ಕಥೆಯನ್ನು ಹೇಳುವುದು ಕವಿಯ ಮುಖ್ಯ ಉದ್ದೇಶವಾದುದ ರಿಂದ ಆದಿ ತೀರ್ಥಂಕರನ ಮಕ್ಕಳ ಈ ವೃತ್ತಾಂತವನ್ನು ಕವಿ ಬೆಳೆಸಲು ಹೋಗಿಲ್ಲ ಎನಿಸುತ್ತದೆ. ಮಾನಕಷಾಯದ ನಿವಾರಣೆಯ ಸಂದರ್ಭದಲ್ಲಿ ಕವಿ ಆದಿಪುರಾಣಕ್ಕೆ ಹತ್ತಿರ ನಾಗಿದ್ದಾನೆ. ಪುರುದೇವಚರಿತವು ಚಾವುಂಡರಾಯಪುರಾಣದ ಅನುವರ್ತಿಯಾಗಿದ್ದರೂ ಅಲ್ಲಿ ಕಂಡುಬಾರದ ವರ್ಣನೆ, ನಾಟಕೀಯತೆಗಳು ಸೇರಿಕೊಂಡಿವೆ. ಆದಿಪರಮೇಶ್ವರನ ಯಕ್ಷಗಾನವು ದೌತ್ಯಪ್ರಸಂಗ, ಮಾನಕಷಾಯ ನಿವಾರಣೆಯಲ್ಲಿ ಆದಿಪುರಾಣವನ್ನನುಸರಿ ಸಿದೆ. ಆದರೆ ಭರತಬಾಹುಬಲಿಗಳ ವ್ಯಾಯೋಗ ಪ್ರಸಂಗದಲ್ಲಿ ಉಳಿದ ಆದಿತೀರ್ಥಂಕರ ಕಾವ್ಯಗಳಿಗಿಂತ ವಿಭಿನ್ನವಾಗಿ ನಿಲ್ಲುತ್ತದೆ. ಇಲ್ಲಿ ದೃಷ್ಟಿ, ಜಲ, ಮಲ್ಲಯುದ್ಧಗಳ ಉಲ್ಲೇಖ ಬರುವುದಿಲ್ಲ. ಅವರಿಬ್ಬರಲ್ಲಿ ನಡೆದುದು ಶರಯುದ್ಧ ಎಂಬ ಹೊಸರೀತಿಯ ನಿರೂಪಣೆ ಕಂಡುಬರುತ್ತದೆ. ಇದು ಕವಿಯ ಸ್ವಕಲ್ಪಿತ ವಿಷಯವೋ ಬೇರೊಂದು ಆಕರದ ಪ್ರಭಾವವೋ ಆಗಿರಬಹುದು.

## ಉಪಸಂಹಾರ

### ಆದಿತೀರ್ಥಂಕರನ ಚರಿತ್ರೆಗಳು : ಜೈನಸಾಹಿತ್ಯದಲ್ಲಿ—ವಿಶೇಷವಾಗಿ ಕನ್ನಡ ಸಾಹಿತ್ಯದಲ್ಲಿ—ಅವುಗಳ ನೆಲೆ ಬೆಲೆಗಳು

ಸಂಸ್ಕೃತ, ಪ್ರಾಕೃತ ಭಾಷೆಗಳಲ್ಲಿ ಬೆಳೆದುಬಂದಿರುವ ಆದಿತೀರ್ಥಂಕರನ ಸಾಹಿತ್ಯಕ್ಕೆ ಉಜ್ವಲವೂ ವಿಸ್ತಾರವೂ ಆದ ಹಿನ್ನೆಲೆಯಿದೆ. ಆದಿತೀರ್ಥಂಕರನ ಚರಿತ್ರೆಯೊಂದಿಗೆ ಆತನ ಮಕ್ಕಳಾದ ಭರತಬಾಹುಬಲಿಗಳ ಕಥೆಯೂ ಹೆಣೆದುಕೊಂಡು ಬಂದಿದೆ. ಆಗಮಗ್ರಂಥ ಗಳಲ್ಲಿ ಚದುರಿ ಹೋಗಿರುವಂತೆ ಕಂಡುಬರುವ ವಿಷಯಗಳು ಪುರಾಣಸಾಹಿತ್ಯದಲ್ಲಿ ಕ್ರಮಬದ್ಧವಾಗಿ ವಿಸ್ತಾರವಾಗಿ ನಿರೂಪಣೆಗೊಂಡಿವೆ.

ಜೈನೇತರ ಸಾಹಿತ್ಯದಲ್ಲಿಯೂ ಆದಿತೀರ್ಥಂಕರನ ಹಾಗೂ ಭರತನ ಬಗೆಗೆ ಉಲ್ಲೇಖ ಗಳು ದೊರೆಯುವುದು ಒಂದು ವಿಶೇಷವಾಗಿದೆ. ಭಾಗವತ ಪುರಾಣವಂತೂ ವೃಷಭನ ಜೀವನದ ಬಗೆಗೆ ಸಾಕಷ್ಟು ವಿಸ್ತಾರವಾಗಿಯೇ ಚಿತ್ರಣವನ್ನು ನೀಡುತ್ತದೆ. ಇದರಿಂದ ಜೈನಪುರಾಣಗಳು ಜೈನೇತರ ಸಾಹಿತ್ಯದ ಮೇಲೆ ಉಂಟುಮಾಡಿರುವ ಪ್ರಭಾವವು ಗೋಚರ ವಾಗುತ್ತದೆ.

ಪ್ರಸ್ತುತ ಆದಿತೀರ್ಥಂಕರನ ವರ್ತಮಾನಭವವನ್ನು ಕುರಿತ ವರ್ಣನೆಯನ್ನು ಮಾಡಿ ರುವ ಕೃತಿಯೆಂದರೆ ಶ್ವೇತಾಂಬರ ಪರಂಪರೆಗೆ ಸೇರಿದ ಕ್ರಿ. ಶ. ೧ನೆಯ ಶತಮಾನದ ವಿಮಲಸೂರಿಯ 'ಪಉಮಚರಿಯಂ' ಎಂದು ಕಂಡುಬರುತ್ತದೆ. ಭವಾವಳಿಗಳನ್ನೊಳ ಗೊಂಡಂತೆ ಸಮಗ್ರವಾಗಿ ಆದಿತೀರ್ಥಂಕರನ ಚರಿತ್ರೆಯನ್ನು ಚಿತ್ರಿಸಿರುವ ಕೃತಿಯೆಂದರೆ ಕ್ರಿ. ಶ. ೯ನೆಯ ಶತಮಾನದ ಶೀಲಾಂಕನ 'ಚಉಪ್ಪನ್ನ ಮಹಾಪುರಿಸ ಚರಿಯಂ'. ಶಲಾಕಾಪುರುಷಾಂತರ್ಗತವಾಗಿ ಈ ಕಥೆ ಬರುತ್ತದೆ. ಶ್ವೇತಾಂಬರ ಪರಂಪರೆಗೆ ಸೇರಿದ

ಕಥೆ ಇಲ್ಲಿ ಸಮಗ್ರವಾಗಿ ಪ್ರಥಮ ಬಾರಿಗೆ ಒಂದೆಡೆ ದೊರೆಯುತ್ತದೆ. ಆದ್ದರಿಂದ ಇದು ಆದಿತೀರ್ಥಂಕರ ಚರಿತ್ರೆಗೆ ಶ್ವೇತಾಂಬರ ಸಂಪ್ರದಾಯದ ಪ್ರಾಚೀನತಮ ಆಕರವಾಗಿದೆ ಎಂದು ಹೇಳಬಹುದು. ಅನಂತರ ಪ್ರಾಕೃತ ಭಾಷೆಗಳಲ್ಲಿ ಇದೇ ರೀತಿ ಆದಿತೀರ್ಥಂಕರನ ಕಥೆಯನ್ನು ನಿರೂಪಿಸುವ ತ್ರಿಷಷ್ಟಿ ಶಲಾಕಾಪುರುಷರ ಚರಿತ್ರೆಗಳು ಕ್ರಮವಾಗಿ ಹೀಗಿವೆ. ಇವುಗಳಲ್ಲಿ ೧೦ನೆಯ ಶತಮಾನದ ಪುಷ್ಪದಂತನ 'ತಿಸಟ್ಠಿ ಮಹಾಪುರಿಸ ಗುಣಾಲಂಕಾರು' ಮುಖ್ಯವಾಗಿ ಜಿನಸೇನ-ಗುಣಭದ್ರರ ಮಹಾಪುರಾಣವನ್ನು ಮುಖ್ಯವಾದ ಆಕರವನ್ನಾಗಿಟ್ಟುಕೊಂಡು ರಚಿತವಾದುದಾಗಿದೆ. ಇದರಲ್ಲಿ ನಿರೂಪಿತವಾಗಿರುವ ಆದಿತೀರ್ಥಂಕರ ಕಥಾಭಾಗ ಅತ್ಯಂತ ವಿಸ್ತೃತವೂ ಪ್ರಮುಖ ಭಾಗವೂ ಆಗಿದೆ. ಅಪಭ್ರಂಶ ಭಾಷೆಯಲ್ಲಿ ಆದಿತೀರ್ಥಂಕರನ ಕಥೆ ಮೊಟ್ಟಮೊದಲು ಇಲ್ಲಿ ಕಂಡುಬರುತ್ತದೆ. ಅನಂತರ ೧೨ನೆಯ ಶತಮಾನದ ಆಮ್ರಕವಿಯ ಚಉಪನ್ನ ಮಹಾಪುರಿಸ ಚರಿಯ ಹಾಗೂ ಕಹಾವಲಿಗಳು ಕಂಡುಬರುತ್ತವೆ. ಆದಿತೀರ್ಥಂಕರನ ಚರಿತ್ರೆಯನ್ನೇ ಸ್ವತಂತ್ರವಾಗಿ ವರ್ಣಿಸುವ ಪ್ರಾಕೃತ ಭಾಷೆಯ ಕೃತಿ ಕ್ರಿ. ಶ. ೧೨ನೆಯ ಶತಮಾನದ ವರ್ಧಮಾನಕವಿಯ ಆದಿನಾಥಚರಿತ್ರೆಯಾಗಿದೆ. ಸುಮಾರು ಎಂಟು ಸ್ವತಂತ್ರ ಕೃತಿಗಳು ಪ್ರಾಕೃತ ಭಾಷೆಯಲ್ಲಿ ಕಂಡುಬರುತ್ತವೆ; ಆದರೆ ಇವುಗಳ ಕಾಲವು ತಿಳಿದುಬಂದಿಲ್ಲ.

ಪ್ರಾಕೃತ ಭಾಷೆಯಲ್ಲಿ ರಚಿತವಾದಂತೆ ಸಂಸ್ಕೃತದಲ್ಲಿಯೂ ಆದಿತೀರ್ಥಂಕರನ ಚರಿತ್ರೆಗಳು ಅಧಿಕ ಸಂಖ್ಯೆಯಲ್ಲಿ ದೊರೆಯುತ್ತವೆ. ಸಂಸ್ಕೃತದಲ್ಲಿ ಆದಿತೀರ್ಥಂಕರನಿಗೆ ಸಂಬಂಧಿಸಿದಂತೆ ನಾಲ್ಕು ಸ್ವತಂತ್ರ ಕೃತಿಗಳು ಕಂಡುಬರುತ್ತವೆ. ದ್ವಿಸಂಧಾನ ಕಾವ್ಯದಲ್ಲಿ ಮಿಳಿತವಾಗಿ ಬರುವ ೧೧ನೆಯ ಶತಮಾನದ ಸೂರ್ಯಾಚಾರ್ಯನ 'ನೇಮಿಚರಿತ್ರ' ಮತ್ತು ಹೇಮಚಂದ್ರಸೂರಿಯ (ಕಾಲ ತಿಳಿದುಬಂದಿಲ್ಲ) 'ನಾಭೇಯ ನೇಮಿಕಾವ್ಯ'ಗಳು ಗಮನಾರ್ಹವಾಗಿವೆ.

ಸಂಸ್ಕೃತ ಮಹಾಪುರಾಣಕರ್ತೃಗಳಲ್ಲಿ ಪ್ರಾಚೀನರಾದ ಕೂಚಿಭಟ್ಟಾರಕ, ನಂದಿಮುನಿ, ಕವಿಪರಮೇಷ್ಠಿಗಳ ಕೃತಿಗಳು ಲಭ್ಯವಾಗಿಲ್ಲ. ಜಿನಸೇನ ಗುಣಭದ್ರ ಪೂರ್ವಪುರಾಣದಲ್ಲಿ ಬರುವ ಆದಿತೀರ್ಥಂಕರ ಚರಿತ್ರೆಯು ಒಂದು ಕಥಾಮಾರ್ಗವನ್ನೇ ಸೃಷ್ಟಿಸಿದೆ. ಪ್ರಾಕೃತ-ಕನ್ನಡ ಭಾಷೆಗಳಲ್ಲಿಯೂ ಇದರ ಪ್ರಭಾವವು ಕಂಡುಬರುತ್ತದೆ. ಇದನ್ನು ಗಮನಿಸಿದರೆ ದಿಗಂಬರ ಸಂಪ್ರದಾಯದ ಈ ಕಥಾಮಾರ್ಗವು ಒಂದು ಪರಂಪರೆಯಾಗಿ ಮುಂದಿನ ಕವಿಗಳ ಮಹಾಪುರಾಣ ರಚನೆಯಲ್ಲಿಯೂ ಅದರ ಒಂದು ಭಾಗವಾದ ಆದಿತೀರ್ಥಂಕರ ಚರಿತ್ರೆಯಲ್ಲಿಯೂ ಮುಂದುವರಿದಿದೆ ಎಂದು ತಿಳಿಯಬಹುದಾಗಿದೆ. ಈ ಪರಂಪರೆಗೆ ಹಿನ್ನೆಲೆಯಲ್ಲಿರುವ ಕೃತಿಗಳು ಅನುಪಲಬ್ಧವಾದ್ದರಿಂದ ಜಿನಸೇನ ಗುಣಭದ್ರರೇ ಪ್ರವರ್ತಕ ಸ್ಥಾನದಲ್ಲಿ ನಿಲ್ಲುತ್ತಾರೆ. ಒಟ್ಟು ಹದಿಮೂರು ಕೃತಿಗಳಲ್ಲಿ ತ್ರಿಷಷ್ಟಿಶಲಾಕಾಪುರುಷಾಂತರ್ಗತವಾಗಿ ಆದಿತೀರ್ಥಂಕರ ಚರಿತ್ರೆಯು ಕಂಡುಬರುತ್ತದೆ. ಇತರ ಭಾಷೆಗಳಿಗಿಂತ ಸಂಸ್ಕೃತದಲ್ಲಿ ಮಹಾಪುರಾಣಗಳ ಸಂಖ್ಯೆ ವಿಪುಲವಾಗಿ ಕಂಡುಬರುತ್ತದೆ. ಸಂಸ್ಕೃತದಲ್ಲಿ ಮೊಟ್ಟಮೊದಲಿಗೆ ಆದಿತೀರ್ಥಂಕರ ಕಥೆಯು ಕ್ರಿ. ಶ. ೭ನೆಯ ಶತಮಾನದ ರವಿಷೇಣನ 'ಪದ್ಮಚರಿತೆ'ಯಲ್ಲಿ ಕಂಡುಬರುತ್ತದೆ. ಶ್ವೇತಾಂಬರ ಪರಂಪರೆಯ ಕಥೆಯನ್ನು ಸಂಸ್ಕೃತದಲ್ಲಿ ನಿರೂಪಿಸಿದವರಲ್ಲಿ ಹೇಮಚಂದ್ರನೇ ಮೊದಲಿಗನಾಗಿ ಕಂಡುಬರುತ್ತಾನೆ. ಶೀಲಾಂ

ಕನ ಆದಿತೀರ್ಥಂಕರ ಕತೆಯಲ್ಲಿ ಕಂಡುಬಾರದ, ದಿಗಂಬರ ಪರಂಪರಾಂತರ್ಗತವಾಗಿ ಬರುವ ಎಷ್ಟೋ ಕಥಾಂಶಗಳು ಹೇಮಚಂದ್ರನಲ್ಲಿ ಕಂಡುಬರುತ್ತವೆ.

ನಿರ್ದಿಷ್ಟವಾಗಿ ಭಾಷೆಯನ್ನು ನಿರ್ದೇಶಿಸಿರದ ಅನೇಕ ಆದಿತೀರ್ಥಂಕರ ಸ್ವತಂತ್ರ ಕೃತಿಗಳು ಹಾಗೂ ಮಹಾಪುರಾಣಗಳು, ಜಿನರತ್ನಕೋಶ ಮೊದಲಾದುವುಗಳಲ್ಲಿ ಉಲ್ಲೇಖ ಗೊಂಡಿರುವುದು ಕಂಡುಬರುತ್ತವೆ. ಅವುಗಳನ್ನೂ ಪರಿಗಣಿಸಿದಲ್ಲಿ ಆದಿತೀರ್ಥಂಕರ ಸಾಹಿತ್ಯದ ಹರವು ಮತ್ತೂ ವಿಶಾಲವಾಗುತ್ತದೆ.

ಪ್ರಾಕೃತ ಸಂಸ್ಕೃತ ಭಾಷೆಗಳೆರಡರಲ್ಲಿಯೂ ದಿಗಂಬರ ಮತ್ತು ಶ್ವೇತಾಂಬರ ಪರಂಪರೆಗಳ ಆದಿತೀರ್ಥಂಕರನ ಕಥಾಮಾರ್ಗಗಳು ರೂಪಗೊಂಡಿವೆ. ಇವುಗಳಲ್ಲಿ ದಿಗಂಬರ ಸಂಪ್ರದಾಯವನ್ನು ಹಿಡಿದು ರಚಿತವಾಗಿರುವ ಕೃತಿಗಳೇ ಹೆಚ್ಚಾಗಿ ಕಂಡುಬರುತ್ತವೆ. "ಎರಡು ಸಂಪ್ರದಾಯಗಳ ಕೃತಿಗಳಲ್ಲಿಯೂ ಸ್ವಲ್ಪ ಹೆಚ್ಚು ಕಡಮೆಯೇ ಆದ ಪ್ರಮಾಣ ದಲ್ಲಿ ಕಥೆಯ ರೂಪರೇಷೆಗಳೂ ಕಥೆಗಳೂ ಕಥಾಂಶಗಳೂ ಪರಸ್ಪರ ಸಮ್ಮಿಶ್ರವಾಗಿವೆ" (Introduction to Silanka's Cauppannamahapurisa Chariyam, Klaus Bruhn, p. 9). ಪ್ರಾಚೀನರಾದ ಜಿನಸೇನ, ಗುಣಭದ್ರ, ಶೀಲಾಂಕ, ಹೇಮಚಂದ್ರ, ಈ ಮೊದಲಾದ ಉಭಯ ಸಂಪ್ರದಾಯದ ಪುರಾಣಕರ್ತೃಗಳಲ್ಲಿಯೇ ಇದು ಕಂಡುಬರುತ್ತದೆ (ಟಿ. ವಿ. ವೆಂಕಟಾಚಲ ಶಾಸ್ತ್ರೀ, 'ಕನ್ನಡ ನೇಮಿನಾಥ ಪುರಾಣಗಳ ತೌಲನಿಕ ಅಧ್ಯಯನ'; ಪು. ೫೨೧). ಇವುಗಳನ್ನು ಕಥಾಮೂಲವನ್ನಾಗಿಟ್ಟುಕೊಂಡಿರುವ ಆದಿತೀರ್ಥಂಕರನ ಕಾವ್ಯಗಳಲ್ಲಿಯೂ ಸಂಪ್ರದಾಯಗಳ ಸಮ್ಮಿಶ್ರತೆ ಸಹಜವಾಗಿಯೇ ಇರುತ್ತದೆ ಎನ್ನಬಹುದು.

ಸಂಸ್ಕೃತಾದಿ ಆದಿತೀರ್ಥಂಕರ ಚರಿತ್ರೆಗಳಲ್ಲಿ ಆಯಾ ಕಾಲದ ಚಾರಿತ್ರಿಕ, ಸಾಮಾಜಿಕ, ಧಾರ್ಮಿಕ, ಸಾಹಿತ್ಯಕ ಸಂಗತಿಗಳು ಸಮ್ಮಿಶ್ರಗೊಂಡಿವೆ. ಇಲ್ಲಿ ಉಲ್ಲೇಖವಾಗಿರುವ ಯತಿ ಪರಂಪರೆ, ಕವಿ ಪರಂಪರೆಗಳು ಜೈನ ಧರ್ಮ ಮತ್ತು ಸಾಹಿತ್ಯಗಳ ಇತಿಹಾಸ ರಚನೆಗೆ ತುಂಬ ಸಹಾಯಕವಾಗುತ್ತವೆ.

ಉಳಿದ ತೀರ್ಥಂಕರ ಗ್ರಂಥಗಳಂತೆ ಆದಿತೀರ್ಥಂಕರ ಚರಿತ್ರೆಯೂ ಸಹ ಜೈನ ಧರ್ಮೀಯರ ಧಾರ್ಮಿಕ ಗ್ರಂಥ, ಪವಿತ್ರ ಗ್ರಂಥ. ಪ್ರತಿಯೊಬ್ಬ ಕರ್ತೃವೂ ಧರ್ಮ ಪ್ರಭಾವನೆಯ ಮುಖ್ಯ ದೃಷ್ಟಿಯನ್ನು ಲಕ್ಷ್ಯದಲ್ಲಿಟ್ಟುಕೊಂಡೇ ಕೃತಿರಚನೆಯನ್ನು ಮಾಡಿದ್ದಾನೆ. ಈ ದೃಷ್ಟಿಯನ್ನು ಆಯಾ ಕೃತಿಕಾರರು ತಮ್ಮ ಕೃತಿಗಳಲ್ಲಿ ಸ್ಪಷ್ಟಪಡಿಸಿದ್ದಾರೆ. ಈ ಕೃತಿಗಳು ಸ್ವಪ್ರೇರಿತವಾಗಿ ಬರೆದುದಾಗಿರಲಿ ಇಲ್ಲವೇ ದಾತೃವೊಬ್ಬನ ಪ್ರಾರ್ಥನೆಯಿಂದ ಪ್ರೇರಿತವಾಗಿ ಬರೆದುದಾಗಿರಲಿ ಈ ಧರ್ಮಜಾಗೃತಿಯ ಪ್ರಜ್ಞೆ ನಿಚ್ಚಳವಾಗಿ ಕಂಡುಬರುತ್ತದೆ. ಆದಿತೀರ್ಥಂಕರನ ರೋಚಕ ಕಥೆಯನ್ನು ಆರಿಸಿಕೊಂಡು ಅಲಂಕಾರ, ಭಾಷಾವೈವಿಧ್ಯವನ್ನು ಅವುಗಳಲ್ಲಿ ಬೆಸೆದು ಸ್ವಾರಸ್ಯಗೊಳಿಸಿ ಓದುಗರಲ್ಲಿ ಜೈನಧರ್ಮದ ನಿಷ್ಠೆಯನ್ನು ಬಿತ್ತಿ ಬೆಳೆಸುವ ಧ್ಯೇಯವನ್ನು ಹೊಂದಿವೆ. ಒಂದು ರೀತಿಯ ಧರ್ಮಪ್ರಚಾರಕ ಕ್ರಿಯಾಂಶವೇ ಇವುಗಳಲ್ಲಿ ಅಡಕಗೊಂಡಿವೆ ಎಂದು ಹೇಳಬಹುದಾಗಿದೆ.

ಆದಿತೀರ್ಥಂಕರ ಚರಿತ್ರೆಯು ಸಂಸ್ಕೃತ, ಪ್ರಾಕೃತ ಭಾಷೆಗಳಲ್ಲಿ ಜೈನ ಸಾಹಿತ್ಯದ ವಿವಿಧ ಕೃತಿಗಳೊಂದಿಗೆ ಸೇರಿಕೊಂಡು ಪ್ರಾಸಂಗಿಕವಾಗಿ ನಿರೂಪಿತವಾಗಿರುವುದು ಈ ಚರಿತ್ರೆಯ ವ್ಯಾಪಕತೆಯ ದೃಷ್ಟಿಯಿಂದ ಗಮನಾರ್ಹವಾಗಿದೆ.

ಆದಿತೀರ್ಥಂಕರ ಸಾಹಿತ್ಯವು ಭಾರತೀಯ ಶಿಲ್ಪಕ್ಕೆ ಕೂಡ ತನ್ನ ಕಾಣಿಕೆಯನ್ನು ಸಲ್ಲಿಸಿರುವಂತೆ ತೋರುತ್ತದೆ. ದೇಶದ ನಾನಾ ಕಡೆಗಳಲ್ಲಿ ಅಲ್ಲಲ್ಲಿ ಆದಿನಾಥ ಬಸದಿಗಳು ನಿರ್ಮಾಣಗೊಂಡಿರುವುದಕ್ಕೆ ಇವು ಪರೋಕ್ಷವಾದ ಕಾರಣವಾಗಿರಲೂಬಹುದು.

ವಿಶೇಷತಃ ಕನ್ನಡ ನಾಡಿನ ನಾನಾ ಭಾಗಗಳಲ್ಲಿ ನಿಂತಿರುವ ಗೊಮ್ಮಟಮೂರ್ತಿಗಳು ನಾಡಿನ ಸಾಂಸ್ಕೃತಿಕ, ಐತಿಹಾಸಿಕ ಹಿರಿಮೆಯನ್ನು ಸ್ಥಾಪಿಸಿವೆ. ಶ್ರವಣಬೆಳಗೊಳ, ಕಾರ್ಕಳ, ವೇಣೂರು, ಗೊಮ್ಮಟಗಿರಿ, ಧರ್ಮಸ್ಥಳ ಮೊದಲಾದ ಎಡೆಗಳಲ್ಲಿ ಮೂಡಿ ನಿಂತಿರುವ ಗೊಮ್ಮಟ ವಿಗ್ರಹಗಳು ನಾಡಿನ ಹೆಮ್ಮೆಯ ಶಿಲ್ಪಗಳಾಗಿವೆ. ಈ ಶಿಲ್ಪಗಳಲ್ಲಿ ಶ್ರವಣಬೆಳಗೊಳದ ಅತ್ಯಂತ ಅಪೂರ್ವ ಶಿಲ್ಪವನ್ನು ಕೆತ್ತಿಸಿದ ಕೀರ್ತಿಯು ಸಾಹಿತ್ಯಕಾರನೂ ಧರ್ಮಾಭಿಮಾನಿಯೂ ಯೋಧಾಗ್ರಣಿಯೂ ಆದ ಚಾವುಂಡರಾಯನಿಗೆ ಸಲ್ಲುತ್ತದೆ.

ಆದಿತೀರ್ಥಂಕರ ಚರಿತ್ರೆಗಳ ಪ್ರೇರಣೆಯಿಂದ ಮೂಡಿಬಂದಿರುವ ಭರತ ಬಾಹುಬಲಿಗಳ ಚರಿತ್ರೆಯನ್ನು ಪ್ರತ್ಯೇಕವಾಗಿ ಪ್ರತಿಪಾದಿಸುವ ಸ್ವತಂತ್ರ ಕೃತಿಗಳು, ಸಂಸ್ಕೃತ, ಪ್ರಾಕೃತ ಹಾಗೂ ಕನ್ನಡ ಭಾಷೆಗಳಲ್ಲಿ ದೊರೆಯುತ್ತವೆ. ಕನ್ನಡದಲ್ಲಿರುವ ಕೆಲವು ಕಾವ್ಯಗಳು ಈ ಶಿಲ್ಪಗಳ ಪ್ರೇರಣೆಯಿಂದಾಗಿ ಮೂಡಿಬಂದವುಗಳಾಗಿವೆ. ಕೆಲವು ಮೂರ್ತಿಯ ಪ್ರತಿಷ್ಠಾಪನೆ, ಮಹಾಮಸ್ತಕಾಭಿಷೇಕದ ವರ್ಣನೆಯನ್ನೇ ಪ್ರಧಾನವಾಗಿ ವರ್ಣಿಸುವಂಥವುಗಳಾದರೆ ಮತ್ತೆ ಕೆಲವು ಭರತ ಬಾಹುಬಲಿಗಳ ಕಥೆಯನ್ನು ನಿರೂಪಿಸುತ್ತವೆ. ಶ್ರವಣಬೆಳಗೊಳದ ಮೂರ್ತಿಯನ್ನು ಮೈಮರೆತು ತನ್ಮಯತೆಯಿಂದ ಹೊಗಳಿ ಹಾಡಿ ರೂಪಸ್ತವ, ಗುಣಸ್ತವಗಳನ್ನು ಮಾಡಿರುವ ಬೊಮ್ಮಣ ಪಂಡಿತನ (ಕ್ರಿ. ಶ. ೧೧೮೦) 'ಗೊಮ್ಮಟ ಸ್ತುತಿ', ಮಧುರನ (ಕ್ರಿ. ಶ. ೧೩೮೫) 'ಗೊಮ್ಮಟಾಷ್ಟಕ', ರತ್ನಾಕರವರ್ಣಿಯ (ಕ್ರಿ. ಶ. ೧೫೫೭) 'ಭರತೇಶ ವೈಭವ', ಪಂಚಬಾಣನ (ಕ್ರಿ. ಶ. ೧೬೧೪) 'ಭುಜಬಲಿ ಚರಿತೆ', ಚದುರಚಂದ್ರಮನ (ಕ್ರಿ. ಶ. ೧೬೩೨) 'ಕಾರ್ಕಳದ ಗೊಮ್ಮಟೇಶ್ವರ ಚರಿತೆ', ಅನಂತಕವಿಯ (ಕ್ರಿ. ಶ. ೧೭೮೦) 'ಗೊಮ್ಮಟೇಶ್ವರ ಚರಿತೆ', ಚಿಕ್ಕಣ ಪಂಡಿತನ 'ಬಾಹುಬಲಿ ಚರಿತೆ', ೨೦ನೇ ಶತಮಾನದ 'ಭರತೇಶ್ವರ ಯಕ್ಷಗಾನ' ಮೊದಲಾದ ಕೃತಿಗಳು ಆದಿತೀರ್ಥಂಕರನ ಮಕ್ಕಳಾದ ಭರತ ಬಾಹುಬಲಿಯರ ವಸ್ತುವನ್ನು ಮುಖ್ಯವಾಗಿರಿಸಿಕೊಂಡಿವೆ. ಇವುಗಳಲ್ಲಿ ಭರತೇಶವೈಭವವಂತೂ ಬೃಹತ್ತಿನಲ್ಲಿ ಅಗ್ರಗಣ್ಯವಾಗಿ ನಿಲ್ಲುವಂತಹದ್ದಾಗಿದೆ.

ಕನ್ನಡ ಆದಿತೀರ್ಥಂಕರನ ಚರಿತ್ರೆಗಳು ಜಿನಸೇನ ಗುಣಭದ್ರರ ಪೂರ್ವಪುರಾಣದ ಕಥಾಸಂಪ್ರದಾಯದ ಪ್ರಭಾವಕ್ಕೆ ಒಳಗಾದ ಕೃತಿಗಳಾಗಿವೆ. ಉಪಲಬ್ಧ ಕಾವ್ಯಗಳಲ್ಲಿ ಆದಿತೀರ್ಥಂಕರನ ಚರಿತ್ರೆಯನ್ನು ಕನ್ನಡದಲ್ಲಿ ಸ್ವತಂತ್ರವಾಗಿ ಮೊಟ್ಟಮೊದಲು ನಿರೂಪಿಸಿರುವ ಕೀರ್ತಿ ಆದಿಪುರಾಣದ್ದಾಗಿದೆ. ಜಿನಸೇನರ ಕೃತಿಯನ್ನೇ ಆಕರವಾಗಿಟ್ಟುಕೊಂಡಿದ್ದರೂ ಅನೇಕ ರೀತಿಯ ವೈದೃಶ್ಯಗಳೂ ನಿರೂಪಣೆಯಲ್ಲಿ ಕಥಾಂಶವನ್ನೊಳಗೊಂಡಂತೆ ಕಂಡುಬರುತ್ತವೆ. ಈ ವ್ಯತ್ಯಾಸಕ್ಕೆ ಕಾರಣ ಅನ್ಯ ಆಕರಗಳ ಪ್ರಭಾವವೂ ಆಗಿರಬಹುದು, ಇಲ್ಲವೇ ಕವಿಯ ಸ್ವಪ್ರತಿಭೆಯ ಅಂಶವೂ ಆಗಿರಬಹುದು. ಹೀಗಾಗಿ ಈ ವೈದೃಶ್ಯಗಳಿಂದಾಗಿ ಆದಿಪುರಾಣವು ಒಂದು ರೀತಿಯ ಪ್ರತ್ಯೇಕತೆಯನ್ನು ರೂಪಿಸಿ ಸ್ವತಂತ್ರವಾಗಿ ನಿಲ್ಲುತ್ತದೆ. ಅಲ್ಲಲ್ಲಿ ಭಾವಾನುವಾದ, ಶಬ್ದಾನುವಾದಗಳಷ್ಟೇ ಅಲ್ಲದೆ ಕವಿ ನಾನಾವಿಧವಾದ ವ್ಯತ್ಯಾಸಗಳ ಮೂಲಕ ತನ್ನ ಸ್ವೋಪಜ್ಞತೆಯನ್ನು ಮೆರೆದಿದ್ದಾನೆ. ಪಂಪನು ತನ್ನ

ಕಾವ್ಯರಚನೆಯಲ್ಲಿ ಮೂಲದಿಂದ ಭಿನ್ನವಾದ ಕೆಲವು ವ್ಯತ್ಯಾಸಗಳನ್ನು ಮಾಡಿಕೊಂಡಿರುವುದನ್ನು ಹೀಗೆ ಗುರುತಿಸಬಹುದಾಗಿದೆ: ೧. ಕಥಾಸಂಬಂಧಿಯಾದ ವರ್ಣನೆಗಳನ್ನು ಸಂಗ್ರಹಿಸಿರುವುದು, ೨. ಕಥಾಸಂಬಂಧಿಯಾದ ಮೂಲದ ಸಂಗತಿಗಳನ್ನು ವ್ಯತ್ಯಾಸಗೊಳಿಸಿರುವುದು, ೩. ಮೂಲದ ವಿಷಯ ನಿರೂಪಣೆಯನ್ನು ಕೈಬಿಟ್ಟು ಹೊಸದಾಗಿ ವಿಷಯನಿರೂಪಣೆ ಮಾಡಿರುವುದು, ೪. ಮೂಲದ ಕಥೆ ವೃತ್ತಾಂತಗಳು ವರ್ಣನೆಗಳು ಸ್ಥಾನಪಲ್ಲಟಗೊಂಡಿರುವುದು, ೫. ಮೂಲದ ವಾಕ್ಯಗಳನ್ನು ಸ್ವಲ್ಪಮಟ್ಟಿಗೆ ವಿಸ್ತರಿಸಿರುವುದು, ೬. ಮೂಲದ ಸಂದರ್ಭ, ಸನ್ನಿವೇಶಗಳನ್ನು ಇನ್ನೂ ಉತ್ತಮಗೊಳಿಸಿರುವುದು, ೭ ವರ್ಣನಾ ಭಾಗಗಳನ್ನು ಸಂಗ್ರಹಿಸಿರುವುದೇ ಅಲ್ಲದೆ ಸ್ವಂತ ವರ್ಣನೆಯನ್ನು ನೀಡಿರುವುದು.

ಆದಿಪುರಾಣವು ಅನೇಕ ಪೂರ್ವಕವಿಗಳ ಪ್ರಭಾವಕ್ಕೆ ಒಳಗಾಗಿರುವಂತೆ, ಆದಿಪುರಾಣದ ಪ್ರಭಾವಕ್ಕೆ ಉತ್ತರಕಾಲೀನ ಕಾವ್ಯಗಳು ಬಹುತೇಕವಾಗಿ ಒಳಗಾಗಿವೆ. ಉತ್ತರಕಾಲೀನ ಆದಿತೀರ್ಥಂಕರ ಕಾವ್ಯಗಳಂತೂ ಆದಿಪುರಾಣದ ಪ್ರಭಾವದಿಂದ ಹೊರಬಾರದವುಗಳಾಗಿವೆ. ಇದು ಆದಿಪುರಾಣದ ಹೆಗ್ಗಳಿಕೆಗೆ ಸಾಕ್ಷಿಯಾಗಿದೆ. ಕನ್ನಡ ಆದಿತೀರ್ಥಂಕರ ಸಾಹಿತ್ಯದ ಹರವು ಏನೇ ಇದ್ದರೂ ಅವು ಆದಿಪುರಾಣದ ಮೇಲ್ಮಟ್ಟಕ್ಕೆ ಬರುವುದಿಲ್ಲವೆಂಬುದು ಸ್ಪಷ್ಟ.

ಪೂರ್ವಪುರಾಣ, ಆದಿಪುರಾಣಗಳೆರಡನ್ನೂ ಅನುಸರಿಸಿರುವ ಚಾವುಂಡರಾಯ ಪುರಾಣವು ಆದಿತೀರ್ಥಂಕರ ಚರಿತ್ರೆಗಳಲ್ಲಿ ಎರಡನೆಯದಾಗಿದೆ. ಕನ್ನಡ ಸಾಹಿತ್ಯಲೋಕಕ್ಕೆ ಮೊಟ್ಟಮೊದಲ ಬಾರಿಗೆ ಮಹಾಪುರಾಣವನ್ನು ತಂದುಕೊಟ್ಟ ಕೀರ್ತಿ ಚಾವುಂಡರಾಯನದಾಗಿದೆ. ಸಂಸ್ಕೃತ, ಪ್ರಾಕೃತ ಭಾಷೆಗಳಂತೆ ಕನ್ನಡದಲ್ಲಿ ಮಹಾಪುರಾಣಗಳು ಬೆಳೆದುಬರಲಿಲ್ಲ. ತೀರ್ಥಂಕರರನ್ನು ಕುರಿತ ಸ್ವತಂತ್ರ ಪುರಾಣಗಳು ಮೂಡಿಬಂದುವೇ ಹೊರತು, ತ್ರಿಷಷ್ಟಿಶಲಾಕಾಪುರುಷರನ್ನೊಳಗೊಂಡ ಸಮಗ್ರಕೃತಿ ಕನ್ನಡದಲ್ಲಿ ಅನಂತರ ರೂಪಗೊಳ್ಳಲಿಲ್ಲ. ಹೀಗಾಗಿ ಚಾವುಂಡರಾಯಪುರಾಣವು ಕನ್ನಡದ ಏಕೈಕ ಮಹಾಪುರಾಣವಾಗಿದೆ.

ಮೂಲ ಆಕರಗಳಿಂದ ಸಂಗ್ರಹಗೊಳಿಸುವಾಗ ತನ್ನ ಸಂಗ್ರಾಹಕತೆಗೆ ಬೇಕಾದ ಮುಖ್ಯ ಕಥಾವಸ್ತುವನ್ನು ಮಾತ್ರ ಉಳಿಸಿಕೊಂಡು, ಅನುಪಯುಕ್ತ ವಿವರಗಳನ್ನು, ವಿವರಣಾತ್ಮಕವಾದ ವ್ಯಕ್ತಿ, ಗುಣ ಮತ್ತು ವಸ್ತು ವಿಶೇಷವೇ ಮೊದಲಾದುವನ್ನು ಚಾಮುಂಡರಾಯನು ಕೈಬಿಟ್ಟಿದ್ದಾನೆ. ಅಲಂಕಾರಾದಿಗಳನ್ನು, ಧಾರ್ಮಿಕ, ಪೌರಾಣಿಕ ವಿವರಗಳ ಪ್ರಕ್ರಿಯೆಗಳನ್ನು ಅಡಕಗೊಳಿಸಿದ್ದಾನೆ. ಸಂಗ್ರಾಹಕತೆಯ ಭರದಲ್ಲಿ ಮೂಲದ ಎಷ್ಟೋ ರಸಪ್ರಸಂಗಗಳನ್ನು ಕೈಬಿಟ್ಟಿದ್ದಾನೆ; ಇಲ್ಲವೇ ಅವುಗಳನ್ನು ತೀರ ಕಳಪೆಯನ್ನಾಗಿಸಿದ್ದಾನೆ. ಒಂದು ಸಂಗತಿ ಮತ್ತೊಂದು ಸಂಗತಿಯ ಬೆನ್ನಿಗಂಟಿಕೊಂಡಂತೆಯೇ ನಿರೂಪಣೆ ಸಾಗುತ್ತದೆ. ವೇಗವಾಗಿ ಸಾಗುವ ಶೈಲಿಯ ವೈಖರಿ ಓದುಗರ ಚಿತ್ತಭಿತ್ತಿಯ ಮೇಲೆ ಚಿತ್ರವನ್ನು ಸ್ಥಾಯಿಗೊಳಿಸುವುದಿಲ್ಲ. ಕೇವಲ ಕಥೆಯ ಸ್ಥೂಲ ಪರಿಚಯ ಲಭಿಸುತ್ತದೆಯೇ ಹೊರತು, ಸಾವಧಾನ ಕಥಾಗತಿ ಒದಗಿಸುವ 'ರಸಜ್ಞತೆ' ಇಲ್ಲಿ ಉಂಟಾಗುವುದಿಲ್ಲ.

ಪದ್ಯಬಂಧ ಹಾಗೂ ಚಂಪೂಬಂಧಗಳಲ್ಲಿರುವ ಆದಿತೀರ್ಥಂಕರನ ಕಥೆಯನ್ನು ಚಾವುಂಡರಾಯಪುರಾಣವು ಗದ್ಯದಲ್ಲಿ ಹಿಡಿದಿಟ್ಟಿದೆ. ಚಾವುಂಡರಾಯಪುರಾಣದ ಗದ್ಯ ಸ್ವರೂಪವೂ ಆ ಕಾಲದ ಗದ್ಯಶೈಲಿಯನ್ನು ಪ್ರತಿನಿಧಿಸುತ್ತದೆ. ಈ ದೃಷ್ಟಿಯಿಂದ ಗ್ರಂಥಕ್ಕೆ

ಅಗ್ರಮಾನ್ಯತೆ ಲಭಿಸುತ್ತದೆ.

ಕವಿ ನೀಡುವ ಪೂರ್ವಾಚಾರ್ಯರ ಹಾಗೂ ಪೂರ್ವ ಕವಿಗಳ ಪಟ್ಟಿ ಸಾಹಿತ್ಯಲೋಕಕ್ಕೆ ವಿಶೇಷ ಕಾಣಿಕೆಗಳಾಗಿವೆ. ಹಾಗೆ ಹೆಸರಿಸಿರುವುದೇ ಅಲ್ಲದೆ ಅಲ್ಲಲ್ಲಿಯೇ ಕೆಲವರ ಪದ್ಯಗಳನ್ನು ಉದ್ಧರಿಸಿದ್ದಾನೆ. ಚಾವುಂಡರಾಯನು ಉಲ್ಲೇಖಿಸಿರುವ ಈ ಕವಿಗಳ ಕೃತಿಗಳಾದರೂ ಇನ್ನೂ ಉಪಲಬ್ಧವಾಗಿರದ ಕಾರಣ ಈ ಉದಾಹೃತ ಪದ್ಯಗಳಷ್ಟೇ ಅವರ ಕಾವ್ಯತ್ವವನ್ನು ಪರಿಚಯಿಸಿ ಕೊಡುವ ಆಸ್ತಿಗಳಾಗಿವೆ.

ಚಾವುಂಡರಾಯನು ಪ್ರಮುಖವಾಗಿ ಆದಿಪುರಾಣ, ಪೂರ್ವಪುರಾಣಗಳನ್ನು ಆಕರಗಳನ್ನಾಗಿಟ್ಟುಕೊಂಡಿದ್ದರೂ ಅತಿ ವಿರಳವಾಗಿ ಎಂಬಂತೆ ಬೇರೆಯಾದ ಆಕರವನ್ನು ಉಪಯೋಗಿಸಿಕೊಂಡಂತೆ ತೋರುತ್ತದೆ. ಬ್ರಾಹ್ಮಿಸೌಂದರಿಯರ ರೂಪದಲ್ಲಿ ಖೇಚರಿಯರು, ಬಾಹುಬಲಿಯ ಮೈಮೇಲೆ ಬೆಳೆದಿದ್ದ ಬಳ್ಳಿಗಳನ್ನು ಬಿಡಿಸಿದರೆಂದು ಹೇಳುವಲ್ಲಿ ಚಾವುಂಡರಾಯನು ಶ್ವೇತಾಂಬರ ಸಂಪ್ರದಾಯದ ಕಾವ್ಯವನ್ನು ಓದಿರಬಹುದೆಂದು ಊಹಿಸಬಹುದಾಗಿದೆ.

ಚಾವುಂಡರಾಯಪುರಾಣದ ಸಂಗ್ರಾಹಕ ಶೈಲಿ ಮುಂದಿನ ಹಸ್ತಿಮಲ್ಲನ ಪೂರ್ವಪುರಾಣಕ್ಕೆ ಆದರ್ಶವಾಗಿದೆಯಲ್ಲದೆ ಶಾಂತಿಕೀರ್ತಿ ಹಾಗೂ ಬೊಮ್ಮಣ್ಣ ಕವಿಗಳೂ ಕೂಡ ಈ ಕಥಾಭಾಗದ ಪ್ರಭಾವಕ್ಕೆ ಒಳಗಾಗಿರುವುದು ಸುಸ್ಪಷ್ಟ. ನಾಗರಾಜ ಕವಿಯು ನೇರವಾಗಿ ಇದರ ಪ್ರಭಾವಕ್ಕೆ ಒಳಗಾಗದಿದ್ದರೂ, ಅಲ್ಲಲ್ಲಿ ಕಥಾಚೌಕಟ್ಟಿನ ಸಂಕ್ಷಿಪ್ತತೆಯನ್ನು ರೂಪಿಸುವಲ್ಲಿ ಇದನ್ನು ನೋಡಿರುವ ಸಾಧ್ಯತೆ ಇದೆ. ಹೀಗೆ ಚಾವುಂಡರಾಯಪುರಾಣವು ಉತ್ತರಕಾಲೀನ ಕಾವ್ಯಗಳ ಮೇಲೆ ಪ್ರಭಾವ ಬೀರಿರುವುದು ಶತಮಾನಗಳುರುಳಿದರೂ ಅದರ ಗಣ್ಯತೆ ಮಾಸದಿರುವುದಕ್ಕೆ ಸಾಕ್ಷಿಯಾಗಿದೆ.

ಹಸ್ತಿಮಲ್ಲನ ಪೂರ್ವಪುರಾಣವು ತನ್ನ ಹಿಂದಿನ ಕವಿಗಳ ಕಥಾಮಾರ್ಗವನ್ನನುಸರಿಸಿಯೇ ರೂಪಗೊಂಡ ಕೃತಿಯಾದರೂ ಅಲ್ಲಲ್ಲಿ ಭಿನ್ನವಾಗಿ ನಿಲ್ಲುತ್ತದೆ; ಸಂಗ್ರಾಹಕತೆಯಲ್ಲಿ ಚಾವುಂಡರಾಯಪುರಾಣವನ್ನು ಮಾದರಿಯಾಗಿಟ್ಟುಕೊಂಡಂತೆ ತೋರುತ್ತದೆ. ಚಾವುಂಡರಾಯಪುರಾಣವು ಹೇಳದೆ ಬಿಟ್ಟಿರುವ ಎಷ್ಟೋ ವರ್ಣನಾಂಶಗಳನ್ನು, ಕಥಾವಿವರಗಳನ್ನು ಇದು ಸೇರಿಸಿಕೊಂಡಿದೆ; ಕೆಲವೆಡೆ ಕೈಬಿಟ್ಟಿದೆ. ಈ ಕಾವ್ಯವು ಹಲವೆಡೆ ತನ್ನದೇ ಆದ ವಿಭಿನ್ನ ಪರಂಪರೆಯನ್ನು ರೂಪಿಸುವಂತೆ ಕಂಡುಬಂದರೂ ಆದಿಪುರಾಣದ ಪ್ರಭಾವಕ್ಕೆ ವಿಶೇಷವಾಗಿ ಒಳಗಾಗಿರುವುದು ಸುಸ್ಪಷ್ಟ. ಕಾವ್ಯಕರ್ತೃವಿನ ಬಗೆಗೆ ಇದಮಿತ್ಥಂ ಎಂದು ಹೇಳಲು ಬರುವಂತಿಲ್ಲ. ಸಂಸ್ಕೃತ ತ್ರಿಷಷ್ಟಿ ಮಹಾಪುರಾಣದ ಕರ್ತೃವಾದ ಮಲ್ಲಿಷೇಣನು ಈ ಗ್ರಂಥದ ಕರ್ತೃವೆಂದು ಇತ್ತೀಚೆಗೆ ವಿದ್ವಾಂಸರೊಬ್ಬರು ಅಭಿಪ್ರಾಯಪಟ್ಟಿದ್ದಾರೆ. ಒಂದೆರಡು ಕಡೆ ಈ ಕೃತಿ ಜಿನಸೇನ ಪಂಪರ ಕಾವ್ಯಪರಂಪರೆಗಿಂತ ವಿಭಿನ್ನವಾಗಿ ನಿಂತಿರುವುದುಂಟು. ಮನುಗಳ ಕಾಲದ ವಿಶೇಷ ಘಟನೆಗಳನ್ನು ಹೇಳುವಲ್ಲಿ ಮನುಗಳ ಸಂಬಂಧವಾಗಿ ಹಸ್ತಿಮಲ್ಲನ ಪೂರ್ವಪುರಾಣದಲ್ಲಿ ಕೆಲವು ಮಹತ್ತ್ವಪೂರ್ಣ ಸಂಗತಿಗಳನ್ನು ಹೇಳಲಾಗಿದೆ. ಒಂಬತ್ತನೆಯ ಮನು ಯಶಸ್ವಾನ್. ಹೆಸರಿನ ಸಂಜ್ಞಾ ಪ್ರವರ್ತನೆಯನ್ನು ಮಾಡಿದನು. ಹನ್ನೊಂದನೆ ಮನು ಚಂದ್ರಾಭನು ತಂದೆ ಮಕ್ಕಳೆಂಬ ವ್ಯವಹಾರವನ್ನು ಉಪದೇಶಿಸಿದನು. ಹದಿಮೂರನೆಯ ಮನು ಪ್ರಸೇನಜಿತನಿಗೆ ಮದುವೆ

ಮಾಡಿದನು. ಅಂದು ಮೊದಲಾಗಿ ವಿವಾಹ ಕ್ರಿಯೆಗಳು ವರ್ತಿಸಿದವು. ಈ ಕಾಲಕ್ಕೆ ಮಕ್ಕಳು ಅವಳಿಗಳಾಗಿ ಹುಟ್ಟುವ ಪದ್ಧತಿ ತಪ್ಪಿತು. ಒಬ್ಬೊಬ್ಬರಾಗಿ ಹುಟ್ಟುವುದು ಮೊದಲಾಯಿತು. ಹರಿವಂಶ ಪುರಾಣದಲ್ಲಿಯೂ ಈ ಹೇಳಿಕೆಯಿದೆ. ಹಸ್ತಿಮಲ್ಲನ ಪೂರ್ವಪುರಾಣವು ಮುನಿಗಳ ಕಾಲದಲ್ಲಿ ಏರ್ಪಟ್ಟ ಕೆಲವೊಂದು ಘಟನೆಗಳನ್ನು, ದಿಗಂಬರ ಜೈನಪಂಥದ ಕೆಲವು ಪೌರಾಣಿಕ ಪ್ರಸಂಗಗಳನ್ನು ಸಮರ್ಥರೀತಿಯಿಂದ ಸಮರ್ಥನೆ ಮಾಡುವುದು. ಶ್ವೇತಾಂಬರ ಆಮ್ನಾಯದ ಪ್ರಕಾರ ಅಮಳರ ಜನನ ಮತ್ತು ಮರಣದ ಪದ್ಧತಿ ನಾಭಿರಾಜ ಮರುದೇವಿಯರ ಸಂತಾನವಾದ ವೃಷಭನ ಶೈಶವ ಕಾಲದಲ್ಲಿ ಶಿಥಿಲವಾಯಿತು. ದಿಗಂಬರ ಆಮ್ನಾಯದ ಪ್ರಕಾರ ಅವಳಿಗಳ ಜನನ ವೃಷಭನ ಕಾಲಕ್ಕಾಗಲೆ ನಿಂತಂತೆ ಕಂಡುಬರುತ್ತದೆ. ಯುಗಲ ಜನನದ ಪದ್ಧತಿಯು ಹಸ್ತಿಮಲ್ಲನ ಪೂರ್ವಪುರಾಣದ ಹೇಳಿಕೆಯಂತೆ ಹದಿಮೂರನೆಯ ಮನು ಪ್ರಸೇನಜಿತ್ತನ ಕಾಲಕ್ಕಾಗಲೇ ತಪ್ಪಿಹೋಗಿದ್ದುದಲ್ಲದೆ ಆ ಕಾಲಕ್ಕಾಗಲೇ ವಿವಾಹಪದ್ಧತಿಯೂ ರೂಢಿಗೆ ಬಂದಿದ್ದಿತು. "ವೃಷಭನ ಜನನ, ಯುಗಲಜನನ ಪದ್ಧತಿಯಲ್ಲಾಯಿತೆಂಬ ಹಾಗೂ ಯುಗಲ ದಂಪತಿತ್ವ ಪದ್ಧತಿಯನುಸಾರ ವೃಷಭನು ತನ್ನ ಸೋದರಿಯನ್ನು ಮದುವೆಯಾದನೆಂಬ ಶ್ವೇತಾಂಬರ ಆಮ್ನಾಯವು ಸರ್ವಥಾ ನಿರಾಕೃತವಾಗಿರುವುದು. ಈ ರೀತಿಯಿಂದ (ಹಸ್ತಿ) ಮಲ್ಲಿಷೇಣ ಪೂರ್ವಪುರಾಣದ ಆಮ್ನಾಯವನ್ನು ಸಮರ್ಥರೀತಿಯಿಂದ ಪೋಷಣೆ ಮಾಡುವುದು. (ಗುರುದೇವ, ಸಂ. ೩೨, ಸಂ. ೬೬-೬೭, ಲೇ. ಎಂ. ಡಿ. ವಸಂತರಾಜ್, ೧೯೮೮) ಪುಣ್ಯಾಸ್ರವದ ಆದೀಶ್ವರರ ಕಥೆಯಲ್ಲಿಯೂ ಮನುಗಳ ಚರಿತ್ರೆಯ ನಿರೂಪಣೆ ಹಸ್ತಿಮಲ್ಲನ ಪೂರ್ವಪುರಾಣಕ್ಕೆ ಹತ್ತಿರವಾಗಿ ನಿಲ್ಲುವುದನ್ನು ಗಮನಿಸಬಹುದಾಗಿದೆ. ಈ ಎರಡೂ ಗ್ರಂಥಗಳಿಗೆ ಸಮಾನವಾದ ಆಕರ ಈ ವಿಷಯದಲ್ಲಿ ಒದಗಿರಬೇಕೆಂದು ತೋರುತ್ತದೆ.

ಮೂಲದ ಕಥೆಯ ಸಾರಾಂಶವನ್ನು ನೀಡುವುದಷ್ಟೇ ಕವಿಯ ಉದ್ದೇಶ. ಮುಖ್ಯವಾಗಿ ಕಂಡುಬರುವ ಕಥಾವಿವರಗಳನ್ನು ಸಂಗ್ರಹಿಸುವಲ್ಲಿ ಕವಿ ಯಶಸ್ವಿಯಾಗಿದ್ದಾನೆ. ಕೆಲವೆಡೆ ಭಾವವನ್ನು ಸಂಗ್ರಹಿಸಿ ಹಿಡಿದಿಡುವುದರಲ್ಲಿ ಶಾಬ್ದಿಕವಾಗಿಯೂ ಪೂರ್ವಪುರಾಣ, ಆದಿಪುರಾಣಗಳ ಅನುಕರಣೆಯು ಕಂಡುಬರುತ್ತದೆ. ಕೆಲವೆಡೆ ಚಾವುಂಡರಾಯಪುರಾಣದ ಅನುಕರಣೆಯೂ ಇದೆ. ಅಲ್ಲದೆ ತನ್ನದೇ ಆದ ಕೆಲವು ವಿಚಾರಗಳನ್ನು ಸೇರಿಸಿಕೊಂಡು ಅಥವಾ ಅನ್ಯ ಆಕರಗಳಿಂದ ಅವುಗಳನ್ನು ಒದಗಿಸಿಕೊಂಡು ಒಂದು ರೀತಿಯ ಸಮ್ಮಿಶ್ರ ಕಥಾಮಾರ್ಗವನ್ನೊಳಗೊಂಡಿದೆ ಎನ್ನಬೇಕು. ಚಾವುಂಡರಾಯಪುರಾಣದಂತೆ ಕೃತಿ ಸಂಗ್ರಾಹಕತೆಗೇ ಒಲಿದಿರುವುದರಿಂದ ಸುಂದರವಾದ ಕಲ್ಪನೆ, ಪಾತ್ರಪೋಷಣೆ, ರಸಪುಷ್ಟಿ ಈ ಮೊದಲಾದುವುಗಳಿಗೆ ಎಡೆ ದೊರೆತಿಲ್ಲವಾದರೂ, ಚಾವುಂಡರಾಯಪುರಾಣಕ್ಕಿಂತ ಒಂದು ಕೈ ಮೇಲೆಂಬಂತೆ ಅಲ್ಲಲ್ಲಿ ಮೂಲದಲ್ಲಿರುವ ಅನೇಕ ಅಲಂಕಾರಗಳ ಬಳಕೆ, ನಾಟಕೀಯ ಕೌಶಲ, ಚಿತ್ರಗತ ನಿರೂಪಣೆಗಳನ್ನು ಅಳವಡಿಸಿದ್ದಾನೆ.

ಹಸ್ತಿಮಲ್ಲನ ಪೂರ್ವಪುರಾಣದ ಪ್ರಭಾವಕ್ಕೆ ಉತ್ತರಕಾಲೀನ ಕಾವ್ಯಗಳಾದ ಪುರುದೇವಚರಿತ ಮತ್ತು ಆದಿಪರಮೇಶ್ವರನ ಯಕ್ಷಗಾನಗಳು ಒಳಗಾಗಿವೆ. ಅದರಲ್ಲಿ ಆದಿಪರಮೇಶ್ವರನ ಯಕ್ಷಗಾನವು ಹೆಜ್ಜೆಹೆಜ್ಜೆಗೂ ಇದನ್ನು ಅನುಸರಿಸಿದೆ. ಕಥಾವಸ್ತುವಿನ ದೃಷ್ಟಿಯಲ್ಲಿಯೇ ಅಲ್ಲದೆ ಶಾಬ್ದಿಕವಾಗಿಯೂ ಇದನ್ನು ಅನುಸರಿಸಿರುವುದು ಗಮನಾರ್ಹ.

ಚಾವುಂಡರಾಯಪುರಾಣದ ನಂತರ ಕನ್ನಡ ಸಾಹಿತ್ಯದಲ್ಲಿ ಕಂಡುಬರುವ ಎರಡನೆಯ ಗದ್ಯಗ್ರಂಥ ಹಸ್ತಿಮಲ್ಲನ ಪೂರ್ವಪುರಾಣವಾಗಿದೆ. ಚಾವುಂಡರಾಯಪುರಾಣದಂತೆ ತನ್ನ ಕಾಲದ ಗದ್ಯಶೈಲಿಯ ಪರಂಪರೆಯನ್ನು ಪ್ರತಿನಿಧಿಸುವ ಗ್ರಂಥವೆಂಬ ಹಿರಿಮೆಗೆ ಇದು ಪಾತ್ರವಾಗದಿದ್ದರೂ ಸರಳ, ಸುಭಗ ಶೈಲಿಯಲ್ಲಿಯೇ ಪುರಾಣವನ್ನು ನಿರೂಪಿಸಿದ ಖ್ಯಾತಿ ಇದಕ್ಕೆ ದೊರೆಯಬೇಕು. ಚಾವುಂಡರಾಯಪುರಾಣದಲ್ಲಿ ಆದಿತೀರ್ಥಂಕರ ಕಥೆ ಸ್ವತಂತ್ರ ರೂಪದಲ್ಲಿ ನಿಂತಿಲ್ಲ. ಆದರೆ ಈ ಗದ್ಯಕೃತಿ ಅದನ್ನು ಸ್ವತಂತ್ರರೂಪದಲ್ಲಿ ಹಿಡಿದಿಟ್ಟಿದೆ.

ಪುಣ್ಯಾಸ್ರವದ ಆದೀಶ್ವರರ ಕಥೆಯು ಅನೇಕ ದೃಷ್ಟಿಗಳಿಂದ ವಿಭಿನ್ನವಾಗಿ ನಿಲ್ಲುತ್ತದೆ. ಕವಿ ಪಂಪನನ್ನು ವಿಶೇಷವಾಗಿ ಹೊಗಳಿದ್ದಾನೆ. ಜಿನಸೇನ ಗುಣಭದ್ರರನ್ನು ಸ್ತುತಿಸಿದ್ದಾನೆ. ಕವಿ ಇವರ ಕಾವ್ಯಗಳ ಪ್ರಭಾವಕ್ಕೆ ಒಳಗಾಗಿರುವನೆಂದು ತಿಳಿಯಬಹುದಾದರೂ ಅವುಗಳ ಅನುಕರಣೆಯ ಸ್ಪಷ್ಟವಾದ ಹೆಜ್ಜೆ ಗುರುತುಗಳು ಕಂಡುಬರುವುದಿಲ್ಲ.

ಉಳಿದ ಆದಿತೀರ್ಥಂಕರ ಕಾವ್ಯಗಳೆಲ್ಲವೂ ಆದಿತೀರ್ಥಂಕರ ಚರಿತ್ರೆಯನ್ನು ಧರ್ಮ ಪ್ರಭಾವನೆಯ ಒಟ್ಟು ದೃಷ್ಟಿಯಿಂದ ಪ್ರತಿಪಾದಿಸಿವೆ. ಆದರೆ ಇಲ್ಲಿ ಶ್ರಾವಕರ ವ್ರತಾಚರಣೆ ಯನ್ನು ನಿರೂಪಿಸುವಾಗ, ದಾನಮಹಿಮೆಯನ್ನು ಪ್ರಚುರಪಡಿಸುವಾಗ ಆದಿತೀರ್ಥಂಕರ ಕಥೆಯನ್ನು ಪೋಷಕವಾಗಿ ತೆಗೆದುಕೊಳ್ಳಲಾಗಿದೆ. ಇಲ್ಲಿ ದಾನಮಹಿಮೆಯ ಪ್ರಭಾವವೆ ಮುಖ್ಯ ದೃಷ್ಟಿಯಾಗಿದೆ. ಇದು ಇಲ್ಲಿಯ ವಿಶೇಷ.

ಗದ್ಯಪ್ರಧಾನವಾದ ಈ ಚಂಪೂಕೃತಿಯಲ್ಲಿ ಹೆಚ್ಚಿನ ಕಾವ್ಯಗುಣಗಳಿವೆ. ಚಾವುಂಡರಾಯ ಪುರಾಣ, ಹಸ್ತಿಮಲ್ಲನ ಪೂರ್ವಪುರಾಣಗಳಂತೆ ವರದಿಮಾತ್ರವಾಗಿ ತೋರದೆ ಕವಿ ಅಲಂಕಾರಾದಿಗಳನ್ನು ಅಳವಡಿಸುವಲ್ಲಿ ಸ್ವೋಪಜ್ಞತೆಯನ್ನು ತೋರಿದ್ದಾನೆ. ಜಿನಸೇನ ಪಂಪರಲ್ಲಿ ವರ್ಣಿತವಾಗಿರುವ ಎಷ್ಟೋ ವಿಷಯಗಳು ಇಲ್ಲಿ ಕಂಡುಬರುವುದಿಲ್ಲ. ಕೆಲವೆಡೆ ಒಂದು ಕಥಾಂಶದ ಬದಲಾಗಿ ಮತ್ತೊಂದು ಕಥಾಂಶವು ಕಂಡುಬರುತ್ತದೆ. ಉಳಿದೆಡೆ ಕಂಡುಬಾರದ ಕೆಲವಂಶಗಳು ಇಲ್ಲಿ ತಲೆ ಹಾಕಿವೆ. ಕಥಾಂಶ ಹಾಗೂ ವರ್ಣನೆಯಲ್ಲಿಯ ಲೋಪ ಆಗಮ ಆದೇಶಗಳನ್ನು ಗಮನಿಸಿದರೆ, ಈ ಕಾವ್ಯವು ತನ್ನದೇ ಆದ ಪ್ರತ್ಯೇಕ ಸ್ಥಾನವನ್ನು ಗಳಿಸಿಕೊಳ್ಳುತ್ತದೆ. ಇದರ ಉತ್ತರಕಾಲೀನ ಕಾವ್ಯಗಳಾದ ಪುರುದೇವಚರಿತ ಹಾಗೂ ಆದಿಪರಮೇಶ್ವರನ ಯಕ್ಷಗಾನಗಳ ಮೇಲೆ ಇದರ ಪ್ರಭಾವವುಂಟಾದಂತೆ ಕಂಡುಬರುವುದಿಲ್ಲ. ಆ ಕರ್ತೃಗಳ ಕಣ್ಣಿಗೆ ಈ ಕೃತಿ ಬಿದ್ದಂತೆ ಅನ್ನಿಸುವುದಿಲ್ಲ.

ಪುರುದೇವಚರಿತವು ಪುಣ್ಯಾಸ್ರವದ ಆದೀಶ್ವರರ ಕಥೆಯನ್ನುಳಿದು ಇತರ ಪೂರ್ವವರ್ತಿ ಕಾವ್ಯಗಳಿಗೆ ಋಣಿಯಾಗಿದೆ. ಅವುಗಳಲ್ಲಿ ಚಾವುಂಡರಾಯಪುರಾಣಕ್ಕೆ ವಿಶೇಷವಾಗಿ ಋಣಿ ಯಾಗಿದೆ. ಅಲ್ಲಿಯ ಸಂಕ್ಷಿಪ್ತವೂ ಇತಿವೃತ್ತಾತ್ಮಕವೂ ಆಗಿರುವ ವೃತ್ತಾಂತಗಳನ್ನು ಇಲ್ಲಿ ಸಾಮಾನ್ಯ ಕಥಾತ್ಮಕ ಹಾಗೂ ವರ್ಣನಾತ್ಮಕ ವಿವರಗಳಿಂದ ಹಿಗ್ಗಿಸಿದೆ. ಪೂರ್ವಪುರಾಣ ದಿಂದ ಹಿಡಿದು ಹಸ್ತಿಮಲ್ಲನ ಪೂರ್ವಪುರಾಣಗಳಲ್ಲಿಯ ಉತ್ತಮಾಂಶಗಳನ್ನನುಸರಿಸಿ ಕವಿ ಸಮ್ಮಿಶ್ರ ನಡೆಯನ್ನು ತಂದಿದ್ದಾನೆ. ಕೆಲವೆಡೆ ವರ್ಣನಾಂಶದಲ್ಲಿ ಹೊಸತನವನ್ನು ತರಲು ಯತ್ನಿಸಿದ್ದಾನಲ್ಲದೆ ವರ್ಣನೆಗಳಿಗೆ ಹೊಸ ಎಡೆಗಳನ್ನು ಕಲ್ಪಿಸಿಕೊಂಡಿದ್ದಾನೆ.

ಕವಿ, ತನ್ನ ಕಾಲದಲ್ಲಿ ಪ್ರಚಾರದಲ್ಲಿದ್ದ ಸಾಂಗತ್ಯ ಪ್ರಕಾರವನ್ನು ಪುರಾಣ ಮಾಧ್ಯಮ ವನ್ನಾಗಿ ಬಳಸಿಕೊಂಡಿದ್ದಾನೆ. ಸಾಮಾನ್ಯವಾಗಿ ಪುರಾಣನಿರೂಪಣೆಗೆ ಒಗ್ಗುವ ಶೈಲಿ ಚಂಪೂ

ಶೈಲಿ ಎಂಬ ಅಭಿಪ್ರಾಯವಿತ್ತು. ಆದರೆ ಮುಂದಿನ ಕವಿಗಳು ಆ ಅಭಿಪ್ರಾಯವನ್ನು ಮಾರ್ಪಡಿಸಲೆಂಬಂತೆ ವಿವಿಧ ಸಾಹಿತ್ಯಪ್ರಕಾರಗಳಲ್ಲಿ ಅದನ್ನು ನಿರೂಪಿಸಿದ್ದಾರೆ. ಇಲ್ಲಿ ಕವಿ ಪುರಾಣಶೈಲಿಯ ಕಥಾನಿರೂಪಣೆಗೆ ಸಾಂಗತ್ಯವನ್ನು ಅಳವಡಿಸಿಕೊಂಡಿದ್ದಾನೆ.

ಕಥಾನಿರೂಪಣೆ ಸಾಂಗತ್ಯವಾಹಿನಿಯಲ್ಲಿ ಅಚ್ಚುಕಟ್ಟಾಗಿ ಹರಿದಿದೆ. ಅಲ್ಲಲ್ಲಿಯೇ ದೇಶೀಯ ಸೌಂದರ್ಯ ಕೂಡಿದ ವರ್ಣನೆಯ ಬೆಡಗಿದೆ. ನಾಡಿನ ಸಂಸ್ಕೃತಿದ್ಯೋತಕವಾದ ಅನೇಕ ಅಂಶಗಳು ಇಲ್ಲಿ ಕಂಡುಬರುತ್ತವೆ.

ಆದಿಪರಮೇಶ್ವರನ ಯಕ್ಷಗಾನವು ತನ್ನ ಕಾಲದಲ್ಲಿ ಪ್ರಚಾರದಲ್ಲಿದ್ದ ಸಾಹಿತ್ಯಪ್ರಕಾರಕ್ಕನುಗುಣವಾಗಿ ಮೂಡಿ ಬಂದ ಕಾವ್ಯವಾಗಿದೆ. ಶಾಂತಿಕೀರ್ತಿ, ಬೊಮ್ಮಣ್ಣ ಕವಿಗಳು ಸಮಕಾಲೀನ ಕವಿಗಳಂತೆ ಕಂಡುಬರುತ್ತಾರೆ. ಹೀಗಾಗಿ ಒಬ್ಬರ ಕೃತಿಯನ್ನು ಇನ್ನೊಬ್ಬರು ಅವಲೋಕಿಸಿದಂತಿಲ್ಲ. ಬೊಮ್ಮಣ್ಣನು ಪೂರ್ವಪುರಾಣ, ಆದಿಪುರಾಣ, ಚಾವುಂಡರಾಯ ಪುರಾಣ ಮತ್ತು ಹಸ್ತಿಮಲ್ಲನ ಪೂರ್ವಪುರಾಣಗಳ ಪ್ರಭಾವಕ್ಕೆ ಒಳಗಾಗಿದ್ದಾನೆ; ಆದಿ ಪುರಾಣದ ಎಷ್ಟೋ ಪದಪುಂಜಗಳನ್ನು ಅನುಕರಿಸಿದ್ದಾನೆ; ಅಲ್ಲಿಯ ಭಾವವನ್ನು ತನ್ನದಾಗಿಸಿಕೊಳ್ಳಲು ಯತ್ನಿಸಿದ್ದಾನೆ; ಹಸ್ತಿಮಲ್ಲನ ಪೂರ್ವಪುರಾಣದ ಬಹುತೇಕ ಭಾಗಗಳನ್ನು ತನ್ನ ಗ್ರಂಥದ ವಚನಭಾಗದಲ್ಲಿ ಇಡಿ ಇಡಿಯಾಗಿ ನೇರವಾಗಿ ಬಳಸಿಕೊಂಡಿದ್ದಾನೆ. ಕೆಲವು ಭಾಗಗಳನ್ನು ಪದ್ಯರೂಪದಲ್ಲಿ ಅಳವಡಿಸಿದ್ದಾನೆ. ಮೂಲದಲ್ಲಿಲ್ಲದ ಎಷ್ಟೋ ಕಥಾ ವಿವರಗಳು ಇಲ್ಲಿ ದೊರೆಯುತ್ತವೆ.

ಹಸ್ತಿಮಲ್ಲನ ಪೂರ್ವಪುರಾಣವನ್ನು ಪ್ರಮುಖವಾದ ಆಕರವನ್ನಾಗಿಟ್ಟುಕೊಂಡು ಸಂಕ್ಷಿಪ್ತವಾಗಿರುವ ವಿಷಯಗಳನ್ನು ವರ್ಣನಾತ್ಮಕಗೊಳಿಸುವಲ್ಲಿ ಬೊಮ್ಮಣ್ಣನು ಆದಿ ಪುರಾಣವನ್ನು ವಿಶೇಷವಾಗಿ ಬಳಸಿಕೊಂಡಿರುವಂತೆ ತೋರುತ್ತದೆ. ಅಲ್ಲಲ್ಲಿ ಚಾವುಂಡ ರಾಯಪುರಾಣದ ಗದ್ಯಭಾಗಕ್ಕೂ ಕವಿ ಋಣಿಯಾಗಿದ್ದಾನೆ. ಸಮ್ಮಿಶ್ರ ಕಥಾರಚನೆಯ ಪದ್ಧತಿಯೇ ಇಲ್ಲಿಯೂ ಗೋಚರವಾಗುತ್ತದೆ.

ವರ್ಣನೆಗಾಗಿ ಹೊಸ ಎಡೆಗಳನ್ನು ವಿಶೇಷವಾಗಿ ಕಲ್ಪಿಸಿಕೊಂಡಿದ್ದಾನೆ. ಶಾಂತಿಕೀರ್ತಿ ಗಿಂತ, ಈತನಲ್ಲಿ ಈ ತಂತ್ರವು ಹೆಚ್ಚಾಗಿ ಕಂಡುಬರುತ್ತದೆ.

ಭರತ ಬಾಹುಬಲಿ ವ್ಯಾಯೋಗ ಪ್ರಸಂಗದಲ್ಲಿ ಇತರ ಆದಿತೀರ್ಥಂಕರ ಚರಿತ್ರೆಗಳಿಗಿಂತ ವಿಭಿನ್ನ ಮಾರ್ಗವನ್ನು ಅನುಸರಿಸಿದ್ದಾನೆ. ರತ್ನಾಕರನ ಪ್ರೇರಣೆಗೆ ಕವಿ ಒಳಗಾಗಿರುವುದು ಕೃತಿಯಲ್ಲಿ ಅಲ್ಲಲ್ಲಿಯೇ ಕಂಡುಬಂದರೂ ಆತನ ರೀತಿಯನ್ನು ಅನುಸರಿಸಿಲ್ಲ. ರತ್ನಾಕರನಾದರೋ ಭರತನ ಹಿರಿಮೆಯನ್ನು ಸಾರುವ ಭರದಲ್ಲಿ ಬಾಹುಬಲಿಯ ಪಾತ್ರವನ್ನು ಕೆಳಗಿಳಿಸಿದ್ದಾನೆ. ಆದರೆ ಇಲ್ಲಿ ಹಾಗಲ್ಲ. ಬಾಹುಬಲಿಯ ಘನತೆಗೆ ಚ್ಯುತಿ ಒದಗಿಲ್ಲ. ರತ್ನಾಕರನಲ್ಲಿ ಮಾತಿನ ಯುದ್ಧವಾದರೆ ಈತನಲ್ಲಿ ಶರಸಂಧಾನದ ಯುದ್ಧ ವರ್ಣಿತವಾಗಿದೆ. ಬಹುಶಃ ಕವಿಗೆ ಈ ವ್ಯತ್ಯಾಸವನ್ನು ಮಾಡಿಕೊಳ್ಳಲು ಪ್ರೇರಣೆಯನ್ನು ನೀಡಿದವನು ರತ್ನಾಕರನೇ ಆಗಿರಬೇಕು.

ಯಕ್ಷಗಾನವನ್ನು ಪುರಾಣಮಾರ್ಗವನ್ನನುಸರಿಸಿಯೇ ಬರೆದಿರುವುದು ಇಲ್ಲಿಯ ವೈಶಿಷ್ಟ್ಯ. ಕವಿಯ ಭಾವುಕತೆ, ಕಲ್ಪನೆಗಳು ಎಷ್ಟೋ ಕಡೆಗಳಲ್ಲಿ ಮಧುರವಾಗಿ ಕಂಡು ಬಂದರೂ ಭಾಷೆಯ ಶೈಥಿಲ್ಯದಿಂದ ಕೆಲವೆಡೆ ಕಾವ್ಯಾಸ್ವಾದನೆಗೆ ತಡೆಯಾಗುತ್ತದೆ. ಅಲ್ಲಲ್ಲಿ

ಜಾನಪದೀಯ ವಿಚಾರಧಾರೆಗಳು ಕಂಡುಬರುತ್ತವೆ. ಕವಿ ತನ್ನ ಕಾಲದ ನಂಬಿಕೆ, ಆಚಾರ ವಿಚಾರಗಳನ್ನು ವಿಶೇಷವಾಗಿ ಪ್ರತಿಬಿಂಬಿಸಿದ್ದಾನೆ.

ಹೀಗೆ ಕನ್ನಡ ಆದಿತೀರ್ಥಂಕರ ಚರಿತ್ರೆಗಳ ಛಂದೋವೈವಿಧ್ಯವು ಗಮನಾರ್ಹವಾದುದಾಗಿದೆ. ಪದ್ಯಪ್ರಧಾನ ಹಾಗೂ ಗದ್ಯಪ್ರಧಾನವಾದ ಚಂಪೂಮಾರ್ಗ, ಗದ್ಯ, ಸಾಂಗತ್ಯ, ದೇಶೀಛಂದಸ್ಸಿನ ವೈವಿಧ್ಯವನ್ನು ಮೆರೆಯುವ ಯಕ್ಷಗಾನ, ಚಿಕ್ಕಣಪಂಡಿತನ ಭುಜಬಲಿ ಚರಿತವನ್ನೂ ಪರಿಗಣಿಸಿದಂತೆ ಷಟ್ಪದಿಗಳು ಇಲ್ಲಿ ಕಂಡುಬರುತ್ತವೆ. ಆಧುನಿಕ ಯುಗದಲ್ಲಿ ಬೆಳೆದು ಬಂದಿರುವ ಬಾಹುಬಲಿ ಸಾಹಿತ್ಯದಲ್ಲಿ ಆಧುನಿಕ ಛಂದೋವೈವಿಧ್ಯಗಳನ್ನು ನೋಡಬಹುದಾಗಿದೆ. ಈ ಛಂದೋವೈವಿಧ್ಯ, ವೈಶಾಲ್ಯವು ಇತರ ತೀರ್ಥಂಕರ ಚರಿತ್ರೆಗಳಲ್ಲಿ ಕಂಡುಬರುವುದಿಲ್ಲವೆಂಬುದು ಆದಿತೀರ್ಥಂಕರಸಾಹಿತ್ಯದ ಹಿರಿಮೆಯನ್ನು ವ್ಯಕ್ತಪಡಿಸುತ್ತದೆ.

---



# ಗ್ರಂಥಸೂಚಿ

**ಉದ್ಧರಣೆಗಳನ್ನು ಆರಿಸಿಕೊಂಡಿರುವ ಸಂಪಾದಿತ ಕೃತಿಗಳು ಮತ್ತು ಹಸ್ತಪ್ರತಿಗಳು**

**ಆದಿಪುರಾಣ** : ಸಂಪಾದಕರು : ಕೆ. ಜಿ. ಕುಂದಣಗಾರ, ಎ. ಚೌಗುಲೆ

**ಚಾವುಂಡರಾಯಪುರಾಣಂ** : ಸಂಪಾದಕರು : ಕಮಲಾ ಹಂಪನಾ, ಕೆ. ಜಿ. ಶೇಷಗಿರಿ

**ಹಸ್ತಿಮಲ್ಲ ವಿರಚಿತ ಪೂರ್ವಪುರಾಣ** : ಸಂಪಾದಕರು : ಎಸ್. ಪಿ. ಪಾಟೀಲ.

**ಪುಣ್ಯಾಸ್ರವ** : ಸಂಪಾದಕರು : ದೇ. ಜವರೇಗೌಡ.

**ಮಹಾಪುರಾಣ** ಭಾಗ ೧, ೨. ಎ. ಶಾಂತಿರಾಜಶಾಸ್ತ್ರಿ

## ಹಸ್ತಪ್ರತಿಗಳು

ಶಾಂತಿಕೀರ್ತಿಯ ಪುರುದೇವಚರಿತ (ಬಿ. ಎಸ್. ಸಣ್ಣಯ್ಯನವರ ಹಸ್ತಪ್ರತಿ)

ಬೊಮ್ಮಣ್ಣನ ಆದಿಪರಮೇಶ್ವರನ ಯಕ್ಷಗಾನ (ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು)

## ಮೂಲಗ್ರಂಥಗಳು

**ಸಂಸ್ಕೃತ**

೧. ಕೂರ್ಮಪುರಾಣ (ಅನು.) ಪಾಟಣಕರ ಚಂದ್ರಶೇಖರಭಟ್ಟ, ಶ್ರೀ ವಿನಾಯಕ ಪ್ರಿಂಟಿಂಗ್ ವರ್ಕ್ಸ್, ಮೈಸೂರು, ೧೯೪೬.
೨. ಛಾಂದೋಗ್ಯ ಉಪನಿಷತ್, (ಮೂಲ, ಅನು., ಟಿಪ್ಪಣಿ) ಶ್ರೀ ಸಚ್ಚಿದಾನಂದ ಸರಸ್ವತಿಸ್ವಾಮಿ.
೩. ಪುಣ್ಯಾಸ್ರವ ಕಥಾಕೋಶ, (ಅನು.) ಆ. ನೇ. ಉಪಾಧ್ಯೆ ಮತ್ತು ಎಚ್. ಎಲ್. ಜೈನ್ (ಸಂ.) ಶೋಲಾಪುರ, ೧೯೬೪.
೪. ಪುರುದೇವ ಚಂಪೂ: ಎಚ್. ಎಲ್. ಜೈನ್ ಮತ್ತು ಆ. ನೇ. ಉಪಾಧ್ಯೆ (ಪ್ರ. ಸಂ.) ಪನ್ನಾಲಾಲ್‌ಜೈನ್ (ಸಂ. ಅನು.) ೧೯೭೨.
೫. ಬ್ರಹ್ಮಾಂಡ ಪುರಾಣ (ಅನು.) ಪಾಟಣಕರ ಚಂದ್ರಶೇಖರ ಭಟ್ಟ, ಮೈಸೂರು.
೬. ಭಾಗವತ ಪುರಾಣ (ಅನು.) ದೇವಶಿಖಾಮಣಿ ಅಳಸಿಂಗರಾಚಾರ್ಯ, ೧೯೨೧.
೭. ಮಹಾಕವಿ ಧನಂಜಯ ವಿರಚಿತ ದ್ವಿಸಂಧಾನ ಕಾವ್ಯಂ, (ಅನು.) : ಖಿಷಾಲ್ ಚಂದ್ ಗೋರವಾಲ (ಸಂ.) ೧೯೭೦.
೮. ಮಹಾಪುರಾಣ ಭಾಗ ೧-೪: (ಸಂ. ಮತ್ತು ಅನು.) : ಎಂ. ಶಾಂತಿರಾಜಶಾಸ್ತ್ರಿ, ಕ.ಸಾ.ಪ. , ಬೆಂಗಳೂರು ೧೯೮೧.
೯. ಮಾರ್ಕಂಡೇಯ ಪುರಾಣ: (ಅನು.) ಪಾಟಣಕರ ಚಂದ್ರಶೇಖರಭಟ್ಟ (೧೯೫೩).
೧೦. ಶಬ್ದಕಲ್ಪದ್ರುಮ:ಸಂ. ೧, (ಅನು.) ರಾಜಾ ರಾಧಾಕಾಂತ ರಾವ್ ಬಹದ್ದೂರ್.
೧೧. ಶಿವ ಪುರಾಣ (ಅನು.)ಹಾಸನದ ಪಂಡಿತ ವೆಂಕಟರಾವ್, ಮೈಸೂರು, ೧೯೪೫.
೧೨. ಸ್ವಯಂಭೂಸ್ತೋತ್ರ-ಭಾಗ ೧, ೨: ಸಂ. ಯಶೋಜೈನ್ ಗ್ರಂಥ, ಬನಾರಸ್.

**ಪ್ರಾಕೃತ**

೧. ಕಲ್ಪಸೂತ್ರ : (ಅನು.) ಕಸ್ತೂರಿಚಂದ್ ಲಾಲ್‌ವಾನಿ, ಮೋತಿಲಾಲ್ ಬನಾರಸೀ ದಾಸ್, ೧೯೭೯.
೨. ಗೊಮ್ಮಟಸಾರ: ಭಾಗ ೧, ೨, ಜೀವಕಾಂಡ, ಕರ್ಮಕಾಂಡ (ಅನು.) ನೇಮಿಚಂದ್ರ ಸಿದ್ಧಾಂತ ಚಕ್ರವರ್ತಿ ಮತ್ತು ಜೆ.ಎಲ್.ಜೈನಿ, ಅಜಿತಾಶ್ರಮ, ಲಕ್ನೊ (೨), ೧೯೩೭.
೩. ಚಉಪ್ಪನ್ನಮಹಾಪುರಿಸಚರಿಯಂ : ಶೀಲಾಂಕ, ಅಮೃತಲಾಲ್ ಮೋಹನಲಾಲ್ ಬೋಜಕ್, ಪ್ರಾಕೃತಗ್ರಂಥ ಪರಿಷದ್, ವಾರಣಾಸಿ, ೧೯೬೧.
೪. ಜಂಬೂದ್ವೀಪ ಪ್ರಜ್ಞಪ್ತಿ: (ಅನು.) ಕನ್ಹೈಯಲಾಲ್‌ಜೀ, ಅಹಮದಾಬಾದ್ ೧೯೮೦.
೫. ಠಾಣಂಗಸುತ್ತಂ: (ಅನು.) ಮುನಿನಾಥೂಮಲ್, ಜೈನವಿಶ್ವಭಾರತಿ, ರಾಜಾಸ್ಥಾನ, ೧೯೭೬.
೬. ತಿಸಟ್ಠಿಮಹಾಪುರಿಸ ಗುಣಾಲಂಕಾರು (ಮಹಾಪುರಾಣ), ಪುಷ್ಪದಂತ, (ಸಂ.) ಪಿ. ಎಲ್. ವೈದ್ಯ, ಭಾರತೀಯ ಜ್ಞಾನಪೀಠ.
೭. ಪಉಮಚರಿಉ : ಸ್ವಯಂಭೂ (ಸಂ.) ಎಚ್. ಸಿ. ಭಯಾನಿ, ಅನು : ದೇವೇಂದ್ರ ಕುಮಾರ್ ಜೈನ್, ಭಾರತೀಯ ಜ್ಞಾನಪೀಠ, ೧೯೭೧.
೮. ಪಉಮಚರಿಯಂ ಭಾಗ ೧, ವಿಮಲಸೂರಿ, ಸಂ: ಎಚ್. ಜಾಕೋಬಿ. ಅನು. : ಎಂ. ಶಾಂತಿಲಾಲ್, ಪ್ರಾಕೃತ ಪಠ್ಯಪುಸ್ತಕ ಸೊಸೈಟಿ, ವಾರಣಾಸಿ, ೧೯೬೨.
೯. ಷಟ್‌ಖಂಡಾಗಮ: (ಧವಳಟೀಕಾಸಮನ್ವಿತ) ಸಂ. ಅನು. : ಸುಬ್ಬಯ್ಯ ಶಾಸ್ತ್ರೀ, ಜೈನೇಂದ್ರ ಗ್ರಂಥಮಾಲಾ, ಬೆಂಗಳೂರು, ೧೯೬೭.
೧೦. ಸಮವಾಯಾಂಗ (ಅನು.) ಕನ್ಹೈಯಲಾಲ್‌ಜೀ ೧೯೬೨.

**ಕನ್ನಡ:**

೧. ಅಜಿತತೀರ್ಥಂಕರ ಪುರಾಣತಿಲಕಂ: ರನ್ನ, ಸಂ: ಎಚ್. ದೇವೀರಪ್ಪ, ದೇ. ಜವರೇಗೌಡ, ಸನ್ಮತಿ ಗ್ರಂಥಮಾಲೆ, ಮೈಸೂರು, ೧೯೫೫.
೨. ಅಭಿನವ ದಶಕುಮಾರ ಚರಿತೆ, ಚೌಂಡರಸ, ಸಂ: ಎಸ್. ಜಿ. ನರಸಿಂಹಾಚಾರ್, ಮಂ. ಆ. ರಾಮಾನುಜೈಯಂಗಾರ್, ಕರ್ಣಾಟಕ ಕಾವ್ಯಕಲಾನಿಧಿ, ಮೈಸೂರು, ೧೯೦೨.
೩. ಅನಂತನಾಥಪುರಾಣ, ಜನ್ನ, ಸಂ: ಎಚ್. ದೇವೀರಪ್ಪ, ಎಂ. ಸಿ. ಪದ್ಮನಾಭಶರ್ಮ, ಕ.ಅ.ಸಂ. ಮೈಸೂರು, ೧೯೭೨.
೪. ಆದಿಪರಮೇಶ್ವರನ ಯಕ್ಷಗಾನ (ಹಸ್ತಪ್ರತಿ) : ಬೊಮ್ಮಣ್ಣ, ಗ್ರಂಥ ಸಂಪಾದನಾ ಶಾಖೆ, ಕ.ಅ.ಸಂ. ಮೈಸೂರು.
೫. ಆದಿಪುರಾಣಂ, ಪಂಪ, ಸಂ: ಎಸ್. ಜಿ. ನರಸಿಂಹಾಚಾರ್, ಮೈಸೂರು, ೧೯೦೦.
೬. ಆದಿಪುರಾಣಂ, ಪಂಪ, ಸಂ: ಕೆ. ಜಿ. ಕುಂದಣಗಾರ, ಎ. ಪಿ. ಚೌಗುಲೆ, ಮದ್ರಾಸ್, ೧೯೫೩.
೭. ಆದಿಪುರಾಣಂ, ಪಂಪ, ಗದ್ಯಾನುವಾದ, ಕೆ. ಎಲ್. ನರಸಿಂಹಸ್ವಾಮಿ, ಕ. ಸಾ. ಪ.

ಬೆಂಗಳೂರು, ೧೯೮೦.
೮. ಆದಿಪುರಾಣಸಂಗ್ರಹ, ಸಂ: ಎಲ್. ಗುಂಡಪ್ಪ, ಪ್ರಸಾರಾಂಗ, ಮೈ. ವಿ. ವಿ. ಮೈಸೂರು, ೧೯೫೫.
೯. ಆದಿಪುರಾಣ, ಪಂಪ, ಸಂ: ಡಾ. ಎಲ್. ಬಸವರಾಜು, ಗೀತಾ ಬುಕ್ ಹೌಸ್, ಮೈಸೂರು, ೧೯೭೬.
೧೦. ಚಂದ್ರಪ್ರಭಪುರಾಣ, ಅಗ್ಗಳ, ಸಂ: ಎಸ್. ಜಿ. ನರಸಿಂಹಾಚಾರ್, ಮಂ. ಆ. ರಾಮಾನುಜೈಯ್ಯಂಗಾರ್, ಕರ್ನಾಟಕ ಕಾವ್ಯಕಲಾನಿಧಿ, ಮೈಸೂರು, ೧೯೦೧.
೧೧. ಚಾವುಂಡರಾಯಪುರಾಣ, ಚಾಮುಂಡರಾಯ, ಸಂ. : ಕಮಲಾ ಹಂಪನಾ, ಕೆ. ಆರ್. ಶೇಷಗಿರಿ, ಕ. ಸಾ. ಪ., ಬೆಂಗಳೂರು, ೧೯೮೩.
೧೨. ಛಂದೋಂಬುಧಿ, ನಾಗವರ್ಮ, ಸಂ. : ಎಸ್. ಎಚ್. ರಾಮಸ್ವಾಮಿ ಆಯ್ಯಂಗಾರ್, ಮದರಾಸು, ೧೯೪೬.
೧೩. ಜಗನ್ನಾಥ ವಿಜಯ, ರುದ್ರಭಟ್ಟ, ಸಂ. : ಆರ್. ಶಾಮಶಾಸ್ತ್ರಿ, ಕ. ಅ.ಸಂ., ಮೈಸೂರು, ೧೯೭೬.
೧೪. ತ್ರಿಷಷ್ಟಿ ಲಕ್ಷಣ ಮಹಾಪುರಾಣ, ಚಾಮುಂಡರಾಯ, ಸಂ. : ಬಿ. ಎಸ್. ಕುಲಕರ್ಣಿ, ಧಾರವಾಡ, ೧೯೭೫.
೧೫. ತ್ರಿಷಷ್ಟಿಶಲಾಕಾ ಮಹಾಪುರಾಣಂ, ಚಾಮುಂಡರಾಯ, ಸಂ. : ಪದ್ಮನಾಭಶರ್ಮ, ಬೆಂಗಳೂರು, ೧೯೭೮.
೧೬. ಧರ್ಮಾಮೃತಂ, ನಯಸೇನ, ಸಂ. : ಆರ್. ಶಾಮಶಾಸ್ತ್ರಿ, ಓರಿಯಂಟಲ್ ಲೈಬ್ರರಿ, ಮೈಸೂರು, ೧೯೨೬.
೧೭. ನೇಮಿನಾಥ ಪುರಾಣಂ, ಕರ್ಣಪಾರ್ಯ, ಸಂ. : ಎಚ್. ಶೇಷಅಯ್ಯಂಗಾರ್, ಮದರಾಸು, ೧೯೪೦.
೧೮. ಪಂಚತಂತ್ರ, ದುರ್ಗಸಿಂಹ, ಸಂ: ನರಸಿಂಹಾಚಾರ್, ಮಂ. ಆ. ರಾಮಾನುಜ ಯ್ಯಂಗಾರ್, ಮೈಸೂರು, ೧೮೯೮.
೧೯. ಪಂಪಭಾರತಂ ಎಂಬ ವಿಕ್ರಮಾರ್ಜುನ ವಿಜಯಂ, ಪಂಪ, ಸಂ: ಬೆಳ್ಳಾವೆ ವೆಂಕಟನಾರಣಪ್ಪ, ಮೈಸೂರು, ೧೯೩೧.
೨೦. ಪಾರ್ಶ್ವನಾಥಪುರಾಣ, ಪಾರ್ಶ್ವಪಂಡಿತ, ಸಂ: ಎಚ್. ಶೇಷ ಅಯ್ಯಂಗಾರ್, ಮದರಾಸು, ೧೯೬೦.
೨೧. ಪುಣ್ಯಾಸ್ರವ, ನಾಗರಾಜ, ಸಂ : ದೇ. ಜವರೇಗೌಡ, ಕ. ಅ. ಸಂ., ಮೈಸೂರು, ೧೯೭೭
೨೨. ಪುರುದೇವಚರಿತ, ಶಾಂತಿಕೀರ್ತಿ, ಬಿ. ಎಸ್. ಸಣ್ಣಯ್ಯನವರ ಹಸ್ತಪ್ರತಿ.
೨೩. ಪುಷ್ಪದಂತ ಪುರಾಣ, ಗುಣವರ್ಮ, ಸಂ : ಎ. ವೆಂಕಟರಾವ್, ಎಚ್. ಶೇಷಯ್ಯಂಗಾರ್, ಮದರಾಸು, ವಿ. ವಿ. ೧೯೩೩.
೨೪. ಪೂರ್ವಪುರಾಣ, ಹಸ್ತಿಮಲ್ಲ, ಸಂ: ಕೆ. ಜಿ. ಕುಂದಣಗಾರ, ಕೊಲ್ಹಾಪುರ, ೧೯೪೩.
೨೫. ಪೂರ್ವಪುರಾಣ, ಹಸ್ತಿಮಲ್ಲ, ಸಂ: ಎಸ್. ಪಿ. ಪಾಟೀಲ, ಧಾರವಾಡ, ೧೯೮೨.

೨೭. ಭರತೇಶ ದಿಗ್ವಿಜಯ, (ಯಕ್ಷಗಾನ), ಕೆ. ಪಿ. ವೆಂಕಪ್ಪಶೆಟ್ಟಿ, ಉಡುಪಿ, ೧೯೫೧.
೨೭. ಭರತೇಶ ವೈಭವ, ರತ್ನಾಕರವರ್ಣಿ, ಸಂ: ಜಿ. ಬ್ರಹ್ಮಪ್ಪ, ಅತ್ತಿಮಬ್ಬೆ ಪ್ರಕಾಶನ, ಬೆಂಗಳೂರು, ೧೯೬೭.
೨೮. ಮಲ್ಲಿನಾಥ ಪುರಾಣ, ನಾಗಚಂದ್ರ, ಸಂ: ಎಸ್. ಜಿ. ನರಸಿಂಹಾಚಾರ್, ಮಂ. ಆ. ರಾಮಾನುಜಯ್ಯಂಗಾರ್, ಕರ್ಣಾಟಕ ಕಾವ್ಯಮಂಜರಿ, ಮೈಸೂರು, ೧೯೮೫.
೨೯. ವರ್ಧಮಾನ ಪುರಾಣ, ಆಚಣ್ಣ, ಸಂ : ಎಂ. ಮರಿಯಪ್ಪಭಟ್ಟ, ಎಂ. ಗೋವಿಂದ ರಾವ್, ಮದರಾಸು ವಿ. ವಿ., ೧೯೫೩.
೩೦. ಶಬ್ದಮಣಿದರ್ಪಣ, ಕೇಶಿರಾಜ, ಸಂ. : ಡಿ. ಎಲ್. ನರಸಿಂಹಾಚಾರ್, ಶಾರದಾ ಮಂದಿರ, ಮೈಸೂರು, ೧೯೬೪.
೩೧. ಶಾಂತೀಶ್ವರ ಪುರಾಣಂ, ಭಾಗ ೧, ೨ ಕಮಲಭವ, ಸಂ. : ಮಂ. ಆ. ರಾಮಾನುಜಯ್ಯಂಗಾರ್, ಮೈಸೂರು, ೧೯೧೨-೧೯೧೫.
೩೨. ಸಮಯ ಪರೀಕ್ಷೆ, ಬ್ರಹ್ಮಶಿವ, ಸಂ. : ಬಿ. ಎಸ್. ಕುಲಕರ್ಣಿ, ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ, ೧೯೫೮.
೩೩. ಸೂಕ್ತಿ ಸುಧಾರ್ಣವ, ಮಲ್ಲಿಕಾರ್ಜುನ, ಸಂ. : ಎನ್. ಅನಂತರಂಗಾಚಾರ್, ಓ. ಆರ್. ಐ., ಮೈಸೂರು, ೧೯೪೭.

## ಇತರ ಗ್ರಂಥಗಳು

೧. ಎಪಿಗ್ರಾಫಿಯ ಕರ್ನಾಟಿಕ, ಸಂ. ೨, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೭೩.
೨. ಕನ್ನಡ ಛಂದೋವಿಹಾರ, ಟಿ. ವಿ. ವೆಂಕಟಾಚಲ ಶಾಸ್ತ್ರೀ, ಗೀತಾ ಬುಕ್ ಹೌಸ್, ಮೈಸೂರು, ೧೯೮೯.
೩. ಕರ್ಣಾಟಕ ಕವಿ ಚರಿತೆ, ಸಂ. ೧, ೨, ೩, ಆರ್. ನರಸಿಂಹಾಚಾರ್, ಕ. ಸಾ. ಪ, ಬೆಂಗಳೂರು.
೪. ಕನ್ನಡ ಕವಿಗಳು ಕಂಡ ಗೊಮ್ಮಟೇಶ್ವರ, ಟಿ. ವಿ. ವೆಂಕಟಾಚಲ ಶಾಸ್ತ್ರೀ, ಕಾರ್ಕಳ, ೧೯೯೦.
೫. ಕನ್ನಡ ನೇಮಿನಾಥ ಪುರಾಣಗಳ ತೌಲನಿಕ ಅಧ್ಯಯನ, ಟಿ. ವಿ. ವೆಂಕಟಾಚಲ ಶಾಸ್ತ್ರೀ, ಪ್ರಸಾರಾಂಗ, ಮೈಸೂರು, ೧೯೭೩.
೬. ಕನ್ನಡ ಸಾಂಗತ್ಯ ಸಾಹಿತ್ಯ, ವೀರಣ್ಣ ರಾಜೂರ, ಬೆಂಗಳೂರು, ೧೯೭೫.
೭. ಕನ್ನಡ ಸಾಹಿತ್ಯದಲ್ಲಿ ಪುರಾಣಪ್ರಜ್ಞೆ, ಕೆ. ಎಲ್, ಗೋಪಾಲಕೃಷ್ಣಯ್ಯ, ಕ. ಸಾ. ಪ. ಬೆಂಗಳೂರು, ೧೯೮೬.
೮. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ, ಸಂ. :೬, ಕನ್ನಡ ಅಧ್ಯಯನಸಂಸ್ಥೆ, ಮೈಸೂರು, ೧೯೮೦.
೯. ಚಾಮುಂಡರಾಯ, ಟಿ. ವಿ. ವೆಂಕಟಾಚಲ ಶಾಸ್ತ್ರೀ, ಮೈಸೂರು, ೧೯೭೩.
೧೦. ಜೈನ ವಾಙ್ಮಯ ಪರಿಶೋಧನೆ, ಬಿ. ಬಿ. ಮಹೀಶವಾಡಿ, ಧಾರವಾಡ, ೧೯೭೭.

೧೧. ದೀಪರೇಖೆ, ಪು. ತಿ. ನರಸಿಂಹಾಚಾರ್, ಧರ್ಮಸ್ಥಳ, ೧೯೮೦.
೧೨. ನಾಡೋಜ ಪಂಪ, ಮುಳಿಯ ತಿಮ್ಮಪ್ಪಯ್ಯ, ಗೀತಾ ಬುಕ್ ಹೌಸ್, ಮೈಸೂರು, ೧೯೭೭
೧೩. ಪಂಪ, ವಿವಿಧ ಲೇಖಕರು, ಐ ಬಿ ಎಚ್ ಪ್ರಕಾಶನ, ಬೆಂಗಳೂರು, ೧೯೭೭.
೧೪. ಪಂಪ : ತೀ. ನಂ. ಶ್ರೀಕಂಠಯ್ಯ, ಪ್ರಸಾರಾಂಗ, ಮೈಸೂರು, ೧೯೮೪.
೧೫. ಪಂಪ : ಟಿ. ವಿ. ವೆಂಕಟಾಚಲ ಶಾಸ್ತ್ರೀ, ಸಾಹಿತ್ಯ ಅಕಾಡೆಮಿ, ನವದೆಹಲಿ, ೧೯೮೭.
೧೬. ಪಂಪ : ಒಂದು ಅಧ್ಯಯನ, (ಸಂ.) ಜಿ. ಎಸ್. ಶಿವರುದ್ರಪ್ಪ, ಬೆಂ. ವಿ. ವಿ., ಬೆಂಗಳೂರು, ೧೯೭೪.
೧೭. ಪಂಪ : ಕೆಲವು ಮುಖಗಳು, ಸಿ. ಪಿ. ಕೃಷ್ಣಕುಮಾರ್, ಮೈಸೂರು, ೧೯೮೬.
೧೮. ಪಂಪನಲ್ಲಿ ಭವ್ಯತೆ, ಕುವೆಂಪು, ಬೆಂಗಳೂರು, ೧೯೮೩.
೧೯. ಭಾರತೀಯ ಸಂಸ್ಕೃತಿಗೆ ಜೈನಧರ್ಮದ ಕೊಡುಗೆ, ಹೀರಾಲಾಲ್ ಜೈನ್, ಅನು. : ಮಿರ್ಜಿ ಅಣ್ಣಾರಾಯ, ಸೊಲ್ಲಾಪುರ, ೧೯೭೧.
೨೦. ಮಹಾಕವಿ ಪಂಪ ಹಾಗೂ ಅವನ ಕೃತಿಗಳು (ಆರು ಉಪನ್ಯಾಸಗಳು), ಕ.ವಿ.ವಿ., ಧಾರವಾಡ, ೧೯೬೯.
೨೧. ಮಹಾಪುರಾಣ, ಜಿ. ಬ್ರಹ್ಮಪ್ಪ, ಜೈನಮಠ, ಹೊಂಬುಜ, ೧೯೮೫.
೨೨. ಮೊಹೆಂಜೋದಾರೋ ಜೈನಪರಂಪರೆ ಮತ್ತು ಸಾಕ್ಷ್ಯಗಳು, ಅನು: ಪ್ರಧಾನ್ ಗುರುದತ್ತ, ಧರ್ಮಸ್ಥಳ, ೧೯೮೭.
೨೩. ಯಕ್ಷಗಾನ ಸಾಹಿತ್ಯ ಮತ್ತು ಛಂದಸ್ಸು, ವಿ. ಜಿ. ನಾಯಕ, ಧಾರವಾಡ, ೧೯೮೮.
೨೪. ವೀರಶೈವ ಪುರಾಣಗಳು, ಎಸ್. ವಿದ್ಯಾಶಂಕರ, ಕ.ಸಾ.ಪ., ಬೆಂಗಳೂರು, ೧೯೮೨.
೨೫. ಶಬ್ದಾರ್ಥ ವಿಹಾರ, ಟಿ. ವಿ. ವೆಂಕಟಾಚಲ ಶಾಸ್ತ್ರೀ, ಅಪರ್ಣಾ ಪ್ರಕಾಶನ, ಮೈಸೂರು, ೧೯೭೯.
೨೬. ಶ್ರೀಕವಿ ಪಂಪ, ಜಿ. ಪಿ. ರಾಜರತ್ನಂ, ಬೆಂಗಳೂರು, ೧೯೫೧.
೨೭. ಸಂಭಾವನೆ, ಕ. ಸಾ. ಪ., ಬೆಂಗಳೂರು, ೧೯೭೯.
೨೮. ಸಂಸ್ಕೃತ ವಾಙ್ಮಯಕ್ಕೆ ಜೈನಕವಿಗಳ ಕಾಣಿಕೆ, ಕೆ. ಭುಜಬಲಿಶಾಸ್ತ್ರಿ, ಮೂಡುಬಿದರೆ, ೧೯೭೧.
೨೯. ಸಮಾಲೋಕನ, ತೀ. ನಂ. ಶ್ರೀ. ಮೈಸೂರು, ೧೯೫೯.
೩೦. ಸಾಪೇಕ್ಷ, ಸೀತಾರಾಮ ಜಾಗೀರ್‌ದಾರ್, ಬೆಂಗಳೂರು, ೧೯೯೦.
೩೧. ಸಾಮಾನ್ಯನಿಗೆ ಸಾಹಿತ್ಯಚರಿತ್ರೆ, ಸಂ. ೯, ಸಾಂಗತ್ಯಕವಿಗಳು, ಬೆಂಗಳೂರು, ೧೯೭೫.
೩೨. ಹರಿವಂಶ ಪುರಾಣಸಾರ, ಟಿ. ವಿ. ವೆಂಕಟಚಾಲ ಶಾಸ್ತ್ರೀ, ಜೈನಮಠ, ಹೊಂಬುಜ, ೧೯೮೭

**ಸಂಕಲನ ಗ್ರಂಥಗಳು**

೧. ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ, ಸಂ. ೨, ೩, ೪, ೫, ಕ.ಅ.ಸಂ. ಮೈಸೂರು, ೧೯೭೫, ೭೬, ೭೭, ೮೧.

೨. ಕನ್ನಡ ವಿಶ್ವಕೋಶ, ನಂ. ೭, ಕ. ಅ. ಸಂ. ಮೈಸೂರು, ೧೯೭೪.
೩. ಕನ್ನಡ ಹಸ್ತಪ್ರತಿಗಳ ಮೈಕ್ರೋಫಿಲಂ ಸೂಚಿ, ಕ. ಅ. ಸಂ. ಮೈಸೂರು, ೧೯೮೮.
೪. ಯುಗಯಾತ್ರೀ ಭಾರತೀಯ ಸಂಸ್ಕೃತಿ, ಭಾಗ-೩, ಪ್ರಸಾರಾಂಗ, ಮೈಸೂರು, ೧೯೭೧.
೫. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಭಾಗ-೨, ೪; ಬೆಂ. ವಿ. ವಿ., ಬೆಂಗಳೂರು, ೧೯೭೫, ೧೯೭೭.

## ವಿಶ್ವಕೋಶ, ಶಬ್ದಕೋಶಗಳು

೧. ಅಭಿಧಾನ ರಾಜೇಂದ್ರ: ಸಂ. ೫, ವಿಜಯರಾಜೇಂದ್ರಸೂರಿ (Jain Encyclopaedia, Prakrit Magadhi to Sanskrit).
2. Encyclopaedia of Religion and Ethics, James Hastings, New York, 1981.
3. Jinarathna Kosha, Vol. 1, H. D. Velankar, Poona, 1944.
4. Pouranic Encyclopaedia, Vettam Mani, Motilal Banarasidas, 1975.
5. Purana Index Vol. I, Dikshita V. R. R., University of Madras, 1955.

## ಇಂಗ್ಲಿಷ್ ಗ್ರಂಥಗಳು

1. A Descriptive Grammar of Pampa Bharata—B. Ramachandra Rao, Prasaranga, U.O.M. Mysore, 1972.
2. A History of Indian Literature, Vol. I—M. Winternitz, Trns. Shilavati Kelkar, Calcutta, 1963.
3. Indian Philosophy, S. Radhakrishnan, London, 1962.
4 Indus Civilization, Rigveda and Hindu Culture, P. R. Deshmukh, Nagpur, 1954.
5. Mohenjodaro and Indus Civilization, Vol. I. Marshell, Delhi, Indological Book House, 1973.
6. Old Kannada Literature, D. L. Narasimhachar, Bombay, 1955.
7. Religion of Thirthankara, Kamth Prasad Jain, Alingang, World Jain Mission, 1964.
8. Rishabhadeva, the founder of Jainism, Allahabad, 1929.
9. Studies in the epics of puranas, A. D. Pusalkar, Bharatiya Vidya Bhavan, Bombay, 1951.
10. Trisastisalakapurusacaritra - Hemachandra, Oriental Institute, Baroda, 1931.

11. The Jain Path of Purification - Padmanabha S. Jaini, London, 1977.

12. Upadhye Papers, Upadhye, Prasaranga, U.O.M. Mysore, 1983.

**ಹಿಂದಿ ಕೃತಿಗಳು**

೧. ಅಂತರದ್ವಂದ್ವೋಂಕೆ ಪಾರ್ ಗೊಮ್ಮಟೇಶ ಬಾಹುಬಲಿ, ಲಕ್ಷ್ಮೀಚಂದ್ರ ಜೈನ್, ಭಾರತೀಯ ಜ್ಞಾನಪೀಠ, ನವದೆಹಲಿ, ೧೯೭೯.

೨. ಜೈನ್ ಸಾಹಿತ್ಯ ಔರ್ ಇತಿಹಾಸ್ - ನಾಥೂರಾಂ ಪ್ರೇಮೀ, ಬೊಂಬಾಯಿ, ೧೯೫೬.

೩. ಪೌರಾಣಿಕ ಧರ್ಮ್ ಏವಂ ಸಮಾಜ್ - ಸಿದ್ಧೇಶ್ವರೀ ನಾರಾಯಣರಾವ್.

**ನಿಯತಕಾಲಿಕೆಗಳು**

೧. ಕನ್ನಡಸಾಹಿತ್ಯ ಪರಿಷತ್ಪತ್ರಿಕೆ - ಜೂನ್, ಡಿಸೆಂಬರ್ ೧೯೮೯.

೨. ಕರ್ನಾಟಕ ಭಾರತಿ ಸಂ. ೫ ಸಂಚಿಕೆ - ೧.

೩. ಗುರುದೇವ ಸಂ. ೩೨, ಸಂಚಿಕೆ ೬೬-೬೭, ೧೯೮೮.

೪. ಜೀವನ, ನವೆಂಬರ್ ೧೯೬೪.

೫. ಪ್ರಬುದ್ಧ ಕರ್ಣಾಟಕ ಸಂ. ೩೮, ಸಂಚಿಕೆ ೧, ೧೯೭೬.

೬. ಸನ್ಮತಿ (ವಿಶೇಷಾಂಕ) ಫೆಬ್ರುವರಿ - ಮಾರ್ಚ್, ೧೯೬೭.

೭. Modern Review, Calcutta, Aug. 1932.

೮. The Voice of Ahimsa - Vol. XVI, Dec. 1966.

**ನಿಬಂಧ**

೧. ಚಾವುಂಡರಾಯಪುರಾಣ: ಸಾಹಿತ್ಯಕ ತಾತ್ವಿಕ ಅಧ್ಯಯನ, ಎಸ್ ಪಿ. ಪಾಟೀಲ, ಪಿಎಚ್. ಡಿ. ಮಹಾಪ್ರಬಂಧ.

# ಜೈನ ಪಾರಿಭಾಷಿಕ ಶಬ್ದಸಂಗ್ರಹ

**ಅಘಾತಿ ಕರ್ಮ** ಕರ್ಮಭೇದ; ಆತ್ಮನ ಅನಂತಗುಣಗಳಿಗೆ ಘಾತಿಯನ್ನುಂಟುಮಾಡದ ಕರ್ಮ. ಇದು ನಾಲ್ಕು ವಿಧ—ಆಯುಃ ಕರ್ಮ, ನಾಮ ಕರ್ಮ, ಗೋತ್ರ ಕರ್ಮ, ವೇದನೀಯ ಕರ್ಮ.

**ಅನಂತ ಚತುಷ್ಟಯ** ತೀರ್ಥಂಕರರಾಗುವವರಿಗೆ ಕರ್ಮಪರಿಣಾಮಗಳು ನಷ್ಟವಾದ ಮೇಲೆ ಉಂಟಾಗುವ ನಾಲ್ಕು ಗುಣಗಳು. ಅವು ಅನಂತಜ್ಞಾನ, ಅನಂತ ದರ್ಶನ, ಅನಂತ ಸುಖ, ಅನಂತ ವೀರ್ಯ. ಇವು ಪರಿಶುದ್ಧ ಆತ್ಮನ ಸಹಜಗುಣಗಳು.

**ಅನಂತಾನುಬಂಧಿ** ಅನಂತಕಾಲದವರೆಗೆ ಜೀವನನ್ನು ಹುಟ್ಟುಸಾವುಗಳ ಸಂಸಾರದಲ್ಲಿ ಸುತ್ತಾಡಿಸುವ ಕ್ರೋಧ ಮಾಯಾ ಮಾನ ಲೋಭಗಳೆಂಬ ಕಷಾಯಗಳು.

**ಅನುಪ್ರೇಕ್ಷೆ** ೧. ಪುನಃ ಪುನಃ ಮಾಡುವ ಚಿಂತನೆ. ಶರೀರಾದಿ ಪರದ್ರವ್ಯಗಳು ಮತ್ತು ಧರ್ಮಾದಿಗಳು—ಇವನ್ನು ಮತ್ತೆ ಮತ್ತೆ ಚಿಂತಿಸುವುದು. ೨. ಪರಮಾಗಮಗಳ ಶಬ್ದಾರ್ಥಗಳನ್ನು ಮನಸ್ಸಿನಲ್ಲಿ ಧಾರಣಮಾಡಿ ಅವುಗಳನ್ನು ಆಗಾಗ ಚಿಂತಿಸುವುದು. ೩. ಯತಿಗಳು ಧ್ಯಾನಮಾಡಬೇಕಾದ ಅನಿತ್ಯತ್ವ, ಅಶರಣತ್ವ, ಸಂಸಾರ, ಏಕತ್ವ, ಅನ್ಯತ್ವ, ಅಶುಚಿ, ಆಸ್ರವ, ಸಂವರ, ನಿರ್ಜರೆ, ಲೋಕ, ಬೋಧಿದುರ್ಲಭತ್ವ, ಧರ್ಮ ಎಂಬ ಹನ್ನೆರಡು ತತ್ತ್ವಗಳ ಚಿಂತನೆ.

**ಅಭವ್ಯ** ಮುಕ್ತಿಯನ್ನು ಹೊಂದಲಾರದ ಜೀವ.

**ಅಯೋಗ ಕೇವಲಿ** ಮನೋವಾಕ್ಕಾಯಗಳ ಚಂಚಲತೆಯಿಲ್ಲದವನು. ಹದಿನಾಲ್ಕನೆಯ ಗುಣಸ್ಥಾನವನ್ನು ಸೇರಿದವನು.

**ಅವಧಿಜ್ಞಾನ** ಕಾಲ ದೇಶಗಳು ಎಷ್ಟೇ ದೂರವಾಗಿದ್ದರೂ ಅಲ್ಲಿನ ವಿಷಯಗಳನ್ನು ತಿಳಿಯುವುದು. ಹಿಂದೆ ನಡೆದ, ಮುಂದೆ ನಡೆಯುವ ಸಂಗತಿಗಳನ್ನು ಇದರಿಂದ ತಿಳಿಯಬಹುದು. ದ್ರವ್ಯಕ್ಷೇತ್ರಕಾಲಭಾವಗಳನ್ನು ಅವಧಿಮಾಡಿಕೊಂಡು ಇಂದ್ರಿಯಗಳಿಗೆ ಆಗೋಚರವಾದ ವಿಷಯಗಳನ್ನು ತಿಳಿಯುವ ಟವ್ಯಜ್ಞಾನ. ಇದು ದೇವ ನಾರಕರಿಗೆ ಸಹಜವಾಗಿರುತ್ತದೆ. ಹೀಗೆ ಸಹಜವಾಗಿ ಬರುವ ಅವಧಿಜ್ಞಾನಕ್ಕೆ 'ಭವ ಪ್ರತ್ಯಯ ಜ್ಞಾನ' ಎಂದೂ ಹೆಸರು. ಇದರಲ್ಲಿ ಮೂರು ವಿಧ: ೧. ದೇಶಾವಧಿ. ೨. ಪರಮಾವಧಿ. ೩. ಸರ್ವಾವಧಿ.

**ಅವಸರ್ಪಿಣಿ** ಒಂದೊಂದು ಕಲ್ಪದಲ್ಲಿಯೂ ಇರುವ ಕಾಲಸ್ವರೂಪದ ಭೇದ. ಧರ್ಮ, ಸತ್ಯ, ನ್ಯಾಯ, ಜನರ ಆಯುಸ್ಸು, ಸುಖ ಮುಂತಾದುವು ಕ್ರಮಕ್ರಮವಾಗಿ ಕಡಿಮೆಯಾಗುತ್ತಾ ಬಂದು, ಕಡೆಗೆ ಅಧರ್ಮ ಅನ್ಯಾಯಾದಿಗಳು ತಾವೇ ತಾವಾಗುವ ಕಾಲವಿಭಾಗ. ಇದು ಆರು ವಿಭಾಗವಾಗಿದೆ : ೧. ಸುಷಮ-ಸುಷಮ, ೨. ಸುಷಮ, ೩. ಸುಷಮ-ದುಷಮ, ೪. ದುಷಮ-ಸುಷಮ, ೫. ದುಷಮ, ೬. ದುಷಮ-ದುಷಮ.

**ಅಷ್ಟವಿಧಾರ್ಚನೆ** ನೀರು, ಗಂಧ, ಅಕ್ಷತೆ, ಪುಷ್ಪ, ಚರು, ದೀಪ, ಧೂಪ, ಫಲ—ಈ ಎಂಟು ವಿಧವಾದ ವಸ್ತುಗಳಿಂದ ಮಾಡುವ ಪೂಜೆ.

**ಆರ್ತಧ್ಯಾನ** ಇಷ್ಟವಲ್ಲದ ವಸ್ತುಗಳಿಂದ ಅಗಲಬೇಕೆಂಬ ಆಕಾಂಕ್ಷೆಯಿಂದಲೂ ಇಷ್ಟವಾಗುವ ವಸ್ತುಗಳು ಬೇಕೆಂಬ ಆಕಾಂಕ್ಷೆಯಿಂದಲೂ ಮನಸ್ಸು ತುಂಬಿ ಅವುಗಳನ್ನೇ ಚಿಂತಿಸುತ್ತಿರುವುದು.

**ಆಸನ ಕಂಪ** ತೀರ್ಥಂಕರರ ಜನನವೇ ಮುಂತಾದ ವಿಶೇಷ ಪ್ರಸಂಗಗಳಲ್ಲಿ ದೇವೇಂದ್ರನಿಗೆ ಉಂಟಾಗುವ ಪೀಠದ ಅಲುಗಾಟ, ಕಂಪನ.

**ಉತ್ತರಕುರು** ಜಂಬೂದ್ವೀಪದ ಒಂದು ಕ್ಷೇತ್ರ. ಮಂದರ ಪರ್ವತದ ಉತ್ತರಕ್ಕಿದೆ. ಇದು ಉತ್ತಮ ಭೋಗಭೂಮಿ.

**ಉತ್ಸರ್ಪಿಣಿ** ಒಂದೊಂದು ಕಲ್ಪದಲ್ಲಿಯೂ ಇರುವ ಕಾಲಸ್ವರೂಪದ ಭೇದ, ಧರ್ಮ, ಸತ್ಯ, ನ್ಯಾಯ, ಜನರ ಆಯುಸ್ಸು, ಸುಖ ಮುಂತಾದುವು ಕ್ರಮಕ್ರಮವಾಗಿ ಹೆಚ್ಚುತ್ತಾ ಹೋಗಿ, ಕಡೆಗೆ ಧರ್ಮ, ನ್ಯಾಯಾದಿಗಳು ತಾವೇತಾವಾಗುವ ಕಾಲ ವಿಭಾಗ. ಇದರಲ್ಲಿ ಆರು ವಿಭಾಗಗಳಿವೆ : ೧. ದುಷಮ-ದುಷಮ, ೨. ದುಷಮ, ೩. ದುಷಮ-ಸುಷಮ, ೪. ಸುಷಮ-ದುಷಮ, ೫. ಸುಷಮ, ೬. ಸುಷಮ-ಸುಷಮ.

**ಉಪಶಾಂತ ಗುಣಸ್ಥಾನ** ಇಪ್ಪತ್ತೆರಡು ಬಗೆಯ ಮೋಹನೀಯ ಕರ್ಮಗಳು ಉಪಶಮ ಭಾವವನ್ನು ಹೊಂದುವುದರಿಂದ ಉಂಟಾಗುವ ನಿರ್ಮಲ ಪರಿಣಾಮ. ಹನ್ನೊಂದನೇ ಗುಣಸ್ಥಾನ.

**ಕರ್ಮನಿರ್ಜರೆ** ಕರ್ಮಕ್ಷಯ, ಕರ್ಮ ಹರಿದು ಬೀಳುವುದು.

**ಕಲ್ಪವೃಕ್ಷ** ಸ್ವರ್ಗಗಳಲ್ಲೂ ಭೋಗಭೂಮಿಗಳಲ್ಲೂ ಇದ್ದು ಬಯಸಿದ್ದನ್ನು ಕೊಡುವ ಮರ. ಇದರಲ್ಲಿ ಹತ್ತು ಬಗೆ : ೧. ಮದ್ಯಾಂಗ, ೨. ಭೂಷಣಾಂಗ, ೩. ವಸ್ತ್ರಾಂಗ, ೪. ತೂರ್ಯಾಂಗ, ೫. ಮಾಲ್ಯಾಂಗ, ೬. ಗೃಹಾಂಗ, ೭ ಭಾಜನಾಂಗ, ೮. ಭೋಜನಾಂಗ, ೯. ಜ್ಯೋತಿರಂಗ, ೧೦. ದೀಪಾಂಗ.

**ಕಾಯೋತ್ಸರ್ಗ ಮುದ್ರೆ** ಕೈ ಇಳಿಬಿಟ್ಟುಕೊಂಡು ದೇಹವನ್ನು ನೇರವಾಗಿ ಮತ್ತು ನಿಶ್ಚಲವಾಗಿರಿಸಿಕೊಂಡು ನಿಂತಿರುವುದು.

**ಕಾರ್ಮಣ ಶರೀರ** ಜ್ಞಾನಾವರಣಾದಿ ಎಂಟು ಪ್ರಕಾರದ ಕರ್ಮಸ್ಕಂಧ, ನಾಮಕರ್ಮದ ಉದಯದಿಂದುಂಟಾದುದು.

**ಕ್ಷಪಣಕ** ಜೈನಸಂನ್ಯಾಸಿ.

**ಕಾಲಲಬ್ಧಿ** ಸಮ್ಯಗ್ದೃಷ್ಟಿ ದೊರೆಯುವ ಕಾಲ ಕೂಡಿಬರುವುದು. ಊರ್ಧ್ವಗತಿಯನ್ನು ಪಡೆಯಲು ಸನ್ನಿಹಿತವಾಗುವ ಕಾಲ.

**ಕೇವಲಜ್ಞಾನ** ಪರಿಶುದ್ಧ, ಪರಿಪೂರ್ಣ ಮತ್ತು ಸರ್ವವ್ಯಾಪಿಯಾದ ಅನಂತ ಜ್ಞಾನ.

**ಕೇವಲಿ** ಕೇವಲಜ್ಞಾನವನ್ನು ಪಡೆದವ.

**ಕ್ಷಪಕ ಶ್ರೇಣಿ** ಗುಣಸ್ಥಾನಗಳಲ್ಲಿ ಜೀವ ಉನ್ನತಿ ಹೊಂದುತ್ತಾ ಹೋಗುವಾಗ ಯಾವುದು ಚಾರಿತ್ರಮೋಹನೀಯಗಳ ನಾಶಮಾಡುತ್ತದೋ ಅದು.

**ಗಣಧರ** ಶ್ರೇಷ್ಠವಾದ ಜ್ಞಾನ, ದರ್ಶನ ಮುಂತಾದ ಧರ್ಮಗಳನ್ನು ಹೊಂದಿರುವವನು. ತೀರ್ಥಂಕರರನ ಶಿಷ್ಯರ ಗುಂಪಿನ ಮುಂದಾಳು, ಮುಖ್ಯ ಶಿಷ್ಯರಲ್ಲಿ ಒಬ್ಬ.

**ಘಾತಿಕರ್ಮ** ಕರ್ಮದ ಮೂಲಕೃತಿ. ಅನಂತ ಗುಣಗಳಿಗೆ ಘಾತಿ (ಕೇಡು) ಮಾಡುವ ಕರ್ಮಗಳು. ಇವುಗಳಲ್ಲಿ ನಾಲ್ಕು ಬಗೆ : ೧. ಜ್ಞಾನಾವರಣೀಯ, ೨. ದರ್ಶನಾವರಣೀಯ, ೩. ಮೋಹನೀಯ, ೪. ಅಂತರಾಯ.

**ಚಕ್ರರತ್ನ** ಚತುರ್ದಶ ರತ್ನಗಳಲ್ಲಿ ಒಂದು. ಚಕ್ರವರ್ತಿ ಪದವಿಯ ಸೂಚಕವಾಗಿ ಆಯುಧಾಗಾರದಲ್ಲಿ ಉದಿಸುವ ಆಯುಧ.

**ಚತುರ್ಗತಿ** ಕರ್ಮಫಲದಿಂದ ಜೀವಿಯು ಅಲೆದಾಡುವ ನಾಲ್ಕು ನೆಲೆಗಳು : ೧. ದೇವಗತಿ, ೨. ಮನುಷ್ಯಗತಿ, ೩. ತಿರ್ಯಗ್ಗತಿ, ೪. ನರಕಗತಿ.

**ಚತುರ್ನಿಕಾಯ ದೇವತೆಗಳು** ನಾಲ್ಕು ಬಗೆಯ ದೇವತೆಗಳ ಸಮೂಹ : ೧. ಭವನವಾಸಿ, ೨. ಜ್ಯೋತಿಷ್ಕ, ೩. ವ್ಯಂತರ, ೪. ವೈಮಾನಿಕ.

**ಚರಮದೇಹ** ಮೋಕ್ಷಕ್ಕೆ ಮುನ್ನ ಪಡೆದಿರುವ ಕಡೆಯ ಸ್ಥೂಲ ದೇಹ.

**ಚಾರಣಋದ್ಧಿ** ಋದ್ಧಿಗಳಲ್ಲಿ ಒಂದು. ಆಕಾಶ, ನೀರು ಮೊದಲಾದುವುಗಳಲ್ಲಿ ನಡೆಯುವ ಶಕ್ತಿ.

**ಚೈತ್ಯ** ಜಿನಬಿಂಬ, ಜಿನಾಲಯ.

**ಜಾತರೂಪ** ಹುಟ್ಟಿದಾಗಿನ ರೂಪ, ದಿಗಂಬರತ್ವ, ಬತ್ತಲೆ.

**ಜಿನಕಲ್ಪಿತಾಚಾರ** ಪಂಚಮಹಾವ್ರತಗಳು, ಪಂಚಸಮಿತಿಗಳು ಮತ್ತು ತ್ರಿಗುಪ್ತಿಗಳು—ಇವನ್ನು ಪೂರ್ಣವಾಗಿ ಪಾಲಿಸುವುದು ಮತ್ತು ಪರೀಷಹ, ಉಪಸರ್ಗಗಳನ್ನು ಸಹಿಸುವುದು.

**ಜೀವದ್ರವ್ಯ** ಚೈತನ್ಯಗುಣವಿಶಿಷ್ಟವಾದ ಒಂದು ದ್ರವ್ಯ.

**ತನುವಾತವಲಯ** ಲೋಕವನ್ನು ಸುತ್ತಿರುವ ವಾಯುಮಂಡಲಗಳಲ್ಲಿ ಅತ್ಯಂತ ಎತ್ತರದಲ್ಲಿರುವುದು. ಸಿದ್ಧಶಿಲೆಯ ನೆತ್ತಿಯ ಭಾಗ. ಈ ವಲಯದಲ್ಲಿ ಸಿದ್ಧಪರಮೇಷ್ಠಿಗಳಿರುತ್ತಾರೆ.

**ತೀರ್ಥಂಕರ** ಧರ್ಮತೀರ್ಥವನ್ನು ಪ್ರಚಾರ ಮಾಡುತ್ತ ಜಗತ್ತನ್ನು ಉದ್ಧರಿಸುವವ. ತೀರ್ಥವನ್ನು, ಸಂಸಾರನಿಸ್ತರಣೋಪಾಯವನ್ನು ಮಾಡುವವ. ಇವರಿಗೆ ಜಿನ, ಅರ್ಹತ್, ಅರ್ಹಂತ, ಅರಿಹಂತ ಇತ್ಯಾದಿ ಹೆಸರುಗಳೂ ಇವೆ.

**ತೈಜಸ ಶರೀರ** ಲಬ್ಧಿವಿಶೇಷದಿಂದ ಉಂಟಾಗುವ ಜನ್ಮ. ಇದು ಎರಡು ವಿಧ : ೧. ಶುಭ

ತೈಜಸ ಶರೀರ, ೨. ಅಶುಭ ತೈಜಸ ಶರೀರ.

**ತ್ರಸಜೀವ** ಸಂಸಾರಿ ಜೀವಭೇದ; ಒಂದು ಕಡೆಯಿಂದ ಮತ್ತೊಂದು ಕಡೆಗೆ ತಾವಾಗಿ ಚಲಿಸಬಲ್ಲ ಎರಡು ಅಥವಾ ಹೆಚ್ಚು ಇಂದ್ರಿಯಗಳನ್ನುಳ್ಳ ಜೀವಿಗಳು. ಇವುಗಳಲ್ಲಿ ನಾಲ್ಕು ಬಗೆ. ೧. ದ್ವೀಂದ್ರಿಯ ಜೀವ, ೨. ತ್ರೀಂದ್ರಿಯ ಜೀವ, ೩. ಚತುರಿಂದ್ರಿಯ ಜೀವ, ೪. ಪಂಚೇಂದ್ರಿಯ ಜೀವ.

**ತ್ರಿಗುಪ್ತಿ** ೧. ಮನೋಗುಪ್ತಿ, ೨. ವಚನಗುಪ್ತಿ, ೩. ಕಾಯಗುಪ್ತಿ. ಕರ್ಮನಿರೋಧಕ್ಕೆ ಅಥವಾ ಸಂವರಸಾಧನಕ್ಕೆ ಅಗತ್ಯವಾದ ಆಚರಣೆ; ಮನವಚನಕಾಯಗಳ ವ್ಯಾಪಾರ ವನ್ನು ಬಾಹ್ಯಪರಿವರ್ತನಕ್ಕೆ ಬಿಡದೆ ತಡೆಯುವುದು.

**ದಶಧರ್ಮ** ರಾಗದ್ವೇಷಾದಿ ದುರ್ಭಾವಗಳಿಂದ ದೂಷಿತಗೊಂಡ ಮನಸ್ಸಿನ ಉಪಶಮನ ಕ್ಕಾಗಿ ಬಳಕೆಯಾಗುವ ಹತ್ತು ಧರ್ಮಗಳು : ೧. ಉತ್ತಮ ಕ್ಷಮಾ, ೨. ಉತ್ತಮ ಮಾರ್ದವ, ೩. ಉತ್ತಮ ಆರ್ಜವ, ೪. ಉತ್ತಮ ಶೌಚ, ೫. ಉತ್ತಮ ಸತ್ಯ, ೬. ಉತ್ತಮ ಸಂಯಮ, ೭. ಉತ್ತಮ ತಪ, ೮. ಉತ್ತಮ ತ್ಯಾಗ, ೯. ಉತ್ತಮ ಆಕಿಂಚವ್ಯ, ೧೦. ಉತ್ತಮ ಬ್ರಹ್ಮಚರ್ಯ.

**ದಿವ್ಯಧ್ವನಿ** ೧. ಸಮವಸರಣದಲ್ಲಿ ಕುಳಿತು ಲೋಕವಿಹಾರ ಮಾಡುತ್ತಾ ತೀರ್ಥಂಕರರು ಮಾಡುವ ಧರ್ಮಬೋಧೆ. ಅದು ಚತುರ್ಗತಿಯಲ್ಲಿರುವ ಪ್ರಾಣಿಗಳಿಗೆಲ್ಲ ಅದರದರ ಭಾಷೆಯಲ್ಲಿ ಅರಿವಾಗುತ್ತದೆ. ೨. ತೀರ್ಥಂಕರರ ಮುಖಕಮಲದಿಂದ ಹೊರಟ ದಿವ್ಯವಾಣಿ. ೩. ಸಮಸ್ತ ಪ್ರಾಣಿಗಳ ಅಜ್ಞಾನವನ್ನು ಹೋಗಲಾಡಿಸುವ ದೇವವಾಣಿ. ಅದು ಉಪಮಾತೀತವಾದುದು, ಸ್ವಭಾವದಿಂದ ಅಸ್ಖಲಿತವಾದುದು. ಸಂಧ್ಯಾತ್ರಯಗಳಲ್ಲಿ ನವಮುಹೂರ್ತಕಾಲ ಮಾತ್ರ ಹೊರಡುವಂತಹುದು. ಒಂದು ಯೋಜನ ಪರಿಯಂತ ಕೇಳುವಂತಹುದು. ಅಲ್ಲದೆ ಮೂರು ಸಂಧ್ಯಾಕಾಲ ಗಳನ್ನು ಬಿಟ್ಟು ಉಳಿದ ಸಮಯದಲ್ಲಿ ದೇವೇಂದ್ರ, ಚಕ್ರವರ್ತಿ, ಗಣಧರರ ಪ್ರಶ್ನಾನುಸಾರವಾಗಿ ನುಡಿಯುವುದು.

**ದ್ವಾದಶಾಂಗ ಚತುರ್ದಶ ಪೂರ್ವ** ಮಹಾವೀರರ ಪೂರ್ವಕಾಲದ ಶ್ರುತಜ್ಞಾನ, ದ್ರವ್ಯ ಶ್ರುತದ ರೂಪದಿಂದ ಮಹಾವೀರನ ಪೂರ್ವಕಾಲದ ಯಾವ ಸಾಹಿತ್ಯವೂ ಉಪ ಲಭ್ಯವಿಲ್ಲ. ಆದರೆ ಭಾವ ಶ್ರುತದ ಅಪೇಕ್ಷೆಯಿಂದ ಜೈನ ಶ್ರುತಾಂಗಗಳಲ್ಲಿ ಕೆಲವು ರಚನೆಗಳನ್ನು ಮಹಾವೀರನ ಪೂರ್ವಕಾಲದಿಂದಲೂ ಶ್ರವಣಪರಂಪರೆಯಲ್ಲಿ ಪ್ರಚಲಿತವಿದ್ದವೆಂದು ಸ್ವೀಕರಿಸಲಾಗುತ್ತಿದೆ. ಇದಕ್ಕೆ ಪೂರ್ವ ಎಂದು ಹೇಳಲಾಗಿದೆ. ದ್ವಾದಶಾಂಗ ಆಗಮದ ಹನ್ನೆರಡನೆಯ ಅಂಗವಾದ ದೃಷ್ಟಿವಾದದಲ್ಲಿ ಅಂತರ್ಗತ ವೆಂದು ಹದಿನಾಲ್ಕು 'ಪೂರ್ವ'ಗಳನ್ನು ಹೇಳಲಾಗಿದೆ : ೧. ಉತ್ತರ, ೨. ಆಗ್ರಾ ಯಣೀ, ೩. ವೀರ್ಯಾನುವಾದ, ೪. ಅಸ್ತಿನಾಸ್ತಿ ಪ್ರವಾದ, ೫. ಜ್ಞಾನಪ್ರವಾದ, ೬. ಸತ್ಯಪ್ರವಾದ, ೭. ಆತ್ಮಪ್ರವಾದ, ೮. ಕರ್ಮಪ್ರವಾದ, ೯. ಪ್ರತ್ಯಾಖ್ಯಾನ, ೧೦. ವಿದ್ಯಾನುವಾದ, ೧೧. ಕಲ್ಯಾಣವಾದ, ೧೨. ಪ್ರಾಣವಾಯ, ೧೩. ಕ್ರಿಯಾವಿಶಾಲ,

೧೪. ಲೋಕಬಿಂದುಸಾರ.

**ದ್ವಾದಶಾನುಪ್ರೇಕ್ಷೆಗಳು** ನೋಡಿ : ಅನುಪ್ರೇಕ್ಷೆ.

**ಧರ್ಮಧ್ಯಾನ** ಇಂದ್ರಿಯಗಳನ್ನು ಹಾಗೂ ಮನವನ್ನು ರಾಗದ್ವೇಷಾದಿ ಭಾವನೆಗಳಿಂದ ನಿರೋಧ ಮಾಡಿ ಧಾರ್ಮಿಕ ಚಿಂತನೆಯ ಕಡೆಗೆ ತಿರುಗಿಸುವುದು.

**ಧ್ಯಾನ** ಅಭ್ಯಂತರ ತಪಸ್ಸುಗಳಲ್ಲಿ ಒಂದು; ಸ್ಥಿರವಾದ ಪರಿಣಾಮ; ಮನೋವ್ಯಾಪಾರ ರೂಪವಾದ ಯೋಗವನ್ನು ಒಂದು ವಿಷಯದಲ್ಲಿ ಸ್ಥಿರಗೊಳಿಸುವುದು, ಅದನ್ನು ಚಿಂತಿಸುವುದು. ಇದರಲ್ಲಿ ನಾಲ್ಕು ಭೇದಗಳಿವೆ : ೧. ಆರ್ತ ಧ್ಯಾನ, ೨. ರೌದ್ರ ಧ್ಯಾನ, ೩. ಧರ್ಮ ಧ್ಯಾನ, ೪. ಶುಕ್ಲ ಧ್ಯಾನ.

**ನಯ** ವಸ್ತುವಿನ ಏಕದೇಶ ಜ್ಞಾನ. ಪದಾರ್ಥಗಳ ಅನಂತಗುಣ ಮತ್ತು ಪರ್ಯಾಯ ಗಳಲ್ಲಿ ತಮ್ಮ ಪ್ರಯೋಜನಕ್ಕನುಸರಿಸಿ ಯಾವುದಾದರೊಂದು ಗುಣಧರ್ಮದ ಸಂಬಂಧದಲ್ಲಿ ಹೇಳುವ ಅಭಿಪ್ರಾಯ. ವಸ್ತುವಿನ ನಾನಾಗುಣಗಳ ವಿವೇಚನೆಯು ನಯಗಳ ಮೂಲಕವೇ ನಡೆಯಬೇಕು.

**ನವವಿಧಪುಣ್ಯ / ಭಕ್ತಿ** ಯತಿಯ ಪ್ರತಿಗ್ರಹಣ (ಸ್ವಾಗತ), ಉಚ್ಚಾಸನ, ಪಾದ ಪ್ರಕ್ಷಾಲನ, ಪೂಜೆ, ನಮಸ್ಕಾರ, ಮನಶ್ಶುದ್ಧಿ, ವಚನಶುದ್ಧಿ, ಕಾಯಶುದ್ಧಿ, ಆಹಾರಶುದ್ಧಿ–ಇವು ದಾನಮಾಡುವವನಲ್ಲಿ ಪೂರ್ವಜನ್ಮಸಂಸ್ಕಾರದಿಂದ ಬಂದ ಗುಣಗಳು; ದಾತೃ ವಿಶೇಷ ಗುಣಗಳು.

**ನಿಕ್ಷೇಪ** ನಾನಾ ವಿಧವಾದ ದ್ರವ್ಯದ ಸ್ವರೂಪವನ್ನು ತಿಳಿದುಕೊಳ್ಳುವುದಕ್ಕೂ ತಿಳಿಸಿಕೊಡು ವುದಕ್ಕೂ ಬಳಸುವ ಪದ್ಧತಿ.

**ನಿಗೋದ** ಸಾಧಾರಣವಾದ ನಾಮಕರ್ಮದ ಉದಯದಿಂದ ಉಂಟಾಗುವ ಅನಂತಜೀವ ಗಳಿಗೆ ಆಶ್ರಯವಾದ ಒಂದು ಶರೀರ ವಿಶೇಷ; ಈ ಸೂಕ್ಷ್ಮಜೀವಿಗಳು ಎರಡು ಗಳಿಗೆಯಲ್ಲಿ ಹದಿನೆಂಟು ಸಾವಿರ ಸಲ ಹುಟ್ಟಿ ಸಾಯುತ್ತವೆ. ಇವು ಏಕೇಂದ್ರಿಯ ಜೀವಿಗಳು.

**ನಿದಾನ** ಭವಿಷ್ಯ ಜನ್ಮದಲ್ಲಿ ನಿರ್ದಿಷ್ಟ ಸುಖವು ಬೇಕೆಂಬ ಅಪೇಕ್ಷೆ, ಬಯಕೆ.

**ನೋಕಷಾಯ** ಚಾರಿತ್ರ ಮೋಹನೀಯದಲ್ಲಿ ಒಂದು ಭೇದ; ಕಿಂಚಿತ್ ಕಷಾಯ. ಇದರಲ್ಲಿ ಹಾಸ್ಯ, ರತಿ, ಅರತಿ, ಶೋಕ, ಭಯ, ಜುಗುಪ್ಸೆ, ಸ್ತ್ರೀವೇದ, ಪುಂವೇದ, ನಪುಂಸಕ ವೇದಗಳೆಂಬ ಒಂಬತ್ತು ಭೇದಗಳಿವೆ.

**ಪಂಚಸಮಿತಿ** ಈರ್ಯಾಸಮಿತಿ, ಭಾಷಾಸಮಿತಿ, ಏಷಣಾಸಮಿತಿ, ಆದಾನನಿಕ್ಷೇಪಣಸಮಿತಿ ಮತ್ತು ಉತ್ಸರ್ಗಸಮಿತಿ ಎಂದು ಐದು ಬಗೆಯ ಧಾರ್ಮಿಕ ಪ್ರವೃತ್ತಿಗಳು— ಪ್ರಾಣಿಪೀಡಾಪರಿಹಾರೋಪಾಯಗಳು.

**ಪಂಚಾಶ್ಚರ್ಯ** ಉತ್ತಮ ಪಾತ್ರಕ್ಕೆ ಆಹಾರದಾನ ಮಾಡಿದಾಗ ಉಂಟಾಗುವ ಐದು ಬಗೆಯ ಅತಿಮಾನುಷವಾದ ಸೋಜಿಗಗಳು; ದೇವದುಂದುಭಿ ಮೊಳಗುವುದು,

ಹೂವಿನ ಮಳೆ ಕರೆಯುವುದು, ಚಿನ್ನದ ಮಳೆ ಸುರಿಯುವುದು, ಕಮ್ಮನೆ ಮೆಲುಗಾಳಿ ಬೀಸುವುದು ಮತ್ತು ದೇವತೆಗಳು ಪ್ರಶಂಸೆ ಮಾಡುವುದು ಎಂಬ ಐದು ಆಶ್ಚರ್ಯಗಳು.

**ಪರಮೌದಾರಿಕ** ಘಾತಿಕರ್ಮ ನಾಶವಾಗಿ ಅರ್ಹದವಸ್ಥೆಯಲ್ಲಿರುವ.

**ಪರೀಷಹ ಜಯ** ತಪಸ್ಸಿಗೆ ವಿಘ್ನವಾಗಿ ಬರುವ ಇಪ್ಪತ್ತೆರಡು ಬಗೆಯ ಉಪದ್ರವಗಳನ್ನು ಗೆಲ್ಲುವುದು : ೧. ಕ್ಷುಧಾ (ಹಸಿವು), ೨. ತೃಷಾ (ಬಾಯಾರಿಕೆ), ೩. ಶೀತ (ಚಳಿ), ೪. ಉಷ್ಣ(ಬಿಸಿ), ೫. ದ್ವಂಶಮಷಕ (ಸೊಳ್ಳೆ ನೊಣ ಮೊದಲಾದವುಗಳ ಕಡಿತ), ೬. ಅಚೇಲ (ಬಟ್ಟೆ ಇಲ್ಲದೆ ಇರುವುದರಿಂದ ಆಗುವ ತೊಂದರೆ), ೭. ಅರತಿ (ಅಪ್ರೀತಿಯ ಬಾಧೆ), ೮. ಸ್ತ್ರೀ(ಸ್ತ್ರೀಸಂಗದ ಬಯಕೆ), ೯. ಚರ್ಯಾ (ಹೆಚ್ಚು ಕಾಲ ಒಂದೆಡೆಯಲ್ಲಿ ನಿಲ್ಲದೆ ಸಂಚರಿಸುವುದರ ಬಾಧೆ), ೧೦. ನಿಷದ್ಯ (ಕುಳಿತಿರುವಾಗ ಆಗುವ ತೊಂದರೆ), ೧೧. ಶಯ್ಯಾ (ಮಲಗುವ ಕಡೆ ಆಗುವ ತೊಂದರೆ), ೧೨. ಆಕ್ರೋಶ (ಬೈಗಳು), ೧೩. ವಧಾ (ಹೊಡೆತ), ೧೪. ಯಾಚನಾ(ಚರಿಗೆಯಲ್ಲಿ ಆಗುವ ಕಷ್ಟ ನಷ್ಟಗಳು), ೧೫. ಅಲಾಭ (ಭಿಕ್ಷೆ ಸಿಕ್ಕದಿದ್ದರೆ ಆಗುವ ಖೇದ), ೧೬. ರೋಗಬಾಧೆ, ೧೭. ತೃಣಸ್ಪರ್ಶ (ಮುಳ್ಳು ಕಲ್ಲು ತಾಕುವುದರ ನೋವು), ೧೮. ಮಲ (ಮೈ ತೊಳೆಯದುದರಿಂದ ಆಗುವ ಬಾಧೆ), ೧೯. ಸತ್ಕಾರ-ಪುರಸ್ಕಾರ (ಸತ್ಕಾರವಾಗಲಿ ಪುರಸ್ಕಾರವಾಗಲಿ ದೊರೆಯದಾಗ ಆಗುವ ಬಾಧೆ), ೨೦. ಪ್ರಜ್ಞಾ (ತನ್ನ ಪ್ರತಿಜ್ಞೆಗೆ ಅಹಂಕಾರಪಡುವುದು), ೨೧. ಅಜ್ಞಾನ (ಉತ್ತಮ ಜ್ಞಾನಕ್ಕಾಗಿ ಕೊರಗುವುದು), ೨೨. ಅದರ್ಶನ (ತಪಸ್ಸಿಗೆ ತಕ್ಕ ಮಹಿಮೆಗಳು ಕಾಣಿಸಿಕೊಳ್ಳದೆ ಆಗುವ ಬಾಧೆ).

**ಪರ್ಯೂಷಣ** ಭಾದ್ರಪದ ಶುದ್ಧ ಪಂಚಮಿಯಿಂದ ಚತುರ್ದಶಿಯವರೆಗೆ ನಡೆಸುವ ಒಂದು ವ್ರತದ ಹೆಸರು; ದಶಲಕ್ಷಣ.

**ಪಲ್ಯಂಕಾಸನ** ಯೋಗಾಭ್ಯಾಸಕ್ಕೆ ತಕ್ಕುದಾದ ಒಂದು ಆಸನ. ಬಲಪಾದವನ್ನು ಎಡ ತೊಡೆಯ ಮೇಲೂ, ಎಡಪಾದವನ್ನು ಬಲತೊಡೆಯ ಮೇಲೂ ಇಟ್ಟು ಧ್ಯಾನಕ್ಕೆ ಕುಳಿತುಕೊಳ್ಳುವ ಆಸನ. ಅದಕ್ಕೆ 'ಪರ್ಯಂಕಾಸನ' ಎಂದೂ 'ಸುಖಾಸನ' ಎಂದೂ ಹೆಸರು.

**ಪಾತ್ರ** ದಾನಕ್ಕೆ ಯೋಗ್ಯ, ಅರ್ಹ. ಇವರಲ್ಲಿ ಮೂರು ವಿಧ : ೧. ಉತ್ತಮ ಪಾತ್ರ (ಯತಿ), ೨. ಮಧ್ಯಮ ಪಾತ್ರ (ವ್ರತನಿರತನಾದ ಶ್ರಾವಕ), ೩. ಜಘನ್ಯಪಾತ್ರ (ವ್ರತವಿಲ್ಲದವನಾದರೂ ಸಮ್ಯಕ್ತ್ವವುಳ್ಳ ಶ್ರಾವಕ).

**ಪ್ರಥಮಾನುಯೋಗ** ಅನುಯೋಗಗಳಲ್ಲಿ ಮೊದಲನೆಯದು. ತ್ರಿಷಷ್ಟಿಶಲಾಕಾ ಪುರುಷರ ಚರಿತ್ರೆ, ಕತೆ ಇವುಗಳ ವಿವರಣೆಗಳನ್ನೊಳಗೊಂಡುದು.

**ಪ್ರತಿವಾಸುದೇವ** ತ್ರಿಷಷ್ಟಿ ಶಲಾಕಾಪುರುಷರಲ್ಲಿ ಗಣನೆಯಾಗಿರುವ ಮಹಾಪುರುಷರು. ವಾಸುದೇವನಿಗೆ ವಿರೋಧಿಯಾಗಿ ಆತನಿಂದ ಹತರಾಗುವ ಪ್ರತಿದ್ವಂದ್ವಿಗಳು.

ಇವರು ಒಂಬತ್ತು ಮಂದಿ—೧. ಅಶ್ವಗ್ರೀವ, ೨. ತಾರಕ, ೩. ಮೇರಕ, ೪. ಮಧು, ೫. ನಿಶುಂಭ, ೬. ಬಲಿ, ೭. ಪ್ರಹ್ಲಾದ, ೮. ರಾವಣ, ೯. ಜರಾಸಂಧ.

**ಪ್ರಭಾವನ** ಸಮ್ಯಗ್ದರ್ಶನದ ಅಂಗಗಳಲ್ಲಿ ಒಂದು; ಜೈನಧರ್ಮದ ಪ್ರಭಾವವನ್ನು ಬೆಳಗುವುದು; ಜಿನಶಾಸನಮಾಹಾತ್ಮ್ಯ ಪ್ರಕಾಶ.

**ಪ್ರಮಾಣ** ಪದಾರ್ಥಗಳ ಸರ್ವ ದೇಶವನ್ನೂ ತಿಳಿಯುವ ಜ್ಞಾನ. ಇದರಲ್ಲಿ ಎರಡು ವಿಧ: ೧. ಪ್ರತ್ಯಕ್ಷ ಪ್ರಮಾಣ, ೨. ಪರೋಕ್ಷ ಪ್ರಮಾಣ.

**ಭೋಗಭೂಮಿ** ಕಲ್ಪವೃಕ್ಷಗಳಿಂದ ಭೋಗೋಪಭೋಗದ ಸಾಧನಗಳು ದೊರೆಯುವ ಭೂಮಿ. ಭರತ, ಐರಾವತ ಕ್ಷೇತ್ರಗಳು ಅವಸರ್ಪಿಣಿ ಕಾಲದ ಮೂರು ಅಂತಃ ಕಾಲದವರೆಗೆ ಭೋಗಭೂಮಿಗಳಾಗಿದ್ದುವು ; ಈಗ ಕರ್ಮಭೂಮಿಗಳಾಗಿವೆ. ಭೋಗಭೂಮಿಗಳಲ್ಲಿ ಮೂರು ವಿಧ : ೧. ಉತ್ತಮ ಭೋಗಭೂಮಿ, ೨. ಮಧ್ಯಮ ಭೋಗಭೂಮಿ, ೩. ಜಘನ್ಯ ಭೋಗಭೂಮಿ.

**ಮಾನ ಕಷಾಯ** ಕಷಾಯಗಳಲ್ಲಿ ಒಂದು. ಆತ್ಮನ ವಿನಯಗುಣವನ್ನು ನಾಶಮಾಡುವ ಅಹಂಕಾರ, ತೀವ್ರ ಮನೋವಿಕಾರರೂಪ ಕಷಾಯಗಳ ಯೋಗದಿಂದ ಜನಿಸುವುದು.

**ಮಿಥ್ಯಾತ್ವ** ದರ್ಶನಮೋಹನೀಯ ಕರ್ಮೋದಯದಿಂದ ದೇವ, ಗುರು, ಶಾಸ್ತ್ರಗಳಲ್ಲಿ ವಿಪರೀತ ಪರಿಣಾಮವುಂಟಾಗುವುದು.

**ಮೋಹನೀಯಕರ್ಮ** ಜೀವನನ್ನು ಮೋಹಗೊಳಿಸಿ ಅನಂತಸುಖವನ್ನು ಹಾಳು ಮಾಡುವ ಕರ್ಮ. ಇದರಲ್ಲಿ ಎರಡು ವಿಧ : ೧. ದರ್ಶನ ಮೋಹನೀಯ, ೨. ಚಾರಿತ್ರ ಮೋಹನೀಯ.

**ರೌದ್ರಧ್ಯಾನ** ಧ್ಯಾನಭೇದ. ಪ್ರಾಣಿಗಳಿಗೆ ದುಃಖಪಡಿಸುವುದರಿಂದ ಭಯಂಕರನೂ ಕ್ರೂರನೂ ಪ್ರಾಣಿಗಳಲ್ಲಿ ನಿರ್ದಯನೂ ಆದವನ ಧ್ಯಾನ.

**ಲೇಶ್ಯೆ** ಆತ್ಮವು ಪುಣ್ಯಪಾಪಗಳಿಗೆ ಅಧೀನವಾಗುವ ಮಾರ್ಗ; ಕಷಾಯಗಳಲ್ಲಿ ಅನುರಕ್ತವಾದ ಆತ್ಮವು ಯೋಗದಲ್ಲಿ ಪ್ರವೃತ್ತಿಸುವುದು—ಪರಿಣಾಮ ವಿಶೇಷ. ಇದರಲ್ಲಿ ಆರು ಪ್ರಕಾರಗಳಿವೆ : ೧. ಕೃಷ್ಣ, ೨. ನೀಲ, ೩. ಕಾಪೋತ, ೪. ಪೀತ, ೫. ಪದ್ಮ, ೬. ಶುಕ್ಲ. ಮೊದಲ ಮೂರು ಅಶುಭ ಲೇಶ್ಯೆಗಳು. ಕಡೆಯ ಮೂರು ಶುಭ ಲೇಶ್ಯೆಗಳು.

**ಲೋಚು** ಮುನಿಧರ್ಮಗಳಲ್ಲೊಂದು. ತಲೆ ಮತ್ತು ಮುಖದ ಕೂದಲನ್ನು ಕೈಯಿಂದ ಕಿತ್ತು ತೆಗೆಯುವುದು; ಲುಂಚನ ಕ್ರಿಯೆ.

**ಲೌಕಾಂತಿಕ ದೇವತೆಗಳು** ಲೋಕ ಅಥವಾ ಸಂಸಾರದ ಕೊನೆಯಲ್ಲಿರುವವರು. ಇವರು ದ್ವಾದಶಾಂಗಶಾಸ್ತ್ರಗಳನ್ನು ಬಲ್ಲವರು, ಬ್ರಹ್ಮಚಾರಿಗಳು, ತೀರ್ಥಂಕರರ ಪಂಚ ಕಲ್ಯಾಣಗಳಲ್ಲಿ ಆಸಕ್ತರು.

**ವಜ್ರವೃಷಭನಾರಾಚಸಂಹನನ** ಶರೀರದ ಮೇಲ್ಮೈ, ಕೀಲು ಮತ್ತು ಎಲುಬುಗಳು ವಜ್ರಮಯವಾಗಿರುವುದು.

**ವೀತರಾಗ** ರಾಗದ್ವೇಷಾದಿಗಳಿಲ್ಲದವ; ಆಪ್ತ; ಜಿನ.

**ವೈಕ್ರಿಯಕ ಶರೀರ** ಅಣಿಮಾದಿ ಶಕ್ತಿಗಳನ್ನು ಬಳಸಿಕೊಂಡು ಅವಕ್ಕೆ ತಕ್ಕ ಶರೀರವನ್ನು ಧರಿಸಿಕೊಳ್ಳುವುದು.

**ಶ್ರಮಣ** ಜೈನಸಂನ್ಯಾಸಿ.

**ಶ್ರಾವಕರ ಪ್ರತಿಮೆಗಳು** ಪರಿಸ್ಥಿತಿ,ಅನುಕೂಲ,ಶಾರೀರಿಕ ಮತ್ತು ಮಾನಸಿಕ ವೃತ್ತಿಗಳಿಗೆ ಅನುಸರಿಸಿ ಗೃಹಸ್ಥಧರ್ಮದಲ್ಲಿ ರೂಪಿಸಿರುವ ಹನ್ನೊಂದು ನೆಲೆಗಳು : ೧. ದರ್ಶನಿಕ, ೨. ವ್ರತಿಕ; ೩. ಸಾಮಯಿಕ, ೪. ಪ್ರೋಷಧೋಪವಾಸಿ, ೫. ಸಚಿತ್ತ ವಿರತ, ೬. ಆರಂಭವಿರತ, ೬. ದಿವಾಮೈಥುನವಿರತ, ೭. ಬ್ರಹ್ಮಚಾರಿ, ೮. ಆರಂಭವಿರತ, ೯. ಪರಿಗ್ರಹವಿರತ, ೧೦, ಅನುಮತಿ ವಿರತ, ೧೧. ಉದ್ದಿಷ್ಟವಿರತ.

**ಶ್ರಾವಕರ ಷಟ್ಕರ್ಮಗಳು** ಶ್ರಾವಕರು ದಿನದಿನವೂ ಮಾಡಬೇಕಾದ ಆರು ಕರ್ಮಗಳು : ೧. ಇಜ್ಯಾ (ದೇವಪೂಜೆ), ೨. ವಾರ್ತಾ (ವಿಶುದ್ಧ ಆಚರಣೆಯಿಂದ ಹಿಂಸೆಯಾಗದಂತೆ ಜೀವನೋಪಾಯ ಮಾಡುವುದು), ೩. ದತ್ತಿ (ದಾನ), ೪. ಸ್ವಾಧ್ಯಾಯ, ೫. ಸಂಯಮ, ೬. ತಪಸ್ಸು (ಇಲ್ಲಿ 'ವಾರ್ತಾ'ಕ್ಕೆ ಬದಲಾಗಿ 'ಗುರುಸೇವೆ'ಯನ್ನು ಹೇಳುವ ಸಂಪ್ರದಾಯವೂ ಉಂಟು).

**ಶ್ರಾವಕ ವ್ರತಗಳು** ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹಗಳೆಂಬ ಸ್ಥೂಲರೂಪದ ಐದು ಅಣುವ್ರತಗಳು; ದಿಗ್ವ್ರತ, ದೇಶವ್ರತ, ಅನರ್ಥದಂಡವ್ರತಗಳೆಂಬ ಮೂರು ಗುಣವ್ರತಗಳು; ಸಾಮಾಯಿಕ, ಪ್ರೋಷಧೋಪವಾಸ, ವೈಯಾವೃತ್ಯ, ಸಲ್ಲೇಖನಗಳೆಂಬ ನಾಲ್ಕು ಶಿಕ್ಷಾವ್ರತಗಳು. ಒಟ್ಟು ಹನ್ನೆರಡು ವ್ರತಗಳು.

**ಶುಕ್ಲಧ್ಯಾನ** ಧ್ಯಾನಭೇದ—ಯೋಗಿಯು ತನ್ನ ಆತ್ಮವನ್ನು ಕರ್ಮಮಲದಿಂದ ದೂರಗೊಳಿಸಿ ಮೋಕ್ಷವನ್ನು ಪಡೆಯುವ ಸಾಧನೆ.ಇದು ನಾಲ್ಕು ವಿಧ : ೧. ಪೃಥಕ್ತ್ವ ವಿತರ್ಕ ವೀಚಾರ, ೨. ಏಕತ್ವ ವಿತರ್ಕ ವೀಚಾರ, ೩. ಸೂಕ್ಷ್ಮಕ್ರಿಯಾ ಪ್ರತಿಪಾತಿ, ೪. ವ್ಯುಪರತ ಕ್ರಿಯಾ ನಿವರ್ತಿ. ಮೊದಲ ಎರಡನ್ನು 'ಶುಕ್ಲ' ಎಂದೂ ಕಡೆಯ ಎರಡನ್ನು 'ಪರಮ ಶುಕ್ಲ' ಎಂದೂ ಪರಿಭಾವಿಸುತ್ತಾರೆ. ಶುಕ್ಲಧ್ಯಾನವು ಧರ್ಮಸ್ಥರಿಗೂ, ಪರಮಶುಕ್ಲಧ್ಯಾನವು ಕೇವಲಿಗಳಿಗೂ ಉಂಟಾಗುತ್ತದೆ.

**ಸಪ್ತತತ್ತ್ವಗಳು** ೧. ಜೀವ, ೨. ಅಜೀವ, ೩. ಆಸ್ರವ, ೪. ಬಂಧ, ೫. ಸಂವರ, ೬.ನಿರ್ಜರಾ, ೭. ಮೋಕ್ಷ.

**ಸಪ್ತರ್ಧಿಗಳು** ಏಳು ಋದ್ಧಿಗಳು. ತಪಸ್ಸಿದ್ಧಿ ಪಡೆದವರಿಗೆ ಉಂಟಾಗುವ ಮಹಿಮೆ : ೧. ಬುದ್ಧಿಋದ್ಧಿ, ೨. ತಪರ್ಧಿ, ೩. ಔಷಧರ್ಧಿ, ೪. ರಸರ್ಧಿ, ೫. ಬಲರ್ಧಿ, ೬.ಜ್ಞಾನರ್ಧಿ, ೭. ಚಾರಣರ್ಧಿ.

**ಸಮವಸರಣ** ತೀರ್ಥಂಕರನು ಧರ್ಮೋಪದೇಶ ಮಾಡುವುದಕ್ಕೆ ಇಂದ್ರನ ಅಪ್ಪಣೆಯಂತೆ ಕುಬೇರನು ನಿರ್ಮಿಸಿದ ಮಂಟಪ.

**ಸಮಾಧಿ** ಚಿತ್ತನಿರೋಧದಿಂದ ಆತ್ಮಜ್ಞಾನಿಯಾಗುವುದು.

**ಸಮಾಧಿ ಮರಣ** ಸಮಾಧಾನದಿಂದ ಸಾವನ್ನಪ್ಪುವುದು; ನಿವೃತ್ತಿಪೂರ್ವಕವಾಗಿ ಶರೀರ ಭಾರವನ್ನಿಳಿಸುವುದು.

**ಸಮ್ಯಕ್ತ್ವ** ಸತ್ಯಸ್ವರೂಪದ ಮೇಲಿನ ಶ್ರದ್ಧೆ; ಸಪ್ತತತ್ವಾದಿಗಳಲ್ಲಿ ಜಿನೇಂದ್ರರು ಹೇಳಿ ದಂತೆ ತಿಳಿವಳಿಕೆಯನ್ನು ಇಟ್ಟುಕೊಳ್ಳುವುದು.

**ಸರ್ವಾರ್ಥಸಿದ್ಧಿ** ಪಂಚಾಣುತ್ತರವಿಮಾನಗಳಲ್ಲಿ ಸರ್ವೋತ್ಕೃಷ್ಟವಾದುದು, ಉಳಿದ ನಾಲ್ಕು ವಿಮಾನಗಳ ನಡುವೆ ಇದೆ. ಅನುತ್ತರ ವಿಮಾನಗಳಲ್ಲಿ ಶ್ರೇಷ್ಠವಾದ ವಿಮಾನ.

**ಸಲ್ಲೇಖನ** (ಸತ್+ಲೇಖನ) ಕಾಯ ಹಾಗೂ ಕಷಾಯಗಳನ್ನು ಕೃಶ ಅಥವಾ ಕ್ಷೀಣಗೊಳಿಸು ವುದು; ಮರಣಕಾಲಕ್ಕೆ ಮುಂಚೆ ಉಪವಾಸ ಮಾಡುವುದು; ಮಹಾಸಂಕಟ, ದುರ್ಭಿಕ್ಷ, ವಾಸಿಯಾಗದ ರೋಗ, ವಾರ್ಧಕ್ಯ–ಈ ಅವಸ್ಥೆಗಳಲ್ಲಿ ಸಾಧಕನಾದವನು ಸಂಕಟದಿಂದ ಸವೆದು, ವ್ಯಾಕುಲತೆಯಿಂದ ಸಾಯುವುದಕ್ಕಿಂತ ಕ್ರಮಕ್ರಮವಾಗಿ ತನ್ನ ಆಹಾರಾದಿಗಳನ್ನು ಒಂದು ವಿಧಿಗನುಸಾರವಾಗಿ ಕಡಿಮೆ ಮಾಡುತ್ತಾ ಕಡೆಗೆ ಪೂರ್ಣ ಉಪವಾಸವಿದ್ದು ಮನಶ್ಶಾಂತಿಯಿಂದ ಶರೀರವನ್ನು ತ್ಯಜಿಸುವುದು; 'ಸಮಾಧಿ ಮರಣ', 'ಪ್ರಾಯೋಪಗಮನ', 'ಪ್ರಾಯೋಪವೇಶನ'.

**ಸಾಮಾನಿಕ ದೇವರು** ಇಂದ್ರನಿಗೆ ಸಮಾನವಾದ ವೀರ್ಯ, ಆಯುಷ್ಯ, ಭೋಗಾದಿ ಗಳಿದ್ದರೂ ಆತನ ಅಧಿಕಾರ ಐಶ್ವರ್ಯಗಳಿಲ್ಲದವರು. ವಿಮಾನವಾಸಿ ಮತ್ತು ಭವನವಾಸಿ ದೇವತೆಗಳಲ್ಲಿನ ಒಂದು ವರ್ಗ.

**ಸಿದ್ಧಪರಮೇಷ್ಠಿ** ಪಂಚಪರಮೇಷ್ಠಿಗಳಲ್ಲಿ ಒಬ್ಬರು. ಅಷ್ಟಕರ್ಮಗಳನ್ನು ನಾಶಮಾಡಿ ದೇಹವನ್ನು ಬಿಟ್ಟು ಸಿದ್ಧ ಶಿಲೆಗೆ ಹೋಗಿ ಶಾಶ್ವತ ಸುಖದಲ್ಲಿ ನೆಲಸಿದವರು; ಅಯೋಗಿ ಕೇವಲಿ. ಇವರಲ್ಲಿ ಎರಡು ವಿಧ—೧. ಸಾಮಾನ್ಯ ಸಿದ್ಧ, ೨. ತೀರ್ಥಂಕರ ಸಿದ್ಧ.

**ಸಿದ್ಧಪರಮೇಷ್ಠಿಗಳ ಎಂಟು ಗುಣಗಳು** ೧. ಸಮ್ಯಕ್ತ್ವ, ೨. ಅನಂತಜ್ಞಾನ, ೩. ಅನಂತ ದರ್ಶನ, ೪. ಅನಂತವೀರ್ಯ, ೫. ಸೂಕ್ಷ್ಮತೆ, ೬. ಅವಗಾಹ, ೭. ಅಗುರುಲಘು, ೮. ಅವ್ಯಾಬಾಧ.

**ಸೂಕ್ಷ್ಮಕ್ರಿಯಾಪ್ರತಿಪಾತಿ** ೧. ವಿತರ್ಕ ಅಥವಾ ಶ್ರುತವಚನದ ಆಧಾರವಿಲ್ಲದೆಯೆ ಕೇವಲ ಸೂಕ್ಷ್ಮಕಾಯಯೋಗಮಾತ್ರ ಅವಲಂಬನವಾದ ಧ್ಯಾನ. ೨. ಕೇವಲಿಯ ಆಯುಃ ಕರ್ಮವು ಅಂತಮುಹೂರ್ತದ್ದಿರುವಾಗ ಮಿಕ್ಕ ಕರ್ಮಗಳು ಅದೇ ಪ್ರಮಾಣದವಿರು ತ್ತವೆ. ಆಗ ಆತನು ಎಲ್ಲ ಮನೋವಚನಕಾಯ ಯೋಗಗಳನ್ನು ತ್ಯಾಗಮಾಡಿ

ಸೂಕ್ಷ್ಮಕಾಯಯೋಗದಲ್ಲಿ ನಿಂತು ಮಾಡುವ ಧ್ಯಾನ.

**ಸೌಧರ್ಮಕಲ್ಪ** ಊರ್ಧ್ವಲೋಕದ ಹದಿನಾರು ಕಲ್ಪಗಳ ಮೊದಲ ಜೋಡಿ.

**ಸ್ಥಾವರ** ಸಂಸಾರಿಜೀವಭೇದ, ಒಂದು ಕಡೆಯಿಂದ ಮತ್ತೊಂದು ಕಡೆಗೆ ತಾವಾಗಿ ಚಲಿಸಲಾರದೆ ಇದ್ದಲ್ಲೆ ಇರುವ ಜೀವ.ಇವು ಸ್ಪರ್ಶವನ್ನು ಮಾತ್ರ ಅರಿಯಬಲ್ಲ ಏಕೇಂದ್ರಿಯಗಳು. ಇವುಗಳಲ್ಲಿ ಐದು ವಿಧ : ೧. ಪೃಥ್ವೀಕಾಯಕ, ೨. ಜಲಕಾಯಕ, ೩. ಅಗ್ನಿಕಾಯಕ, ೪. ವಾಯುಕಾಯಕ, ೫. ವನಸ್ಪತಿಕಾಯಕ.

# ತಿದ್ದುಪಡಿ

| ಪುಟ | ಸಾಲು | ತಪ್ಪು | ಸರಿ |
|---|---|---|---|
| ೭ | ೨೮ | ದಾನ, ತಪಸ್ಸು | ದಾನತಪಸ್ಸು |
| ೧೬ | ೨೭ | ವೀಧಿ | ವೀಥಿ |
| ೪೫ | ೪ | ಸಿದ್ಧಹೇಮಚಂದ್ರ | ಸಿದ್ಧ-ಹೇಮ-ಶಬ್ದಾನುಶಾಸನ |
| ೪೭ | ೨ | ಚಾರಣವೃದ್ಧಿ | ಚಾರಣಋದ್ಧಿ |
| ೪೭ | ೧೨ | ನಿಧಾನ | ನಿದಾನ |
| ೪೯ | ೧೭ | ಮಗನೇ ಆಗಿದ್ದರು | ಮಕ್ಕಳೇ ಆಗಿದ್ದರು |
| ೫೦ | ೧೧ | ವಜ್ರಜಂಘಾಚಾರ್ಯ | ವಜ್ರಜಂಘಾರ್ಯ |
| ೭೧ | ೧೦ | ಚಉಮಚರಿತ | ಚಉಪ್ಪನ್ನಮಹಾಪುರಿಸಚರಿಯ |
| ೭೪ | ೬ | ಆಂದರೆ | ಅಂದರೆ |
| ೭೬ | ೪ | ಕೋಸರೀಯ | ಕೋಸಲೀಯ |
| ೧೦೩ | ೨ | ಯೆಸ್ಪಿಷ್ಟೈಪೆರಿ | ಎಷ್ಟೆಷ್ಟೈಸಿರಿ |
| ೧೧೨ | ೧೮ | ಪರಿವರ್ತನ | ಪರಿನರ್ತನ |
| ೧೧೮ | ೧೩ | ದಂಬಿ | ದುಂಬಿ |
| ೧೨೨ಪ.(ii-೪೫) | | ಸಡಿಲ್ದಿರ್ದೊಡಜೊಳ್ಳೆ | ಸಡಿಲ್ದಿರ್ದೊಡಲಳ್ಳೆಜೊಳ್ಳೆ |
| ೧೨೩ | ೨೬ | ದೇವಿಯರ | ದೇವಿಯರು |
| ೧೨೫ | ೧೪ | ಸಂಚಿಸುತಿಪ್ಪುದು | ಸಂಚಿಸುತಿರ್ಪುದು |
| ೧೨೫ | ೧೫ | ಬೆಱ | ಬೇಱ |
| ೧೨೫ | ೧೫ | ಪೆಱತೊಂದೊಡಲೊಳ್ | ಪೆಱತೊಂದೊಡಲೊಳ್ |
| ೧೨೮ | ೨೦ | ಜಾಱುವರಿದು | ಜಾಱವರಿದು |
| ೧೨೯ | ೧೩ | ನೆಱಯದ | ನೆಱಯದ |
| ೧೩೭ | ೧ | ಜೀವಾಣಾಂ | ಜೀವಾನಾಂ |
| ೧೪೦ | ೭ | ನೋಟ್ಪೊಡೆಂ | ನೋಱ್ಪೊಡೆಂ |
| ೧೪೦ | ೧೧ | ಮೆಱದುಯ್ಯೆ | ಮೆಱದುಯ್ಯೆ |
| ೧೪೬ | ೩ | ಉತವಾಗಿದೆ | ಉಕ್ತವಾಗಿದೆ |
| ೧೫೬ | ೧೯ | ಮೆಱವ | ಮೆಱವ |
| ೧೫೯ | ೧೭ | ತೆಱದಿಂ | ತೆಱದಿಂ |
| ೧೬೦ | ೩೦ | (ಶೀರ್ಷಿಕೆಯ ಭಾಗ) | |
| | | ಹಿಂದಿರುಗಿದ ಬಂದ | ಹಿಂದಿರುಗಿ ಬಂದ |
| ೧೬೮ | ೧೩ | ಲಲಿತಾಂಗನು ದೇವನಾದಳು | ಲಲಿತಾಂಗ ದೇವನಾದಳು |
| ೧೭೨ | ೧೧ | ಪೇಳದಂದೆವಗೆ | ಪೇಳದಂದೆನಗೆ |
| ೧೮೭ | ೮ | ಸನ್ನಿವೇಶವಾದಲ್ಲಿಯೂ | ಸನ್ನಿವೇಶದಲ್ಲಿಯೂ |
| ೧೮೭ | ೯ | ನದಱೊಳಗೆ | ನದಱೊಳಗೆ |

| ಪುಟ | ಸಾಲು | ತಪ್ಪು | ಸರಿ |
|---|---|---|---|
| ೧೯೮ | ೧೩ | ಪ್ರಾಣವಲ್ಲಭರ | ಪ್ರಾಣವಲ್ಲಭರ್ |
| ೨೦೯ | ೧೮ | ಮೇಗಟ್ಟಿಕೆಱಿಳಂದಂದೇಂ | ಮೇಗಟ್ಟಿಕೆಱೊಳಂದದೇಂ |
| ೨೧೦ | ೩೦ | ತನ್ಮ | ತನ್ನ |
| ೨೧೦ | ೩೦ | ಮಱಿಗಿಸಿದುದು | ಮಱುಗಿಸಿದುದು |
| ೨೧೨ | ೩೦ | ಆಂಶವು | ಅಂಶವು |
| ೨೧೭ | ೩೩ | ಪೂರ್ವಪುರಾಣದಲ್ಲಿ | ಪೂರ್ವಪುರಾಣದ |
| ೨೨೧ | ೩ | ಮನುಷ್ಯಾಣಾಂ | ಮನುಷ್ಯಾನಾಂ |
| ೨೨೫ | ೫ | ಕೇಶವವಾದಿಗಳು | ಕೇಶವಾದಿಗಳು |
| ೨೩೪ | ೧೨ | ಸುಧೀರ | ಸುವೀರ |
| ೨೨೫ | ೨೨ | ಪುಹಿಕ | ಪುಳಕ |
| ೨೪೬ | ೩೪ | ಆ ವರ್ಣನಾಭಾಗ | ಈ ವರ್ಣನಾಭಾಗ |
| ೨೫೪ | ೮ | ನೇತ್ರಗಳುಳ್ಳವಳಾಗಿ | ನೇತ್ರಗಳುಳ್ಳವಳಾಗಿ |
| ೨೮೮ | ೨೩ | ಮಗುಱಿ | ಮಗುಱ್ |
| ೨೯೧ | ೧೬, ೨೩ | ತೋಱಿದು | ತೋಱಿದು |
| ೨೯೬ | ೧೦ | ಮೂಱಿನೆ | ಮೂಱನೆ |
| ೨೯೭ | ೧೬ | ಮೂರ್ಖತದ | ಮೂರ್ಖತನದ |
| ೨೯೯ | ೧೧ | ಆದರ | ಅದರ |
| ೩೦೦ | ೨೯ | ಅವಧಿಯನರಿದು | ಅವಧಿಯಿನರಿದು |
| ೩೧೫ | ೩ | ವೈವಹರಿಸುತ | ವ್ಯವಹರಿಸುತ |
| ೩೧೬ | ೧ | ಪದ್ಯಭಾಗ | ಗದ್ಯಭಾಗ |
| ೩೨೫ | ೧೨ | ಪುಪ್ಪ | ಪುಷ್ಪ |
| ೩೪೫ | ೩೩ | ಮೃಪ್ಯತಾಂ, ಯದೀದೃಶಂ | ಮೃಷ್ಯತಾಂ, ಯದೀದೃಶಮ್ |
| ೩೫೨ | ೨೯ | ತಾನಾ ಪ್ರಕಾರದಿಂ | ನಾನಾ ಪ್ರಕಾರದಿಂ |
| ೩೫೨ | ೩೪ | ಪುಪ್ಪಗಳು | ಪುಷ್ಪಗಳು |
| ೩೫೪ | ೨೮ | ಚದುರಂಗಬಲ | ಚತುರಂಗಬಲ |
| ೩೫೮ | ೧೯ | ಮಾಳ್ಪನು | ಮಾಳ್ಪೆನು |
| ೩೫೯ | ೨೦ | ಗಣಾದಿನಾಥ | ಗಣಾಧಿನಾಥ |
| ೩೬೧ | ೨೯ | ಭಾಗವದು | ಭಾಗವಿದು |
| ೩೭೧ | ೧೨ | ಕಂಠಗ್ಯಹಂಗೈ | ಕಂಠಗ್ರಹಂಗೈ |
| ೩೭೨ | ೩ | ವಂಧ್ಯಾಸ್ತನಂಧೆಯ | ವಂಧ್ಯಾಸ್ತನಂಧಯ |
| ೩೮೨ | ೧೪ | ನಡೆಯ | ನಡೆಯೆ |
| ೩೯೯ | ೩೧ | ಮತ್ಸ | ಮತ್ಸ್ಯ |
| ೪೦೦ | ೪ | ಪಡಿಯಲಮ್ಮದೆ | ಪಡೆಯಲಮ್ಮದೆ |

| ಪುಟ | ಸಾಲು | ತಪ್ಪು | ಸರಿ |
|---|---|---|---|
| ೪೦೦ | ೪ | ವೆಂತಾಂಡಿಗೆ | ವೆಂತಾ (ತೌ)ಂಡಿ(ಂ)ಗೆ |
| ೪೨೧ | ೨೧ | ಪೂರ್ವಪುರಾಣವನ್ನನುಸರಿಸಿ ಆದಿಪರಮೇಶ್ವರನ ಯಕ್ಷಗಾನದಲ್ಲಿ | ಪೂರ್ವಪುರಾಣವನ್ನನುಸರಿಸಿ ಆದಿಪುರಾಣದಲ್ಲಿ |

---





**ಡಾ. ಸರಸ್ವತಿ ವಿಜಯಕುಮಾರ್**

ಜನನ ೧೯೪೮. ಪ್ರಾಥಮಿಕ ಪ್ರೌಢಶಿಕ್ಷಣಗಳು ಮಾಯಸಂದ್ರದಲ್ಲಿ ಮತ್ತು ಮೈಸೂರಿನಲ್ಲಿ. ೧೯೭೦ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಿಂದ ಕನ್ನಡದಲ್ಲಿ ಎಂ.ಎ., ಪದವಿ. ಬಿ.ಎಡ್. (೧೯೭೫), ಜೈನಶಾಸ್ತ್ರದಲ್ಲಿ ಡಿಪ್ಲೊಮಾ (೧೯೭೮), ತಮಿಳು ಭಾಷೆಯಲ್ಲಿ ಡಿಪ್ಲೊಮಾ (೧೯೭೯), ಜೈನಶಾಸ್ತ್ರ ಮತ್ತು ಪ್ರಾಕೃತಗಳಲ್ಲಿ ಎಂ. ಎ. (೧೯೮೬), (ಪ್ರಥಮ ರ್‍ಯಾಂಕ್. ಆಚಾರ್ಯ ಶ್ರೀ ದೇಶಭೂಷಣರ ಚಿನ್ನದ ಪದಕ) ಹಿಂದಿಯಲ್ಲಿ ವಿಶಾರದ (೧೯೬೬). ೧೯೯೨ ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಿಂದ ಪಿಎಚ್.ಡಿ. ಪದವಿ, ನಿಬಂಧಕ್ಕೆ ಡಾ. ಆ. ನೇ. ಉಪಾಧ್ಯೆ ಚಿನ್ನದ ಪದಕ.

ಮಂಡ್ಯ ಸರ್ಕಾರಿ ಮಹಿಳಾ ಕಾಲೇಜಿನ ಕನ್ನಡ ಅಧ್ಯಾಪಕಿಯಾಗಿ ೧೯೭೦ ರಲ್ಲಿ ವೃತ್ತಿಜೀವನ ಪ್ರಾರಂಭ. ಈಗ ಕಳೆದ ೨೨ ವರ್ಷಗಳಿಂದ ಮೈಸೂರಿನ ಪ್ರಾದೇಶಿಕ ಶೈಕ್ಷಣಿಕ ಸಂಸ್ಥೆಗೆ ಸೇರಿದ ಪ್ರಾಯೋಗಿಕ ವಿದ್ಯಾಶಾಲೆಯಲ್ಲಿ ಕನ್ನಡ ಅಧ್ಯಾಪಕಿ. ಮೈಸೂರು ವಿಶ್ವವಿದ್ಯಾನಿಲಯದ ಜೈನಶಾಸ್ತ್ರ ಮತ್ತು ಪ್ರಾಕೃತ ವಿಭಾಗದಲ್ಲಿ ೧೯೯೨–೯೩ ರಲ್ಲಿ ಹಾಗೂ ೧೯೯೩–೯೪ ರಲ್ಲಿ ಗೌರವ ಅಧ್ಯಾಪಕಿ.

'ಅಪಭ್ರಂಶ ಭಾಷೆ ಮತ್ತು ಸಾಹಿತ್ಯ' ಇವರ ಮತ್ತೊಂದು ಕೃತಿ. 'ಜೈನ ಪರಂಪರೆ ಮತ್ತು ಸಾಹಿತ್ಯ' ಬರಲಿರುವ ಕೃತಿ.

ಕನ್ನಡದಲ್ಲಿ ಹಲವಾರು ಕವಿಗಳಿಂದ ವ್ಯಾಪಕವಾಗಿ ಪ್ರಸ್ತಾಪಿಸಲ್ಪಟ್ಟ ಆದಿ ತೀರ್ಥಂಕರನ ಕಥೆಯನ್ನು ಅನೇಕ ಘಟ್ಟಗಳಾಗಿ ವಿಭಜಿಸಿ ಸವಿಸ್ತಾರ ವಿವರಣೆ ನೀಡಿದ್ದಾರೆ. ಅಭ್ಯರ್ಥಿಗೆ ಪಂಪನ ಬಗ್ಗೆ ಇರುವ ವಿಶೇಷ ಒಲವೂ ಅಲ್ಲಲ್ಲಿ ಎದ್ದು ಕಾಣುತ್ತಿದೆ. ಪಂಪನ ಕೃತಿಯನ್ನೇ ಒರೆಗಲ್ಲಾಗಿ ಉಪಯೋಗಿಸಿಕೊಂಡದ್ದೂ ಸೂಕ್ತವೇ ಆಗಿದೆ. ಆದಿನಾಥನನ್ನು ಕುರಿತಾದ ಸಮಗ್ರ ಸಾಹಿತ್ಯವನ್ನು ಒಂದು ವ್ಯವಸ್ಥಿತ ಚೌಕಟ್ಟಿನಲ್ಲಿ ತಂದಿರಿಸುವ ಪ್ರಾಮಾಣಿಕ ಪ್ರಯತ್ನ ಮೆಚ್ಚುವಂಥದಾಗಿದೆ. ಕಥೆಯಲ್ಲಿಯ ಸೂಕ್ಷ್ಮ ಎಳೆಗಳನ್ನು ಗುರುತಿಸುವ ಸೂಕ್ಷ್ಮದೃಷ್ಟಿ ಶ್ರೀಮತಿ ಸರಸ್ವತಿಯವರಿಗಿದೆ. ಆದಿನಾಥನ ಕಥೆಯನ್ನು ಅನ್ಯಭಾಷಾ ಕಥೆಗಳೊಡನೆ ತೌಲನಿಕವಾಗಿ ಅಭ್ಯಸಿಸಬೇಕೆನ್ನುವವರಿಗೆ ಈ ಪ್ರಬಂಧ ಸಾಕಷ್ಟು ಸಾಮಗ್ರಿಯನ್ನೊದಗಿಸುತ್ತದೆ. ಶ್ರೀಮತಿ ಸರಸ್ವತಿಯವರಿಗೆ ಕನ್ನಡ ಭಾಷೆಯ ಮೇಲೆ ಸಾಕಷ್ಟು ಹಿಡಿತವಿರುವುದನ್ನು ಅವರ ಶೈಲಿಯಲ್ಲಿಯ ಒಳ್ಳೆಯ ಗುಣಗಳನ್ನು ಪ್ರಬಂಧದಲ್ಲಿ ಗುರುತಿಸಬಹುದಾಗಿದೆ.

**ಡಾ. ಎಂ. ಜಿ. ಬಿರಾದಾರ**

ಆದಿತೀರ್ಥಂಕರನ ಕಥೆಯ ಅಂಶ ಪ್ರತ್ಯಂಶಗಳು, ಪಾತ್ರಗಳು, ಸನ್ನಿವೇಶಗಳು, ವರ್ಣನೆಗಳು ಮುಂತಾದುವನ್ನು ಆಳವಾಗಿ ವಿಶ್ಲೇಷಿಸಲಾಗಿದೆ. ಇದು ಕೇವಲ ಹೋಲಿಕೆಯಾಗಿರದೆ ಅನ್ವಯಿಕ ರೀತಿಯ ವಿಮರ್ಶೆ ಕೂಡ ಆಗಿದೆ. ಒಂದರ್ಥದಲ್ಲಿ ಈ ಭಾಗ (ಆರನೇ ಅಧ್ಯಾಯ) ಪಂಪಕವಿಯ ಆದಿಪುರಾಣದ ಅನ್ವಯಿಕ ವಿಮರ್ಶೆ ಎಂದೇ ಹೇಳಬಹುದು. ಶ್ರೀಮತಿ ಸರಸ್ವತಿಯವರು ಪಟ್ಟಿರುವ ಶ್ರಮ ಇಲ್ಲಿನ ಪುಟ ಪುಟಗಳಲ್ಲಿ ವ್ಯಕ್ತಗೊಂಡಿದೆ. ವಿಶೇಷವಾಗಿ ಜಿನಸೇನಾಚಾರ್ಯರ ಸಾಂಪ್ರದಾಯಿಕ ಮತನಿಷ್ಠ ವಿವರಗಳು ಪಂಪಕವಿಯಲ್ಲಿ ಕಲಾಕುಸುರಿನ ಅಪೂರ್ವಕವಿತೆಯಾಗಿ ಹೇಗೆ ರೂಪಾಂತರಗೊಂಡಿದೆ ಎಂಬುದನ್ನು ಲೇಖಕಿ ಉದ್ದಕ್ಕೂ ಸೊಗಸಾಗಿ ತೋರಿಸಿದ್ದಾರೆ.

**ಡಾ. ಎಂ. ಬಿ. ನೇಗಿನಹಾಳ**